

ತಿಂಗಳ ಪತ್ರಿಕೆ

# ಹೊಸತು

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ–೨೦ ಸಂಚಿಕೆ–೬ ಜನವರಿ ೨೦೧೯



■ **ಮುದ್ರಣ**

**ಶ್ರೀ ವಿನಾಯಕ ಪ್ರಿಂಟರ್ಸ್**

೭೩೮/೧೦, ೬೦ನೇ ಅಡ್ಡರಸ್ತೆ

೫ನೇ ಬ್ಲಾಕ್, ರಾಜಾಜಿನಗರ

ಬೆಂಗಳೂರು – ೫೬೦ ೦೧೦

■ **ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**

೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೯೮

ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – ೫೬೦ ೦೦೧

ದೂರವಾಣಿ : ೨೨೧೬೮೯೦೦, ೨೨೧೬೮೯೧೨

**e-mail : navakarnataka@gmail.com**

**hosathu@gmail.com**

**hosathu.nkp@gmail.com**

**URL : www.navakarnataka.com**

**http : //navakarnataka.blogspot.in**

**http : //hosathumonthly.blogspot.in**

## ಈ ತಿಂಗಳು

೨೦೧೮ರ ವರ್ಷಾಂತ್ಯ ಮೋದಿ ಸರಕಾರಕ್ಕೆ ಎಲ್ಲವೂ ಕಹಿ ಸುದ್ದಿಯೇ. ಐದು ರಾಜ್ಯಗಳಲ್ಲಿ ನಡೆದ ಚುನಾವಣೆಗಳಲ್ಲಿ ಸೋಲನ್ನನುಭವಿಸಿದ ಮೋದಿ–ಷಾ ಜೋಡಿಯ ಭಾಜಪ ಸರಕಾರ ಫಲಿತಾಂಶ ಹೊರಬೀಳುವ ಮುನ್ನಾದಿನ ರಿಸರ್ವ್ ಬ್ಯಾಂಕ್ ಗವರ್ನರ್ ಉರ್ಜಿತ್ ಪಟೇಲ್ ರಾಜೀನಾಮೆಯನ್ನು ಅಂಗೀಕರಿಸಬೇಕಾಗಿ ಬಂದಿತು. ಮೋದಿ–ಜೇಟ್ಲಿಯ ಹಣಕಾಸಿನ ನೀತಿಯನ್ನು ಮುಖ್ಯವಾಗಿ ನೋಟು ರದ್ದತಿ ಕ್ರಮವನ್ನು ವಿರೋಧಿಸುತ್ತಿದ್ದ ರಘುರಾಮ ರಾಜನ್ ರಾಜೀನಾಮೆ ನೀಡಿದ ಎರಡೇ ವರ್ಷದಲ್ಲಿಯೇ ಪಟೇಲ್ ರಾಜೀನಾಮೆ ಬಂದಿದೆ. ತರಾತುರಿಯಲ್ಲಿ ಸಾವಿರ, ಐನೂರರ ನೋಟುಗಳನ್ನು ರಾತ್ರೋರಾತ್ರಿ ಅಮಾನ್ಯೀಕರಣಗೊಳಿಸಿ, ಸಾರ್ವಜನಿಕರನ್ನು ಸಾಲುಗಟ್ಟಿ ನಿಲ್ಲುವಂತೆ ಮಾಡಿದ ಕೇಂದ್ರ ಸರಕಾರ ರಿಸರ್ವ್ ಬ್ಯಾಂಕಿನ ಸ್ವಾಯತ್ತತೆ ಮೇಲೆ ಬಲಪ್ರಯೋಗ ಪ್ರಾರಂಭಿಸಿತ್ತು. ಮೋದಿ ಸರಕಾರದ ಬೆಂಬಲಿಗ ಎಂದೇ ತಿಳಿಯಲಾಗಿದ್ದ ಉರ್ಜಿತ್ ಪಟೇಲ್ ಒತ್ತಡವನ್ನು ತಾಳಲಾರದೆ ರಾಜೀನಾಮೆ ನೀಡಿದ್ದಾರೆ. ಸರಕಾರಕ್ಕೆ ರಿಸರ್ವ್ ಬ್ಯಾಂಕಿನ ಹಣದ ಮೇಲೆ ಕಣ್ಣು ಹಾಗೂ ಅದರ ಸ್ವಾಯತ್ತತೆಯನ್ನು ಧ್ವಂಸ ಮಾಡಿ ಅಧೀನಕ್ಕೆ ಪಡೆದುಕೊಳ್ಳುವುದು ಗುರಿ. ಎರಡನ್ನೂ ಸಾಧಿಸಹೊರಟಿವೆ ಮೋದಿ–ಜೇಟ್ಲಿ ಕಂಬೈನ್. ಇನ್ನೊಂದು ಬುದ್ಧಿವಂತರನ್ನು, ಆರ್ಥಿಕ ತಜ್ಞರನ್ನು, ವಿವೇಕಿಗಳನ್ನು ಸರಕಾರ ಅನುಮಾನದಿಂದ ನೋಡುವ ಪ್ರವೃತ್ತಿ ಬೆಳೆಸಿಕೊಂಡಿದೆ. ಒಂದೊಂದಾಗಿ ಸಂವಿಧಾನರೀತ್ಯ ಸ್ಥಾಪಿತಗೊಂಡಿರುವ ಸ್ವಾಯತ್ತ ಸಂಸ್ಥೆಗಳನ್ನು ನುಂಗಿಹಾಕುವುದು ಗುರಿ. ಈಗಾಗಲೇ ಸಿಬಿಐಅನ್ನು ಮುಗಿಸಿಯಾಯಿತು. ಈಗ ಆರ್‌ಬಿಐ ಸರದಿ. ಆರ್‌ಬಿಐ ಗವರ್ನರಾಗಿ ಹಣಕಾಸಿನ ಸಚಿವಾಲಯದಲ್ಲಿದ್ದ ಶಕ್ತಿಕಾಂತ ದಾಸ್ ಎಂಬ ನಿವೃತ್ತ ಐಎಎಸ್ ಅಧಿಕಾರಿಯನ್ನು ನೇಮಕ ಮಾಡಿದೆ. ಈತ ಎಲ್ಲ ಐಎಎಸ್ ಅಧಿಕಾರಿಗಳಂತೆಯೇ ಆಡಳಿತ ನಡೆಸುವವರು, ಅರ್ಥಶಾಸ್ತ್ರಿ ಏನಲ್ಲ. ಆರ್‌ಬಿಐನ ಸ್ವಾಯತ್ತತೆಯನ್ನು ಎಷ್ಟುಮಟ್ಟಿಗೆ ಎತ್ತಿ ಹಿಡಿಯುತ್ತಾರೋ ನೋಡೋಣ. ಬೇರೆಯವರ ಅಭಿಪ್ರಾಯವನ್ನು, ತಿಳುವಳಿಕೆಯನ್ನು ಸಹಿಸದಿರುವುದು ಮೋದಿ ಜಾಯಮಾನ. ಚುನಾವಣೆಗಳು ಹತ್ತಿರವಾಗುತ್ತಿದ್ದಂತೆ ಭಾಜಪ ಸರಕಾರದ 'ಅಚ್ಛೇ ದಿನ್' ಮತ್ತಷ್ಟು ದೂರವಾಗುತ್ತಿದೆ. ವೈಫಲ್ಯಗಳು ಎದ್ದುಕಾಣತೊಡಗಿವೆ. ಮೋದಿ ಅಜೇಯರೇನಲ್ಲ ಎಂಬುದು ಸ್ಪಷ್ಟವಾಗುತ್ತಿದೆ.

* * *

ಲೋಕಸಭಾ ಚುನಾವಣೆ ಸಮೀಪಿಸುತ್ತಿದ್ದಂತೆ ಭಾಜಪದಲ್ಲಿ ಆಂತರಿಕ ಭಿನ್ನಾಭಿಪ್ರಾಯಗಳು ಹೊಗೆಯಾಡತೊಡಗಿವೆ. ಇತ್ತೀಚೆಗೆ ನಡೆದ ಚುನಾವಣೆಗಳಲ್ಲಿ ಕಾಂಗ್ರೆಸ್ ಚೇತರಿಸಿಕೊಂಡಿರುವ ಹಿನ್ನೆಲೆಯಲ್ಲಿ ಮೋದಿ–ಷಾ ರಣತಂತ್ರದ ಬಗ್ಗೆ ಅಸಂತೃಪ್ತಿ ಎದ್ದುಕಾಣುತ್ತಿದೆ. ಶತ್ರುಘ್ನ ಸಿನ್ಹಾ, ಯಶವಂತ ಸಿನ್ಹಾ, ಅರುಣ್ ಶೌರಿ ಮೊದಲಾದವರಿಂದ ಮೋದಿ ಆಡಳಿತ ವೈಖರಿಯ ಟೀಕೆ ಹಳೆಯದಾಯಿತು. ಈಗ ಮೋದಿ ಸರಕಾರದ ಕ್ಯಾಬಿನೆಟ್ ಸಚಿವರುಗಳೇ ತಿರುಗಿ ಬೀಳತೊಡಗಿದ್ದಾರೆ. ಪ್ರಮುಖ ಸಚಿವ ಹಾಗೂ ಭಾಜಪ ಪಕ್ಷದ ಮಾಜಿ ಅಧ್ಯಕ್ಷ ನಿತಿನ್ ಗಡ್ಕರಿ ಮೋದಿ–ಷಾ ಬಗ್ಗೆ ಅತೃಪ್ತಿ ವ್ಯಕ್ತಗೊಳಿಸಿರುವುದು ಅಚ್ಚರಿಯ ಸಂಗತಿ ಏನಲ್ಲ. ತೆಲಂಗಾಣ, ಮಿಜೋರಮ್‌ಗಳಲ್ಲಿ ಕಾಂಗ್ರೆಸ್



ತಿಂಗಳ ಪತ್ರಿಕೆ

ಹೊಸತು

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ



■ **ಚಂದಾ ವಿವರಗಳು**

| | |
|---|---|
| **ಬಿಡಿ ಸಂಚಿಕೆ** | ₹ ೨೫/- |
| **ವಾರ್ಷಿಕ ಸಂಚಿಕೆ** | ₹ ೬೦/- |
| **ವಾರ್ಷಿಕ ಚಂದಾ** | ₹ ೩೦೦/- |
| **ಮೂರು ವರ್ಷಕ್ಕೆ** | ₹ ೬೦೦/- |

■ **ನವಕರ್ನಾಟಕ ಶಾಖೆಗಳು**

ಕೆಂಪೇಗೌಡ ರಸ್ತೆ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೦೩೧೦೬

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪-೨೪೪೧೦೦೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧-೨೪೨೪೮೯೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨-೨೨೪೩೦೨

ಮತ್ತು ಭಾಜಪಗಳ ಸೋಲು ಅನಿರೀಕ್ಷಿತವೇನಲ್ಲ. ಉಳಿದ ಮೂರು ರಾಜ್ಯಗಳಲ್ಲಿ ಭಾಜಪ ಸೋಲು ಅನುಭವಿಸಿದ್ದು ಆ ಪಕ್ಷಕ್ಕೆ ಭಾರಿ ಹೊಡೆತವಾಗಿದೆ. ವಿವಿಧ ಮಾಧ್ಯಮಗಳು ನೀಡಿದ್ದ ಸಮೀಕ್ಷೆಗಳೆಲ್ಲ ತಲೆಕೆಳಗಾಯಿತು. ಕೇಂದ್ರ ಸರಕಾರದ ನೀತಿಗಳ ವೈಫಲ್ಯವೇ ಇದಕ್ಕೆ ಕಾರಣ. ಚುನಾವಣೆಯ ಫಲಿತಾಂಶಗಳು ಮೋದಿ ಅಜೇಯರೇನಲ್ಲ ಮುಂಬರುವ ಲೋಕಸಭಾ ಚುನಾವಣೆಗಳಲ್ಲಿ ಎನ್ನುವುದನ್ನು ತೋರಿಸಿದೆ. ಪ್ರತಿಪಕ್ಷಗಳು ಒಂದಾಗಿ ಒಗ್ಗಟ್ಟಿನಿಂದ ಚುನಾವಣೆಗಳನ್ನು ಎದುರಿಸಿದರೆ ಜಯ ಅಂಥ ಕಷ್ಟವೇನಲ್ಲ. ಆದರೆ ಈಗಿನ ಪರಿಸ್ಥಿತಿ ನೋಡಿದರೆ ಇನ್ನೂ ಕಪ್ಪೆ ತಕ್ಕಡಿಗೆ ಹಾಕಿದ ಹಾಗೆ ಇದೆ. ಕಾಂಗ್ರೆಸ್ ಮೂರು ರಾಜ್ಯಗಳ ವಿಜಯದಿಂದ ಪ್ರತಿಷ್ಠೆ ತೋರುವ ಸೂಚನೆ ಇದೆ. ಅದೇ ಸಮಯದಲ್ಲಿ ತೃತೀಯರಂಗದ ಕಲ್ಪನೆ ಬೇರೆ ಮೇಲೇಳುತ್ತಿದೆ. ಅಂದರೆ ಭಾಜಪ ನೇತೃತ್ವದ ಎನ್‌ಡಿಎ ಮತ್ತು ಕಾಂಗ್ರೆಸ್ ನೇತೃತ್ವದ ಯುಪಿಎಗಿಂತ ಭಿನ್ನವಾದ ರಂಗವೊಂದನ್ನು ಸ್ಥಾಪಿಸುವ ಯೋಜನೆ ಕಾಣುತ್ತಿದೆ. ಹಾಗೇನಾದರೂ ಆದರೆ ಭಾಜಪಗೆ ಅನುಕೂಲವೇ ಆಗುವ ಸಾಧ್ಯತೆ ಇದೆ. ಪ್ರಧಾನಿ ಆಕಾಂಕ್ಷಿಗಳೂ ಸಾಕಷ್ಟಿದ್ದಾರೆ. ಈಗಾಗಲೇ ಬಿಹಾರದಲ್ಲಿ ಭಾಜಪ ಮುಂಬರುವ ಲೋಕಸಭಾ ಚುನಾವಣೆಗಳಿಗೆ ಸಿದ್ಧತೆ ನಡೆದಿದೆ. ಜೆಡಿಯು ಪಕ್ಷದ ಜೊತೆ ಸೀಟುಗಳ ಹಂಚಿಕೆಯೂ ಆಗಿದೆ. ಅಧಿಕಾರ ಉಳಿಸಿಕೊಳ್ಳಲು ಭಾಜಪ ಎಲ್ಲ ಪ್ರಯತ್ನಗಳನ್ನೂ ಮಾಡಲಿದೆ. ಅದಕ್ಕೆ ಪ್ರತ್ಯುತ್ತರ ನೀಡಲು ಪ್ರತಿ ಪಕ್ಷಗಳ ಐಕ್ಯತೆಯೊಂದೇ ಮಾರ್ಗ. ಅದು ಸಾಧ್ಯವಾದೀತೇ ನೋಡಬೇಕು.

✶ ✶ ✶

ಅಯೋಧ್ಯೆಯಲ್ಲಿ ರಾಮಮಂದಿರ ನಿರ್ಮಾಣಕ್ಕೆ ಕೇಂದ್ರ ಸರಕಾರ ಸುಗ್ರೀವಾಜ್ಞೆ ತರಬೇಕೆಂದು ವಿಶ್ವ ಹಿಂದೂ ಪರಿಷತ್ತು, ಧರ್ಮ ಸಂಸತ್ತು ಹಾಗೂ ಆರೆಸ್ಸೆಸ್ ಒತ್ತಡ ತರುತ್ತಿವೆ. ಇಪ್ಪತ್ತಾರು ವರ್ಷಗಳ ಹಿಂದೆ ಬಾಬ್ರಿ ಮಸೀದಿ ಧ್ವಂಸ ಮಾಡಿದ ಸ್ಥಳದಲ್ಲೇ ರಾಮಮಂದಿರ ನಿರ್ಮಾಣವಾಗಬೇಕು ಎಂಬುದೇ ಗುರಿ. ಸಂವಿಧಾನಕ್ಕಿಂತ ನಂಬಿಕೆಯೇ ಮುಖ್ಯ ಎನ್ನುವುದು ಭಾಜಪವಾದ. ಕೇರಳದ ಅಯ್ಯಪ್ಪ ದೇವಾಲಯದ ತೀರ್ಪಿನ ವಿರುದ್ಧ ಅವರು ನಡೆಸುತ್ತಿರುವ ದಾಂಧಲೆಯೇ ಅದನ್ನು ಸೂಚಿಸುತ್ತದೆ. ಸರ್ವೋಚ್ಚ ನ್ಯಾಯಾಲಯದ ತೀರ್ಪನ್ನು ನಾಡಿನ ಪ್ರಗತಿ ಪರರೆಲ್ಲ ಸ್ವಾಗತಿಸಿದ್ದಾರೆ. ದೇವಾಲಯದಲ್ಲಿ ಎಲ್ಲ ವಯಸ್ಸಿನ ಮಹಿಳೆಯರಿಗೂ ಪ್ರವೇಶಕ್ಕೆ ಸಮಾನ ಅವಕಾಶವಿದೆ ಎನ್ನುವುದೇ ಆ ತೀರ್ಪು. ಭಾಜಪ ಈ ತೀರ್ಪಿನ ವಿರುದ್ಧವಾಗಿ ಪ್ರತಿಭಟನೆಯ ಮುಂದಳದಲ್ಲಿದೆ. ಗೂಂಡಾಗಿರಿ ನಡೆಸುತ್ತಿದೆ ಅಯ್ಯಪ್ಪ ದೇವಾಲಯದ ಪ್ರವೇಶಕ್ಕೆ ಬಂದ ಮಹಿಳೆಯರ ಮೇಲೆ. ಯಾವುದೋ ಕಾಲದಲ್ಲಿ ದೇವಾಲಯಕ್ಕೆ ೧೦ರಿಂದ ೫೦ರ ವಯಸ್ಸಿನ ಮಹಿಳೆಯರಿಗೆ ಪ್ರವೇಶ ನಿರಾಕರಣೆಯಾಗಿತ್ತು. ಈಗ ಸುಪ್ರೀಂ ಕೋರ್ಟಿನ ತೀರ್ಪಿನಿಂದಾಗಿ ಅದು ತೆರವುಗೊಂಡಿದೆ. ಸಂವಿಧಾನದ ಪ್ರಕಾರ ಸ್ತ್ರೀ ಪುರುಷವೆಂಬ ಭೇದ ಎಣಿಸುವುದು ಕಾನೂನು ಬಾಹಿರ. ದೇಶದ ಸರ್ವೋಚ್ಚ ನ್ಯಾಯಾಲಯ ಅದನ್ನು ಎತ್ತಿ ಹಿಡಿದಿದೆ ಅಷ್ಟೆ. ಆದರೂ ಕೇಂದ್ರದಲ್ಲಿ ಆಡಳಿತ ನಡೆಸುತ್ತಿರುವ ಭಾಜಪ ತೀರ್ಪನ್ನು ವಿರೋಧಿಸುತ್ತಿದೆ. ಇದು ಮುಂದೆ ಬಾಬ್ರಿ ಮಸೀದಿ ಭೂ ವಿವಾದ ಕುರಿತ ತೀರ್ಪಿಗೆ ಮುನ್ಸೂಚನೆಯೇ ಎನ್ನುವ ಅನುಮಾನ ಬರತೊಡಗಿದೆ. ಅದಕ್ಕಾಗಿಯೇ ಇರಬೇಕು ಹಿಂದುತ್ವ ಪ್ರತಿಪಾದಕರು ಸುಗ್ರೀವಾಜ್ಞೆ ಬಯಸುತ್ತಿರುವುದು. ನ್ಯಾಯಾಲಯದ ತೀರ್ಪಿಗಿಂತ ನಂಬಿಕೆಯೇ ಮುಖ್ಯ ಎನ್ನುವುದೇ ಇದಕ್ಕೆ ಕಾರಣ. ಬಾಬ್ರಿ ಮಸೀದಿ ಭೂವಿವಾದವನ್ನು ಕುರಿತು ಸುಪ್ರೀಂ ಕೋರ್ಟು ಜರೂರಾಗಿ ನಿರಂತರ ಕಲಾಪವನ್ನು ಕೈಗೆತ್ತಿಕೊಳ್ಳಬೇಕೆಂದು ಹಿಂದೂ ಸಂಘಟನೆಗಳು ಅರ್ಜಿ ಸಲ್ಲಿಸಿವೆ. ಅದೇ ಸಮಯದಲ್ಲಿ ವಿವಾದಿತ ಪ್ರದೇಶದಲ್ಲಿಯೇ ರಾಮಮಂದಿರದ ನಿರ್ಮಾಣಕ್ಕೆ ಸುಗ್ರೀವಾಜ್ಞೆಗೂ ಒತ್ತಾಯ ತರುತ್ತಿವೆ.

✶ ✶ ✶

ವಲ್ಲಭಭಾಯಿ ಪಟೇಲ್‌ರ ಅತಿ ಎತ್ತರದ ಮೂರ್ತಿ ಗುಜರಾತಿನಲ್ಲಿ ಲೋಕಾರ್ಪಣೆಯಾದ ಮೇಲೆ ಅತಿ ಎತ್ತರದ ಪ್ರತಿಮೆಗಳ ನಿರ್ಮಾಣಕ್ಕೆ ಪೈಪೋಟಿ ಪ್ರಾರಂಭವಾಗಿದೆ. ಉತ್ತರ ಪ್ರದೇಶದಲ್ಲಿ ಭಾಜಪ ಮುಖ್ಯಮಂತ್ರಿ ಯೋಗಿ ಆದಿತ್ಯನಾಥ ಅತಿ ಎತ್ತರದ ಶ್ರೀರಾಮನ ಮೂರ್ತಿಯನ್ನು ಅಯೋಧ್ಯೆಯಲ್ಲಿ ನಿರ್ಮಿಸಲು ಮುಂದಾಗಿದೆ. ಸದ್ಯ ಇದು ಬಾಬ್ರಿ ಮಸೀದಿ ಆವರಣದಲ್ಲಿ ನಿರ್ಮಾಣವಾಗುತ್ತಿಲ್ಲ ಎನ್ನುವುದೇ ಸಮಾಧಾನದ ಸಂಗತಿ. ಆದರೂ ತೆರಿಗೆದಾರರ ಹಣ ಈ ಹುಚ್ಚಾಟಕ್ಕೆ ವಿನಿಯೋಗವಾಗುವುದು ವ್ಯರ್ಥ. ಮೋದಿ ಶಿಷ್ಯ ಯೋಗಿ ದೇಶದಲ್ಲಿ ಕಾವಿಧಾರಿ ಮುಖ್ಯಮಂತ್ರಿ. ಮುಸಲ್ಮಾನ ಜನಾಂಗದ ಮೇಲೆ ಅವಕಾಶ ಸಿಕ್ಕಾಗಲೆಲ್ಲ ವಿಷಕಾರುವುದು ಈತನ ಹವ್ಯಾಸ. ಮುಖ್ಯಮಂತ್ರಿಯಾದ ಮೇಲೆ ಮುಸ್ಲಿಂ ಸಮುದಾಯದ ಮೇಲೆ ಸಾಕಷ್ಟು ದಾಳಿಗಳು ನಡೆದಿವೆ. ಗೋಸಂರಕ್ಷಣೆ ಹೆಸರಿನಲ್ಲಿ ಹಿಂದುತ್ವ ಸಂಘಟನೆಗಳು ನಡೆಸಿರುವ ಹಿಂಸಾಚಾರಕ್ಕೆ ಲೆಕ್ಕವೇ ಇಲ್ಲ. ಈಚೆಗೆ ಈತನ ಕಣ್ಣು ಅಲ್ಪಸಂಖ್ಯಾತ ಮುಸ್ಲಿಂ ಜನಾಂಗದವರ ಪ್ರಾರ್ಥನೆ ಮೇಲೆ ಬಿದ್ದಿದೆ. ಸಾರ್ವಜನಿಕ ಸ್ಥಳಗಳಲ್ಲಿ, ಅಂದರೆ ಉದ್ಯಾನ ಹಾಗೂ ಇತರ ಕಡೆಗಳಲ್ಲಿ ಶುಕ್ರವಾರಗಳಲ್ಲಿ, ಹಬ್ಬಹರಿದಿಗಳಲ್ಲಿ ನಡೆಸುವ ಸಾಮೂಹಿಕ ಪ್ರಾರ್ಥನೆ. ಇದನ್ನು 'ನಮಾಜ್' ಎನ್ನುತ್ತಾರೆ. ಇದನ್ನು ನಡೆಸುವುದಕ್ಕೂ ಈತ ಅಡ್ಡಿ ಉಂಟುಮಾಡಲು ಹೊರಟಿದ್ದು ದೊಡ್ಡ ವಿವಾದವನ್ನೇ ಸೃಷ್ಟಿಸಿದ್ದಾರೆ. ಮುಖ್ಯಮಂತ್ರಿ ಯೋಗಿ ನಿರ್ಮಾಣ ಮಾಡಹೊರಟಿರುವ ಶ್ರೀರಾಮನ ವಿಗ್ರಹವೂ ಗೊಂದಲದ ಗೂಡಾಗಿದೆ. ನಾವೇನು ಕಡಿಮೆ ಎಂದು 'ಅಮರಾವತಿ' ನಿರ್ಮಾಣ ಮಾಡಲು ಹೊರಟಿರುವ ಆಂಧ್ರದ ಮುಖ್ಯಮಂತ್ರಿ ಚಂದ್ರಬಾಬು ನಾಯ್ಡು ಮಾಜಿ ಮುಖ್ಯಮಂತ್ರಿಯೂ ಮಾವನೂ ಆದ ಎನ್. ಟಿ. ರಾಮರಾವ್ ಇವರ ಅತಿ ಎತ್ತರದ ಮೂರ್ತಿಯನ್ನು ನಿರ್ಮಿಸಲು ಸಜ್ಜಾಗುತ್ತಿದ್ದಾರೆ. ಇದು ಗುಜರಾತಿನ ವಲ್ಲಭಭಾಯಿ ಪಟೇಲರ ಮೂರ್ತಿಗಿಂತ ಎತ್ತರವಾಗಿರುವುದು ಎಂದು ಅವರು ಹೇಳಿದ್ದಾರೆ. ಇದುವರೆಗೆ ನ್ಯೂಯಾರ್ಕಿನಲ್ಲಿರುವ ಸ್ವಾತಂತ್ರ್ಯ ದೇವಿ ಮೂರ್ತಿ ಅತಿ ಎತ್ತರದ ಪ್ರತಿಮೆ ಎಂದು ಖ್ಯಾತವಾಗಿತ್ತು. ಅದನ್ನು ಮೀರಿಸಿತು ವಲ್ಲಭ ಭಾಯಿ ಪಟೇಲರ ಮೂರ್ತಿ. ಈಗ ಆಂಧ್ರ ನಿರ್ಮಿಸುವ ಎನ್‌ಟಿಆರ್ ಪ್ರತಿಮೆ ಅದನ್ನು ಮೀರಿಸುವುದು ಎನ್ನಲಾಗಿದೆ. ಅಂತೂ ಈ ದೇಶದಲ್ಲಿ ಮೂರ್ತಿಗಳ ಹಾವಳಿ ಇನ್ನು ಎಷ್ಟೆಷ್ಟು ಎತ್ತರಕ್ಕೆ ಬೆಳೆಯುತ್ತದೊ!

✶ ✶ ✶

ಕರ್ನಾಟಕ ರಾಜ್ಯದಲ್ಲಿ ದೇವಾಲಯದ ರಾಜಕಾರಣ ಅಮಾಯಕರ ಸಾವಿಗೆ ಕಾರಣವಾಗಿದೆ. ಮಾರಮ್ಮ ದೇವಿಯ ದೇವಾಲಯದ ಹಣ ಲಪಟಾಯಿಸಲು ಹೊರಟ ಕಾವಿಧಾರಿ ಸ್ವಾಮಿ ಮತ್ತು ಅವನ ಅನುಚರರು ಈಗ ಕಾರಾಗೃಹವಾಸಿಗಳಾಗಿದ್ದಾರೆ. ಹದಿನೇಳು ಹದಿನೆಂಟು ಮಂದಿ ವಿಷ ಮಿಶ್ರಿತ ಪ್ರಸಾದ ಸೇವಿಸಿ ಅಸುನೀಗಿದ್ದಾರೆ. ಇಂಥ ದೊಡ್ಡ ಅನಾಹುತ ನಡೆದಿರುವುದು ಇದೇ ಮೊದಲ ಬಾರಿ. ಅಂತೂ ಭ್ರಷ್ಟಾಚಾರ ದೇವಾಲಯದ ಮೆಟ್ಟಿಲು ಏರಿದೆ. ದೇವರಿಗೇ ಲಂಚಕೊಡುವ ಪರಂಪರೆಯಲ್ಲವೆ ನಮ್ಮದು.

ಬೆಳಗಾವಿಯಲ್ಲಿ ನಡೆಯುವ ವಿಧಾನ ಮಂಡಲದ ಅಧಿವೇಶನ ಔಪಚಾರಿಕ ಅಷ್ಟೆ. ಇದಕ್ಕೆ ತಗಲುವ ವೆಚ್ಚ ಮಾತ್ರ ದುಬಾರಿ. ಅತಿ ಕಡಿಮೆ ಸಂಖ್ಯೆಯಲ್ಲಿ ಎಮ್ಮೆಲ್ಲೆಗಳು ಭಾಗವಹಿಸಿದ್ದ ಅಧಿವೇಶನ ಇದು. ಹತ್ತು ದಿನಗಳು ನಡೆದ ಈ ಅಧಿವೇಶನದ ಕಲಾಪದಲ್ಲಿ ನಡೆದ ವ್ಯವಹಾರವೂ ಅಷ್ಟಕ್ಕಷ್ಟೆ. ಸಕ್ಕರೆ ಕಾರ್ಖಾನೆ ಮಾಲೀಕರು ಕಬ್ಬು ಬೆಳೆಗಾರ ರೈತರಿಗೆ ನೀಡಬೇಕಿರುವ ಬಾಕಿ ಹಣದ ವಿಚಾರ ಬಗೆಹರಿಯದೆ ಮುಂದುವರಿದಿದೆ. ಎರಡೆರಡು ಬಾರಿ ಸಕ್ಕರೆ ಕಾರ್ಖಾನೆ ಮಾಲೀಕರು ಮತ್ತು ರೈತರ ಮಧ್ಯೆ ಮುಖ್ಯಮಂತ್ರಿಗಳ ನೇತೃತ್ವದಲ್ಲಿ ಸಭೆ ಜರುಗಿದರೂ ಬಾಕಿ ಮಾತ್ರ ರೈತರಿಗೆ ದೊರಕಲಿಲ್ಲ. ಇನ್ನು ಕುಮಾರಸ್ವಾಮಿಯವರ ರೈತರ ಸಾಲಮನ್ನಾ ಯೋಜನೆ ಕಾಗದದ ಮೇಲೇ ಉಳಿದಿದೆ. ಹಾಗೂ ಹೀಗೂ ಕಾಂಗ್ರೆಸ್–ಜೆಡಿಎಸ್ ಸರಕಾರ ಆರು ತಿಂಗಳು ಆಡಳಿತ ಮುಗಿಸಿದೆ. ಮುಂಬರುವ ಲೋಕಸಭಾ ಚುನಾವಣೆಗಳ ಮೇಲೆ ಎಲ್ಲರ ದೃಷ್ಟಿ.

ಸರಕಾರ ಆರು ತಿಂಗಳು ಮುಗಿಸಿದ ಮೇಲೆ ಸಂಪುಟದ ವಿಸ್ತರಣೆ ಕಸರತ್ತು ನಡೆದಿದೆ. ವಿಸ್ತರಣೆಯೋ, ಪುನಾರಚನೆಯೋ ಏನೇ ಆಗಲಿ ಅದು ಇನ್ನೂ ಅಪೂರ್ಣ. ಕಾಂಗ್ರೆಸ್ ತನ್ನ ಪಾಲಿನ ಮಂತ್ರಿಗಳನ್ನು ನೇಮಕ ಮಾಡಿದೆ. ನಿಗಮ ಮಂಡಳಿ ಅಧ್ಯಕ್ಷರುಗಳ ಹೆಸರನ್ನೂ ಪ್ರಕಟಿಸಿದೆ. ಜೆಡಿಎಸ್ ಮಾತ್ರ ಶೂನ್ಯಮಾಸದ ನೆಪ ಒಡ್ಡಿ ತನ್ನ ಪಾಲಿನ ಸಚಿವರುಗಳು ಮತ್ತು ಅಧ್ಯಕ್ಷರ ನೇಮಕಾತಿಯನ್ನು ಮುಂದಕ್ಕೆ ಹಾಕಿದೆ.

**ನಿಮಗೆ ಹಾಗೂ**
**ನಿಮ್ಮ ಕುಟುಂಬಕ್ಕೆ**
**ಹೊಸ ವರ್ಷದ ಶುಭಾಶಯಗಳು**
**೨೦೧೯**

ಬಹುಶಃ ಲೋಕಸಭಾ ಚುನಾವಣೆ ಮುಗಿಯುವವರೆಗೆ ಅದು ಭರ್ತಿಯಾಗುವ ಸೂಚನೆ ಕಾಣುತ್ತಿಲ್ಲ. ಈ ಮಧ್ಯೆ ಕಾಂಗ್ರೆಸ್ಸಿನಿಂದ ಜೆಡಿಎಸ್‌ಗೆ ಹೋದ ಮೈಸೂರಿನ ವಿಶ್ವನಾಥ ಪಕ್ಷದ ಅಧ್ಯಕ್ಷತೆಗೆ ನೇಮಕಗೊಂಡಿದ್ದರು. ಈಗ ಅನಾರೋಗ್ಯದ ಕಾರಣದಿಂದ ಅವರು ಅಧ್ಯಕ್ಷ ಪದಕ್ಕೆ ರಾಜೀನಾಮೆ ನೀಡಲು ನಿರ್ಧರಿಸಿದ್ದಾರೆ. ಸಚಿವ ಸ್ಥಾನದ ಆಕಾಂಕ್ಷಿ ಜೆಡಿಎಸ್‌ನ ಬಸವರಾಜ ಹೊರಟ್ಟಿ ಗರಂ ಆಗಿದ್ದಾರೆ. ಮಾಮೂಲಿನಂತೆ ಮಾಧ್ಯಮಗಳ ಭಾಷೆಯಲ್ಲಿ ಸಂಪುಟ ಪುನಾರಚನೆಯ ನಂತರ ಕಾಂಗ್ರೆಸ್ ಪಕ್ಷದಲ್ಲಿ 'ಅಸಮಾಧಾನ ಭುಗಿಲೆದ್ದಿದೆ.' ಅದನ್ನು ಬಗೆಹರಿಸುವುದರಲ್ಲಿ ಕಾಂಗ್ರೆಸ್ ನಾಯಕರುಗಳು ನಿರತರಾಗಿದ್ದಾರೆ. ಶಾಸಕರಾಗಿ ಆಯ್ಕೆಯಾಗುವವರೆಲ್ಲ ಸಚಿವ ಸ್ಥಾನದ ಆಕಾಂಕ್ಷಿಗಳೇ, ಎಲ್ಲರೂ ಅರ್ಹರೆ! ಆದರೆ ಅದಕ್ಕೆ ಮಿತಿ ಇದೆ. ಅಧಿಕಾರ ಯಾರಿಗೆ ಬೇಡ. ಲಾಭ ತರುವಂಥ ನಿಗಮ, ಮಂಡಳಿಗಳ ಅಧ್ಯಕ್ಷ ಸ್ಥಾನ ಬೇಕು, ಹಾಗೆಯೇ ಸಚಿವ ಸ್ಥಾನದಲ್ಲಿರುವವರು ಅಪೇಕ್ಷಿಸುವುದು ಕೂಡ ಲಾಭತರುವಂಥದ್ದೆ. ಎಲ್ಲದಕ್ಕೂ ಹೈಕಮಾಂಡ್ ಸಮ್ಮತಿಯೇ ಆಗಬೇಕು. ಸಂವಿಧಾನದಲ್ಲಿ ಸೂಚಿಸಿರುವಂತೆ ಮುಖ್ಯಮಂತ್ರಿಗೆ ಇಂದು ಅಧಿಕಾರವೇ ಇಲ್ಲ ಸಮ್ಮಿಶ್ರ ಸರಕಾರದ 'ರಾಜಧರ್ಮ'ದ ಕಾಲ ಇದು. ಹೊಸವರ್ಷದಲ್ಲಿ ನಡೆಯಲಿರುವ ಲೋಕಸಭಾ ಚುನಾವಣೆಗಳಿಗೆ ಸೀಟುಗಳ ಹಂಚಿಕೆ ಪುರಾಣ ಏನಾಗುವುದೋ ನೋಡಬೇಕು.

* * *

ನಮ್ಮ ದೇಶದ ಕೆಲವು ರಾಜಕೀಯ ನಾಯಕರು ತಮ್ಮ ಕುಟುಂಬದ ಮಕ್ಕಳಿಗೆ ಬೌದ್ಧಿಕ ಮತ್ತು ನೈತಿಕ ತರಬೇತಿಯನ್ನು ಎಷ್ಟು ಕಾಳಜಿಯಿಂದ ನೀಡಲು ಮುಂದಾಗುತ್ತಾರೋ ತಿಳಿಯದು. ಅವರ ಕಾಳಜಿಯೊಂದೇ ಮಕ್ಕಳ ಚಾರಿತ್ರ್ಯ ವರ್ಧನೆಗೆ ಕಾರಣವೆಂದು ಸೂಚಿಸುವ ಮಾತಲ್ಲ ಇದು. ದಕ್ಷಿಣದ ರಾಜ್ಯಗಳಲ್ಲಿ ಕೇರಳವನ್ನು ಬಿಟ್ಟರೆ ಇತರ ಮೂರು ರಾಜ್ಯಗಳಲ್ಲಿ ರಾಜಕೀಯ ಅಪ್ಪಂದಿರು ಸಾಧ್ಯವಾದಷ್ಟು "ಶ್ರಮಿಸಿ" ತಮ್ಮ ಮಕ್ಕಳಿಗೆ ಮುಂದಾಳತ್ವದ ಪಟ್ಟವನ್ನು ಕಟ್ಟಿಕೊಡುತ್ತಿರುವುದು ಕಂಡುಬರುತ್ತಿದೆ. ಉದಾಹರಣೆಗಳನ್ನು ಕೊಡುವ ಅಗತ್ಯವೇನೂ ಇಲ್ಲ. ತೆಲಂಗಾಣದ ಮುಖ್ಯಮಂತ್ರಿ ತಮ್ಮ ಮಗನಿಗೆ ಪಕ್ಷದ ಅಧ್ಯಕ್ಷತೆಯನ್ನು ದಯಪಾಲಿಸಿದ್ದಾರೆ, ತಮಿಳುನಾಡಿನ ಮಾಜಿ ಮುಖ್ಯಮಂತ್ರಿಯೂ ಅದನ್ನು ಮಾಡಿದ್ದಾರೆ. ಆಂಧ್ರಪ್ರದೇಶದ ಪರಂಪರೆಯೂ ಅದೇ. ಇನ್ನು ಕರ್ನಾಟಕದ ಬಗೆಗಿನ ವಿವರಣೆ ಅನಗತ್ಯ. 'ನೆಹರು ಕುಟುಂಬ' ದೇಶವನ್ನು ಹಾಳುಮಾಡಿದೆ, ಅಧಿಕಾರವನ್ನು ಪರಂಪರಾಗತವಾಗಿಸಿಕೊಂಡಿದೆ ಎಂದು ಹೇಳುವವರು ತಮ್ಮ ಕುಟುಂಬಗಳನ್ನು ಸಲಹುತ್ತಿರುವುದು ಹೀಗೆ! ಕಾಂಗ್ರೆಸ್‌ನ ಹಿರಿಯ ನಾಯಕರಿಗೆ ಎದೆಗಾರಿಕೆ, ಆತ್ಮವಿಶ್ವಾಸ ಮತ್ತು ನೈಜ ಪ್ರಜಾಪ್ರಭುತ್ವದಲ್ಲಿ ನಂಬಿಕೆ ಇದ್ದಿದ್ದರೆ ನೆಹರು ಕುಟುಂಬ ಅಧಿಕಾರದಲ್ಲಿ ಉಳಿಯಲು ಸಾಧ್ಯವಾಗುತ್ತಿತ್ತೆ? ಅದೇಕೆ ಅವರಲ್ಲಿ ಪೈಪೋಟಿ ಮನೋಭಾವ ಉಂಟಾಗಲಿಲ್ಲವೋ ತಿಳಿಯದು. ಮಂತ್ರಿಗಿರಿ ಬೇಕೆಂಬುದೊಂದನ್ನು ಬಿಟ್ಟರೆ ಅವರಿಗೆ ಬೇರಾವುದರಲ್ಲೂ ಪೈಪೋಟಿಯ ಭಾವನೆ ತೋರಿಬರುವುದಿಲ್ಲ. ಮಂತ್ರಿ ಪದವಿ ಇಲ್ಲದಿದ್ದರೆ "ಜನಸೇವೆ" ಮಾಡಲು ಸರ್ವಥಾ ಸಾಧ್ಯವಿಲ್ಲವೆಂದು ಅವರಿಗೆ ಮನದಟ್ಟಾಗಿ ಬಿಟ್ಟಿದೆ. ಯಾವ ಸಂಕೋಚವೂ ಇಲ್ಲದೆ ಅವರ ಈ ತೀರ್ಮಾನವನ್ನು ಪದೇಪದೇ ಪ್ರಕಟಿಸು ತ್ತಿರುತ್ತಾರೆ. ೨೦೧೮ರ ಚುನಾವಣೆಯ ನಂತರವಂತೂ ಇದು ಬೆಟ್ಟದಷ್ಟು ಗಾತ್ರದಲ್ಲಿ ಕಣ್ಣ ಮುಂದೆ ಬಂದಿದೆ. ಕರ್ನಾಟಕದ ಜನರ ಬಗ್ಗೆ ಅವರು ಇರಿಸಿಕೊಂಡಿರುವ ಗೌರವಕ್ಕೆ ಇದೂ ಒಂದು ಕುರುಹೋ ಏನೋ! ಇಷ್ಟು ಹೊಲಸಾದ ರಾಜಕೀಯ ದುರ್ಭಾವನೆಯನ್ನು ಕಂಡು ಜನ ಇನ್ನೂ ರೋಸಿ ಹೋಗಿಲ್ಲದಿದ್ದರೆ ಇಂತಹ ನಾಯಕರಿಂದ ಅವರ ನಿರೀಕ್ಷೆಗಳೆಂತಹವು ಎಂಬುದನ್ನು ತರ್ಕಿಸಬೇಕಾಗುತ್ತದೆ. ನಮ್ಮ ರಾಜ್ಯವನ್ನು ದೇಶದೆದುರು ಹೀಗೆ ಬೆತ್ತಲು ಮಾಡುತ್ತಿರುವವರಿಗೆ ಧಿಕ್ಕಾರ ಹೇಳಬೇಕು, ಮಂತ್ರಿಗಳಾದರೆ ಇಂಥವರು ತಮಗೆ ಏನೇನು ಗಿಟ್ಟಿಸಿಕೊಳ್ಳುವ ಹವಣಿಕೆಯಲ್ಲಿರುತ್ತಾರೆಂದು ಮನಗಾಣಬೇಕು. ಇಷ್ಟು ವರ್ಷಗಳಲ್ಲಿ ಪಕ್ಷವು ಅವರಿಗೆ ಧಾರೆಯೆರೆದು ಕೊಟ್ಟಿರುವ ರಾಜಕೀಯ ಸಿದ್ಧಾಂತದ ಪೊಳ್ಳುತನಕ್ಕೆ ಇದೊಂದು ಸಾಕ್ಷಿ.

ನಮ್ಮ ರಾಜ್ಯದಲ್ಲಿ ಸಚಿವ ಸ್ಥಾನದ ಪೈಪೋಟಿಯಲ್ಲಿ ಬೇರೆ ಪಕ್ಷ ಅಥವಾ ಪಕ್ಷಗಳಿಗೆ ಅಧಿಕಾರವನ್ನು ಹಸ್ತಾಂತರಿಸಲು ಸಹ ಕೆಲವರು ಸಿದ್ಧರಿದ್ದಾರೆ. ಅಂಥವರ ಘನತೆಗೆ ಏನು ಹೇಳಬೇಕು? ಇವರನ್ನು ಮೀರಿಸುವ ಒಬ್ಬ ವ್ಯಕ್ತಿ ಬಿಹಾರದ ರಾಮವಿಲಾಸ ಪಾಸ್ವಾನ್. ತಾನು ಲೋಕಸಭೆಯ ಸದಸ್ಯತ್ವವನ್ನು "ತ್ಯಾಗ" ಮಾಡಿ ಅದನ್ನು ತನ್ನ ಮಗನಿಗೆ ಬಳುವಳಿ ನೀಡಹೊರಟಿದ್ದಾನೆ ಈ ಮಹಾನುಭಾವ. ಜೊತೆಗೆ, ತನ್ನನ್ನು ಅಸ್ಸಾಮಿನ ಶಾಸನಸಭೆಯಿಂದ ರಾಜ್ಯಸಭೆಗೆ ಚುನಾಯಿಸಬೇಕೆಂಬ ಷರತ್ತು ಹಾಕಿ ಭಾರತೀಯ ಜನತಾ ಪಕ್ಷದ ಅಧ್ಯಕ್ಷ ಅಮಿತ್ ಷಾ ಅವರಿಗೆ ಚಳ್ಳೆಹಣ್ಣು ತಿನ್ನಿಸಿರುವ ಭೂಪ ಈತ. ಅಂದೆಲ್ಲಾ ರಾಜಮಹಾರಾಜರು ಮಾತ್ರ ತಮ್ಮ ಸಿಂಹಾಸನವನ್ನು ಮಕ್ಕಳಿಗೆ ದಯಪಾಲಿಸುತ್ತಿದ್ದರು, ಈಗ ಪಾಸ್ವಾನ್ ಅಂಥವರು ಸಹ ಅದನ್ನು ಮಾಡಲು ಸಮರ್ಥರಾಗಿದ್ದಾರೆ. ಅದನ್ನು ಸಮಾಧಾನದ ಸಂಗತಿಯೆಂದು ಬೇಕಾದರೂ ಸ್ವಾಗತಿಸಬಹುದು. ಆದರೆ ಇಂತಹ ನಾಯಕರಿಂದ ದಲಿತ ಸಮುದಾಯಕ್ಕೆ ಎಷ್ಟರಮಟ್ಟಿನ ಔನ್ನತ್ಯ ದೊರೆಯಲು ಸಾಧ್ಯವೆಂಬುದು ಒಂದು ಒಗಟಾಗಿ ಉಳಿದಿದೆ. ಬಿಹಾರದ ಆರು ಕ್ಷೇತ್ರಗಳಲ್ಲಿ ತನ್ನ ಪಕ್ಷದ ಗಟ್ಟಿತನವನ್ನು ಉಳಿಸಿ ಕೊಂಡಿರುವುದು ಒಂದು ಹೆಗ್ಗಳಿಕೆಯಂತೂ ಹೌದು. ೨೦೧೯ರ ಲೋಕಸಭಾ ಚುನಾವಣೆಯಲ್ಲಿ ಇದೇ ಗಟ್ಟಿತನವು ಮತ್ತೆ ಸಾಬೀತಾಗಲಿದೆಯೇ ಎಂಬುದನ್ನು ಕಾದುನೋಡಬೇಕು. ಭಾಜಪ ಕೂಟವನ್ನು ವಿರೋಧಿಸುವ ಪಕ್ಷಗಳು ಹೇಗೂ ಒಂದಾಗುವುದಿಲ್ಲವೆಂಬ ಭರವಸೆ ಪಾಸ್ವಾನ್ ಅವರಿಗೆ ಇದ್ದಂತೆ ತೋರುತ್ತದೆ. ಜೈಲಿನಲ್ಲಿರುವ ಲಾಲೂ ಪ್ರಸಾದ್ ಮತ್ತು ಹೇಳ ಹೆಸರಿಲ್ಲದಂತಹ ಕಾಂಗ್ರೆಸ್ ಯಾವ ಸವಾಲೂ ಒಡ್ಡಲಾರವೆಂದು ಪಾಸ್ವಾನ್ ಅವರಿಗೆ ಹೇಗೋ ಅರಿವಾಗಿರ ಬೇಕು. ಆದರೆ ಅವರ ರಾಜಕೀಯ ಭಂಡತನವು ಸಮರ್ಥನೀಯವಲ್ಲ.

* * *

ಭಾರತೀಯ ಜನತಾ ಪಕ್ಷದ ಕೂಟವನ್ನು ಜಂಟಿಯಾಗಿ ಎದುರಿಸುವುದು ಅಗತ್ಯ ಮತ್ತು ಅನಿವಾರ್ಯವೆಂದು ಬಹಿರಂಗವಾಗಿ ಘೋಷಿಸುವ ಹತ್ತಾರು

*(೧೮ನೇ ಪುಟಕ್ಕೆ...)*

ಸಂಪಾದಕೀಯ

# ಯಂತ್ರ ನಾಗರಿಕತೆಯ ಅತಿರೇಕ
# ಮಂತ್ರ ನಾಗರಿಕತೆಯ ಅವಿವೇಕ

**'ಹೊಸತು'**ಗೆ ಇಪ್ಪತ್ತು ವರ್ಷ, ನವಕರ್ನಾಟಕ ಪ್ರಕಾಶನಕ್ಕೆ ಅರವತ್ತು ವರ್ಷ. ಜನಪರವಾದ ಚಿಂತನೆಯ ತಾತ್ವಿಕ ಬದ್ಧತೆಯಿಂದ ಒಂದು ಪ್ರಕಾಶನ ಸಂಸ್ಥೆ ಅರವತ್ತು ವರ್ಷ ಪೂರೈಸುವುದು, ವೈಚಾರಿಕತೆಯನ್ನೇ ಉಸಿರಾಗಿಸಿಕೊಂಡು ಒಂದು ತಿಂಗಳ ಪತ್ರಿಕೆ ನಿಯಮಿತವಾಗಿ ಎರಡು ದಶಕ ಪ್ರಕಟಗೊಳ್ಳುವುದು ಸಾಮಾನ್ಯ ವಿಷಯವಲ್ಲ. ಇದು ಪ್ರಕಟನಾ ಸಂಸ್ಥೆಯ ಬದ್ಧತೆಗಿಂತಲೂ ಆ ಬದ್ಧತೆಯನ್ನು ಗೌರವಿಸುವ, ಅದರಲ್ಲಿ ಪಾಲ್ಗೊಳ್ಳುವ ಅಪಾರ ಓದುಗರ, ಲೇಖಕರ ಪ್ರೀತಿ ಮುಖ್ಯವಾಗುತ್ತದೆ. ಈ ಸಂದರ್ಭದಲ್ಲಿ ನವಕರ್ನಾಟಕ ಪ್ರಕಾಶನದ ಪುಸ್ತಕಗಳ ಓದುಗರಿಗೂ, 'ಹೊಸತು' ಪತ್ರಿಕೆಯ ಓದುಗರಿಗೂ, ಲೇಖಕರಿಗೂ, ಜಾಹೀರಾತುದಾರರಿಗೂ, ಸಹ ಪ್ರಕಾಶಕರಿಗೂ, ಹಿತೈಷಿಗಳಿಗೂ, ಪ್ರಕಟನೆಗಾಗಿ ಶ್ರಮಿಸಿದ ಸಿಬ್ಬಂದಿಗೂ 'ಹೊಸತು' ಮತ್ತು ನವಕರ್ನಾಟಕದ ಪರವಾಗಿ ಹೃತ್ಪೂರ್ವಕ ವಂದನೆಗಳು ಮತ್ತು ಹೊಸ ವರ್ಷದ ಶುಭಾಶಯಗಳು. ೨೦೧೯ನೇ ವರ್ಷ ಎಲ್ಲರಿಗೂ ಒಳಿತಾಗುವಂಥ ವರ್ಷವಾಗಲಿ, ಜೀವ ಜಗತ್ತು ನೆಮ್ಮದಿಯಿಂದಿರಲಿ ಎಂದು ಆಶಿಸುತ್ತೇವೆ.

✳ ✳ ✳

ಯಂತ್ರಜ್ಞಾನ ಮತ್ತು ತಂತ್ರಜ್ಞಾನ ಮಾನವನ ನಾಗರಿಕತೆಯ ವಿಕಾಸಕ್ಕೆ ಅಪಾರವಾದ ಕಾಣಿಕೆ ಸಲ್ಲಿಸಿವೆ. ನೆಮ್ಮದಿಯ ಬದುಕಿಗಾಗಿ, ಭವಿಷ್ಯಕ್ಕಾಗಿ ಮಾನವನೇ ಶೋಧಿಸಿ, ವಿಕಾಸಪಡಿಸಿದ ಈ ಜ್ಞಾನ ಶಾಖೆಗಳು ಆದಿಮಾನವನಿಂದ ಇಂದಿನವರೆಗೆ ನಾಗರಿಕತೆಗಳ ಬೆಳವಣಿಗೆಗೂ ವಿಕಾಸಕ್ಕೂ ಕಾರಣ ಆಗಿವೆ. ಆದರೆ ಇಂದಿನ ಸಂದರ್ಭದಲ್ಲಿ ವಿಜ್ಞಾನ ಮತ್ತು ಅದರ ಕೂಸುಗಳಾದ ಯಂತ್ರಜ್ಞಾನ, ತಂತ್ರಜ್ಞಾನ ಮತ್ತು ಇತರ ಜ್ಞಾನ ಶಾಖೆಗಳು ವ್ಯಾಪಾರದ ಸರಕಾಗಿ, ಕೆಲವೇ ವ್ಯಕ್ತಿಗಳ, ವ್ಯಾಪಾರಿ ಸಂಸ್ಥೆಗಳ ಸ್ವತ್ತಾಗಿ ಮಾನವ ಕುಲವನ್ನೂ, ನಿಸರ್ಗ ಸಂಪತ್ತನ್ನೂ ಶೋಷಿಸುವ ಮಾಧ್ಯಮಗಳಾಗಿರುವುದು, ಶ್ರಮಿಕ ವರ್ಗವನ್ನು ಉತ್ಪಾದನಾ ಪ್ರಕ್ರಿಯೆಯಿಂದ ಹೊರಗಿಡುತ್ತಿರುವುದು ಗಂಭೀರವಾಗಿ ಚಿಂತಿಸಬೇಕಾದ ಸಂಗತಿ. ಬದುಕಿಗಾಗಿ ಜ್ಞಾನ, ವಿಜ್ಞಾನ ಎಂಬ ತತ್ವ ಹಿನ್ನೆಲೆಗೆ ಸರಿದು ಲಾಭಕ್ಕಾಗಿ, ಹೆಚ್ಚು ಲಾಭಕ್ಕಾಗಿ, ಅತಿಹೆಚ್ಚು ಲಾಭಕ್ಕಾಗಿ ಎಂಬ ನೀತಿ ಮುನ್ನೆಲೆಗೆ ಬಂದದ್ದು ಮನುಷ್ಯ ಮತ್ತು ಮನುಷ್ಯ ನಿರ್ಮಿಸಿದ ರಾಜಕೀಯ, ಆರ್ಥಿಕ ವ್ಯವಸ್ಥೆಯ ಕಾರಣದಿಂದಾಗಿ. ಭೂಮಿಯ ಮೇಲೆ ನಡೆದ ಎರಡು ಮಹಾಯುದ್ಧಗಳು, ಇಂದಿಗೂ ದೇಶ–ದೇಶಗಳ ಮಧ್ಯೆ, ಜನಾಂಗ–ಜನಾಂಗಗಳ ಮಧ್ಯೆ ನಡೆಯುತ್ತಿರುವ ಸಂಘರ್ಷಗಳು, ಅದಕ್ಕಾಗಿ, ಅಂದರೆ ಮನುಷ್ಯನನ್ನು ಕೊಲ್ಲುವುದಕ್ಕಾಗಿ, ಶೋಷಣೆಗಾಗಿ ಬಳಕೆಯಾಗುತ್ತಿರುವ ಈ ಜ್ಞಾನ ಶಾಖೆಗಳ ಕಾಲವನ್ನು ನಾವು ಯಂತ್ರ ನಾಗರಿಕತೆಯ ಅತಿರೇಕ ಎಂದೇ ಕರೆಯಬೇಕಾಗುತ್ತದೆ. ಜಾಗತೀಕರಣ, ಉದಾರೀಕರಣ, ಖಾಸಗೀಕರಣ ಎಂಬ ಸಾಮ್ರಾಜ್ಯಶಾಹಿಗಳ ಆರ್ಥಿಕ ವ್ಯವಸ್ಥೆ ಇಡೀ ವಿಶ್ವದ ಮಾನವರನ್ನು ಗ್ರಾಹಕರನ್ನಾಗಿ ಪರಿವರ್ತಿಸಿ, ಗಿರಾಕಿಗಳನ್ನಾಗಿ ನೋಡುತ್ತಿದೆ. ಗ್ರಾಹಕನಾಗುವ ಶಕ್ತಿ ಇಲ್ಲದ ಮನುಷ್ಯ ಅನಾಗರಿಕನಂತೆ ಬಿಂಬಿಸಲ್ಪಡುತ್ತಿದ್ದಾನೆ. ನಾಗರಿಕ ಸೌಲಭ್ಯಗಳಿಂದ ವಂಚಿತರಾದ ಜನತೆ ಪ್ರತಿರೋಧ ವ್ಯಕ್ತಪಡಿಸದಿರಲಿ ಎನ್ನುವ ಕಾರಣಕ್ಕೆ ಮಂತ್ರ ನಾಗರಿಕತೆಯ ನೀತಿಗಳನ್ನು ಹೇರಲಾಗುತ್ತಿದೆ. ಇಂದು ಯಂತ್ರ ನಾಗರಿಕತೆಯ ಅತಿರೇಕ ಹಾಗೂ ಮಂತ್ರ ನಾಗರಿಕತೆಯ ಅವಿವೇಕದ ಅಡಿಯಲ್ಲಿ ಮಾನವ ಜನಾಂಗ ಬಳಲುತ್ತಿದೆ.

ಮಾನವ ಜನಾಂಗದ ವಿಕಾಸದ ಹಂತದಲ್ಲಿ ಮನುಷ್ಯ ಅನಕ್ಷರತೆಯಿಂದ ಅಕ್ಷರದ ಕಡೆಗೆ, ಅಜ್ಞಾನದಿಂದ ಜ್ಞಾನದ ಕಡೆಗೆ, ಕತ್ತಲಿಂದ ಬೆಳಕಿನ ಕಡೆಗೆ ಸಾಗಿ ಬಂದಿದ್ದಾನೆ. ಇಂಥ ಪಯಣದಲ್ಲಿ ಒಂದು ಕಾಲದಲ್ಲಿ ರೂಢಿಸಿಕೊಂಡ ಜೀವನ ವಿಧಾನ, ನಂಬಿಕೆ, ಆಚರಣೆ ಎಲ್ಲವುಗಳನ್ನೂ ವೈಜ್ಞಾನಿಕ ಮತ್ತು ವಾಸ್ತವತೆಯ ನೆಲೆಯಿಂದ ಪರೀಕ್ಷಿಸುತ್ತ, ಅವಶ್ಯವಾದದ್ದನ್ನು ಸ್ವೀಕರಿಸುತ್ತ, ಅನವಶ್ಯಕವಾದದ್ದನ್ನು ತಿರಸ್ಕರಿಸುತ್ತ ಬಂದಿದ್ದಾನೆ. ಮುಖ್ಯವಾಗಿ ಬದುಕೇ ಅವನಿಗೆ ಪ್ರಯೋಗ ಶಾಲೆ. ಒಂದು ಕಾಲದ ನಂಬಿಕೆಗಳನ್ನು, ಆಚರಣೆಗಳನ್ನು ಕಾರ್ಯ ಕಾರಣ ಸಂಬಂಧದ ತಿಳುವಳಿಕೆಯಿಲ್ಲದೆ ಒಪ್ಪುವ ಅಥವಾ ತಿರಸ್ಕರಿಸುವ ವಿಧಾನವನ್ನೇ ಮೌಢ್ಯ ಎಂದು ಕರೆಯುತ್ತೇವೆ. ಈ ಒಪ್ಪುವ ಅಥವಾ ತಿರಸ್ಕರಿಸುವ ಪ್ರಕ್ರಿಯೆ ಮನುಷ್ಯನ ವಿವೇಕಕ್ಕೆ ಸಂಬಂಧಿಸಿದ್ದು. ಆದರೆ ಇಂದು ಒಂದು ಕಾಲದ ಧಾರ್ಮಿಕ ನಂಬಿಕೆ, ಆಚರಣೆಗಳು, ಮಂತ್ರಗಳು, ಶ್ಲೋಕಗಳು, ತಮ್ಮ ಆಂತರ್ಯವನ್ನು, ಉದ್ದೇಶಗಳನ್ನು ಸಾದರಪಡಿಸದೆ ಇಂದಿನ ಜನಾಂಗದ ಮೇಲೆ ಹೇರಲ್ಪಡುತ್ತಿವೆ. ಇದನ್ನೇ ನಾವು ಮಂತ್ರ ನಾಗರಿಕತೆಯ ಅವಿವೇಕ ಎನ್ನುವುದು. ಈ ಅವಿವೇಕ ಕೇವಲ ನಮ್ಮ ದೇಶ ಮಾತ್ರವಲ್ಲ, ವಿಶ್ವದ ಎಲ್ಲ ದೇಶಗಳಲ್ಲೂ ಇದೆ. ಆದರೆ ಇದಾವುದೂ ಸಹಜವಾದ ವಿಕಾಸವಲ್ಲ. ವಿಶ್ವದ ಸುಲಿಗೆ, ಮಾನವ ಹಾಗೂ ನೈಸರ್ಗಿಕ ಸಂಪನ್ಮೂಲಗಳ ಶೋಷಣೆಗೆ ವ್ಯವಸ್ಥಿತವಾಗಿ ರೂಪಿಸಲಾಗಿರುವ ಒಂದು ಪಿತೂರಿ ಎನ್ನುವುದನ್ನು ವಿಶ್ವದಾದ್ಯಂತ ಶೋಷಿತ ಜನಾಂಗ ಅರ್ಥಮಾಡಿಕೊಳ್ಳಬೇಕಿದೆ.

ಕ್ರಿಶ್ಚಿಯನ್‌ರು ಯಹೂದಿಗಳ ವಿರುದ್ಧ, ಯಹೂದಿಗಳು ಪ್ಯಾಲೆಸ್ಟೈನಿನ ಇಸ್ಲಾಮಿಯರ ವಿರುದ್ಧ, ಇಸ್ಲಾಮಿನ ಶಿಯಾ–ಸುನ್ನಿಗಳು ಪರಸ್ಪರರ ವಿರುದ್ಧ, ಬೌದ್ಧರು ರೋಹಿಂಗ್ಯಾಗಳ ವಿರುದ್ಧ, ಪಾಕಿಸ್ತಾನೀಯರು ಹಿಂದೂಗಳ ವಿರುದ್ಧ, ಹಿಂದೂಗಳು ಮುಸ್ಲಿಂರ ವಿರುದ್ಧ, ಭಾರತದಲ್ಲಿ ವಿವಿಧ ಜಾತಿಗಳು ಪರಸ್ಪರರ ವಿರುದ್ಧ ದ್ವೇಷಕಾರಿ, ಪರಸ್ಪರ ವೈರಿಗಳಂತೆ ನೋಡುತ್ತಿರುವುದು, ಸಂಘರ್ಷಕ್ಕಿಳಿಯುತ್ತಿರುವುದು ಸಹಜವೂ ಅಲ್ಲ, ಆಕಸ್ಮಿಕವೂ ಅಲ್ಲ. ಇದು ಮಂತ್ರ ನಾಗರಿಕತೆಯ ಅವಿವೇಕದ ಪ್ರತಿಫಲ ಮತ್ತು ಸಾಮ್ರಾಜ್ಯಶಾಹಿ ಶಕ್ತಿಗಳು ತಮ್ಮ ಸುಲಿಗೆ, ಶೋಷಣೆಗೆ ಪ್ರತಿರೋಧ ಎದುರಾಗದೆ ಪರಸ್ಪರರು ಸಂಘರ್ಷದಲ್ಲಿ ತೊಡಗಿರಲಿ ಎಂದು ರೂಪಿಸಿದ ಹುನ್ನಾರ. ಇದಕ್ಕೆ ವಿವಿಧ ದೇಶಗಳಲ್ಲಿ ವಿವಿಧ ರೀತಿಯ ಉದಾಹರಣೆಗಳನ್ನು ಸಾದರಪಡಿಸಬಹುದು. ಭಾರತದಲ್ಲಿ ಮಾತ್ರ ನವ ಸಾಮ್ರಾಜ್ಯಶಾಹಿಗಳ ಉದಾರೀಕರಣ ನೀತಿ ಮತ್ತು ಹಿಂದು ಕುಲಮದವಾದಿಗಳ ಕೋಮು ಸಂಘರ್ಷ ನೀತಿಗಳು ಏಕಕಾಲದಲ್ಲಿ, ಇಪ್ಪತ್ತನೆಯ ಶತಮಾನದ ಕೊನೆಯ ದಶಕದಲ್ಲಿ (೧೯೯೦ರ ನಂತರ) ಪರಸ್ಪರ ಪೂರಕವಾಗಿ ಬೆಳೆದವು ಎಂಬುದಕ್ಕೆ ಇಂದು ಸ್ಪಷ್ಟವಾದ ಸಾಕ್ಷಿಗಳು ದೊರಕಿವೆ.

೧೯೯೧ರಲ್ಲಿ ಗ್ಯಾಟ್ ಒಪ್ಪಂದಕ್ಕೆ ಅಂದಿನ ಕಾಂಗ್ರೆಸ್ ಸರಕಾರದ ಪ್ರಧಾನಿ ಪಿ. ವಿ. ನರಸಿಂಹರಾವ್ ಮತ್ತು ಅರ್ಥ (ಅನರ್ಥ) ಶಾಸ್ತ್ರಜ್ಞ ಮನಮೋಹನ್ ಸಿಂಗ್ ಈ ಯಂತ್ರ ನಾಗರಿಕತೆಯ ಭೂತವನ್ನು ಈ ದೇಶದ ಉನ್ನತ ನೀತಿ ನಿರೂಪಣೆಯ ಸಂಸ್ಥೆಯಾದ ಸಂಸತ್‌ಗೂ ತಿಳಿಸದೆ ಭಾರತದ ಬಾಗಿಲಿಗೆ ತಂದು ನಿಲ್ಲಿಸಿದರು. ಮನಮೋಹನ ಸಿಂಗ್ ಮತ್ತು ಕಾಂಗ್ರೆಸ್‌ಅನ್ನು ಟೀಕಿಸಿ, ವಿರೋಧಿಸುತ್ತಲೇ ಅಧಿಕಾರಕ್ಕೆ ಬಂದ ಬಿಜೆಪಿ ಮತ್ತು ಪ್ರಧಾನಿ ನರೇಂದ್ರ ಮೋದಿಯವರು ಬಾಗಿಲಲ್ಲಿದ್ದ ಯಂತ್ರ ನಾಗರಿಕತೆಯ (ಜಾಗತೀಕರಣದ) ಭೂತವನ್ನು ಬಾಗಿಲು



ಸಂಪಾದಕೀಯ

ತೆಗೆದು ಒಳಗೆ ಕರೆತಂದು, ಅದಕ್ಕೆ ಹಿಂದುತ್ವದ ಕವಚ ತೊಡಿಸಿ ಭಾರತೀಯರ ಮುಂದೆ ಬಿಟ್ಟರು. ೧೭೫೭ರಲ್ಲಿ ಸಿರಾಜುದ್ದೌಲ್‌ನನ್ನು ಪ್ಲಾಸಿ ಕದನದಲ್ಲಿ ಸೋಲಿಸಿ ಭಾರತದಲ್ಲಿ ತನ್ನ ಆಡಳಿತ ಆರಂಭಿಸಿದ್ದ ಸಾಮ್ರಾಜ್ಯಶಾಹಿ ಇಂದು ಮನಮೋಹನ್ ಸಿಂಗ್‌ರನ್ನು ಒಲಿಸಿ, ನರೇಂದ್ರ ಮೋದಿಯವರನ್ನು ತನ್ನ ಅಧಿಕೃತ ವಕ್ತಾರನನ್ನಾಗಿಸಿಕೊಂಡು ಮತ್ತೊಮ್ಮೆ ಭಾರತವನ್ನು ತನ್ನ ಸುಪರ್ದಿಗೆ ತೆಗೆದುಕೊಂಡಿದೆ. ಅದಕ್ಕೇ ಚಲೇಜಾವ್ ಎಂಬ ಘೋಷಣೆ ಮೊಳಗಿದ ನಾಡಿನಲ್ಲಿ ನರೇಂದ್ರ ಮೋದಿ ಎಂಬ ಚಾಯ್ ವ್ಯಾಪಾರಿ 'ಮೇಕ್ ಇನ್ ಇಂಡಿಯಾ' ಅಂದರೆ ಚಲೇ ಆವ್, ಚಲೇ ಆವ್ ಎಂದು ದಿನಕ್ಕೊಂದು ದೇಶ ಸುತ್ತಿ ಸಾಮ್ರಾಜ್ಯಶಾಹಿ, ಕಾರ್ಪೊರೇಟ್ ಕಂಪನಿಗಳನ್ನು ಕರೆಯುತ್ತಿದ್ದಾರೆ. ಇವರನ್ನು 'ಕಾರ್ಪೊರೇಟ್ ಏಜೆಂಟ್' ಎಂದು ವಿಶ್ಲೇಷಿಸಿದರೆ ಭಾರತದ ಹಿಂದುತ್ವವಾದಿಗಳಿಗೆ ಸಿಟ್ಟು ಬರುತ್ತದೆ. ಯಾಕೆಂದರೆ ಅವರನ್ನು 'ಮಂತ್ರ ನಾಗರಿಕತೆಯ', ಮೌಢ್ಯದ ವಕ್ತಾರರನ್ನಾಗಿಸಲಾಗಿದೆ.

೧೯೯೬ರಿಂದ ಇಂದಿನವರೆಗೆ ಮೂರುವರೆ ಲಕ್ಷ ರೈತರು ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ಕಾರ್ಮಿಕರು ಹೋರಾಟದಿಂದ ಪಡೆದ ಹಕ್ಕುಗಳನ್ನು ನಾಶ ಮಾಡಿ ಅವರನ್ನು ಗುಲಾಮರಂತಾಗಿಸಲಾಗಿದೆ. ೧೯೯೬ರಲ್ಲಿ ಭಾರತದಲ್ಲಿ ಮೂರು ಬಿಲಿಯನಿಯರ್‌ಗಳಿದ್ದರೆ ಮೋದಿಯವರ ಆಡಳಿತದ ಸಂದರ್ಭದಲ್ಲಿ, ಅಂದರೆ ೨೦೧೭ಕ್ಕೆ ೧೦೧ ಬಿಲಿಯನಿಯರ್‌ಗಳಿದ್ದಾರೆ. ಇದನ್ನು ಪ್ರಧಾನಿ ಮೋದಿ ಮತ್ತವರ ಭಕ್ತರು ಭಾರತದಲ್ಲಿ ಶ್ರೀಮಂತರ ಸಂಖ್ಯೆ ಹೆಚ್ಚಿದೆ ಎಂದು ಬಿಂಬಿಸಬಹುದು. ಆದರೆ ಭಾರತದ ಒಟ್ಟು ಜನಸಂಖ್ಯೆಯ ಶೇ. ೧ರಷ್ಟಿರುವ ಜನ ಶ್ರೀಮಂತರ ಕೈಯಲ್ಲಿ ದೇಶದ ಶೇಕಡಾ ೭೩ರಷ್ಟು ಸಂಪತ್ತು ಶೇಖರವಾಗಿದೆ. ದೇಶದ ಶೇಕಡಾ ೯೯ರಷ್ಟು ಜನರು ಕೇವಲ ಶೇಕಡಾ ೨೭ರಷ್ಟು ಸಂಪತ್ತನ್ನು ಹಂಚಿಕೊಳ್ಳಲು ಹೊಡೆದಾಡುತ್ತಿದ್ದಾರೆ. ಅವರು ಈ ಶೇಕಡಾ ೭೩ರಷ್ಟು ಸಂಪತ್ತಿನ ಕಡೆಗೆ ಗಮನಹರಿಸಬಾರದೆಂದೇ ಹಿಂದುತ್ವ, ರಾಮಮಂದಿರ, ಗೋರಕ್ಷೆ, ಶಬರಿಮಲೆ ಇಂಥ ಮಂತ್ರ ನಾಗರಿಕತೆಯ ಅವಿವೇಕದ ಘೋಷಣೆಗಳನ್ನು ಜನಪ್ರಿಯಗೊಳಿಸಲಾಗುತ್ತದೆ. ಭಾರತದಲ್ಲಿ ಜನಸಾಮಾನ್ಯರು ಬ್ಯಾಂಕ್‌ನಲ್ಲಿಟ್ಟ ಹಣದಲ್ಲಿ ಅಂಬಾನಿ ಸಹೋದರರೇ ೩,೧೨,೦೨೬ ಕೋಟಿ ಸಾಲ ಪಡೆದಿದ್ದಾರೆ. ಇನ್ನುಳಿದಂತೆ ಎಸ್ಸಾರ್ ಗ್ರೂಪ್, ವೇದಾಂತ, ಅದಾನಿ, ಟಾಟಾ, ಜೇಪಿ, ಜಿಂದಾಲ್, ಲ್ಯಾಂಕೋ, ಜಿ. ಎಂ.ಆರ್., ವಿಡಿಯೋಕಾನ್, ಜಿವಿಕೆ ಮುಂತಾದ ೧೨ ಕಂಪನಿಗಳೇ ೧೨ ಲಕ್ಷ ಕೋಟಿಗಿಂತ ಹೆಚ್ಚಿನ ಸಾಲ ಪಡೆದಿವೆ. ಇಂಥ ಸಾಲಗಳು ಭಾರತದ ೧೩೦ ಕೋಟಿಗೂ ಹೆಚ್ಚಿರುವ ಜನತೆಗಾಗಿ ಸರಕಾರ ರೂಪಿಸಿರುವ ವಾರ್ಷಿಕ ಬಜೆಟ್‌ಗಿಂತಲೂ ಹೆಚ್ಚಾಗಿವೆ. ಇದನ್ನು ಗಮನಿಸಿದರೆ ಮೋದಿ ಸರಕಾರ ಕಂಪನಿಗಳ ಗುಲಾಮ ಸರಕಾರವೋ, ಜನರಿಂದ ಆಯ್ಕೆಯಾದ ಸರಕಾರವೋ ಎಂಬುದು ಸ್ಪಷ್ಟವಾಗಿ ಗೋಚರವಾಗುತ್ತದೆ. ಇಂಥ ಕಂಪನಿಗಳ ಸಾಲಮನ್ನಾ ಮಾಡಲು ಸರಕಾರ ಉತ್ಸುಕವಾಗಿದೆ. ಆದರೆ ರೈತರ ಸಾಲಮನ್ನಾ ಮಾಡಲು ವಿರೋಧಿಸುತ್ತಿದೆ. ಇದೆಲ್ಲ ಬಹಿರಂಗವಾಗಬಾರದೆಂತಲೇ ಮಂತ್ರ ನಾಗರಿಕತೆಯ ಘೋಷಣೆಗಳನ್ನು ಮುನ್ನೆಲೆಗೆ ತಂದಿದೆ. ಈ ಕಾರ್ಪೊರೇಟ್ ಕಂಪನಿಗಳ ಮಾಲೀಕತ್ವದಲ್ಲಿರುವ ಬಹುತೇಕ ಮಾಧ್ಯಮಗಳು ಮೋದಿಯವರನ್ನು, ವ್ಯಾಪಾರಿಗಳ ಪಕ್ಷವಾಗಿರುವ ಬಿ.ಜೆ.ಪಿ.ಯನ್ನು ಹಾಡಿ ಹೊಗಳುತ್ತಿವೆ. ಭಾವನಾತ್ಮಕವಾಗಿ ಜನರನ್ನು ಭ್ರಮೆಯಲ್ಲಿ ಮುಳುಗಿಸುತ್ತಿವೆ. "ಭಾವನೆಗಳು ಜನಸಮುದಾಯದ ಮನಸ್ಸನ್ನು ಪ್ರಭಾವಿಸಿದಾಗ ಒಂದು ಭೌತಿಕ ಶಕ್ತಿಯಾಗಿ ಅವು ಪರಿಣಮಿಸುತ್ತವೆ" ಎಂದು ಕಾರ್ಲ್ ಮಾರ್ಕ್ಸ್ ಹೇಳಿದ್ದಾರೆ. ಹೀಗೆ ಜನಸಮುದಾಯದ ಭಾವನೆಗಳನ್ನು ಹುಸಿ ಪ್ರಚಾರದ ಮೂಲಕ ಪ್ರಭಾವಿಸಿ ಮತವಾಗಿ, ಅಂದರೆ ಭೌತಿಕವಾಗಿ ಲಾಭ ಪಡೆದ ಈ ಕುಲಮದವಾದಿಗಳಿಗೆ ಇತ್ತೀಚಿನ ಚುನಾವಣೆಗಳು ಸರಿಯಾದ ಪಾಠ ಕಲಿಸಿವೆ. ಹಸಿವು, ನಿರುದ್ಯೋಗ, ಬಡತನದ ವಾಸ್ತವಗಳ ಮುಂದೆ ಹುಸಿ ಸಿದ್ಧಾಂತ ಹೆಚ್ಚು ಕಾಲ ನಿಲ್ಲುವುದಿಲ್ಲ. ಹುಸಿ ಹಸಿವಿನ ಕಹಿಯನ್ನು ಹೆಚ್ಚು ದಿನ ಮರೆಮಾಚುವುದಿಲ್ಲ. ಹಸಿವಿನ ಭಾವನೆ ಅಂತಿಮವಾಗಿ ಜನಮನವನ್ನು ಪ್ರಭಾವಿಸುತ್ತದೆ ಮತ್ತು ಅದು ಭೌತಿಕ ಶಕ್ತಿಯಾಗಿ, ಮತವಾಗಿ, ಅಭಿಪ್ರಾಯವಾಗಿ ಪರಿವರ್ತನೆಯಾಗುತ್ತದೆ. ಆಗ ಭ್ರಮೆ, ಹುಸಿಯ ಮೇಲೆ ಕಟ್ಟಿದ ಸೌಧ ನೆಲಕ್ಕುರುಳುತ್ತದೆ.

ಭಾರತದ ನೈಸರ್ಗಿಕ ಸಂಪನ್ಮೂಲವನ್ನೂ ಮಾನವ ಸಂಪನ್ಮೂಲವನ್ನೂ ಮಾರುಕಟ್ಟೆಯನ್ನೂ ಲೂಟಿ ಮಾಡಲು, ಶೋಷಿಸಲು ವಿಶ್ವ ಹಾಗೂ ದೇಶೀ ಕಾರ್ಪೊರೇಟ್ ಕಂಪನಿಗಳು ಈ ದೇಶದ ಪ್ರಭುತ್ವವನ್ನು ಟೂಲ್ (ಸಲಕರಣೆ) ಆಗಿ ಬಳಸಿಕೊಳ್ಳುವುದನ್ನು ಈ ದೇಶದ ಸಾಮಾನ್ಯ ಜನತೆ ಒಪ್ಪುವುದಿಲ್ಲ ಎಂಬುದನ್ನು ಹಲವಾರು ಸಾರಿ ಸಾಬೀತುಪಡಿಸಲಾಗಿದೆ. ಈಗಲೂ ಸಾಬೀತುಪಡಿಸಲಾಗುತ್ತಿದೆ.

ಜಾಗತೀಕರಣ, ನವ ಉದಾರೀಕರಣದ ಹೆಸರಿನಲ್ಲಿ ವಿಶ್ವವನ್ನು ಮತ್ತೆ ತಮ್ಮ ಸುಲಿಗೆಗೆ ಒಳಪಡಿಸಲು ಹವಣಿಸುತ್ತಿರುವ ನವ ಸಾಮ್ರಾಜ್ಯಶಾಹಿಗಳು ತಮ್ಮ ಪ್ರಯತ್ನದಲ್ಲಿ ವಿಫಲವಾಗಿವೆ. ಅಮೆರಿಕಾದ ವಾಲ್‌ಸ್ಟ್ರೀಟ್ ಚಳುವಳಿಯಿಂದ ಇತ್ತೀಚಿನ ಫ್ರಾನ್ಸ್‌ನ ಸಾರ್ವತ್ರಿಕ ಚಳುವಳಿ, ಭಾರತದ ರೈತ ಚಳುವಳಿ, ಕಾರ್ಮಿಕರ ರಾಷ್ಟ್ರೀಯ ಮುಷ್ಕರಗಳವರೆಗಿನ ಸಂದೇಶ ಒಂದೇ, ಅದು ಸಂಪತ್ತಿನ ಕೇಂದ್ರೀಕರಣಕ್ಕೆ ವಿರೋಧ ಮತ್ತು ಸಂಪತ್ತಿನ ಸಾರ್ವತ್ರೀಕರಣಕ್ಕೆ ಅನುರೋಧ. ಯಂತ್ರ ನಾಗರಿಕತೆ ಬೇಕು, ಆದರೆ ಯಂತ್ರ ನಾಗರಿಕತೆಯ ಅತಿರೇಕ, ಮಾನವಶಕ್ತಿಯ ನಿರಾಕರಣೆಯನ್ನು ಒಪ್ಪಲಾಗದು. ಯಂತ್ರಜ್ಞಾನ, ತಂತ್ರಜ್ಞಾನ, ಮಾನವ ಜನಾಂಗದ ಒಳಿತಿಗಾಗಿರಬೇಕೇ ಹೊರತು ಧನದಾಹಿಗಳ ಅಸ್ತ್ರವಾಗಿ ಲೂಟಿಯ ಮಾಧ್ಯಮವಾಗಕೂಡದು. ಇಂಥ ಲೂಟಿಗೆ ಭಾವನಾತ್ಮಕ ಅಂಶಗಳ ಕವಚ ಹೊದಿಸಿ ಜನಶಕ್ತಿಯನ್ನು ವಂಚಿಸುವ ಕಾಲ ಮುಗಿದು ಹೋಗಿದೆ. ಅಂತಿಮವಾಗಿ ವಿಶ್ವದ ಜನತೆ ಹಸಿವು, ಬಡತನ, ನಿರುದ್ಯೋಗ, ಅನಾರೋಗ್ಯ, ಶೋಷಣೆಯ ವಿರುದ್ಧ ನಿಲ್ಲುತ್ತಾರೆ. ಜನತೆಯ ಹೋರಾಟಕ್ಕೆ ಜಾತಿ, ಧರ್ಮ, ಪ್ರಾಂತ, ಭಾಷೆ, ಇವೆಲ್ಲ ತಾತ್ಕಾಲಿಕ ಅಡೆತಡೆ ಮಾತ್ರ.

೨೦ನೇ ಶತಮಾನದ ಆರಂಭದ ದಶಕಗಳು ವಸಾಹತುಶಾಹಿ, ಸಾಮ್ರಾಜ್ಯಶಾಹಿ ವಿರೋಧೀ ಚಳುವಳಿಗಳಿಗೆ, ಪ್ರಜಾಸತ್ತಾತ್ಮಕ, ಸಮಾಜವಾದಿ, ಸ್ವಾತಂತ್ರ್ಯ ಚಳುವಳಿಗಳಿಗೆ ನಾಂದಿಯಾಗಿದ್ದವು. ಹಾಗೇ ೨೧ನೇ ಶತಮಾನದ ಆರಂಭಿಕ ಈ ಎರಡು ದಶಕಗಳಲ್ಲಿ ನವವಸಾಹತುಶಾಹಿಯ ಪ್ರಯತ್ನ, ಪ್ರಯೋಗ ವೈಫಲ್ಯ ಕಂಡಿವೆ. ಈಗಾಗಲೇ ಜಾಗತಿಕರಣದ ವಿರುದ್ಧ ಜಾಗತಿಕ ಪ್ರತಿರೋಧ ಆರಂಭವಾಗಿದೆ. ನವಸಾಮ್ರಾಜ್ಯಶಾಹಿಗಳ ಏಜೆಂಟರಾದ ಕೋಮುವಾದಿ, ಕುಲಮದವಾದಿ ಶಕ್ತಿಗಳು ಬೆತ್ತಲಾಗಿವೆ. ಈ ಶತಮಾನದ ಆರಂಭಿಕ ಕಾಲು ಶತಮಾನ ಸತ್ಯ–ಸುಳ್ಳು, ಜನಪರ–ಜನವಿರೋಧಿ, ನ್ಯಾಯ–ಅನ್ಯಾಯ ಜೀವ ವಿರೋಧಿ–ಜೀವಪದ, ಭ್ರಮೆ–ವಾಸ್ತವಗಳ ಪರೀಕ್ಷೆಯ ಕಾಲ. ಸಾಮ್ರಾಜ್ಯಶಾಹಿ ಶಕ್ತಿಗಳಿಂದ ವಿಶ್ವದ ಸಂಪತ್ತಿನ ಕ್ರೋಢೀಕರಣ, ಮತ್ತು ವಿಶ್ವದ ಜನತೆಯಿಂದ ಸಂಪತ್ತಿನ ಸಾಮಾಜೀಕರಣಕ್ಕಾಗಿ ನಡೆಯುತ್ತಿರುವ, ಈ ಸಂಘರ್ಷದಲ್ಲಿ ಖಂಡಿತ ಜನತೆಗೇ ಜಯ. ಜನತೆಯ ಜಯದ ಮುನ್ನುಡಿಗೆ ನೆಮ್ಮದಿಯ ನಾಳೆಗಳ ಆಶಯಕ್ಕೆ ಹೊಸವರ್ಷ ೨೦೧೮ ವೇದಿಕೆಯಾಗಲಿ, ಹೊಸತು ಓದುಗರಿಗೆ, ವಿಶ್ವದ ಜನಪರ ಚಿಂತಕರಿಗೆ, ಹೋರಾಟಗಾರರಿಗೆ 'ಹೊಸತು' ಬಳಗದ ಶುಭಾಶಯಗಳು.

ಸಿದ್ದನಗೌಡ ಪಾಟೀಲ.



# ಪರಿವಿಡಿ

# ಪರಿವಿಡಿ



---

***ಚುಟುಕಗಳು :*** ಜಿ. ಎಂ. ಬೊಮ್ನಳ್ಳಿ, ಗೀತಾ ಶಾಸ್ತ್ರಿ
ಆದರ್ಶ ಪೈ, ಡಾ॥ ಸಿ. ಆರ್. ಚಂದ್ರಶೇಖರ್
ಗೋಪಿ ಹಿರೇಬೆಟ್ಟು, ಶ್ರೀನಿವಾಸ ಕುಂಡಂತಾಯ, ಸಿ.ಪಿ.ಕೆ.

---


***ಮುಖಚಿತ್ರ :*** ಕಮಲಂ ಅರಸು
***ವಿನ್ಯಾಸ :*** ನವಕರ್ನಾಟಕ ವಿನ್ಯಾಸ
***ಈ ಸಂಚಿಕೆಯ ಚಿತ್ರಗಳ ಕಲಾವಿದರು :***
ನಾಮದೇವ ಕಾಗದಗಾರ, ಕಮಲಂ ಅರಸು
ವಿ. ಗೋಪಾಲ್, ತನು, ಉಮೇಶ ಹಿರೇಮಠ, ಸೃಜನ್
***ಕಚೇರಿ ಸಹಕಾರ :*** ಜಿ. ವಿ. ತೇಜೋವತಿ














(೧೩ನೇ ಪುಟದಿಂದ)

ಪಕ್ಷಗಳು ನಮ್ಮ ದೇಶದಲ್ಲಿವೆ. ಮುಂದಿನ ವರ್ಷದ ಚುನಾವಣೆಯ ಸಂದರ್ಭದಲ್ಲಿ ನಾವೆಲ್ಲಾ ಒಟ್ಟಾಗಿ ಸೆಣಸುವುದಾಗಿ ದಿನಂಪ್ರತಿ ಹೇಳಿಕೆಗಳು ಬರುತ್ತಿರುತ್ತವೆ. ಅದರಿಂದ ಅಮಿತ್ ಷಾ ಮತ್ತು ನರೇಂದ್ರ ಮೋದಿ ಕಂಗಾಲಾಗುವ ಸೂಚನೆಯೇನೂ ಗಾಢವಾಗಿ ವ್ಯಕ್ತವಾಗುತ್ತಿಲ್ಲ. ತೆಲಂಗಾಣದ ಮುಖ್ಯಮಂತ್ರಿ ಚಂದ್ರಶೇಖರ ರಾವ್ ಎಂಬ ವ್ಯಕ್ತಿಯನ್ನು ತಮ್ಮ ದಾಳವನ್ನಾಗಿ ಮಾಡಿಕೊಳ್ಳಲು ಈ ಶಕುನಿಗಳು ಸಾಕಷ್ಟು ಸಿದ್ಧತೆ ಮಾಡಿಕೊಂಡಿದ್ದಾರೆ. ಅದಕ್ಕಾಗಿಯೇ ಅವರು ಚಂದ್ರಶೇಖರ ರಾವ್‌ಗೆ ರಾಷ್ಟ್ರೀಯ ನಾಯಕನೆಂಬ ಗೌರವವನ್ನು ನೀಡಿ ವಿವಿಧ ರಾಜ್ಯಗಳಿಗೆ 'ರಾಜಕೀಯ ಪ್ರವಾಸ'ಕ್ಕಾಗಿ ಕಳಿಸುವುದರಲ್ಲಿ ಮಗ್ನರಾಗಿದ್ದಾರೆ. ತೆಲಂಗಾಣದ ಈ ಮುಖ್ಯಮಂತ್ರಿ ರಾಷ್ಟ್ರಕ್ಕೆ ಪರ್ಯಾಯವನ್ನು ಒದಗಿಸುವ ಮುತ್ಸದ್ದಿಯಾಗಿ ಪರಿವರ್ತನೆ ಹೊಂದಿರುವುದು ಈ ಹಿನ್ನೆಲೆಯಲ್ಲಿ ಎಂಬುದನ್ನು ಪಶ್ಚಿಮ ಬಂಗಾಳದ ದೀದಿ ಮತ್ತು ಒರಿಯಾ ಮಾತನಾಡದ ಒಡಿಶಾ ಮುಖ್ಯಮಂತ್ರಿ ನವೀನ್ ಪಟ್ನಾಯಕ್ ಸೇರಿದಂತೆ ಹಲವು ರಾಜ್ಯಗಳ ಭಾಜಪ-ವಿರೋಧಿ ನಾಯಕರು ತಿಳಿಯ ಬೇಕಾಗಿದೆ. ಭಾಜಪ ಮತ್ತು ಕಾಂಗ್ರೆಸ್ ಕೂಟಗಳೆರಡನ್ನೂ ಸೋಲಿಸಲು ತಾನು ಪರಿವಾರದ ನಾಯಕನೆಂದು ಚಂದ್ರಶೇಖರ ರಾವ್ ಸಾರಿ ಹೇಳುತ್ತಿದ್ದಾರೆ. ಆದರೆ ಅವರ ಸಾಹಸವೆಲ್ಲಾ ಭಾಜಪದ ಪರವಾಗಿ ಕೆಲಸ ಮಾಡುವುದರಲ್ಲೇ ವ್ಯಯವಾಗುವುದು ನಿಶ್ಚಿತ. ಮೂರು ರಾಜ್ಯಗಳ ವಿಧಾನಸಭಾ ಚುನಾವಣೆಗಳಲ್ಲಿ ಯಶಸ್ಸು ಕಂಡಿರುವ ಕಾಂಗ್ರೆಸ್ ತಾನು ಒಬ್ಬೊಂಟಿಯಾಗಿ ಅಜೇಯ ಸಲಗವಾಗುವ ಭ್ರಮೆಯಲ್ಲಿ ಲೀನವಾಗುವ ಸಾಧ್ಯತೆಗೆ ಈಗಾಗಲೆ ಪುರಾವೆ ಒದಗಿಸಲಾರಂಭಿಸಿದೆ. ಆಂಧ್ರ ಪ್ರದೇಶದ ಮುಖ್ಯಮಂತ್ರಿ ಚಂದ್ರಬಾಬು ನಾಯ್ಡು ಮೂಲತಃ ಭಾಜಪದ ಜೊತೆಯಲ್ಲಿ ಮೃಷ್ಟಾನ್ನ ಭೋಜನ ಮಾಡಹೊರಟಿದ್ದ ವ್ಯಕ್ತಿ. ಆದರೆ ಸಾಕಷ್ಟು ಪರಮಾನ್ನವನ್ನು ಮೋದಿ ಬಡಿಸಲಿಲ್ಲವೆಂದು ಕೇಂದ್ರ ಸಂಪುಟದಿಂದ ಹೊರಬಂದು ಈಗ ತಾನೂ ಪರ್ಯಾಯ ಕೂಟವನ್ನು ರಚಿಸುವ ಕಾಯಕ ಕೈಗೊಂಡಿದ್ದಾರೆ. ಇಂತಹ ಅಡ್ಡಂಬುಡಿಕೆ ಆಟಗಾರದಿಂದ ಎಂತಹ ಫಲಿತಾಂಶ ನಿರೀಕ್ಷಿಸಬೇಕು? ಭಾಜಪ ಆಡಳಿತದಲ್ಲಿ ದಲಿತರ ಮತ್ತು ಅಲ್ಪಸಂಖ್ಯಾತರ ಹಾಗೂ ಸಾಮಾಜಿಕ ಕಾರ್ಯಕರ್ತರ ಮೇಲೆ ಹಲ್ಲೆಗಳು ನಡೆದಾಗ ನಾಯ್ಡು ಪಕ್ಷವು ಸರ್ಕಾರದಲ್ಲಿತ್ತು. ಆದರೆ ಯಾವ ಉಪಯುಕ್ತ ಪ್ರತಿಕ್ರಿಯೆಯನ್ನೂ ನೀಡಲಿಲ್ಲ. ತೆಲಂಗಾಣ ಚುನಾವಣೆಯಲ್ಲಿ ಒಂದು ಕಮ್ಯುನಿಸ್ಟ್ ಪಕ್ಷವು ಅವರೊಡನೆ ಸೇರಿತು, ಇನ್ನೊಂದು ಹೊರಗುಳಿಯಿತು. ಸ್ವಾರಸ್ಯವೆಂದರೆ ಆಂಧ್ರದಲ್ಲಿ ಎರಡು ಕಮ್ಯುನಿಸ್ಟ್ ಪಕ್ಷಗಳೂ ತೆಲುಗು ದೇಶಂ ವಿರೋಧಿಗಳೇ. ತೆಲಂಗಾಣದಲ್ಲಿ ಎರಡು ಕಮ್ಯುನಿಸ್ಟ್ ಪಕ್ಷಗಳೂ ಚೆನ್ನಾಗಿಯೇ ಸೋತವು.

ಒಟ್ಟಿನಲ್ಲಿ ಷಾ – ಮೋದಿ ಜೋಡಿಗೆ ತೀವ್ರ ಪ್ರತಿಸ್ಪರ್ಧೆ ಒಡ್ಡಲು ವಿರೋಧ ಪಕ್ಷಗಳು ಗಂಭೀರವಾಗಿ ರಾಜಕೀಯ ಒಡಂಬಡಿಕೆಗೆ ಮುಂದಾಗಿಲ್ಲ. ಬಹುಜನ ಸಮಾಜ ಪಕ್ಷ ಮತ್ತು ಅಖಿಲೇಶ್ ಸಮಾಜವಾದಿ ಪಕ್ಷ ತಮ್ಮ ಹಿಂದಿನ ತೀವ್ರ ವಿರೋಧಗಳನ್ನು ಬದಿಗೊತ್ತಿ ಒಂದಾಗಿ ಚುನಾವಣೆಗೆ ಮುನ್ನಡೆಯುವ ಸೂಚನೆ ನೀಡುತ್ತಿವೆ. ಕಾಂಗ್ರೆಸ್‌ನ ರಾಹುಲ್ ಗಾಂಧಿಯೇ ಪ್ರಧಾನಿಯಾಗ ಬೇಕೆಂದು ಡಿಎಂಕೆಯ ಸ್ಟಾಲಿನ್ ಹೇಳಿರುವುದು ತಮ್ಮ ಕುಟುಂಬದ ಆಪಾದಿತರನ್ನು ರಕ್ಷಿಸಿಕೊಳ್ಳುವ ಸಲುವಾಗಿಯೇ ಇರಬಹುದು. ಒಟ್ಟಿನಲ್ಲಿ ಷಾ–ಮೋದಿ ಸವಾಲು ಸ್ವೀಕರಿಸಲು ವಿರೋಧ ಪಕ್ಷಗಳು ಸಜ್ಜಾಗುತ್ತಿಲ್ಲ ದಿರುವುದು ಆತಂಕಕಾರಿ ವಿಷಯ. ಮೋದಿ ಸರ್ಕಾರವು ಎಗ್ಗಿಲ್ಲದೆ ಸ್ವೇಚ್ಛೆಯಿಂದ ಸರ್ವಾಧಿಕಾರಿ ಧೋರಣೆಯನ್ನು ತಾಳುತ್ತಿರುವಾಗ ಅದಕ್ಕೆ ಪ್ರತಿರೋಧವು ಪ್ರಬಲವಾಗುತ್ತಿಲ್ಲ. ಇದು ಬೇಜವಾಬ್ದಾರಿ ರಾಜಕೀಯವಲ್ಲದೆ ಬೇರೇನೂ ಅಲ್ಲ. ಜನತೆಯ ಮೇಲಿನ ಹಲ್ಲೆಯನ್ನು ಟೀಕಿಸುವ ರಾಹುಲ್ ಗಾಂಧಿ ಪಕ್ಷವು ಅದರ ನಿವಾರಣೆಗೆ ಬೇಕಾದ ರಾಜಕೀಯ ಹಾದಿಯನ್ನು ಇನ್ನಾದರೂ ಅರಸಲು ಸ್ಥೈರ್ಯ ತೋರಬೇಕು. ಅದರ ಬದಲಾಗಿ ಕೇರಳದಲ್ಲಿ ಅದು ಭಾಜಪದೊಡನೆ ಸೇರಿ ಸರ್ವೋಚ್ಚ ನ್ಯಾಯಾಲಯದ ತೀರ್ಪನ್ನು ಧಿಕ್ಕರಿಸಿ ನಡೆಯಲು ಕಾತುರವಾಗಿದೆ.

✳ ✳ ✳

ವಿದ್ವಾನ್ ಟಿ. ಎಂ. ಕೃಷ್ಣ ಅವರ ಒಂದು ಸಂಗೀತ ಕಚೇರಿಯನ್ನು ರದ್ದುಮಾಡಲು ಮಗುಮ್ಮಾಗಿ ಭಾಜಪವು ತನ್ನ ಕೈಚಳಕವನ್ನು ತೋರಿಸಿದ್ದು ಭಾರತೀಯ ಸಂಸ್ಕೃತಿಗೆ ನೀಡಲಾದ ಬಲವಾದ ಪೆಟ್ಟು. ದೆಹಲಿಯಲ್ಲಿ ಅಂತಹ ದುರಂತವನ್ನು ಉಂಟುಮಾಡಿದ ಅಮಿತ್ ಷಾ ಪಕ್ಷಕ್ಕೆ ನಿರ್ಧಾರಕ ಉತ್ತರವನ್ನು ಕ್ರಿಯಾತ್ಮಕವಾಗಿ ನೀಡಿದ ಶ್ರೇಯಸ್ಸು ಆಮ್ ಆದ್ಮಿ ಪಕ್ಷಕ್ಕೆ ಸಲ್ಲುತ್ತದೆ. ಸಂಗೀತದ ಪರಂಪರೆಗೆ ಮಾರಕವಾದ ನಿಲುವನ್ನು ಸಂಸ್ಕೃತಿಯ ಮಹಾನ್ ರಕ್ಷಕನೆಂದು ಪ್ರಚುರಪಡಿಸಿಕೊಳ್ಳುವ ಭಾಜಪವು ತಾಳಿದ್ದಕ್ಕೆ ಕಾರಣ ಟಿ. ಎಂ. ಕೃಷ್ಣ ಮತಧರ್ಮಗಳ ಜಡ್ಡುತನವನ್ನು ಮೀರಿ ನಡೆದುಕೊಳ್ಳುತ್ತಾರೆ ಎಂಬುದು. ಹಿಂದು ಮತಧರ್ಮದ ದೇವತೆಗಳನ್ನೇನೂ ಅವರು ದಂಡಿಸಿಲ್ಲ, ಆದರೆ ವಿವೇಕಾನಂದರ ಜಾಡಿನಲ್ಲಿ ಹೆಜ್ಜೆ ಹಾಕಿ ಎಲ್ಲ ಮತಧರ್ಮಗಳಲ್ಲೂ ಸಮನ್ವಯ ಧೋರಣೆ ಇರಬೇಕೆಂದು ಅವರು ನಿಚ್ಚಳವಾಗಿ ಪ್ರತಿಪಾದಿಸಿದ್ದಾರೆ. ಮೈಸೂರಿನಲ್ಲಿ ಅವರ ಎರಡು ಕಚೇರಿಗಳಿಗೆ ಅಡ್ಡಿಯುಂಟು ಮಾಡುವ ಬೆದರಿಕೆಯನ್ನು ಸಂಸ್ಕೃತಿ ವಿರೋಧಿ ಪರಿವಾರವು ಒಡ್ಡಿತ್ತು, ಆದರೆ ದೆಹಲಿಯ ಸಂಘಟಕರಂತೆ ಮೈಸೂರಿನ ಎರಡೂ ಸಂಘಟನೆಗಳು ಬೆದರಿಕೆಗೆ ಮಣಿಯಲಿಲ್ಲ. ಅದು ಅಭಿನಂದನಾರ್ಹ ಕ್ರಮ. ಸಾವಿರ ಸಂಖ್ಯೆಯಲ್ಲಿ ಸಂಗೀತಾಸಕ್ತರು ಎರಡೂ ಕಚೇರಿಗಳಲ್ಲಿ ಭಾಗವಹಿಸಿ ಸಂಸ್ಕೃತಿ ವಿರೋಧಿಗಳಿಗೆ ಸೂಕ್ತ ಉತ್ತರ ನೀಡಿದರು. ಜಡ್ಡುತನವನ್ನು ಶ್ರೇಷ್ಠ ಮೌಲ್ಯವೆಂದು ಪ್ರತಿಪಾದಿಸುವ ಸಂಗೀತ ವಿರೋಧಿಗಳಿಗೆ ಇದು ಸರಿಯಾದ ಪ್ರತಿಕ್ರಿಯೆ. ಮೈಸೂರಿನ ಸಂಗೀತಾಸಕ್ತರು ಹಾಗೂ ಸಂಘಟಕರು ಹಾಕಿಕೊಟ್ಟಿರುವ ಮೇಲ್ಪಂಕ್ತಿಯನ್ನು ನಾವು ಸ್ವಾಗತಿಸಬೇಕು ಮತ್ತು ಅದನ್ನು ಅನುಸರಿಸಬೇಕು. ಮತಾಂಧರಿಗೆ ಅದೇ ಸರಿಯಾದ ಮೌಲಿಕ ಉತ್ತರ.

■

## ಓದುಗರಲ್ಲೊಂದು ವಿಶೇಷ ಮನವಿ

'ಹೊಸತು' ಪತ್ರಿಕೆ ಜಾಹಿರಾತುಗಳಿಗಿಂತ ಹೆಚ್ಚಾಗಿ ಚಂದಾದಾರರ ಮೇಲೆ ಅವಲಂಬಿಸಿರುವುದರಿಂದ ಅದು ಆರ್ಥಿಕವಾಗಿ ಇನ್ನೂ ಸ್ವಾವಲಂಬಿಯಾಗಿಲ್ಲ. ಆದುದರಿಂದ ಆರ್ಥಿಕ ಬೆಂಬಲ ನೀಡುವ ಪ್ರಾಯೋಜಕರ ನೆರವಿನ ಅಗತ್ಯವಿದೆ. ಕನಿಷ್ಠ ರೂ. ೫೦೦೦/– ಹಣ ನೀಡಿ ಪ್ರಾಯೋಜಕರಾಗುವವರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸ ಲಾಗುವುದು. ಹಾಗೆಯೇ, ಅವರು ಸೂಚಿಸುವ ಯಾವುದಾದರೂ ಇಬ್ಬರು ವ್ಯಕ್ತಿಗಳಿಗೆ / ವಿಳಾಸಗಳಿಗೆ ತಲಾ ಮೂರು ವರ್ಷಗಳ ಅವಧಿಗೆ 'ಹೊಸತು' ಪತ್ರಿಕೆಯನ್ನು ಉಚಿತವಾಗಿ ಕಳಸಲಾಗುವುದು (ಅಥವಾ ನಾಲ್ಕು ವ್ಯಕ್ತಿಗಳಿಗೆ ತಲಾ ಒಂದು ವರ್ಷ). ಹಿತೈಷಿಗಳು ಈ ರೀತಿ ಪ್ರಾಯೋಜಕರಾಗುವ ಮೂಲಕ ಪತ್ರಿಕೆ ಆರ್ಥಿಕವಾಗಿ ಸದೃಢಗೊಳ್ಳಲು ಸಹಾಯವಾಗುವುದು.

ನಮ್ಮ ಓದುಗರು ಸ್ವತಃ ಪ್ರಾಯೋಜಕರಾಗಬಹುದು ಅಥವಾ ಅಂತಹವರನ್ನು ಗುರುತಿಸಿ ಅವರು ಪ್ರಾಯೋಜಕರಾಗುವಂತೆ ಪ್ರೇರೇಪಿಸ ಬಹುದು. ಪ್ರಾಯೋಜಕರಾಗಬಹುದಾದ ಸಮಾನಮನಸ್ಕರ ಹೆಸರು, ವಿಳಾಸ ತಿಳಿಸಿದಲ್ಲಿ ನಾವೇ ಅವರನ್ನು ಸಂಪರ್ಕಿಸುತ್ತೇವೆ.

ಈ ನಿಟ್ಟಿನಲ್ಲಿ ನಮ್ಮ ಓದುಗರು ಹೆಚ್ಚಿನ ಮುತುವರ್ಜಿ ವಹಿಸಿ ಪತ್ರಿಕೆಯ ಬೆಳವಣಿಗೆಗೆ ನೆರವಾಗಬೇಕೆಂದು ನಮ್ಮ ಕಳಕಳಿಯ ಮನವಿ.

ಪ್ರಾಯೋಜಕತ್ವದ ರೂ. ೫,೦೦೦ ಮೊಬಲಗನ್ನು 'ಹೊಸತು' ಹೆಸರಿಗೆ ಚೆಕ್ ಅಥವಾ ನಗದು ಮೂಲಕ ಇಲ್ಲವೇ ಕೆನರಾ ಬ್ಯಾಂಕ್, ಮಾಧವನಗರ ಶಾಖೆ, Current A/c No. 0788201015590, IFSC code CNRB0000788 ಇಲ್ಲಿಗೆ ನೇರವಾಗಿ ವರ್ಗಾಯಿಸಬಹುದು.

– ಪ್ರಕಾಶಕ

# ವರ್ಷ ೨೦೧೮ ಸಂಘರ್ಷಗಳ ಮಹಾಪೂರ

ಮುರಳಿಧರ ಚಿಕ್ಕಮಗಳೂರು

ಅಂತರರಾಷ್ಟ್ರೀಯ ಆರ್ಥಿಕ ಬಿಕ್ಕಟ್ಟು ಪರಿಹಾರಗೊಳ್ಳುವ ಯಾವ ಸೂಚನೆಯನ್ನೂ ನೀಡದೆ, ಬಿಕ್ಕಟ್ಟನ್ನು ಹೊಸ ವರ್ಷಕ್ಕೆ ಸಾಗಿಸಿ, ದೇಶ–ದೇಶಗಳಲ್ಲಿನ ಜನತೆಯ ನೋವುಗಳನ್ನು ನಿರಂತರಗೊಳಿಸಿ ವರ್ಷ ೨೦೧೮ ಇತಿಹಾಸದ ತೆರೆ–ಮರೆಗೆ ಸೇರಿದೆ. ಉದಾರ ಆರ್ಥಿಕ ನೀತಿಗಳೇ ಸಮಾಜದ ಎಲ್ಲ ಸಮಸ್ಯೆಗಳಿಗೆ ಸಿದ್ಧೌಷಧವೆಂದು ಪ್ರಚಾರ ಮಾಡಿ, ಭ್ರಮೆ ಸೃಷ್ಟಿಸಿ, ಜಗತ್ತಿನ ಮಾರುಕಟ್ಟೆಗಳನ್ನು ಆಕ್ರಮಿಸಿ, ಸಾರ್ವಭೌಮ ಸ್ವತಂತ್ರ ರಾಷ್ಟ್ರಗಳನ್ನು ನವವಸಾಹತುಗಳನ್ನಾಗಿಸಿ, ನೆಲ–ಜಲ–ಖನಿಜಸಂಪತ್ತನ್ನು ಲೂಟಿ ಹೊಡೆದು, ಕಾರ್ಮಿಕ–ರೈತಾಪಿ ಜನರನ್ನು ಶೋಷಣೆಗೊಳಿಸಿ, ಮಧ್ಯಮ ವರ್ಗವನ್ನು ಭ್ರಮಾಧೀನರನ್ನಾಗಿಸಿ, ಸಮಾಜದಲ್ಲಿನ ನಿರುದ್ಯೋಗ ಮತ್ತು ಅಸಮಾನತೆಯನ್ನು ಹೆಚ್ಚಿಸಿ ತನ್ನ ಲಾಭವನ್ನು ವೃದ್ಧಿಸಿಕೊಂಡ ಬಂಡವಾಳಶಾಹಿ ವರ್ಗ ಈಗ ಹಾಡು ಬದಲಾಯಿಸಿ ಹಾಡುತ್ತಿರುವುದು "ಅಮೆರಿಕ–ಅಮೆರಿಕನ್‌ರಿಗಾಗಿ", "ಬ್ರಿಟನ್–ಬ್ರಿಟಿಷ್‌ರಿಗಾಗಿ" ಎಂಬ ರಾಷ್ಟ್ರೀಯತೆಯ ಸೋಗಿನ ಹಾಡು! ಬಂಡವಾಳಶಾಹಿ ವರ್ಗ ತಾನೇ ಸೃಷ್ಟಿಸಿದ ಆರ್ಥಿಕ ಬಿಕ್ಕಟ್ಟಿನ ತಾತ್ಕಾಲಿಕ ಪರಿಹಾರಕ್ಕಾಗಿ ಹೂಡಿದ ಜಾಗತೀಕರಣದ ಮಂತ್ರ–ತಂತ್ರವೇ ತಿರುಗುಬಾಣವಾಗಿ ಹೊಸ ಹೊಸ ರಾಷ್ಟ್ರೀಯ ಸಮಸ್ಯೆಗಳನ್ನು ಹುಟ್ಟುಹಾಕಿ ತೀವ್ರ ಬಿಕ್ಕಟ್ಟಿಗೆ ಕಾರಣವಾಗಿರುವುದು. ಈ ಹಿನ್ನೆಲೆಯಲ್ಲೇ ಅಮೆರಿಕದ ಅಧ್ಯಕ್ಷ ಡೊನಾಲ್ಡ್ ಟ್ರಂಪ್ ಸಾರಿರುವ ವಾಣಿಜ್ಯ ಸಮರವನ್ನು ವಿಶ್ಲೇಷಿಸಬಹುದು.

**ವಾಣಿಜ್ಯ ಸಮರ**

೨೦೧೬ರ ಅಮೆರಿಕದ ಅಧ್ಯಕ್ಷೀಯ ಚುನಾವಣೆಯ ಸಂದರ್ಭದಲ್ಲಿ ಅಮೆರಿಕದೊಡನೆ ವಾಣಿಜ್ಯ ವ್ಯವಹಾರಗಳಲ್ಲಿ ಚೀನ ಮೋಸ ಮಾಡುತ್ತಿದೆ ಎಂಬ ಅವ್ಯಾಹತ ಪ್ರಚಾರದಿಂದಲೇ ವಾಣಿಜ್ಯ ಸಮರ ಆರಂಭವಾದದ್ದು. ತನ್ನ ಆರ್ಥಿಕ ಆಕ್ರಮಣ ನೀತಿಯಿಂದಾಗಿ ಚೀನ ಜಗತ್ತಿನಾದ್ಯಂತ ಅಘೋಷಿತ ಆರ್ಥಿಕ ಸಮರ ನೀತಿಯನ್ನು ಅನುಸರಿಸುತ್ತಿರುವ ಕಾರಣ ಆರ್ಥಿಕ ಭದ್ರತೆಯೇ ಅಮೆರಿಕದ ರಾಷ್ಟ್ರೀಯ ಭದ್ರತೆಯೆಂದು ಟ್ರಂಪ್ ಮತ್ತು ಅವರ ಆರ್ಥಿಕ ಮತ್ತು ರಾಜಕೀಯ ಸಲಹೆಗಾರರ ಅಭಿಪ್ರಾಯವೇ ವಾಣಿಜ್ಯ ಸಮರಕ್ಕೆ ಚಾಲನೆ ಕೊಟ್ಟಿರುವುದು. ಸರ್ಕಾರದ ನಿಯಂತ್ರಣಕ್ಕೊಳಪಟ್ಟಿರುವ ಚೀನದ ಕೈಗಾರಿಕೋದ್ದಿಮೆಗಳು ಈಗ ಅತ್ಯಾಧುನಿಕ ತಂತ್ರಜ್ಞಾನವನ್ನು ಅಮೆರಿಕದ ವ್ಯಾಪಾರ ಒಪ್ಪಂದಗಳ ಮೂಲಕ ಅಪಹರಿಸಿ ಸೆಮಿ ಕಂಡಕ್ಟರ್, ರೋಬೋಟಿಕ್ಸ್‌ಗಳ ಮೂಲಕ ವಿದೇಶಿ ಮಾರುಕಟ್ಟೆಯನ್ನು ಆಕ್ರಮಿಸುತ್ತಿದೆ ಎನ್ನುವುದು ಟ್ರಂಪ್‌ನ ಆರೋಪ. ಈ ಬೌದ್ಧಿಕ ಆಸ್ತಿಯ ಅಪಹರಣ ತಡೆಯುವುದೇ ವಾಣಿಜ್ಯ








ಸಮರದ ಅಂತರ್ಗತ ಉದ್ದೇಶವೆಂದು ಟ್ರಂಪ್ ಸರ್ಕಾರದ ಅಭಿಪ್ರಾಯ. ಟ್ರಂಪ್‌ನ ರಿಪಬ್ಲಿಕನ್ ಪಕ್ಷ ಮಾತ್ರವಲ್ಲದೆ ಡೆಮೊಕ್ರಾಟಿಕ್ ಪಕ್ಷವೂ ಕೂಡ ಈ ವಾಣಿಜ್ಯ ಸಮರಕ್ಕೆ ಕೈಜೋಡಿಸಿದೆ. ಅಮೆರಿಕದ ಮಿಲಿಯಾಂತರ ಉದ್ಯೋಗಗಳನ್ನು ಮತ್ತು ಟ್ರಿಲಿಯಾಂತರ ಡಾಲರ್‌ಗಳನ್ನು ಚೀನ ಅಪಹರಿಸಿದೆಯೆಂದು ಡೆಮೊಕ್ರಾಟಿಕ್ ಪಕ್ಷದ ನಾಯಕನೊಬ್ಬನ ಉದ್ಗಾರ.

ವಾಣಿಜ್ಯ ಸಮರದ ಮುಖ್ಯ ಪ್ರಕ್ರಿಯೆಯೆಂದರೆ ಪರದೇಶದ ಆಮದಿನ ಮೇಲೆ ಭಾರಿ ಶುಲ್ಕ ವಿಧಿಸುವುದು ಅಥವಾ ಆಮದಿನ ಪ್ರಮಾಣವನ್ನು ಕಡಿತಗೊಳಿಸುವುದು, ತನ್ಮೂಲಕ ದೇಶೀಯ ಕೈಗಾರಿಕೆಗಳನ್ನು ರಕ್ಷಿಸಿ ಉದ್ಯೋಗಗಳನ್ನು ಸೃಷ್ಟಿಸುವುದು. ೨೦೧೭ರಲ್ಲಿ ಚೀನ ಅಮೆರಿಕಕ್ಕೆ ಮಾಡಿದ ರಫ್ತಿನ ಪ್ರಮಾಣ ಸುಮಾರು ೫೦೬ ಬಿಲಿಯನ್ ಡಾಲರ್ಸ್‌ಗಳಾದರೆ, ಅಮೆರಿಕ ಚೀನಕ್ಕೆ ಮಾಡಿದ ಪ್ರಮಾಣ ೧೩೦ ಬಿಲಿಯನ್ಸ್ ಡಾಲರ್ಸ್. ಈ ರೀತಿಯ ಆಮದು-ರಫ್ತು ನಡುವಿನ ವ್ಯತ್ಯಾಸದಿಂದಾಗಿ ಅಮೆರಿಕ ಚೀನದ ಬಹುದೊಡ್ಡ ವ್ಯಾಪಾರ ಪಾಲುದಾರ. ದೊಡ್ಡ ಸಾಲಗಾರ ಕೂಡ. ಇದೇ ವರ್ಷ ಸಂಯುಕ್ತ ರಾಷ್ಟ್ರಗಳ ಸಂಸ್ಥೆಯಲ್ಲಿ ಮಾಡಿದ ಭಾಷಣದಲ್ಲಿ ಸಮಾಜವಾದ ಅಥವಾ ಮಾರ್ಕ್ಸ್‌ವಾದ ಜಗತ್ತಿನಲ್ಲಿ ನೋವು, ಭ್ರಷ್ಟಾಚಾರ ಮತ್ತು ಅವನತಿಗೆ ಕಾರಣವಾಗಿದೆ. ಅಧಿಕಾರ ದಾಹ, ವಿಸ್ತರಣೆ, ಆಕ್ರಮಣ ಮತ್ತು ದಮನಕ್ಕೆ ಕಾರಣವಾಗಿದೆ. ಹಾಗಾಗಿ ಪ್ರಪಂಚದ ಎಲ್ಲ ರಾಷ್ಟ್ರಗಳೂ ಸಮಾಜವಾದ ಮತ್ತು ಅದು ತರುವ ಸಂಕಷ್ಟಗಳನ್ನು ಪ್ರತಿರೋಧಿಸಬೇಕೆಂದು ಅಮೆರಿಕದ ಅಧ್ಯಕ್ಷ ಟ್ರಂಪ್ ರೋದಿಸಿದ್ದು ಸಮಾಜವಾದದ ಬಗ್ಗೆ ಬಂಡವಾಳಶಾಹಿ ವರ್ಗಕ್ಕೆ ಇರುವ ಭೀತಿಯ ಬಗ್ಗೆ ಇನ್ನೊಂದು ನಿದರ್ಶನವಷ್ಟೆ.

**ಇರಾನ್ ಮೇಲೆ ಆರ್ಥಿಕ ದಿಗ್ಬಂಧನ**

ಟ್ರಂಪ್ ಆರಂಭಿಸಿರುವ ವಾಣಿಜ್ಯ ಸಮರ ಕೇವಲ ಚೀನಕ್ಕೆ ಮಾತ್ರ ಸೀಮಿತಗೊಂಡಿಲ್ಲ. ಅದರ ಶಾಖ ಯುರೋಪ್ ರಾಷ್ಟ್ರಗಳಿಗೂ ತಟ್ಟಿದೆ. ಇತ್ತೀಚಿನ ವರ್ಷಗಳಲ್ಲಿ ಹರಿದು ಹಂಚಿಹೋಗುವ ಆತಂಕದಲ್ಲಿರುವ ಯುರೋಪ್ ಒಕ್ಕೂಟ ಮತ್ತು ಈ ಒಕ್ಕೂಟದಿಂದ ಹೊರಬಂದಿರುವ ಬ್ರಿಟನ್ ಟ್ರಂಪ್‌ನ ವಾಣಿಜ್ಯ ಸಮರವನ್ನು ಎದುರಿಸಿ ನಿಲ್ಲುವ ಸ್ಥಿತಿಯಲ್ಲಿಲ್ಲ. ಹಾಗಾಗಿ ಟ್ರಂಪ್‌ಗೆ ಶರಣಾಗದೇ ವಿಧಿಯಿಲ್ಲ. ತನಗಾಗದ ರಾಷ್ಟ್ರಗಳ ಮೇಲೆ ಅಮೆರಿಕ ಹೇರುವ ಆರ್ಥಿಕ ದಿಗ್ಬಂಧನವೂ ಕೂಡ ಈ ವಾಣಿಜ್ಯ ಸಮರದ ಇನ್ನೊಂದು ಮುಖ. ಹಿಂದಿನ ಅಮೆರಿಕದ ಅಧ್ಯಕ್ಷ ಬರಾಕ್ ಒಬಾಮ ಮತ್ತು ಇರಾನ್ ೨೦೧೫ರಲ್ಲಿ ಮಾಡಿಕೊಂಡಿದ್ದ ಅಣು ಒಪ್ಪಂದವನ್ನು ಟ್ರಂಪ್ ಸರ್ಕಾರ ಏಕಪಕ್ಷೀಯವಾಗಿ ಮುರಿದು ಇರಾನ್ ಮೇಲೆ ತೀವ್ರ ಮಟ್ಟದ ಆರ್ಥಿಕ ದಿಗ್ಬಂಧನ ಹೇರಿದೆ. ಅಷ್ಟು ಮಾತ್ರವಲ್ಲ, ಜಗತ್ತಿನ ಇತರೆ ರಾಷ್ಟ್ರಗಳೂ ಕೂಡ ಇರಾನ್ ಸರ್ಕಾರದೊಡನೆ ಮಾಡಿಕೊಂಡಿರುವ ಎಲ್ಲ ವಾಣಿಜ್ಯ ಒಪ್ಪಂದಗಳನ್ನು ತೊರೆದುಹಾಕಬೇಕೆಂದು ಫರ್ಮಾನು ಕೊಟ್ಟು, ಹಾಗೆ ಮಾಡದಿರುವ ರಾಷ್ಟ್ರಗಳ ಮೇಲೆ ವಾಣಿಜ್ಯ ಸಮರದ ಬೆದರಿಕೆ ಹಾಕಿದೆ. ಭಾರತ ಮತ್ತು ಇರಾನ್ ನಡುವಿನ ಸಾಂಸ್ಕೃತಿಕ, ರಾಜತಾಂತ್ರಿಕ ಮತ್ತು ವಾಣಿಜ್ಯ ಸಂಬಂಧಗಳು ಸುದೀರ್ಘವಾದದ್ದು. ಇರಾನ್ ಹೆಚ್ಚು ರಫ್ತು ಮಾಡುವ ದೇಶಗಳ ಪೈಕಿ ಭಾರತ ಮೂರನೆಯದು. ಭಾರತದ ತೈಲ ಅಗತ್ಯದ ಬಹುಪಾಲು ಇರಾನ್ ಪೂರೈಸುತ್ತದೆ. ಭಾರತದ ಸಾರ್ವಜನಿಕ ಉದ್ದಿಮೆ ಆಯಿಲ್ ಅಂಡ್ ನ್ಯಾಚುರಲ್ ಗ್ಯಾಸ್ ಕಂಪನಿ ಇರಾನ್‌ನಲ್ಲಿ ಹಲವಾರು ಯೋಜನೆಗಳನ್ನು ಕೈಗೊಂಡಿದೆ. ಇರಾನ್‌ನ ಆರ್ಥಿಕತೆಯ ತಳಹದಿಯೇ ಅಲ್ಲಿನ ತೈಲಸಂಪತ್ತು, ತೈಲ ವ್ಯಾಪಾರವನ್ನು ಸ್ಥಗಿತಗೊಳಿಸಿ ಅದರ ಜೊತೆಗೆ ಆರ್ಥಿಕ ದಿಗ್ಬಂಧನ ಹೇರುವುದರ ಮೂಲಕ ಇರಾನ್‌ನ ಆರ್ಥಿಕ ವ್ಯವಸ್ಥೆಯನ್ನು ಬುಡಮೇಲು ಮಾಡಿ ಈಗಿರುವ ಸರ್ಕಾರವನ್ನು ಪದಚ್ಯುತಗೊಳಿಸಿ ಬಾಲಬಡುಕ ಸರ್ಕಾರವೊಂದನ್ನು ಸ್ಥಾಪಿಸುವುದೇ ಟ್ರಂಪ್ ಸರ್ಕಾರದ ಗುರಿ. ಇರಾನ್ ಪಶ್ಚಿಮ ಏಷ್ಯಾದಲ್ಲಿ ಪ್ರಬಲ ರಾಷ್ಟ್ರವಾಗಕೂಡದೆಂಬುದು ಇಸ್ರೇಲ್ ಮತ್ತು ಸೌದಿ ಅರೇಬಿಯದ ಸಂಚು, ಚೀನ ಜಗತ್ತಿನ ಪ್ರಬಲ ಶಕ್ತಿಯಾಗಕೂಡದೆಂಬುದು ಅಮೆರಿಕದ ಸಂಚು.

ಇರಾನ್‌ನಿಂದ ತೈಲದ ಆಮದನ್ನು ೨೦೧೮ ನವೆಂಬರ್ ೪ರೊಳಗೆ ಅಂತ್ಯಗೊಳಿಸಬೇಕೆಂಬ ಟ್ರಂಪ್‌ನ ಕಟ್ಟಪ್ಪಣೆಯಿಂದ ಭಾರತ ಸದ್ಯಕ್ಕೆ ದೊಡ್ಡ ಬೆಲೆ ತೆತ್ತು ವಿನಾಯಿತಿ ಪಡೆದಿದ್ದರೂ, ಟ್ರಂಪ್‌ನ ಹುಚ್ಚಾಟವನ್ನು ಕಂಡ ಜನರಿಗೆ ಇದೇನೂ ಶಾಶ್ವತ ಪರಿಹಾರವಲ್ಲ ಎಂಬುದು ಖಚಿತವಾಗಿದೆ. ವಾಣಿಜ್ಯ ಸಮರದ ಹಿನ್ನೆಲೆಯಲ್ಲೇ ಇತ್ತೀಚೆಗೆ ಚೀನ-ಅಮೆರಿಕ ಮಾಡಿಕೊಂಡ ಒಪ್ಪಂದವನ್ನು ಕೇವಲ ಒಂದು ವಾರದಲ್ಲೇ ಮುರಿದದ್ದು ಟ್ರಂಪ್‌ನ ವಿಕಲ್ಪತೆಗೆ ಸಾಕ್ಷಿ. ಟ್ರಂಪ್‌ನ ವಾಣಿಜ್ಯಸಮರ ಹೊಸ ಬಿಕ್ಕಟ್ಟನ್ನು ಸೃಷ್ಟಿಸಿದೆ. ಈ ಹಿಂದೆ ಜರುಗಿದ ಎರಡು ಜಾಗತಿಕ ಮಹಾಯುದ್ಧಗಳು ಮಾರುಕಟ್ಟೆಯ ಸ್ವಾಮ್ಯಕ್ಕಾಗಿ ಎಂಬುದಾದಲ್ಲಿ ವಾಣಿಜ್ಯ ಸಮರ ಮತ್ತೊಂದು ಮಹಾಯುದ್ಧದ ಸಾಧ್ಯತೆಯನ್ನು ಹೆಚ್ಚಿಸಿದೆ. ಉತ್ತರ ಕೊರಿಯ ಮತ್ತು ಅಮೆರಿಕ ನಡುವಿನ ಸಂಬಂಧ ಸ್ವಲ್ಪ ಸುಧಾರಿಸಿದಂತೆ ಕಂಡರೂ ಅದು ಮತ್ತೆ ಯಾವ ಸಮಯದಲ್ಲಾದರೂ ಹಳಿ ತಪ್ಪಬಹುದು.

**ಪರಿಹಾರ ಕಾಣದ ಬ್ರೆಕ್ಸಿಟ್**

ಯುರೋಪ್ ಒಕ್ಕೂಟದಿಂದ ಹೊರಬಂದ ಬ್ರಿಟನ್‌ನ ರಾಜಕೀಯ ಪರಿಸ್ಥಿತಿ ದಿನೇ ದಿನೇ ಹದಗೆಡುತ್ತಿದೆ. ಕಳೆದ ವರ್ಷ ನಡೆದ ಸಾರ್ವತ್ರಿಕ ಚುನಾವಣೆಯಲ್ಲಿ ಕನ್ಸರ್ವೇಟಿವ್ ಪಕ್ಷದ ಪ್ರದರ್ಶನ ಆಶಾದಾಯಕವಾಗಿರದಿದ್ದರೂ ಅಧಿಕಾರದ ಗದ್ದುಗೆ ಹಿಡಿಯುವಷ್ಟಾಗಿತ್ತು. ಥೆರೆಸ ಮೇ ಪುನಃ ಬ್ರಿಟನ್ನಿನ ಪ್ರಧಾನ ಮಂತ್ರಿಯಾಗಿ ಮುಂದುವರಿದರು. ಜೆರೆಮಿ ಕೊರ್ಬಿನ್ ನೇತೃತ್ವದಲ್ಲಿ ಲೇಬರ್ ಪಕ್ಷ ಹೆಚ್ಚಿನ ಸ್ಥಾನಗಳನ್ನು ಪಡೆದು ಪ್ರಬಲ ವಿರೋಧ ಪಕ್ಷವಾಗಿ ಬೆಳೆಯಿತು. ಯುರೋಪಿಯನ್ ಒಕ್ಕೂಟ ಮತ್ತು ಬ್ರಿಟಿಷ್ ಸರ್ಕಾರದ ನಡುವೆ ಬ್ರೆಕ್ಸಿಟ್ ಷರತ್ತುಗಳ ಬಗ್ಗೆ ದೀರ್ಘ ಚರ್ಚೆಯ ನಂತರವೂ ಪರಿಹಾರ ಕಾಣುತ್ತಿಲ್ಲ, ಥೆರೆಸ ಮೇ ತನ್ನ ಪಕ್ಷದಿಂದಲೇ ವಿರೋಧ ಎದುರಿಸುತ್ತಿದ್ದಾರೆ, ಬ್ರೆಕ್ಸಿಟ್ ಷರತ್ತಿನ ಪ್ರಕಾರ ಬ್ರಿಟನ್ ೩೯ ಬಿಲಿಯನ್ ಪೌಂಡ್ಸ್‌ನ ಬೆಲೆ ತೆರಬೇಕಾಗಿದೆ. ಉತ್ತರ ಐರ್ಲೆಂಡ್ ಅನೇಕ ಷರತ್ತುಗಳಿಗೆ ತನ್ನ ವಿರೋಧ ವ್ಯಕ್ತಪಡಿಸುತ್ತಿರುವ ಕಾರಣ ಪರಿಸ್ಥಿತಿ ಗೊಂದಲಮಯವಾಗಿದೆ. ಯುರೋಪ್ ಒಕ್ಕೂಟ ಬ್ರೆಕ್ಸಿಟ್ ಸೂತ್ರ ಅಂತಿಮವೆಂದು ಮತ್ತು ಯಾವುದೇ ರಿಯಾಯಿತಿ ಕೊಡಲು ಸಾಧ್ಯವಿಲ್ಲವೆಂದು ಸಾರಿಬಿಟ್ಟಿದೆ. ಲೇಬರ್ ಪಕ್ಷ ಮತ್ತೊಮ್ಮೆ ಸಾರ್ವತ್ರಿಕ ಚುನಾವಣೆಗೆ ಆಗ್ರಹಪಡಿಸುತ್ತಿದೆ. ಜನವರಿ ೨೧, ೨೦೧೯ರಂದು






ಬ್ರೆಕ್ಸಿಟ್ ಒಪ್ಪಂದದ ಬಗ್ಗೆ ಪಾರ್ಲಿಮೆಂಟ್‌ನಲ್ಲಿ ಮತ ಯಾಚಿಸಲಿದ್ದಾರೆ. ಬಹುತೇಕ ಪಾರ್ಲಿಮೆಂಟ್ ಈ ಒಪ್ಪಂದಕ್ಕೆ ಬಹುಮತ ಸಿಗುವ ಸಾಧ್ಯತೆಗಳಿಲ್ಲ. ಹಾಗಾದಲ್ಲಿ ಬ್ರಿಟನ್ ಹೊಸ ಪ್ರಧಾನ ಮಂತ್ರಿಯನ್ನು ಹೊಂದಬಹುದು ಅಥವಾ ಸಾರ್ವತ್ರಿಕ ಚುನಾವಣೆ ನಡೆಯಬಹುದು.

**ಫ್ರಾನ್ಸ್–ಇತಿಹಾಸದ ಪುನರಾವರ್ತನೆ**

ಈಗ ಸುದ್ದಿಯಲ್ಲಿರುವ ಯುರೋಪ್‌ನ ಇನ್ನೊಂದು ರಾಷ್ಟ್ರವೆಂದರೆ ಫ್ರಾನ್ಸ್. ಕ್ರಾಂತಿಕಾರಿ ಚರಿತ್ರೆಯನ್ನು ಬರೆದ ದೇಶ. ೧೮೭೧ರ ಪ್ಯಾರಿಸ್ ಕಮ್ಯೂನ್, ೧೯೩೬ ಮತ್ತು ೧೯೬೮ರ ಕ್ರಾಂತಿಕಾರಕ ಸಾರ್ವತ್ರಿಕ ಬೃಹತ್ ಮುಷ್ಕರಗಳು ಇತಿಹಾಸದ ಪುಟಗಳನ್ನು ಅಲಂಕರಿಸಿರುವ ಘಟನೆಗಳು. ದುಡಿಯುವ ವರ್ಗದ ಹೋರಾಟಕ್ಕೆ ವಿದ್ಯಾರ್ಥಿಗಳು, ಯುವಜನರು ಮತ್ತು ಬುದ್ಧಿಜೀವಿಗಳು ಕೈ ಜೋಡಿಸಿ ಹೋರಾಟದ ಕೆಚ್ಚನ್ನು ಮತ್ತು ಕಿಚ್ಚನ್ನು ಹೆಚ್ಚಿಸಿದ್ದು ಅಪೂರ್ವವಾದದ್ದು. ಇತಿಹಾಸಕಾರರ ಪ್ರಕಾರ ಈ ಹೋರಾಟಗಳು ಫ್ರಾನ್ಸ್‌ನ ಚರಿತ್ರೆಯಲ್ಲಿ ಸಾಂಸ್ಕೃತಿಕ, ಸಾಮಾಜಿಕ ಮತ್ತು ನೈತಿಕ ಮೌಲ್ಯಗಳಿಗೆ ನೀಡಿದ ಹೊಸ ತಿರುವುಗಳು. ದುರಂತವೆಂದರೆ, ಈ ಎಲ್ಲ ಹೋರಾಟಗಳು ಸಮಾಜವಾದಿ ವ್ಯವಸ್ಥೆಯಲ್ಲಿ ಪರ್ಯವಸಾನವಾಗದಿದ್ದುದು. ಈಗ ಮಗದೊಮ್ಮೆ ಫ್ರಾನ್ಸ್‌ನಲ್ಲಿ ಇತಿಹಾಸದ ಪುನರಾವರ್ತನೆ. ನವೆಂಬರ್ ೧೭, ೨೦೧೮ರಂದು ಫ್ರಾನ್ಸ್ ಸರ್ಕಾರ ವಿಧಿಸಿದ ತೈಲ ಸುಂಕವನ್ನು ವಿರೋಧಿಸಿ ಮೂರು ಲಕ್ಷ ಗ್ರಾಮೀಣ ಪ್ರದೇಶದ ರೈತರು ಮತ್ತು ನಾಗರಿಕರು ಮುಖ್ಯರಸ್ತೆಗಳ ಮೇಲೆ ಅಡ್ಡ ಕೂತು ತಮ್ಮ ಪ್ರತಿಭಟನೆ ನಡೆಸುತ್ತಿರುವುದು ಅವರ ಕ್ರಾಂತಿಕಾರಿ ಪರಂಪರೆಯ ಮುನ್ನಡೆ. ಫ್ರಾನ್ಸ್‌ನ ಈಗಿನ ಅಧ್ಯಕ್ಷ ಎಮಾನ್ಯುವೆಲ್ ಮಕ್ರಾನ್ ಈ ಹಿಂದೆ ಸೋಷಿಯಲಿಸ್ಟ್ ಪಕ್ಷದ ಸರ್ಕಾರದಲ್ಲಿ ಕಾರ್ಮಿಕ ಮಂತ್ರಿಯಾಗಿದ್ದ ಅವಧಿಯಲ್ಲಿ ಕಾರ್ಮಿಕ ಕಾನೂನುಗಳನ್ನು ಸುಧಾರಣೆಯ ಸೋಗಿನಲ್ಲಿ ಮಾಲೀಕರ ಹಿತಕ್ಕನುಗುಣವಾಗಿ ಮಾರ್ಪಡಿಸಿದ ಭೂಪ. ಆದರೆ ಸೋಷಿಯಲಿಸ್ಟ್ ಪಕ್ಷಕ್ಕೆ ರಾಜೀನಾಮೆ ನೀಡಿ, ತನ್ನದೇ ಆದ ಹೊಸ ಪಕ್ಷವನ್ನೊಂದು ಸೃಷ್ಟಿಸಿ, ಭರವಸೆಯ ಮಹಾಪೂರ ಹರಿಸಿ, ಜನತೆಯಲ್ಲಿ ಹೊಸ ಭ್ರಮೆ ಸೃಷ್ಟಿಸಿ, ೨೦೧೭ರ ಅಧ್ಯಕ್ಷೀಯ ಚುನಾವಣೆಯಲ್ಲಿ ಜಯಗಳಿಸಿದ. ಅಧಿಕಾರಕ್ಕೇರುವ ಸಲುವಾಗಿ ಎಮಾನ್ಯುವೆಲ್ ಮಕ್ರಾನ್ ತಾನು ಫ್ರಾನ್ಸ್‌ನ ರಾಜಕೀಯ ಚಹರೆಯನ್ನೇ ಬದಲಾಯಿಸುವೆ, ಉದ್ಯೋಗಗಳನ್ನು ಸೃಷ್ಟಿಸುವೆ, ವೇತನ ಹೆಚ್ಚಿಸುವೆ ಇತ್ಯಾದಿ ಆಶ್ವಾಸನೆಗಳನ್ನು ನೀಡಿದ್ದ. ಆದರೆ ಅಧಿಕಾರಕ್ಕೆ ಬಂದನಂತರ ತಾನು ನೀಡಿದ್ದ ಆಶ್ವಾಸನೆಗಳನ್ನೆಲ್ಲ ಗಾಳಿಗೆ ತೂರಿ, ತನ್ನ ಬಂಡವಾಳಶಾಹಿ ಸ್ನೇಹಿತರ ಪರ ನೀತಿಗಳನ್ನು ಜಾರಿಗೊಳಿಸತೊಡಗಿದ. ಕಾರ್ಮಿಕರು, ರೈತರು ಮತ್ತು ಸಾಮಾನ್ಯ ಜನರ ಸಮಸ್ಯೆಗಳನ್ನು ನಿರ್ಲಕ್ಷಿಸಿದ.

**ತೈಲ ತೆರಿಗೆ – ಬೆಂಕಿಯ ಕಿಡಿ**

ಯುರೋಪ್ ಒಕ್ಕೂಟದ ಸದಸ್ಯ ರಾಷ್ಟ್ರವಾದ ಫ್ರಾನ್ಸ್ ಕಾರ್ಮಿಕರಿಗೆ ಮತ್ತು ವಿದ್ಯಾರ್ಥಿಗಳಿಗೆ ಕೊಟ್ಟಿದ್ದ ಅನೇಕ ಸವಲತ್ತುಗಳನ್ನು ಕಡಿತಗೊಳಿಸುತ್ತಾ ಬಂದದ್ದು ಜನರಲ್ಲಿ ಆಕ್ರೋಶ ಮಡುಗಟ್ಟಿತ್ತು. ಯುರೋಪ್ ಒಕ್ಕೂಟದ ರಾಷ್ಟ್ರಗಳು ಸಾಮಾಜಿಕ ವೆಚ್ಚಗಳನ್ನು ಕಡಿಮೆ ಮಾಡಬೇಕೆಂಬ ಒಕ್ಕೂಟದ ಒತ್ತಡ ಒಂದೆಡೆಯಾದರೆ, ತಾವು ಹೋರಾಟಗಳಿಂದಾಗಿ ಪಡೆದುಕೊಂಡ ಸವಲತ್ತುಗಳನ್ನು ಉಳಿಸಿಕೊಳ್ಳಲು ಕಾರ್ಮಿಕರ ಪ್ರತಿಭಟನೆ ಇನ್ನೊಂದೆಡೆ. ಫ್ರಾನ್ಸ್ ಹತ್ತಿ ಉರಿಯಲು ಒಂದು ಕಿಡಿ ಸಾಕಿತ್ತು. ಫ್ರಾನ್ಸ್‌ನ ಕಾರ್ಮಿಕರು, ರೈಲ್ವೆ ಕಾರ್ಮಿಕರ ಮುಷ್ಕರ ಮುಂಬರುವ ಆಸ್ಫೋಟದ ಸೂಚನೆಯಾಗಿತ್ತು.

ಫ್ರಾನ್ಸ್ ಸರ್ಕಾರ ವಿಧಿಸಿದ ತೈಲ ಸುಂಕ ಈ ಕಿಡಿಯಾಯಿತು, ಡೀಸೆಲ್ ಕಾರುಗಳನ್ನು ತಮ್ಮ ದೈನಂದಿನ ವ್ಯವಹಾರಗಳಿಗೆ ಬಳಸುವ ಗ್ರಾಮೀಣ ಮತ್ತು ಪಟ್ಟಣ ಪ್ರದೇಶದ ಜನರಿಗೆ ದೊಡ್ಡ ಹೊರೆಯಾಯಿತು. ಪಕ್ಷಾತೀತ ಮತ್ತು ನಾಯಕಾತೀತ ಹೋರಾಟ ಆರಂಭಗೊಂಡದ್ದು ಪ್ಯಾರಿಸ್‌ನ ಹೊರ ಪ್ರದೇಶಗಳಲ್ಲಾದರೂ ಅದರ ಕಾವು ಅಲ್ಲಿಗೂ ತಟ್ಟಿ ಜೀವನ ಅಸ್ತವ್ಯಸ್ತಗೊಂಡಿದೆ. ಫ್ರಾನ್ಸ್‌ನ ಮೋಟಾರ್ ನಿಯಮವೊಂದರ ಪ್ರಕಾರ ಪ್ರತಿಯೊಬ್ಬ ವಾಹನ ಚಾಲಕನೂ ಹಳದಿ ಬಣ್ಣದ ಒಳಅಂಗಿಯನ್ನು ಧರಿಸಬೇಕು. ಈ ಹೋರಾಟದ ಭಾಗಿಗಳೆಲ್ಲ ಹಳದಿ ಒಳಂಗಿ ಧರಿಸಿದವರಾದ್ದರಿಂದ ಈ ಹೋರಾಟವನ್ನು "ಹಳದಿ ಒಳಅಂಗಿ" ಹೋರಾಟವೆಂದೇ ಬಣ್ಣಿಸಲಾಗಿದೆ. ಇದು ಅಮೆರಿಕದ "ವಾಲ್‌ಸ್ಟ್ರೀಟ್ ಆಕ್ರಮಿಸು" ಹೋರಾಟವನ್ನು ನೆನಪಿಗೆ ತರುತ್ತದೆ. ಎರಡೂ ಸಮಾಜದಲ್ಲಿರುವ ಅಸಮಾನತೆಯ ಪ್ರಮಾಣವೇ ಈ ಹೋರಾಟಗಳಿಗೆ ಕಾರಣ. ಈಗ "ಹಳದಿ ಒಳ ಅಂಗಿ" ಹೋರಾಟ ದೇಶವ್ಯಾಪಿಯಾಗಿ ಹರಡಿದೆ ಮಾತ್ರವಲ್ಲದೇ ದೇಶದ ಸೀಮೆಯನ್ನು ದಾಟುತ್ತಿದೆ.

ತೈಲ ಸುಂಕ ರದ್ದಾಗಬೇಕೆಂಬ ಬೇಡಿಕೆ ಹೋರಾಟದ ಆರಂಭದ ಬೇಡಿಕೆಯಾದರೂ, ನಂತರ ಅದು ವಿಸ್ತಾರಗೊಂಡು ಸಂಪತ್ತಿನ ಸಮಾನ ಹಂಚಿಕೆ, ಪಿಂಚಣಿ, ವೇತನ ಹೆಚ್ಚಳ ಮತ್ತು ಅಧ್ಯಕ್ಷ ಎಮಾನ್ಯುವೆಲ್ ಮಕ್ರಾನ್ ರಾಜೀನಾಮೆ ಇತ್ಯಾದಿ ಬೇಡಿಕೆಗಳನ್ನೊಳಗೊಂಡಿದೆ. ಫ್ರಾನ್ಸ್‌ನ ಪ್ರಮುಖ ಕಾರ್ಮಿಕ ಸಂಘಟನೆ – ಸಿ.ಜಿ.ಟಿ. ಈ ಹೋರಾಟಕ್ಕೆ ಬೆಂಬಲ ನೀಡಿದೆ. ಪ್ರತಿಭಟನೆಗಳು ಬಹುಪಾಲು ಶಾಂತಿಯುತವಾಗಿದ್ದರೂ ಅಲ್ಲಲ್ಲಿ ಹಿಂಸಾಚಾರದ ಘಟನೆ ನಡೆದು ಹಾನಿಯಾಗಿದೆ. ಫ್ರಾನ್ಸ್‌ನಲ್ಲಿ ನಡೆಯುತ್ತಿರುವ ಹೋರಾಟ ನವ ಉದಾರೀಕರಣದ ನೀತಿಗಳ ವಿರುದ್ಧ, ಅಸಮಾನತೆಯ ವಿರುದ್ಧ ಮತ್ತು ಸಾಮಾಜಿಕ ನ್ಯಾಯಕ್ಕಾಗಿ ಎಂಬುದರಲ್ಲಿ ಸಂಶಯವಿಲ್ಲ. ತೀವ್ರ ಬಲಪಂಥೀಯ ಹಾಗೂ ತೀವ್ರ ಎಡಪಂಥೀಯ ವಿಚಾರಗಳು ಈ ಹೋರಾಟದಲ್ಲಿ ಪ್ರಕಟಗೊಂಡಿರುವುದರಿಂದಾಗಿ ಇದು ಅರಾಜಕತೆಯಲ್ಲಿ ಕೊನೆಗೊಳ್ಳುವ ಆತಂಕವೂ ದಟ್ಟವಾಗುತ್ತಿದೆ. ಫ್ರಾನ್ಸ್‌ನ ಸಂಘಟಿತ ಕಾರ್ಮಿಕರು ಈ ಹೋರಾಟದ ನೇತೃತ್ವ ವಹಿಸುವುದು ಅತಿ ಅವಶ್ಯಕ. ಫ್ರಾನ್ಸ್ ಸರ್ಕಾರ ಹೋರಾಟವನ್ನು ಹತ್ತಿಕ್ಕಲು ಒಂದು ಲಕ್ಷ ಸೈನಿಕರನ್ನು ಸಜ್ಜುಗೊಳಿಸಿದೆ. ಯುರೋಪ್ ರಾಷ್ಟ್ರಗಳ ಸರ್ಕಾರಗಳು ಎಮಾನ್ಯುವೆಲ್ ಮಕ್ರಾನ್‌ಗೆ ತಮ್ಮ ಬೆಂಬಲ ನೀಡುತ್ತವೆ. ಯುರೋಪ್ ರಾಷ್ಟ್ರಗಳ ಕಾರ್ಮಿಕ ಸಂಘಟನೆಗಳು ಫ್ರಾನ್ಸ್ ಜನತೆಯ ಹೋರಾಟಕ್ಕೆ ಬೆಂಬಲ ಮತ್ತು ಸಹಕಾರ ನೀಡಬೇಕಾದದ್ದು ಚಾರಿತ್ರಿಕ ಅಗತ್ಯ.

**ಯೆಮೆನ್ ಮೇಲೆ ವೈಮಾನಿಕ ದಾಳಿ**

ಅಮೆರಿಕ–ಇಸ್ರೇಲ್–ಸೌದಿ ಅರೇಬಿಯ ಪ್ರಪಂಚದ ದುಷ್ಟಕೂಟವಾಗಿ ಮಾನವೀಯ ಮೌಲ್ಯಗಳ ಮೇಲೆ ನಿರಂತರ ದಾಳಿ ನಡೆಸುತ್ತಿವೆ. ಅಮೆರಿಕ ತನ್ನ ಮಿಲಿಟರಿ ದರ್ಪ ಮತ್ತು ಕ್ರೌರ್ಯವನ್ನು ವೆನಿಜೂಲ ಮತ್ತು ಇರಾನ್ ಮೇಲೆ ತೋರಿಸುತ್ತಿದ್ದರೆ, ಅದರ ಬಾಲಬಡುಕ ಇಸ್ರೇಲ್ ಪ್ಯಾಲಸ್ತೀನಿಯರ ಮೇಲೆ ತನ್ನ ಕ್ರೌರ್ಯವನ್ನು ಮುಂದುವರಿಸಿದೆ. ತನ್ನ ತೈಲ ಮದದಿಂದ ಸೌದಿ ಅರೇಬಿಯ ಅಮೆರಿಕ ಮತ್ತು ಇಸ್ರೇಲ್ ಜೊತೆ ಕೈ ಜೋಡಿಸಿ ಪಶ್ಚಿಮ ಏಷ್ಯದ ಪುಂಡ ದೇಶವಾಗಿ ತನ್ನ ಕ್ರೌರ್ಯವನ್ನು ಈಗ ಯೆಮೆನ್ ಕಡೆಗೆ ತಿರುಗಿಸಿದೆ. ಅಮೆರಿಕ–ಇಸ್ರೇಲ್–ಸೌದಿ ಅರೇಬಿಯದ ಯುದ್ಧ ದಾಹಕ್ಕೆ ಬಲಿಯಾಗುತ್ತಿರುವುದು ಯೆಮೆನ್‌ನ ಅಮಾಯಕ ಜನತೆ. ಅದರಲ್ಲೂ ಹೆಚ್ಚಾಗಿ ಮುಗ್ಧ ಮಕ್ಕಳು.

೨೦೧೧ರ ಅರಬ್ ವಸಂತದ ಆಂದೋಲನದ ಫಲವಾಗಿ ಯೆಮೆನ್‌ನ ಸರ್ವಾಧಿಕಾರಿ ಅಲಿ ಅಬ್ದುಲ್ಲ ಸಾಲ್ಹೆನಿಂದ ಅದ್ರಬ್ಬು ಮನಸ್ಸೂರ್ ಹದಿಗೆ ಅಧಿಕಾರ ಹಸ್ತಾಂತರಗೊಂಡರೂ, ಭ್ರಷ್ಟಾಚಾರ, ನಿರುದ್ಯೋಗ, ಆಹಾರ ಕೊರತೆ, ಅಲ್‌ಖೈದದ ಭಯೋತ್ಪಾದನೆ ಇತ್ಯಾದಿ ಸಮಸ್ಯೆಗಳನ್ನು ಎದುರಿಸಲಾಗದ ಅಸಹಾಯಕ ಪರಿಸ್ಥಿತಿಯಲ್ಲಿ ಶಿಯಾ ನೇತೃತ್ವದ ಹೌತಿ ಚಳುವಳಿ ದೇಶವನ್ನು ವ್ಯಾಪಿಸಿ ಮನಸ್ಸೂರ್ ಹದಿಯನ್ನು ದೇಶ ಭ್ರಷ್ಟನನ್ನಾಗಿಸಿತು. ಶಿಯಾ ಗುಂಪಿನ ಬೆಳವಣಿಗೆಗೆ ಇರಾನ್ ಮಿಲಿಟರಿ ಸಹಾಯ ನೀಡುತ್ತಿದೆಯೆಂಬ ಕಾರಣ ಒಡ್ಡಿ ಸೌದಿ ಅರೇಬಿಯ ಮತ್ತು ಇತರೆ ಸುನ್ನಿ ಪ್ರಧಾನ ರಾಷ್ಟ್ರಗಳು, ಅಮೆರಿಕ, ಬ್ರಿಟನ್ ಮತ್ತು ಫ್ರಾನ್ಸ್ ಒಡಗೂಡಿ ಹೌತಿ ಆಕ್ರಮಿತ ಪ್ರದೇಶಗಳ ಮೇಲೆ ನಿರಂತರ ವೈಮಾನಿಕ ದಾಳಿ ನಡೆಸಿವೆ. ಕಳೆದ ಮೂರು ವರ್ಷಗಳಲ್ಲಿ ಸುಮಾರು ೧೦,೦೦೦ ಜನ ಅಂತರ್‌ಯುದ್ಧದಲ್ಲಿ ಮತ್ತು ವೈಮಾನಿಕ ದಾಳಿಗೆ ಬಲಿಯಾಗಿದ್ದಾರೆ. ಸುಮಾರು ನಾಲ್ಕು ಲಕ್ಷ ಮಕ್ಕಳು ಪೌಷ್ಟಿಕಾಂಶದ ಕೊರತೆಯಿಂದ ನರಳುತ್ತಿದ್ದಾರೆ. ಯೆಮೆನ್ ಜನತೆಯ ಭವಿಷ್ಯ ಚಿಂತಾಜನಕವಾಗಿದೆ. ಸಂಯುಕ್ತರಾಷ್ಟ್ರಗಳ ಒಕ್ಕೂಟ ಜಗತ್ತಿನಲ್ಲಿ ನಡೆದ ಯಾವ ಯುದ್ಧವನ್ನೂ ತಡೆಯಲು ಅಥವಾ ನಿಲ್ಲಿಸಲು ಸಾಧ್ಯವಾಗಿಲ್ಲ. ಯೆಮೆನ್‌ಗೆ ಆಹಾರ ಮತ್ತು ಔಷಧಿಗಳ ಪೂರೈಕೆ ಮಾಡುವ ಹಾದಿಯನ್ನು ಸೌದಿ ಅರೇಬಿಯ ಬಂದ್ ಮಾಡಿದೆ. ಅಮಾಯಕ ಯೆಮೆನ್ ಜನತೆಯ ಮೇಲೆ ಸೌದಿ ಅರೇಬಿಯ, ಅಮೆರಿಕ, ಬ್ರಿಟನ್, ಫ್ರಾನ್ಸ್ ಮತ್ತಿತರ ರಾಷ್ಟ್ರಗಳು ನಡೆಸುತ್ತಿರುವ ದೌರ್ಜನ್ಯವನ್ನು ಶಾಂತಿಪ್ರಿಯ ರಾಷ್ಟ್ರಗಳು ಒಕ್ಕೊರಲಿನಿಂದ ಖಂಡಿಸಬೇಕು. ಹಾಗೆಯೇ ಸೌದಿ ಅರೇಬಿಯ ಸರ್ಕಾರದ ಆದೇಶದ ಮೇಲೆ ಕೊಲ್ಲಲ್ಪಟ್ಟ ವಾಷಿಂಗ್‌ಟನ್ ಪತ್ರಿಕೆಯ ಹಿರಿಯ ಪತ್ರಕರ್ತ ಮತ್ತು ಸರ್ಕಾರದ ಟೀಕಾಕಾರ ಜಮಾಲ್ ಖಶೊಗಿ ಬಗ್ಗೆ ಅಂತರರಾಷ್ಟ್ರೀಯ ಪ್ರತಿಭಟನೆ ನಡೆಯಬೇಕು.

**ಇಕ್ಕಟ್ಟಿನಲ್ಲಿ ವೆನಿಜೂಲ**

ದಕ್ಷಿಣ ಅಮೆರಿಕ ರಾಷ್ಟ್ರಗಳ ಆರ್ಥಿಕ, ರಾಜಕೀಯ ಮತ್ತು ಸಾಮಾಜಿಕ ವ್ಯವಸ್ಥೆಯ ಚಹರೆ ಬದಲಾಯಿಸಿ, ಸಮಾಜವಾದದ ಹೊಸ ಹಾದಿಗೆ ಕರೆದೊಯ್ದ ಶ್ರೇಯಸ್ಸು ವೆನಿಜೂಲದ ಧೀಮಂತ ನಾಯಕ ಹ್ಯೂಗೋ ಶಾವೇಜ್‌ಗೆ ಸಲ್ಲಬೇಕು, ಅವನ ಮುಂದಾಳತ್ವದಲ್ಲಿ ಹುಟ್ಟುಹಾಕಿದ "ಬೊಲಿವಾರಿಯನ್ ಅಲೈಯನ್ಸ್ ಆಫ್ ಅಮೆರಿಕಾಸ್" ಎಂಬ ದಕ್ಷಿಣ ಅಮೆರಿಕ ದೇಶಗಳ ಒಕ್ಕೂಟ ಶಾವೇಜ್‌ನ ರಾಜಕೀಯ ದೂರದೃಷ್ಟಿಗೊಂದು ನಿದರ್ಶನ. ಅಮೆರಿಕದ ಆರ್ಥಿಕ ಮತ್ತು ಮಿಲಿಟರಿ ಶಕ್ತಿಯನ್ನೆದುರಿಸಲು ದಕ್ಷಿಣ ಅಮೆರಿಕದ ರಾಷ್ಟ್ರಗಳು ಒಕ್ಕೂಟ ರಚಿಸಿಕೊಂಡು ಪರಸ್ಪರ ಬೆಂಬಲಕ್ಕೆ ನಿಲ್ಲಬೇಕೆಂಬುದು ಶಾವೇಜ್‌ನ ಉದ್ದೇಶವಾಗಿತ್ತು. ಈ ಬೆಳವಣಿಗೆ ದಕ್ಷಿಣ ಅಮೆರಿಕದ ಜನತೆಯ ಸ್ವಾಭಿಮಾನವನ್ನು ಹೆಚ್ಚಿಸಿತ್ತು. ಆದರೆ ಇದು ಅಮೆರಿಕ ಸರ್ಕಾರಕ್ಕೆ ಸಹಿಸಲಾಗದ ಬೆಳವಣಿಗೆಯಾಗಿತ್ತು. ಈ ಕಾರಣದಿಂದಲೇ ವೆನಿಜೂಲದ ಚುನಾಯಿತ ಅಧ್ಯಕ್ಷ ಹ್ಯೂಗೋ ಶಾವೇಜ್‌ನನ್ನು ಕೊಲ್ಲಲು ಅಮೆರಿಕ ಸರ್ಕಾರ ಅನೇಕ ಪ್ರಯತ್ನಗಳನ್ನು ನಡೆಸಿತ್ತು. ಇಲ್ಲಿ ಇಂತಹ ಪ್ರಯತ್ನಗಳನ್ನು ಕ್ಯೂಬಾದ ಫಿಡೆಲ್ ಕ್ಯಾಸ್ಟ್ರೊ ಮೇಲೆ ಅಮೆರಿಕ ನಡೆಸಿದ್ದನ್ನು ಸ್ಮರಿಸಬಹುದು. ಶಾವೇಜ್ ಮೃತಪಟ್ಟಿದ್ದರೂ ಅವನು ಕಟ್ಟಿದ ಲ್ಯಾಟಿನ್ ಅಮೆರಿಕ ರಾಷ್ಟ್ರಗಳ ಒಕ್ಕೂಟ ಭದ್ರವಾಗಿ ನಿಂತಿದೆ.

ಟ್ರಂಪ್ ಸರ್ಕಾರ ವೆನಿಜೂಲದ ಕೆಲವು ಸೈನ್ಯಾಧಿಕಾರಿಗಳ ಜೊತೆಗೂಡಿ ಪಿತೂರಿ ನಡೆಸಿ ಅಧ್ಯಕ್ಷ ನಿಕೊಲಾಸ್ ಮದುರೊನನ್ನು ಕೊಲ್ಲುವ ಪ್ರಯತ್ನ ನಡೆಸಿ ವಿಫಲವಾಯಿತು. ಈಗ ಮಿಲಿಟರಿ ಕಾರ್ಯಾಚರಣೆಯೇ ಉಳಿದಿರುವ ದಾರಿಯೆಂಬ ನಿರ್ಧಾರಕ್ಕೆ ಅಮೆರಿಕ ಸರ್ಕಾರ ಬಂದಂತಿದೆ. ವೆನಿಜೂಲದ ತೈಲದ ಆಮದನ್ನು ಅಮೆರಿಕ ನಿಷೇಧಿಸಿದೆ. ಅದರ ಜೊತೆಗೆ ಆರ್ಥಿಕ ದಿಗ್ಬಂಧನವನ್ನೂ ಮುಂದುವರಿಸಿದೆ. ಅಮೆರಿಕದ ಈ ಆರ್ಥಿಕ ಭಯೋತ್ಪಾದನೆಯಿಂದಾಗಿ ವೆನಿಜೂಲದ ಆರ್ಥಿಕತೆ ಅಸ್ತವ್ಯಸ್ತಗೊಂಡಿದೆ. ಜನಸಾಮಾನ್ಯರು ಬೆಲೆ ಏರಿಕೆಯಿಂದಾಗಿ ಸಂತ್ರಸ್ತರಾಗಿದ್ದಾರೆ. ಜನಜೀವನ ಗೊಂದಲಮಯವಾಗಿದೆ. ಸರ್ಕಾರದ

ವಿರುದ್ಧ ಪ್ರತಿಭಟನೆಗಳು ನಡೆಯುತ್ತಿವೆ. ಅಮೆರಿಕದ ದಾಳಿ ಕೇವಲ ವೆನಿಜೂಲದ ಮೇಲೆ ಮಾತ್ರವಲ್ಲ, ಅದು ಇಡೀ ದಕ್ಷಿಣ ಅಮೆರಿಕ ರಾಷ್ಟ್ರಗಳಿಗೆ ಕೊಡುತ್ತಿರುವ ಎಚ್ಚರಿಕೆ. ಹಾಗಾಗಿ ಮಿಲಿಟರಿ ಕಾರ್ಯಾಚರಣೆಯ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ.

**ಇಮ್ರಾನ್ ಖಾನ್ – ಹೊಸ ಪಾಕಿಸ್ತಾನ**

ಪಾಕಿಸ್ತಾನದ ರಾಜಕೀಯ ವ್ಯವಸ್ಥೆಯೆಂದರೆ ಮಿಲಿಟರಿ ಆಡಳಿತ ಇಲ್ಲವೇ ಮಿಲಿಟರಿ ಹಿಡಿತದಲ್ಲಿ ಇರುವ ಚುನಾಯಿತ ಸರ್ಕಾರ. ಪಾಕಿಸ್ತಾನದ ಮಿಲಿಟರಿ ಸರ್ಕಾರದ ಮೇಲಿನ ತನ್ನ ಹಿಡಿತವನ್ನು ಎಂದೂ ಸಡಿಲಿಸಿರುವುದಿಲ್ಲ. ಒಂದು ವೇಳೆ ಚುನಾಯಿತ ಸರ್ಕಾರ ತನ್ನದೇ ನೀತಿ ಅನುಸರಿಸಿತೆಂದರೆ ಅದರ ಅಂತ್ಯ ಸನ್ನಿಹಿತ ಎಂಬುದಕ್ಕೆ ನವಾಜ್ ಶರೀಫ್‌ನ ಉದಾಹರಣೆಯೇ ಸಾಕು. ೨೦೧೩ರ ಸಾರ್ವತ್ರಿಕ ಚುನಾವಣೆಯಲ್ಲಿ ಪಾಕಿಸ್ತಾನ್ ಮುಸ್ಲಿಂ ಲೀಗ್ (ನವಾಜ್) ಗೆಲುವು ಸಾಧಿಸಿ ನವಾಜ್ ಶರೀಫ್ ಪ್ರಧಾನ ಮಂತ್ರಿಯಾದರೂ, ಮಿಲಿಟರಿ ಬೆಂಬಲ ಕಳೆದುಕೊಂಡು ಉಳಿಯಲು ಸಾಧ್ಯವಾಗಲಿಲ್ಲ. ಬದಲಾದ ಮಿಲಿಟರಿ ತಂತ್ರವೆಂದರೆ ನವಾಜ್ ಶರೀಫ್‌ನನ್ನು ನೇರವಾಗಿ ಪದಚ್ಯುತಗೊಳಿಸದೆ ಪಾಕಿಸ್ತಾನದ ಸರ್ವೋಚ್ಚ ನ್ಯಾಯಾಲಯದ ನೆರವಿನಿಂದ ಪದಚ್ಯುತಗೊಳಿಸಿತು. ನಂತರ ೨೦೧೮ರಲ್ಲಿ ನಡೆದ ಚುನಾವಣೆಯಲ್ಲಿ ಮಿಲಿಟರಿ ಪರೋಕ್ಷವಾಗಿ ಬೆಂಬಲಿಸಿದ್ದು ಪಾಕಿಸ್ತಾನ್ ತೆಹರೀಕ್ ಎ–ಇನ್ಸಾಫ್ ಪಕ್ಷದ ನಾಯಕ ಮತ್ತು ಮಾಜಿ ಕ್ರಿಕೆಟ್ ಪಟು ಇಮ್ರಾನ್ ಖಾನ್‌ನನ್ನು. ೨೦೧೮ರ ಚುನಾವಣೆಯ ಅಕ್ರಮಗಳ ಬಗ್ಗೆ ಗಂಭೀರವಾದ ಆರೋಪಗಳಿವೆ. ಆದರೂ ಈಗ ಮಿಲಿಟರಿ ಬೆಂಬಲಿತ ಇಮ್ರಾನ್ ಖಾನ್ ಪಾಕಿಸ್ತಾನದ ಪ್ರಧಾನ ಮಂತ್ರಿ. ಚುನಾವಣೆಯ ಪ್ರಚಾರದ ಭರದಲ್ಲಿ "ಹೊಸ ಪಾಕಿಸ್ತಾನ" ಸ್ಥಾಪಿಸುವ ಭ್ರಮೆ ಸೃಷ್ಟಿಸಿದ ಇಮ್ರಾನ್ ಖಾನ್‌ಗೆ ಈಗ ಸತ್ವಪರೀಕ್ಷೆಯ ಕಾಲ. ಅಮೆರಿಕ ಸರಕಾರ ಈತನನ್ನು ನಂಬುತ್ತಿಲ್ಲ, ಚೀನ ಇಮ್ರಾನ್ ಸರ್ಕಾರದ ಬಗ್ಗೆ ಸ್ಪಷ್ಟ ಅಭಿಪ್ರಾಯಕ್ಕೆ ಬಂದಂತಿಲ್ಲ. ಚೀನ–ಪಾಕಿಸ್ತಾನ ಎಕನಾಮಿಕ್ ಕಾರಿಡಾರ್‌ಗೆ ನವಾಜ್ ಶರೀಫ್ ತನ್ನ ಅಧಿಕಾರಾವಧಿಯಲ್ಲಿ ಜೀವ






ತುಂಬಿದ ಸಂದರ್ಭದಲ್ಲಿ ಆಗ ವಿರೋಧ ಪಕ್ಷದಲ್ಲಿದ್ದ ಇಮ್ರಾನ್ ಖಾನ್ ಅದನ್ನು ಕಟುವಾಗಿ ಟೀಕಿಸಿದ್ದ. ಈಗ ಇಮ್ರಾನ್ ಖಾನ್ ಸರ್ಕಾರದ ಮಿತ್ರರು ಯಾರು ಎಂಬುದು ಅಸ್ಪಷ್ಟವಾಗಿದೆ. ಏಷ್ಯಾ ಖಂಡದಲ್ಲಿ ತನ್ನ ಪ್ರಾಬಲ್ಯ ಸಾಧಿಸಲು ಚೀನಕ್ಕೆ ಪಾಕಿಸ್ತಾನ ಅಗತ್ಯ. ಭಾರತ ಅಮೆರಿಕ ಪರ ಹೆಚ್ಚು ವಾಲಿರುವುದರಿಂದ, ಪ್ರಾದೇಶಿಕ ಸಮತೋಲನ ಹೊಂದಲು ಚೀನ–ಪಾಕಿಸ್ತಾನ ಸಮೀಪವಾಗುವ ಸಾಧ್ಯತೆ ಹೆಚ್ಚು. ಅಂತರ ರಾಷ್ಟ್ರೀಯ ಹಣಕಾಸು ಸಂಸ್ಥೆಗೆ ಸಾಲಕ್ಕಾಗಿ ಪಾಕಿಸ್ತಾನ ಅರ್ಜಿ ಸಲ್ಲಿಸಿದೆ. ಇದಕ್ಕೆ ಅಮೆರಿಕ ತಡೆ ಹಾಕಿದೆ. ಇದು ಇಮ್ರಾನ್ ಖಾನ್‌ನನ್ನು ಪೇಚಿಗೆ ಸಿಕ್ಕಿಸಿದೆ. ಪಾಕಿಸ್ತಾನದ ಸರ್ವೋಚ್ಚ ನ್ಯಾಯಾಲಯ ಅಸಿಯ ಬೀಬಿ ಎಂಬ ಕ್ರೈಸ್ತಮತೀಯ ಮಹಿಳೆಗೆ ದೇವನಿಂದನೆಯ ಆರೋಪದ ಮೇಲೆ ಲಾಹೋರ್ ಉಚ್ಚ ನ್ಯಾಯಾಲಯ ವಿಧಿಸಿದ್ದ ಮರಣದಂಡನೆಯನ್ನು ರದ್ದುಗೊಳಿಸಿದ್ದು ಉದ್ರೇಕಕಾರಿ ಪರಿಸ್ಥಿತಿಯನ್ನು ಸೃಷ್ಟಿಸಿದೆ. ಇಮ್ರಾನ್ ಖಾನ್ ಸರ್ಕಾರಕ್ಕೆ ಈ ತೀರ್ಪು ನುಂಗಲಾರದ ತುತ್ತಾಗಿ ಪರಿಣಮಿಸಿದೆ. ಒಟ್ಟಾರೆ ಇಮ್ರಾನ್ ಖಾನ್‌ನ ಸರ್ಕಾರ ಸ್ಥಿರತೆ ಸಾಧಿಸುವ ಹಾದಿಯಲ್ಲಿಲ್ಲ.

**ಬಂಗ್ಲಾದೇಶ – ಬೇಗಂ ಜಿಯ ಸೆರೆಮನೆ**

ವರ್ಷ – ೨೦೧೮ರಲ್ಲಿ ಸುದ್ದಿ ಮಾಡಿದ ಇನ್ನೊಂದು ಏಷ್ಯಾ ಖಂಡದ ದೇಶವೆಂದರೆ ಬಂಗ್ಲಾದೇಶ. ದೇಶದಲ್ಲಿನ ಅತ್ಯಂತ ಮಹತ್ವದ ಘಟನೆಯೆಂದರೆ ೧೯೯೧–೯೬ ಮತ್ತು ೨೦೦೧–೦೬ರ ಅವಧಿಯಲ್ಲಿ ದೇಶದ ಪ್ರಧಾನ ಮಂತ್ರಿಯಾಗಿದ್ದ ಬೇಗಂ ಖಲೀದ ಜಿಯ ಅವರಿಗೆ ಸೆರೆಮನೆ ವಾಸದ ತೀರ್ಪು. ಅನಾಥಾಶ್ರಮ ನಡೆಸುತ್ತಿದ್ದ ಟ್ರಸ್ಟ್‌ನ ಹಣ ದುರುಪಯೋಗದ ಆರೋಪವನ್ನು ವಿಚಾರಣೆ ನಡೆಸಿದ ನ್ಯಾಯಾಲಯ ಆರೋಪಗಳನ್ನು ಎತ್ತಿಹಿಡಿದು ಬೇಗಂ ಖಲೀದ ಜಿಯ ಅವರಿಗೆ ಐದು ವರ್ಷಗಳ ಕಾರಾಗೃಹ ಶಿಕ್ಷೆಯ ತೀರ್ಪನ್ನು ಫೆಬ್ರವರಿ ೨೦೧೮ರಲ್ಲಿ ನೀಡಿತು. ಯಾವ ಸದ್ದೂ ಮಾಡದೆ ಕಾರಾಗೃಹದ ಕಡೆ ನಡೆದದ್ದು ಅವರ ಅನುಯಾಯಿಗಳನ್ನು ಮತ್ತು ರಾಜಕೀಯ ವೀಕ್ಷಕರನ್ನು ಅಚ್ಚರಿಗೊಳಿಸಿತು. ಈಗ ಈಕೆಯ ಪಕ್ಷ ಬಂಗ್ಲಾದೇಶ ನ್ಯಾಷನಲಿಸ್ಟ್ ಪಕ್ಷ ತಮ್ಮ ನಾಯಕಿಯ ಅನುಪಸ್ಥಿತಿಯಲ್ಲಿ ೨೦೧೮ ಡಿಸೆಂಬರ್ ಅಂತ್ಯದಲ್ಲಿ ನಡೆಯುವ ಚುನಾವಣೆಯಲ್ಲಿ ಸೆಣಸಬೇಕಿದೆ. ಈಗಿನ ಪ್ರಧಾನ ಮಂತ್ರಿ ಶೇಖ್ ಹಸೀನ ಅವರ ಆಡಳಿತದ ಬಗ್ಗೆ ತೀವ್ರ ವಿರೋಧ ಬೆಳೆಯುತ್ತಿದೆ. ಪತ್ರಕರ್ತರ ಕೊಲೆ ನಡೆದಿದೆ. ಪ್ರಜಾಪ್ರಭುತ್ವ ಮೌಲ್ಯಗಳು ಕುಸಿಯುತ್ತಿವೆ. ಬಂಗ್ಲಾದೇಶದ ವಿರೋಧ ಪಕ್ಷಗಳು ಒಂದಾಗಿ ಶೇಖ್ ಹಸೀನ ಅವರನ್ನು ಎದುರಿಸಲು ತಯಾರಿ ನಡೆಸಿವೆ.

**ಶ್ರೀಲಂಕ–ರಾಜಕೀಯ ಸುನಾಮಿ**

ಸುಮಾರು ಮೂರು ದಶಕಗಳ ಅಂತಃಕಲಹದಲ್ಲಿ ಬೆಂದಿದ್ದ ಶ್ರೀಲಂಕ ಕಳೆದ ಎಂಟು ವರ್ಷಗಳ ಅವಧಿಯಲ್ಲಿ ಸ್ಥಿರತೆ ಪಡೆದು ಆರ್ಥಿಕವಾಗಿ ಚೇತರಿಕೆಯ ಹಾದಿಯಲ್ಲಿತ್ತು. ೨೦೧೫ರ ರಾಷ್ಟ್ರೀಯ ಚುನಾವಣೆಯಲ್ಲಿ ಮೈತ್ರಿಪಾಲ ಸಿರಿಸೇನ ಮತ್ತು ರನಿಲ್ ವಿಕ್ರಮ ಸಿಂಘೆ ಒಟ್ಟುಗೂಡಿ ರಾಷ್ಟ್ರೀಯ ಒಕ್ಕೂಟ ರಚಿಸಿ, ಅಂದಿನ ಅಧ್ಯಕ್ಷ ಮಹಿಂದ ರಾಜಪಕ್ಸೆಯನ್ನು ೨೦೧೫ರ ಚುನಾವಣೆಯಲ್ಲಿ ಸೋಲಿಸಿ ಮೈತ್ರಿಪಾಲ ಸಿರಿಸೇನ ಅಧ್ಯಕ್ಷನಾಗಿ ಮತ್ತು ರನಿಲ್ ವಿಕ್ರಮ ಸಿಂಘೆ ಪ್ರಧಾನ ಮಂತ್ರಿಯಾಗಿ ಅಧಿಕಾರಕ್ಕೇರಿದರು. ಆದರೆ ಇವರೀರ್ವರ ಮಧ್ಯೆ ಬಿರುಕುಂಟಾಗಿ ೨೬ ಅಕ್ಟೋಬರ್ ೨೦೧೮ರಂದು ಏಕಾಏಕಿ, ಅಧ್ಯಕ್ಷ ಮೈತ್ರಿಪಾಲ ಸಿರಿಸೇನ ಪ್ರಧಾನ ಮಂತ್ರಿ ರನಿಲ್ ವಿಕ್ರಮ ಸಿಂಘೆಯನ್ನು ವಜಾ ಮಾಡಿ, ತನ್ನ ಪಕ್ಷದ ಬೆಂಬಲವನ್ನು ಹಿಂಪಡೆದು ಹಿಂದಿನ ಚುನಾವಣೆಯಲ್ಲಿ ಸೋತಿದ್ದ ಮಹಿಂದ ರಾಜಪಕ್ಸೆಯನ್ನು ಪ್ರಧಾನ ಮಂತ್ರಿಯಾಗಿ ನೇಮಿಸಿದ್ದು ಶ್ರೀಲಂಕಾದ ರಾಜಕೀಯ ವಲಯದಲ್ಲಿ ಸುನಾಮಿಯನ್ನು ಸೃಷ್ಟಿಸಿತು. ಅಧ್ಯಕ್ಷ ಸಿರಿಸೇನನನ್ನು ಹತ್ಯೆ ಮಾಡುವ ಸಂಚನ್ನು ಶೀಘ್ರ ತನಿಖೆ ಮಾಡಿಸಲಿಲ್ಲ ಎಂಬ ಆಪಾದನೆಗೆ ವಿಕ್ರಮ ಸಿಂಘೆ ಬಲಿಯಾದದ್ದು. ಪಾರ್ಲಿಮೆಂಟ್‌ನಲ್ಲಿ ನಡೆದ ಮತದಾನದಲ್ಲಿ ಮಹಿಂದ ರಾಜಪಕ್ಸೆಗೆ ಬಹುಮತ ಸಿಗದ ಕಾರಣ, ಅಧ್ಯಕ್ಷ ಸಿರಿಸೇನ ನವೆಂಬರ್ ೯, ೨೦೧೮ರಂದು ಪಾರ್ಲಿಮೆಂಟ್ ಅನ್ನು ವಿಸರ್ಜಿಸುವ ಘೋಷಣೆ ಹೊರಡಿಸಿದರು. ಹೊಸ ಚುನಾವಣೆಗೆ ಆದೇಶ ಇತ್ತರು. ಈ ಮಧ್ಯೆ ನ್ಯಾಯಾಲಯ ಮಹಿಂದ ರಾಜಪಕ್ಸೆ ಪ್ರಧಾನ ಮಂತ್ರಿಯಾಗಿ ಕಾರ್ಯ ನಿರ್ವಹಿಸಕೂಡದೆಂದು ತಡೆಯಾಜ್ಞೆ ನೀಡಿತ್ತು. ಅಧ್ಯಕ್ಷ ಸಿರಿಸೇನರ ಪಾರ್ಲಿಮೆಂಟ್ ವಿಸರ್ಜನೆಯ ಘೋಷಣೆಯ

ಸಿಂಧುತ್ವವನ್ನು ಶ್ರೀಲಂಕಾದ ಸರ್ವೋಚ್ಚ ನ್ಯಾಯಾಲಯದಲ್ಲಿ ಪ್ರಶ್ನಿಸಲ್ಪಟ್ಟಿತು. ಏಳು ನ್ಯಾಯಮೂರ್ತಿಗಳ ನ್ಯಾಯಪೀಠ ಅಧ್ಯಕ್ಷ ಸಿರಿಸೇನರ ಪಾರ್ಲಿಮೆಂಟ್ ವಿಸರ್ಜನೆಯ ಘೋಷಣೆ ಅಸಿಂಧುವೆಂದು ೨೦೧೮ ಡಿಸೆಂಬರ್ ೧೩ರಂದು ತೀರ್ಪಿತ್ತಿದೆ. ತೀರ್ಪಿನನ್ವಯ ಅಧ್ಯಕ್ಷ ಸಿರಿಸೇನ ವಜಾ ಆಗಿದ್ದ ವಿಕ್ರಮ ಸಿಂಘೆ ಅವರನ್ನು ಮತ್ತೆ ಪ್ರಧಾನ ಮಂತ್ರಿಯಾಗಿ ನೇಮಿಸಿದ್ದಾರೆ. ಸುಮಾರು ಎರಡು ತಿಂಗಳ ರಾಜಕೀಯ ಶೂನ್ಯತೆ ಮತ್ತು ಅಸ್ಥಿರತೆ ಕೊನೆಗೊಂಡಂತೆ ಕಂಡರೂ ಅದು ಶಾಶ್ವತವೇ ಎಂಬುದು ಕಾದುನೋಡಬೇಕಾದ ವಿಷಯ.

**ಭಾರತ – ಜನಮನ ವಿಭಜನೆ**

ನರೇಂದ್ರ ಮೋದಿ ಎಂತಹ ವಿಭಜಕ ಶಕ್ತಿ ಎನ್ನುವುದು ಅವರು ಗುಜರಾತ್ ರಾಜ್ಯದ ಮುಖ್ಯಮಂತ್ರಿಯಾಗಿದ್ದಾಗಲೇ ಎಲ್ಲರ ಗಮನಕ್ಕೆ ಬಂದ ಸಂಗತಿ. ಅವರ ವಿಭಜಕ ಶಕ್ತಿ ಈಗ ಇಡೀ ಭಾರತದ ಜನತೆಯ ಗಮನಕ್ಕೆ ಬಂದಿದೆ. ದೇಶದ ಸಮಗ್ರತೆ ಮತ್ತು ಐಕ್ಯತೆ ರಕ್ಷಿಸುವ ಬದಲು ಧರ್ಮದ ಹೆಸರಿನಲ್ಲಿ ದೇಶವನ್ನು ಛಿದ್ರಗೊಳಿಸುತ್ತಿರುವುದು ಭಾರತದ ಸಂವಿಧಾನಕ್ಕೆ ಮಾಡಿದ ಅಪಚಾರ. ನರೇಂದ್ರ ಮೋದಿ–ಅಮಿತ್ ಶಾ–ಅರುಣ್ ಜೇಟ್ಲಿಯ ತ್ರಿಕೂಟ ಭಾರತದ ಆರ್ಥಿಕ, ರಾಜಕೀಯ ಮತ್ತು ಸಾಮಾಜಿಕ ವ್ಯವಸ್ಥೆಯನ್ನು ಸಂಪೂರ್ಣವಾಗಿ ಅಪಮೌಲ್ಯಗೊಳಿಸಿದೆ. ಸಹಿಷ್ಣುತೆಗೆ ಹೆಸರಾದ ಭಾರತದಲ್ಲೀಗ ಅಸಹಿಷ್ಣುತೆಯ ದೈತ್ಯ ನರ್ತನ ನಡೆದಿದೆ. ಸಮಾಜದಲ್ಲಿನ ಬಿರುಕು ಅಗಾಧವಾಗಿ ಬೆಳೆದು ನಿಂತಿದೆ. ಸಂಘಪರಿವಾರ ಅಲ್ಪಸಂಖ್ಯಾತರು ಮತ್ತು ದಲಿತರ ಮೇಲೆ ವ್ಯವಸ್ಥಿತ ಮತ್ತು ಅಮಾನುಷ ಹಲ್ಲೆಯ ಘಟನೆಗಳು ದಿನನಿತ್ಯದ ಸುದ್ದಿಯಾಗಿವೆ. ಈ ಸಮಾಜ ವಿಭಜಕ ಶಕ್ತಿಗಳ ಆಳ್ವಿಕೆ ಕೊನೆಗೊಳಿಸದಿದ್ದರೆ ಸಮಾಜ ಅಂತಃಕಲಹದ ಹಾದಿ ಹಿಡಿಯುವುದರಲ್ಲಿ ಸಂಶಯವಿಲ್ಲ. ಇದಕ್ಕೆ ಪೂರಕವಾದ ನಿದರ್ಶನವೆಂದರೆ ೨೦೧೮ರ ಪ್ರಥಮ ದಿನದಂದು ಭೀಮ ಕೋರೆಗಾಂವನಲ್ಲಿ ನಡೆದ ದಲಿತರ ಮೇಲಿನ ಹಲ್ಲೆ. ಬ್ರಿಟಿಷ್ ಸೈನ್ಯ ಸೇರಿ ತಮ್ಮನ್ನು ಸಾಮಾಜಿಕವಾಗಿ ಶೋಷಿಸುತ್ತಿದ್ದ ಬಾಜೀರಾವ್ ಪೇಶ್ವೆ–೨ ಸೈನ್ಯದ ವಿರುದ್ಧ ೧೮೧೮ರಲ್ಲಿ ನಡೆದ ಕದನದಲ್ಲಿ ಐದುನೂರು ಮಹರ್ ಜಾತಿಯ ದಲಿತರಲ್ಲಿ ಮಡಿದ ನಲ್ವತ್ತೊಂಬತ್ತು ಮಹರ್ ಸೈನಿಕ ಹುತಾತ್ಮರ ನೆನಪಿಗಾಗಿ ಬ್ರಿಟಿಷರು ಕಟ್ಟಿದ್ದು ಭೀಮಕೋರೆಗಾಂವ ರಣಸ್ತಂಭ. ದಲಿತರಿಗೆ ಪ್ರತಿ ವರ್ಷ ಜನವರಿ ೧ರಂದು ಭೀಮಕೋರೆಗಾಂಗೆ ಬಂದು ಒಗ್ಗೂಡುವುದು ಅವರ ಸ್ವಾಭಿಮಾನದ ಪ್ರತೀಕ. ೧೯೨೭ರಲ್ಲಿ ಡಾ॥ ಬಾಬಾಸಾಹೇಬ್ ಅಂಬೇಡ್ಕರ್ ಭೀಮಕೋರೆಗಾಂಗೆ ಭೇಟಿ ನೀಡಿದ್ದು ಇದರ ಮಹತ್ವವನ್ನು ಹೆಚ್ಚಿಸಿತು. ೨೦೦ ವರ್ಷಗಳು ತುಂಬಿದ ಸಂದರ್ಭದಲ್ಲಿ ದಲಿತರು ಮತ್ತು ಪ್ರಗತಿಪರರು ಹೆಚ್ಚಿನ ಸಂಖ್ಯೆಯಲ್ಲಿ ಸೇರಿದ್ದು ಸಹಜ. ಇದನ್ನು ಸಹಿಸದ ಹಿಂದುತ್ವವಾದಿಗಳು "ಜೈ ಭವಾನಿ, ಜೈ ಶಿವಾಜಿ" ಎಂಬ ಘೋಷಣೆಗಳೊಂದಿಗೆ ಕೇಸರಿ ಧ್ವಜವನ್ನು ಹಿಡಿದು ಅಮಾಯಕ ದಲಿತರ ಮೇಲೆ ಹಲ್ಲೆ ನಡೆಸಿದ ಪರಿಣಾಮವಾಗಿ ಓರ್ವನ ಸಾವಾಗಿ ಮತ್ತು ಅನೇಕಾನೇಕ ಜನರು ಗಾಯಗೊಂಡರು. ಮಹಾರಾಷ್ಟ್ರ ಪೊಲೀಸರು ಪ್ರೇಕ್ಷಕರಾಗಿ ನಿಂತದ್ದು ದಲಿತರ ಮೇಲಿನ ದಾಳಿ ಪೂರ್ವಯೋಜಿತವಾಗಿತ್ತೆಂಬುದರಲ್ಲಿ ಸಂದೇಹವಿಲ್ಲ. ರಾಷ್ಟ್ರೀಯ ಸ್ವಯಂಸೇವಕ ಸಂಘದ ಸಮೀಪವರ್ತಿ ಮತ್ತು ಸಮಸ್ತ ಹಿಂದು ಅಘಾಡಿಯ ನೇತಾರ ಮಿಲಿಂದ್ ಎಕ್ಬೋಟೆ ಮತ್ತು ಶಿವ ಪ್ರತಿಷ್ಠಾನ ಹಿಂದೂಸ್ತಾನ್ ಸಂಸ್ಥೆಯ ನೇತಾರ ಮನೋಹರ ಸಾಂಬಾಜಿ ಬಿಡೆ ದಲಿತರ ಮೇಲಿನ ದಾಳಿಯ ಮುಖಂಡರು ಎಂದು ತಿಳಿದುಬಂದಿದ್ದರೂ, ಮಹಾರಾಷ್ಟ್ರ ಪೊಲೀಸ್ ಅವರನ್ನು ಬಂಧಿಸಲು ಹಿಂದುಮುಂದು ನೋಡಿದ್ದು ಈ ಪ್ರಕರಣದಲ್ಲಿ ಮಹಾರಾಷ್ಟ್ರದ ಭಾರತೀಯ ಜನತಾ ಪಕ್ಷದ ಕೈವಾಡವಿತ್ತು ಎಂಬುದು ವಿದಿತವಾಗುತ್ತದೆ. ಭೀಮಕೋರೆಗಾಂವನಲ್ಲಿ ನಡೆದ ಹಿಂಸಾಚಾರವನ್ನು ಖಂಡಿಸಲು ಜನವರಿ ೩ರಂದು ದಲಿತರ ಗುಂಪುಗಳು ನಡೆಸಿದ ಯಶಸ್ವಿ ಮಹಾರಾಷ್ಟ್ರ ಬಂದ್ ಸಂಘಪರಿವಾರಕ್ಕೆ ಕೊಟ್ಟ ಪ್ರತಿ ಏಟಾಗಿತ್ತು.




**ಅರ್ಬನ್ ನಕ್ಸಲ್ಸ್**

ಭಾರತೀಯ ಜನತಾ ಪಕ್ಷ ಅಧಿಕಾರದಲ್ಲಿರುವ ರಾಜ್ಯಗಳಲ್ಲಿ ಸಂಘಪರಿವಾರ ದವರಿಂದ ನಡೆದ ಕೊಲೆ ಮತ್ತು ಹಿಂಸಾಚಾರದಲ್ಲಿ ಪೊಲೀಸರು ಕ್ರಮ ಜರುಗಿಸುವುದು ಹಿಂಸಾಚಾರಕ್ಕೊಳಗಾದವರ ಮೇಲೆಯೇ ಹೊರತು ಸಂಘಪರಿವಾರದ ಹಿಂಸಾಚಾರಿಗಳ ಮೇಲಲ್ಲ. ಭೀಮ ಕೋರೆಗಾಂವನಲ್ಲಿ ನಡೆದ ಹಿಂಸಾಚಾರದ ಪ್ರೇರಕರಾದ ಮಿಲಿಂದ್ ಎಕ್ಬೋಟೆ ಮತ್ತು ಮನೋಹರ್ ಸಾಂಬಾಜಿ ಬಿಡೆ ಮಹಾರಾಷ್ಟ್ರ ಸರ್ಕಾರದ ಕೃಪಾಕಟಾಕ್ಷದಲ್ಲಿ ನಿರ್ಭೀತರಾಗಿ ತಿರುಗಾಡಿಕೊಂಡಿದ್ದಾರೆ. ಅಷ್ಟು ಮಾತ್ರವಲ್ಲ ಮಹಾರಾಷ್ಟ್ರ ಸರ್ಕಾರ ಭೀಮಕೋರೆಗಾಂವ ಕಾರ್ಯಕ್ರಮ ನಕ್ಸಲೀಯರಿಂದ ಆಯೋಜಿತವಾದದ್ದೆಂದೂ ಅದರಲ್ಲಿ ಪಾತ್ರವಹಿಸಿದ್ದರೆಂಬ ನೆಪ ಒಡ್ಡಿ ತೆಲುಗು ಸಾಹಿತ್ಯದ ಶ್ರೇಷ್ಠ ಕವಿ ಪೆಂಡ್ಯಾಲ ವರವರ ರಾವ್, ಸಾಮಾಜಿಕ ಕಾರ್ಯಕರ್ತೆ ಹಾಗೂ ವಕೀಲರಾದ ಸುಧಾ ಭಾರದ್ವಾಜ್, ನಾಗರಿಕ ಹಕ್ಕುಗಳ ಕಾರ್ಯಕರ್ತ ಅರುಣ್ ಫೆರೈರ, ಸಾಹಿತಿ ವೆರ್ನಾನ್ ಗೋನ್ಸಾಲ್ವೆಸ್ ಮತ್ತು ಪತ್ರಕರ್ತ ಗೌತಮ್ ನವ್ಲಖ ಅವರನ್ನು ೨೦೧೮ ಆಗಸ್ಟ್ ೨೮ರಂದು ವಿವಿಧ ಸ್ಥಳಗಳಿಂದ ಏಕಕಾಲಕ್ಕೆ ಬಂಧಿಸಿದ್ದು ನರೇಂದ್ರ ಮೋದಿ ಆಡಳಿತದ ಕಪಟ ರಾಜಕಾರಣಕ್ಕೆ ಇನ್ನೊಂದು ನಿದರ್ಶನವಾಯಿತು. ಭೀಮಕೋರೆಗಾಂವ ಸ್ಮಾರಕದ ಇನ್ನೂರನೇ ವರ್ಷದ ಕಾರ್ಯಕ್ರಮವನ್ನು ಆಯೋಜಿಸಿದ್ದು ಎಲ್ಗರ್ ಪರಿಷದ್. ಸರ್ವೋಚ್ಚ ನ್ಯಾಯಾಲಯದ ವಿಶ್ರಾಂತ ನ್ಯಾಯಮೂರ್ತಿ ಪಿ. ಬಿ. ಸಾವಂತ್ ಪರಿಷದ್‌ನ ಮುಖ್ಯ ಆಯೋಜಕರಲ್ಲೊಬ್ಬರು. ಮಹಾರಾಷ್ಟ್ರ ಪೊಲೀಸರ ಕ್ರಮವನ್ನು ಖಂಡಿಸಿ "ನಾನೂ ನಗರದ ನಕ್ಸಲ್" ಎಂಬ ಪ್ರತಿಭಟನೆ ದೇಶದಾದ್ಯಂತ ನಡೆದದ್ದು ಗಮನಾರ್ಹ ಬೆಳವಣಿಗೆ. ದೇಶದ ದಲಿತ ಸಂಘಟನೆಗಳು ಭಾರತೀಯ ಜನತಾ ಪಕ್ಷದ ಮುಖವಾಡವನ್ನು ಕಳಚಿ ಧರ್ಮನಿರಪೇಕ್ಷ ರಾಜಕೀಯ ಒಕ್ಕೂಟದ ಪ್ರಮುಖ ಶಕ್ತಿಯಾಗಬೇಕು.

**ಹಿಂದುತ್ವ–ಕೇವಲ ಮತ ಬ್ಯಾಂಕ್**

ಗುಜರಾತ್ ರಾಜ್ಯದ ಊನದಲ್ಲಿ ದಲಿತ ಯುವಕರ ಮೇಲಿನ ಹಲ್ಲೆ ನಂತರ ಭೀಮಕೋರೆಗಾಂವ ಘಟನೆ ಸಂಘಪರಿವಾರದ ವ್ಯವಸ್ಥಿತ ಸಂಚು ಎಂಬುದು ದೇಶದ ದಲಿತ ಸಂಘಟನೆಗಳ ಅರಿವಿಗೆ ಬಂದಿರಬಹುದು. ಹಾಗೆಯೇ ಮುಸ್ಲಿಂ ಅಲ್ಪಸಂಖ್ಯಾತರ ಮೇಲಿನ ಗೋರಕ್ಷಕರೆಂಬ ಗೋಮುಖ ವ್ಯಾಘ್ರಗಳ ಹಲ್ಲೆಯೂ ಕೂಡ ಸಂಘಪರಿವಾರದ ವ್ಯವಸ್ಥಿತ ಸಂಚು. ಅಂದರೆ ದೇಶದ ಪ್ರಧಾನ ಸೇವಕ ನರೇಂದ್ರ ಮೋದಿಯೂ ಇದರಲ್ಲಿ ಶಾಮೀಲು. ಈ ಗೋರಕ್ಷಕ ಪುಂಡರು ೨೦೧೫ ಮತ್ತು ೨೦೧೮ರ ಅವಧಿಯಲ್ಲಿ ೨೮ ಮುಸ್ಲಿಂರನ್ನು ಕೊಂದಿದ್ದಾರೆ ಮತ್ತು ೧೦೦ಕ್ಕೂ ಹೆಚ್ಚು ಜನರನ್ನು ಗಾಯಗೊಳಿಸಿದ್ದಾರೆಂದು ವರದಿಯಾಗಿದೆ. ಈ ಹಿಂಸಾಚಾರಕ್ಕೆ ಯೋಗಿ ಆದಿತ್ಯನಾಥ್‌ನ ಉತ್ತರ ಪ್ರದೇಶವೇ ಜನ್ಮಸ್ಥಳ. ಈ ಪಟ್ಟಿಗೆ ಈಗ ಬುಲಂದ್ ಶಹರ್‌ನಲ್ಲಿ ಮತೀಯ ಗಲಭೆಗಳೂ ಸೇರುತ್ತವೆ. ಚುನಾವಣೆಯ ಸಂದರ್ಭ ಬಂತೆಂದರೆ ಸಂಘಪರಿವಾರದವರಿಗೆ ಶ್ರೀರಾಮನ ನೆನಪು ಉಕ್ಕಿಬರುತ್ತದೆ. ಅಲ್ಪಸಂಖ್ಯಾತರ ಮೇಲೆ ದಾಳಿ ನಡೆಯುತ್ತದೆ. ಬಾಬ್ರಿಮಸೀದಿಯನ್ನು ಕೆಡವಿದ ಕೈಗಳು ಈಗ ಮತ್ತೆ ಕಡಿಯುತ್ತಿವೆ. ಸಂಘಪರಿವಾರದ ಗೃಧ್ರ ದೃಷ್ಟಿ ಕಾಶಿ ಮತ್ತು ಮಥುರಾದ ಮಸೀದಿಗಳ ಮೇಲೆ ಬಿದ್ದಿದೆ. ಕಾಶಿ ವಿಶ್ವನಾಥ ದೇವಾಲಯ ಮತ್ತು ಅದರ ಸಮೀಪದ ಮಸೀದಿಯ ಸುತ್ತಮುತ್ತಲಿದ್ದ ಮನೆ ಮತ್ತು ಅಂಗಡಿಗಳನ್ನು ತೆರವುಗೊಳಿಸಿರುವುದು ಆತಂಕಕ್ಕೆಡೆಮಾಡಿದೆ. ಸಂಘಪರಿವಾರಕ್ಕೆ "ಹಿಂದುತ್ವ" ಕೇವಲ ಮತ ಬ್ಯಾಂಕ್. ಉತ್ತರ ಪ್ರದೇಶದ ಮುಖ್ಯಮಂತ್ರಿ ಯೋಗಿ ಆದಿತ್ಯನಾಥ್ ಈಗ ಹಿಂದುತ್ವದ ಮುಖವಾಣಿ. ಈತನ ಆಳ್ವಿಕೆಯಲ್ಲಿ ಅಲಹಾಬಾದ್ ಈಗ ಪ್ರಯಾಗರಾಜ್, ಫೈಜಾಬಾದ್ ಜಿಲ್ಲೆ ಈಗ ಅಯೋಧ್ಯ ಜಿಲ್ಲೆ. ಆದಿತ್ಯನಾಥ್‌ಗೆ ಇದೇನೂ ಹೊಸದಲ್ಲ. ೧೯೯೮ರಲ್ಲಿ ಗೋರಖ್‌ಪುರದಿಂದ ಲೋಕಸಭೆಗೆ ಚುನಾಯಿತಗೊಂಡ ನಂತರದಲ್ಲಿ ಗೋರಖ್‌ಪುರದ ಉರ್ದು

ಬಜಾರ್ ಹಿಂದಿ ಬಜಾರ್ ಆಯಿತು. ಅಲಿ ನಗರ ಆರ್ಯನಗರವಾಯಿತು. ಇಸ್ಲಾಂಪುರ ಈಶ್ವರಪುರವಾಯಿತು. ಹುಮಾಯೂನ್ ನಗರ ಹನುಮಾನ್ ನಗರವಾಯಿತು. ಇದೇ ಈತನ ದೇಶಸೇವೆ ಮತ್ತು ಜನಸೇವೆ.

ನವೆಂಬರ್–ಡಿಸೆಂಬರ್ ೨೦೧೮ರಲ್ಲಿ ಮಧ್ಯಪ್ರದೇಶ, ರಾಜಸ್ತಾನ ಮತ್ತು ಛತ್ತೀಸ್‌ಘಡ ವಿಧಾನ ಸಭೆಗಳಿಗೆ ನಡೆದ ಚುನಾವಣೆಯ ಪ್ರಚಾರದಲ್ಲಿ ಹಿಂದುತ್ವದ ಭಾವುಕತೆಯನ್ನು ಕೆರಳಿಸಲು ಸಂಘಪರಿವಾರ ಮಾಡಿದ ಪ್ರಯತ್ನಗಳೆಷ್ಟೋ. ಹಿಂದೂ ಧರ್ಮ ಸಂಸದ್‌ನ ಸಭೆಯ ಮೂಲಕ ರಾಮ ಮಂದಿರ ನಿರ್ಮಾಣಕ್ಕೆ ಸುಗ್ರೀವಾಜ್ಞೆ ಹೊರಡಿಸಬೇಕೆಂಬ ಕಟ್ಟಪ್ಪಣೆ, ಸರ್ವೋಚ್ಚ ನ್ಯಾಯಾಲಯದಲ್ಲಿರುವ ಬಾಬ್ರಿ ಮಸೀದಿಯ ಪ್ರಕರಣ ಶೀಘ್ರ ನಿರ್ಣಯವಾಗಬೇಕೆಂಬ ಒತ್ತಡ, ಮತೀಯ ಗಲಭೆ ಇತ್ಯಾದಿ. ಆದರೆ ಒತ್ತಡಕ್ಕೆ ಮಣಿಯದ ಸರ್ವೋಚ್ಚ ನ್ಯಾಯಾಲಯ ಬಾಬ್ರಿ ಮಸೀದಿಯ ಪ್ರಕರಣವನ್ನು ಅನಿರ್ದಿಷ್ಟ ಕಾಲ ಮುಂದೂಡಿದೆ. ೨೦೧೯ರ ಲೋಕಸಭಾ ಚುನಾವಣೆಗೆ ಸಂಘಪರಿವಾರಕ್ಕೆ ಶ್ರೀರಾಮನೇ ಉಳಿದಿರುವುದು. ಬೇರೆಲ್ಲವೂ ಖಾಲಿ.

**೨೦೧೮ರ ಚುನಾವಣೆಗಳು – ಇಳಿದ ಮೋದಿಯ ವರ್ಚಸ್ಸು**

ಗುಜರಾತ್ ವಿಧಾನ ಸಭೆಗೆ ೨೦೧೭ರ ಕೊನೆಯಲ್ಲಿ ನಡೆದ ಚುನಾವಣೆಯ ಫಲಿತಾಂಶ ಭಾರತೀಯ ಜನತಾ ಪಕ್ಷಕ್ಕೆ ಆಘಾತ ಉಂಟುಮಾಡಿದ್ದು ಖಚಿತ. ೧೬ ವಿಧಾನ ಸಭಾ ಸ್ಥಾನಗಳನ್ನು ಬಿ.ಜೆ.ಪಿ. ಕಳೆದುಕೊಂಡರೆ ಕಾಂಗ್ರೆಸ್ ೧೬ ಸ್ಥಾನಗಳನ್ನು ಹೆಚ್ಚು ಪಡೆದು ತೀವ್ರ ಪೈಪೋಟಿ ನಡೆಸಿದ್ದು ವಿಶೇಷ ಸಂಗತಿ. ಇದು ಮೋದಿ ಅಜೇಯ ಎಂಬ ಅಭಿಪ್ರಾಯಕ್ಕೆ ಬಿದ್ದ ಬಲವಾದ ಏಟು ಎಂದೇ ಹೇಳಬಹುದು. ನಂತರ ಭಾರತದ ವಾಯುವ್ಯ ರಾಜ್ಯ ತ್ರಿಪುರದಲ್ಲಿ ಮಾರ್ಕ್ಸ್‌ವಾದಿ ಕಮ್ಯುನಿಸ್ಟ್ ಪಕ್ಷವನ್ನು ೨೦೧೮ ಮಾರ್ಚ್‌ನಲ್ಲಿ ನಡೆದ ವಿಧಾನ ಸಭಾ ಚುನಾವಣೆಯಲ್ಲಿ ಬಿಜೆಪಿ ಭಾರಿ ಅಂತರದಿಂದ ಗೆದ್ದದ್ದೂ ಕೂಡ ವಿಶೇಷ ಸಂಗತಿಯೇ. ಆದರೆ ನಂತರದ ದಿನಗಳಲ್ಲಿ ಸಂಘಪರಿವಾರದ ಕಾರ್ಯಕರ್ತರು ಕಮ್ಯುನಿಸ್ಟ್ ಪಕ್ಷದ ಕಚೇರಿಗಳು ಮತ್ತು ಸದಸ್ಯರ ಮೇಲೆ ನಡೆಸಿದ ದೌರ್ಜನ್ಯ ಅಮಾನವೀಯ ಹಾಗೂ ಖಂಡನೀಯ. ತ್ರಿಪುರದ ಜನತೆಗೆ ಬಿ.ಜೆ.ಪಿ. ಕೊಟ್ಟಿರುವ ಚುನಾವಣಾ ಭರವಸೆಗಳು ನರೇಂದ್ರ ಮೋದಿ ೨೦೧೪ರಲ್ಲಿ ಕೊಟ್ಟ ಚುನಾವಣಾ ಭರವಸೆಗಳಷ್ಟೇ. ಅವು ಪೊಳ್ಳು ಹಾಗೂ ಸುಳ್ಳು.

ವಾಯುವ್ಯ ರಾಜ್ಯಗಳಲ್ಲಿ ಚುನಾವಣೆಗಳನ್ನು ಗೆದ್ದ ಸಂತಸ ಬಿ.ಜೆ.ಪಿ.ಗೆ ಬಹಳ ದಿನ ಉಳಿಯಲಿಲ್ಲ. ಬಿ.ಜೆ.ಪಿ.ಯ ಬಂಡವಾಳವಿರುವುದು ಹಿಂದಿ ರಾಜ್ಯಗಳಲ್ಲಿ. ದೇಶದ ರಾಜಕೀಯ ಅಧಿಕಾರವನ್ನು ನಿರ್ಧರಿಸುವ ರಾಜ್ಯಗಳು. ಆದರೆ ೨೦೧೮ರಲ್ಲಿ ಈ ರಾಜ್ಯಗಳಲ್ಲಿ ನಡೆದ ಲೋಕಸಭಾ ಮತ್ತು ವಿಧಾನ ಸಭಾ ಉಪಚುನಾವಣೆಗಳ ಫಲಿತಾಂಶ ಬಿ.ಜೆ.ಪಿ.ಯನ್ನು ಧೃತಿಗೆಡಿಸಿತು. ರಾಜಸ್ತಾನದ ಅಜ್ಮೀರ್ ಮತ್ತು ಅಲ್ವಾರ್ ಲೋಕಸಭಾ ಕ್ಷೇತ್ರಗಳು ಮತ್ತು ಮಂಡಲ್‌ಗರ್‌ನ ವಿಧಾನ ಸಭಾ ಕ್ಷೇತ್ರಗಳಲ್ಲಿ ಬಿ.ಜೆ.ಪಿ. ಸೋತದ್ದು ಮುಂಬರುವ ವಿಧಾನ ಸಭಾ ಉಪಚುನಾವಣೆಯಲ್ಲಿ ಸೋತು ಅಧಿಕಾರ ಕಳೆದುಕೊಳ್ಳುವ ಮುನ್ಸೂಚನೆಯಾಗಿತ್ತು. ಈ ಕ್ಷೇತ್ರಗಳಲ್ಲಿ ಕಾಂಗ್ರೆಸ್ ಭಾರಿ ಜಯ ಗಳಿಸಿದ್ದು ಮಾತ್ರವಲ್ಲದೆ ನಂತರ ನಡೆದ ಸ್ಥಳೀಯ ಸಂಸ್ಥೆಗಳ ಚುನಾವಣೆಯಲ್ಲಿಯೂ ಭಾರಿ ಜಯ ಗಳಿಸಿತು. ಮಧ್ಯಪ್ರದೇಶದ ಉಪಚುನಾವಣೆಯಲ್ಲಿ ತನ್ನ ಸ್ಥಾನಗಳನ್ನು ಉಳಿಸಿಕೊಂಡಿದ್ದಲ್ಲದೆ ರಟ್ಲಂ ಲೋಕಸಭಾ ಕ್ಷೇತ್ರದಲ್ಲಿ ಬಿ.ಜೆ.ಪಿ.ಯನ್ನು ಸೋಲಿಸಿತು. ಅತ್ಯಂತ ರೋಚಕ ಚುನಾವಣಾ ಫಲಿತಾಂಶ ಬಂದದ್ದು ಗೋರಖ್‌ಪುರ ಮತ್ತು ಪುಲ್‌ಪುರ್ ಲೋಕಸಭಾ ಕ್ಷೇತ್ರಗಳ ಉಪಚುನಾವಣೆಯಿಂದ ಮತ್ತು ಬಿಹಾರದ ಅರಾರಿಯ ಲೋಕಸಭಾ ಕ್ಷೇತ್ರಗಳಿಂದ. ಗೋರಖ್‌ಪುರ ಲೋಕಸಭಾ ಕ್ಷೇತ್ರ ಉತ್ತರಪ್ರದೇಶದ ಮುಖ್ಯಮಂತ್ರಿ ತೆರವು ಮಾಡಿದ ಕ್ಷೇತ್ರವಾದರೆ, ಪುಲ್‌ಪುರ್ ಲೋಕಸಭಾ ಕ್ಷೇತ್ರ

# ಮೈಲಿಗೆ ಪುರುಷನ ಪುಣ್ಯ ಪುರಾಣ

ಸಭ್ಯ ಸಂಸ್ಕೃತಿಯೊಳಗೊಂದು
ದಟ್ಟ ದರಿದ್ರ ಕಾಡು, ಮೊರೆವ ಹುಲಿ
ಎಂಥ ! ಆಶ್ರಮವದು ಜಪ ಮಾಡುತ್ತಿದೆ ಬೆಕ್ಕು !!
ಉಲಿಯುತ್ತಿದೆ ಗಿಳಿ ನಲಿಯುತ್ತಿದೆ ನವಿಲು
ಬಾಗಿ ನಮಿಸುತ್ತಿವೆ ಮರಗಿಡ ಹೂ

ಆಶ್ರಮವಿದು ಕಾಡಲ್ಲ ಸುವರ್ಣ ಖಚಿತ
ಕಂಬ, ತೊಲೆ, ಬಾಗಿಲು, ಜಂತಿ, ಮಾಳಿಗೆ
ಹಕ್ಕಿ–ಪಿಕ್ಕಿ ಮರ ಗಿಡ ಕುಂಚದಲದ್ದಿದ ಹೂವು
ಬೆಕ್ಕು ಮಾತ್ರ ಜೀವಂತ ಮುಸುಕಿನೊಳಗೆ ಮಿಯಾಂವ್
ಲೋಕವೆಷ್ಟು ಸಭ್ಯ ಗೃಹಸ್ಥ ಬಣ್ಣ ತುಂಬಿದ ಕಣ್ಣು
ಮಂಜುಮಂಜು
ಬಂದ ಸರ್ಟಿಫಿಕೇಟುಗಳ ತುಂಬ
ಕಾಮಿ ಬೆಕ್ಕಿನ ಮುದ್ರೆಗಳು

ಎಂಥಾ! ಬೆಕ್ಕದು ನೆಕ್ಕಿದ ಗುರುತುಗಳನೂ ನೆಕ್ಕಿದೆ!
ಕತ್ತಲಲಿ ಟ್ರಕ್ ಹೆಡ್‌ಲೈಟಂತೆ ಹೊಳೆವ ಕಣ್ಣುಗಳನು
ಬೆಳಕಲಿ ಬಚ್ಚಿಟ್ಟಿದೆ ಮತ್ತೆ ..
ಸಾಕ್ಷಿ ಕೇಳುವವರ ಎದೆಗವಸುಗಳಲಿ
ಕಿಲಾಡಿ ಬೆಕ್ಕುಗಳು ಕೌದಿ ಹೊದ್ದಿಸುತ್ತಿವೆ



ಕ್ಷಮೆ ಕೇಳಬೇಕಂತೆ .. .. ..
ಬಣ್ಣದ ಲೋಕವೆಂದರೆ ಬರೀ ರಂಗಿನಾಟ!
ಬೆತ್ತಲೆ ದೇಹಕ್ಕೆ ಬಟ್ಟೆ ತೊಡಿಸುವ
ಅವಕಾಶವಿಹೀನರ ಬಟ್ಟೆ ಕಳಚುವ
ಹಾವು–ಏಣಿ ಆಟ!
ಅವಳೆಂದರೆ....
ಎರಡು ಮೊಲೆ, ಒಂದು ಯೋನಿ, ತೊಡೆ, ತುಟಿ, ಕಣ್ಣು
ಸೂತ್ರ ಹಿಡಿದವರ ಗಾಳಿಪಟ
ಬಯಲ ಆಗಸದ ಭಿತ್ತಿ ಪತ್ರ!!
ಆದರ್ಶಗಳನೆ ಬೆಳೆವ.... ಆದರ್ಶಗಳನೆ ಬಿತ್ತುವ
ಕಪ್ಪು ಬಿಳುಪಿನ ಚರಿತ್ರೆ
ಅಂಗೈ ಅಗಲದ ಹೆಜ್ಜೆಯೂರಲು ಮೈಯ ಹಾಸಿಗೆ
ಹರಿವ ಜಲದಲ್ಲಿ ಪಾಪದ ಗಂಗೆ!
ಮೈಲಿಗೆ ಪುರುಷನ ಪುಣ್ಯ ಪುರಾಣ.

**ಡಾ॥ ಅನಸೂಯಾ ಕಾಂಬಳೆ**
ಕನ್ನಡ ಅಧ್ಯಯನ ಕೇಂದ್ರ, ಕರ್ನಾಟಕ ವಿಶ್ವವಿದ್ಯಾಲಯ, ಸ್ನಾತಕೋತ್ತರ ವಿಭಾಗ, ಕೇರಿಮಟ್ಟಿ ಹಳ್ಳಿ, ಹಾವೇರಿ – ೫೮೧ ೧೧೦

ತೆರವು ಮಾಡಿದ್ದು ಉತ್ತರಪ್ರದೇಶದ ಉಪ ಮುಖ್ಯಮಂತ್ರಿ ಕೇಶವ ಪ್ರಸಾದ್ ಮಯೂರ. ಈ ಎರಡೂ ಕ್ಷೇತ್ರಗಳಲ್ಲಿ ಸಮಾಜವಾದಿ ಪಕ್ಷ ಗೆದ್ದರೆ, ಬಿಹಾರದ ಅರಾರಿಯ ಲೋಕಸಭಾ ಕ್ಷೇತ್ರವನ್ನು ಲಾಲೂ ಪ್ರಸಾದ್ ಪಕ್ಷ ರಾಷ್ಟ್ರೀಯ ಜನತಾ ದಳ ಗೆದ್ದದ್ದು ಮೋದಿಯ ವರ್ಚಸ್ಸು ಇಳಿಮುಖಗೊಳ್ಳುತ್ತಿರುವುದರ ಸೂಚನೆಯಾಗಿತ್ತು. ೨೦೧೪ ಮತ್ತು ೨೦೧೮ರ ಅವಧಿಯಲ್ಲಿ ದೇಶದಲ್ಲಿ ೨೭ ಲೋಕಸಭಾ ಉಪಚುನಾವಣೆಗಳಲ್ಲಿ ಬಿಜೆಪಿ ಎಂಟು ಕ್ಷೇತ್ರಗಳಲ್ಲಿ ಸೋತು ಲೋಕಸಭಾ ಸ್ಥಾನ ಕಳೆದುಕೊಂಡದ್ದಲ್ಲದೆ ವಿರೋಧ ಪಕ್ಷಗಳನ್ನು ಒಂದು ಸ್ಥಾನದಲ್ಲೂ ಸೋಲಿಸಲು ವಿಫಲವಾಗಿದೆ. ಕೇವಲ ಐದು ಲೋಕಸಭಾ ಸ್ಥಾನಗಳನ್ನು ಉಪಚುನಾವಣೆಗಳಲ್ಲಿ ಉಳಿಸಿಕೊಂಡದ್ದೇ ಹೆಚ್ಚು. ೨೦೧೮ರ ಮೇನಲ್ಲಿ ಕರ್ನಾಟಕ ವಿಧಾನಸಭೆಗೆ ನಡೆದ ಚುನಾವಣೆಯಲ್ಲಿ ಬಿಜೆಪಿ ಹೆಚ್ಚು ಸ್ಥಾನ ಗಳಿಸಿದ ಪಕ್ಷವಾದರೂ, ಕಾಂಗ್ರೆಸ್ ಮತ್ತು ಜನತಾ ದಳ (ಜಾತ್ಯತೀತ) ಪಕ್ಷಗಳು ತರಾತುರಿಯಲ್ಲಿ ಮಾಡಿಕೊಂಡ ಮೈತ್ರಿಕೂಟ ಸರ್ವೋಚ್ಚ ನ್ಯಾಯಾಲಯದ ಮಧ್ಯಂತರ ಆದೇಶದ ಕೃಪೆಯಿಂದ ಎರಡು ದಿನದ ಮುಖ್ಯಮಂತ್ರಿ ಯಡಿಯೂರಪ್ಪ ಅವರನ್ನು ಕೆಳಗಿಳಿಸಿ ಸರ್ಕಾರ ರಚಿಸಿದ್ದರೂ, ಅದರ ಸ್ಥಿರತೆ ಇನ್ನೂ ಡೋಲಾಯಮಾನವಾಗಿದೆ. ಕಾಂಗ್ರೆಸ್‌ನ ಕಳಪೆ ಪ್ರದರ್ಶನಕ್ಕೆ ಮಾಜಿ ಮುಖ್ಯಮಂತ್ರಿ ಸಿದ್ದರಾಮಯ್ಯನೇ ಕಾರಣವೆಂದು ಒಳಚರ್ಚೆ ನಡೆದಿದ್ದರೂ ಅವರನ್ನು ಕಡೆಗಣಿಸುವ ಸ್ಥಿತಿಯಲ್ಲಿ ಕಾಂಗ್ರೆಸ್ ಪಕ್ಷವಿಲ್ಲ. ಮೈತ್ರಿಕೂಟದಲ್ಲಿ ಕಾಂಗ್ರೆಸ್ ಪಕ್ಷ ಅತಿ ದೊಡ್ಡ ಘಟಕವಾದರೂ ಕೇವಲ ೩೭ ಸ್ಥಾನಗಳನ್ನು ಹೊಂದಿದ ಜೆಡಿ(ಎಸ್)ನ ಕುಮಾರಸ್ವಾಮಿ ಮುಖ್ಯಮಂತ್ರಿಯಾಗಲು ಮುಂಬರುವ ೨೦೧೯ರ ಲೋಕಸಭಾ ಚುನಾವಣೆಯೇ ಕಾರಣ. ಬಿಜೆಪಿಯನ್ನು ಅಧಿಕಾರದಿಂದ ಹೊರಗಿಡಬೇಕಾದ ದರ್ದು ಕಾಂಗ್ರೆಸ್ ಪಕ್ಷದ್ದು, ಈ ಅಂತಿಮ ಗುರಿಗೆ ಮುಖ್ಯಮಂತ್ರಿಯ ಸ್ಥಾನದ ರಾಜಿ. ಒಟ್ಟಾರೆ, ದಕ್ಷಿಣ ಭಾರತದ ರಾಜ್ಯಗಳ ಪೈಕಿ, ಕರ್ನಾಟಕದಲ್ಲಿ ಅಧಿಕಾರಕ್ಕೇರುವ ಸಾಧ್ಯತೆಯೂ ಬಿಜೆಪಿಯ ಕೈ ತಪ್ಪಿತು.

**ವಾಸ್ತವ**

ಕರ್ನಾಟಕದಲ್ಲಿ
ಕನ್ನಡ
ಸಾರ್ವಭೌಮ,
ಇಂಗ್ಲಿಷ್ ಸಾಮಂತ;
ಈಗ ಪರಿಸ್ಥಿತಿ
ತದ್ವಿರುದ್ಧ !

**ಸಿ.ಪಿ.ಕೆ.**
ಮೈಸೂರು

### "ಮೋದಿ ಬದಲು ಯೋಗಿ"

೨೦೧೮ ನವೆಂಬರ್-ಡಿಸೆಂಬರ್ ತಿಂಗಳುಗಳಲ್ಲಿ ರಾಜಸ್ತಾನ, ಮಧ್ಯಪ್ರದೇಶ, ಛತ್ತೀಸ್‌ಘಡ, ತೆಲಂಗಾಣ ಮತ್ತು ಮಿಜೋರಾಂಗಳ ಚುನಾವಣೆ ೨೦೧೯ರಲ್ಲಿ ನಡೆಯುವ ಲೋಕಸಭಾ ಚುನಾವಣೆಯ ಸೆಮಿ-ಫೈನಲ್ ಎಂದೇ ಅಭಿಪ್ರಾಯಿಸಲಾಗಿತ್ತು. ಅದರಲ್ಲೂ ಹಿಂದಿ ಪ್ರದೇಶದ ಮೂರು ರಾಜ್ಯಗಳ ಬಗ್ಗೆ ಹೆಚ್ಚಿನ ಚರ್ಚೆ ನಡೆದಿತ್ತು. ರಾಜಸ್ತಾನದ ಮುಖ್ಯಮಂತ್ರಿ ವಸುಂಧರ ರಾಜೆ ಅವರ ಆಡಳಿತ ಜನರ ಆಕ್ರೋಶಕ್ಕೆ ತುತ್ತಾಗಿತ್ತು. ಆದರೆ ೧೫ ವರ್ಷಗಳ ಸತತ ಆಳ್ವಿಕೆಯಲ್ಲೂ ಬಿಜೆಪಿ ಮಧ್ಯಪ್ರದೇಶ ಮತ್ತು ಛತ್ತೀಸ್‌ಘಡದಲ್ಲಿ ಗೆಲ್ಲುವ ಆಸೆ ಹೊಂದಿತ್ತು. ಆದರೆ ಈ ಮೂರು ರಾಜ್ಯಗಳಲ್ಲಿ ಕಾಂಗ್ರೆಸ್ ಪಕ್ಷ ಬಿಜೆಪಿಯನ್ನು ಪರಾಭವಗೊಳಿಸಿ ಅಧಿಕಾರಕ್ಕೇರಿದ್ದು ಮೋದಿಯ ವರ್ಚಸ್ಸು ತೀವ್ರಗತಿಯಲ್ಲಿ ಇಳಿಮುಖಗೊಳ್ಳುತ್ತಿರುವ ಸೂಚನೆಯಾಗಿದೆ. ಈ ರಾಜ್ಯಗಳಲ್ಲಿ ನರೇಂದ್ರ ಮೋದಿ ಪ್ರಚಾರ ಮಾಡಿದ ೭೦ ವಿಧಾನ ಸಭಾ ಕ್ಷೇತ್ರಗಳಲ್ಲಿ ಬಿಜೆಪಿ ಅಭ್ಯರ್ಥಿಗಳು ಪರಾಭವಗೊಂಡದ್ದು ಇದಕ್ಕೆ ಸಾಕ್ಷಿ. ಈಗ ಸಂಘಪರಿವಾರದ ಬದಲಾದ ಹಾಡು "ಮೋದಿ ಬದಲು ಯೋಗಿ." ಮಿಜೋರಾಂನ ವಿಧಾನಸಭಾ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷ ಹೀನಾಯವಾಗಿ ಸೋತು ಸಮಸ್ತ ಈಶಾನ್ಯ ರಾಜ್ಯಗಳಲ್ಲಿ ಅಧಿಕಾರ ಕಳೆದುಕೊಂಡರೂ ಕರ್ನಾಟಕ, ರಾಜಸ್ತಾನ, ಮಧ್ಯಪ್ರದೇಶ, ಛತ್ತೀಸ್‌ಘಡದಲ್ಲಿರುವುದೇ ಹೆಮ್ಮೆಯಾಗಿಬಿಟ್ಟಿದೆ. ತೆಲಂಗಾಣ ಚುನಾವಣೆಯಲ್ಲಿ ತೆಲಂಗಾಣ ರಾಷ್ಟ್ರೀಯ ಸಮಿತಿ ಭಾರಿ ಬಹುಮತ ಗಳಿಸಿ ಮತ್ತೊಮ್ಮೆ ಅಧಿಕಾರದ ಗದ್ದುಗೆ ಹಿಡಿದಿದೆ. ಕಾಂಗ್ರೆಸ್ ಮತ್ತು ತೆಲುಗು ದೇಶಂ ಮೈತ್ರಿಕೂಟ ತೆಲಂಗಾಣ ಮತದಾರರನ್ನು ಆಕರ್ಷಿಸಲಿಲ್ಲ. ಭಾರತೀಯ ಜನತಾಪಕ್ಷದ ಪರಿಸ್ಥಿತಿ ಸುಧಾರಿಸಲಿಲ್ಲ.

### ಬದಲಾಗಬೇಕಾದ ಆರ್ಥಿಕ ನೀತಿಗಳು

ಕಾಂಗ್ರೆಸ್ ಅಧ್ಯಕ್ಷ ರಾಹುಲ್ ಗಾಂಧಿಯಾಗಲೀ ಅಥವಾ ವಿರೋಧ ಪಕ್ಷಗಳ ನಾಯಕರುಗಳಾಗಲೀ ನರೇಂದ್ರ ಮೋದಿಯನ್ನು ನಿಂದಿಸುವುದೇ ದಿನನಿತ್ಯದ


















## ಪುಸ್ತಕ ಪ್ರಕಾಶನ

91, 9ನೇ ಮುಖ್ಯರಸ್ತೆ
ಸರಸ್ವತಿಪುರಂ
ಮೈಸೂರು – 570 009
ಫೋನ್ : 0821-2545774




## ಪುಸ್ತಕ ಪ್ರಕಾಶನ

ಬುಕ್‌ಪೋಸ್ಟ್ ಸರ್ವೀಸ್
ಪಿ. ಬಿ. ನಂ. 58, ಮೂಡಿಗೆರೆ
ಚಿಕ್ಕಮಗಳೂರು ಜಿಲ್ಲೆ-577132
ಫೋನ್ : 08263-228353, 240202
ಮೊಬೈಲ್ : 94482 03730
e-mail : raghu202@bsnl.in
















### ಪುಸ್ತಕ ಬೆಲೆ ಪಟ್ಟಿ – 2015*

| | |
|---|---|
| **ಶ್ರೀ ಕೆ. ಪಿ. ಪೂರ್ಣಚಂದ್ರ ತೇಜಸ್ವಿ:** | |
| ಕಿರಗೂರಿನ ಗಯ್ಯಾಳಿಗಳು | 90.00 |
| ಕರ್ವಾಲೊ | 105.00 |
| ಚಿದಂಬರ ರಹಸ್ಯ | 216.00 |
| ಸಹಜ ಕೃಷಿ | 60.00 |
| ಪರಿಸರದ ಕತೆ | 105.00 |
| ಮಿಸ್ಸಿಂಗ್ ಲಿಂಕ್ | 90.00 |
| ಅಲೆಮಾರಿಯ ಅಂಡಮಾನ್ ಹಾಗೂ ಮಹಾನದಿ ನೈಲ್ | 114.00 |
| ಜುಗಾರಿ ಕ್ರಾಸ್ | 216.00 |
| ಏರೋಪ್ಲೇನ್ ಚಿಟ್ಟೆ ಮತ್ತು ಇತರ ಕತೆಗಳು | 87.00 |
| ಫ್ಲೈಯಿಂಗ್ ಸಾಸರ್ಸ್ (1) | 87.00 |
| ಫ್ಲೈಯಿಂಗ್ ಸಾಸರ್ಸ್ (2) | 87.00 |
| ಕಾಡಿನ ಕತೆಗಳು 1 – ಬೆಳ್ಳಂದೂರಿನ ನರಭಕ್ಷಕ | 75.00 |
| ಕಾಡಿನ ಕತೆಗಳು 2 – ಪೆದ್ದಚೆರುವಿನ ರಾಕ್ಷಸ | 75.00 |
| ಕಾಡಿನ ಕತೆಗಳು 3 – ಜಾಲಹಳ್ಳಿಯ ಕುರ್ಕ | 75.00 |
| ಕಾಡಿನ ಕತೆಗಳು 4 – ಮುನಿಶಾಮಿ ಮತ್ತು ಮಾಗಡಿ ಚಿರತೆ | 75.00 |
| ರುದ್ರಪ್ರಯಾಗದ ಭಯಾನಕ ನರಭಕ್ಷಕ | 105.00 |
| ಕನ್ನಡನಾಡಿನ ಹಕ್ಕಿಗಳು (1) – ಮಿಂಚುಳ್ಳಿ | 102.00 |
| - ,, - (2) – ಹೆಜ್ಜೆ ಮೂಡದ ಹಾದಿ | 96.00 |
| ಹಕ್ಕಿ-ಪುಕ್ಕ | 396.00 |
| ಅಣ್ಣನ ನೆನಪುಗಳು | 225.00 |
| ಹುಲಿಯೂರಿನ ಸರಹದ್ದು | 105.00 |
| ಅಬಚೂರಿನ ಪೋಸ್ಟಾಫೀಸು | 90.00 |
| ಮಿಲನಿಯಮ್ (1) – ಹುಡುಕಾಟ | 87.00 |
| ಮಿಲನಿಯಮ್ (2) – ಜೀವನ ಸಂಗ್ರಾಮ | 87.00 |
| ಮಿಲನಿಯಮ್ (3) – ಪೆಸಿಫಿಕ್ ದ್ವೀಪಗಳು | 87.00 |
| ಮಿಲನಿಯಮ್ (4) – ಚಂದ್ರನ ಚೂರು | 87.00 |
| ಮಿಲನಿಯಮ್ (5) – ನೆರೆಹೊರೆಯ ಗೆಳೆಯರು | 87.00 |
| ಮಿಲನಿಯಮ್ (6) – ಮಹಾಯುದ್ಧ (1) | 87.00 |
| ಮಿಲನಿಯಮ್ (7) – ಮಹಾಯುದ್ಧ (2) | 87.00 |
| ಮಿಲನಿಯಮ್ (8) – ಮಹಾಯುದ್ಧ (3) | 87.00 |
| ಮಿಲನಿಯಮ್ (9) – ದೇಶ ವಿದೇಶ (1) | 87.00 |
| ಮಿಲನಿಯಮ್ (10) – ದೇಶ ವಿದೇಶ (2) | 87.00 |
| ಮಿಲನಿಯಮ್ (11) – ದೇಶ ವಿದೇಶ (3) | 87.00 |
| ಮಿಲನಿಯಮ್ (12) – ದೇಶ ವಿದೇಶ (4) | 87.00 |
| ಮಿಲನಿಯಮ್ (13) – ವಿಸ್ಮಯ ವಿಶ್ವ (1) | 87.00 |
| ಮಿಲನಿಯಮ್ (14) – ಮಹಾಪಲಾಯನ | 87.00 |
| ಮಿಲನಿಯಮ್ (15) – ವಿಸ್ಮಯ ವಿಶ್ವ (2) | 87.00 |
| ಮಿಲನಿಯಮ್ (16) – ಅಡ್ವೆಂಚರ್ | 87.00 |
| ಮಾಯಾಲೋಕ – 1 | 216.00 |

* ಹೊಸ ಆವೃತ್ತಿ (Edition) ಬಿಡುಗಡೆಗೊಂಡಾಗ್ಯೂ ಮುಖಪುಟ ಬೆಲೆಯಲ್ಲಿ ವ್ಯತ್ಯಾಸವಿರುವುದು.

| | |
|---|---|
| ಪಾಕ ಕ್ರಾಂತಿ ಮತ್ತು ಇತರ ಕತೆಗಳು | 87.00 |
| ವ್ಯಕ್ತಿ ವಿಶಿಷ್ಟಸಿದ್ಧಾಂತ ಮತ್ತು ಯಮಳ ಪ್ರಶ್ನೆ | 60.00 |
| ಬೃಹನ್ನಳೆ ಸೋಮುವಿನ ಸ್ವಗತ ಲಹರಿ ಮತ್ತು ಇತರ ಕವನಗಳು | 60.00 |
| ವಿಮರ್ಶೆಯ ವಿಮರ್ಶೆ | 183.00 |
| 'ಮಾಯೆಯ ಮುಖಗಳು' (ಚಿತ್ರಲೇಖನ) | 690.00 |
| ಹೊಸ ವಿಚಾರಗಳು | 480.00 |
| ಕಾಡು ಮತ್ತು ಕ್ರೌರ್ಯ | 120.00 |
| **ಶ್ರೀ ಕೆ. ಪಿ. ಪೂರ್ಣಚಂದ್ರ ತೇಜಸ್ವಿ- ಶ್ರೀ ಪ್ರದೀಪ ಕೆಂಜಿಗೆ:** | |
| ವಿಸ್ಮಯ (1) (2) (3) ಪ್ರತಿಯೊಂದೂ | 87.00 |
| ಪ್ಯಾಪಿಲಾನ್ (1) (2) (3) ಪ್ರತಿಯೊಂದೂ | 162.00 |
| **ಶ್ರೀ ಕೆ. ಪಿ. ಪೂರ್ಣಚಂದ್ರ ತೇಜಸ್ವಿ- ಡಾ|| ವಿ. ವಿ. ಬೆಳವಾಡಿ:** | |
| ನಡೆಯುವ ಕಡ್ಡಿ ! ಹಾರುವ ಎಲೆ ! | 87.00 |
| **ಶ್ರೀ ಪ್ರದೀಪ ಕೆಂಜಿಗೆ:** | |
| ಬರ್ಮುಡಾ ಟ್ರ್ಯಾಂಗಲ್ | 87.00 |
| ಅದ್ಭುತ ಯಾನ | 108.00 |
| ಹೆಬ್ಬಾವಿನೊಡನೆ ಹೋರಾಟ | 120.00 |
| **ಶ್ರೀ ಎಮ್. ಶಿವಕುಮಾರ್** | |
| ಕಂಪ್ಯೂಟರ್ ಕಲಿಯಿರಿ | 147.00 |
| 'ಗಡಿಯಾರ' ವಿಕಾಸದ ಹಾದಿಯಲ್ಲಿ | 66.00 |
| **ವಿದ್ವಾನ್ ಶ್ರೀ ಕೊಳಂಬೆ ಪುಟ್ಟಣ್ಣ ಗೌಡರು:** | |
| ಅಚ್ಚಕನ್ನಡ ನುಡಿಕೋಶ | 360.00 |
| **ಶ್ರೀ ನರೇಂದ್ರ ರೈ ದೇರ್ಲ:** ಸಾವಯವ ಕೃಷಿ | 60.00 |
| ತೇಜಸ್ವಿ ಪತ್ರಗಳು | 450.00 |
| **ಶ್ರೀ ಕೃಪಾಕರ – ಸೇನಾನಿ:** | |
| ಸೆರೆಯಲ್ಲಿ ಕಳೆದ ಹದಿನಾಲ್ಕು ದಿನಗಳು | 108.00 |
| ಕೆನ್ನಾಯಿಯ ಜಾಡಿನಲ್ಲಿ | 162.00 |
| **ಡಾ|| ಎಸ್. ಎಂ. ವೃಷಭೇಂದ್ರ ಸ್ವಾಮಿ:** | |
| ತರಗತಿಗಳಲ್ಲಿ ಕುವೆಂಪು | 198.00 |
| **ಶ್ರೀ ದೇವನೂರು ಮಹಾದೇವ** | |
| ಕುಸುಮಬಾಲೆ | 90.00 |
| ದ್ಯಾವನೂರು ಹಾಗೂ ಒಡಲಾಳ | 96.00 |
| **ಶ್ರೀಮತಿ ತಾರಿಣಿ ಚಿದಾನಂದ:** | |
| ಮಗಳು ಕಂಡ ಕುವೆಂಪು | 370.00 |
| **ಶ್ರೀಮತಿ ಪದ್ಮಾಶ್ರೀರಾಮು:** | |
| ಗಿಡಗಂಟೆಯ ಕೊರಳು | 78.00 |
| **ಡಾ|| ಕೆ. ಚಿದಾನಂದ ಗೌಡ:** | |
| ಬದುಕು.. ಬೆಳಕು... ಚುಟುಕು....! ಭಾಗ 1 | 89.00 |
| ಬದುಕು.. ಬೆಳಕು... ಚುಟುಕು....! ಭಾಗ 2 | 90.00 |
| **ಶ್ರೀಮತಿ ರಾಜೇಶ್ವರಿ ತೇಜಸ್ವಿ:** ನನ್ನ ತೇಜಸ್ವಿ | 369.00 |

ಅಂಚೆಮೂಲಕ ತರಿಸಿಕೊಳ್ಳುವವರಿಗೆ ವಿ. ಸೂ : ನಮ್ಮ ಯಾವ ಪುಸ್ತಕ ಬೇಕಾದರೂ ತಿಳಿಸಿ. ವಿ.ಪಿ.ಎಲ್. ಮಾಡುತ್ತೇವೆ. ಅಂಚೆಯವರು ತಿಳಿಸಿದಾಗ ಹಣ ಕಟ್ಟಿ ಪುಸ್ತಕ ಪಡೆಯಬಹುದು. ಅಂಚೆ ಮತ್ತು ಪ್ಯಾಕಿಂಗ ವೆಚ್ಚ ಉಚಿತ



ಕಾಯಕ ಮಾಡಿಕೊಂಡಲ್ಲಿ ಅದು ನರೇಂದ್ರ ಮೋದಿಯನ್ನು ಮತ್ತೆ ಅಧಿಕಾರಕ್ಕೆ ತರುವ ಪರೋಕ್ಷ ಪ್ರಚಾರವಾಗುತ್ತದೆ. ದೇಶದ ಯುವಜನರನ್ನು ಕಾಡುತ್ತಿರುವ ನಿರುದ್ಯೋಗ ಸಮಸ್ಯೆ, ರೈತರನ್ನು ಬಾಧಿಸುತ್ತಿರುವ ಕೃಷಿಕ್ಷೇತ್ರದ ಸಮಸ್ಯೆ, ಜನಸಾಮಾನ್ಯರನ್ನು ಕಾಡುತ್ತಿರುವ ಬೆಲೆಯೇರಿಕೆ ಸಮಸ್ಯೆ, ದಲಿತರು ಮತ್ತು ಅಲ್ಪಸಂಖ್ಯಾತರನ್ನು ಕಾಡುತ್ತಿರುವ ಅಭದ್ರತೆಯ ಸಮಸ್ಯೆಗಳನ್ನು ಪರಿಹರಿಸುವ ಪರ್ಯಾಯ ಆರ್ಥಿಕ ನೀತಿಯ ಬಗ್ಗೆ ಕಾಂಗ್ರೆಸ್ ಯೋಚಿಸಿ, ಕಾರ್ಯೋನ್ಮುಖ ವಾಗುತ್ತದೆಯೆಂಬುದು ಭ್ರಮೆಯಷ್ಟೆ. ಮುಂಬರುವ ಚುನಾವಣೆಯಲ್ಲಿ ಈ ಸಮಸ್ಯೆಗಳನ್ನು ಎದುರಿಸುವ ಆರ್ಥಿಕ ನೀತಿ ಮತ್ತು ರಾಜಕೀಯ ಕ್ರಮ ಕಾರ್ಯಕ್ರಮ ರೂಪಿಸಲು ಕೇವಲ ಎಡಪಕ್ಷಗಳಿಂದ ಮಾತ್ರ ಸಾಧ್ಯ. ಎಡಪಕ್ಷಗಳು ಅಂತಹ ಆರ್ಥಿಕ ನೀತಿ ಮತ್ತು ರಾಜಕೀಯ ಕಾರ್ಯಕ್ರಮದ ಆಧಾರದ ಮೇಲೆ ಬಿಜೆಪಿಯೇತರ ಪಕ್ಷಗಳ ಜೊತೆ ಚುನಾವಣಾ ಹೊಂದಾಣಿಕೆ ಮಾಡುವುದು ಅಗತ್ಯ.

**ರೈತರ ಆಕ್ರೋಶ**

ಗುಜರಾತ್, ರಾಜಸ್ತಾನ, ಮಧ್ಯಪ್ರದೇಶ ಮತ್ತು ಛತ್ತೀಸ್‌ಘಡದಲ್ಲಿ ಬಿಜೆಪಿಯ ಪ್ರಾಬಲ್ಯ ಕುಸಿಯುತ್ತಿರುವುದು ಪಕ್ಷದ ಸರ್ಕಾರಗಳ ರೈತ ವಿರೋಧಿ ನೀತಿಯಿಂದಾಗಿ. ರೈತರ ಆದಾಯವನ್ನು ಇಮ್ಮಡಿಗೊಳಿಸುವ ಆಶ್ವಾಸನೆ ಕೊಟ್ಟಿದ್ದ ನರೇಂದ್ರ ಮೋದಿ ರೈತರಿಗೆ ಬರುತ್ತಿದ್ದ ಅಲ್ಪಸ್ವಲ್ಪ ಆದಾಯಕ್ಕೆ ಕುತ್ತು ತಂದು ಅವರಿಗೆ ಕೈ ಕೊಟ್ಟದ್ದು ರೈತರ ಬವಣೆ ಮತ್ತು ಆಕ್ರೋಶವನ್ನು ಹೆಚ್ಚಿಸಿತ್ತು. ಮೋದಿಯ ನೋಟುಗಳ ಅಮಾನ್ಯೀಕರಣದ ಹುಚ್ಚು ನಿರ್ಧಾರಕ್ಕೆ ಬಲಿ ಆದವರು ರೈತರು, ಕಾರ್ಮಿಕರು, ಸಣ್ಣ ಉದ್ದಿಮೆದಾರರು ಮತ್ತು ವ್ಯಾಪಾರಸ್ಥರು. ಅಮಾನ್ಯೀಕರಣದ ದುಷ್ಪರಿಣಾಮದಿಂದ ರೈತರು ಇನ್ನೂ ಹೊರಬರಲಾಗಿಲ್ಲ. ಸ್ವಾಮಿನಾಥನ್ ವರದಿ ಜಾರಿಗೊಳಿಸಲಾಗಿದೆ ಎಂಬ ಪ್ರಚಾರವೂ ಸುಳ್ಳು. ಕೃಷಿ ವಿಮೆಯ ಹೆಸರಿನಲ್ಲಿ ಖಾಸಗಿ ವಿಮಾ ಕಂಪನಿಗಳ ಬೊಕ್ಕಸ ತುಂಬಿತೇ ಹೊರತು ರೈತರ ಸಂಕಷ್ಟವನ್ನು ದೂರ ಮಾಡಲಿಲ್ಲ. ಹೋರಾಟದ ಹಾದಿ ಹಿಡಿದ ಮಹಾರಾಷ್ಟ್ರದ ರೈತರು ನಾಸಿಕ್‌ನಿಂದ ಪಾದಯಾತ್ರೆಯಲ್ಲಿ ಮುಂಬಯಿ ಪ್ರವೇಶಿಸಿದ ಆಕ್ರಾಂತ ರೈತರ ಶಿಸ್ತಿನ ಮೆರವಣಿಗೆ ಮುಂಬಯಿ ಜನರ ಹೃದಯವನ್ನು ಗೆದ್ದರೂ ನರೇಂದ್ರ ಮೋದಿಯ ಗಮನ ಅವರತ್ತ ಹರಿಯಲಿಲ್ಲ. ಆದರೆ ರೈತರ ಈ ಹೋರಾಟ ಮಹಾರಾಷ್ಟ್ರದ ಬಿಜೆಪಿ/ಶಿವಸೇನ ಸರ್ಕಾರವನ್ನು ಬೆಚ್ಚಿಸಿದ್ದಂತೂ ನಿಜ. ನಂತರ ನವೆಂಬರ್ ೨೯ ಮತ್ತು ೩೦ರಂದು ಅಖಿಲ ಭಾರತ ಕಿಸಾನ್ ಸಭಾದ ನೇತೃತ್ವದಲ್ಲಿ ನಡೆದ "ದೆಹಲಿ ಚಲೋ" ಕಾರ್ಯಕ್ರಮದಲ್ಲಿ ಲಕ್ಷಾಂತರ ರೈತರು ಕೇಂದ್ರ ಸರ್ಕಾರದ ರೈತ–ವಿರೋಧಿ ನೀತಿಯನ್ನು ಖಂಡಿಸಿ ನಡೆಸಿದ ಪ್ರತಿಭಟನೆ ನರೇಂದ್ರ ಮೋದಿ ಸರ್ಕಾರಕ್ಕೆ ಕೊಟ್ಟ ಎಚ್ಚರಿಕೆ. ಇಷ್ಟಾದರೂ ರೈತರ ಸಾಲ ಮನ್ನಾ ಮಾಡುವುದಿಲ್ಲವೆಂದು ಕೇಂದ್ರ ಸರ್ಕಾರ ಘೋಷಿಸಿದೆ. ಈ ದೇಶದ ಕೆಲವೇ ಕೆಲವು ಶ್ರೀಮಂತರು ಸಾರ್ವಜನಿಕ ಕ್ಷೇತ್ರದ ಬ್ಯಾಂಕ್‌ಗಳಿಂದ ಪಡೆದ ಲಕ್ಷಾಂತರ ಕೋಟಿ ರೂಪಾಯಿಗಳ ಸಾಲ ಮನ್ನಾ ಮಾಡಿರುವ ನರೇಂದ್ರ ಮೋದಿ ಸರ್ಕಾರ ರೈತರ ಸಾಲ ಮನ್ನಾ ಮಾಡಲು ನಿರಾಕರಿಸಿರುವುದು ಸರ್ಕಾರ ಯಾರ ಪರವಾಗಿದೆ ಎಂಬುದು ನಿಚ್ಚಳವಾಗಿದೆ. ರೈತರ ಸಾಲ ಮನ್ನಾ ಮಾಡುವುದು ಕೇವಲ ತಾತ್ಕಾಲಿಕ ಪರಿಹಾರವಷ್ಟೆ. ಇಡೀ ಕೃಷಿ ನೀತಿಯ ಸಮರ್ಪಕ ಮತ್ತು ಆಮೂಲಾಗ್ರ ಬದಲಾವಣೆಯಿಂದ ಮಾತ್ರ ಕೃಷಿ ಲಾಭದಾಯಕವಾಗಬಹುದು ಮತ್ತು ರೈತರ ಸಮಸ್ಯೆಗಳಿಗೆ ಪರಿಹಾರ ಸಿಗಬಹುದು. ೨೦೧೯ರ ಲೋಕಸಭಾ ಚುನಾವಣೆಯಲ್ಲಿ ರೈತರ ಪಾತ್ರ ಮಹತ್ವವೆಂಬುದು ನಿಸ್ಸಂದೇಹ.

**ಸ್ವಾಯತ್ತ ಸಂಸ್ಥೆಗಳ ಅವನತಿ**

ಸಂಘಪರಿವಾರಕ್ಕೆ ಭಾರತದ ಸಂವಿಧಾನದ ಬಗ್ಗೆ ಕಿಂಚಿತ್ತೂ ಗೌರವವಿಲ್ಲ. ಅದು ನರೇಂದ್ರ ಮೋದಿಯವರಿಗೂ ಅನ್ವಯ. ಪ್ರಜಾಪ್ರಭುತ್ವದ ಸಂಸ್ಥೆಗಳು ನಾಶಗೊಳ್ಳುತ್ತಿವೆ. ಯೋಜನಾ ಆಯೋಗ, ವಿಶ್ವವಿದ್ಯಾಲಯಗಳು, ರಿಸರ್ವ್ ಬ್ಯಾಂಕ್, ಸೆಂಟ್ರಲ್ ಬ್ಯೂರೋ ಆಫ್ ಇನ್ವೆಸ್ಟಿಗೇಶನ್, ಯೂನಿವರ್ಸಿಟಿ ಗ್ರಾಂಟ್ಸ್ ಕಮಿಷನ್, ನ್ಯಾಯಾಲಯಗಳು ಹೀಗೆ ಹಲವಾರು ಪ್ರಜಾಪ್ರಭುತ್ವ ಸಂಸ್ಥೆಗಳು ಮೋದಿ ಸರ್ಕಾರದ ದಾಳಿಗೆ ಗುರಿಯಾಗಿವೆ. ಇತ್ತೀಚಿನ ಸಿ.ಬಿ.ಐ.ನಲ್ಲಿನ ಅಂತರ್ಯುದ್ಧ, ಕೇಂದ್ರ ಸರ್ಕಾರ ಮತ್ತು ಸಿ.ಬಿ.ಐ. ನಡುವಿನ ಗುದ್ದಾಟ, ಮೋದಿ ಸರ್ಕಾರದ ಹಸ್ತಕ್ಷೇಪದ ನೇರ ಪರಿಣಾಮಗಳು. ಹಾಗೆಯೇ ಸುಮಾರು ಅರವತ್ತು ವರ್ಷಗಳಿಂದ ಜಾರಿಯಲ್ಲಿದ್ದ ಯೂನಿವರ್ಸಿಟಿ ಗ್ರಾಂಟ್ಸ್ ಕಮಿಷನನ್ನು ರದ್ದುಗೊಳಿಸಿ ಹೈಯರ್ ಎಜುಕೇಶನ್ ಕಮಿಷನ್ ಆಫ್ ಇಂಡಿಯಾ ಎಂಬ ಹೊಸ ಸಂಸ್ಥೆಯನ್ನು ಸ್ಥಾಪಿಸಿರುವ ಉದ್ದೇಶವೆಂದರೆ ಉನ್ನತ ಶಿಕ್ಷಣವನ್ನು ಖಾಸಗೀಕರಿಸುವುದು, ಬಡವರು ಮತ್ತು ದಲಿತರಿಗೆ ಉನ್ನತ ಶಿಕ್ಷಣದ ಹಕ್ಕನ್ನು ವಂಚಿಸುವುದು. ಇನ್ನೂ ಹುಟ್ಟದೇ ಇರುವ, ತನ್ನದೇ ಕ್ಯಾಂಪಸ್ ಇಲ್ಲದ, ಕುಲಪತಿ, ಉಪಕುಲಪತಿ, ಅಧ್ಯಾಪಕರು, ವಿದ್ಯಾರ್ಥಿಗಳೇ ಇಲ್ಲದ ಮುಖೇಶ್ ಅಂಬಾನಿಯ ಜಿಯೋ ಇನ್‌ಸ್ಟಿಟ್ಯೂಟ್‌ಅನ್ನು "ಉತ್ಕೃಷ್ಟ ಸಂಸ್ಥೆ" ಎಂಬ ಬಿರುದು ನೀಡಿ ಅದನ್ನು ನರೇಂದ್ರ ಮೋದಿ ಉದ್ಘಾಟಿಸಿದ್ದು ೨೦೧೮ರ ಅತ್ಯಂತ ಹಾಸ್ಯಾಸ್ಪದ ಘಟನೆ. ನೆಹರು ಕುಟುಂಬವನ್ನು ಹಂಗಿಸುವ ಮೋದಿಯವರಿಗೂ ಕುಟುಂಬವಿದೆ. ಲಲಿತ್ ಮೋದಿ, ನೀರವ್ ಮೋದಿ, ಚೋಕ್ಸಿ, ವಿಜಯ ಮಲ್ಯ, ಅಂಬಾನಿಗಳು, ಅದಾನಿ ಹೀಗೆ ಹಲವಾರು ಜನ ದೇಶವನ್ನು ಲೂಟಿಮಾಡಿ ದೇಶಬಿಟ್ಟು ಓಡಿಹೋದವರು ಮತ್ತು ಮುಂದೆ ಓಡಿಹೋಗಲಿರುವವರು ಮೋದಿ ಕುಟುಂಬದ ಸದಸ್ಯರು.

ಮೋದಿ ಸರ್ಕಾರ ನ್ಯಾಯಾಲಯಗಳನ್ನು ತನ್ನ ಹಿಡಿತಕ್ಕೆ ತೆಗೆದುಕೊಳ್ಳುವ ಪ್ರಯತ್ನ ನಡೆದಿದೆ. ೨೦೧೮ ಜನವರಿ ೧೨ರಂದು ಸರ್ವೋಚ್ಚ ನ್ಯಾಯಾಲಯದ ನಾಲ್ವರು ಹಿರಿಯ ನ್ಯಾಯಮೂರ್ತಿಗಳು ಪತ್ರಿಕಾಗೋಷ್ಠಿ ಕರೆದು ಮುಖ್ಯ ನ್ಯಾಯಮೂರ್ತಿ ದೀಪಕ್ ಮಿಶ್ರ ಅವರ ಮೇಲೆ ಮಾಡಿದ ಟೀಕೆ ಅದ್ವಿತೀಯ ಘಟನೆ, ಸರ್ವೋಚ್ಚ ನ್ಯಾಯಾಲಯದ ನ್ಯಾಯಮೂರ್ತಿಗಳ ಮೇಲಿನ ರಾಜಕೀಯ ಒತ್ತಡದ ಬಗ್ಗೆ ಇತ್ತೀಚೆಗೆ ವಿಶ್ರಾಂತರಾದ ಸರ್ವೋಚ್ಚ ನ್ಯಾಯಾಲಯದ ನ್ಯಾಯಮೂರ್ತಿ ಜೋಸೆಫ್ ಕುರಿಯನ್ ಪ್ರಸ್ತಾಪಿಸಿರುವುದು ಕಳವಳಕಾರಿ. ಟ್ರಿಪಲ್ ತಲಾಖ್, ಶಬರಿಮಲೆ, ಖಾಸಗಿಹಕ್ಕು ಕುರಿತು ಉತ್ತಮ ನಿರ್ಣಯಗಳನ್ನು ನೀಡಿ ಹಾಗೆಯೇ ಆಧಾರ್, ರಫೇಲನಂತಹ ಅಸಮರ್ಪಕ ತೀರ್ಪುಗಳನ್ನು ನೀಡಿದ ಸರ್ವೋಚ್ಚ ನ್ಯಾಯಾಲಯ ೨೦೧೮ರಲ್ಲಿ ಸದಾ ಸುದ್ದಿಯಲ್ಲಿತ್ತು.

ಕೇರಳ ಮತ್ತು ಕೊಡಗು ಪ್ರದೇಶ ಪ್ರಕೃತಿಯ ವಿಕೋಪಕ್ಕೆ ತುತ್ತಾಗಿ ನೂರಾರು ಜನರು ಮೃತರಾದದ್ದು ಆಸ್ತಿ ಹಾನಿಗೊಳಗಾದದ್ದು ದುಃಖದ ಘಟನೆ. ಕೇರಳ ಮತ್ತು ಕರ್ನಾಟಕ ಸರ್ಕಾರ ಮೃತರ ಕುಟುಂಬಗಳಿಗೆ ಸೂಕ್ತ ಪರಿಹಾರ ನೀಡಿ, ಪುನರ್ವಸತಿಯ ಕಾರ್ಯವನ್ನು ಶೀಘ್ರ ಕೈಗೊಂಡು, ಈ ರೀತಿಯ ದುರಂತವನ್ನು ತಪ್ಪಿಸುವ ಕ್ರಮದ ಬಗ್ಗೆ ಯೋಚಿಸಿ, ಕಾರ್ಯೋನ್ಮುಖವಾಗಬೇಕು.

**ಮುರಳೀಧರ ಚಿಕ್ಕಮಗಳೂರು**
ವಕೀಲರು, ನಂ. ೩, ಎರಡನೇ ಮಹಡಿ, ಡಯಾಗನಲ್ ರಸ್ತೆ, ಜನತಾ ಹೋಟೆಲ್ ಎದುರು,
ವಿ. ವಿ. ಪುರಂ, ಬೆಂಗಳೂರು – ೫೬೦ ೦೦೪




# ಮನುಸ್ಮೃತಿಯ ಪರಿಚಯ

“ನಮಗೆ ಮನುವೇ ಸಂವಿಧಾನ ಕೊಟ್ಟಿರುವಾಗ ಬೇರೆ ಸಂವಿಧಾನ ಏಕೆ ಬೇಕು?” ಎಂದು ತಿಳಿಯದವರು ಹೇಳುವುದಿರಲಿ, ಕೆಲವು ಉಚ್ಚ ನ್ಯಾಯಾಲಯಗಳ ನ್ಯಾಯಮೂರ್ತಿಗಳೇ ಹೇಳಿರುವುದುಂಟು. ಸಂವಿಧಾನವೆನಿಸಿಕೊಳ್ಳಲು ‘ಮನುಸ್ಮೃತಿ’ಯಲ್ಲಿ ಯಾವ ಲಕ್ಷಣಗಳಿವೆ ಮತ್ತು ಅವನ್ನು ಇಂದು ಅಳವಡಿಸಿಕೊಳ್ಳಲು ಸಾಧ್ಯವೆ? ಚಾರಿತ್ರಿಕವಾಗಿ ನಮ್ಮ ಸಮಾಜವು ಇಪ್ಪತ್ತು ಶತಮಾನಗಳಲ್ಲಿ ಎಷ್ಟೆಲ್ಲಾ ಹಾದಿಗಳಲ್ಲಿ ಸಾಗಿಬಂದಿದೆ ಎಂಬುದನ್ನು ಗಮನಿಸಿದಾಗ ಈ ಗ್ರಂಥವು ಸಂವಿಧಾನದ ಅಂತಸ್ತನ್ನು ಏರಬಲ್ಲುದೆ ಎಂಬ ಪ್ರಶ್ನೆಯು ಅಪ್ರಸ್ತುತವಲ್ಲ. ಗ್ರಂಥದ ಪರಿಚಯ ಮಾಡಿಕೊಂಡು ತೀರ್ಮಾನಿಸುವುದು ಯೋಗ್ಯ ಮಾರ್ಗ. ಸಮಗ್ರ ಪರಿಚಯವು ಕ್ಲಿಷ್ಟಕರ ಮತ್ತು ಅನವಶ್ಯಕ ಎನಿಸಿದರೂ ಅಚ್ಚರಿಯಿಲ್ಲ. ಭಾರತರತ್ನ ಪಿ. ವಿ. ಕಾಣೆ ಅವರು ಧರ್ಮಶಾಸ್ತ್ರಗಳ ಇತಿಹಾಸವನ್ನು ಹಲವು ಸಂಪುಟಗಳಲ್ಲಿ ಪ್ರಕಟಿಸಿದ್ದಾರೆ. ಅವನ್ನು ಧರ್ಮಶಾಸ್ತ್ರಗಳ ವಿಶ್ವಕೋಶವೆಂದು ಹೆಸರಿಸಲಡ್ಡಿಯಿಲ್ಲ. ಮೂಲಗ್ರಂಥಗಳನ್ನು ಓದಲಾಗದಿದ್ದರೆ ಕಾಣೆಯವರ ಕೈ ಹಿಡಿದು ನಡೆಯುವುದು ಸುಲಭದ ಹಾದಿ. ಕಾಣೆಯವರು ಗ್ರಂಥಗಳನ್ನು ಸಮಗ್ರವಾಗಿ ಪರಿಚಯಿಸುತ್ತಾರೆಯೇ ವಿನಾ ಅಲ್ಲಿರುವುದನ್ನೆಲ್ಲಾ ನಾವಿಂದು ಅನ್ವಯಿಸಿಕೊಳ್ಳಬೇಕೆಂದು ಹೇಳಿಲ್ಲವೆಂಬುದನ್ನು ಒತ್ತಿ ಹೇಳಬೇಕು. ಮನುಸ್ಮೃತಿಯ ಬಗ್ಗೆ ಸ್ವತಂತ್ರವಾಗಿ ನಿಲುವು ತಾಳಲು ಅದರ ಪರಿಚಯವು ಸಹಾಯ ಮಾಡೀತು. ಹೆಚ್ಚಿನ ವಿವರಗಳಿಗೆ ಮೂಲ ಗ್ರಂಥವನ್ನು ಆಶ್ರಯಿಸುವುದು ಅನಿವಾರ್ಯ.

**ಜಿ. ರಾಮಕೃಷ್ಣ**

**ಸಂ**ಪ್ರದಾಯವು ವೈದಿಕ ಸಾಹಿತ್ಯದ ಅಧ್ಯಯನಕ್ಕೆ ವೇದಾಂಗಗಳ ಸಹಾಯ ಪಡೆಯಬೇಕೆಂದು ಹೇಳುತ್ತಾ ಬಂದಿದೆ. ಅವು ಆರು, ಆದರೆ ಅವುಗಳಲ್ಲಿ ವ್ಯಾಕರಣ ಮತ್ತು ನಿರುಕ್ತಗಳನ್ನು ಬಿಟ್ಟರೆ ಉಳಿದವು ಅಷ್ಟೇನೂ ಅಗತ್ಯವಾಗುವುದಿಲ್ಲ. ಛಂದಸ್ ಮತ್ತು ಶಿಕ್ಷಾ ಸ್ವಲ್ಪ ಉಪಯುಕ್ತವಿರಬಹುದು, ಆದರೆ ಕಲ್ಪ ಮತ್ತು ಜ್ಯೋತಿಷ ಬಹುಮಟ್ಟಿಗೆ ಅಪ್ರಸ್ತುತ. ಋಗ್ವೇದದ ಅಥವಾ ಅಥರ್ವವೇದದ ಮಂತ್ರಗಳ ಅರ್ಥವನ್ನು ತಿಳಿಯಲು ಕಲ್ಪ ಹೇಗೆ ತಾನೆ ಸಹಾಯ ಮಾಡೀತು? ಅವೆರಡೂ ಭಿನ್ನ ಸಾಮಾಜಿಕ ಸಂರಚನೆಗಳ ಹಿನ್ನೆಲೆಯನ್ನು ಹೊಂದಿವೆ. ಧರ್ಮಶಾಸ್ತ್ರಗಳು ಚಿತ್ರಿಸುವಂತಹ ಸಮಾಜವು ವೇದದ ಕಾಲದಲ್ಲಿ ಇರಲಿಲ್ಲ. ಜ್ಯೋತಿಷವು ಕೆಲವು ಮಂತ್ರಗಳ ಸಂದರ್ಭದಲ್ಲಿ ಉಪಯುಕ್ತವಾಗುತ್ತದೆ, ಅಷ್ಟೆ. ಇಲ್ಲಿ ಜ್ಯೋತಿಷವೆಂದರೆ ಜ್ಯೋತಿಷ್ಯವಲ್ಲವೆಂಬುದನ್ನು ಗಮನಿಸಬೇಕು. “ಕಲ್ಪ” ಎಂಬುದು ಶ್ರೌತ ಮತ್ತು ಸ್ಮಾರ್ತ ಎಂದು ಭಿನ್ನೈಸಲ್ಪಟ್ಟಿದೆ. ಶ್ರೌತಸೂತ್ರಗಳು ವಿವಿಧ ಆಚರಣೆಗಳ ಸಂದರ್ಭಗಳಲ್ಲಿ ಮಂತ್ರಗಳ ವಿನಿಯೋಗವನ್ನು ಹೇಳುವ ಗ್ರಂಥಗಳು ಮತ್ತು ‘ಸ್ಮಾರ್ತ’ ಎಂಬುದು ‘ಸ್ಮೃತಿ’ ಎಂಬುದರ ರೂಪ. ವೇದಗಳು ಶ್ರುತಿ ಎನಿಸಿಕೊಂಡರೆ ಧರ್ಮಶಾಸ್ತ್ರ ಗ್ರಂಥಗಳು ಸ್ಮೃತಿ ಎನಿಸಿಕೊಳ್ಳುತ್ತವೆ. ವೇದದ ಇಂಗಿತವನ್ನು ಅನುಸರಿಸಿ ಧರ್ಮಶಾಸ್ತ್ರಗಳು ರಚನೆಯಾಗಿವೆಯೆಂಬ ಐತಿಹ್ಯವೊಂದು ಪ್ರಚಲಿತವಾಗಿದೆ. ಆದರೆ ಅದರಲ್ಲಿ ಹುರುಳಿಲ್ಲ, ಏಕೆಂದರೆ ವೇದಕಾಲೀನ ಸಮಾಜದ ಸಂರಚನೆಗೂ ಧರ್ಮಶಾಸ್ತ್ರಗಳ ಕಾಲದ ಸಂರಚನೆಗೂ ಬಹಳ ವ್ಯತ್ಯಾಸಗಳಿವೆ. ವಿಕಾಸ ಹೊಂದುವ ಎಲ್ಲ ಸಮಾಜಗಳಲ್ಲೂ ನಂತರದ್ದು ಮುಂಚಿನದಕ್ಕಿಂತಲೂ ಭಿನ್ನವಾಗಿರುವುದು ಸಹಜ. ಹೀಗಿರುವಾಗ ‘ನಂತರದ’ ಕಾಲದ ಸನ್ನಿವೇಶದಲ್ಲಿ ನಡತೆ ಹೇಗಿರಬೇಕೆಂದಾಗಲಿ ಹೇಗಿರುತ್ತದೆಯೆಂದಾಗಲಿ ವೇದವು ಏಕೆ ತಾನೆ ಹೇಳಹೊರಡುತ್ತದೆ? ಆಲ್ಡಸ್ ಹಕ್ಸ್ಲಿ ‘ದ ಬ್ರೇವ್ ನ್ಯೂ ವರ್ಲ್ಡ್’ ಬರೆದಂತೆ ವೇದದ ಕವಿಗಳು ಭವಿಷ್ಯವನ್ನು ಬರೆಯಲು ಮುನ್ನುಗ್ಗಲಿಲ್ಲ. ಹಕ್ಸ್ಲಿ ನಿರೀಕ್ಷಿಸಿದ ಮಾನವ ಪ್ರಪಂಚ ಜನ್ಮತಾಳಲು ಇನ್ನೆಷ್ಟು ಶತಮಾನಗಳು ಬೇಕಾದೀತೋ ತಿಳಿಯದು. ಬೇರೆಡೆಗಳಲ್ಲಿದ್ದಂತೆ ನಮ್ಮ ದೇಶದಲ್ಲೂ ಸಮಾಜವು ವಿಕಾಸಗೊಳ್ಳುತ್ತಾ ಬಂದಿದೆಯೇ ಹೊರತು ಯಾರೋ ಒಬ್ಬ ವ್ಯಕ್ತಿ ಅದನ್ನೆಲ್ಲಾ ನಿರ್ದೇಶಿಸಿ ನಿಯಂತ್ರಿಸುತ್ತಿದ್ದಿರಬಹುದೆಂಬುದೇ ಒಂದು ಮಿಥ್ಯೆ.

ಮನುಸ್ಮೃತಿಯು ಮೊದಲ ಬಾರಿಗೆ ೧೮೧೩ರಲ್ಲಿ ಅಚ್ಚುಮಾಡಲಾಗಿತ್ತೆಂದು ಹೇಳುತ್ತಾರೆ. ಹಸ್ತಪ್ರತಿಗಳ ರೂಪದಲ್ಲಿ ಅದು ಹಲವು ಶತಮಾನಗಳಿಂದ ಲಭ್ಯವಿದ್ದಿತು. ಅದಕ್ಕೆ ಕುಲ್ಲೂಕಭಟ್ಟ ಮತ್ತು ಮೇಧಾತಿಥಿ ಎಂಬಿಬ್ಬರು ವ್ಯಾಖ್ಯಾನಗಳನ್ನು ಬರೆದಿದ್ದಾರೆ. ವಿಶೇಷವೆಂದರೆ ಮನುಸ್ಮೃತಿಯು ಒಂದು ಗ್ರಂಥವಾಗಿ ರೂಪುಗೊಳ್ಳುವುದಕ್ಕೂ ಮುಂಚಿನ ಹಲವು ಶತಮಾನಗಳಲ್ಲಿ ಮನು ಎಂಬುವನ ಪ್ರಸ್ತಾಪವು ವಿಪುಲವಾಗಿ ಬಂದಿದೆ. ಅವನನ್ನು ಮಾನವಕುಲದ ಆದ್ಯನೆಂಬರ್ಥದಲ್ಲಿ ಉಲ್ಲೇಖಿಸಿರುವುದೂ ಉಂಟು. ಆ ಅರ್ಥದಲ್ಲಿ ಅವನನ್ನು ‘ತಂದೆ’ ಎಂದು ಋಗ್ವೇದದಷ್ಟು ಹಿಂದೆಯೇ ಪರಿಗಣಿಸಲಾಗಿತ್ತು. ಯಾರ ತಂದೆ ಎಂಬುದನ್ನು

ಹೇಳದಿರುವುದು ಇದಕ್ಕೆ ಪುಷ್ಟಿ ನೀಡುತ್ತದೆ. "ನಮ್ಮ ತಂದೆ" ಎಂದು ಮನುವನ್ನು ಶ್ಲಾಘಿಸಿರುವ ಸಂದರ್ಭಗಳೂ ಉಂಟು. "ಯಾನಿ ಮನುರವೃಣೀತಾ ಪಿತಾ ನಃ" (ಋ.೨.೩೩.೧) ಎಂದಾಗ ಅವನು ಸಮಷ್ಟಿಯ ತಂದೆಯೆಂದೇ ಅರ್ಥ. ತನ್ನ ಶಿಸ್ತಿನ ನಡತೆಯಿಂದಾಗಿ ಅವನು ಸಮಷ್ಟಿಯ ನಾಯಕನಾದನೆಂದು ಮನುಸ್ಮೃತಿಯು ಹೇಳಿದೆ (೭.೪೨). ತೈತ್ತಿರೀಯ ಸಂಹಿತೆಯ ಕಾಲಕ್ಕಾಗಲೆ ಅವನು ಮಹಾನ್ ಸಿದ್ಧಾಂತಿ, ಅವನು ಹೇಳಿದ್ದು ಔಷಧಿಯಂತೆ ಸ್ವೀಕಾರಾರ್ಹ ಎಂಬ ಭಾವನೆ ಬೇರೂರಿತ್ತು (೨.೨.೧೦.೨:ಯದ್ವೈ ಕಿಂ ಚ ಮನುರಬ್ರವೀತ್ ತದ್ಭೇಷಜಂ). ಬೇರೆ ಕೆಲವು ವೈದಿಕ ಗ್ರಂಥಗಳಲ್ಲೂ ಅದೇ ಅರ್ಥದ ಮಾತುಗಳಿವೆ. ಶಂಕರಾಚಾರ್ಯ ಮುಂತಾದವರು ತಮ್ಮ ದಾರ್ಶನಿಕ ಚಿಂತನೆಗಳನ್ನು ಮಂಡಿಸುವಾಗ ಬೇಕಾದಷ್ಟು ತರ್ಕ ಬೆಳೆಸಿ, ಕಡೆಗೆ ಇತ್ಯರ್ಥ ಹೇಳುವಾಗ ತೈತ್ತಿರೀಯದ ಈ ಮಾತನ್ನು ಉದ್ಧರಿಸಿ ಅದನ್ನೇ ಅಂತಿಮವಾಗಿ ಸ್ವೀಕರಿಸಬೇಕೆಂದು ಆಗ್ರಹಿಸುತ್ತಾರೆ. ಅಂದರೆ, ಮನುವಿನ ಮಾತು ತರ್ಕಕ್ಕಿಂತಲೂ ಹೆಚ್ಚಿನ ಸ್ಥಾನದಲ್ಲಿದೆ. ಧರ್ಮಶಾಸ್ತ್ರಕಾರರ ಪ್ರಭಾವಕ್ಕೆ ಇದೊಂದು ನಿದರ್ಶನವೆನ್ನಬಹುದು. ಪ್ರಭಾವವು ಒಳಿತೋ ಅಲ್ಲವೋ ಎಂಬುದು ಬೇರೆಯೇ ಪ್ರಶ್ನೆ, ಆದರೆ ಶಂಕರಾದಿ ದಾರ್ಶನಿಕರು ಅದನ್ನು ಆ ನಿಟ್ಟಿನಲ್ಲಿ ವಿಶ್ಲೇಷಿಸುವುದಿಲ್ಲ. ಸ್ವಾಯತ್ತ ದಾರ್ಶನಿಕ ಪ್ರಮೇಯಗಳನ್ನು ಸಲೀಸಾಗಿ ಅವರು ಧರ್ಮಶಾಸ್ತ್ರಕಾರರ ನಿಯಂತ್ರಣಕ್ಕೆ ಬಿಟ್ಟುಕೊಡುತ್ತಾರೆ! ಶತಪಥ ಬ್ರಾಹ್ಮಣವೆಂಬ ಗ್ರಂಥದಲ್ಲಿ ಪ್ರಪಂಚದ ಪ್ರಳಯ ಕಾಲದಲ್ಲಿ ಮನುವು ಮರುಸೃಷ್ಟಿಗೆ ಕಾರಣನಾಗುತ್ತಾನೆಂಬ ಶ್ರೇಯಸ್ಸಿಗೆ ಭಾಜನನಾಗಿದ್ದಾನೆ. ಇತಿಹಾಸದುದ್ದಕ್ಕೂ ಅವನು ಎಲ್ಲ ಕಾಲಗಳಲ್ಲೂ ಮುಖ್ಯಸ್ಥನ ಸ್ಥಾನದಲ್ಲಿದ್ದು ಒಂದು ರೀತಿ ಆದಿಪುರುಷನಾಗಿಬಿಟ್ಟಿದ್ದಾನೆ. ಋಗ್ವೇದದಿಂದ ಹಿಡಿದು ಮಹಾಭಾರತದ ವರೆಗೆ ಅವನು ಎಲ್ಲ ಪ್ರಾಚೀನ ಗ್ರಂಥಗಳಲ್ಲೂ ಕಾಣಿಸಿಕೊಳ್ಳುವ ಪುರಾಣ ಪುರುಷ. ಅಧಿಕಾರವಾಣಿಯಿಂದ ಏನನ್ನಾದರೂ ಸಮರ್ಥಿಸಬೇಕಾದರೆ "ಮನು ಹೀಗೆ ಹೇಳಿದ್ದಾನೆ" ಎನ್ನುವ ಮಾತು ಸರ್ವೇಸಾಧಾರಣ. ಎಲ್ಲಿ ಹೇಳಿದ್ದಾನೆ, ಯಾರವನು, ಅದನ್ನು ಹೇಳಲು ಅವನ ಅಧಿಕಾರವೇನು, ಎಂಬ ಪ್ರಶ್ನೆಗಳನ್ನೆತ್ತುವ ಗೋಜಿಗೆ ಯಾರೂ ಹೋಗುವುದಿಲ್ಲ. ಉದಾಹರಣೆಗೆ, ಯಾಸ್ಕನ ನಿರುಕ್ತದಲ್ಲಿ (ಅಧ್ಯಾಯ ೩) ಆಸ್ತಿಯ ಹಕ್ಕಿನ ಪ್ರಸ್ತಾಪವೊಂದು ಬರುತ್ತದೆ. ಆ ಸಂಬಂಧದಲ್ಲಿ ಮನು ಸ್ವಾಯಂಭುವನ ಅಭಿಪ್ರಾಯವೆಂದು ಯಾಸ್ಕನು ಒಂದು ಶ್ಲೋಕವನ್ನು ಉದ್ಧರಿಸಿದ್ದಾನೆ. ಅದರ ಪ್ರಕಾರ ಗಂಡು ಮತ್ತು ಹೆಣ್ಣುಮಕ್ಕಳೆಲ್ಲರೂ ತಂದೆಯ ಆಸ್ತಿಯನ್ನು ಸಮವಾಗಿ ಹಂಚಿಕೊಳ್ಳುತ್ತಾರೆ. ಅಂತಹ ನಿಲುವು ಮನುಸ್ಮೃತಿಯಲ್ಲಿ ಎಲ್ಲೂ ಪ್ರಕಟವಾಗಿಲ್ಲ! ಇನ್ನೂ ತಮಾಷೆಯೆಂದರೆ ಯಾಸ್ಕನು ಈ ಶ್ಲೋಕದ ಜೊತೆಯಲ್ಲಿ ವೇದವಾಕ್ಯವೊಂದನ್ನು ಉದ್ಧರಿಸಿದ್ದಾನೆ : (ಆತ್ಮಾ ವೈ ಪುತ್ರನಾಮಾಸಿ ಸ ಜೀವಃ ಶರದಃ ಶತಂ.) ಅದು ಸಮಾನ ಹಂಚಿಕೆಯ ಪರವಾಗಿರುವಂತೆ ತೋರುವುದಿಲ್ಲ.

ಎಲ್ಲ ಗ್ರಂಥಗಳಲ್ಲೂ ಕಾಣಿಸಿಕೊಳ್ಳುವ ಈ ಮನು ಯಾರೆಂಬ ತನಿಖೆಗೆ ಹೋಗುವುದು ನಿರರ್ಥಕ. ಅಂತೆಯೇ 'ಮನುಸ್ಮೃತಿ'ಯ ಕರ್ತೃವಾದ ಮನು ಯಾರೆಂದು ನಿಷ್ಕರ್ಷಿಸುವುದೂ ಆಗದ ಕೆಲಸ. ಅವನೂ ಒಬ್ಬ ಮನು ಎಂದಷ್ಟೇ ಹೇಳಬೇಕಾಗುತ್ತದೆ. ಮಹಾಭಾರತದಲ್ಲಿ ಅವನ ಹಿರಿಮೆಯನ್ನು ಹಲವು ವಿಧಗಳಲ್ಲಿ ಶ್ಲಾಘಿಸಲಾಗಿದೆ : ಅವನು ಅತಿ ಪ್ರಾಚೀನ ಮುನಿ, ಧರೆಗೆ ಅಗ್ನಿಯನ್ನು ತಂದವನು, ಭಗವಂತನಿಂದಲೇ ನೀತಿನಿಯಮಗಳನ್ನು ಅರಿತ ದಿವ್ಯಪುರುಷ. (ಋಗ್ವೇದದಲ್ಲಿ ಧರೆಗೆ ಅಗ್ನಿಯನ್ನು ತಂದವನು ಮಾತರಿಶ್ವನ್ ಎನ್ನಲಾಗಿದೆ. ಅವನು ನಮ್ಮ ಪುರಾಣಗಳ ಪ್ರೊಮಿಥಿಯಸ್). ಮನುಸ್ಮೃತಿಯು ಕ್ರಿ. ಪೂ. ೨೦೦ಕ್ಕಿಂತಲೂ ಹೆಚ್ಚು ಪ್ರಾಚೀನವಲ್ಲವೆಂದೂ, ಕ್ರಿ. ಶ. ೨೦೦ಕ್ಕಿಂತಲೂ ಈಚಿನದಲ್ಲವೆಂದೂ ಪಿ. ವಿ. ಕಾಣೆಯವರು ಸಾಕಷ್ಟು ಪುರಾವೆಗಳ ಆಧಾರದ ಮೇಲೆ ತೀರ್ಮಾನ ಪ್ರಕಟಿಸಿದ್ದಾರೆ. ಆಪಸ್ತಂಬ ಮತ್ತು ಬೌಧಾಯನರ ಧರ್ಮಸೂತ್ರ ಗ್ರಂಥಗಳು ಮನುಸ್ಮೃತಿಗಿಂತಲೂ ಪುರಾತನವಾದವು ಎಂಬುದರಲ್ಲಿ ಸಂಶಯವಿಲ್ಲ. ಬೇರೆ ಹಲವು ಧರ್ಮಶಾಸ್ತ್ರ ಗ್ರಂಥಗಳು ಮನುಸ್ಮೃತಿಗಿಂತಲೂ ಮುಂಚೆ ರಚಿತವಾಗಿದ್ದುವೆಂಬುದೂ ಅಷ್ಟೇ ಸಂಶಯಾತೀತ. ಅಂತಹ ಗ್ರಂಥಗಳ ಪೈಕಿ "ಮಾನವ ಗೃಹ್ಯಸೂತ್ರ" ಎಂಬುದೂ ಒಂದು. ಅದರ ಕರ್ತೃವೂ ಒಬ್ಬ ಮನುವೇ. ಆದರೆ ಅವನು 'ಮನುಸ್ಮೃತಿ'ಯ ಮನುವಲ್ಲ, ಅವನಿಗಿಂತಲೂ ಪುರಾತನವಾದವನು. ಈ ಎರಡು ಗ್ರಂಥಗಳಲ್ಲಿ ಹಲವು ವಿಷಯಗಳ ಬಗೆಗೆ ಭಿನ್ನಾಭಿಪ್ರಾಯಗಳಿವೆಯೆಂಬುದು ಅದಕ್ಕಿರುವ ಒಂದು ಪುರಾವೆ. ಕಾಣೆ ಅವರು ತಮ್ಮ ಧರ್ಮಶಾಸ್ತ್ರ ಇತಿಹಾಸ ಸಂಪುಟಗಳ ಒಂದು ಅನುಬಂಧದಲ್ಲಿ ನಮ್ಮ ದೇಶದಲ್ಲಿ ಲಭ್ಯವಿದ್ದ ಧರ್ಮಶಾಸ್ತ್ರ ಗ್ರಂಥಗಳ ಪಟ್ಟಿಯನ್ನು ನೀಡಿ ಉಪಕರಿಸಿದ್ದಾರೆ. ಪಟ್ಟಿಯು ೨೫೦ ಪುಟಗಳಷ್ಟಿದೆಯೆಂಬುದು ಅಚ್ಚರಿಯನ್ನು ಮೂಡಿಸಬೇಕಾಗಿಲ್ಲ. ಅಷ್ಟೊಂದು ಮಂದಿ ನೀತಿಶಾಸ್ತ್ರದಲ್ಲಿ ಆಸಕ್ತಿ ತೋರಿದ್ದಾರಾದರೂ ಯಾರೊಬ್ಬರೂ ವರ್ಣವಿಭಜನೆಯನ್ನು ಟೀಕಿಸಿಲ್ಲ, ನಿರಾಕರಿಸಿಲ್ಲವೆಂಬುದು ಒಂದು ಕುಚೋದ್ಯ! ಸಾಮಾನ್ಯವಾಗಿ ಸಂಸ್ಕೃತದಲ್ಲಿರುವ ಎಲ್ಲ ಧರ್ಮಶಾಸ್ತ್ರ ಗ್ರಂಥಗಳೂ ಅವು ನಿರೂಪಿಸುವ, ಇಲ್ಲವೇ ವಿಧಿಸುವ, ನಿಯಮಗಳಿಗೆ ಆಧಾರವೆಂದು ಎರಡು ಮೂಲಗಳನ್ನು ಹೆಸರಿಸುತ್ತವೆ : (ಅ) ಧರ್ಮವನ್ನು ತಿಳಿದವರು ಅನುಸರಿಸುವ ಸಾಮಯಿಕ ವಿಧಾನಗಳು, ಮತ್ತು (ಆ) ವೇದಗಳು. ಇದು ಕೇವಲ ಔಪಚಾರಿಕವಾದ ಮಾತು, ಏಕೆಂದರೆ ತಥಾಕಥಿತ 'ಧರ್ಮವನ್ನು ತಿಳಿದವರು' ಸಹ ತಮ್ಮ ನಡತೆಗೆ ಬೇರೊಬ್ಬರ ಸಾಮಯಿಕ ವಿಧಾನಗಳನ್ನು ಆಧಾರವೆಂದು ಹೇಳುತ್ತಾರೆ. ಅದೊಂದು ಸಂಪ್ರದಾಯ. ಇನ್ನು, ವೇದಗಳ ಆಧಾರವನ್ನು ವಿವೇಚಿಸುವುದಾದರೆ, ಅವು ದಿನನಿತ್ಯದ ವ್ಯವಹಾರಗಳಿಗೆಲ್ಲಾ ಸೂತ್ರೋಪಾದಿಯಾದ ಯಾವ ನಿಬಂಧನೆಗಳನ್ನೂ ನಮೂದಿಸಿಲ್ಲ. ಋಗ್ವೇದದ ಕಾಲದ ಸಮಷ್ಟಿ ಜೀವನದ ವೈವಿಧ್ಯವನ್ನು ನಾವು ಆ ಗ್ರಂಥದಲ್ಲಿ ಕಾಣಬಹುದೇ ವಿನಾ ಸಮಾಜದ ಸಂರಚನೆಯ ಸೂತ್ರಗಳನ್ನಲ್ಲ. ಊರ್ವಶಿ–ಪುರೂರವರ ಸಂವಾದ, ಯಮ–ಯಮಿ ಸಂವಾದ, ಸರಮಾ–ಪಣಿಗಳ ಸಂವಾದ, ಇಂದ್ರನನ್ನು ಕೊಂಡಾಡುವ ಸೂಕ್ತ, ಕಪ್ಪೆಗಳ ಸಂಭ್ರಮ, ಸೋಮರಸವನ್ನು ಸೇವಿಸಿದ ಇಂದ್ರನ ಪ್ರತಾಪ, ಅಗ್ನಿಯ ಆರ್ಭಟ, ವರುಣನ ಸಾಮ್ರಾಜ್ಯ, ಸೂರ್ಯಾಳ ಮದುವೆಯ ಸೊಗಸು, ಜೂಜುಗಾರನ ಅಳಲು, ಪುರುಷನಿಂದ ವಿಶ್ವ ವಿಕಾಸ, ಇಂಥವೆಲ್ಲಾ ಋಗ್ವೇದದ ಕಾವ್ಯಾತ್ಮಕ ಪ್ರತಿಭೆಯನ್ನು ಹೊರಗೆಡಹುತ್ತವೆ. ಸಮಾಜದ ವಿಭಜನೆ, ವಿವಿಧ ಹಂತಗಳಲ್ಲಿರುವವರ ಕರ್ತವ್ಯಗಳು, ಮುಂತಾದುವನ್ನು ಅವು ವಿಧಿಸುವುದಿಲ್ಲ. ಅಂದರೆ, ಧರ್ಮಶಾಸ್ತ್ರಕಾರರು ವ್ಯಾಖ್ಯಾನಿಸುವ ಸಮಾಜವು ಋಗ್ವೇದಕಾಲೀನ ಸಮಾಜವಲ್ಲ.

ಮನುಸ್ಮೃತಿಯಲ್ಲಿ ೧೨ ಅಧ್ಯಾಯಗಳಿವೆ, ಒಟ್ಟು ೨೬೯೪ ಶ್ಲೋಕಗಳಿವೆ. ಒಂದೊಂದು ಅಧ್ಯಾಯವನ್ನೂ ಪ್ರತ್ಯೇಕವಾಗಿ ಪರಿಚಯಿಸಿಕೊಳ್ಳುವ ಮೊದಲು ಸ್ಥೂಲವಾಗಿ ಇಡೀ ಗ್ರಂಥದ ಉದ್ದೇಶ, ದೃಷ್ಟಿಕೋನ, ಮಂಡನೆಗೆ ಆಯ್ಕೆಗೊಂಡ ವಿಷಯಗಳು, ಮುಂತಾದ ಅಂಶಗಳನ್ನು ತಿಳಿಯುವುದು ಉಚಿತ. ನಮ್ಮ ಧರ್ಮಶಾಸ್ತ್ರ ಗ್ರಂಥಗಳಿಗೆ ಒಂದು ತೊಡಕಿದೆ, ಆದರೆ ಅದನ್ನು ಅವು ಗಮನಿಸಹೋಗುವುದಿಲ್ಲ. ಪ್ರಶ್ನೆ ಏನೆಂದರೆ, ಈ ಶಾಸ್ತ್ರವು ಯಾರಿಗೆ, ಎಂಬುದು. ಒಂದು ಜನಸಮುದಾಯವಿದೆ ಮತ್ತು ಅದರಲ್ಲಿ ವಿಭಾಗಗಳಿವೆ. ವಿಭಾಗಗಳು ಯಾವುವೆಂಬುದು ಖಚಿತ, ಆದರೆ ಸಮುದಾಯಕ್ಕೆ ತನ್ನದೇ ಆದ ಸೂಚಕ ನಾಮಧೇಯವೇನಾದರೂ ಉಂಟೆ? ಶಾಸ್ತ್ರವು ಇಡೀ ಸಮುದಾಯಕ್ಕೆ, ಆದರೆ ಆ ಸಮುದಾಯಕ್ಕೆ ಒಂದು ನಿರ್ದಿಷ್ಟ ಹೆಸರೇ ಇಲ್ಲ. ಬ್ರಹ್ಮಾವರ್ತದವರಿಗೆ, ಆರ್ಯಾವರ್ತದ ನಿವಾಸಿಗಳಿಗೆ, ಗಂಗಾ ಬಯಲಿನ ನಿವಾಸಿಗಳಿಗೆ, ಹೀಗೇನಾದರೂ ಹೇಳಿಕೊಳ್ಳಬಹುದು. "ಭಾರತೀಯ ಸಮಾಜಕ್ಕೆ" ಎನ್ನುವಂತಿಲ್ಲ, ಏಕೆಂದರೆ ಆಗ್ಗೆ 'ಭಾರತ' ಎಂಬುದರ ಕಲ್ಪನೆ ಇರಲಿಲ್ಲ. "ಹಿಂದು ಸಮಾಜಕ್ಕೆ" ಎಂದು ಇಂದು ಹೇಳುವಂತೆ ಆಗ ಹೇಳಲಾಗುತ್ತಿರಲಿಲ್ಲ, ಏಕೆಂದರೆ ಅಂಥದೊಂದು ಪದ ಮತ್ತು ಕಲ್ಪನೆ ಇರಲಿಲ್ಲ. "ನಾನು ಸಾಂಖ್ಯ, ನಾನು ಲೋಕಾಯತ, ನಾನು ಬೌದ್ಧ, ನಾನು ವೈಶೇಷಿಕ" ಇತ್ಯಾದಿ ಹೇಳಿಕೊಳ್ಳುತ್ತಿದ್ದರೆ? ಗೋತ್ರಗಳನ್ನು ಒಂದು ವರ್ಣದವರು ಹೇಳಿಕೊಳ್ಳುತ್ತಿದ್ದಿರಬಹುದು, ಆದರೆ ಅದು ಸಮುದಾಯಕ್ಕೆ ಅನ್ವಯವಾಗುವಂತಿರಲಿಲ್ಲ. ಹೀಗಾಗಿ ಇದ್ದುದೊಂದೇ ಮಾರ್ಗ, ಅದು ನಿರ್ದಿಷ್ಟ ವರ್ಣಗಳಡಿಯ ಅಸ್ಮಿತೆ. ಧರ್ಮಶಾಸ್ತ್ರವು ಪ್ರತ್ಯೇಕ ವರ್ಣಗಳ ಬಗ್ಗೆ ಸಾಮಾನ್ಯೀಕರಿಸಬಹುದಿತ್ತೇ ವಿನಾ ಎಲ್ಲ ವರ್ಣಗಳಿಗೂ ಸಮಾನವಾಗಿ ಅನ್ವಯವಾಗುವಂತಹ ನಿಯಮಗಳನ್ನು ರೂಪಿಸುವಂತಿರಲಿಲ್ಲ. ಆದ್ದರಿಂದ ಮನುಸ್ಮೃತಿ ಹೇಳುತ್ತದೆ, "ಯಾವ ಯಾವ ಜಾತಿಗಳಿಗೆ, ಪ್ರಾಣಿವರ್ಗ ಮತ್ತು ಮಾನವರಿಗೆ, ಯಾವ ಯಾವ ಕರ್ಮ ಹೇಳಲಾಗಿದೆಯೋ, ಅದನ್ನು ಜನ್ಮಾನುಸಾರವಾಗಿ ಹೇಳಲಾಗುತ್ತದೆ," ಎಂದು (೧.೪೨: ಯೇಷಾಂ ತು ಯಾದೃಶಂ ಕರ್ಮ ಭೂತಾನಾಮಿಹ ಕೀರ್ತಿತಂ। ತತ್ತಥಾ ವೋಽಭಿಧಾಸ್ಯಾಮಿ ಕ್ರಮಯೋಗಂ ಚ ಜನ್ಮನಿ॥). ಬುಡಕಟ್ಟುಗಳ ಜನರಿಗೆ ಮತ್ತು ಕಾಡು–ಮೇಡು ನಿವಾಸಿಗಳಿಗೆ ಇದು ಅನ್ವಯ ಆಗುವುದಿಲ್ಲವೆಂಬುದು ಸಮಾಧಾನದ ವಿಷಯ.

ಗ್ರಂಥದ ಆರಂಭದಲ್ಲಿ ಆಯಾವರ್ಣಗಳ ಧರ್ಮ ವೇನೆಂದು ತಿಳಿಯಲು ಋಷಿಗಳು ಮನುವಿನ ಬಳಿ ಸಾರಿಬಂದಿದ್ದಾರೆ; ಅವರು ಇಡೀ ಸಮುದಾಯದ ಧರ್ಮ ತಿಳಿಯಲು ಆಶಿಸುವಂತಿಲ್ಲ, ಏಕೆಂದರೆ ಯಾವ ಧರ್ಮವೂ (ಆಚರಣೆ, ಕರ್ತವ್ಯ, ಇತ್ಯಾದಿ) ಎಲ್ಲರಿಗೂ ಅನ್ವಯವಾಗುವುದಿಲ್ಲ. ಮನುವು ಜಗತ್ತಿನ ಸೃಷ್ಟಿಯಿಂದಲೇ ಆರಂಭಿಸುತ್ತಾನೆ. ಸಾಂಖ್ಯ ದರ್ಶನದಲ್ಲಿ ಹೇಳಲಾಗುವ ಪ್ರಕಾರದಲ್ಲೇ ಹೆಚ್ಚುಕಡಿಮೆ ಸೃಷ್ಟಿಯ ವಿವರಣೆ ಇದೆ: ಅಂದರೆ, ದೇವರೆಂಬೊಬ್ಬನಿಲ್ಲದೆ ಪ್ರಕೃತಿಯು ತಾನಾಗಿಯೇ ವಿಕಸಿಸುವ ಪ್ರಕ್ರಿಯೆ; ಆದರೆ ಮನುವು ಸಾಂಖ್ಯ ಪ್ರಕ್ರಿಯೆಯನ್ನು ದೇವರ ಜೊತೆ ಪೋಣಿಸಿರುವುದು ವಿಶೇಷ ಹಾಗೂ ಅಸಂಗತ. ಅತೀಂದ್ರಿಯ ಗೋಚರನಾದ ಭಗವಂತನು "ಸ್ವ–ಇಚ್ಛೆ ಮಾತ್ರದಿಂದಲೇ ಮೊದಲು ನೀರನ್ನು ಸೃಷ್ಟಿಸಿದನು ಮತ್ತು ಸೃಷ್ಟಿಬೀಜವನ್ನು ಅದರಲ್ಲಿರಿಸಿದನು" (೧.೧೮). ನಂತರ, ತನಗೆ ಧರ್ಮಶಾಸ್ತ್ರವನ್ನು ಸ್ವತಃ ಬ್ರಹ್ಮನೇ ಬೋಧಿಸಿದ್ದು ಎಂದು ಮನು ಹೇಳಿಕೊಳ್ಳುತ್ತಾನೆ; ಆಮೇಲೆ ನಾಲ್ಕು ಯುಗಗಳಿಗೂ ಪ್ರತ್ಯೇಕವಾದ ಧರ್ಮಗಳಿವೆ ಎನ್ನುತ್ತಾನೆ. ಸಸ್ಯರಾಶಿಗೂ ಜೀವ ಉಂಟು (೧.೪೯: ... ಅಂತಸ್ಸಂಜ್ಞಾ ಭವಂತ್ಯೇತೇ ಸುಖದುಃಖಸಮನ್ವಿತಾಃ), ಅವಕ್ಕೂ ಸುಖ–ದುಃಖಗಳ ಸಂವೇದನೆ ಇದೆ ಎಂಬ ಮಾತೂ ಬರುತ್ತದೆ. ಮತ್ತೆ ಈ ಧರ್ಮಶಾಸ್ತ್ರವನ್ನು ಸೃಷ್ಟಿಕರ್ತನಾದ ಬ್ರಹ್ಮನೇ ರಚಿಸಿ ಮನುವಿಗೆ ತಿಳಿಸಿದನಂತೆ (೧.೫೮).

ಕಾಲ ಮತ್ತು ದಿನಗಳ ಮಾಪನದ ವಿಚಾರವೂ ಮೊದಲ ಅಧ್ಯಾಯದಲ್ಲೇ ಬರುತ್ತದೆ. ಸ್ವಾಭಾವಿಕವಾಗಿ ಕಣ್ಣುರೆಪ್ಪೆಯನ್ನು ಮುಚ್ಚಿ ತೆರೆಯಲು ಬೇಕಾದ ಸಮಯವನ್ನು 'ಕಾಷ್ಟಾ' ಎನ್ನುತ್ತಾರೆ (೧.೬೪). ಮೂವತ್ತು ಕಾಷ್ಟಾಗಳೆಂದರೆ ಒಂದು ಕಲಾ, ಮೂವತ್ತು ಕಲಾಗಳು ಒಂದು ಮುಹೂರ್ತ ಮತ್ತು ಮೂವತ್ತು ಮುಹೂರ್ತಗಳು ಒಂದು ದಿನ. ದಿವಂಗತರಾದ ಪಿತೃಗಳಿಗೆ ಒಂದು ದಿನವೆಂದರೆ ಮನುಷ್ಯರ ಒಂದು ಮಾಸ. ಅಂತೆಯೇ, ಮನುಷ್ಯರ ಒಂದು ವರ್ಷವು ದೇವತೆಗಳಿಗೆ ಒಂದು ದಿನ (೧.೬೭). ವರ್ಷದ ಉತ್ತರಾಯಣವು ದೇವತೆಗಳಿಗೆ ಹಗಲು ಮತ್ತು ದಕ್ಷಿಣಾಯನವು ರಾತ್ರಿ. ಬ್ರಹ್ಮನ ಹಗಲು–ರಾತ್ರಿಗಳು ಇನ್ನೂ ಅಗಾಧ ಕಾಲದ್ದು.

ನಿಜವಾದ ಮನುಸ್ಮೃತಿಯು ಆರಂಭವಾಗುವುದು ನಾಲ್ಕು ವರ್ಣಗಳು ಬ್ರಹ್ಮನ ಮುಖ, ಬಾಹು, ತೊಡೆ ಮತ್ತು ಪಾದಗಳಿಂದ ಹುಟ್ಟಿದವರೆಂಬ ಮಾತಿನಿಂದ (೧.೮೭). ಹುಟ್ಟುವಾಗಲೇ ಅವರೆಲ್ಲರ ಪ್ರತ್ಯೇಕ ಕರ್ಮಗಳೂ ನಿಗದಿಯಾದುವಂತೆ (ಪೃಥಕ್ ಕರ್ಮಾಣಿ ಅಕಲ್ಪಯತ್). ವಿಶಾಲಾರ್ಥದಲ್ಲಿ 'ಧರ್ಮ' ಎಂದರೇನು ಎಂಬುದನ್ನು ಸಹ ಹೇಳದೆ ಕೃತಿಯು ವರ್ಣಗಳ ಪ್ರತ್ಯೇಕ ಕರ್ಮಗಳನ್ನು ತಿಳಿಸುತ್ತದೆ. ಅದೇ ಮನುಸ್ಮೃತಿಯೆಂಬ ಸಂವಿಧಾನದಲ್ಲಿನ "ಮೂಲಭೂತ ಕರ್ತವ್ಯಗಳು." ಕಲಿಯುವ ಮತ್ತು ಕಲಿಸುವ ಕರ್ಮವನ್ನಲ್ಲದೆ ದಾನ ಕೊಡುವುದು ಮತ್ತು ಸ್ವೀಕರಿಸುವುದು ಎಂಬ ಕರ್ಮಗಳನ್ನು ಬ್ರಾಹ್ಮಣನು ಮಾಡಬೇಕು (೧.೮೮). ಪ್ರಭುವಾದ ಬ್ರಹ್ಮನು ಶೂದ್ರರಿಗೆ ಒಂದೇ ಒಂದು ಕರ್ಮ ವಿಧಿಸಿದ: ಬೇರೆ ವರ್ಣದವರ ಶುಶ್ರೂಷೆ ಮಾಡಿ ಧನ್ಯನಾಗುವುದು, ಅದೂ ಅಸೂಯಾಪರನಾಗದೆಯೇ (೧.೯೧: ... ಅನಸೂಯಯಾ). ಅಸೂಯೆಪಡಬಹುದೆಂಬ ಅನುಮಾನವಾದರೂ ಬಂತಲ್ಲ ಮನುವಿಗೆ, ಅಷ್ಟಕ್ಕೇ ನಾವು ಧನ್ಯರಾಗಬೇಕು!

ಮಾನವ ದೇಹದಲ್ಲಿ ಹೊಕ್ಕುಳ ಮೇಲಿನ ಭಾಗವು ಜ್ಞಾನಾಂಗಗಳ ಪ್ರದೇಶವೆಂದು ಮನು ಭಾವಿಸಿದ್ದಾನೆ. ಅದರಲ್ಲೂ ಮುಖವು ಜ್ಞಾನದ ಪ್ರತಿಫಲನಕ್ಕೆ ಕನ್ನಡಿ ಇದ್ದಂತೆ (೧.೯೨). ದೇವತೆಗಳು ಹವಿಸ್ಸನ್ನು ಸ್ವೀಕರಿಸುವುದು ಬ್ರಾಹ್ಮಣನ ಮುಖದಿಂದ; ಪಿತೃಗಳೂ ಅಷ್ಟೆ. ಆದ್ದರಿಂದ ಅವನಿಗಿಂತಲೂ ಉತ್ತಮವಾದ್ದು ಯಾವುದೂ ಇಲ್ಲ (೧.೯೫: ಯಸ್ಯ ಆಸ್ಯೇನ ಸದಾ ಅಶ್ನಂತಿ ಹವ್ಯಾನಿ ತ್ರಿದಿವೌಕಸಃ। ಕವ್ಯಾನಿ ಚೈವ ಪಿತರಃ ಕಿಂ ಭೂತಮಧಿಕಂ ತತಃ॥). ಬ್ರಾಹ್ಮಣ ವಿದ್ವಾಂಸ, ಸದಾಚಾರಿ, ಮುಂತಾದವರಿಗಿಂತ ಬ್ರಾಹ್ಮಣ ಬ್ರಹ್ಮಜ್ಞಾನಿಯು ಶ್ರೇಷ್ಠ (೧.೯೭). ಅಷ್ಟೇಕೆ, ಬ್ರಾಹ್ಮಣ ಮತ್ತು ಕ್ಷತ್ರಿಯಾದಿ ವರ್ಣಗಳ ಕರ್ತವ್ಯಗಳನ್ನು ನಿಗದಿಗೊಳಿಸಲೆಂದೇ ಸ್ವಾಯಂಭುವ ಮನುವು ತನ್ನ ಗ್ರಂಥ ರಚಿಸಿದ್ದು (೧.೧೦೨: ತಸ್ಯ ಕರ್ಮ ವಿವೇಕಾರ್ಥಂ ಶೇಷಾಣಾಮನುಪೂರ್ವಶಃ। ಸ್ವಾಯಂಭುವೋ ಮನುರ್ಧೀಮಾನ್ ಇದಂ ಶಾಸ್ತ್ರಮ ಕಲ್ಪಯತ್॥). ಈ ಧರ್ಮಶಾಸ್ತ್ರವನ್ನು ಬ್ರಾಹ್ಮಣರಲ್ಲದೆ ಬೇರಾರೂ ಇತರರಿಗೆ ಕಲಿಸಲು ಸಮರ್ಥರಲ್ಲ (೧.೧೦೩). ಅಲ್ಲದೆ, ಈ ಶಾಸ್ತ್ರವು ಮಂಗಲಕರವಾದ್ದು, ಬುದ್ಧಿಯನ್ನು ವರ್ಧಿಸುವಂಥದು, ಮೋಕ್ಷಸಾಧನವಾದ್ದು (೧.೧೦೬). ಎಲ್ಲಕ್ಕಿಂತ ಮಿಗಿಲಾಗಿ ಈ ಧರ್ಮವು ಶಾಶ್ವತವಾದ್ದು (೧.೧೦೭: ... ಚತುರ್ಣಾಂ ಅಪಿ ವರ್ಣಾನಾಂ ಆಚಾರಶ್ಚೈವ ಶಾಶ್ವತಃ॥). ಗೀತೆಯಲ್ಲಿ ಅರ್ಜುನನು ಖಿನ್ನನಾಗುವುದಕ್ಕೆ ಒಂದು ಕಾರಣ "ಶಾಶ್ವತವಾದ ಧರ್ಮವು ಲುಪ್ತವಾಗಿಬಿಡುತ್ತದಲ್ಲಾ" ಎಂಬುದು (೧.೪೩: ... ಉತ್ಸಾದ್ಯಂತೇ ಜಾತಿಧರ್ಮಾಃ ಕುಲ ಧರ್ಮಾಶ್ಚ ಶಾಶ್ವತಾಃ). ಮನು ಮತ್ತು ಗೀತೆಯ ಕರ್ತೃ ಇಂದು ಬಂದು ತಾವು ಶಾಶ್ವತವೆಂದು ಪ್ರತಿಪಾದಿಸಿದ್ದ ಧರ್ಮವನ್ನು ಜನತೆ ಹೇಗೆ ಆರೋಗ್ಯಪೂರ್ಣವಾಗಿ ಅಶಾಶ್ವತಗೊಳಿಸಿದೆ ಎಂಬುದನ್ನು ಕಂಡು ಸ್ವಲ್ಪವಾದರೂ ಉಲ್ಲಸಿತರಾದಾರು.

ಮೊದಲನೆಯ ಅಧ್ಯಾಯದ ೧೧೧ನೆಯ ಶ್ಲೋಕದಿಂದ ಮನುಸ್ಮೃತಿಯು ಗ್ರಂಥದ ವ್ಯಾಪ್ತಿಗೆ ಬರುವ ವಿಷಯಗಳನ್ನೆಲ್ಲಾ ಪಟ್ಟಿ ಮಾಡಿದೆ. ಇದು ಅದರ ವಿಷಯಾನುಕ್ರಮಣಿಕೆ ಎನ್ನಬಹುದು. ಮುಂದೆ ನಾವು ಕ್ಲುಪ್ತವಾಗಿ ಪರಿಚಯಿಸಿಕೊಳ್ಳಲಿರುವ ವಿಷಯಗಳು ಅವೇ. ಯಾವ ವಿಷಯವು ಪ್ರಮುಖ ಎನಿಸುತ್ತದೋ ಅಂತಹ ಅಧ್ಯಾಯಗಳನ್ನು ಮಾತ್ರವೇ ಓದಿಕೊಳ್ಳುವ ಸ್ವಾತಂತ್ರ್ಯವು ಓದುಗರಿಗೆ ಇರುತ್ತದೆ. ಅಧ್ಯಾಯ ೨: ಧರ್ಮದ ಲಕ್ಷಣ ಮತ್ತು ಆಕರಗಳು; ದೇಶದ ಎಲ್ಲೆಗಳು, ಸಂಸ್ಕಾರಗಳು, ವಿವಿಧ ವರ್ಣಗಳ ಉಪನಯನ, ಬ್ರಹ್ಮಚಾರಿಯ ಆಚಾರ ವಿಧಿಗಳು. ಅಧ್ಯಾಯ ೩: ವಿವಾಹದ ಬಗೆಗಳು, ಪತಿಧರ್ಮ–ಪತ್ನೀಧರ್ಮ, ಪಂಚಯಜ್ಞಗಳು, ಮಧುಪರ್ಕ ಮತ್ತು ಶ್ರಾದ್ಧಗಳು. ೪. ಗೃಹಸ್ಥನ ಜೀವನಕ್ರಮ, ಸ್ನಾತಕ ಧರ್ಮ, ಯಾವ ಅನ್ನಪಾನಗಳು ಸ್ವೀಕಾರಾರ್ಹ ಇಲ್ಲವೇ ನಿಷಿದ್ಧ. ೫. ವಿಹಿತವಾದ ತರಕಾರಿ ಮತ್ತು ಮಾಂಸಗಳು, ಮೈಲಿಗೆಯಿಂದ ಪರಿಶುದ್ಧಿ, ಪತ್ನೀ ಧರ್ಮ ಮತ್ತು ವಿಧವಾಧರ್ಮ. ೬. ವಾನಪ್ರಸ್ಥಾಶ್ರಮದಲ್ಲಿ ಜೀವನ ಕ್ರಮ. ೭. ರಾಜಧರ್ಮ, ರಾಜವಿದ್ಯೆ, ರಾಜನ ದೋಷಗಳು, ಮಂತ್ರಿಮಂಡಲ, ದೂತರು, ರಾಜಧಾನಿ, ಪುರೋಹಿತರು ಇತ್ಯಾದಿ, ಯುದ್ಧನೀತಿ, ಅಧಿಕಾರಿಗಳು, ತೆರಿಗೆ, ಸಂಧಿ – ವಿಗ್ರಹ, ವಿಜಯಿಯ ಕರ್ತವ್ಯಗಳು. ೮. ನ್ಯಾಯದಾನ ಕ್ರಮಗಳು, ಸಭಾರಚನೆ, ಅಸಹಾಯಕರ ಬಗೆಗಿನ ಕರ್ತವ್ಯ, ಗುಪ್ತನಿಧಿ, ಕಳವಾದದ್ದನ್ನು

ಹಿಂಪಡೆಯುವುದು, ಸಾಲಗಳನ್ನು ಮರುಪಾವತಿ ಮಾಡಿಸಿಕೊಳ್ಳುವ ಬಗೆ, ಸಾಕ್ಷಿಗಳು, ಮರಣದಂಡನೆ (ಯಾರಿಗುಂಟು ಮತ್ತು ಯಾರಿಗಿಲ್ಲ), ಹುಲ್ಲುಗಾವಲು, ಎಲ್ಲೆಗಳ ಬಗೆಗಿನ ವಿವಾದ, ಅತ್ಯಾಚಾರ, ದಾಸರ ಬಗೆಗಳು. ೯. ಪತಿ–ಪತ್ನಿಯರ ಕರ್ತವ್ಯಗಳು, ಸ್ತ್ರೀನಿಂದೆ, ನಿಯೋಗ, ದಾಯವಿಭಾಗ, ಜೂಜು ಮುಂತಾದವುಗಳ ನಿಂತ್ರಣ, ಪಂಚಪಾತಕಗಳು, ಪ್ರಾಯಶ್ಚಿತ್ತ, ವೈಶ್ಯ ಮತ್ತು ಶೂದ್ರರ ಕರ್ತವ್ಯಗಳು. ೧೦. ಅಧ್ಯಾಪನವು ಬ್ರಾಹ್ಮಣನಿಗೆ ಮೀಸಲು, ಮಿಶ್ರ ಜಾತಿಗಳು, ಮ್ಲೇಚ್ಛರು ಇತ್ಯಾದಿ, ನಾಲ್ಕು ವರ್ಣಗಳ ಹಕ್ಕು ಬಾಧ್ಯತೆಗಳು, ಯೋಗ್ಯ ದ್ರವ್ಯಾರ್ಜನೆ, ಜೀವಿಕಾವೃತ್ತಿಗಳು. ೧೧. ದಾನದ ಪ್ರಾಶಸ್ತ್ಯ, ಪಾಪ ನಿವಾರಣೆ, ಇತ್ಯಾದಿ. ೧೨. ಕರ್ಮದ ಮೀಮಾಂಸೆ, ನರಕದಲ್ಲಿ ಚಿತ್ರಹಿಂಸೆ, ಮೂರು ಗುಣಗಳು, ಮೋಕ್ಷಮಾರ್ಗ, ನಿಷ್ಕಾಮಕರ್ಮ, ವೇದದ ಮಹತ್ವ, ತರ್ಕದ ಸ್ಥಾನ, 'ಮಾನವಶಾಸ್ತ್ರ'ದ ಅಧ್ಯಯನ ಫಲ.

ಮನುಸ್ಮೃತಿಯೇ ನಮ್ಮ ದೇಶದ ಸಂವಿಧಾನವಾಗಬೇಕೆನ್ನುವವರು ಇವುಗಳಲ್ಲಿ ಯಾವ ಭಾಗ ಅಥವಾ ಭಾಗಗಳನ್ನು ಪುರಸ್ಕರಿಸಿಯಾರು ಎಂಬುದು ಪ್ರಮುಖ ಪ್ರಶ್ನೆಯಾಗಬೇಕು. ಈ ಗ್ರಂಥದಲ್ಲಿ ಹೇಳಲಾಗುವ ವಿಷಯಗಳು ಎಷ್ಟೋ ಬಾರಿ ಪರಸ್ಪರ ವಿರೋಧವಾಗಿರುವಾಗ ನಮ್ಮ ಆಯ್ಕೆ ಯಾವುದು ಅಥವಾ ಅಷ್ಟನ್ನೂ ನಿರಾಕರಿಸಬೇಕೆ? ಪುರೋಗಾಮಿ ದೃಷ್ಟಿ ಇರುವ ಅಂಶಗಳನ್ನು ಗುರುತಿಸಿ ಮಾನ್ಯ ಮಾಡಬಹುದೆ? ಮಾಂಸಾಹಾರದ ಬಗೆಗಿನ ವಿವರಗಳನ್ನು ತಿಳಿಯುವುದು ಪ್ರಸ್ತುತವೇ? ಇಂತಹ ಅನೇಕ ಸಂಗತಿಗಳನ್ನು ಆಯಾ ಸಂದರ್ಭಗಳಲ್ಲಿ ಪರಿಶೀಲಿಸುತ್ತಾ ಮುಂದುವರಿಯುವುದು ನಮ್ಮ ಕ್ರಮವಾಗಿರುತ್ತದೆ.

ಯಥಾಕ್ರಮವಾಗಿ ಮುಂದಿನ ಅಧ್ಯಾಯಗಳತ್ತ ಕಣ್ಣುಹಾಯಿಸುವ ಮುನ್ನ ಒಂದೆರಡು ಅಂಶಗಳನ್ನು ಪರಾಮರ್ಶಿಸಿಕೊಳ್ಳುವುದು ಉತ್ತಮ : (ಅ) ಧರ್ಮ ಶಾಸ್ತ್ರಕ್ಕೆ ಸಂಬಂಧಿಸಿದಂತಹ ನಮ್ಮ ಗ್ರಂಥಗಳು ಚರಿತ್ರೆಯ ದೃಷ್ಟಿಯಿಂದ ಏನನ್ನು ತಿಳಿಸುತ್ತವೆ ಅಥವಾ ಸಾಬೀತುಮಾಡುತ್ತವೆ? ಅದು ವಸ್ತುಸ್ಥಿತಿಯ ವಿವರಣೆಯೋ ಅಥವಾ ಆಶಯ ಇಲ್ಲವೇ ನಿರೀಕ್ಷೆಯ ಚಿತ್ರಣವೋ? ಈ ಪ್ರಶ್ನೆಯು ಕೇವಲ ಮನುಸ್ಮೃತಿಯ ಸಂದರ್ಭದಲ್ಲಿ ಪ್ರಸ್ತುತವಲ್ಲ; ವಚನ ಸಾಹಿತ್ಯವೂ ಸೇರಿದಂತೆ ಇಡೀ ಸಾಹಿತ್ಯದ ಪರಿಶೀಲನೆಯನ್ನು ಮಾಡುವಾಗಲೂ ಈ ಪ್ರಶ್ನೆಯನ್ನು ಅವಲೋಕಿಸಬೇಕು. ಅನಕ್ಷರಸ್ಥರೇ ಹೆಚ್ಚಾಗಿದ್ದ ನಮ್ಮ ಪ್ರಾಚೀನ ಸಮಾಜದಲ್ಲಿ ಯಾವುದೇ ಲಿಖಿತ ಗ್ರಂಥದ ವ್ಯಾಪ್ತಿ ಎಷ್ಟಿದ್ದಿರಬಹುದು ಮತ್ತು ಅಂತಹ ಸಾಹಿತ್ಯ ದಲ್ಲಿದ್ದುದನ್ನೆಲ್ಲಾ ಸಮಾಜ ಜೀವನದಲ್ಲಿ ಪ್ರಾಯೋಗಿಕವಾಗಿ ಅಳವಡಿಸಿಕೊಳ್ಳ ಲಾಗಿದ್ದಿತೆ? ಈ ಗ್ರಂಥಗಳಿಂದ ದೊರೆಯುವ ಚಿತ್ರಣಕ್ಕೆ ಪೂರಕವಾಗಿ ನಮಗೆ ನಿಖರವಾದ ಬೇರೆ ಪುರಾವೆಗಳು ಉಂಟೆ ಮತ್ತು ಅಂದಿನ ಆರ್ಥಿಕ ಸನ್ನಿವೇಶವು ಈ ಗ್ರಂಥಗಳಲ್ಲಿ ಪ್ರತಿಫಲಿತವಾಗುವ ಜೀವನಕ್ರಮಕ್ಕೆ ಇಂಬುಕೊಡುವಂತಹು ದಾಗಿದ್ದಿತೆ? ಇದನ್ನು ಇನ್ನೊಂದು ರೀತಿಯಲ್ಲಿ ಅರ್ಥೈಸಿಕೊಳ್ಳೋಣ : ಧರ್ಮಶಾಸ್ತ್ರ ಗ್ರಂಥಗಳಲ್ಲಿ ಸ್ಥೂಲವಾಗಿಯಾದರೂ ಅಂದಿನ ವಸ್ತುಸ್ಥಿತಿಯ ಪ್ರತಿಫಲನವಿದೆ ಎಂದು ಸ್ವೀಕರಿಸುವುದು ಸರಿಯೇ ಅಥವಾ ಸಮಾಜದಲ್ಲಿ ವಸ್ತುಸ್ಥಿತಿಯು ಹೇಗಿದ್ದರೆ ಕೆಲವು ಉಚ್ಚ ವರ್ಗಗಳಿಗೆ ಚೆನ್ನು ಎಂಬುದರ ಕಥನವು ಈ ಗ್ರಂಥಗಳಲ್ಲಿ ದೊರೆಯುತ್ತದೆ ಎಂದು ಭಾವಿಸುವುದು ಸರಿಯೇ? ಧರ್ಮಶಾಸ್ತ್ರ ಗ್ರಂಥಗಳು ಹೆಚ್ಚೆಂದರೆ ಒಬ್ಬ ಸಮಾಜ ವಿಜ್ಞಾನಿಯ ಕೆಲಸವನ್ನು ಸ್ವಲ್ಪಮಟ್ಟಿಗೆ ಮಾಡಬಲ್ಲವು : ಅಂದರೆ ವಸ್ತುಸ್ಥಿತಿಯನ್ನು ನೋಡಿ ಗ್ರಹಿಸುವುದು, ಅದನ್ನು ದಾಖಲಿಸುವುದು ಮತ್ತು ಸಾಮಾನ್ಯೀಕರಿಸುವುದು. ಆಗ ಅಲ್ಲಿಯ ದ್ವಂದ್ವಗಳನ್ನೂ ಗ್ರಂಥದಲ್ಲಿ ಚಿತ್ರಿಸಬೇಕಾಗುತ್ತದೆ. ನಮ್ಮ ಗ್ರಂಥಗಳನ್ನು ನೋಡಿದರೆ ದ್ವಂದ್ವಗಳಿದ್ದುವೆಂಬ ಸೂಚನೆಯೇ ದೊರೆಯುವುದಿಲ್ಲ. ಹಾಗಿದ್ದರೆ ದ್ವಂದ್ವಗಳು ಇರಲೇ ಇಲ್ಲವೆ? ದ್ವಂದ್ವಗಳು ಬಹಳ ಪ್ರಖರವಾಗಿದ್ದುವೆಂಬುದಕ್ಕೆ ಎರಡು ರೀತಿಯ ಪುರಾವೆಗಳಿವೆ : (ಅ) ಧರ್ಮಶಾಸ್ತ್ರಗಳನ್ನು ಆದರಿಸದೆ ಅವಕ್ಕೆ ಪರ್ಯಾಯವಾಗಿ ಹೊರಬಂದಿದ್ದ ಚಿಂತನೆ ಮತ್ತು ಗ್ರಂಥಗಳು; ವಿಶೇಷತಃ ಬುದ್ಧ ಮತ್ತು ಬೌದ್ಧ ಸಾಹಿತ್ಯ ಹಾಗೂ ಲೋಕಾಯತರ ಮತ್ತು ಜಾನಪದರ ಬಗೆಗಿನ ದಾಖಲೆಗಳು; ಮತ್ತು (ಆ) ಒಂದು ಹಂತದ ಧರ್ಮಶಾಸ್ತ್ರ ಗ್ರಂಥಗಳಲ್ಲಿ ಉಕ್ತವಾಗಿರುವ ಕಠಿಣ ನಿಯಮಗಳು ಕಾಲಾಂತರದಲ್ಲಿ ರಚಿತವಾಗಿರುವ ಅವೇ ಧರ್ಮಶಾಸ್ತ್ರ ಗ್ರಂಥಗಳಲ್ಲಿ ಸ್ವಲ್ಪ ಸಡಿಲಗೊಂಡಿರುವ ಪ್ರಬಲ ಕುರುಹುಗಳು.

ಧರ್ಮಶಾಸ್ತ್ರ ಗ್ರಂಥಗಳು ಸರ್ವೋಚ್ಚ ನ್ಯಾಯಾಲಯದ ತೀರ್ಪಿನ ಸ್ಥಾನದಲ್ಲಿಲ್ಲ. (ನ್ಯಾಯಾಲಯದ ತೀರ್ಪನ್ನು ಬುಡಮೇಲು ಮಾಡಲು ಚಳುವಳಿಗಳನ್ನು ನಡೆಸಲಾಗುತ್ತಿರುವುದಕ್ಕೆ ಇಂದಿನ ಶಬರಿಮಲೆ ಪ್ರಸಂಗವು ಒಂದು ಉದಾಹರಣೆ). ಅಂತಹ ಅಗ್ರಮಾನ್ಯತೆ ಇಲ್ಲದಿದ್ದರೂ ಅವುಗಳ ಪ್ರಭಾವವು ಅಂದಂದಿನ ಪ್ರಭುತ್ವಗಳ ಮೂಲಕ ದಟ್ಟವಾಗಿ ಆವರಿಸಿರಲು ಸಾಧ್ಯ. ಆದರೂ ಎಲ್ಲ ವಿಧಿಗಳನ್ನೂ ಅಕ್ಷರಶಃ ಪಾಲಿಸಲು ಸಾಧ್ಯವಾಗಿದ್ದಿತೆ? ವಿರೋಧಿಗಳು ಯಾವ ಪ್ರತಿರೋಧವನ್ನೂ ಒಡ್ಡಲಿಲ್ಲವೆ? ಪ್ರತಿರೋಧ ಇಲ್ಲದಿದ್ದರೆ ವರ್ಣಸಂಕರದ ಭಯಂಕರ ಸಾಧ್ಯತೆಯನ್ನು ಗೀತೆಯು ಅಷ್ಟೊಂದು ಗಂಭೀರವಾಗಿ ಎದುರಿಸುವ ಅಗತ್ಯವೇನೂ ಇರುತ್ತಿರಲಿಲ್ಲ. ಅರ್ಥಾತ್, ಧರ್ಮಶಾಸ್ತ್ರ ಗ್ರಂಥಗಳು ಇಡೀ ಸಮಾಜವನ್ನು ನಿಯಂತ್ರಿಸುವ ಸಾಮರ್ಥ್ಯ ಹೊಂದಿರಲಿಲ್ಲವೇನೋ; ಆದರೆ ಪ್ರಭುತ್ವವು ಅದನ್ನು ತೀವ್ರವಾಗಿ ಕಾರ್ಯಗತಗೊಳಿಸಲು ಮುಂದಾಗುತ್ತಿತ್ತು. ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಅದಕ್ಕೆ ಸಾಕಷ್ಟು ಸೂಚನೆಗಳು ದೊರೆಯುತ್ತವೆ. ಎಲ್ಲೆಡೆ ಇದ್ದಂತೆ ಪ್ರಾಚೀನ ಭಾರತೀಯ ಸಮಾಜವೂ ಚಲನಶೀಲವಾಗಿತ್ತು; ಅದಕ್ಕೆ ವಿರೋಧಿ ನೆಲೆಯೆಂದರೆ ಧರ್ಮಶಾಸ್ತ್ರ ಗ್ರಂಥಗಳು. ಏಕೆಂದರೆ ಅವು 'ಸ್ಥಗಿತ' ಸಮಾಜದ ವಕ್ತಾರರು.

ಇನ್ನು ಎರಡನೆಯ ವಿಚಾರ : ಭಾರತೀಯ ತತ್ತ್ವಶಾಸ್ತ್ರದ ಮೇಲೆ ಧರ್ಮಶಾಸ್ತ್ರ ಗ್ರಂಥಗಳು ಭಾರಿ ಹಿಡಿತವನ್ನು ಸಾಧಿಸಿದ್ದವು. ಸಾಂಖ್ಯ ಮತ್ತು ವೈಶೇಷಿಕ ದರ್ಶನಗಳು ಮೂಲತಃ ಭೌತವಾದಿ ದರ್ಶನಗಳು; ಸಾಂಖ್ಯವನ್ನು ತಿರುಚ ಲಾಯಿತು ಮತ್ತು ವೈಶೇಷಿಕವು ಧರ್ಮಶಾಸ್ತ್ರಕಾರರ ಆಗ್ರಹವನ್ನು ಮನ್ನಿಸಲು ಹೆಸರಿಗಾದರೂ ಕೆಲವು ಹೊಸ ನಮೂನೆಯ ಮಾತುಗಳನ್ನು ತಮ್ಮ ಗ್ರಂಥಗಳಲ್ಲಿ ಸೇರಿಸಿದರು. ಅಲುಗಾಡದೆ ಸುಭದ್ರವಾಗಿ ನಿಂತ ಚಿಂತನೆ ಮತ್ತು ಕ್ರಿಯೆಯೆಂದರೆ ಲೋಕಾಯತ ಮತ್ತು ಜಾನಪದ ಕ್ಷೇತ್ರಗಳಲ್ಲಿ ಮಾತ್ರ. ಬೌದ್ಧರು ಧರ್ಮಶಾಸ್ತ್ರಗಳಿಗೆ ಶರಣಾಗಲಿಲ್ಲ, ಆದರೆ ಬುದ್ಧನ ಮಾರ್ಗವನ್ನು ಭಾವನಾವಾದಿ ವಲಯಕ್ಕೆ ತಳ್ಳಿದ ತತ್ತ್ವಶಾಸ್ತ್ರಜ್ಞರು ಹೇರಳವಾಗಿ ಆಗಿಹೋದರು. ನಮ್ಮ ದೇಶದಲ್ಲಿ ಬುದ್ಧನ ಮೂಲ ಗ್ರಹಿಕೆಗೆ ಚ್ಯುತಿಯುಂಟಾಗಲು ಇವರೂ ನೀರೆರೆದಿದ್ದಾರೆ. ಮುಖ್ಯ ವಿಷಯವೇನೆಂದರೆ ನಮ್ಮ ತತ್ತ್ವಶಾಸ್ತ್ರಜ್ಞರನೇಕರು ಸಾಮಾಜಿಕವಾಗಿ ತೀರಾ ಸಂಪ್ರದಾಯವಾದಿಗಳು ಮತ್ತು ಬಹುತೇಕ ಅವರು ತಥಾಕಥಿತ ಉಚ್ಚವರ್ಣ ಗಳವರು. ತತ್ತ್ವಶಾಸ್ತ್ರದ ಸ್ವಾಯತ್ತ ಕ್ಷೇತ್ರವು ಶಿಥಿಲಗೊಂಡು ಧರ್ಮಶಾಸ್ತ್ರಕಾರರ ಆಣತಿಯಂತೆ ಸಿದ್ಧಾಂತಗಳನ್ನು ನಿರೂಪಿಸಲು ಅವರಲ್ಲಿ ಅನೇಕರು ತುದಿಗಾಲ ಮೇಲೆ ನಿಂತಿದ್ದರು. ಅದಕ್ಕೆ ಅಪವಾದಗಳೂ ಉಂಟು. ಕೆಲವೇಳೆ ತತ್ತ್ವಶಾಸ್ತ್ರವು ಜನವಿರೋಧಿಯಾದುದಕ್ಕೆ ಧರ್ಮಶಾಸ್ತ್ರಕಾರರನ್ನು ಮಾತ್ರವೇ ಟೀಕಿಸುವುದು ಸರಿಯಲ್ಲ. ದಿಟ್ಟತನದಿಂದ ಜನಪರ ಸಿದ್ಧಾಂತಗಳಿಗೆ ಬದ್ಧರಾಗಿ ಉಳಿದವರು ಹೆಚ್ಚು ಮಾನ್ಯರು ಎಂದಷ್ಟೇ ಹೇಳಬಹುದು.

ಮನುಸ್ಮೃತಿಯು ಸುಮ್ಮನೆ ತೆಗಳಿಕೆಗೆ ಇಲ್ಲವೇ ಹೊಗಳಿಕೆಗೆ ಗುರಿಯಾಗ ಬೇಕಾದ ಗ್ರಂಥವಲ್ಲ; ಚಾರಿತ್ರಿಕವಾಗಿ ಅದು ಏನನ್ನು ಪ್ರತಿನಿಧಿಸುತ್ತದೆಂಬುದು ಹೆಚ್ಚು ಪ್ರಸ್ತುತವಾದ ಸಂಗತಿ. "ಡಾ॥ ಬಾಬಾಸಾಹೇಬ ಅಂಬೇಡ್ಕರ್ ಅವರು ಮಹಾಡ್‌ನಲ್ಲಿ ಮನುಸ್ಮೃತಿಯನ್ನು ಸುಟ್ಟುಹಾಕಿದರು" ಎಂದು ಹೇಳುವುದುಂಟು. ಮೊದಲನೆಯದಾಗಿ, ಸುಟ್ಟವರು ಸಹಸ್ರಬುದ್ಧೆ ಎಂಬ ವ್ಯಕ್ತಿ. ಅಂಬೇಡ್ಕರರ ಸಾನ್ನಿಧ್ಯದಲ್ಲಿ ಮತ್ತು ನೇತೃತ್ವದಲ್ಲಿ ಅದನ್ನು ಮಾಡಲಾಯಿತು. ಎರಡನೆಯದಾಗಿ, ಗ್ರಂಥವನ್ನು ಇಡಿಯಾಗಿ ಬೆಂಕಿಗೆ ಹಾಕಲಿಲ್ಲ; ಅತ್ಯಂತ ಆಕ್ಷೇಪಾರ್ಹ ಮತ್ತು ಖಂಡನೀಯ ವಿಷಯಗಳಿರುವ ಶ್ಲೋಕಗಳನ್ನು ವಿಷಯಾನುಸಾರವಾಗಿ ಸಹಸ್ರಬುದ್ಧೆ ಪ್ರತ್ಯೇಕ ಹಾಳೆಗಳಲ್ಲಿ ಬರೆದಿಟ್ಟುಕೊಂಡಿದ್ದರು. ಸಾರ್ವಜನಿಕ ಸಭೆಯಲ್ಲಿ ಅವನ್ನು ಒಂದೊಂದಾಗಿ ಓದಿದರು, ಅವುಗಳ ಅರ್ಥವನ್ನು ಹೇಳಿದರು ಮತ್ತು ಒಂದೊಂದಾಗಿಯೇ ಅವಕ್ಕೆ ಕೊಳ್ಳಿ ಇಟ್ಟರು. ಒಂದೊಂದೇ ಪದ್ಯವನ್ನು ಹಾಳೆಗಳಲ್ಲಿ ಬರೆದು ಸುಡುವುದು ಮುಜುಗರದ ಸಂಗತಿ ಎನಿಸಿದರೆ ಅಂತಹ ಪದ್ಯಗಳನ್ನು ಕಪ್ಪುಶಾಯಿಯಿಂದ ಹೊಡೆದುಹಾಕಬಹುದು ಮತ್ತು ಬೇಕಾದಾಗ ಮತ್ತೆ ಓದಿಕೊಳ್ಳಬಹುದು. ಇಂದು ಮತ್ತು ನಾಳೆ ನಮ್ಮ ಸಾಮಾಜಿಕ–ಆರ್ಥಿಕ ಸಂಬಂಧಗಳು ಹೇಗಿರಬೇಕೆಂಬುದಕ್ಕೆ ಕೆಲವು ಪದ್ಯಗಳನ್ನು ಹೊಡೆದು ಹಾಕುವುದು ನಮ್ಮ ಪ್ರಜ್ಞೆಯ ಒಂದು ಸಾಂಕೇತಿಕ ಅಭಿವ್ಯಕ್ತಿಯಾದೀತು.

**ಜಿ. ರಾಮಕೃಷ್ಣ**
೨–ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್, ೨೨/೧, ೪ನೇ ಕ್ರಾಸ್, ಕಾವೇರಿನಗರ
ಬನಶಂಕರಿ ೩ನೇ ಹಂತ, ಬೆಂಗಳೂರು – ೫೬೦ ೦೮೫

# ತಳಸ್ತರ ಮತ್ತು ಸಂವಿಧಾನ

ಚಾರಿತ್ರಿಕವಾಗಿ ಪಿರಮಿಡ್ ರೂಪದಲ್ಲಿದ್ದ ಸಮಾಜ ಇಂದು ಕೂಡ ಪಿರಮಿಡ್ ರೂಪದಲ್ಲೇ ಇದೆ. ಪಿರಮಿಡ್ ತುದಿಯಲ್ಲಿ ಶೇ. ೫ರಷ್ಟು ಜನರಿದ್ದಾರೆ. ಇವರಲ್ಲಿ ಅಧಿಕಾರ, ಆದಾಯ ಹಾಗೂ ಸ್ಥಾನಮಾನಗಳು ಹೆಚ್ಚಿನ ಪ್ರಮಾಣದಲ್ಲಿ ಕ್ರೋಢೀಕರಣಗೊಂಡಿವೆ. ಪಿರಮಿಡ್ ಮಧ್ಯಭಾಗದಲ್ಲಿ ಶೇ. ೨೦–೨೫ರಷ್ಟು ಜನರಿದ್ದಾರೆ. ಇವರಲ್ಲಿ ಮೇಲಿನವರಿಗಿಂತ ಕಡಿಮೆ ಆದಾಯ, ಅಧಿಕಾರ, ಸ್ಥಾನಮಾನಗಳಿವೆ. ನಮ್ಮ ಸಮಾಜದ ಬಹುತೇಕರು (ಶೇ. ೭೦ರಷ್ಟು) ಪಿರಮಿಡ್ ಬುಡದಲ್ಲಿದ್ದಾರೆ. ಇವರಲ್ಲಿ ಏನೇನೂ ಆದಾಯ, ಅಧಿಕಾರ, ಸ್ಥಾನಮಾನಗಳಿಲ್ಲ. ಎಲ್ಲ ಸಮುದಾಯಗಳಿಂದಲೂ ಪಿರಮಿಡ್ ಬುಡದಲ್ಲಿರುವವರಿದ್ದಾರೆ. ಆದರೆ ದಲಿತ, ಬುಡಕಟ್ಟುಗಳ ಹೆಚ್ಚಿನ ಜನರು ಪಿರಮಿಡ್‌ನ ಬುಡದಲ್ಲಿದ್ದಾರೆ. ದಲಿತ ಬುಡಕಟ್ಟುಗಳ ನಂತರ ಹಿಂದುಳಿದ ಜಾತಿ ಮತ್ತು ಅಲ್ಪಸಂಖ್ಯಾತರು ಕೂಡ ಪಿರಮಿಡ್‌ನ ಬುಡದಲ್ಲಿ ಹೆಚ್ಚಿದ್ದಾರೆ.



**ಎಂ. ಚಂದ್ರ ಪೂಜಾರಿ**

ನಮ್ಮದು ಚಾರಿತ್ರಿಕವಾಗಿ ಒಂದು ಶ್ರೇಣೀಕೃತ ಸಮಾಜ. ಅದು ಪಿರಮಿಡ್ ರೂಪದಲ್ಲಿತ್ತು. ಪಿರಮಿಡ್ ತುದಿಯಲ್ಲಿ ಕೆಲವರಿದ್ದರು, ಬಹುತೇಕರು ಪಿರಮಿಡ್ ಬುಡದಲ್ಲಿದ್ದರು. ಕೆಲವರು ಮಧ್ಯದಲ್ಲಿದ್ದರು. ಯಾರು ಎಲ್ಲಿರಬೇಕೆನ್ನುವುದನ್ನು ಹುಟ್ಟು ಅಥವಾ ಲಿಂಗ, ಜಾತಿಗಳು ತೀರ್ಮಾನಿಸುತ್ತಿದ್ದವು. ಲಿಂಗ, ಜಾತಿ ಅಥವಾ ಹುಟ್ಟು ವ್ಯಕ್ತಿಯ ಆದಾಯ, ಅಧಿಕಾರ, ಸ್ಥಾನಮಾನಗಳನ್ನು ತೀರ್ಮಾನಿಸುತ್ತಿತ್ತು. ವ್ಯಕ್ತಿಯ ಸಾಮಾಜಿಕ, ಆರ್ಥಿಕ, ರಾಜಕೀಯ ಬದುಕನ್ನು ಹುಟ್ಟು ತೀರ್ಮಾನಿಸುತ್ತಿತ್ತು. ಏನು ಕಸುಬು ಮಾಡಬೇಕೆನ್ನುವುದನ್ನು ಹುಟ್ಟು ತೀರ್ಮಾನಿಸುತ್ತಿತ್ತು. ಏನು ಶಿಕ್ಷಣ ಪಡೆಯಬಹುದೆನ್ನುವುದನ್ನು ಹುಟ್ಟು ತೀರ್ಮಾನಿಸುತ್ತಿತ್ತು. ಭೂಮಿ ಹೊಂದಬಹುದೇ ಇಲ್ಲವೇ ಎನ್ನುವುದನ್ನು ಕೂಡ ಹುಟ್ಟು ತೀರ್ಮಾನಿಸುತ್ತಿತ್ತು. ಯಾರನ್ನು ಮದುವೆ ಆಗಬಹುದು, ಯಾರನ್ನು ಆಗಬಾರದೆನ್ನುವುದನ್ನು ಹುಟ್ಟು ತೀರ್ಮಾನಿಸುತ್ತಿತ್ತು. ಅಧಿಕಾರ ಕೂಡ ಹುಟ್ಟಿನಿಂದಲೇ ಬರುವ ಸಂಗತಿ. ಶಿಕ್ಷೆ ಮತ್ತು ಹುಟ್ಟಿನ ನಡುವೆ ಸಂಬಂಧ ಇತ್ತು. ಒಂದೇ ತಪ್ಪಿಗೆ ಮೇಲ್ಜಾತಿಯವರಿಗೆ ಕಡಿಮೆ ಶಿಕ್ಷೆ, ಕೆಳಜಾತಿಯವರಿಗೆ ಕಠಿಣ ಶಿಕ್ಷೆ. ಇವನ್ನು ಸಮರ್ಥಿಸುವ ಸಿದ್ಧಾಂತಗಳೂ ಇದ್ದವು. ಬ್ರಹ್ಮ ಸೃಷ್ಟಿ ಶ್ರೇಣೀಕೃತ ಸಮಾಜವನ್ನು ಸಮರ್ಥಿಸಿದರೆ, ಕರ್ಮ ಸಿದ್ಧಾಂತ ವ್ಯಕ್ತಿಯ ನಿರ್ದಿಷ್ಟ ಸ್ಥಿತಿಯನ್ನು ಸಮರ್ಥಿಸುತ್ತಿತ್ತು. ಇಂತಹ ಶ್ರೇಣೀಕೃತ ಸಮಾಜವನ್ನು ಪರಿವರ್ತಿಸುವ ಉದ್ದೇಶದಿಂದ ಸಂವಿಧಾನ ರೂಪುಗೊಂಡಿದೆ.

ನ್ಯಾಯಯುತ ಸಮಾಜ ನಿರ್ಮಾಣದ ಆಶಯವನ್ನು ಸಂವಿಧಾನದ ಪೀಠಿಕೆ ವ್ಯಕ್ತಪಡಿಸುತ್ತಿದೆ. ನ್ಯಾಯಯುತ ಸಮಾಜದಲ್ಲಿ ಗಂಡು ಹೆಣ್ಣು, ಮೇಲ್ಜಾತಿ ಕೆಳಜಾತಿ ಎನ್ನುವ ಭೇದ ಇಲ್ಲದೆ ಎಲ್ಲ ಪ್ರಜೆಗಳಿಗೂ ಸಮಾನ ಅವಕಾಶ ಮತ್ತು ಸ್ಥಾನಮಾನಗಳಿರಬೇಕು. ಎಲ್ಲ ಪ್ರಜೆಗಳು ಸಾಮಾಜಿಕ, ರಾಜಕೀಯ ಹಾಗೂ ಆರ್ಥಿಕ ನ್ಯಾಯವನ್ನು ಅನುಭವಿಸಬೇಕೆಂದು ಸಂವಿಧಾನದ ಪೀಠಿಕೆ ಸ್ಪಷ್ಟಪಡಿಸಿದೆ. ಮೂಲಭೂತ ಹಕ್ಕುಗಳ ಮೇಲಿನ ಎಲ್ಲ ಆರ್ಟಿಕಲ್‌ಗಳು ಎಲ್ಲರನ್ನೂ ಅಂದರೆ ಚರಿತ್ರೆಯಿಂದ ಬಂದ ಜಾತಿ, ಧರ್ಮ, ಲಿಂಗ ತಾರತಮ್ಯಗಳನ್ನು ಅಲ್ಲಗಳೆದು ಸಮಾನರಾಗಿ ನೋಡಬೇಕೆಂದು ತಾಕೀತು ಮಾಡುತ್ತವೆ. ಆರ್ಟಿಕಲ್ ೧೪ರ ಪ್ರಕಾರ ಕಾನೂನಿನ ಮುಂದೆ ಎಲ್ಲರೂ ಸಮಾನರು ಅಥವಾ ಕಾನೂನು ಗಂಡು ಹೆಣ್ಣು ಮೇಲ್ಜಾತಿ ಕೆಳಜಾತಿ ಅಥವಾ ಬಹುಸಂಖ್ಯಾತ ಅಲ್ಪಸಂಖ್ಯಾತ ಎನ್ನುವ ವ್ಯತ್ಯಾಸ ಮಾಡುವುದಿಲ್ಲ. ಆರ್ಟಿಕಲ್ ೧೫ (೧) ಜಾತಿ, ಧರ್ಮ, ಲಿಂಗ, ಪ್ರದೇಶದ ನೆಲೆಯಲ್ಲಿ ನಕರಾತ್ಮಕ ತಾರತಮ್ಯ ಮಾಡುವುದನ್ನು ನಿಷೇಧಿಸುತ್ತದೆ. ಆರ್ಟಿಕಲ್ ೧೫ (೪) ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಹಿಂದುಳಿದ ವರ್ಗದ ಅಭಿವೃದ್ಧಿಗಾಗಿ ವಿಶೇಷ ಕಾನೂನು ರಚಿಸುವ ಅಧಿಕಾರವನ್ನು ಪ್ರಭುತ್ವಕ್ಕೆ ನೀಡಿದೆ. ಆರ್ಟಿಕಲ್ ೧೬ (೪) ಉದ್ಯೋಗದಲ್ಲಿ ತಳಸ್ತರದ ಜನರಿಗೆ ಅಥವಾ ಹಿಂದುಳಿದ ವರ್ಗಗಳಿಗೆ ಮೀಸಲಾತಿ ಕಲ್ಪಿಸಲು ಅವಕಾಶ ನೀಡುತ್ತದೆ. ಆರ್ಟಿಕಲ್ ೧೭ ಅಸ್ಪೃಶ್ಯತೆಯನ್ನು ನಿಷೇಧಿಸುತ್ತದೆ. ಚರಿತ್ರೆಯಿಂದ ಬಂದ ಲಿಂಗ, ಜಾತಿ, ಧರ್ಮಗಳ ಕಟ್ಟುಪಾಡುಗಳನ್ನು ಮೀರಿ ಎಲ್ಲರೂ ಧಾರ್ಮಿಕ ವಿಧಿವಿಧಾನಗಳನ್ನು ಆಚರಿಸುವ ಸಮಾನ ಹಕ್ಕನ್ನು ಆರ್ಟಿಕಲ್ ೨೫ (೧) ನೀಡಿದೆ. ಆರ್ಟಿಕಲ್ ೩೪೦ (೧) ಹಿಂದುಳಿದ ವರ್ಗಗಳ

ಅಭಿವೃದ್ಧಿ ಹಿಂದುಳಿದ ವರ್ಗಗಳ ಆಯೋಗ ರಚಿಸಲು ಅವಕಾಶ ಕಲ್ಪಿಸಿದೆ.

ರಾಜ್ಯ ನಿರ್ದೇಶನ ತತ್ತ್ವಗಳು ಕೂಡ ಸಮಾನತೆಯನ್ನು ಪ್ರತಿಪಾದಿಸುತ್ತಿವೆ. ಆರ್ಟಿಕಲ್ ೩೮ (೧) ಸಮಾಜದ ಎಲ್ಲರಿಗೂ ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ನ್ಯಾಯ ಲಭಿಸುವ ಸಾಮಾಜಿಕ ವ್ಯವಸ್ಥೆಯನ್ನು ರೂಪಿಸುವ ಜವಾಬ್ದಾರಿಯನ್ನು ಪ್ರಭುತ್ವ ಹೊಂದಿದೆಯೆಂದು ಹೇಳುತ್ತದೆ. ಆರ್ಟಿಕಲ್ ೩೮ (೨) ಆದಾಯದಲ್ಲಿ, ಅವಕಾಶಗಳಲ್ಲಿ, ಸವಲತ್ತುಗಳಲ್ಲಿ, ಸ್ಥಾನಮಾನಗಳಲ್ಲಿ ಅಸಮಾನತೆಯನ್ನು ಕಡಿಮೆಗೊಳಿಸುವ ಹೊಣೆಗಾರಿಕೆಯನ್ನು ಪ್ರಭುತ್ವದ ಮೇಲೆ ಹೊರಿಸಿದೆ. ಆರ್ಟಿಕಲ್ ೩೯ (೨) ಪ್ರಕಾರ ರಾಷ್ಟ್ರೀಯ ಸಂಪತ್ತಿನ ಮೂಲಗಳ ಒಡೆತನ ಮತ್ತು ನಿಯಂತ್ರಣ ಸಾರ್ವಜನಿಕ ಹಿತದೃಷ್ಟಿಯಿಂದ ರೂಪಿತವಾಗಬೇಕು. ಆರ್ಟಿಕಲ್ ೩೯ (೩) ಸಮಾಜದ ಎಲ್ಲರಿಗೂ ಗುಣಮಟ್ಟದ ಬದುಕು ನೀಡುವ ರೀತಿಯಲ್ಲಿ ಅರ್ಥ ವ್ಯವಸ್ಥೆಯನ್ನು ರೂಪಿಸಬೇಕು ಅಥವಾ ಸಂಪತ್ತು ಮತ್ತು ಉತ್ಪಾದನ ಸಾಧನಗಳು ಕೆಲವರಲ್ಲೇ ಕ್ರೋಢೀಕರಣಗೊಳ್ಳುವ ರೀತಿಯಲ್ಲಿ ನಮ್ಮ ಅರ್ಥ ವ್ಯವಸ್ಥೆಯನ್ನು ಸಂಘಟಿಸಬಾರದೆಂದು ಹೇಳುತ್ತದೆ. ಆರ್ಟಿಕಲ್ ೩೯ (ಡಿ) ವೇತನ ನೀಡುವಾಗ ಲಿಂಗ ತಾರತಮ್ಯ ಮಾಡದೆ ಸಮಾನ ಕೆಲಸಕ್ಕೆ ಸಮಾನ ವೇತನ ನೀಡಬೇಕೆನ್ನುತ್ತದೆ. ಆರ್ಟಿಕಲ್ ೪೨ ಮಹಿಳಾ ಕೆಲಸಗಾರರಿಗೆ ಹೆರಿಗೆ ಭತ್ತೆ ಮತ್ತು ರಜೆ ನೀಡಲು ಸೂಚಿಸುತ್ತದೆ. ೧೯೭೬ರಲ್ಲಿ ನಡೆದ ಸಂವಿಧಾನದ ೪೨ನೇ ತಿದ್ದುಪಡಿ ಸಮಾಜವಾದಿ, ಜಾತ್ಯತೀತ ಸಮಾಜ ರೂಪಿಸುವ ಘೋಷಣೆ ಮಾಡಿದೆ. ಸಂವಿಧಾನದ ೭೩ ಮತ್ತು ೭೪ನೇ ತಿದ್ದುಪಡಿಯಲ್ಲಿ ಸ್ಥಳೀಯ ಸಂಸ್ಥೆಗಳಲ್ಲಿ ದಲಿತರು, ಮಹಿಳೆಯರು ಮತ್ತು ಹಿಂದುಳಿದ ವರ್ಗಗಳಿಗೆ ಮೀಸಲಾತಿ ನೀಡಲು ಅವಕಾಶ ಕಲ್ಪಿಸಲಾಗಿದೆ.




**ಪರಿಣಾಮ ಏನು?**

ಸಮಾನತೆ, ಸ್ವಾತಂತ್ರ್ಯ, ಭ್ರಾತೃತ್ವಗಳನ್ನು ಪ್ರತಿಪಾದಿಸುವ ಸಂವಿಧಾನ ಅನುಷ್ಠಾನಕ್ಕೆ ಬಂದು ಇನ್ನು ಕೆಲವೇ ವರ್ಷಗಳಲ್ಲಿ ಏಳು ದಶಕಗಳಾಗಲಿವೆ. ಒಂದು ದೇಶದ ಆಯುಷ್ಯದಲ್ಲಿ ಇದೊಂದು ದೀರ್ಘಾವಧಿ ಅಲ್ಲದಿರಬಹುದು. ಹಾಗೆಂದು ಏನೇನೂ ಸಾಧನೆ ಮಾಡಲು ಸಾಕಾಗದ ಅವಧಿ ಇದಲ್ಲ. ಸಂವಿಧಾನೋತ್ತರ ನಮ್ಮ ಸಮಾಜ ಹೇಗಿದೆ? ಸಂವಿಧಾನ ಜಾರಿಗೆ ಬಂದ ನಂತರದ ಬದಲಾವಣೆಗಳೇನು? ಪಿರಮಿಡ್ ರೂಪದಲ್ಲಿದ್ದ ಸಮಾಜ ಬದಲಾಗಿದೆಯೇ? – ಎಂದು ಕೇಳಲು ಈ ಅವಧಿ ಸಾಕು. ಈ ಪ್ರಶ್ನೆಗಳಿಗೆ ಕೇವಲ ಒಂದು ಉತ್ತರ ಸಾಧ್ಯವಿಲ್ಲ. ಏಣಿಯ ಮೇಲಿದ್ದವರು ಒಂದು ಉತ್ತರ ಕೊಟ್ಟರೆ ಕೆಳಗಿರುವವರು ಮತ್ತೊಂದು ಉತ್ತರ ಕೊಡಬಹುದು. ಪಿರಮಿಡ್ ಬುಡದಲ್ಲಿ ನಿಂತು ನೋಡಿದರೆ ವಿಶೇಷ ಬದಲಾವಣೆಗಳು ಕಂಡು ಬರುವುದಿಲ್ಲ. ಚಾರಿತ್ರಿಕವಾಗಿ ಪಿರಮಿಡ್ ರೂಪದಲ್ಲಿದ್ದ ಸಮಾಜ ಇಂದು ಕೂಡ ಪಿರಮಿಡ್ ರೂಪದಲ್ಲೇ ಇದೆ. ಪಿರಮಿಡ್ ತುದಿಯಲ್ಲಿ ಶೇ. ೫ರಷ್ಟು ಜನರಿದ್ದಾರೆ. ಇವರಲ್ಲಿ ಅಧಿಕಾರ, ಆದಾಯ ಹಾಗೂ ಸ್ಥಾನಮಾನಗಳು ಹೆಚ್ಚಿನ ಪ್ರಮಾಣದಲ್ಲಿ ಕ್ರೋಢೀಕರಣಗೊಂಡಿವೆ. ಪಿರಮಿಡ್ ಮಧ್ಯಭಾಗದಲ್ಲಿ ಶೇ. ೨೦–೨೫ರಷ್ಟು ಜನರಿದ್ದಾರೆ. ಇವರಲ್ಲಿ ಮೇಲಿನವರಿಗಿಂತ ಕಡಿಮೆ ಆದಾಯ, ಅಧಿಕಾರ, ಸ್ಥಾನಮಾನಗಳಿವೆ. ನಮ್ಮ ಸಮಾಜದ ಬಹುತೇಕರು (ಶೇ. ೭೦ರಷ್ಟು) ಪಿರಮಿಡ್ ಬುಡದಲ್ಲಿದ್ದಾರೆ. ಇವರಲ್ಲಿ ಏನೇನೂ ಆದಾಯ,



ಅಧಿಕಾರ, ಸ್ಥಾನಮಾನಗಳಿಲ್ಲ. ಎಲ್ಲ ಸಮುದಾಯಗಳಿಂದಲೂ ಪಿರಮಿಡ್ ಬುಡದಲ್ಲಿರುವವರಿದ್ದಾರೆ. ಆದರೆ ದಲಿತ, ಬುಡಕಟ್ಟುಗಳ ಹೆಚ್ಚಿನ ಜನರು ಪಿರಮಿಡ್‌ನ ಬುಡದಲ್ಲಿದ್ದಾರೆ. ದಲಿತ ಬುಡಕಟ್ಟುಗಳ ನಂತರ ಹಿಂದುಳಿದ ಜಾತಿ ಮತ್ತು ಅಲ್ಪಸಂಖ್ಯಾತರು ಕೂಡ ಪಿರಮಿಡ್ ಬುಡದಲ್ಲಿ ಹೆಚ್ಚಿದ್ದಾರೆ.

ಫೋರ್ಬ್ಸ್ ಪತ್ರಿಕೆ ಪ್ರತಿವರ್ಷ ಪ್ರಪಂಚದ ೫೦೦ ಶ್ರೀಮಂತರ ಪಟ್ಟಿ ಬಿಡುಗಡೆ ಮಾಡುತ್ತಿದೆ. ೨೦೧೩ರ ಫೋರ್ಬ್ಸ್ ಪತ್ರಿಕೆಯ ವರದಿ ಪ್ರಕಾರ ಪ್ರಪಂಚದ ೫೦೦ ಶ್ರೀಮಂತರಲ್ಲಿ ಭಾರತದ ೫೫ ಮಂದಿ ಶ್ರೀಮಂತರಿದ್ದಾರೆ. ಇವತ್ತು ಅದು ೧೨೧ ಮಂದಿಗೆ ಏರಿದೆ. ೨೦೧೩ರಲ್ಲಿದ್ದ ೫೫ರಲ್ಲಿ ಹತ್ತು ಮಂದಿ ಶ್ರೀಮಂತರ ಆದಾಯ ಉಳಿದ ೪೫ ಮಂದಿಯ ಒಟ್ಟು ಆದಾಯವನ್ನು ಮೀರಿಸುವಷ್ಟಿದೆ. ಇವರ್‍ಯಾರೆಂದು ಅರುಂಧತಿ ರಾಯ್ ಅವರು ಅಂಬೇಡ್ಕರ್ ಅವರ ಅನಿಹಿಲೇಶನ್ ಆಫ್ ಕಾಸ್ಟ್ ಪುಸ್ತಕಕ್ಕೆ ಬರೆದ ಪ್ರಸ್ತಾವನೆಯಲ್ಲಿ ಗುರುತಿಸಿದ್ದಾರೆ. ಭಾರತದ ಅತ್ಯಂತ ಶ್ರೀಮಂತ ಹತ್ತು ಮಂದಿಯಲ್ಲಿ ೭ ಮಂದಿ ಅಥವಾ ಶೇ. ೭೦ರಷ್ಟು ಮಂದಿ ಒಂದೇ ಜಾತಿಯಿಂದ – ಬನಿಯಾ ಸಮುದಾಯದಿಂದ ಬಂದಿದ್ದಾರೆ. ಉಳಿದ ೪೫ ಮಂದಿ ಶ್ರೀಮಂತರಲ್ಲಿ ೧೯ ಮಂದಿ ಅಥವಾ ಶೇ. ೪೨ರಷ್ಟು ಇದೇ ಬನಿಯಾ ಸಮುದಾಯದಿಂದ ಬಂದಿದ್ದಾರೆ. ಉಳಿದ ಶ್ರೀಮಂತರು ಪಾರ್ಸಿ, ಬೋಹ್ರಾ, ಖತ್ರೀಸ್ ಮುಂತಾದ ವ್ಯಾಪಾರಿ ಸಮುದಾಯದಿಂದ ಬಂದಿದ್ದಾರೆ. ಬ್ರಾಹ್ಮಣರಿಂದ ಕೆಲವು ಮತ್ತು ಹಿಂದುಳಿದ ಜಾತಿಯಿಂದ ಒಬ್ಬರು ಶ್ರೀಮಂತರ ಪಟ್ಟಿಯಲ್ಲಿದ್ದಾರೆ. ದಲಿತ ಬುಡಕಟ್ಟುಗಳಿಂದ ಒಬ್ಬರೂ ಇಲ್ಲ. ಇದು ಪಿರಮಿಡ್‌ನ ಮೇಲಿರುವ ಜಾತಿಗಳ ಒಂದು ಸಣ್ಣ ಚಿತ್ರಣ.

ಇನ್ನು ಪಿರಮಿಡ್ ಬುಡದಲ್ಲಿರುವವರ ಬಗ್ಗೆ ಕೆ. ಪಿ. ಕಣ್ಣನ್ ತಮ್ಮ *"ಇಂಟರಾಗೆಟಿಂಗ್ ಇನ್‌ಕ್ಲುಸಿವ್ ಗ್ರೋಥ್ – ಪಾವರ್ಟಿ ಆ್ಯಂಡ್ ಇನಿಕ್ವಾಲಿಟಿ ಇನ್ ಇಂಡಿಯಾ"* ಎಂಬ ಪುಸ್ತಕದಲ್ಲಿ ಈ ಕೆಳಗಿನ ತೀರ್ಮಾನಕ್ಕೆ ಬರುತ್ತಾರೆ. ಅವರ ಪ್ರಕಾರ ನಮ್ಮಲ್ಲಿ ಸುಮಾರು ೨೪ ಕೋಟಿ ಅತ್ಯಂತ ಬಡವರಿದ್ದಾರೆ. ಅತ್ಯಂತ ಬಡವರೆಂದರೆ ಬಡತನ ರೇಖೆಯಷ್ಟು ಅಥವಾ ಅದಕ್ಕಿಂತಲೂ ಕಡಿಮೆ ಆದಾಯ ಇರುವವರು. ಅಂದರೆ ಮೂರು ಹೊತ್ತಿನ ಊಟಕ್ಕೆ, ವಸತಿಗೆ ಪರದಾಡುವವರು. ಅತ್ಯಂತ ಬಡವರಲ್ಲಿ ಅರ್ಧದಷ್ಟು (ಶೇ. ೪೧) ದಲಿತ ಬುಡಕಟ್ಟು ಜನರಿದ್ದರೆ ಮೂರನೇ ಒಂದು ಭಾಗದಷ್ಟು ಹಿಂದುಳಿದ ಜಾತಿ ಜನರಿದ್ದಾರೆ. ಶೇ. ೧೬ರಷ್ಟು ಮುಸ್ಲಿಮರು ಕೂಡ ಅತ್ಯಂತ ಬಡವರು. ಮೇಲ್ಜಾತಿಗಳಲ್ಲಿ ಅತ್ಯಲ್ಪ ಸಂಖ್ಯೆಯ (ಶೇ. ೯ರಷ್ಟು) ಜನರು ಅತ್ಯಂತ ಬಡವರಿದ್ದಾರೆ. ಇದೇ ಸಂದರ್ಭದಲ್ಲಿ ನಮ್ಮಲ್ಲಿ ಸುಮಾರು ೨೧ ಕೋಟಿ ಮಧ್ಯಮ ವರ್ಗಕ್ಕೆ ಸೇರಿದವರಿದ್ದಾರೆ. ಇವರು ಬಡತನ ರೇಖೆಗಿಂತ ಕೆಲವು ಪಟ್ಟು ಹೆಚ್ಚಿನ ಆದಾಯವುಳ್ಳವರು. ದಲಿತ ಬುಡಕಟ್ಟುಗಳ ಶೇ. ೧೬ರಷ್ಟು, ಮುಸ್ಲಿಮರ ಶೇ. ೯ರಷ್ಟು ಮತ್ತು ಹಿಂದುಳಿದ ಜಾತಿಗಳ ಶೇ. ೩೩ರಷ್ಟು ಮಂದಿ ಮಧ್ಯಮವರ್ಗದ ಆದಾಯ ಹೊಂದಿದ್ದಾರೆ. ಈ ಮೂರು ಗುಂಪುಗಳಿಗೆ ಹೋಲಿಸಿದರೆ ಅತ್ಯಂತ ಹೆಚ್ಚು ಸಂಖ್ಯೆಯ (ಶೇ. ೪೨) ಮೇಲ್ಜಾತಿ ಜನರು ಮಧ್ಯಮವರ್ಗದ ಆದಾಯ ಹೊಂದಿದ್ದಾರೆ.

ಇದೇ ರೀತಿಯಲ್ಲಿ ನಮ್ಮಲ್ಲಿ ಸುಮಾರು ೪ ಕೋಟಿ ಶ್ರೀಮಂತರಿದ್ದಾರೆ. ಇವರು ಬಡತನ ರೇಖೆಗಿಂತ ಹಲವು ಸಾವಿರಪಟ್ಟು ಹೆಚ್ಚು ಆದಾಯ ಹೊಂದಿರುವವರು. ಅತ್ಯಂತ ಬಡವರಲ್ಲಿ ದಲಿತ ಬುಡಕಟ್ಟುಗಳು ಹೇಗೆ ಹೆಚ್ಚಿದ್ದಾರೋ ಅದೇ ರೀತಿಯಲ್ಲಿ ೪ ಕೋಟಿ ಶ್ರೀಮಂತರಲ್ಲಿ ಅರ್ಧಕ್ಕಿಂತಲೂ ಹೆಚ್ಚು (ಶೇ. ೬೫) ಮೇಲ್ಜಾತಿ ಜನರಿದ್ದಾರೆ. ದಲಿತ ಬುಡಕಟ್ಟು ಮತ್ತು ಮುಸ್ಲಿಮರಲ್ಲಿ ಅತ್ಯಲ್ಪ ಜನರು (ಶೇ. ೭) ಶ್ರೀಮಂತರಿದ್ದಾರೆ. ಇವರಿಗೆ ಹೋಲಿಸಿದರೆ ಹಿಂದುಳಿದ ಜಾತಿಗಳು ವಾಸಿ. ನಾಲ್ಕು ಕೋಟಿ ಶ್ರೀಮಂತರಲ್ಲಿ ಹಿಂದುಳಿದ ಜಾತಿಗಳ ಶೇ. ೨೧ ಜನರಿದ್ದಾರೆ. ಹೀಗೆ ಜಾತಿ ಮತ್ತು ಅಭಿವೃದ್ಧಿ ನಡುವೆ ನೇರ ಸಂಬಂಧ ಇದೆ. ಹೀಗೆ ಇವತ್ತು ಕೂಡ ಹುಟ್ಟು ಮತ್ತು ಶಿಕ್ಷಣ, ಶಿಕ್ಷೆ, ಕಸುಬುಗಳ ನಡುವೆ ಸಂಬಂಧ ಇದೆ. ಶೇಕಡಾವಾರು ಲೆಕ್ಕಾಚಾರ ನೋಡಿದರೆ ದಲಿತ ಬುಡಕಟ್ಟುಗಳ, ಮಹಿಳೆಯರ, ಮುಸ್ಲಿಮರ ಸಾಕ್ಷರತಾ ಪ್ರಮಾಣ ಒಟ್ಟು ಸಾಕ್ಷರತಾ ಪ್ರಮಾಣಕ್ಕಿಂತ ಕಡಿಮೆ ಇದೆ. ಶಿಕ್ಷೆ ಮತ್ತು ಜಾತಿ ನಡುವೆ ಸಂಬಂಧ ಇದೆ. ದೇಶದ ಎಲ್ಲ ಜೈಲುಗಳಲ್ಲೂ ವಿಚಾರಣಾಪೂರ್ವ ಕೈದಿಗಳು ದೊಡ್ಡ ಸಂಖ್ಯೆಯಲ್ಲಿದ್ದಾರೆ. ವಿಚಾರಣಾಪೂರ್ವ ಕೈದಿಗಳೆಂದರೆ ಮಾಡಿದ ತಪ್ಪು ಕಾನೂನು ಪ್ರಕಾರ ತಪ್ಪೆಂದು ತೀರ್ಮಾನಿಸುವ ಮುನ್ನ ಗುಮಾನಿ ಮೇಲೆ ಜೈಲುಗಳಲ್ಲಿ ಬಂಧಿಯಾಗಿರುವವರು. ತಾವು ತಪ್ಪು ಮಾಡಿಲ್ಲವೆಂದು ಕೋರ್ಟ್‌ನಲ್ಲಿ ವಾದಿಸಲು ವಕೀಲರನ್ನು ನೇಮಕ ಮಾಡಲು ಶಕ್ತಿ ಇಲ್ಲದವರು ಅಥವಾ ಕೋರ್ಟ್ ವಿಧಿಸುವ ದಂಡ ತೆರಲು ಅಸಮರ್ಥರಾಗಿರುವವರು. ಇವರಲ್ಲಿ ದಲಿತ, ಬುಡಕಟ್ಟು, ಹಿಂದುಳಿದ ವರ್ಗ, ಅಲ್ಪಸಂಖ್ಯಾತರ ಸಂಖ್ಯೆ ಹೆಚ್ಚಿದೆ. ಇಂದು ಕೂಡ ಸಫಾಯಿ ಕರ್ಮಚಾರಿಗಳಲ್ಲಿ ದಲಿತರನ್ನು ಹೊರತುಪಡಿಸಿದ ಜಾತಿಗೆ ಸೇರಿದ ಜನರನ್ನು ನೋಡುವುದು ಕಷ್ಟ.

**ಏಕೆ ಹೀಗಾಯಿತು?**

ಸಂವಿಧಾನ ಜಾರಿಗೆ ಬಂದು ಹಲವು ದಶಕಗಳ ನಂತರವೂ ಏಕೆ ಮೂಲಭೂತ ಪರಿವರ್ತನೆಗಳನ್ನು ನೋಡಲು ಸಾಧ್ಯವಾಗಿಲ್ಲ ಎನ್ನುವ ಪ್ರಶ್ನೆಗೆ ಮೂರು ನಾಲ್ಕು ಕಾರಣಗಳನ್ನು ಪಟ್ಟಿ ಮಾಡಬಹುದು. ಮೊದಲ ಕಾರಣ ನಂಬಿಕೆ ವರ್ಸಸ್ ಸಂವಿಧಾನಿಕ ಮೌಲ್ಯಗಳು. ಸಂಸ್ಕೃತಿ, ನಂಬಿಕೆ, ಧರ್ಮಗಳ ಹೆಸರಲ್ಲಿ ಸಾಂವಿಧಾನಿಕ ಮೌಲ್ಯಗಳನ್ನು ಅಲ್ಲಗಳೆಯುವ ಪ್ರಯತ್ನಗಳು ಸಾಂವಿಧಾನ ಅನುಷ್ಠಾನಗೊಂಡ ದಿನದಿಂದಲೇ ಆರಂಭವಾಗಿದೆ ಮತ್ತು ಇಂದು ಕೂಡ ಮುಂದುವರಿಯುತ್ತಿದೆ. ಸಾಂವಿಧಾನಿಕ ಮೌಲ್ಯಗಳನ್ನು ಜಾರಿಗೆ ತರಲು ರೂಪಿಸಿದ ಕಾನೂನುಗಳಿಗೆ ಸಾಮಾಜಿಕ ಸಾಂಸ್ಕೃತಿಕ ಒಪ್ಪಿಗೆಯನ್ನು ಸತತ



ತಿರಸ್ಕರಿಸುತ್ತಲೇ ಬರಲಾಗಿದೆ. ಮಹಿಳೆಯ ಎರಡನೇ ದರ್ಜೆ ಸ್ಥಾನಮಾನ ಚರಿತ್ರೆಯಿಂದ ಬಂದಿದೆ. ಇದನ್ನು ಸರಿಪಡಿಸಲು ವರದಕ್ಷಿಣೆ ನಿಷೇಧ ಕಾಯಿದೆ, ಭ್ರೂಣಹತ್ಯೆ ನಿಷೇಧ ಕಾಯಿದೆ, ಲೈಂಗಿಕ ದೌರ್ಜನ್ಯ ತಡೆ ಕಾಯಿದೆಗಳು ಜಾರಿಗೆ ಬಂದಿವೆ. ಆದರೆ ಇವುಗಳಿಗೆ ಸಾಮಾಜಿಕ ಒಪ್ಪಿಗೆ ಇಲ್ಲದೆ ಇಂದು ಕೂಡ ವರದಕ್ಷಿಣೆ, ಭ್ರೂಣ ಹತ್ಯೆ, ಲೈಂಗಿಕ ದೌರ್ಜನ್ಯಗಳು ಮುಂದುವರಿದಿವೆ. ಮೂಲಭೂತ ಹಕ್ಕುಗಳ ಆರ್ಟಿಕಲ್ ೧೭ನ್ನು ಬಳಸಿಕೊಂಡು ಅಸ್ಪೃಶ್ಯತೆ ನಿಷೇಧ ಕಾಯಿದೆ ಜಾರಿಗೆ ಬಂದು ಹಲವು ದಶಕಗಳೇ ಕಳೆದಿವೆ. ಆದರೆ ಇಂದು ಕೂಡ ನೇರ ಮತ್ತು ಪರೋಕ್ಷ ಅಸ್ಪೃಶ್ಯತೆ ಆಚರಣೆಯಲ್ಲಿದೆ. ಗ್ರಾಮೀಣ ಪ್ರದೇಶಗಳಲ್ಲಿ ದಲಿತರಿಗೆ ದೇವಸ್ಥಾನಗಳಿಗೆ ಪ್ರವೇಶ ನಿರಾಕರಿಸುವುದು, ಹೋಟೆಲುಗಳಲ್ಲಿ ಪ್ರತ್ಯೇಕ ವ್ಯವಸ್ಥೆ ಮಾಡುವುದು, ದೋಬಿ, ಕ್ಷೌರಿಕ ಸೇವೆ ನಿರಾಕರಿಸುವುದು ಇವತ್ತೂ ನಡೆಯುತ್ತಿದೆ. ಪೇಟೆ ಪಟ್ಟಣಗಳಲ್ಲಿ ಅಸ್ಪೃಶ್ಯತೆ ಸೂಕ್ಷ್ಮ ರೂಪದಲ್ಲಿ ನಡೆಯುತ್ತಿದೆ.

ಬಾಡಿಗೆ ಮನೆ ಹುಡುಕುವಾಗ ನೇರ ಜಾತಿ ಕೇಳುವ ಬದಲು ವೆಜ್ ನಾನ್‌ವೆಜ್ ಮೂಲಕ ಜಾತಿ ತಿಳಿದುಕೊಳ್ಳಲು ಪ್ರಯತ್ನಿಸುವುದು, ವಸತಿ ಸಮುಚ್ಚಯಗಳಲ್ಲಿ ನಿರ್ದಿಷ್ಟ ಜಾತಿ, ಧರ್ಮದ ಆಧಾರದ ಮೇಲೆ ಜನರನ್ನು ಅಘೋಷಿತವಾಗಿ ಹೊರಗಿಡುವುದು ನಡೆಯುತ್ತಿದೆ. ಇವೆಲ್ಲದರ ಮುಂದುವರಿದ ಭಾಗವಾಗಿ ಇತ್ತೀಚಿನ ಶಬರಿಮಲೆ ಘಟನೆಯನ್ನು ನೋಡಬಹುದು. ಶುದ್ಧ ಅಶುದ್ಧತೆಯ ನೆಲೆಯಲ್ಲಿ ಮುಟ್ಟಾಗುವ ವಯಸ್ಸಿನ ಮಹಿಳೆಯರಿಗೆ ಶಬರಿಮಲೆ ಕ್ಷೇತ್ರ ಪ್ರವೇಶವನ್ನು ನಿರಾಕರಿಸಲಾಗಿತ್ತು. ದೇವಸ್ಥಾನದ ಈ ತೀರ್ಮಾನವನ್ನು ಸುಪ್ರೀಂ ಕೋರ್ಟ್ ತಪ್ಪೆಂದು ಪರಿಗಣಿಸಿ ಎಲ್ಲ ವಯಸ್ಸಿನ ಮಹಿಳೆಯರಿಗೆ ಪ್ರವೇಶ ನೀಡಬೇಕೆಂದು ತೀರ್ಮಾನ ನೀಡಿದೆ. ಶಬರಿಮಲೆ ಪ್ರವೇಶಕ್ಕೆ ಅನುವು ಮಾಡಿಕೊಟ್ಟ ಸುಪ್ರೀಂ ಕೋರ್ಟ್ ತೀರ್ಮಾನವನ್ನು ಸ್ಥಳೀಯ ಧಾರ್ಮಿಕ ನಂಬಿಕೆ ಹೆಸರಲ್ಲಿ ತಿರಸ್ಕರಿಸಲಾಗುತ್ತಿದೆ. ಇದು ಇವತ್ತಿನ ಕತೆಯಲ್ಲ, ಐವತ್ತರ ದಶಕದಲ್ಲಿ ಹಿಂದೂ ಕೋಡ್ ಬಿಲ್ಲನ್ನು ಕೂಡ ಇದೇ ರೀತಿಯಲ್ಲಿ ವಿರೋಧಿಸಲಾಗಿತ್ತು. ದುರಂತವೆಂದರೆ ನಾವು ಸಾಯಲು ಸಿದ್ಧರಿದ್ದೇವೆಂದು (ವಿ ಆರ್ ರೆಡಿ ಟು ವೈಟ್) ಕೆಲವು ಮಹಿಳಾ ಸಂಘಟನೆಗಳು ಕೂಡ ಸುಪ್ರೀಂ ಕೋರ್ಟಿನ ತೀರ್ಮಾನವನ್ನು ವಿರೋಧಿಸುತ್ತಿರುವುದು. ಇದೇ ಕೇರಳದಲ್ಲಿ ತಳಸ್ತರಕ್ಕೆ ಸೇರಿದ ಮಹಿಳೆಯರು ರವಿಕೆ ಧರಿಸುವುದನ್ನು ನಿಷೇಧಿಸಲಾಗಿತ್ತು. ಇದೇ ಕೇರಳದಲ್ಲಿ ರಾಜರ ಕಾಲದಲ್ಲಿ ಮಹಿಳೆಯರ ಮೊಲೆ ಮೇಲೆ ತೆರಿಗೆ ವಿಧಿಸುವ ಪದ್ಧತಿ ಇತ್ತು.

ಇದೇ ಚರಿತ್ರೆಯ ಮುಂದುವರಿಕೆಯಾಗಿ ಮುಟ್ಟಿನ ಸಂದರ್ಭದಲ್ಲಿ ಮಹಿಳೆ ದೇವಸ್ಥಾನಕ್ಕೆ ಹೋಗಬಾರದು, ಹೋದರೆ ಮೈಲಿಗೆ ಆಗುತ್ತದೆ ಎನ್ನುವ ಪದ್ಧತಿ ಬಂದಿದೆ. ಧಾರ್ಮಿಕ ವಿಧಿವಿಧಾನಗಳನ್ನು ಆಚರಿಸುವ ಸಮಾನ ಹಕ್ಕನ್ನು ಬಳಸಿಕೊಂಡು (ಆರ್ಟಿಕಲ್ ೨೫ (೧)) ಮಹಿಳೆಯ ಮೂಲಭೂತ ಹಕ್ಕನ್ನು ಸುಪ್ರೀಂ ಕೋರ್ಟ್ ಎತ್ತಿ ಹಿಡಿದಿದೆ. ಸಂವಿಧಾನದ ಆಶಯವನ್ನು ಅಥವಾ ಕೋರ್ಟ್ ತೀರ್ಪನ್ನು ಜಾರಿಗೆ ತರಬೇಕಾದ ರಾಷ್ಟ್ರೀಯ ರಾಜಕೀಯ ಪಕ್ಷಗಳು ವಿರೋಧಿಸುತ್ತಿವೆ. ಜನರನ್ನು ಕೋರ್ಟ್ ತೀರ್ಪು ವಿರುದ್ಧ ಹೋರಾಡಲು ಪ್ರೇರೇಪಿಸುತ್ತಿವೆ. ಅಂದರೆ ಸಂವಿಧಾನವನ್ನು ಅಲ್ಲಗಳೆಯುವ ಕೆಲಸ ಮಾಡುತ್ತಿವೆ. ಸಾಂವಿಧಾನಿಕ ಮೌಲ್ಯಗಳನ್ನು ಎತ್ತಿ ಹಿಡಿಯಬೇಕಾದ ಪಕ್ಷಗಳೇ ತಿರಸ್ಕರಿಸುವುದಕ್ಕಿಂತ ದೊಡ್ಡ ವಿಪರ್ಯಾಸ ಇದೆಯೇ? ಇಂತಹ ಪಕ್ಷಗಳನ್ನು ಬೆಂಬಲಿಸುವ ಮೂಲಕ ತಳಸ್ತರದ ಜನರು ಕೊಂಬೆಯಲ್ಲಿ ಕೂತು ಬುಡಕಡಿಯುವ ಕೆಲಸ ಮಾಡುತ್ತಿದ್ದಾರೆ. ನಂಬಿಕೆಯ ಹೆಸರಲ್ಲಿ ಎಲ್ಲವನ್ನು ವಿರೋಧಿಸುತ್ತಿಲ್ಲ. ತಳಸ್ತರದ ಜನರ ಆಚರಣೆಗಳನ್ನು ಪ್ರಾಣಿ ಹಿಂಸೆ, ಮೂಢನಂಬಿಕೆಗಳ ಹೆಸರಲ್ಲಿ ನಿಷೇಧಿಸಿದರೆ ದೊಡ್ಡ ಮಟ್ಟಿನ ವಿರೋಧ




ವ್ಯಕ್ತವಾಗುವುದಿಲ್ಲ. ಭೂತದ ಬಾಯಲ್ಲಿ ಭಗವದ್ಗೀತೆ ಕೇಳಿದಂತೆ ಆಯಿತೆನ್ನುವ ಮಾತನ್ನು ಹಿಂದುಳಿದ ವರ್ಗದ ನಾಯಕರು ಕೂಡ ಯಾವುದೇ ಮುಜುಗರವೂ ಇಲ್ಲದೇ ಹೇಳುತ್ತಾರೆ.

**ಸಮಾನತೆ**

ಸಾಮಾಜಿಕ ನ್ಯಾಯದ ತಲೆಕೆಳಗಾದ ಕಲ್ಪನೆಯನ್ನು ಜಾರಿಗೆ ತರುವುದು ಎರಡನೇ ಕಾರಣ. ಸಂವಿಧಾನ ಪ್ರತಿಪಾದಿಸುವ ಸಾಮಾಜಿಕ ನ್ಯಾಯದ ಕಲ್ಪನೆಗೂ ಸ್ವಾತಂತ್ರ್ಯದ ನಂತರ ಅಧಿಕಾರಕ್ಕೆ ಬಂದ ಪಕ್ಷಗಳು ಜಾರಿಗೆ ತಂದ ಸಾಮಾಜಿಕ ನ್ಯಾಯದ ಕಲ್ಪನೆಗೂ ತುಂಬ ಅಂತರವಿದೆ. ಜಾತಿ, ಲಿಂಗ, ಭೂ ಸಂಬಂಧ, ಅಧಿಕಾರದ ಸಂಬಂಧಗಳಲ್ಲಿ, ಸಂಸ್ಥೆ, ಮೌಲ್ಯಗಳಲ್ಲಿ ಬದಲಾವಣೆ ತರುವ ಸಾಮಾಜಿಕ ನ್ಯಾಯದ ಕಲ್ಪನೆಗೆ ಸಂವಿಧಾನ ಒತ್ತು ನೀಡಿದರೆ ಸರಕಾರಗಳು ಸರಕು ಸೇವೆಗಳನ್ನು ಅನುಭೋಗಿಸುವ ಸಾಮಾಜಿಕ ನ್ಯಾಯದ ಕಲ್ಪನೆಗೆ ಒತ್ತು ನೀಡುತ್ತಿವೆ. ೯೦ರ ಮುನ್ನ ಆರ್ಥಿಕ ಸಂಬಂಧಗಳನ್ನು – ಭೂಮಿ, ಬಂಡವಾಳ, ಪ್ರಾಕೃತಿಕ ಸಂಪನ್ಮೂಲ ಇತ್ಯಾದಿ ಸಂಬಂಧಗಳನ್ನು ಪರಿವರ್ತಿಸುವುದಕ್ಕೆ ಕೆಲವು ಸಾಂಕೇತಿಕ ಮಹತ್ವ ಇತ್ತು. ಆದರೆ ೯೦ರ ನಂತರ ಸಂಬಂಧಗಳನ್ನು ಪರಿವರ್ತಿಸುವ ನ್ಯಾಯದ ಕಲ್ಪನೆಯನ್ನು ಸಾರಾಸಗಟಾಗಿ ತಿರಸ್ಕರಿಸಲಾಗಿದೆ. ಸಂವಿಧಾನದ ಹಲವು ಆರ್ಟಿಕಲ್‌ಗಳು ದೇಶದ ಸಂಪತ್ತಲ್ಲಿ ಎಲ್ಲರಿಗೂ ಪಾಲಿರುವ ರೀತಿಯಲ್ಲಿ ಅರ್ಥ ವ್ಯವಸ್ಥೆಯನ್ನು ಸಂಘಟಿಸಬೇಕೆಂದು ಸೂಚಿಸಿವೆ. ಆದರೆ ಇಂದು ಏನಾಗುತ್ತಿದೆ? ದೇಶದ ಸಂಪತ್ತು ಕೆಲವರಲ್ಲೇ ಕ್ರೋಡೀಕರಣಗೊಳ್ಳುತ್ತಿವೆ. ಭೂಸುಧಾರಣೆ ಬದಲು ಭೂಸ್ವಾಧೀನ ಮಸೂದೆ ಮಹತ್ವ ಪಡೆದಿದೆ. ಸರಕಾರಿ ಸಾಲದ ಬಹುಭಾಗ ತಳಸ್ತರದ ಜನರಿಗೆ ಹೋಗುವ ಬದಲು ಅನುಕೂಲಸ್ಥರಿಗೆ ಹೋಗುತ್ತಿದೆ. ಅನುಕೂಲಸ್ಥರ ಬದಲು ಅನಾನುಕೂಲಸ್ಥರಿಂದ ಹೆಚ್ಚು ತೆರಿಗೆ ಸಂಗ್ರಹಿಸಲಾಗುತ್ತಿದೆ. ಸಂಘಟಿತ ಕಾರ್ಮಿಕರ ಸಂಖ್ಯೆಯನ್ನೂ ಹೆಚ್ಚಿಸುವ ಬದಲು ಅಸಂಘಟಿತ ಕಾರ್ಮಿಕರ ಸಂಖ್ಯೆಯನ್ನು ಹೆಚ್ಚಿಸಲಾಗುತ್ತಿದೆ. ಅಸ್ಪೃಶ್ಯತೆ ಕೇವಲ ದಲಿತರಿಗೆ ಸೀಮಿತವಾದ ಸಂಗತಿಯಲ್ಲ, ಹಿಂದುಳಿದ ವರ್ಗಗಳಿಗೂ ಅನ್ವಯವಾಗುವ ಸಂಗತಿ. ಜಾತಿ ಸಂಬಂಧವನ್ನು ಬದಲಾಯಿಸುವ ಬಹು ದೊಡ್ಡ ಅಸ್ತ್ರ ಅಂತರ್‌ಜಾತಿ ವಿವಾಹ. ಅಂತರ್‌ಜಾತಿ ವಿವಾಹ ಆಗುವುದು ಇಂದು ಎಷ್ಟು ಅಪಾಯಕಾರಿ ಎನ್ನುವುದು ನಮಗೆಲ್ಲರಿಗೂ ತಿಳಿದ ಸಂಗತಿ. ಒಂದು ಕಾಲದಲ್ಲಿ ಅಂತರ್‌ಜಾತಿ ವಿವಾಹಗಳು ಆರ್ಥಿಕ ಕಾರಣಕ್ಕೆ ಸೋಲುತ್ತಿದ್ದವು. ಇಂದು ಮರ್ಯಾದಾ ಹತ್ಯೆಯ ಕಾರಣಕ್ಕೆ ಸೋಲುತ್ತಿವೆ.

ಸಮಾನತೆಯನ್ನು ಮೆಕ್ಯಾನಿಕಲ್ ಆಗಿ ನಿರ್ವಚಿಸುವುದು ಸಂವಿಧಾನವನ್ನು ಸೋಲಿಸುವ ಮತ್ತೊಂದು ವಿಧಾನ. ನಮ್ಮಂತಹ ಶ್ರೇಣೀಕೃತ ಸಮಾಜದಲ್ಲಿ ಮೆಕ್ಯಾನಿಕಲ್ ದೃಷ್ಟಿಯಿಂದ ಸಮಾನತೆಯನ್ನು ನೋಡುವ ಬದಲು ಸಾಮಾಜಿಕ ನ್ಯಾಯದ ದೃಷ್ಟಿಯಿಂದ ಸಮಾನತೆಯನ್ನು ನೋಡಬೇಕೆನ್ನುವುದು ಸಂವಿಧಾನದ ಆಶಯ. ಮೆಕ್ಯಾನಿಕಲ್ ಸಮಾನತೆ ಅಂದರೆ ಎಲ್ಲವನ್ನೂ ಎಲ್ಲರಿಗೂ ಸಮನಾಗಿ ಹಂಚುವುದು ಅಥವಾ ಎಲ್ಲರನ್ನು ಸಮನಾಗಿ ನೋಡುವುದು ಅಥವಾ ಧರ್ಮದ ಪ್ರಶ್ನೆ ಬಂದರೆ ಎಲ್ಲ ಧರ್ಮಗಳನ್ನೂ ಸಮಾನ ಅಂತರದಲ್ಲಿಡುವುದು ಎನ್ನುವ ಅರ್ಥ ಇದೆ. ಶ್ರೇಣೀಕೃತ ವ್ಯವಸ್ಥೆಯಲ್ಲಿ ಮೆಕ್ಯಾನಿಕಲ್ ದೃಷ್ಟಿಯಿಂದ ಸಮಾನತೆಯನ್ನು ನೋಡಿದರೆ ಸಮಾನತೆ ಹೆಚ್ಚುವುದಕ್ಕಿಂತ ಅಸಮಾನತೆ ಹೆಚ್ಚುತ್ತದೆ. ಎಲ್ಲ ಸಮಾಜಗಳಲ್ಲೂ ಏಣಿ ಶ್ರೇಣಿಗಳಿವೆ. ನಮ್ಮಲ್ಲೂ ಕೆಲವರು ಮೇಲೆ, ಹಲವರು ಮಧ್ಯದಲ್ಲಿ ಮತ್ತು ತುಂಬ ಜನ ಏಣಿಯ ಬುಡದಲ್ಲಿದ್ದಾರೆ. ಮೇಲಿರುವವರ ಆದಾಯ ಒಂದು ಲಕ್ಷ ರೂಪಾಯಿಗಳು, ಮಧ್ಯದಲ್ಲಿ ಇರುವವರ ಆದಾಯ ಐವತ್ತು ಸಾವಿರ ರೂಪಾಯಿಗಳು ಮತ್ತು ಏಣಿಯ ಬುಡದಲ್ಲಿರುವವರ ಆದಾಯ ಹತ್ತು ಸಾವಿರ ರೂಪಾಯಿ ಗಳೆಂದು ಊಹಿಸೋಣ.




# ನೆಮ್ಮದಿಯ ನಾಡಿನರಸಿ



ಉಳಿವುದೇನೀ ಪ್ರಭುತ್ವ ಪುರದರಸನು
ಸುಖಲೋಲುಪತೆಯ ಉಯ್ಯಾಲೆಯಲಿ
ಜೋಕಾಲಿಯಾಡಿದರೆ ನೆರೆಯರಸನ ಕೂಡಿ

ಸುಳ್ಳುಗಳ ಸರಮಾಲೆ ಹೆಣೆದು
ಅಮಾಯಕ ಆಡುಗಳ ಹಿಂಡಿನಲಿ
ಭ್ರಮೆಯ ಉದ್ಯಾನಗಳ ಸೃಷ್ಟಿಸಿ
ಗೋಸುಂಬೆಯಂತೆ ನಿತ್ಯದಿರಿಸು ಬದಲಿಸಿ
ಕನಸು ಬಿತ್ತುವ ನಿಪುಣ ಬೆಳೆಗಾರನ
ಹೊಳೆದಾಟಿದ ಅಂಬಿಗನ ಅವತಾರದಂತೆ
ಬೆಂಬಲಿಗರ ಮುಂದೆ ಬಿಂಬಿಸಿದರೆ ಸಾಕೆ
ಆಕಾಶದಿಂದಿಳಿದು ಮಣ್ಣಿನ ವಾಸನೆ ಸವಿದು
ಬೇಕುಬೇಡಗಳ ತಿಳಿಯಲೆಷ್ಟು ದಿನಬೇಕು

ಹಸಿದ ಹೊಟ್ಟೆಗೆ ಆಕಾಶ ಬುಟ್ಟಿ ತೋರಿ
ಕುಸಿದ ಬದುಕಿಗೆ ಬಂಧನದ ಭೀತಿಯಿಟ್ಟು
ಮನಗಳ ಮೂಲೆಗಳಿಗೆ ಧರ್ಮಬೇಲಿ ಕಟ್ಟಿ

ಮುಗ್ಧಮುಗುದೆಯರ ಸಂದಿಗ್ಧಕೆ ಸಿಲುಕಿಸಿ
ಸ್ವಚ್ಛವಾಗುವುದೆಂದರೆ ಜೀವವಿಲ್ಲದ ಕಾವೆ

ಉಳಿಸು ಜೀವಂತ ಜಿಂಕೆಗಳ ಜಿಗಿತವನು
ಅಳಿಸು ಆತಂಕದಲೆಗಳ ಹೊಯ್ದಾಟವನು
ತಡೆ ಅರಣ್ಯನ್ಯಾಯ ಅರಮನೆಗೆ ಬರದಂತೆ
ಏನಿದೇನಿದು ಬೆಂಕಿಯಿರದೆ ಹೊಗೆಯ ಗೂಡು
ಕಟ್ಟಬಾರದೆ ಜನಮೆಚ್ಚುವ ನೆಮ್ಮದಿ ನಾಡು.

**ಡಾ॥ ಎಲ್. ಹನುಮಂತಯ್ಯ**
ನಂ. ೨೦೭, ಎ, ೩ನೇ ಅಡ್ಡರಸ್ತೆ, ೨ನೇ ಬ್ಲಾಕ್
೩ನೇ ಹಂತ, ಬಸವೇಶ್ವರ ನಗರ
ಬೆಂಗಳೂರು – ೫೬೦೦೭೯

ಇವರ ನಡುವೆ ಆರ್ಥಿಕ ಸಮಾನತೆ ತರುವ ಉದ್ದೇಶದಿಂದ ಹದಿನೈದು ಸಾವಿರ ರೂಪಾಯಿ ಮೌಲ್ಯದ ಸಂಪನ್ಮೂಲವನ್ನು ಸಮನಾಗಿ ಹಂಚಿದರೆ ಪ್ರತಿಯೊಬ್ಬರೂ ಐದು ಸಾವಿರ ರೂಪಾಯಿಗಳಷ್ಟು ಸಂಪನ್ಮೂಲ ಪಡೆಯುತ್ತಾರೆ. ಹಂಚಿದ ನಂತರ ಮೇಲಿದ್ದವರ ಆದಾಯ ಒಂದು ಲಕ್ಷದ ಐದು ಸಾವಿರ ರೂಪಾಯಿಗಳಾಗುತ್ತದೆ, ಮಧ್ಯದಲ್ಲಿರುವವರ ಆದಾಯ ಐವತ್ತೈದು ಸಾವಿರ ರೂಪಾಯಿ ಮತ್ತು ಏಣಿಯ ಬುಡದಲ್ಲಿರುವವರ ಆದಾಯ ಹದಿನೈದು ಸಾವಿರ ರೂಪಾಯಿಗಳಾಗುತ್ತದೆ.

ಅಸಮಾನತೆ ಕಡಿಮೆ ಮಾಡುವ ಉದ್ದೇಶದಿಂದ ಹದಿನೈದು ಸಾವಿರ ಮೌಲ್ಯದ ಸಂಪನ್ಮೂಲವನ್ನು ಸಮನಾಗಿ ಹಂಚಿದ ನಂತರ ಕೂಡ ಇವರ ನಡುವಿನ ಆರ್ಥಿಕ ಅಸಮಾನತೆ ಕಡಿಮೆಯಾಗಿಲ್ಲ. ಆದುದರಿಂದ ಅಸಮಾನ ಸಮಾಜದಲ್ಲಿ ಸಮಾನತೆ ತರಬೇಕಾದರೆ ಸಂಪನ್ಮೂಲಗಳನ್ನು, ಅವಕಾಶಗಳನ್ನು ಸಮನಾಗಿ ಹಂಚುವುದಲ್ಲ; ಅಸಮಾನವಾಗಿ ಹಂಚಬೇಕು. ಮೇಲಿನ ಉದಾಹರಣೆಯಲ್ಲಿನ ಹದಿನೈದು ಸಾವಿರ ರೂಪಾಯಿ ಮೌಲ್ಯದ ಸಂಪನ್ಮೂಲದಲ್ಲಿ ಹೆಚ್ಚಿನ ಭಾಗವನ್ನು ಏಣಿಯ ಬುಡದಲ್ಲಿರುವವರಿಗೆ ನೀಡಿ, ಮಧ್ಯದಲ್ಲಿರುವವರಿಗೆ ಕಡಿಮೆ ಮತ್ತು ಮೇಲಿದ್ದವರಿಗೆ ಏನೇನೂ ನೀಡದಿದ್ದರೂ ನಡೆಯುತ್ತದೆ. ಶ್ರೇಣೀಕೃತ ಸಮಾಜದಲ್ಲಿ ಏಣಿಯ ಬುಡದಲ್ಲಿರುವವರ ಸಂಪನ್ಮೂಲಗಳ ಒಡೆತನ, ಅವಕಾಶಗಳನ್ನು ಪಡೆಯುವ ಸಾಧ್ಯತೆಗಳು, ಜವಾಬ್ದಾರಿಗಳನ್ನು ಹೊರುವ ಶಕ್ತಿ ಏಣಿಯ ಮೇಲಿದ್ದವರ ಸಮಕ್ಕೆ ಬರುವ ತನಕ ಸಂಪನ್ಮೂಲಗಳನ್ನು, ಅವಕಾಶಗಳನ್ನು, ಜವಾಬ್ದಾರಿಗಳನ್ನು ಅಸಮಾನವಾಗಿ ಹಂಚಬೇಕು. ಹೀಗೆ ಮಾಡುವುದರಿಂದ ಸಮಾಜದಲ್ಲಿನ ಒಟ್ಟು ಸಮಾನತೆ ಹೆಚ್ಚುತ್ತದೆ. ಸಮಾಜದಲ್ಲಿನ ಒಟ್ಟು ಸಮಾನತೆ ಹೆಚ್ಚಾದಂತೆ ಪ್ರತಿಯೊಬ್ಬರೂ ತಮ್ಮ ಸಾಮರ್ಥ್ಯಗಳನ್ನು ವೃದ್ಧಿಸಿಕೊಳ್ಳಲು ಸಾಧ್ಯ. ವೃದ್ಧಿತ ಸಾಮರ್ಥ್ಯ ಸರಕಾರ ಮತ್ತು ಖಾಸಗಿ ವಲಯಗಳು ಸೃಷ್ಟಿಸುವ ಹೊಸ ಹೊಸ ಅವಕಾಶಗಳನ್ನು ಬಳಸಿಕೊಳ್ಳಲು ಮತ್ತು ಸ್ವತಂತ್ರರಾಗಿ ಬದುಕಲು ಸಹಕರಿಸುತ್ತದೆ. ಆದುದರಿಂದಲೇ ಸಮಾಜದಲ್ಲಿನ ಒಟ್ಟು ಸಮಾನತೆಯನ್ನು ಹೆಚ್ಚಿಸುವ ದೃಷ್ಟಿಯಿಂದ ಸಂಪನ್ಮೂಲಗಳನ್ನು, ಅವಕಾಶಗಳನ್ನು ಹಂಚುವುದಕ್ಕೆ ಸಂವಿಧಾನ ಆದ್ಯತೆ ನೀಡಿದೆ. ಇತ್ತೀಚಿನ ದಿನಗಳಲ್ಲಿ ಬಲಾಢ್ಯ ಸಮುದಾಯಗಳು ಮೀಸಲಾತಿ ಕೇಳುವುದು ಇದೇ ತರ್ಕದಿಂದ. ಮಹಾರಾಷ್ಟ್ರದಲ್ಲಿ ಮರಾಠರು, ಗುಜರಾತಿನಲ್ಲಿ ಪಟೇಲರು, ರಾಜಸ್ತಾನದಲ್ಲಿ ಗುಜ್ಜರು, ಹರ್ಯಾಣದಲ್ಲಿ ಜಾಟರು ಮೀಸಲಾತಿ ಕೇಳುತ್ತಿದ್ದಾರೆ.

**ಸ್ವಾತಂತ್ರ್ಯ**

ಸಂವಿಧಾನ ರಾಜಕೀಯ ಸ್ವಾತಂತ್ರ್ಯ ನೀಡಿದೆ. ಭಾರತದ ಎಲ್ಲ ಪ್ರಜೆಗಳಿಗೆ ವಾಕ್, ಅಭಿವ್ಯಕ್ತಿ, ಸಂಘಟನಾ ಸ್ವಾತಂತ್ರ್ಯಗಳಿವೆ. ಈ ಸ್ವಾತಂತ್ರ್ಯಗಳನ್ನು ಸಮಾಜದ ಎಲ್ಲರ ಆರ್ಥಿಕ, ಸಾಂಸ್ಕೃತಿಕ ಸ್ವಾತಂತ್ರ್ಯವನ್ನು ಹೆಚ್ಚಿಸಲು ಅಥವಾ ಅಸ್ವಾತಂತ್ರ್ಯಗಳನ್ನು ಕಡಿಮೆ ಮಾಡಲು ಬಳಸಬೇಕೆನ್ನುವುದು ಸಂವಿಧಾನದ ಆಶಯ. ಸಂವಿಧಾನ ನೀಡಿರುವ ವಾಕ್, ಅಭಿವ್ಯಕ್ತಿ ಸ್ವಾತಂತ್ರ್ಯಗಳು ಅನಿರ್ಬಂಧಿತ ಸ್ವಾತಂತ್ರ್ಯಗಳಲ್ಲ. ದೇಶದ ಭದ್ರತೆಗೆ ಧಕ್ಕೆ ತರುವ ರೀತಿಯಲ್ಲಿ, ಕೋಮು ಸೌಹಾರ್ದತೆಯನ್ನು ಕದಡುವ ರೀತಿಯಲ್ಲಿ, ಮತ್ತೊಬ್ಬರ ಮಾನಸಮ್ಮಾನಕ್ಕೆ ಚ್ಯುತಿ ತರುವ ರೀತಿಯಲ್ಲಿ ಈ ಸ್ವಾತಂತ್ರ್ಯವನ್ನು ಬಳಸಬಾರದೆನ್ನುವ ನಿರ್ಬಂಧವಿದೆ. ಇದರೊಂದಿಗೆ ಪರಿಗಣಿಸಬೇಕಾದ ಮತ್ತೊಂದು ಮಹತ್ವದ ಸಂಗತಿಯೆಂದರೆ ಸ್ವಾತಂತ್ರ್ಯವೊಂದು ರಾಜಕೀಯ ಹಕ್ಕು. ಸಂವಿಧಾನದಲ್ಲಿ ರಾಜಕೀಯ ಸಮಾನತೆಗೆ ನೀಡಿದಷ್ಟೇ ಮಹತ್ವವನ್ನು ರಾಜಕೀಯ ಸ್ವಾತಂತ್ರ್ಯಕ್ಕೂ ನೀಡಲಾಗಿದೆ. ಸಮಾನತೆ ಮತ್ತು ಸ್ವಾತಂತ್ರ್ಯಗಳಿಗೆ ನೀಡಿರುವ ಮಹತ್ವದ ಹಿಂದೆ ಕೆಲಸ ಮಾಡುತ್ತಿರುವ ಗ್ರಹಿಕೆಗಳು ಒಂದೇ. ಅದೇನೆಂದರೆ ನಮ್ಮ ಸಮಾಜದಲ್ಲಿ ಅಗಾಧ ಪ್ರಮಾಣದ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಅಸ್ವಾತಂತ್ರ್ಯಗಳಿವೆ. ಬಡತನ, ನಿರುದ್ಯೋಗ, ಸಂಪನ್ಮೂಲಗಳ ಅಸಮಾನ ಒಡೆತನ ಇತ್ಯಾದಿಗಳು ಆರ್ಥಿಕ ಸ್ವಾತಂತ್ರ್ಯದ ಆಚರಣೆಗೆ ದೊಡ್ಡ ತೊಡಕಾಗಿವೆ. ಲಿಂಗ, ಜಾತಿ, ಧರ್ಮ ಭೇದಗಳು, ಶಿಕ್ಷಣ, ಆರೋಗ್ಯ, ವಸತಿ, ನೈರ್ಮಲ್ಯದ ಕೊರತೆಗಳು ಸಾಮಾಜಿಕ ಸಾಂಸ್ಕೃತಿಕ ಸ್ವಾತಂತ್ರ್ಯಗಳ ಆಚರಣೆಗೆ ದೊಡ್ಡ ಅಡ್ಡಿಯಾಗಿವೆ. ರಾಜಕೀಯ ಸ್ವಾತಂತ್ರ್ಯವನ್ನು ಬಳಸಿಕೊಂಡು ಈ ಎಲ್ಲ ಅಸ್ವಾತಂತ್ರ್ಯಗಳನ್ನು ಕಡಿಮೆಗೊಳಿಸಬೇಕೆನ್ನುವುದು ಸಂವಿಧಾನದ ಆಶಯ.

ಸಂವಿಧಾನ ಆಶಿಸುವ ಸ್ವಾತಂತ್ರ್ಯದ ಆಚರಣೆಗೂ ದಿನನಿತ್ಯ ಬದುಕಿನ ಆಚರಣೆಗೂ ಆಕಾಶ ಭೂಮಿಯಷ್ಟು ಅಂತರವಿದೆ. ದಿನನಿತ್ಯದ ಬದುಕಿನಲ್ಲಿ ಸಮಷ್ಟಿಯ ಸ್ವಾತಂತ್ರ್ಯ ಹೆಚ್ಚಿಸುವ ಸ್ವಾತಂತ್ರ್ಯದ ಪ್ರಶ್ನೆಗಳಿಗಿಂತ ಹೆಚ್ಚು ಬಲಾಢ್ಯ ವ್ಯಕ್ತಿಗಳ ಅಥವಾ ಗುಂಪುಗಳ ಸ್ವಾತಂತ್ರ್ಯದ ಪ್ರಶ್ನೆಗಳು ಹೆಚ್ಚು ಸುದ್ದಿಯಲ್ಲಿರುತ್ತವೆ. ಸ್ವಾತಂತ್ರ್ಯದ ಆಚರಣೆ – ಸಮಷ್ಟಿಯ ಸ್ವಾತಂತ್ರ್ಯದ ಕಲ್ಪನೆಯನ್ನು ಜಾರಿಗೆ ತರಬೇಕೆನ್ನುವುದು ಸಂವಿಧಾನದ ಆಶಯ. ಆದರೆ ಸರ್ಕಾರವೇ ಅಲ್ಲದೆ ಬಲಾಢ್ಯರೂ ವ್ಯಕ್ತಿ ಸ್ವಾತಂತ್ರ್ಯಕ್ಕೆ ಮಹತ್ವ ನೀಡುತ್ತಿದ್ದಾರೆ. ಸಾಂಸ್ಕೃತಿಕ ಕ್ಷೇತ್ರದಲ್ಲಿ – ಸಿನಿಮಾ, ಪುಸ್ತಕಗಳನ್ನು ಬ್ಯಾನ್ ಮಾಡಬೇಕೆನ್ನುವ ಕೂಗು, ಸಾಮಾಜಿಕ ಕ್ಷೇತ್ರದಲ್ಲಿ ಸಾರ್ವಜನಿಕ ಬಂಡವಾಳಕ್ಕಿಂತ ಹೆಚ್ಚು ಖಾಸಗಿ ಬಂಡವಾಳಕ್ಕೆ ಮಹತ್ವ, ಎಲ್ಲವನ್ನು ಮಾರುಕಟ್ಟೆ ತೀರ್ಮಾನಿಸಬೇಕೆನ್ನುವುದು ಬಲಾಢ್ಯ ವ್ಯಕ್ತಿಗಳ ಸ್ವಾತಂತ್ರ್ಯವನ್ನು ಹೆಚ್ಚಿಸುವ ಕ್ರಮಗಳು. ಮೇಲಿನ ಸಮಷ್ಟಿ ಸ್ವಾತಂತ್ರ್ಯ ವರ್ಸಸ್ ವ್ಯಕ್ತಿ ಸ್ವಾತಂತ್ರ್ಯದ ಸಮಸ್ಯೆ ಜೊತೆಗೆ ಸ್ವಾತಂತ್ರ್ಯ ಮತ್ತು ಸಮಾನತೆಗಳ ನಡುವಿನ ತಿಕ್ಕಾಟ ಕೂಡ ಸ್ವಾತಂತ್ರ್ಯದ ಆಚರಣೆಯನ್ನು ಸಂಕೀರ್ಣಗೊಳಿಸಿದೆ. ಬೆಳೆದ ಟೊಮ್ಯಾಟೋ ಅಥವಾ ಕಬ್ಬಿಗೆ ಸರಿಯಾದ ಬೆಲೆ ಸಿಕ್ಕಿಲ್ಲವೆಂದು ರೈತರು ಬೆಳೆಯನ್ನು ಬೀದಿಯಲ್ಲಿ ಬಿಸಾಕಿ ಪ್ರತಿಭಟಿಸುವುದನ್ನು ನೋಡಿದ್ದೇವೆ. ವ್ಯಕ್ತಿ ಸ್ವಾತಂತ್ರ್ಯದ ದೃಷ್ಟಿಯಿಂದ ನೋಡಿದರೆ ರೈತರ ಕ್ರಮ ಸರಿ ಎಂದು ಅನ್ನಿಸಬಹುದು. ಆದರೆ ಸಮಾನತೆ ದೃಷ್ಟಿಯಿಂದ ನೋಡಿದರೆ ಇದು ಸರಿಯಾದ ಕ್ರಮವಲ್ಲ. ಏಕೆಂದರೆ ನಮ್ಮಲ್ಲಿ ಟೊಮ್ಯಾಟೋ ಖರೀದಿಸಿ ಅನುಭವಿಸುವ ಶಕ್ತಿಯಿಲ್ಲದ ಜನರು ಸಾಕಷ್ಟಿದ್ದಾರೆ. ಅಂತಹವರಿಗೆ ಹಂಚುವುದು ಸಮಾನತೆಯ ದೃಷ್ಟಿಯಿಂದ ಸರಿಯಾದ ಕ್ರಮ. ಈ ನೀತಿ ಕೇವಲ ಟೊಮ್ಯಾಟೋ ಅಥವಾ ಕಬ್ಬು ಬೆಳೆಗಾರರಿಗೆ ಮಾತ್ರ ಅನ್ವಯವಾಗುವುದಿಲ್ಲ. ಎಲ್ಲೆಲ್ಲಿ ಮಾರುಕಟ್ಟೆ ಸ್ವಾತಂತ್ರ್ಯದ ಪ್ರಶ್ನೆ ಬರುತ್ತದೋ ಅಲ್ಲೆಲ್ಲ ಇದೇ ಬಗೆಯ ಸಮಾನತೆ ಪ್ರಶ್ನೆ ಕೂಡ ಬರುತ್ತದೆ.

**ಅನುಷ್ಠಾನ**

ಸಂವಿಧಾನ ಅದರಷ್ಟಕ್ಕೆ ಅದು ಅನುಷ್ಠಾನಗೊಳ್ಳುವುದಿಲ್ಲ. ಜನರು ಅಥವಾ ಜನಪ್ರತಿನಿಧಿಗಳು ಸಂವಿಧಾನವನ್ನು ಜಾರಿಗೊಳಿಸಬೇಕು. ಯಾರು ಜನಪ್ರತಿನಿಧಿಗಳಾಗುತ್ತಿದ್ದಾರೆ ಎನ್ನುವುದರ ಮೇಲೆ ಸಂವಿಧಾನ ಅನುಷ್ಠಾನದ ಗುಣಮಟ್ಟವನ್ನು ಮಾಪನ ಮಾಡಬಹುದು. ನಮ್ಮಲ್ಲಿ ಹೆಚ್ಚು ಕಡಿಮೆ ಶೇ. ೪೯ರಷ್ಟು ಮಹಿಳೆಯರಿದ್ದಾರೆ. ೨೦೧೩ರ ವಿಧಾನಸಭೆ ಚುನಾವಣೆಯಲ್ಲಿ ೧೭೫ ಮಂದಿ ಸ್ಪರ್ಧಿಸಿದ್ದರು. ಅವರಲ್ಲಿ ಒಟ್ಟು ೬ ಮಂದಿ ಚುನಾಯಿತರಾದರು. ಶೇ. ೪೯ರಷ್ಟು ಮಹಿಳೆಯರನ್ನು ಪ್ರತಿನಿಧಿಸಲು ಕೇವಲ ಶೇ. ೨.೬ರಷ್ಟು ಮಹಿಳೆಯರು ಚುನಾಯಿತರಾಗಿದ್ದಾರೆ. ಇದೇನು ಹೊಸ ಬೆಳವಣಿಗೆಯಲ್ಲ. ೨೦೦೮ರ ವಿಧಾನಸಭೆ ಚುನಾವಣೆಯಲ್ಲಿ ಕೇವಲ ಮೂರೇ ಮಹಿಳಾ ಪ್ರತಿನಿಧಿಗಳು ಆಯ್ಕೆಯಾಗಿದ್ದಾರೆ. ಲೋಕಸಭೆ ಕತೆ ಇದಕ್ಕಿಂತ ಭಿನ್ನವಾಗಿಲ್ಲ. ೨೦೧೪ರ ಲೋಕಸಭೆ ಚುನಾವಣೆಯಲ್ಲಿ ೬೧ ಮಹಿಳೆಯರು ಚುನಾಯಿತರಾಗಿದ್ದಾರೆ. ಅಂದರೆ ೫೪೩ ಎಂಪಿಗಳಲ್ಲಿ ಶೇ. ೧೧ರಷ್ಟು ಮಹಿಳಾ ಎಂಪಿಗಳಿದ್ದಾರೆ. ನಮ್ಮಲ್ಲಿ ಶೇ. ೧೬ರಷ್ಟು ಅಲ್ಪಸಂಖ್ಯಾತರಿದ್ದಾರೆ. ಅವರಲ್ಲಿ ಮುಸ್ಲಿಮರು ಶೇ. ೧೩, ಕ್ರಿಶ್ಚಿಯನ್ನರು ಶೇ. ೨ರಷ್ಟು ಮತ್ತು ಇತರರು ಶೇ. ೧ರಷ್ಟಿದ್ದಾರೆ. ಇವರಲ್ಲಿ ೧೧ ಮಂದಿ ಅಥವಾ ಶೇ. ೫ರಷ್ಟು ಪ್ರತಿನಿಧಿಗಳಿದ್ದಾರೆ. ಲೋಕಸಭೆಗೆ ಕೇವಲ ೨೨ ಮುಸ್ಲಿಮರು ಆಯ್ಕೆಯಾಗಿದ್ದಾರೆ. ಒಟ್ಟು ಎಂಪಿಗಳ ಶೇ. ೪ರಷ್ಟು ಮುಸ್ಲಿಮ್ ಸದಸ್ಯರಿದ್ದಾರೆ.

ದಲಿತ ಬುಡಕಟ್ಟುಗಳಲ್ಲಿ ಅವರ ಜನಸಂಖ್ಯೆಗೆ ಅನುಗುಣವಾಗಿ ಪ್ರತಿನಿಧಿಗಳಿದ್ದಾರೆ. ಕರ್ನಾಟಕದಲ್ಲಿ ಶೇ. ೨೫ರ ಆಸುಪಾಸಿನಲ್ಲಿ ದಲಿತ ಬುಡಕಟ್ಟು ಜನಸಂಖ್ಯೆ ಇದೆ. ೨೨೫ ಜನಪ್ರತಿನಿಧಿಗಳಲ್ಲಿ ದಲಿತ ಬುಡಕಟ್ಟುಗಳ ೫೫ ಪ್ರತಿನಿಧಿಗಳಿದ್ದಾರೆ. ಆದರೆ ಇವರನ್ನು ದಲಿತ ಬುಡಕಟ್ಟುಗಳ ಪ್ರತಿನಿಧಿಗಳೆನ್ನಲು ಸಾಧ್ಯವಿಲ್ಲ. ಏಕೆಂದರೆ ಇವರ ಚುನಾವಣೆಯಲ್ಲಿ ಕೇವಲ ದಲಿತ ಬುಡಕಟ್ಟುಗಳು ಮಾತ್ರ ಪಾಲುಗೊಳ್ಳುವುದಿಲ್ಲ, ದಲಿತ ಬುಡಕಟ್ಟೇತರ ಜನರೂ ಪಾಲುಗೊಳ್ಳುತ್ತಾರೆ. ಎಲ್ಲ ಪಕ್ಷಗಳು ಮೀಸಲಾತಿ ಕ್ಷೇತ್ರಗಳಲ್ಲಿ ದಲಿತ ಬುಡಕಟ್ಟುಗಳನ್ನು ಚುನಾವಣೆಗೆ ನಿಲ್ಲಿಸುವುದರಿಂದ ದಲಿತ ಬುಡಕಟ್ಟುಗಳ ಮತಗಳು ಹಂಚಿಹೋಗುತ್ತವೆ. ದಲಿತ ಬುಡಕಟ್ಟೇತರ ಜನರ ಮತಗಳು ದಲಿತ ಬುಡಕಟ್ಟುಗಳ ಪ್ರತಿನಿಧಿಗಳ ಆಯ್ಕೆಯಲ್ಲಿ ನಿರ್ಣಾಯಕವಾಗುತ್ತವೆ. ಚುನಾವಣೆಯಲ್ಲಿ ಖರ್ಚು ಮಾಡಬೇಕಾದ ಹಣದ ದೃಷ್ಟಿಯಿಂದಲೂ ದಲಿತ ಬುಡಕಟ್ಟೇತರರು ನಿರ್ಣಾಯಕರಾಗುತ್ತಾರೆ. ಹಲವು ಕೋಟಿ ವಿನಿಯೋಗಿಸದೆ ಇಂದು ಚುನಾವಣೆ ಗೆಲ್ಲುವುದು ಕಷ್ಟ. ಇಷ್ಟೊಂದು ದೊಡ್ಡ ಮೊತ್ತವನ್ನು ದಲಿತ ಬುಡಕಟ್ಟುಗಳು ವಿನಿಯೋಗಿಸುವುದು ಕಷ್ಟವಾಗಿರುವುದರಿಂದ ದಲಿತ ಬುಡಕಟ್ಟು ಪ್ರತಿನಿಧಿಗಳ ಆಯ್ಕೆಯಲ್ಲಿ ಸ್ಥಿತಿವಂತ ದಲಿತ ಬುಡಕಟ್ಟೇತರರು ಪ್ರಮುಖ ಪಾತ್ರ ವಹಿಸುತ್ತಾರೆ.

ಇನ್ನು ವರ್ಗದ ದೃಷ್ಟಿಯಿಂದ ನೋಡಿದರೆ ಶೇ. ೯೯ರಷ್ಟು ಮಂದಿಯ ಆಸಕ್ತಿಯನ್ನು ಪ್ರತಿನಿಧಿಸುವ ಪ್ರತಿನಿಧಿಗಳು ಇಲ್ಲ. ಕರ್ನಾಟಕದ ತಲಾ ಆದಾಯ ಸ್ಥಿರ ಬೆಲೆಯಲ್ಲಿ ರೂ. ೧೨೩೮೭೭ ಇದೆ. ಒಂದು ಕುಟುಂಬದಲ್ಲಿ ಐದು ಮಂದಿ ಇದ್ದು ಎಲ್ಲರೂ ದುಡಿಯುತ್ತಾರೆಂದು ಗ್ರಹಿಸಿದರೂ ಕುಟುಂಬದ ವಾರ್ಷಿಕ ತಲಾ ಆದಾಯ ರೂ. ೬ ಲಕ್ಷದ ಆಸುಪಾಸಿನಲ್ಲಿರುತ್ತದೆ. ಆರು ಲಕ್ಷ ರೂಪಾಯಿ ವಾರ್ಷಿಕ ಆದಾಯ ಇರುವ ಎಂಎಲ್ಎ, ಎಂಪಿಗಳು ಬಿಡಿ, ಒಂದು ಕೋಟಿಗಿಂತ ಕಡಿಮೆ ಆದಾಯ ಇರುವ ಎಂಎಲ್ಎಗಳನ್ನು ನೋಡಲು ಸಾಧ್ಯವಿಲ್ಲ. ಕರ್ನಾಟಕ ಎಲೆಕ್ಷನ್ ವಾಚ್‌ನ ವರದಿಯ ಪ್ರಕಾರ ೨೦೦೮ರಲ್ಲಿ ಎಂಎಲ್ಎಗಳ ಸರಾಸರಿ ಆಸ್ತಿ ರೂ. ೧೦.೫೯ ಕೋಟಿ ಇತ್ತು. ಇದೇ ಆಸ್ತಿ ಮೊತ್ತ ೨೦೧೩ರ ಚುನಾವಣೆ ಸಂದರ್ಭದಲ್ಲಿ ರೂ. ೧೯.೮೭ ಕೋಟಿಗೆ ಏರಿದೆ. ಹೀಗೆ ನಮ್ಮ ಪ್ರಜಾಪ್ರಭುತ್ವದಲ್ಲಿ ಶೇ. ೪೮ರಷ್ಟು ಮಹಿಳೆಯರು, ಶೇ. ೧೦ರಷ್ಟು ಅಲ್ಪಸಂಖ್ಯಾತರು, ಶೇ. ೨೫ರಷ್ಟು ದಲಿತ ಬುಡಕಟ್ಟುಗಳು ಪ್ರತಿನಿಧಿತ್ವ ಹೊಂದಿಲ್ಲ. ಇನ್ನು ವರ್ಗದ ದೃಷ್ಟಿಯಿಂದ ನೋಡಿದರೆ ಶೇ. ೯೯ ಮಂದಿ ಪ್ರತಿನಿಧಿಗಳನ್ನು ಹೊಂದಿಲ್ಲ. ಇಂತಹ ಪ್ರಜಾಪ್ರಭುತ್ವವನ್ನು ಜನರಿಂದ ಜನರಿಗಾಗಿ ಜನರೇ ನಡೆಸುವ ಸರಕಾರ ಎನ್ನಲು ಸಾಧ್ಯವಿಲ್ಲ. ಇದರ ಬದಲು ಬಲಾಢ್ಯರಿಂದ ಬಲಾಢ್ಯರಿಗಾಗಿ ಬಲಾಢ್ಯರೇ ನಡೆಸುವ ಸರಕಾರ ಎನ್ನಬಹುದು. ಇವರು ತಳಸ್ತರಪರ ಇರುವ ಸಂವಿಧಾನವನ್ನು ಅಚ್ಚುಕಟ್ಟಾಗಿ ಜಾರಿಗೆ ತರಬೇಕೆಂದು ಬಯಸುವುದು ಬಿಳಿಮೋಡದಿಂದ ಮಳೆ ನಿರೀಕ್ಷಿಸಿದಂತೆ ಅಷ್ಟೆ.

**ಸಮಾರೋಪ**

ಇತ್ತೀಚಿನ ದಿನಗಳಲ್ಲಿ ಸಂವಿಧಾನವನ್ನು ರಕ್ಷಿಸುವ ಚರ್ಚೆಗಳು ಹೆಚ್ಚುತ್ತಿವೆ. ಇದಕ್ಕೆ ಒಂದು ಕಾರಣ ಬಿಜೆಪಿಯ ಕೆಲವು ನಾಯಕರು ಸಂವಿಧಾನವನ್ನು ಬದಲಾಯಿಸುವ ಕುರಿತು ಮಾತಾಡುತ್ತಿದ್ದಾರೆ. ಸಂವಿಧಾನವನ್ನು ಬದಲಾಯಿಸುವ ಮೂಲಕ ಸಂವಿಧಾನವನ್ನು ಸೋಲಿಸುವ ಕೆಲಸಕ್ಕೆ ಇವರು ಕೈಹಾಕಿದ್ದಾರೆ ಎನ್ನುವ ಗುಮಾನಿ ಇದೆ. ಖಂಡಿತವಾಗಿಯೂ ಈ ಗುಮಾನಿ ಸರಿ. ಆದರೆ ಸಂವಿಧಾನವನ್ನು ಸೋಲಿಸುವ ಕೆಲಸ ಇವತ್ತು ಆರಂಭವಾಗಿರುವುದಲ್ಲ. ಸಂವಿಧಾನ ಜಾರಿಗೊಂಡ ದಿನದಿಂದಲೇ ಅದನ್ನು ಸೋಲಿಸುವ ಕೆಲಸ ಆರಂಭವಾಗಿದೆ. ಸಂವಿಧಾನವನ್ನು ಸೋಲಿಸುವ ಕೆಲಸವನ್ನು ಸಂವಿಧಾನ ಅನುಷ್ಠಾನಗೊಳಿಸಬೇಕಾದವರು ಮಾಡುತ್ತಲೇ ಬಂದಿದ್ದಾರೆ. ಸಂವಿಧಾನವನ್ನು ಸೋಲಿಸುವವರನ್ನು ಪ್ರತಿ ಚುನಾವಣೆಯಲ್ಲೂ ಚುನಾಯಿಸುವ ಮೂಲಕ ಜನರು ಕೂಡ ಸಂವಿಧಾನವನ್ನು ಸೋಲಿಸುವ ಕೆಲಸದಲ್ಲಿ ಕೈಜೋಡಿಸಿದ್ದಾರೆ.

ಇದನ್ನು ಅಂಬೇಡ್ಕರ್ ಪ್ರಕಾರ ಮಾತುಗಳು ತುಂಬ ನಿಖರವಾಗಿ ಪ್ರತಿಧ್ವನಿಸುತ್ತವೆ. ಅವರ ಪ್ರಕಾರ ಸಂವಿಧಾನ ಉತ್ತಮವಾಗಿದೆಯೇ ಇಲ್ಲವೇ ಎನ್ನುವುದು ತೀರ್ಮಾನವಾಗುವುದು ಅದರ ಅನುಷ್ಠಾನದಿಂದ. ಎಷ್ಟೇ ಕೆಟ್ಟ ಸಂವಿಧಾನ ಕೂಡ ಉತ್ತಮ ಅನುಷ್ಠಾನದಿಂದ ಉತ್ತಮ ಫಲಿತಾಂಶ ನೀಡಬಹುದು. ಅದೇ ರೀತಿಯಲ್ಲಿ ಎಷ್ಟೇ ಉತ್ತಮ ಸಂವಿಧಾನ ಕೂಡ ಕೆಟ್ಟ ಅನುಷ್ಠಾನದಿಂದ ಕೆಟ್ಟ ಫಲಿತಾಂಶ ನೀಡಬಹುದು. ನಮ್ಮಲ್ಲಿ ಎರಡನೇ ಫಲಿತಾಂಶ ಬಂದಿದೆ. ಅಂದರೆ ಉತ್ತಮ ಸಂವಿಧಾನ ಅತೀ ಕೆಟ್ಟದಾಗಿ ಅನುಷ್ಠಾನಗೊಂಡಿದೆ. ಇದಕ್ಕೆ ಜನರು ಮತ್ತು ಜನ ಪ್ರತಿನಿಧಿಗಳನ್ನು ಆಯ್ಕೆ ಮಾಡುವ ವಿಧಾನ ಹಾಗೂ ಜನಪ್ರತಿನಿಧಿಗಳು ಕಾರಣ. ಸಂವಿಧಾನ ಪರಿಣಾಮಕಾರಿಯಾಗಿ ಅನುಷ್ಠಾನಗೊಳ್ಳಬೇಕಾದರೆ ನಮ್ಮ ಜನರನ್ನು ಜಾಗ್ರತಗೊಳಿಸುವುದು ಮತ್ತು ಜನಪ್ರತಿನಿಧಿಗಳನ್ನು ಆಯ್ಕೆ ಮಾಡುವ ವಿಧಾನವನ್ನು ಸುಧಾರಿಸುವುದು ಮತ್ತು ಉತ್ತಮ ಜನಪ್ರತಿನಿಧಿಗಳನ್ನು ಚುನಾಯಿಸುವುದು ಆದ್ಯತೆ ಆಗಬೇಕಾಗಿದೆ.

**ಎಂ. ಚಂದ್ರ ಪೂಜಾರಿ**
ಪ್ರಾಧ್ಯಾಪಕರು, ಅಭಿವೃದ್ಧಿ ಅಧ್ಯಯನ ವಿಭಾಗ, ವಿದ್ಯಾರಣ್ಯ, ಬಳ್ಳಾರಿ – ೫೮೩ ೨೭೬




# ಕುವೆಂಪು ಕಂಡ 'ಕಲಾಸುಂದರಿ'

ವಿ. ಚಂದ್ರಶೇಖರ ನಂಗಲಿ

**೨೩** – ೯ – ೧೯೩೧ರಲ್ಲಿ ರಚಿಸಿದ 'ಕಲಾಸುಂದರಿ' ಎಂಬ ಕವಿತೆಯಲ್ಲಿ ಕುವೆಂಪು ಅವರು ತಮ್ಮ ದೃಷ್ಟಿಯಲ್ಲಿ 'ಕಾವ್ಯಾಂಗನೆ' ಯನ್ನು ಬಗೆ ಬಗೆಯ ವಿಶೇಷಣ ಗಳಿಂದ ವರ್ಣಿಸಿ ನಿರೂಪಿಸಿದ್ದಾರೆ. ಈ ವಿಶೇಷಣಾ ಮಾಲಿಕೆಯನ್ನು ಒಳಹೊಕ್ಕು ಅರಿತುಕೊಂಡರೆ, ಕಾವ್ಯತತ್ವದ ವಸ್ತುನಿಷ್ಠ ಗತಿಶೀಲತೆಯು ಮನದಟ್ಟಾಗುತ್ತದೆ :

**೧) 'ಕಲಾಸುಂದರಿ' ಅರಣ್ಯರಮಣಿ : (= ಚಿರವನವಾಸಿನಿ, ಕಾನನಕೋಮಲೆ, ಸರ್ವರಸಪ್ರದಾಯಕಿ)**

ಕಾಡು ಮತ್ತು ಪರ್ವತಗಳು ಎಲ್ಲಾ ನಾಗರಿಕತೆಗಳ ಜನನೀ ಜನ್ಮಭೂಮಿ. ಇಲ್ಲಿಂದ ಹುಟ್ಟಿ ಹರಿಯುವ ನದಿದಂಡೆಗಳ ಮೇಲೆ ಜಗತ್ತಿನ ಮೊಟ್ಟಮೊದಲ ನಾಗರಿಕತೆಗಳು ತಲೆಯೆತ್ತಿದವು. ಅಂದರೆ ಭೂರಂಗದ ಮೇಲೆ ಕಾಣಿಸಿಕೊಳ್ಳುವ ಮಾನವರ ನಾಟಕಗಳಿಗೆಲ್ಲಾ ಕಾಡು ಮತ್ತು ಪರ್ವತಗಳೇ ನೇಪಥ್ಯವಾಗಿದೆ. ಇದನ್ನು ಚೆನ್ನಾಗಿ ಅರಿತಿದ್ದ ಕುವೆಂಪುರವರು ತಮ್ಮ ಮೊದಲ ಕವನ ಸಂಕಲನದ ಮೊದಲ ಕವಿತೆಯಲ್ಲಿ "ಕಾಡಿನ ಕವಿಯು ನಾನ್! ನಾಡಿನ ಜನರು ಇದನು ಒಲಿದು ಆಲಿಪುದು" ಎಂದು ಬಿನ್ನವಿಸಿಕೊಂಡಿದ್ದಾರೆ.

ಡಾ॥ ಜಿ. ಎಸ್. ಶಿವರುದ್ರಪ್ಪನವರು ಕುವೆಂಪು ಸಮಗ್ರ ಸಾಹಿತ್ಯದ ಅನನ್ಯತೆ ನಿರೂಪಿಸುತ್ತಾ "ಸಹಸ್ರಮಾನವನ್ನು ಮೀರಿದ ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಕುವೆಂಪು ಮೊದಲನೆಯ ಕಾಡುಕವಿ" ಎಂದು ಖಚಿತವಾಗಿ ಹೇಳಿದ್ದಾರೆ. ಪರ್ವತಾರಣ್ಯಗಳು ಮತ್ತು ಗಿರಿಜನರ ಸಂಸ್ಕೃತಿ ಈ ಪ್ರಮಾಣದಲ್ಲಿ ಹಿಂದೆಂದೂ ಕನ್ನಡ ಸಾಹಿತ್ಯದಲ್ಲಿ ಮೂಡಿಬಂದಿಲ್ಲ. ಈ ಕಾರಣದಿಂದಲೇ ಕುವೆಂಪು ಅವರು ಕಲಾಸುಂದರಿಯನ್ನು 'ಅರಣ್ಯರಮಣಿ' ಎಂದು ಪರಿಗಣಿಸಿದ್ದಾರೆ.

ಲಕ್ಷ್ಮೀ ದೇವತೆಗೆ ನೆಲೆವೀಡು ಕಮಲಪುಷ್ಪ. ತಾಯಿ ಸರಸ್ವತಿಗೆ ಕಾಡೇ ಬೀಡು. ವಾಗ್ದೇವಿಗೆ ಹಿನ್ನೆಲೆಯಾಗಿ ರವಿವರ್ಮನ ಚಿತ್ರಕಲೆಯಲ್ಲಿ ಕಾಡು ತೊರೆ ಬೆಟ್ಟ ಇರುವ ಸಂಗತಿ ಸುಪ್ರಸಿದ್ಧ. ಆದ್ದರಿಂದಲೇ ಕವಿ ರನ್ನ ಗದಾಯುದ್ಧ ಕಾವ್ಯದಲ್ಲಿ 'ಕಾನನ ಸರಸ್ವತಿ'ಯನ್ನು ಕಾವ್ಯಾರಂಭದಲ್ಲಿ ಪ್ರಾರ್ಥಿಸಿದ್ದಾನೆ.

ನಮ್ಮ ಮುಖನಯನಗಳಂತೆ ದೇಶನಯನಗಳೆನ್ನಬಹುದಾದ ರಾಮಾಯಣ ಮತ್ತು ಮಹಾಭಾರತ ಕಾವ್ಯಗಳಲ್ಲಿ ಅರಣ್ಯಕಾಂಡ ಮತ್ತು ಅರಣ್ಯಪರ್ವಗಳಿವೆ. ರಾಮಾದಿಗಳು ಮತ್ತು ಪಾಂಡವಾದಿಗಳು ಘನಗಟ್ಟಿಯ ಚೇತನಗಳಾಗಿ ರೂಪುಗೊಂಡದ್ದು ಅರಣ್ಯ ಸನ್ನಿಧಿಯಲ್ಲೇ! ಮತೀಯ ದೃಷ್ಟಿಯ ಅಯೋಧ್ಯಾ ರಾಮನಿಗಿಂತಲೂ ವಾಲ್ಮೀಕಿ ಮತ್ತು ಕುವೆಂಪು ಕೈಗಳಲ್ಲಿ ಅರಳಿದ 'ಗಿರಿವನಪ್ರಿಯರಾಮ' ನಮಗೆ ಅತ್ಯಂತ ಪ್ರಸ್ತುತ. ಕಲೆ ಕಾವ್ಯ ವಿಜ್ಞಾನಾದಿಗಳ ನಿರಂತರ ಸ್ಫೂರ್ತಿಯಾಗಿರುವ ಅರಣ್ಯ ಕೋಶಾವಸ್ಥೆಯನ್ನು ಮನನ ಮಾಡಿದರೆ ಕಲಾಸುಂದರಿಯನ್ನು 'ಚಿರವನವಾಸಿನಿ', 'ಕಾನನಕೋಮಲೆ' ಎಂದು ಕುವೆಂಪು ಕರೆದ ಔಚಿತ್ಯವು ಅರ್ಥವಾಗುತ್ತದೆ.

ಕುವೆಂಪು ಅವರ ಸಮಗ್ರ ಸಾಹಿತ್ಯದಲ್ಲಿ ಪರ್ವತಾರಣ್ಯಗಳ ಜೀವನಾಡಿಯ ಮಿಡಿತವನ್ನು ಆಲಿಸಬಹುದು :

✳ "ಮಲೆಯನಾಡೆನಗೆ ತಾಯಿಮನೆ; ಕಾಡು ದೇವರ ಬೀಡು;
ಬನವೆಣ್ಣೇ ಮೊದಲಿನಾ ಮನದನ್ನೆ; ಗಿರಿಯ ಮುಡಿ
ಶಿವನ ಗುಡಿ"...

✳ "ಕಾಡು : ಭೀರುಗೆ ಭಯಂಕರಂ; ರಸಿಕಗೆ
ಕಲಾಶಂಕರಂ"....

✳ "ಅನ್ನಮಯದಾಚೆಯಲಿ ಪ್ರಾಣಮಯದೀಚೆಯಲಿ,
ಎನಗಿರುವುದೊಂದಲ್ತೆ ಅರಣ್ಯಮಯಕೋಶಂ."

ಪರ್ವತಾರಣ್ಯಗಳಿಂದ ಹರಿದುಬರುವ ನದಿಯ ದಂಡೆಗಳೇ ಮಾನವ ಜೀವನದ ಮೊದಲ ತೊಟ್ಟಿಲು. ಸಕಲ ಸಂಸ್ಕೃತಿ ಮತ್ತು ನಾಗರಿಕತೆಗಳ ಸಾರಸರ್ವಸ್ವಗಳೇ ಬೆಟ್ಟಗುಡ್ಡ ಕಾಡುಮೇಡುಗಳೆಂದು ಅರಿತುಕೊಳ್ಳಬೇಕಾದ ಕಾಲವಿದು. 'ಸರ್ವರಸ ಪ್ರದಾಯಕಿ' ಎಂಬ ನುಡಿಯು ಕಾಡಿನ ಸಮರ್ಪಕ ವ್ಯಾಖ್ಯಾನವೆನ್ನಬಹುದು. ಆದರೆ ಆಧುನಿಕ ಮನುಷ್ಯರಿಗೆ ಕಾಡಿನ ಮಹತ್ವ ತಿಳಿಯದು. ನಿಸರ್ಗವನ್ನು ಆರ್ಥಿಕ ಸಂಪನ್ಮೂಲವೆಂದು ತಿಳಿದು ಲೂಟಿಮಾಡುವ ಆಧುನಿಕ ಮನುಷ್ಯ ಮತ್ತು ನಾಗರಿಕತೆಗಳಿಗೆ ಈಗ ಅರಣ್ಯಕಾಂಡ ಮತ್ತು ಅರಣ್ಯಪರ್ವಗಳೇ ಇಲ್ಲವಾಗಿವೆ. ಈ ಕೊರತೆಯನ್ನು ಕುವೆಂಪು ತಮ್ಮ ಸಾಹಿತ್ಯದ ಮೂಲಕ ತುಂಬಿಕೊಟ್ಟು ಯಾವುದೇ ದೇಶ ತನ್ನ ನಿಸರ್ಗ ಸಂಪತ್ತನ್ನು ಯಾಕೆ ಕಾಪಾಡಿಕೊಳ್ಳಬೇಕೆಂಬುದನ್ನು ಹೃದಯಕ್ಕೆ ನಾಟುವಂತೆ ನಿರೂಪಿಸಿದ್ದಾರೆ. ಇಂದು ಕುವೆಂಪು ಹೆಸರಿನಲ್ಲಿ ಕುಪ್ಪಳಿ ಸುತ್ತಮುತ್ತಲಿನ ಕಾಡನ್ನು 'ಕುವೆಂಪು ಜೈವಿಕ ಅರಣ್ಯ'ವೆಂದು ಘೋಷಿಸಿ ಸಂರಕ್ಷಣೆ ಮಾಡಿರುವುದು ನಿಸರ್ಗಕ್ಕೆ ಮತ್ತು ಕವಿಚೇತನಕ್ಕೆ ಸಲ್ಲಿಸಿದ ನಮನ ಎಂದು ಹೇಳಬಹುದು.

'ಶ್ರೀರಾಮಾಯಣ ದರ್ಶನಂ' ಮಹಾಕಾವ್ಯದಲ್ಲಿ ಶ್ರೀರಾಮ ಮತ್ತು ವಿಶ್ವಾಮಿತ್ರರ ಸಂವಾದವಿದೆ. ಆ ಕಾಲದ ಮಹಾನಗರ ಅಯೋಧ್ಯೆಯ ಅರಮನೆಯಲ್ಲಿ ನಾಲ್ಕು ಗೋಡೆಗಳ ಮಧ್ಯೆ ಬೆಳೆದು, ನಿಸರ್ಗ ಸನ್ನಿಧಿಯಿಂದ ದೂರ ಸಿಡಿದ ಚೇತನಗಳಾಗಿದ್ದ ರಾಮ – ಲಕ್ಷ್ಮಣರು ವಿಶ್ವಾಮಿತ್ರನ ದೆಸೆಯಿಂದ ತಮ್ಮ ಜೀವನದಲ್ಲಿ ಮೊದಲ ಬಾರಿಗೆ ಕಾಡನ್ನು ನೋಡುತ್ತಾರೆ. ಕಾಡಿನ ನಿಸರ್ಗ ಶಯ್ಯೆಯಲ್ಲಿ ಕಳೆದ ರಾತ್ರಿ, ಚಂದ್ರೋದಯ, ನಕ್ಷತ್ರಖಚಿತ ಆಕಾಶ, ಸೂರ್ಯೋದಯ, ಹಕ್ಕಿಗಳ ಗಿಲಗಚ್ಚಿ, ದೇವರು ಮಾಡಿದ ರುಜುವಿನಂತೆ ಕಾಣುವ ಹಾರಾಡುವ ಹಕ್ಕಿ ಸಾಲು ... ಇವೆಲ್ಲಾ

ರಾಮನ ಮನಸ್ಸಿನ ಮೇಲೆ ತೀವ್ರವಾದ ಪ್ರಭಾವ ಬೀರುತ್ತವೆ. ಇದೇ ಗುಂಗಿನಲ್ಲಿದ್ದ ರಾಮನು ವಿಶ್ವಾಮಿತ್ರನನ್ನು ಕುರಿತು :

ರಾಮ : ಗುರುದೇವ! ನಿಮ್ಮ ಕರುಣೆಯಿಂ

ಎಮಗೆ ಲಭಿಸಿತೀ ವನ್ಯಸುಖಂ! ದಾರಿದ್ರ್ಯಂ

ಅಲ್ತೆ ಆ ನಾಗರಿಕಜೀವನಂ, ಈ ವನ್ಯ ಸಂಸ್ಕೃತಿಯ ಮುಂದೆ?

ವಿಶ್ವಾಮಿತ್ರ : ದಿಟವೊರೆದೆ ಹೇ ವತ್ಸ ! ಗಿರಿವನ ಪ್ರೀತಿ ತಾಂ ದೈವಕೃಪೆ ದಲ್! ಜಗದೀಶ್ವರನ ಮಹಿಮೆ ಸಂವೇದ್ಯವಹುದಿಲ್ಲಿ; ಭವ್ಯ ಸೌಂದರ್ಯ ಶೀಲದ ವನ್ಯಶಾಂತಿಯಲಿ ! ಉಪನಿಷತ್ತಿನ ಮಹಾ ಮಂತ್ರಾನುಭವಗಳುಂ ಹೃದ್ಗಮ್ಯವಿಲ್ಲಿ ! ಸೃಷ್ಟಿ ಸೌಂದರ್ಯದ ಒಲ್ಮೆಯೆ ಸೃಷ್ಟಿಕರ್ತಂಗೆ ಪೂಜೆಯಯ್!... ಈ ಸಂವಾದದ ಮೂಲಕ ಕುವೆಂಪು ಅರಣ್ಯ ರಮಣಿಯ ಮಹತ್ವವನ್ನು ತಿಳಿಸುವುದರ ಜೊತೆಗೆ ಆಧುನಿಕ ಮನುಷ್ಯರಿಗೆ ಅಗತ್ಯವಾದ ಆದಿಮತೆಯ ಸತ್ವವನ್ನು ನಿರೂಪಿಸಿದ್ದಾರೆ.

**೨) 'ಕಲಾಸುಂದರಿ' ಅನವರತ ಅಶೃಂಖಲೆ (= ಬಂಧನ ಮೋಹಿನಿ, ಕಠೋರಕೋಮಲೆ, ಅರೂಪ ಸುಂದರಿ)**

ಶೃಂಖಲೆ ಎಂದರೆ ಸಂಕೋಲೆ; ಬೇಡಿ ಎಂದರ್ಥ. ಕೈಗಳಿಗೆ ಬೇಡಿ ಹಾಕಿ ಜೈಲಿಗೆ ತಳ್ಳುವುದುಂಟು. ಅಪರಾಧಿಗಳಿಗೆ, ಯುದ್ಧ ಖೈದಿಗಳಿಗೆ ಮಾತ್ರವಲ್ಲ! ರಾಜಕೀಯ ಕಾರಣ ಗಳಿಗಾಗಿಯೂ ವಿರೋಧಿಗಳನ್ನು ಸೆರೆಮನೆಗೆ ನೂಕುತ್ತಾರೆ. ಕಾವ್ಯಾದಿ ಕಲೆಗಳು ಸದಾ ವಿರೋಧ ಪಕ್ಷವೇ! ಕುವೆಂಪು ರಚಿಸಿದ ಕನ್ನಡ ಸಂಸ್ಕೃತಿಯ ನಿತ್ಯಸಚಿವ ಸಂಪುಟವನ್ನಿಲ್ಲಿ ಸ್ಮರಿಸಿಕೊಳ್ಳಬಹುದು. ಪಟ್ಟಭದ್ರ ಶಕ್ತಿಗಳಿಗೆ ತಲೆಬಾಗದೆ ಸ್ವಯಂ ಸರ್ಕಾರದ ಶಿಸ್ತಿನಿಂದ ಜನತೆಯ ಹಿತಕ್ಕೆ ಸದಾ ಬದ್ಧವಾಗಿರುವ ನಿರಂಕುಶ ಮತಿಯ ಆತ್ಮಶ್ರೀಯನ್ನು ಹೊಂದಿರುವ ಕಲಾಸುಂದರಿ ಅನವರತ (= ಎಂದೆಂದಿಗೂ) ಅಶೃಂಖಲೆ (= ಸರಪಳಿಯಿಲ್ಲ ದವಳು). 'ಸರಪಳಿ' ಎಂದರೆ ಲೋಹಸರಪಳಿ ಎಂದೇ ತಿಳಿಯಬಾರದು. ಜಾತಿ, ಮತಧರ್ಮ, ದೇಶ, ಭಾಷೆ, ಕಾಲ ... ಇತ್ಯಾದಿಗಳೆಲ್ಲವೂ ಸರಪಳಿಗಳೇ! ಕವಿ ಕಲಾವಿದರು ವಿಶ್ವ ಮಾನವರು; ನಿಸ್ಸೀಮೆಯ ಬಾನಾಡಿಗಳು.

ಪರಾಧೀನ ಕಲೆಗೂ ಗುಲಾಮಗಿರಿಗೂ ವ್ಯತ್ಯಾಸವಿಲ್ಲ. ಕಲಾಸುಂದರಿಯ ಸ್ವಾತಂತ್ರ್ಯದಾಹ ಅಪರಿಮಿತವಾದುದು. ಆದಿಕವಿ ಪಂಪನು "ಮರಿ ದುಂಬಿಯಾಗಿ ಮೇಣ್ ಕೋಗಿಲೆಯಾಗಿ ಪುಟ್ಟುವುದು ನಂದನದೊಳ್ ಬನವಾಸಿ ದೇಶದೊಳ್" ಎಂದು ಬಯಸಿರುವುದು ಧ್ವನಿಪೂರ್ಣ! ಕಡ್ಡಿರ್ಜೇನಿನ ಮರಿ ದುಂಬಿಗಳನ್ನು ಮತ್ತು ಕೋಗಿಲೆಗಳನ್ನು ಯಾರೂ ಸಾಕುವುದಿಲ್ಲ!

ಮನುಷ್ಯ ತನ್ನ ಸ್ವಾಧೀನ ಮಾಡಿಕೊಳ್ಳಲು ಸಾಧ್ಯವಿಲ್ಲದ ಇವೆರಡನ್ನು, ಮರುಹುಟ್ಟು ಪಡೆಯಲು ಪಂಪನು ಆಯ್ಕೆಮಾಡಿಕೊಂಡು ಜೀವದ ವಿಶೃಂಖಲತೆಯನ್ನು ಬಿಂಬಿಸಿದ್ದಾನೆ. ಈ ಸೃಷ್ಟಿಯಲ್ಲಿ ಪ್ರತಿಯೊಂದು ಜೀವಿಯೂ ಬಂಧನ ವಿರೋಧಿಯೇ! ಒಂದು ಕೀಟವನ್ನು ಬೆಂಕಿ ಪೆಟ್ಟಿಗೆಯಲ್ಲಿ ಬಂಧಿಸಿದರೆ ಅದು ಹೊರಬರಲು ಸರ್ವಸಾಹಸ ಮಾಡುತ್ತದೆ.

ವಸಾಹತುಶಾಹಿ ನವೋದಯ ಕಾಲದಲ್ಲಿ ಕುವೆಂಪುರವರು 'ಕಾಜಾಣ'ವನ್ನು (= Black Drongo + Rocket tailed) ತಮ್ಮ ಸಾಹಿತ್ಯದ ಲಾಂಛನ ಮಾಡಿಕೊಂಡು ಯಾರಿಗೂ ತಲೆಬಾಗದ ಪನ್ನತಿಕೆಯನ್ನು ಮೆರೆದಿದ್ದಾರೆ. ಕಾಜಾಣಗಳ ನಿರ್ಭೀತಿ ವನ್ಯಸತ್ವ! ಹಿಂಸ್ರ ಪಕ್ಷಿಗಳನ್ನು ಅಟ್ಟಿಸಿಕೊಂಡು ಓಡಿಸಬಲ್ಲ ಕಾಜಾಣಗಳು ಇರುವ ಕಡೆಯೇ ಕೆಲವು ಸಾಧುಪಕ್ಷಿಗಳು ಗೂಡು ಕಟ್ಟಿಕೊಂಡು ವಾಸಮಾಡುತ್ತವೆ. ಸಂರಕ್ಷಣೆ ಮತ್ತು ಸಂಗೋಪನೆಯ ಭಾವದ ಕಾಜಾಣ ಕುವೆಂಪು ಸಮಗ್ರ ಸಾಹಿತ್ಯದ ಸಮರ್ಥ ಪ್ರತೀಕವಾಗಿದೆ.

'ಬಂಧನಮೋಹಿನಿ' ಎಂಬ ನುಡಿಯೂ ಗಮನಾರ್ಹ! ಅಧಿಕಾರವನ್ನು ಎದುರು ಹಾಕಿ ಕೊಂಡ ಮೇಲೆ ಬಂಧನಮೋಹಿನಿ ಆಗುವುದು ಅನಿವಾರ್ಯ! ವರ್ಣಭೇದ ನೀತಿಯನ್ನು ಪಾಲಿಸುವ ಸರ್ಕಾರಕ್ಕೆ ತೆರಿಗೆ ಕಟ್ಟುವುದಿಲ್ಲವೆಂದು ಹೇಳಿ ಜೈಲುವಾಸ ಅನುಭವಿಸಿದ ನಿಸರ್ಗರಸ ಋಷಿ

ಲೇಖಕ ಹೆನ್ರಿ ಡೇವಿಡ್ ತೋರೋ, ಎಡಪಂಥೀಯ ಎಂಬ ಕಾರಣಕ್ಕೆ ನಿಷೇಧಕ್ಕೊಳಗಾದ ಚಿಲಿ ದೇಶದ 'ಸಮುದ್ರ ಕವಿ' ಪಾಬ್ಲೋ ನೆರೂಡ, ವಿಯೆಟ್ನಾಂ ಭಾಗ್ಯವಿಧಾತ ಹೊ ಚಿ ಮಿನ್ ಅವರ ಪ್ರಿಸನ್ ಡೈರಿ, ಟರ್ಕಿಯ ಕವಿ ನಜೀಮ್ ಹಿಕ್ಮತ್ ಅವರ 'ಸಿನ್ಸ್ ಐ ವಾಸ್ ಜೈಲ್ಡ್' ಕವಿತೆ, 'ನರಬಲಿ' ಕವಿತೆ ರಚನೆಗಾಗಿ ಜೈಲು ಕಂಡ ಕವಿ ಬೇಂದ್ರೆ, ತೆಲುಗಿನ 'ದಿಗಂಬರ' ಮತ್ತು 'ವಿರಸಂ' ಕವಿಗಳಲ್ಲಿ ಬಹುಮಂದಿ ಜೈಲುವಾಸ ಅನುಭವಿಸಿದರು ಮತ್ತು ಇವರ ಬಹಳಷ್ಟು ಕವನ ಸಂಕಲನಗಳು ನಿಷೇಧಗೊಂಡವು. ಕನ್ನಡ ಸಾಹಿತ್ಯದ ಹರಿಹರ × ರಾಘವಾಂಕ, ಆಂಧ್ರ ಸಾಹಿತ್ಯದ ಶ್ರೀನಾಥ × ಪೋತನ ರಾಜಾಶ್ರಯ ಮತ್ತು ಸ್ವಾತಂತ್ರ್ಯದ ಘರ್ಷಣೆಗೆ ಹೆಸರಾದವರು. ಭಕ್ತಿಪಂಥಕ್ಕೆ ಸೇರಿದ ಸಂತಕವಿಗಳನೇಕರು "ದೇವರ ಬಡಿಗೆಗಲ್ಲದೆ ಬಾಗಲರಿಯೆವು" ಎಂಬ ಬಹಿರಂಗವಾಗಿ ಘೋಷಿಸಿದ್ದಾರೆ. ಆದ್ದರಿಂದಲೇ 'ಕಲಾಸುಂದರಿ' ಕಠೋರ ಕೋಮಲೆ! ಅರೂಪ ಸುಂದರಿ ಎಂಬ ನುಡಿ ಅರ್ಥವತ್ತಾಗಿದೆ. "ರೂಪನೆ ಕಂಡರು, ನಿರೂಪನೆ ಕಾಣರು" ಎಂದು ಅಲ್ಲಮನ ವಚನವಿದೆ. ಕುವೆಂಪು ಕಾವ್ಯಕಲೆಯನ್ನು 'ಅರೂಪ ಸುಂದರಿ' ಎಂದು ಕರೆದದ್ದು ಗಮನಾರ್ಹ! ಏಕೆಂದರೆ ನವ್ಯಪಂಥದವರು ಚಾಲನೆಗೆ ತಂದ 'ರೂಪನಿಷ್ಠವಿಮರ್ಶೆ'ಗೂ ಕುವೆಂಪು ಹೇಳಿದ 'ಅರೂಪಸುಂದರಿ'ಗೂ ಇರುವ ವಿರುದ್ಧ ಭಾವವನ್ನು ಮನಗಂಡಲ್ಲಿ ಕಲಾತತ್ವ ವಿಚಾರದಲ್ಲಿ ಕುವೆಂಪು ಅವರಿಗೆ ಇದ್ದ ಮುಂಗಾಣ್ಕೆಯ ಖಚಿತದೃಷ್ಟಿಯು ಸುಸ್ಪಷ್ಟವಾಗುತ್ತದೆ.

**೩) 'ಕಲಾಸುಂದರಿ' ದ್ವಂದ್ವಮಾಲಿನಿ (= ದುಃಖ ಸುಖ ತರಂಗಿನಿ, ಸ್ಥಿರ ಅಸ್ಥಿರ ಗಾಮಿನಿ, ಅಸಂಖ್ಯಶಾಲಿನಿ)**

ತೀವ್ರವಾದ ದ್ವಂದ್ವಗಳು (= ವಿರುದ್ಧಭಾವ ಮೈತ್ರಿ); ವಿರುದ್ಧ ಧ್ರುವಗಳ ಸಂಘರ್ಷ ಕಲಾ ಸುಂದರಿಯ ಉಸಿರಾಟವೆನ್ನಬಹುದು.

ಸಮುದ್ರಗರ್ಭ ಸಮಾನವಾದ ಮಹಾನ್ ವೈರುಧ್ಯಗಳಿಂದ ಕೂಡಿದ ಮಹಾಕಾವ್ಯಗಳೆಂದರೆ ರಾಮಾಯಣ ಮತ್ತು ಮಹಾಭಾರತಗಳು. ಈ ಕಾಲಕ್ಕೆ ಕುವೆಂಪು ಅವರ ಸಮಗ್ರ ಸಾಹಿತ್ಯವನ್ನು ಉದಾಹರಿಸಬಹುದು. ದ್ವಂದ್ವಮಾನತೆ ಅಥವಾ ಡಯಲೆಕ್ಟಿಕಲ್ ಮೆಟೀರಿಯಲಿಸಂ ಅಸ್ತಿತ್ವದಲ್ಲಿರುವ ಎಲ್ಲಾ ಬಗೆಯ ವಸ್ತುಗಳಿಗೆ ಅನ್ವಯವಾಗುವ ಚಾರಿತ್ರಿಕ ಸತ್ಯ ಕೂಡ. ಇವನ್ನು ಕೇವಲ ಬೈನರಿಗಳು ॥ ದ್ವಂದ್ವಗಳು ಎಂದು ನಿರೂಪಿಸಿ, ಅಲ್ಲಿಗೆ ನಿಲ್ಲಿಸಿ ಬಿಡುವುದು ಡಯಲೆಕ್ಟಿಕಲ್ ಮೆಟೀರಿಯಲಿಸಂ ಆಗುವುದಿಲ್ಲ! ದ್ವಂದ್ವಮಾನ ಭೌತವಾದದ ತ್ರಿವಿಕ್ರಮ ಪಾದಗಳಲ್ಲಿ ಬೈನರಿಗಳು ಅಥವಾ ದ್ವಂದ್ವಗಳು ಎಂಬುದು ಒಂದು ಪಾದ, ಅಷ್ಟೆ.

ಡಯಲೆಕ್ಟಿಕಲ್ ಮೆಟೀರಿಯಲಿಸಂಅನ್ನು ತ್ರಿವಿಕ್ರಮನ ಮೂರು ಪಾದಗಳಂತೆ ಅಖಂಡವಾಗಿ ಗ್ರಹಿಸಬೇಕು. (೧) ಚಲನಶೀಲತೆ (೨) ಉಭಯ ವೈರುಧ್ಯ (೩) ಉಭಯ ಪರಿವರ್ತನೆಯೇ ದ್ವಂದ್ವಮಾನ ಭೌತವಾದದ ಮೂರು ಪಾದಗಳು. ಇದರಿಂದ ನಾವು ತ್ರಿವಿಕ್ರಮನಂತೆ ಮೂರು ಲೋಕವನ್ನೇ ಅಳೆಯಬಹುದು. ಹೀಗೆ ಮಾಡದೆ ಕೇವಲ ಬೈನರಿಸಂನಲ್ಲಿ ನಿಲ್ಲುವ ಬಗೆಯನ್ನು ನವ್ಯಪಂಥದಲ್ಲಿ ಕಾಣುತ್ತೇವೆ.

ದ್ವಂದ್ವಕ್ಕೆ ಹೆಚ್ಚಿನ ಒತ್ತು ಕೊಟ್ಟ ನವ್ಯಪಂಥವನ್ನು "ನಿರ್ಣಯವನರಿಯದ ಮನವೆ" (= ಅಲ್ಲಮಪ್ರಭು) ಎಂದು ವ್ಯಾಖ್ಯಾನಿಸಬಹುದು.

**೩) ದ್ವಂದ್ವಾತ್ಮಕ ಭೌತವಾದದ ಪ್ರಕಾರ ಪ್ರತಿಯೊಂದು ವಸ್ತುವೂ ...**

೧) ಸದಾ ಚಲನಶೀಲವಾಗಿರುತ್ತದೆ.

೨) ಉಭಯ ವೈರುಧ್ಯಗಳಿಂದ ಕೂಡಿರುತ್ತದೆ.

೩) ಉಭಯ ಪರಿವರ್ತನೆಗೆ ಬದ್ಧವಾಗಿರುತ್ತದೆ.

ಈ ದ್ವಂದ್ವಮಾನತೆ / ಡಯಲೆಕ್ಟಿಕಲ್ ಮೆಟೀರಿಯಲಿಸಂ ತತ್ವಕ್ಕೆ ಕುವೆಂಪು ನಿರೂಪಣೆಯ 'ಮಮತೆಯ ಸುಳಿ ಮಂಥರೆ' ಉತ್ತಮ ನಿದರ್ಶನ. ಕುಬ್ಜೆಯೂ ಗೂನಿಯೂ ಆದ ಮಂಥರೆ ಮಮತೆಯ ಸುಳಿಯಾಗಿ ರಾಮನನ್ನು ತನ್ನ ಚಲನಶೀಲವಾದ ಚಕ್ರತೀರ್ಥಕ್ಕೆ ಸೆಳೆದುಕೊಳ್ಳುತ್ತಾಳೆ. ಆದರೆ ತನ್ನ ಕೃತ್ಯವು ಭರತ ವಿರೋಧಿಯೆಂದು ಅರಿವಾದೊಡನೆ ಅವಳ ವೈರುಧ್ಯಭಾವ ಅಳಿದು ಮನಃಸ್ಥಿತಿ ಪರಿವರ್ತನೆಯಾಗುತ್ತದೆ. ಭರತನಿಗೆ ಇಷ್ಟವಾದ ಕೆಲಸ ಮಾಡಬೇಕು ಮತ್ತು ಭರತನಿಗೆ ಮೊದಲು ರಾಮನನ್ನು ತಂದುಕೊಡಬೇಕೆಂಬ ಭಾವನೆಯಿಂದ ಅರಣ್ಯ ಪ್ರವೇಶ ಮಾಡುತ್ತಾಳೆ. ರಾಮನ ತೇಜೋರೂಪವೆಂದು ಭ್ರಮಿಸಿ ಕಾಳ್ಗಿಚ್ಚಿನೆಡೆಗೆ ಸಾಗಿ ಚಿಟ್ಟೆ ಸೀದಂತೆ ಸುಟ್ಟು ಹೋಗುತ್ತಾಳೆ. ರಾಮನನ್ನು ಮನವೊಲಿಸಿ ಅಯೋಧ್ಯೆಗೆ ಹಿಂದಿರುಗಿಸುವ ಉದ್ದೇಶದಿಂದ ಅರಣ್ಯಪ್ರವೇಶ ಮಾಡುವ ಭರತನಿಗೆ, ಕಾಡಿನಲ್ಲಿ ಮಾರ್ಗದರ್ಶಿಯಾಗಿ ಮಂಥರೆಯ ರೂಪದ ಕೈ ಕಾಣಿಸಿಕೊಂಡು ತನ್ನ ಹೊಗೆಬೆರಳಿನಿಂದ ರಾಮನಿರುವ ತಾಣವನ್ನು ನಿರ್ದೇಶಿಸುತ್ತದೆ. ೧೪ ವರ್ಷಗಳ ವನವಾಸದ ಅವಧಿ ಮುಗಿದರೂ ರಾಮನಿನ್ನೂ ಬಂದಿಲ್ಲವೆಂದು ಅಗ್ನಿಪ್ರವೇಶಕ್ಕೆ ಸಿದ್ಧವಾದ ಭರತನಿಗೆ ಚಿತಾಗ್ನಿಯಲ್ಲಿ ಜ್ವಾಲಾ ರೂಪಿಣಿಯಾಗಿ ಕಾಣಿಸಿಕೊಳ್ಳುವ ಮಂಥರೆ ಭರತನನ್ನು ತಡೆಯುತ್ತಾಳೆ. ಬೆರಗಿನಿಂದ "ನೀನಾವ ದೇವತೆ?" – ಎಂದು ಪ್ರಶ್ನಿಸುವ ಭರತನಿಗೆ "ಸದಾ ನಿನ್ನ ಏಳ್ಗೆಯನ್ನೇ ಬಯಸುತ್ತಿರುವ ಮಂಥರೆಯೇ ನಾನು" ಎಂದುತ್ತರಿಸುತ್ತಾಳೆ.

ರಾಮಪಟ್ಟಾಭಿಷೇಕಕ್ಕೆ ಕುದಿಯುತ್ತಿದ್ದ ಮಂಥರೆಯೇ ಈಗ ರಾಮಾಗಮನದ ಪ್ರಿಯವಾರ್ತೆ ಸಾರುವ 'ಜ್ವಾಲಾದೂತೆ' ಆಗಿರುವುದು ಕುವೆಂಪು ಕಂಡ ಡಯಲೆಕ್ಟಿಕಲ್ ಮೆಟೀರಿಯಲಿಸಂ ಎನ್ನ ಬಹುದು. ಇದನ್ನು ಕೇವಲ ಬೈನರಿಸಂ ಎಂದು ಗ್ರಹಿಸಿದಲ್ಲಿ ತತ್ವವನ್ನು ಸರಿಯಾಗಿ ಮನಗಾಣದೆ, ಅಂಗವಿಕಲಗೊಳಿಸಿದಷ್ಟೇ ಅನರ್ಥಕಾರಿಯಾಗುತ್ತದೆ. ಕುವೆಂಪು ಸಮಗ್ರಸಾಹಿತ್ಯವೇ ಡಯಲೆಕ್ಟಿಕಲ್

---




# ಹೇಳು ಸಾಕಿ

ಯಾತನೆಯ ನಿಟ್ಟುಸಿರು ಹೇಗೆ ಬರೆಯುವುದು ಹೇಳು ಸಾಕಿ
ಬದುಕ ಹೂಬನದಲ್ಲಿ ಉಕ್ಕುವ ಕಣ್ಣೀರು ಹೇಗೆ ತಡೆಯುವುದು ಹೇಳು ಸಾಕಿ

ಕರಗಿ ಹಿಮವಾಗಿಬಿಡಲಿ ನಮ್ಮೊಳಗಿನ ಮೌನದ ಗಾಢ ಕತ್ತಲು
ಅರ್ಧ ರಾತ್ರಿಯಲ್ಲಿ ಜಾರಿದ ಕಣ್ಣೀರ ಹನಿ ಹೇಗೆ ಬಚ್ಚಿಡುವದು ಹೇಳು ಸಾಕಿ

ಯಾವ ಶಾಸ್ತ್ರ ಗೀಸ್ತ್ರ ನಮಗೇಕೆ ಅಡ್ಡಗಾಲಾಗಿ ನಿಂತಿವೆ ಗೊಡ್ಡು ಸಂಪ್ರದಾಯ
ಕಾಡುವ ಬೇಡುವ ರೀತಿ ರಿವಾಜುಗಳು ಹೇಗೆ ಕೊಲ್ಲುವುದು ಹೇಳು ಸಾಕಿ

ನಿಜ ಹೇಳುವ ಜಮಾನ ಬಂದುಬಿಟ್ಟಿದೆ ಬೇಗ ತಯಾರಾಗು ಹೊರಟುಬಿಡೋಣ
ಮುಖವೆತ್ತಿ ನೋಡೊಮ್ಮೆ ಆಕಾಶ ಸುರಿಯುವ ಮಳೆಯಲ್ಲಿ ಚಳಿ ಕಾಯಿಸುವುದು
ಹೇಗೆಂದು ಹೇಳು ಸಾಕಿ

ಕಾಲ ಗೆಜ್ಜೆಗಳು ತುಕ್ಕು ಹಿಡಿಯುವುದು ಬೇಡ ನದಿಯಂತೆ ಹರಿದು ಸಾಗರ ಸೇರಲಿ
ಎದೆಯ ಹಾಡಿಗೆ ತಾಳ ಕೂಡಿಸಿ ರಾಗ ಹಾಡುವುದು ಹೇಗೆಂದು ಹೇಳು ಸಾಕಿ

**ಡಾ॥ ಜಯದೇವಿ ಗಾಯಕವಾಡ**
ಮನೆ ನಂ. ೫೮/೭೩, ಹೌಸಿಂಗ್ ಸೊಸೈಟಿ ಕಾಲೋನಿ, ಕಲ್ಲೂರ ರಸ್ತೆ
ಹುಮನಾಬಾದ – ೫೮೫ ೩೩೦, ಬೀದರ ಜಿಲ್ಲೆ

ಮೆಟೀರಿಯಲಿಸಂ ಆಗಿದೆ. ಮರಣ ಮಂಚದಲ್ಲಿ ಇದ್ದಾಗ ತನ್ನನ್ನು ನೋಡಲು ಬಂದ ಹೂವಯ್ಯನಿಗೆ ಕೈಮುಗಿಯುವ ಚಂದ್ರೇಗೌಡರು, ಶೂದ್ರತಪಸ್ವಿಯನ್ನು ಕಂಡು ನಮಸ್ಕರಿಸುವ ರಾಮ, ವಿದ್ಯಾರ್ಥಿನಿಲಯ ವಾಗುವ ಅಂತಕ್ಕನ ಹೋಟ್ಲು ಮನೆ, ಮುಖ್ಯೋಪಾಧ್ಯಾಯರಾಗುವ ಐಗಳು ಅನಂತಯ್ಯ, ಅನಿಶ್ಚಿತ ಭವಿಷ್ಯದಲ್ಲಿ ಕೊಚ್ಚಿಕೊಂಡು ಹೋಗುವ ಹುಲಿಯ–ಗುತ್ತಿ–ತಿಮ್ಮಿಯ ಬದುಕು, ಆತ್ಮೋನ್ನತಿಯ ನೀಲೀರಾಗಕ್ಕೆ ತನ್ನನ್ನು ಸಮರ್ಪಿಸಿಕೊಳ್ಳುವ ಏಕಲವ್ಯ ... ಇವೇ ಮುಂತಾದ ಚಲನಶೀಲ ದ್ವಂದ್ವಮಾನತೆಯನ್ನು ತಮ್ಮ ಸಮಗ್ರಸಾಹಿತ್ಯದಲ್ಲಿ ಬಿಂಬಿಸಿರುವ ಕುವೆಂಪು ಸದಾ ಪ್ರಸ್ತುತರಾಗುವ ನಿತ್ಯನೂತನ ಪ್ರತಿಭೆ.

ಜಾತಿಪದ್ಧತಿ ರಚನೆಯ ಸಮಾಜದಲ್ಲಿ 'ಬ್ರಾಹ್ಮನಾಯಿ × ಶೂದ್ರಕೋಳಿ' ಮತ್ತು ವರ್ಗ ಸಂಘರ್ಷ ರಚನೆಯ ಸಮಾಜದಲ್ಲಿ 'ಅರ್ಜುನರು × ಏಕಲವ್ಯರು' ಎಂಬ ವೈರುಧ್ಯಗಳು ಕುವೆಂಪು ಸಮಗ್ರಸಾಹಿತ್ಯದಲ್ಲಿ ಸಹೃದಯತೆಯಿಂದ ಕಂಡು ಕೊಳ್ಳಬಹುದಾದ ಒಂದೆರಡು ಉದಾಹರಣೆಗಳು ಅಷ್ಟೆ. ಒಟ್ಟಿನಲ್ಲಿ ದ್ವಂದ್ವಮಾನತೆಯ ಮೂಲಕ ಬದುಕಿನ ಗತಿಶೀಲತೆಯನ್ನು ಬಿಂಬಿಸಿರುವ ಕುವೆಂಪು ಅವರ ಸಮಗ್ರ ಸಾಹಿತ್ಯದ ದರ್ಶನವು ವ್ಯಕ್ತಿ ಮತ್ತು ಸಮಾಜ ಪರಿವರ್ತನೆಯ ಜೀವ ದ್ರವ್ಯವಾಗಿದೆ. ಸ್ಥಾವರವಾದ ಕ್ರಿಯೆ, ಕಾಲ, ದೇಶದ ವಿವರಗಳೇ ಕುವೆಂಪು ಅವರ ಸಾಹಿತ್ಯದಲ್ಲಿ ಕಂಡುಬರುವುದಿಲ್ಲ. ಸ್ಥಿರದಿಂದ ಅಸ್ಥಿರಕ್ಕೆ; ಅಸ್ಥಿರದಿಂದ ಸ್ಥಿರಕ್ಕೆ, ದುಃಖದಿಂದ ಸುಖಕ್ಕೆ; ಸುಖದಿಂದ ದುಃಖಕ್ಕೆ, ಅಸಂಖ್ಯ ಭಾವಸ್ಫೋಟಗಳಿಂದ ತುಂಬಿ ಹೋಗಿರುವ ಕಥನಮಥನಗಳೆಲ್ಲಾ ಬದುಕಿನ ಗತಿಶೀಲತೆಯ ಬಿಂಬಗಳಾಗಿದ್ದು, "ಕರಿಯು ಕನ್ನಡಿಯಲ್ಲಿ ಅಡಗಿದಂತೆ" ಇವೆ.

**೪) ''ಕಲಾಸುಂದರಿ' ನಿತ್ಯನೂತನ ಪ್ರಸೂತೆ (=ಜೀವನಪ್ರೇಯಸಿ, ಅಸೀಮಸ್ಫೂರ್ತಿಯೆ, ನಿಃಶ್ರೇಯಸಿ)**

ಕಲಾಸುಂದರಿ ನಿತ್ಯನೂತನತೆಗೆ ಜನ್ಮದಾತೆ. ಆದಿಕವಿ ಪಂಪನು ಕವಿತ್ವವನ್ನು ಕುರಿತು "ಇದು ನಿಚ್ಚಂ ಪೊಸತು" ಎಂದು ಹೇಳಿದ್ದುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ಸಂಸ್ಕೃತ ಕಾವ್ಯ ಮೀಮಾಂಸೆಯಲ್ಲಿ ಕವಿಪ್ರತಿಭೆಯನ್ನು "ಪ್ರಜ್ಞಾ ನವನವೋನ್ಮೇಷಶಾಲಿನೀ" ಎಂದು ಅಭಿವರ್ಣಿಸ ಲಾಗಿದೆ : "ಹೊಸ ಹೊಸ ಹೊಳಹುಗಳನ್ನು ಹೊಳೆಯಿಸುವ ಪ್ರಜ್ಞೆಯೇ ಪ್ರತಿಭೆ" ಎಂಬ ನಿರೂಪಣೆಯಲ್ಲಿ ಕಲಾಸುಂದರಿಯ ಆತ್ಮದ ವ್ಯಾಖ್ಯಾನವಿದೆ. ಕವಿ ಬೇಂದ್ರೆ ಅವರು ಹೊಸತನವನ್ನು ಬಹುಸೊಗಸಾಗಿ ಹೇಳಿದ್ದಾರೆ : "ಭೂವನ ಕುಸುಮಿಸಿ ಪುಲಕಿಸಿ ಮರಳಿಸಿ ಕೋಟಿ ಕೋಟಿ ಸಲ ಹೊಸಯಿಸಿತು..." ಎಂಬ ನುಡಿಗಳಲ್ಲಿ ಕಲಾಸುಂದರಿಯ ವ್ಯಕ್ತಿತ್ವವೇ ಅಡಗಿದೆ. ಕವಿಸೃಷ್ಟಿ ಮತ್ತೆ ಮತ್ತೆ ಮರುಹುಟ್ಟು ಪಡೆದು, ಸದಾ ಹೊಸ ಸೃಷ್ಟಿಯಾಗಿಯೇ ಇರುವುದೊಂದು ಸೋಜಿಗ!

> ವಿದ್ಯಾಭ್ಯಾಸದ ಗುರಿ
> ಡಿಗ್ರಿ, ಉದ್ಯೋಗವೇ?
> ಉದ್ಯೋಗದ ಗುರಿ
> ಹಣ ಸಂಪಾದನೆಯೇ?
> ಹಣದಿಂದ ಭೋಗ ಜೀವನವೇ ?
> ಮಕ್ಕಳಿಗೆ ಹೇಳಿ
> ವಿದ್ಯಾಭ್ಯಾಸದ ಗುರಿ ಅರಿವು – ಜ್ಞಾನ !
>
> **ಡಾ॥ ಸಿ. ಆರ್. ಚಂದ್ರಶೇಖರ್**
> ಬೆಂಗಳೂರು

"ಬಾ ಭೃಂಗವೆ ಬಾ! ನಿನ್ನ ಮುಖ ಸ್ಪರ್ಶವೆ ಸಾಕು! ಹೊಸ ಸೃಷ್ಟಿಯೇ ಬರಬಹುದು!"

– ಕವಿ ಬೇಂದ್ರೆ. ಕುವೆಂಪು ಅವರ ವಿಶ್ವಮಾನವ ಗೀತೆ "ಓ ನನ್ನ ಚೇತನ! ಆಗು ನೀ ಅನಿಕೇತನ!" ಕೂಡ ನಿತ್ಯ ನೂತನ ಪ್ರಸೂತತ್ವವೇ ಆಗಿದೆ. ಇಂಥ ನವೋನವತ್ವದ ಪ್ರೀತಿಯನ್ನೇ ಕುವೆಂಪು ಅವರು 'ನೂತನ ಪ್ರಚಾರಿಣಿ' ಎಂದಿದ್ದಾರೆ.

ಕಲಾಸುಂದರಿಯ ವ್ಯಾಪ್ತಿಗೆ ಎಲ್ಲೆಗಳಿಲ್ಲ; ಯಾವುದೇ ವಿಧವಾದ ಚೌಕಟ್ಟುಗಳಿಗೆ ಸಿಲುಕದೆ, ಜೀವನದ ಗತಿಯಲ್ಲಿ ಎಲ್ಲವನ್ನೂ ಒಳಗೊಳ್ಳುತ್ತಾ ಸಾಗುತ್ತಾಳೆ. "ಕಲೆಗೆ ಅಂಗವಾಗದ ವಸ್ತುವಿಲ್ಲ! ಭಾವವಿಲ್ಲ! ಅಬ್ಬಾ ಕವಿಗಳ ಜವಾಬ್ದಾರಿ ಎಷ್ಟು ದೊಡ್ಡದು?" (= ಭಾಮಹ) ಎಂಬ ಮಾತುಗಳು ಸತ್ಯವಾದವು. ಈ ದೃಷ್ಟಿಯಿಂದ 'ಕಲಾಸುಂದರಿ'ಯು ವಿಶ್ವ ಸಂಸಾರಿಣಿ ಮತ್ತು ಜಗಚ್ಚಕ್ರ ಧಾರಿಣಿ!

"ವಿಶ್ವಮಾತೆಯ ಗರ್ಭಕಮಲಜಾತ ಪರಾಗ ಪರಮಾಣು ಕೀರ್ತಿ ನಾನು, ಭೂಮಿ ತಾಯಿಯ ಮೈಯ ಹಿಡಿಮಣ್ಣಿ ಗುಡಿ ಕಟ್ಟಿ ನಿಂತಂಥ ಮೂರ್ತಿ ನಾನು ... ವಿಶ್ವದ ಒಳನುಡಿಯಾಗಿ ಕನ್ನಡಿಸುತಿಹನಿಲ್ಲಿ ಅಂಬಿಕಾತನಯನಿವನು" – ಕವಿ ಬೇಂದ್ರೆ. ಪರಸ್ಪರ ಅಂತರ್‌ಸಂಬಂಧಿಯಾದ ಕನ್ನಡಿಗ + ಭಾರತೀಯ + ವಿಶ್ವಮಾನವ ಎಂಬ ವ್ಯಕ್ತಿತ್ವದ ಹೊರಚಾಚುಗಳ ಮೂಲಕ ಕುವೆಂಪು ಕೂಡ ಕಲೆಯ ಜಗಚ್ಚಕ್ರ ಚಲನೆ ಮತ್ತು ವಿಶ್ವಸಂಸಾರ ತತ್ವ ನಿರೂಪಣೆ ಮಾಡಿದ್ದಾರೆ.

**೫) 'ಕಲಾಸುಂದರಿ'ಮಾನಸ ಮಂದಿರೆ (=ಜೀವನಪ್ರೇಯಸಿ, ಅಸೀಮಸ್ಫೂರ್ತಿಯೆ, ನಿಃಶ್ರೇಯಸಿ)**

ಕಲಾಸುಂದರಿಯನ್ನು 'ಮಾನಸಮಂದಿರೆ'ಯಾಗಿ ಕಂಡಿರುವ ಕುವೆಂಪು ಅವರು ತನ್ಮೂಲಕ ಕಲಾಸೃಷ್ಟಿಯನ್ನು ಸಾಂಸ್ಥಿಕಗೊಳಿಸುವ, ಮಾನವರ ನಿಷ್ಫಲ ಪ್ರಯತ್ನವನ್ನು ಮನಗಾಣಿಸಿದ್ದಾರೆ. ಕಲೆಗೆ ನಿಜವಾದ ಚಿರನೂತನ ನೆಲೆ ಸಹೃದಯರ ಮಾನಸ ಮಂದಿರವೇ ಸರಿ! ಕಲಾ ಶಾಲೆಗಳು ಮತ್ತು ಕಲಾ ಗ್ಯಾಲರಿಗಳು ಸ್ಥಾವರವಾದುವು. ಸಹೃದಯ ಸನ್ನಿಧಿಗಾಗಿ ಕವಿಗಳು ಪರಿತಪಿಸಿದ್ದಾರೆ. "ಕಟ್ಟಿಯುಂ ಏನೋ ಬಾಡಿಪೋಗದೆ? ಮಾಲೆಗಾರನ ಪೊಸಬಾಸಿಗಂ ಮುಡಿವ ಭೋಗಿಗಳಿಲ್ಲದೆ" ಎಂಬ ಮಾತುಗಳಲ್ಲಿ ಸಹೃದಯರ ಮಾನಸಮಂದಿರದ ಸಮರ್ಥನೆಯಿದೆ.

ಶರಣರ ಚಳುವಳಿಯಲ್ಲಿ 'ದೇಹವೇ ದೇವಾಲಯ' ತತ್ವ ಬಹುಮುಖ್ಯವಾದುದು. ಇದನ್ನು 'ಬಿಲ್ಟ್ ಇನ್ ಟೆಂಪಲ್' ಎಂದು ಕರೆಯಬಹುದು. ದೇವಾಲಯವನ್ನು ವ್ಯಕ್ತಿತ್ವದಲ್ಲಿನ ಆಂತರಿಕ ಕಟ್ಟಡವೆಂದು ತಿಳಿಯುವ ಈ ಬಗೆ ಅತ್ಯುನ್ನತ ವಾದುದು! ಇದರಂತೆಯೇ 'ಮನವೇ ಕಾವ್ಯಾಲಯ' ತತ್ವವು ಗಮನಾರ್ಹವಾದುದು. ಕವಿಕೃತ ಲಿಖಿತ ರಚನೆಗಳು, ಮುದ್ರಿತ ಪತ್ರಗಳು, ಡಿಜಿಟಲ್ ಅಕ್ಷರಜೋಡಣೆಗಳು ತನ್ನಷ್ಟಕ್ಕೆ ತಾನಿರುವ ಭಾವದ್ರವ್ಯಗಳಷ್ಟೆ! ಇವು ಸಹೃದಯರ ಮಾನಸಮಂದಿರದಲ್ಲಿ ಇರುವುದೇ ಸಾರ್ಥಕ್ಯತೆಗೆ ನಿದರ್ಶನ. ಕವಿಯಿಂದ ಜನಿಸುವ "ವ್ಯಷ್ಟಿ ವ್ಯಷ್ಟಿಯ ಸ್ವರ ಸಮಷ್ಟಿಯ ಗಾನಂ" (= ಪು.ತಿನ) ಆಗುತ್ತದೆ. ವ್ಯಷ್ಟಿಯ (= ಸಿಂಗ್ಯುಲರ್) ಮನಸ್ಸು ಹೃದಯ ಸಂವಾದವಾಗುತ್ತಾ ಸಮಷ್ಟಿಯ (= ಪ್ಲೂರಲ್) ಮನಸ್ಸಾಗುವ ಪ್ರಕ್ರಿಯೆ ಸಂಸ್ಕೃತಿಯ ಸಹಯಾತ್ರೆಗೆ ಸೇರಿದ್ದು. ಸಂಸ್ಕೃತ ಕಾವ್ಯಮೀಮಾಂಸೆಯಲ್ಲಿ ಇದನ್ನು ಕಾರಯಿತ್ರೀ ಮತ್ತು ಭಾವಯಿತ್ರೀ ಪ್ರತಿಭೆಗಳ ಹೃದಯ ಸಂವಾದವೆಂದೇ ಪರಿಗಣಿಸಲಾಗಿದೆ. ನಾನು ಬಿ.ಎ. ಓದುವಾಗ ಕವಿ ಮತ್ತು ಸಹೃದಯ ಭಿನ್ನಾರ್ಥಕ ಶಬ್ದಗಳೆಂದು ಪ್ರಾಧ್ಯಾಪಕರಿಂದ ಕೇಳಿ ತಿಳಿದಿದ್ದೆ. ಈಗ ಕವಿ ಮತ್ತು ಸಹೃದಯ ಸಮಾನಾರ್ಥಕ ಶಬ್ದಗಳೆಂದು ಅನ್ನಿಸಿದೆ. ಕವಿಯ ಹೃದಯಕ್ಕೆ ಸಮಾನವಾದ ಹೃದಯ ಉಳ್ಳವನೇ 'ಸಹೃದಯ'! ಮೈಮೇಲೆ ದೇವರು ಎಂಬಂತೆ ಕಾವ್ಯವನ್ನು ಆವಾಹನೆ ಮಾಡಿಕೊಳ್ಳುವ ಸಹೃದಯರ ಮಾನಸ ಮಂದಿರವೇ ಜೀವಂತ ಕಾವ್ಯ! ಪ್ರೊಫೆಸರ್ ಕಿ. ರಂ. ನಾಗರಾಜ ಅವರು ಅಸೀಮ ಸ್ಫೂರ್ತಿಯ ಕಾವ್ಯಪ್ರೇಮಿ. ತನ್ನೊಳಗು ಹೊರಗು ಸದಾ ಕಾವ್ಯವನ್ನೇ ಉಸಿರಾಡುತ್ತ ಮನವೇ ಕಾವ್ಯಾಲಯ ವನ್ನಾಗಿಸಿದ ಕಿ.ರಂ. ನನ್ನ ಕಣ್ಣಿಗೆ 'ಜೀವಂತ ಕಾವ್ಯ' ಎನಿಸುತ್ತಾರೆ. ಕಾವ್ಯಲೋಕದ ಮುಖ್ಯ ಲಕ್ಷಣವೆಂದರೆ 'ಜೀವನಪ್ರೀತಿ'. "ಪ್ರೀತಿ ಇಲ್ಲದಿದ್ದರೆ ಮಾತು ಹುಟ್ಟುವುದು ಹೇಗೆ?" ಎಂದು ಜಿ. ಎಸ್. ಶಿವರುದ್ರಪ್ಪ ಅವರು ಕೇಳಿದ್ದಾರೆ. ಈ ಕಾರಣದಿಂದಲೇ ಕುವೆಂಪು ಅವರು ಕಲಾಸುಂದರಿಯನ್ನು 'ಜೀವನಪ್ರೇಯಸಿ' ಎಂದು ಕರೆದಿದ್ದಾರೆ. ಇಂಥ ಜೀವನಪ್ರೀತಿಗೆ ಎಲ್ಲೆ ಗಳಿಲ್ಲ; ಚೌಕಟ್ಟುಗಳಿಲ್ಲ. ನಿಸ್ಸೀಮೆಯ ಸ್ಫೂರ್ತಿದಾತೆ ಯಾದ ಕಲಾಸುಂದರಿಗೆ ಯಾರೊಬ್ಬರ ಹಂಗೂ ಇಲ್ಲ. ಲೌಕಿಕವಾದ ಯಾವ ಪ್ರಲೋಭನೆಗಳಿಗೂ ಒಳಗಾಗದೆ ನಿತ್ಯವಸಂತಳಾಗಿರುವ 'ಕಲಾಸುಂದರಿ' ನಿಃಶ್ರೇಯಸಿ! "ತೊಲಗಾಚೆ ಕೀರ್ತಿಶನಿ" ಎಂಬುದೇ ಕಲೆಯ ಪಲ್ಲವಿ.

**ವಿ. ಚಂದ್ರಶೇಖರ ನಂಗಲಿ**
ನಂ. ೧೬, 'ಶ್ರೀಗೌರಿ', ೪ನೇ ಅಡ್ಡರಸ್ತೆ, ಕನಕನಗರ,
ಹೊಸಕೋಟೆ, ಬೆಂಗಳೂರು ಗ್ರಾಮಾಂತರ – ೫೬೨ ೧೧೪



# ರೈತರ ಬಾಳನ್ನು ಹಸನಾಗಿಸಿದ ಹೈನುಗಾರಿಕೆ

- ಹೈನುಗಾರಿಕೆಯಿಂದಾಗಿ ಸ್ತ್ರೀ ಸಬಲೀಕರಣ
- ಸಾವಯವ ಹೈನುಗಾರಿಕೆಯಲ್ಲಿ ಕ್ಷೀರ ಕ್ರಾಂತಿ

**ಸಂಜಯ ಆರ್.**

ಅಭಿವೃದ್ಧಿ ಹೊಂದುತ್ತಿರುವ ದೇಶದ ಸಾಲಿನಲ್ಲಿ ಮುಂಚೂಣಿಯಲ್ಲಿರುವ ಭಾರತವು ಕೈಗಾರಿಕಾ ಕ್ರಾಂತಿ, ಐ.ಟಿ. ಹಾಗೂ ಪ್ರಾರಂಭಿಕ ಉದ್ದಿಮೆ (ಸ್ಟಾರ್ಟ್ ಅಪ್)ಗಳ ಮೂಲ ಕೇಂದ್ರಬಿಂದುವಾದರೂ ಕೃಷಿ ಮತ್ತು ಹೈನುಗಾರಿಕೆ ಇಂದಿಗೂ ರಾಷ್ಟ್ರದ ಆರ್ಥಿಕ ವ್ಯವಸ್ಥೆಗೆ ಬೆನ್ನೆಲುಬಾಗಿ ನಿಂತಿದೆ. ರಾಷ್ಟ್ರದ ಶೇ. ೪೦ ಅಧಿಕ ಜನಸಂಖ್ಯೆ ಇಂದಿಗೂ ಕೃಷಿ ಮತ್ತು ಕೃಷಿಯೇತರ ಉದ್ಯಮಗಳಾದ ಹೈನುಗಾರಿಕೆ ಮೇಲೆ ಅವಲಂಬಿತವಾಗಿದೆ. ಇಷ್ಟಾದರೂ ಕೃಷಿ ಅಧ್ಯಯನದ ಮೇಲೆ ಹೂಡಿಕೆ ಮಾಡುತ್ತಿರುವುದು ಶೇ. ೦.೩೦ರಷ್ಟು ಮಾತ್ರ. ಇದು ಚೈನಾ (೦.೬೨%), ಅಮೆರಿಕಾ (೧.೨೦%), ಬ್ರೆಜಿಲ್ (೧.೮೨%) ಹಾಗೂ ದಕ್ಷಿಣ ಆಫ್ರಿಕಾ (೩.೦೬%)ಕ್ಕಿಂತ ಕಡಿಮೆಯಾಗಿದ್ದು, ರೈತರ ಪಾಲಿಗೆ ಬಹುದೊಡ್ಡ ಸಮಸ್ಯೆಯಾಗಿಯೇ ಉಳಿದಿದೆ.

ಇವುಗಳ ನಡುವೆ ನಾವು ನೋಡುತ್ತಿರುವ ಹಸಿರು ಕ್ರಾಂತಿ, ಸಾವಯವ ಕೃಷಿ ಹಾಗೂ ಉತ್ತಮ ಮಟ್ಟದ ಆಹಾರ ಸೇವನೆ ಜನಸಾಮಾನ್ಯರಲ್ಲಿ ಕೃಷಿ ಹಾಗೂ ಹೈನುಗಾರಿಕೆಯಲ್ಲಿ ಹೊಸ ಆಸಕ್ತಿ ಮೂಡಿಸಿ ಕೃಷಿ ಉದ್ಯಮಕ್ಕೆ ಹೊಸ ತಿರುವು ಕೊಟ್ಟಿದೆ. ಇವುಗಳ ಸಾಲಿನಲ್ಲಿ ರೈತರ ಪಾಲಿಗೆ ಅಮೃತದಂತೆ ಇದೆ ಹೈನುಗಾರಿಕೆ. ರೈತರ ಬೆಳೆಗೆ ನ್ಯಾಯವಾದ ಬೆಂಬಲ ಬೆಲೆ ಇಲ್ಲದೆ ಇಂದಿಗೂ ಮಧ್ಯವರ್ತಿಗಳಿಂದ ಸೋತಿರುವ ರೈತರಿಗೆ ಹೈನುಗಾರಿಕೆ ದಿಕ್ಸೂಚಿಯಾಗಿ, ಜೀವನೋಪಾಯಕ್ಕೆ ಪರಿಹಾರವಾಗಿ ನಿಂತಿದೆ. ಹೈನುಗಾರಿಕೆಯಲ್ಲಿ ಯಾವ ನಿರುಪಯೋಗಿ ವಸ್ತುಗಳೂ ಇರುವುದಿಲ್ಲ.

ಐ.ಎಂ.ಆರ್.ಸಿ.ಯ ಅಧ್ಯಯನದ ಪ್ರಕಾರ ಹಾಲು ಹಾಗೂ ಡೈರಿ ಉತ್ಪನ್ನಗಳ ಉದ್ಯಮ ೨೦೧೭ರಲ್ಲಿ ೭.೯ ಲಕ್ಷ ಕೋಟಿ ದಾಟಿತ್ತು. ೨೦೧೬ರಲ್ಲಿ ಇದು ೩ ಲಕ್ಷ ಕೋಟಿ ಅಷ್ಟಿತ್ತು. ಇದು ೨೦೨೧ರ ವೇಳೆಗೆ ೭.೩ ಲಕ್ಷ ಕೋಟಿ ತಲುಪಲಿದೆ ಎಂದು ಅಂದಾಜಿಸಲಾಗಿದೆ. ಈ ವಿಶ್ಲೇಷಣೆಯ ಪ್ರಕಾರ, ಭಾರತದಲ್ಲಿ ಹೈನುಗಾರಿಕೆಯಲ್ಲಿ ಅವಕಾಶಗಳು ವಿಸ್ತೃತವಾಗಿದ್ದು, ಇದರಲ್ಲಿ ಜೀವನೋಪಾಯ ಕಂಡುಕೊಳ್ಳಲು ಕೌಶಲ್ಯಾಭಿವೃದ್ಧಿಯ ನೆರವಿನ ಅವಶ್ಯಕತೆ ಇದೆ.

ನಮ್ಮ ರಾಜ್ಯದಲ್ಲಿ ಅನೇಕ ಸಾಮಾಜಿಕ ಸಂಘ–ಸಂಸ್ಥೆಗಳು ಹೈನುಗಾರಿಕೆಯಲ್ಲಿ ತೊಡಗಿರುವ ರೈತರ ಪಾಲಿಗೆ ಕಾಮಧೇನುವಿನಂತೆ ನಿಂತಿದೆ. ಈ ಕ್ರಾಂತಿಗೆ ಪೂರಕವಾಗಿ ಕೌಶಲ ಭಾರತ ಯೋಜನೆ ಅಡಿಯಲ್ಲಿ ಕೌಶಲ್ಯಾಭಿವೃದ್ಧಿ ಹಾಗೂ ಉದ್ಯಮಶೀಲತಾ ತರಬೇತಿ ನೀಡುವ ಲೇಬರ್ ನೆಟ್‌ನಂತಹ ಸಾಮಾಜಿಕ ಉದ್ಯಮಗಳು ಹಾಗೂ ರೈತರಲ್ಲಿ ಆರ್ಥಿಕ ಸ್ಥಿರತೆ ಹಾಗೂ ಉದ್ಯಮಶೀಲತೆ (ಸಾವಯವ ಡೈರಿ ಉತ್ಪನ್ನಗಳ ಮೂಲಕ) ಬೆಳೆಸುವ ಅಕ್ಷಯಕಲ್ಪದಂತಹ ಉಪಕ್ರಮಗಳು, ಹೈನುಗಾರಿಕಾ ಉದ್ಯಮದ



ಗೌರಮ್ಮನವರು, ಆಧುನಿಕ ಕೊಟ್ಟಿಗೆಯನ್ನು ಶುಚಿಯಾಗಿರಿಸುವುದರಿಂದ ಮಾತ್ರವೇ ಹಸುಗಳಲ್ಲಿ ಉಂಟಾಗುವ 'ಕೆಚ್ಚಲು ಬಾವು'ನಂತಹ ಸೋಂಕಿನಿಂದ ದೂರ ಉಳಿಯಬಹುದೆಂದು ಅರಿತುಕೊಂಡರು. ಆಕೆಯು ತಕ್ಷಣ ಬಂದ ಸಕಾರಾತ್ಮಕ ಫಲಿತಾಂಶಗಳ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿ, ಅವರೇ ಸ್ವತಃ ತರಬೇತಿ ನೀಡುವವರಾಗಿ ಸ್ವಯಂಸೇವಕರಾಗಿ ಮತ್ತು ತನ್ನ ಗ್ರಾಮದಲ್ಲಿ ಇತರರನ್ನು ಪ್ರೋತ್ಸಾಹಿಸಿದರು. ಈಕೆಯ ಯಶಸ್ಸಿನ ಬಗ್ಗೆ ಕುತೂಹಲದಿಂದ, ಗ್ರಾಮಸ್ಥರು ಲೇಬರ್ ನೆಟ್‌ನಿಂದ ಪಿಎಂಕೆವಿವೈಆರ್‌ಪಿಎಲ್ ಯೋಜನೆಯಡಿಯಲ್ಲಿ ಡೈರಿ ಫಾರ್ಮ್‌ನಲ್ಲಿ ಪ್ರಮಾಣೀಕರಣ ಪ್ರೋಗ್ರಾಂಗೆ ಸೇರಿಕೊಳ್ಳಲು ಪ್ರಾರಂಭಿಸಿದರು ಮತ್ತು ಯುವಜನತೆಯನ್ನು ಮತ್ತು ಹೊಸ ಉದ್ಯಮ ನಡೆಸುವವರನ್ನೂ ಈ ಹೈನುಗಾರಿಕೆ (ಡೈರಿ) ರೈತರನ್ನಾಗಿ ಮಾಡಿದರು.

ಚಿತ್ರಣವನ್ನೇ ಬದಲಿಸಿದ್ದು, ರೈತರ ಆರ್ಥಿಕ ವ್ಯವಸ್ಥೆಯನ್ನೂ ಬಲಗೊಳಿಸಿದೆ.

ಈ ಬದಲಾವಣೆಯ ಉದಾಹರಣೆಯಾಗಿ ನಿಂತಿದ್ದಾರೆ ಗೌರಮ್ಮ. ಕರ್ನಾಟಕದ ಮಂಡ್ಯ ಜಿಲ್ಲೆಯ ಗೌಡನ ದೊಡ್ಡಿ ಗ್ರಾಮದ ಒಂದು ದೊಡ್ಡ ಕೃಷಿ ಕುಟುಂಬಕ್ಕೆ ಸೇರಿದ ಗೌರಮ್ಮ, ಸಾಂಪ್ರದಾಯಿಕ ಕೃಷಿ ಪದ್ಧತಿಯ ಹೊರತಾಗಿ ಬೇರೆ ಉದ್ಯಮದ ಬಗ್ಗೆ ತಿಳಿದವರಲ್ಲ. ಸಾಂಪ್ರದಾಯಿಕ ಕೃಷಿ ಪದ್ಧತಿಗಳಲ್ಲಿ ಬಹು ಪರಿಣತರಾದ ಗೌರಮ್ಮ ಕೃಷಿ ಕುಟುಂಬದಲ್ಲಿ ಮದುವೆಯಾದ ನಂತರ, ಅವರು ವಿವಿಧ ಕೃಷಿ-ಸಂಬಂಧಿತ ಕೆಲಸಗಳಲ್ಲಿ ಮನೆಯ ಗಂಡಸರಿಗೆ ಸಹಾಯ ಮಾಡುತ್ತಿದ್ದರು. ಉತ್ತಮ ಜೀವನವನ್ನು ರೂಪಿಸಿಕೊಳ್ಳುವ ಸಲುವಾಗಿ ಹವಾಮಾನದ ಮೇಲೆ ಅವಲಂಬಿತವಾಗಿಲ್ಲದ ಪರ್ಯಾಯ ಕೃಷಿ ಪದ್ಧತಿಗಳಿಗೆ ಮಾರ್ಪಾಡು ಮಾಡಿಕೊಳ್ಳಬೇಕಾಗಿತ್ತು. ಆ ಸಮಯದಲ್ಲಿ ಅವರಿಗೆ ಹೊಳೆದಿದ್ದೇ ಹೈನುಗಾರಿಕೆ. ಗೌರಮ್ಮನವರಿಗೆ ಉತ್ತಮ ಜೀವನಕ್ಕಾಗಿ ಒಂದು ಹೈನುಗಾರಿಕೆ (ಡೈರಿ) ಕೃಷಿ ಲಾಭದಾಯಕ ಆಯ್ಕೆಯಾಗಿ ಕಾಣುತ್ತದೆ. ಆಗ ೨ ಉತ್ತಮ ತಳಿಯ ಎರಡು ಹಸುಗಳಿಂದ ಅವರ ಕಾಯಕ ಪ್ರಾರಂಭವಾಯಿತು. ಆದಾಗ್ಯೂ, ಆರಂಭಿಕ ದಿನಗಳಲ್ಲಿ ಕೆಲ ರೈತರಿಂದ ಮತ್ತು




ಇತರ ಸಾಂಪ್ರದಾಯಿಕ ಡೈರಿ ರೈತರ ಅವಲೋಕನದ ಮೂಲಕ ಕೃಷಿ ಅಭ್ಯಾಸದ ಬಗ್ಗೆ ಬಹಳ ಕಡಿಮೆ ವೈಜ್ಞಾನಿಕ ಜ್ಞಾನವನ್ನು ಹೊಂದಿದ್ದರು. ಇದು ಹಾಲಿನ ಇಳುವರಿ ಮತ್ತು ಗುಣಮಟ್ಟದಲ್ಲಿ ಕಡಿಮೆ ಆಯಿತು. ಆದ್ದರಿಂದ ಗೌರಮ್ಮನವರಿಗೆ ಪ್ರಗತಿ ಸಾಧಿಸಲು ಸಾಧ್ಯವಾಗಲಿಲ್ಲ.

ಆಗ ತನ್ನ ಗ್ರಾಮದಲ್ಲಿ ಲೇಬರ್ ನೆಟ್ ಎಂಬ ಸಾಮಾಜಿಕ ಸಂಸ್ಥೆಯಿಂದ ಪಿಎಂಕೆವಿವೈಆರ್‌ಪಿಎಲ್ ಯೋಜನೆಯಡಿಯಲ್ಲಿ ಡೈರಿ ಫಾರ್ಮ್‌ನಲ್ಲಿ ಪ್ರಮಾಣೀಕರಣ ಕಾರ್ಯಕ್ರಮವೊಂದನ್ನು ಕಲಿತರು. ಈ ಕಾರ್ಯಕ್ರಮವು ಹಾಲಿನ ಇಳುವರಿಯನ್ನು ಹೆಚ್ಚಿಸಲು ಮತ್ತು ಅದರ ಗುಣಮಟ್ಟವನ್ನು ಸುಧಾರಿಸಲು ಡೈರಿ ಫಾರ್ಮ್ ಆಧುನಿಕ ಉಪಕರಣಗಳು ಮತ್ತು ಆಹಾರ ತಂತ್ರಜ್ಞಾನಗಳನ್ನು ಹೊಂದಿತ್ತು. ನೈರ್ಮಲ್ಯವನ್ನು ಕಾಪಾಡಿಕೊಳ್ಳಲು ಮತ್ತು ಹಸುಗಳಲ್ಲಿ ಯಾವುದೇ ಕಾಯಿಲೆಗಳ ಲಕ್ಷಣಗಳನ್ನು ಪತ್ತೆ ಹಚ್ಚುವಲ್ಲಿ ಅವರಿಗೆ ತರಬೇತಿ ಮೂಲಕ ಅರಿವು ನೀಡಲಾಯಿತು. ಶೀಘ್ರದಲ್ಲೇ ಪ್ರಮಾಣೀಕರಣದ ತರಬೇತಿ ಪಡೆದ ನಂತರ ಅವರು ಕಲಿತ ಎಲ್ಲವನ್ನೂ ಅಭ್ಯಾಸ ಮಾಡಲು ಪ್ರಾರಂಭಿಸಿದರು ಮತ್ತು ನಂತರ ಬಂದ ಫಲಿತಾಂಶಗಳಿಂದ ಆಕೆಗೆ ಆಶ್ಚರ್ಯವಾಯಿತು. ಸರಿಯಾದ ವಿಧಾನಗಳನ್ನು ಅನುಸರಿಸಿ ಹಾಲಿನ ಇಳುವರಿ ವಾಸ್ತವವಾಗಿ ಶೇ. ೨ರಷ್ಟು ಹೆಚ್ಚಾಗಿತ್ತು. ಆಧುನಿಕ ಕೊಟ್ಟಿಗೆಯನ್ನು ಶುಚಿಯಾಗಿರಿಸುವುದರಿಂದ ಮಾತ್ರವೇ ಹಸುಗಳಲ್ಲಿ ಉಂಟಾಗುವ 'ಕೆಚ್ಚಲು ಬಾವು'ನಂತಹ ಸೋಂಕಿನಿಂದ ದೂರ



*ಅಕ್ಷಯಕಲ್ಪ ಹೈನುಗಾರಿಕೆ ನಡೆಸುತ್ತಿರುವ ರೈತ ರಂಗೇಗೌಡ ಮತ್ತು ಕುಟುಂಬ*

ಉಳಿಯಬಹುದೆಂದು ಅರಿತುಕೊಂಡರು. ಆಕೆಯು ತಕ್ಷಣ ಬಂದ ಸಕಾರಾತ್ಮಕ ಫಲಿತಾಂಶಗಳ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿ, ಅವರೇ ಸ್ವತಃ ತರಬೇತಿ ನೀಡುವವರಾಗಿ ಬೆಳೆದು ಸ್ವಯಂಸೇವಕರಾಗಿ ಮತ್ತು ತನ್ನ ಗ್ರಾಮದಲ್ಲಿ ಇತರರನ್ನೂ ಪ್ರೋತ್ಸಾಹಿಸಿದರು. ಈಕೆಯ ಯಶಸ್ಸಿನ ಬಗ್ಗೆ ಕುತೂಹಲದಿಂದ, ಗ್ರಾಮಸ್ಥರು ಲೇಬರ್ ನೆಟ್‌ನಿಂದ ಪಿಎಂಕೆವಿವೈಆರ್‌ಪಿಎಲ್ ಯೋಜನೆಯಡಿ ಡೈರಿ ಫಾರ್ಮ್‌ನಲ್ಲಿ ಪ್ರಮಾಣೀಕರಣ ಪ್ರೋಗ್ರಾಂಗೆ ಸೇರಿಕೊಳ್ಳಲು ಪ್ರಾರಂಭಿಸಿದರು ಮತ್ತು ಯುವಜನತೆಯನ್ನು ಮತ್ತು ಹೊಸ ಉದ್ಯಮ ನಡೆಸುವವರನ್ನೂ ಈ ಹೈನುಗಾರಿಕೆ (ಡೈರಿ) ರೈತರನ್ನಾಗಿ ಮಾಡಿದರು.

ಆಧುನಿಕತೆ ಬೆಳೆದಂತೆ, ರೈತ ಕುಟುಂಬಗಳನ್ನು ಆರ್ಥಿಕವಾಗಿ ಸ್ವಾವಲಂಬಿಗಳನ್ನಾಗಿಸುವ ಉದ್ದೇಶದೊಂದಿಗೆ, ಹೈನುಗಾರಿಕೆಗೆ ಹೊಸ ರೂಪವನ್ನು ನೀಡುತ್ತಿರುವ ಸಂಸ್ಥೆ ಅಕ್ಷಯಕಲ್ಪ. ಇದು ಭಾರತೀಯ ರುಚಿ ಮತ್ತು ಕೃಷಿಯನ್ನು ಪುನರುಜ್ಜೀವನಗೊಳಿಸುವ ಅಕ್ಷಯಕಲ್ಪ ಸಂಸ್ಥೆಯ ಮತ್ತು ಅಮೃತ ಕರ್ನಾಟಕದ ಹೈನುಗಾರಿಕೆಯ ಪರಿಕಲ್ಪನೆಯಾಗಿದೆ. ಅಕ್ಷಯಕಲ್ಪ ಹೈನು ಉದ್ಯಮಶೀಲತೆಗೆ ಸ್ಪಷ್ಟತೆ ನೀಡುವುದರ ಜೊತೆಗೆ ಪಾರದರ್ಶಕ ಶುದ್ಧತೆ ಮತ್ತು ಶ್ರೇಷ್ಠತೆಯನ್ನು ಕಾಪಾಡುವುದೇ ಅಕ್ಷಯಕಲ್ಪದ ಗುರಿ. ಕರ್ನಾಟಕದ ಹೈನುಗಾರಿಕೆಗೆ ಅಪೂರ್ವ ಕೊಡುಗೆ ನೀಡಿರುವ 'ಬೈಫ್' ಸಂಸ್ಥೆಯಲ್ಲಿ ಸುದೀರ್ಘ ಕಾಲ ದುಡಿದಿದ್ದ ಡಾ॥ ರೆಡ್ಡಿ ಅವರ ಪರಿಕಲ್ಪನೆಯೇ ಅಕ್ಷಯಕಲ್ಪ. ಗ್ರಾಮೀಣ ಪ್ರದೇಶದ ರೈತ ಕುಟುಂಬಗಳು ಸ್ವಾವಲಂಬಿಗಳಾಗಿ ಆರ್ಥಿಕವಾಗಿ ಸಬಲರಾಗಬೇಕು, ನೇರವಾಗಿ ರೈತಾಪಿ ಮಂದಿಯ ಖಾತೆಗಳಿಗೆ ಹಣ ಸಂದಾಯ ಮಾಡುವುದು, ಪಾರದರ್ಶಕ ಕಾರ್ಯವೈಖರಿ ಇವು ಈ ಸಂಸ್ಥೆಯ ವಿಶೇಷತೆ. ಅಕ್ಷಯಕಲ್ಪ ಸಂಸ್ಥೆಯ ಈ ಶಿಸ್ತಿನ ಕಾರ್ಯವೈಖರಿ ರೈತಾಪಿ ಮಂದಿಯ ಜೀವನಶೈಲಿಯನ್ನು ಬದಲಿಸಿದೆ. ಅವರು ಬ್ಯಾಂಕುಗಳಿಂದ ಪಡೆದ ಹಣಕಾಸಿನ ನೆರವನ್ನು ಪ್ರಾಮಾಣಿಕವಾಗಿ ಹಿಂದಿರುಗಿಸುವಲ್ಲಿ ಸಫಲರಾಗಿದ್ದಾರೆ. ಈ ಸಾಧನೆ ಅವರನ್ನು ಸ್ವಾವಲಂಬಿಗಳನ್ನಾಗಿ ಮಾಡಿದೆ. ಸಾವಯವ ಕೃಷಿ ಪದ್ಧತಿ ಅನುಸರಿಸುವಲ್ಲಿ ಮಹಿಳೆಯರ ಪಾತ್ರ ಬಹಳ ಮುಖ್ಯ.

ಕೃಷಿ ಶ್ರೀಮಂತವಾಗಲು ಮಹಿಳೆಯ ಪಾತ್ರ ಮಹತ್ವದ್ದಾಗಿದೆ. ಕೇವಲ ಕೃಷಿಯ ಮೇಲೆ ಅವಲಂಬಿತವಾಗಿದ್ದ ಶ್ರೀ ರಂಗೇಗೌಡರ ಕುಟುಂಬ ಸರಿಯಾದ ಬೆಂಬಲ ಬೆಲೆ ಇಲ್ಲದೆ ಹಾಗೂ ಅನಾವೃಷ್ಟಿಯಿಂದ ಕಂಗಾಲಾಗಿ, ಜೀವನೋಪಾಯಕ್ಕಾಗಿ ದಾರಿ ಕಾಣದೇ ಇದ್ದಾಗ, ಇವರ ನೆರವಿಗೆ ಬಂದದ್ದು ಇದೇ ಹೈನುಗಾರಿಕೆ. ರಂಗೇಗೌಡರಿಗೆ ಕಷ್ಟದ ಸಮಯದಲ್ಲಿ ಯಾವ ಬ್ಯಾಂಕುಗಳೂ ಸಹಾಯ ಮಾಡಲಿಲ್ಲ, ಸಾಲದ ಹೊರೆಯನ್ನು ಹೊತ್ತುಕೊಂಡು ಕಂಗಾಲಾಗಿದ್ದರು. ೨೦೧೫ರಲ್ಲಿ ಅಕ್ಷಯಕಲ್ಪ ಇವರ ನೆರವಿಗೆ ಧಾವಿಸಿತು. ತಮ್ಮ ಆತ್ಮವಿಶ್ವಾಸವನ್ನು ಕಳೆದುಕೊಂಡಾಗ ಇವರ ನೆರವಿಗೆ ಬಂದ ಅಕ್ಷಯಕಲ್ಪ ಸಂಸ್ಥೆಯು ಇವರಿಗೆ ನೀಡಿದ ಹೈನುಗಾರಿಕೆ, ನಿರ್ವಹಣೆ, ತರಬೇತಿ ಹಾಗೂ ನೆರವನ್ನು ಇಂದಿಗೂ ಸ್ಮರಿಸುತ್ತಾರೆ. ಅಕ್ಷಯಕಲ್ಪ ನಿಯಮದಂತೆ ರಂಗೇಗೌಡರು ತಮ್ಮ ಕೃಷಿ ನಿರ್ವಹಣೆಯನ್ನು ಬದಲಾಯಿಸಿಕೊಂಡರು. ತಮಗೆ ಕೃಷಿಯಲ್ಲಿ ಬೆಂಬಲವಾಗಿದ್ದ ಇವರ ಹೆಂಡತಿ ಹೈನುಗಾರಿಕೆ ನೆರವಿಗೆ ಬಂದರು. ಇಂದು ರಂಗೇಗೌಡ ಕುಟುಂಬ ತಿಂಗಳಿಗೆ ಮೂರು ಲಕ್ಷದವರೆಗೂ ಸಂಪಾದಿಸಿ ಇತರರಿಗೆ ಮಾದರಿ ಕುಟುಂಬವಾಗಿ ಮಾರ್ಪಟ್ಟಿದೆ. ತಮ್ಮ ಈ ಯಶಸ್ಸಿಗೆ ತಮ್ಮ ಹೆಂಡತಿಯ ಸತತ ಶ್ರಮ ಇದೆ ಎನ್ನುತ್ತಾರೆ ರಂಗೇಗೌಡ. ಇಂದು ಹೈನುಗಾರಿಕೆಯೇ ಇವರ ಜೀವನಾಧಾರ ಹಾಗೂ ತಮ್ಮ ಮಕ್ಕಳಿಗೂ ಈ ನಿಟ್ಟಿನಲ್ಲಿ ಪ್ರೋತ್ಸಾಹಿಸುತ್ತಿದ್ದಾರೆ. ಅಲ್ಲದೆ ಹೈನುಗಾರಿಕೆಯಿಂದ ಆಗುವ ಲಾಭದ ಬಗ್ಗೆ ಗ್ರಾಮದ ಪ್ರತಿಯೊಬ್ಬರಿಗೂ ಹೆಮ್ಮೆಯಿಂದ ತಿಳಿವಳಿಕೆ ಮಾರ್ಗದರ್ಶನ ನೀಡುತ್ತಾರೆ. ಹೈನುಗಾರಿಕೆಯಲ್ಲಿ ಆಧುನಿಕ ತಂತ್ರಜ್ಞಾನ ಬಹಳ ಉಪಯುಕ್ತವಾಗಿದೆ, ಇದರ ಬಳಕೆ ಬಗ್ಗೆ ನನಗೆ ಅತ್ಯಂತ ಹೆಮ್ಮೆ ಇದೆ ಎನ್ನುತ್ತಾರೆ. ಅಕ್ಷಯಕಲ್ಪ ಹೈನುಗಾರಿಕೆಯಲ್ಲಿ ಹೆಚ್ಚು ಮಾನವ ಸಂಪನ್ಮೂಲವಲ್ಲದ ಎಲ್ಲಾ ಪ್ರಕ್ರಿಯೆಗಳು ವೇಗವಾಗಿ ಆಗುತ್ತದೆ. ಅಲ್ಲದೆ ಎಲ್ಲವೂ ಗುಣಮಟ್ಟದಲ್ಲಿ ಪಾರದರ್ಶಕವಾಗಿರುತ್ತದೆ. ಹೈನುಗಾರಿಕೆಯಿಂದ ಪಡೆಯುವ ಸಾವಯವ ಗೊಬ್ಬರ ಕೃಷಿಗೆ ಉತ್ತಮ ಗುಣಮಟ್ಟದ್ದಾಗಿರುತ್ತವೆ; ಯಾವುದೇ ರಾಸಾಯನಿಕ ಸ್ಪರ್ಶ ರೈತರಿಗೆ ಇರುವುದಿಲ್ಲ ಎನ್ನುತ್ತಾರೆ. ಹಾಗೂ ತಮ್ಮಂತೆ ಇತರೆ ರೈತರಿಗೆ ಹೈನುಗಾರಿಕೆ ಕಡೆಗೆ ಹೆಚ್ಚಿನ ಆಸಕ್ತಿ ಬಂದು, ನಮ್ಮ ಅಕ್ಷಯಕಲ್ಪ ಸಂಸ್ಥೆಯ ಲಾಭವನ್ನು ಹೆಚ್ಚು ಜನ ರೈತರು ಉಪಯೋಗಿಸಿಕೊಳ್ಳಬೇಕೆಂದು ಕರೆ ನೀಡುತ್ತಾರೆ ರಂಗೇಗೌಡರು. ಹವಾಮಾನ ವೈಪರೀತ್ಯದಿಂದಾಗಿ ರೈತರು ಇತ್ತೀಚಿನ ವರ್ಷಗಳಲ್ಲಿ ಬಹಳಷ್ಟು ಆರ್ಥಿಕ ನಷ್ಟ ಅನುಭವಿಸುತ್ತಿದ್ದಾರೆ. ಆದರೆ ಹೈನುಗಾರಿಕೆಗೆ ಈ ಹವಾಮಾನ ವೈಪರೀತ್ಯದಿಂದ ಅಷ್ಟಾಗಿ ನಷ್ಟ ಆಗದು. ಆಧುನಿಕ ತಂತ್ರಜ್ಞಾನವನ್ನು ಬಳಸಿ ಗ್ರಾಮೀಣ ಭಾಗದ ಹಾಲು ಉತ್ಪಾದಕರಿಗೆ ಸಾವಯವ ಹಾಲು ಉತ್ಪಾದನೆಗೆ ಉತ್ತೇಜಿಸುತ್ತಿದ್ದು, ಉತ್ಪಾದಿಸಿದ ಸಂಪೂರ್ಣ ಹಾಲಿನ ಪ್ರಮಾಣವನ್ನು ಖರೀದಿ ಮಾಡಿ ಇತರೆ ಯೋಜನೆಗಳ ಮುಖೇನ ರೈತರನ್ನು ಆರ್ಥಿಕವಾಗಿ ಸದೃಢರನ್ನಾಗಿ ಮಾಡುತ್ತಿರುವುದಲ್ಲದೆ ಗ್ರಾಮೀಣ ಯುವಕರ ವಲಸೆಯನ್ನು ತಡೆಯುವಲ್ಲಿ ಪ್ರಯತ್ನಿಸುತ್ತಿದೆ. ಮತ್ತೊಂದು ಅಕ್ಷಯಕಲ್ಪ ೧೭೦ಕ್ಕೂ ಹೆಚ್ಚು ರೈತರೊಂದಿಗೆ ಕೈ ಜೋಡಿಸಿ, ಪ್ರತಿಯೊಬ್ಬ ರೈತ ತಿಂಗಳಿಗೆ ರೂ. ೫೦,೦೦೦ ಸಂಪಾದಿಸುವ ಸಾಮರ್ಥ್ಯವನ್ನು ತಂದುಕೊಟ್ಟಿದೆ.

ಇಂದು ಬಹುತೇಕ ಮಂಡ್ಯ ಜಿಲ್ಲೆಯ ಗೌಡನ ದೊಡ್ಡಿ ಗ್ರಾಮದ ಡೈರಿ ಫಾರ್ಮ್ ಲೇಬರ್ ನೆಟ್ ಸಂಸ್ಥೆಯಿಂದಾಗಿ ಮತ್ತು ತಿಪಟೂರಿನ ಸುತ್ತಮುತ್ತಲಿನ ರಂಗೇಗೌಡರಂತಹ ಹಲವಾರು ರೈತರು ಅಕ್ಷಯಕಲ್ಪದ ಮಾರ್ಗದರ್ಶನದಲ್ಲಿ ಪರಿಣಾಮಕಾರಿ ತರಬೇತಿಯಿಂದ ತಮ್ಮ ಸಾಂಪ್ರದಾಯಿಕ ನಿರ್ವಹಣಾ ಶೈಲಿಯನ್ನು ಬದಲಿಸಿಕೊಂಡು ಸರಿಯಾದ ವಿಧಾನಗಳನ್ನು ಮತ್ತು ತಂತ್ರಗಳನ್ನು ಬಳಸಿಕೊಳ್ಳುತ್ತಿದ್ದಾರೆ. ಗೌರಮ್ಮನವರು ತಮ್ಮಂತೆ ಇತರ ಮಹಿಳೆಯರನ್ನು ಹಾಲು ಕೃಷಿ ಪ್ರಾರಂಭಿಸುವಂತೆ ಪ್ರೇರೇಪಿಸುತ್ತಿದ್ದಾರೆ. ಆರ್ಥಿಕವಾಗಿ ಸ್ವತಂತ್ರರಾಗಲು ಇತರ ಗ್ರಾಮದವರಿಗೂ ಮಾಹಿತಿ ಕೊಡುತ್ತಿದ್ದಾರೆ. ಅಕ್ಷಯಕಲ್ಪ ಆರೋಗ್ಯಕರ ವಿಶಿಷ್ಟ ಹಾಲನ್ನು ಖರೀದಿಸುವುದರ ಮೂಲಕ ತನ್ನ ವ್ಯಾಪಾರವನ್ನು ವಿಸ್ತರಿಸಲು ಮತ್ತು ಇತರ ರೈತರೊಂದಿಗೆ ಪಾಲುದಾರಿಕೆ ಮತ್ತು ಹಾಲಿನ ಜೊತೆಗೆ ಡೈರಿ ಉತ್ಪನ್ನಗಳನ್ನು ಮಾರುವ ಮೂಲಕ ಹೈನುಗಾರಿಕಾ ಕ್ರಾಂತಿಯತ್ತ ಹೆಜ್ಜೆ ಇಟ್ಟಿದೆ.

ಈ ಹಿನ್ನೆಲೆಯಲ್ಲಿ ಗ್ರಾಮೀಣ ಮಹಿಳೆಯರು ಹೈನುಗಾರಿಕಾ ಉದ್ಯಮಗಳನ್ನು ಪ್ರಾರಂಭಿಸುವ ಮೂಲಕ ತಮ್ಮ ಕುಟುಂಬವನ್ನು ಆರ್ಥಿಕವಾಗಿ ಸದೃಢಗೊಳಿಸಬೇಕು. ಗ್ರಾಮೀಣ ಭಾಗದ ಮಹಿಳೆಯರು ಸ್ವ ಉದ್ಯೋಗ ಕೈಗೊಂಡು, ಅಕ್ಷಯಕಲ್ಪ ಮತ್ತು ಲೇಬರ್ ನೆಟ್‌ನಂತಹ ಸಂಸ್ಥೆಗಳ ಮುಖಾಂತರ ಸಮಾಜದ ಮುಖ್ಯವಾಹಿನಿಗೆ ಬರುವಂತಾಗಬೇಕು. ಮಹಿಳೆಯರು ತಮ್ಮ ಬದ್ಧತೆಯನ್ನು ಪರಿಪೂರ್ಣಗೊಳಿಸಿದಾಗ ಭಾರತ ಬಲಿಷ್ಠವಾಗುತ್ತದೆ.

**ಸಂಜಯ ಆರ್.**
ಬಿ. ಆರ್. ಹಬ್, ನಂ. ೨೨, ಸ್ಯಾಮ್‌ಸನ್ ಆರ್ಕೇಡ್, ಕೆಳಮಹಡಿ, ಆ್ಯಂಡ್ರಿ ರಸ್ತೆ,
ಶಾಂತಿನಗರ, ಬೆಂಗಳೂರು – ೫೬೦ ೦೨೭

# ಸಂವಿಧಾನ ಓದು ಇಂದಿನ ಆದ್ಯತೆ

## ನ್ಯಾಯಮೂರ್ತಿ ಎಚ್. ಎನ್. ನಾಗಮೋಹನ ದಾಸ್




ನ್ಯಾ. ನಾಗಮೋಹನ ದಾಸ್ ಉಚ್ಚ ನ್ಯಾಯಾಲಯದ ನ್ಯಾಯಾಧೀಶರಾಗಿ ೨೦೦೪ರಿಂದ ೨೦೧೪ರವರೆಗೆ, ಹತ್ತು ವರ್ಷಗಳ ಅವಧಿಯಲ್ಲಿ ನಲವತ್ತು ಸಾವಿರ ಪ್ರಕರಣಗಳನ್ನು ಇತ್ಯರ್ಥ ಮಾಡಿದ್ದಾರೆ. ಪ್ರಕರಣಗಳ ಬಗ್ಗೆ ಅಸಂದಿಗ್ಧವಾದ ಅರಿವು, ಲಾಯರುಗಳ ಜೊತೆ ಸೌಹಾರ್ದಯುತವಾದ ಸಂಬಂಧ, ತೀರ್ಮಾನ ತೆಗೆದುಕೊಳ್ಳುವಾಗ ಸಂವಿಧಾನದ ಮಾರ್ಗದರ್ಶನ. ತೀರ್ಪು ಯಾವಾಗಲೂ ಜನತಂತ್ರಾತ್ಮಕವಾಗಿರಬೇಕು, ಜಾತ್ಯತೀತವಾಗಿರಬೇಕು, ಸಾಮಾಜಿಕ ನ್ಯಾಯಕ್ಕೆ ಬದ್ಧವಾಗಿರಬೇಕು ಎಂಬ ನಿಲುವು ಮತ್ತು ನಿರಂತರ ಪರಿಶ್ರಮದಿಂದಾಗಿ ಇಷ್ಟೊಂದು ತೀರ್ಪುಗಳನ್ನು ನೀಡಲು ಸಾಧ್ಯವಾಯಿತು. ನಲವತ್ತು ಸಾವಿರ ಪ್ರಕರಣಗಳು, ಸಾಮಾಜಿಕವಾಗಿ, ರಾಜಕೀಯವಾಗಿ ಅತ್ಯಂತ ಮಹತ್ವವಾದ ನೂರಾರು ಪ್ರಕರಣಗಳು. ಕೆಲವೇ ಕೆಲವುಗಳ ಬಗ್ಗೆ ಹೇಳಿ ಎಂದು ಕೇಳಿದೆವು.

ಸಂದರ್ಶಕರು :

**ಎಂ. ಅಬ್ದುಲ್ ರೆಹಮಾನ್ ಪಾಷ, ಡಾ|| ಜಿ. ರಾಮಕೃಷ್ಣ ಡಾ|| ಎನ್. ಗಾಯತ್ರಿ, ಡಾ|| ಸಿದ್ದನಗೌಡ ಪಾಟೀಲ**

೧೯೬೨ರ ಫೆಬ್ರವರಿ ೧೨ನೇ ತಾರೀಖು. ಕೋಲಾರದ ಬೇತಮಂಗಲದ ಕೆರೆ. ಸುತ್ತಮುತ್ತಲ ಹಳ್ಳಿಗಳಿಂದ ನೂರಾರು ಜನ ಸೇರಿದ್ದಾರೆ. ಕಾಂಗ್ರೆಸ್ಸಿನ ರಾಜ್ಯ, ಜಿಲ್ಲೆಯ ಜನಪ್ರತಿನಿಧಿಗಳೂ ಸೇರಿದ್ದಾರೆ. ೧೯೪೮ರ ಜನವರಿ ೩೦ರಂದು ನವದೆಹಲಿಯಲ್ಲಿ ಗಾಂಧೀಜಿಯವರ ಹತ್ಯೆಯಾಗಿತ್ತಲ್ಲ, ಮರುದಿನ ನಡೆದ ದಹನಸಂಸ್ಕಾರದ ನಂತರ ಚಿತಾಭಸ್ಮವನ್ನು ಸಂಗ್ರಹಿಸಿ ವಿಶೇಷ ಕಲಷಗಳಲ್ಲಿ ತುಂಬಿ ದೇಶದ ಪ್ರತಿಯೊಂದು ಜಿಲ್ಲೆಗೂ ಕಳಿಸಲಾಗಿತ್ತು. ಎಲ್ಲ ಕಡೆ ಯಾವುದಾದರೂ ಜಲಮೂಲದಲ್ಲಿ ಅದನ್ನು ವಿಸರ್ಜಿಸಬೇಕಾಗಿತ್ತು. ಗಾಂಧೀಜಿಯವರ ನೆನಪಿನಿಂದ ಆರ್ದ್ರವಾದ ಹೃದಯಗಳನ್ನು ಹೊತ್ತ ಜನ ಬೈತಮಂಗಲ ಕೆರೆಯ ದಂಡೆಯ ಮೇಲೆ ಸೇರಿದ್ದರು. ಈ ಕಾರ್ಯಕ್ರಮದ ಸಂಚಾಲನೆಯ ಜವಾಬ್ದಾರಿಯನ್ನು ಕೋಲಾರದ ನಾಗಪ್ಪನವರು ವಹಿಸಿದ್ದರು.

ಚಿತಾಭಸ್ಮ ಕೆರೆಯಲ್ಲಿ ಕರಗುತ್ತಿದ್ದ ಹಾಗೆ ನಾಗಪ್ಪನವರ ಹೆಬ್ಬಣ್ಣಿ ಗ್ರಾಮದಿಂದ ಒಂದು ಸುದ್ದಿ ಬಂತು, ಅವರಿಗೆ ಗಂಡು ಮಗುವಾಗಿದೆ ಎಂದು. ಇದರಿಂದ ಸಂತೋಷಗೊಂಡ ಅಲ್ಲಿ ನೆರೆದಿದ್ದ ಸ್ನೇಹಿತರೆಲ್ಲ, 'ನೋಡಿ, ಈ ಕಡೆ ಮಹಾತ್ಮರ ಚಿತಾಭಸ್ಮವನ್ನು ವಿಸರ್ಜಿಸುತ್ತಿದ್ದ ಹಾಗೆ ಆ ಕಡೆ ನಿಮಗೆ ಗಂಡು ಮಗು ಆಗಿದೆ, ಇದರ ನೆನಪಿಗಾಗಿ ನೀವು ಮಗುವಿಗೆ ಮೋಹನ ದಾಸ್ ಎಂದು ಹೆಸರಿಡಿ' ಎಂದು ಆಗ್ರಹಿಸಿದರು.

ಲೇಖನ ಸಿದ್ಧಪಡಿಸಿದವರು

**ಎಂ. ಅಬ್ದುಲ್ ರೆಹಮಾನ್ ಪಾಷ**

## ಶಿಕ್ಷಣ ಮತ್ತು ವೃತ್ತಿ



ತಮ್ಮೂರಿನ ಸರಕಾರಿ ಕನ್ನಡ ಮಾಧ್ಯಮ ಶಾಲೆಯಲ್ಲಿ ಪ್ರಾಥಮಿಕ ಶಿಕ್ಷಣ, ಮುಳುಬಾಗಿಲಿನಲ್ಲಿ ಪಿಯುಸಿ ಮುಗಿಸಿ ಬಿಎ ಮತ್ತು ಎಲ್‌ಎಲ್‌ಬಿ ಮಾಡಲು ಬೆಂಗಳೂರನ್ನು ಸೇರಿದ ನಂತರ ಬೆಂಗಳೂರೇ ಅವರ ನೆಲೆಯಾಗಿಬಿಟ್ಟಿತು. ಸ್ವಾತಂತ್ರ್ಯ ಹೋರಾಟಗಾರರಾಗಿದ್ದ ಬಿ. ಎಂ. ರಾಮನಾಥನ್, ಬಿ. ಟಿ. ಪಾರ್ಥಸಾರಥಿ, ಎಂ. ಸಿ. ನರಸಿಂಹನ್, ಎ. ಜೆ. ಸದಾಶಿವರಂಥ ಕಾನೂನು ವಿದ್ವಾಂಸರು ಎಲ್‌ಎಲ್‌ಬಿ ಓದುವಾಗ ಇವರ ಗುರುಗಳಾಗಿದ್ದರು. ಕಾಲೇಜಿನಲ್ಲಿರುವಾಗ ನಾಗಮೋಹನ ದಾಸ್ ಸಾಹಿತ್ಯದಲ್ಲಷ್ಟೇ ಅಲ್ಲ, ಜನಪರ ಚಳವಳಿಯಲ್ಲಿಯೂ ಆಸಕ್ತಿಯನ್ನು ಕುದುರಿಸಿಕೊಂಡರು. ಮುಂದೆ ವಿದ್ಯಾರ್ಥಿ, ಯುವಜನರು, ಕಾರ್ಮಿಕರು, ಲಾಯರರು ಹೀಗೆ ವಿವಿಧ ಸಮೂಹಗಳ ಹೋರಾಟಗಳಲ್ಲಿ ನಾಗಮೋಹನ ದಾಸ್ ಮುಂಚೂಣಿಯಲ್ಲಿದ್ದರು. 'ಈ ಹೋರಾಟದ ಅನುಭವ ನನಗೆ ಮುಂದೆ ನ್ಯಾಯಾಧೀಶನಾಗಿದ್ದಾಗ ಪ್ರಕರಣಗಳ ಸತ್ಯಾಸತ್ಯತೆಯನ್ನು, ಅವುಗಳ ಮಾನವೀಯ ದೃಷ್ಟಿಕೋನವನ್ನು ಅರ್ಥ ಮಾಡಿಕೊಳ್ಳುವ ಪ್ರೌಢಿಮೆಯನ್ನು ಕೊಟ್ಟಿತು' ಎನ್ನುತ್ತಾರೆ ನ್ಯಾ. ದಾಸ್ ಅವರು.

ಆದರೆ ನಾಗಪ್ಪನವರಿಗೆ ಒಂದು ಧರ್ಮಸಂಕಟವಿತ್ತು. ಅವರ ಮನೆತನದ ಸಂಪ್ರದಾಯದ ಪ್ರಕಾರ ಕುಟುಂಬದ ಮೊದಲ ಮಗು ಹೆಣ್ಣಾಗಲೀ ಗಂಡಾಗಲಿ 'ನಾ' ಧ್ವನಿಯಿಂದ ಆರಂಭವಾಗುವ ಹೆಸರನ್ನಿಡಬೇಕಾಗಿತ್ತು. ಅದಕ್ಕೆ ಅವರ ತಂದೆಯ ಹೆಸರು ನಾಗಯ್ಯ, ತಮ್ಮ ಹೆಸರು ನಾಗಪ್ಪ, ಮಗನ ಹೆಸರೂ ಹೀಗೇ ಏನಾದರೂ ಇಡಬೇಕಲ್ಲವೇ? ಸರಿ, ಸ್ನೇಹಿತರ ಸಲಹೆ ಮತ್ತು ಸಂಪ್ರದಾಯದ ಒಲುಮೆ ಎರಡನ್ನೂ ಸೇರಿಸಿ ನಾಗಪ್ಪನವರು ಮಗುವಿಗೆ 'ನಾಗಮೋಹನ ದಾಸ' ಎಂದು ಹೆಸರಿಟ್ಟರು. ಈ ಮಗುವೇ ಮುಂದೆ ಬೆಳೆದು ನಾಡಿನ ಉಚ್ಚ ನ್ಯಾಯಾಲಯದ ನ್ಯಾಯಾಧೀಶರಾಗಿ ಬೆಳಗಿದ ನ್ಯಾ. ಎಚ್. ಎನ್. ನಾಗಮೋಹನ ದಾಸ್.

ನಾಗಮೋಹನ ದಾಸ್ ಅವರ ಕುಟುಂಬದ ಮೇಲೆ ಗಾಂಧಿಯವರ ಪ್ರಭಾವ ಇತ್ತು ಎನ್ನುವುದಕ್ಕೆ ಇದೊಂದೇ ಘಟನೆ ಸಾಕ್ಷಿಯೇನಲ್ಲ. ಅವರ ತಂದೆ ನಾಗಪ್ಪನವರು ಚಿಕ್ಕವರಿದ್ದಾಗ ಸುಮಾರು ೧೯೩೭ರ ಹೊತ್ತಿಗೆ ಗಾಂಧೀಜಿ ಒಮ್ಮೆ ಮದ್ರಾಸಿಗೆ ಬಂದಿದ್ದರು. ಸುದ್ದಿ ಗೊತ್ತಾಗಿ ಬಾಲಕ ನಾಗಪ್ಪನಿಗೆ ಅವರನ್ನು ನೋಡುವ ಆಸೆ. ತಂದೆ ನಾಗಯ್ಯನವರಿಗೆ ಕೇಳಿದರು. ಹುಡುಗ ಇನ್ನೂ ಚಿಕ್ಕವನು ಎಂದು ನೆಪ ಹೇಳಿದ ಅವರು ಸ್ವತಃ ಗಾಂಧೀಜಿಯನ್ನು ನೋಡಲು ಹೋದರು. ಅಲ್ಲಿ ಅವರ ಪ್ರವಚನಗಳನ್ನು ಕೇಳಿಸಿಕೊಂಡು, ರಾಮರಾಜ್ಯ, ಗ್ರಾಮರಾಜ್ಯ, ಖಾದಿಯ ಮಹತ್ವ, ಅಹಿಂಸೆಯ ಶಕ್ತಿ ಇತ್ಯಾದಿ ಬಗ್ಗೆ ಅವರ ವಿಚಾರಗಳಿಂದ ಗಾಢವಾಗಿ ಪ್ರಭಾವಿತರಾಗಿ ಹಿಂದಿರುಗಿದರು. ಬಂದವರೇ, ಅದರ ಸಾರವನ್ನು ಮಗು ನಾಗಪ್ಪನಿಗೆ ಹೇಳುತ್ತಾ 'ನೋಡು ಮಗು, ಹೊಲಾನಾದ್ರೂ ಮಾರು, ಗದ್ದೇನಾದ್ರೂ ಮಾರು, ಎತ್ತುಗಳನ್ನಾದರೂ ಮಾರಿಬಿಡು, ಆದರೆ ಗಾಂಧೀಜಿ ಹೇಳಿದ ಹಾಗೆ ಕೇಳು' ಎಂದರಂತೆ.




ಮುಂದೆ ನಾಗಪ್ಪನವರೂ ಗಾಂಧೀವಾದಿಯಾಗಿ ದೇಶದ ಸ್ವಾತಂತ್ರ್ಯ ಚಳುವಳಿಯಲ್ಲಿ ಸಕ್ರಿಯವಾಗಿ ಧುಮುಕಿದರು. ಹಲವಾರು ಬಾರಿ ಸೆರೆಮನೆವಾಸವನ್ನು ಅನುಭವಿಸಿದರು. ಸೆರೆಮನೆಯಲ್ಲಿ ಭೇಟಿಯಾದ ನಿಜಲಿಂಗಪ್ಪ, ಕೆಂಗಲ್ ಹನುಮಂತಯ್ಯ, ಎಚ್. ಎಸ್. ದೊರೆಸ್ವಾಮಿ ಇಂಥವರಿಂದ ಹೋರಾಟದ ಕೆಚ್ಚನ್ನು ಕಲಿತರು. ಸ್ವಾತಂತ್ರ್ಯಾನಂತರ ಸರಕಾರದಿಂದ ತಾಮ್ರ ಪತ್ರ ಪುರಸ್ಕೃತರಾದ ನಾಗಪ್ಪನವರು ಮತ್ತು ಅವರ ಪತ್ನಿ ಪಾರ್ವತಮ್ಮನವರ ಮಗನೇ ನ್ಯಾ. ಎಚ್. ಎನ್. ನಾಗಮೋಹನ ದಾಸ್.

'ಹೊಸತು'ಗಾಗಿ ನಾನು, ಡಾ॥ ಸಿದ್ದನಗೌಡ ಪಾಟೀಲ್, ಡಾ॥ ಜಿ. ರಾಮಕೃಷ್ಣ ಮತ್ತು ಡಾ॥ ಎನ್. ಗಾಯತ್ರಿ ಹೋಗಿದ್ದೆವು. ಅವರ ಕುಟುಂಬದವರ ಆದರಾತಿಥ್ಯದಲ್ಲಿ ಸೊಗಸಾದ ಊಟವನ್ನೂ ಸವಿದು ಮಾತಿಗೆ ಕುಳಿತಾಗ ಮೂರು ಗಂಟೆ ಸವೆದದ್ದು ಗಮನಕ್ಕೇ ಬರಲಿಲ್ಲ. ಹಲವಾರು ವಿಷಯಗಳ ಬಗ್ಗೆ ನ್ಯಾ. ದಾಸ್ ಅವರು ವ್ಯಕ್ತಪಡಿಸಿದ ಸಾಗರದಷ್ಟು ವಿಪುಲವಾದ ವಿಚಾರಗಳ ಕೆಲವು ಹನಿಗಳನ್ನಷ್ಟೆ ಇಲ್ಲಿ ಹಿಡಿದಿಡಲು ಸಾಧ್ಯವಾಗಿದೆ.

**ನ್ಯಾ. ದಾಸ್** : ನಾನು ೧೯೭೭ರಲ್ಲಿ ಲಾಯರ್‌ಆಗಿ ಎನ್‌ರೋಲ್ ಮಾಡಿಸಿದೆ. ವೃತ್ತಿ ಶುರು ಮಾಡಿ ಆರು ತಿಂಗಳು ಆಗಿರಲಿಲ್ಲ. ನಾನು ಓದಿದ್ದ ಕಾಲೇಜಿನ ಪ್ರಿನ್ಸಿಪಾಲರು ಕರೆದು ಬಿಕಾಂ ಫೈನಲ್‌ಗೆ ಮರ್ಕಂಟೈಲ್ ಲಾ ಪಾಠ ಮಾಡು ಅಂದರು. ಪಾರ್ಟ್ ಟೈಮ್, ತಿಂಗಳಿಗೆ ಇನ್ನೂರು ರೂಪಾಯಿ. ನನಗೆ ತುಂಬ ಖುಷಿಯಾಯಿತು. ನನ್ನ ಹತ್ತಿರ ಇದ್ದದ್ದು ಒಂದೇ ಕೋಟು. ಬಿಳಿ ಶರ್ಟಿನ ಮೇಲೆ ಹಾಕಿಕೊಂಡರೆ ದಿನಾ ಒಂದೇ ತರ ಕಾಣೋದು, ಅದಕ್ಕೆ ಮೂರು ಬೇರೆ ಬೇರೆ ಬಣ್ಣ ಟೈ ಕೊಂಡುಕೊಂಡೆ. ಮೂರು ದಿನ ಪಾಠ, ದಿನಕ್ಕೊಂದು ಟೈ. ಬೇರೆ ತರಹ ಕಾಣಲಿ ಅಂತ. ನಾನು ಅಲ್ಲಿ ಪಾಠ ಮಾಡಿದ ಮೂರು ವರ್ಷಗಳಲ್ಲಿ ಒಂದು ದಿನವೂ ನಾನು ಸಿದ್ಧತೆ ಇಲ್ಲದೇ ತರಗತಿಗೆ ಹೋಗಲಿಲ್ಲ; ಕುಳಿತು ಪಾಠ ಮಾಡಲಿಲ್ಲ, ಬೋರ್ಡನ್ನು ಬಳಸದೇ ಪಾಠ ಮಾಡಲಿಲ್ಲ. ಇದು ನಂತರವೂ ನನ್ನ ವೃತ್ತಿ ಜೀವನದಲ್ಲಿ ನನ್ನನ್ನು ಚೆನ್ನಾಗಿ ಪಳಗಿಸಿತು. ನನಗೆ ಸಭಾಕಂಪನ

ಹೊರಟುಹೋಯಿತು. ಸಂವಹನ ಸುಧಾರಣೆಯಾಯಿತು. ಯಾವುದೇ ಉಪನ್ಯಾಸ, ವಿಷಯ ಮಂಡನೆ ಅಥವಾ ವಾದಮಂಡನೆಗೆ ಹೋಗುವಾಗ ಚೆನ್ನಾಗಿ ತಯಾರಿ ಮಾಡಿಯೇ ಹೋಗಬೇಕು ಎನ್ನುವುದು ಅಭ್ಯಾಸವಾಯಿತು.

**ಹೊಸತು :** ನೀವು ಕೋಲಾರದಲ್ಲಿ ಲಾಯರ್ ವೃತ್ತಿ ಶುರು ಮಾಡಬೇಕು ಅಂದುಕೊಂಡಿದ್ದಿರಿ.

**ನ್ಯಾ. ದಾಸ್ :** ಹೌದು, ಕೋಲಾರದಲ್ಲಿ ಒಬ್ಬರು ಪಟ್ಟಾಭಿರಾಮನ್ ಅಂತ ಪ್ರಸಿದ್ಧ ಕ್ರಿಮಿನಲ್ ಲಾಯರ್ ಇದ್ದರು. ನಾನು ಅವರ ಜೊತೆ ಕೆಲಸ ಮಾಡಿ ಪಳಗಬೇಕು ಅನ್ನೋದು ನಮ್ಮ ತಂದೆ ಆಸೆಯಾಗಿತ್ತು. ನಾನೂ ಅವರನ್ನು ಭೇಟಿಯಾಗಿ, ಬೆಂಗಳೂರಿನಲ್ಲಿರೋ ಸಾವಿರಾರು ಲಾಯರುಗಳಲ್ಲಿ ನಾನೂ ಒಬ್ಬ ಆಗೋದಕ್ಕಿಂತ ನಿಮ್ಮ ಜೊತೆ ಇಲ್ಲೆ ಕೋಲಾರದಲ್ಲಿ ಕೆಲಸ ಮಾಡೋದು ಒಳ್ಳೆಯದು ಅಂದೆ. ಆದರೆ ಪಟ್ಟಾಭಿರಾಮನ್ ಅವರು ನನ್ನ ಜೊತೆ ಮಾತಾಡಿ, 'ನೋಡು, ಬೆಂಗಳೂರಿನಲ್ಲಿ ಕ್ವಾಂಟಿಟಿ ಇದೆ ಕಣಯ್ಯ, ಕ್ವಾಲಿಟಿ ಇಲ್ಲ. ನೀನು ಕ್ವಾಂಟಿಟಿಗೆ ಹೆದರಬೇಡ. ಹೋಗು, ಕ್ವಾಲಿಟಿ ಕೆಲಸ ಮಾಡಿ ಗೆಲ್ಲು' ಅಂದರು. ನಾನು ೧೯೭೭ರಿಂದ ೨೦೦೪ರವರೆಗೆ ೨೬ ವರ್ಷ ಲಾಯರ್ ಆಗಿ ಕೆಲಸ ಮಾಡಿದೆ. ಅವತ್ತಿನಿಂದ ನಾನು ಆ ಗುಣಮಟ್ಟ ಕಾಪಾಡಿಕೊಳ್ಳುತ್ತಲೇ ಬಂದಿದ್ದಕ್ಕೆ ಹಿಂದಕ್ಕೆ ನೋಡೋ ಅಗತ್ಯವೇ ಬೀಳಲಿಲ್ಲ. ಸ್ವಂತ ಆಫೀಸ್ ತೆರೆದೆ, ನಾನು ನ್ಯಾಯಾಧೀಶ ಆಗೋ ಹೊತ್ತಿಗೆ ನಮ್ಮದು ಬಹಳ ದೊಡ್ಡ ಆಫೀಸ್ ಆಗಿತ್ತು.

**ಹೊಸತು :** ಲಾಯರು ವೃತ್ತಿ ಲಾಭದಾಯಕ ವೃತ್ತಿ, ನೀವು ಬಹಳ ಯಶಸ್ವಿ ಲಾಯರಾಗಿದ್ರಿ. ನ್ಯಾಯಾಧೀಶರಾಗಬೇಕು ಅಂತ ನಿಮಗೆ ಅನ್ನಿಸಿದ್ದು ಯಾಕೆ?

**ನ್ಯಾ. ದಾಸ್ :** ನಿಜ ಅಂದರೆ ನ್ಯಾಯಾಧೀಶ ಆಗಬೇಕು ಅಂತ ನಾನು ಕನಸಿನಲ್ಲೂ ಅಂದುಕೊಂಡಿರಲಿಲ್ಲ. ನನ್ನ ಕ್ಷೇತ್ರ ಲಾಯರುಗಿರಿ. ಅಷ್ಟು ಹೊತ್ತಿಗೆ ನಾನು ಫೀಲ್ಡ್ ಪಾಲಿಟಿಕ್ಸ್‌ನಲ್ಲೂ ಇದ್ದೆ. ಯುವ ಆಂದೋಲನಗಳು, ಲಾಯರುಗಳ ಚಳವಳಿಗಳು ಹೀಗೆ ನನ್ನ ಆದ್ಯತೆಗಳೇ ಬೇರೆ ಆಗಿದ್ವು. ನ್ಯಾಯಾಧೀಶರ ಹುದ್ದೆ ನನ್ನನ್ನು ಹುಡುಕಿಕೊಂಡು ಬಂತು ಅಂತ ಹೇಳಬಹುದು.

ಒಮ್ಮೆ ನಮ್ಮ ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರು ನನ್ನನ್ನು ಕರೆಸಿಕೊಂಡು ನಿಮ್ಮನ್ನು ನ್ಯಾಯಾಧೀಶನನ್ನಾಗಿ ನೇಮಿಸಬೇಕು ಅಂತ ನಮ್ಮ ಕೊಲೆಜಿಯಂನಲ್ಲಿ ಚರ್ಚೆ ಆಗಿದೆ. ಎರಡು ಮೂರು ದಿನಗಳಲ್ಲಿ ನಿಮ್ಮ ಅಭಿಪ್ರಾಯವನ್ನು ತಿಳಿಸಿ ಅಂದರು. ನಾನು ಯೋಚನೆ ಮಾಡಿದೆ, ನಮ್ಮ ತಂದೆ ಐದನೇ ತರಗತಿ ಓದಿಕೊಂಡ ಸಾಧಾರಣ ಮಧ್ಯಮ ವರ್ಗದ ಕೃಷಿಕ ಸಮುದಾಯದವರು. ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿ ದೇಶಕ್ಕಾಗಿ ಅಷ್ಟೊಂದು ತ್ಯಾಗ ಮಾಡಿದವರು. ಆದಾಯವೇ ಮುಖ್ಯ ಅಲ್ಲ. ನನ್ನ ಸಂಸ್ಥೆಗೆ ನನ್ನ ಸೇವೆ ಅಗತ್ಯವಿದೆ ಎನ್ನುವುದಾದರೆ ನಾನು ನ್ಯಾಯಾಧೀಶ ಆಗುವುದು ಒಳ್ಳೆಯದು ಎಂಬ ತೀರ್ಮಾನಕ್ಕೆ ಬಂದೆ. ೨೦೦೪ರಲ್ಲಿ ನಾನು ಕರ್ನಾಟಕ ಉಚ್ಚ ನ್ಯಾಯಾಲಯದ ಖಾಯಂ ನ್ಯಾಯಾಧೀಶನಾಗಿ ನೇಮಕನಾದೆ.

**ಹೊಸತು :** ನೀವು ಹಲವಾರು ಜನಾಂದೋಲನಗಳಲ್ಲಿ ತೊಡಗಿಸಿಕೊಂಡು ಒಂದು ಸಿದ್ಧಾಂತಕ್ಕೆ ಬದ್ಧರಾಗಿ ಹೋರಾಡಿದವರೂ ಕೂಡ. ನ್ಯಾಯಾಧೀಶರ ಸ್ಥಾನದಲ್ಲಿ ಕುಳಿತು ನಿಷ್ಪಕ್ಷಪಾತವಾಗಿ ನ್ಯಾಯದಾನ ಮಾಡುವಲ್ಲಿ ಇದು ಅಡ್ಡಿಯಾಗಲಿಲ್ಲವೇ?

**ನ್ಯಾ. ದಾಸ್:** ನಿಜ ಹೇಳಬೇಕು ಎಂದರೆ ಜನಾಂದೋಲನಗಳಲ್ಲಿ ತೊಡಗಿಸಿಕೊಂಡಿದ್ದು ನನಗೆ ನ್ಯಾಯಾಧೀಶರ ಕರ್ತವ್ಯ ನಿಭಾಯಿಸುವಲ್ಲಿ ಸಹಾಯಕವೇ ಆಯಿತು ಎನ್ನಬಹುದು. ನನ್ನೆದುರು ಬರುವ ವ್ಯಾಜ್ಯಗಳ ಸತ್ಯಾಸತ್ಯಗಳನ್ನು ಗುರುತಿಸೋದು, ಅದರ ತೀವ್ರತೆ, ನೋವನ್ನು ಅರ್ಥ ಮಾಡಿಕೊಳ್ಳುವ ಸಂವೇದನೆಯನ್ನು ಅದು ನನಗೆ ಕೊಟ್ಟಿತು ಅಷ್ಟೆ. ಆದರೆ ತೀರ್ಮಾನಕ್ಕೆ ಬಂದು ತೀರ್ಪನ್ನು ಬರೆಯುವ ಸಂದರ್ಭದಲ್ಲಿ ನಾನು ನನ್ನ ವೈಯಕ್ತಿಕ ನಂಬಿಕೆ, ನನ್ನ ಸಿದ್ಧಾಂತ ಇವುಗಳನ್ನು ಅದರಲ್ಲಿ ತರುತ್ತಿರಲಿಲ್ಲ. ನಾನು ನನ್ನ ಕರ್ತವ್ಯವನ್ನು ಕೇವಲ ಸಂವಿಧಾನದ ಚೌಕಟ್ಟಿನಲ್ಲಿ ಮಾಡಿದೆ. ನನ್ನ ಅನನ್ಯ ಬದ್ಧತೆ ಸಂವಿಧಾನಕ್ಕೆ ಮಾತ್ರ. ಸಂವಿಧಾನದ ಆಶಯಗಳನ್ನು ಎತ್ತಿ ಹಿಡಿಯುವ ಪ್ರಯತ್ನ ನಾನು ನಿರಂತರ ಮಾಡಿದ್ದೇನೆ.

**ನ್ಯಾ. ದಾಸ್ :** ಕೃಷಿ ಬಗ್ಗೆ ಒಂದು ತೀರ್ಪು ಬರೆದೆ. ಕೃಷಿ ಉತ್ಪನ್ನಗಳಿಗೆ ಸರಿಯಾದ ಬೆಲೆ ಸಿಗದೇ ರಸ್ತೆಯಲ್ಲಿ ಸುರಿದು, ಕಬ್ಬನ್ನು ಕಡಿಯದೇ ಗದ್ದೆಯಲ್ಲೇ ಸುಟ್ಟು ಹಾಕಿ ರೈತರು ಪ್ರತಿಭಟನೆ ಮಾಡುವ ಪ್ರಕರಣಗಳು ದೇಶದಲ್ಲಿ ಪದೇ ಪದೇ ನಡೆಯುತ್ತವೆ. ಒಮ್ಮೆ ಹೀಗಾದಾಗ ಸರಕಾರ ರೈತರ ಸಹಾಯಕ್ಕಾಗಿ ಒಂದು ನಿಧಿಯನ್ನು ಸ್ಥಾಪಿಸಿತು. ಎಪಿಎಂಸಿ ಮಾರುಕಟ್ಟೆಯಲ್ಲಿ ಆದ ವಹಿವಾಟಿನ ಮೇಲೆ ಇಂತಿಷ್ಟು ಅಂತ ಮೊತ್ತ ಎಪಿಎಂಸಿಗೆ ಹೋಗುತ್ತೆ. ಆ ಮೊತ್ತವನ್ನು ಈ ನಿಧಿಗೆ ಹಾಕುವುದಾಗಿ ಸರಕಾರ ಹೇಳಿತು. ಆದರೆ ವ್ಯಾಪಾರಿಗಳು ಇದನ್ನು ಪ್ರಶ್ನಿಸಿ ಕೋರ್ಟಿಗೆ ಹೋದರು. ರೈತರಿಗೆ ಸಹಾಯ ಮಾಡೋದಾದರೆ ಇಡೀ ಜನತೆಗೆ ತೆರಿಗೆಯನ್ನು ವಿಧಿಸಿ, ವ್ಯಾಪಾರಿಗಳಿಗಷ್ಟೇ ಯಾಕೆ ಅಂದರು. ಇಲ್ಲಿ ಪ್ರಶ್ನೆ ಇದ್ದದ್ದು, ಬಿಕ್ಕಟ್ಟಿನ ಪರಿಸ್ಥಿತಿಯಲ್ಲಿ ಸರಕಾರ ಹಸ್ತಕ್ಷೇಪ ಮಾಡೋದು ಟ್ರೇಡಿಂಗ್ ಚಟುವಟಿಕೆಗೆ ಸಂಬಂಧಪಟ್ಟಿದ್ದಾ, ಅಲ್ವಾ ಅಂತ. ವಿಭಾಗೀಯ ನ್ಯಾಯಪೀಠದಲ್ಲಿ ನಾನೂ ಮತ್ತು ನ್ಯಾ. ದತ್ತು



*ಸಂದರ್ಶಕರೊಂದಿಗೆ ನ್ಯಾಯಮೂರ್ತಿ ಎಚ್. ಎನ್. ನಾಗಮೋಹನ ದಾಸ್*

ಅವರು ಪ್ರಕರಣವನ್ನು ಆಲಿಸಿದ್ವಿ, ತೀರ್ಪನ್ನು ನಾನೇ ಬರೆದೆ.

ಅದರಲ್ಲಿ ಸ್ವಾತಂತ್ರ್ಯಕ್ಕಿಂತ ಮುಂಚೆ ಮತ್ತು ನಂತರ ದೇಶದಲ್ಲಿ ಕೃಷಿಯಲ್ಲಾದ ಬೆಳವಣಿಗೆ ಬಗ್ಗೆ ಬರೆಯುತ್ತಾ, 'ವೈಜ್ಞಾನಿಕ ಸಾಧನೆಗಳ ಅವೈಜ್ಞಾನಿಕ ಅನ್ವಯದಿಂದಾಗಿ ಇವತ್ತಿನ ಬಿಕ್ಕಟ್ಟು ತಲೆದೋರಿದೆ' ಅಂತ ಬರೆದಿದ್ದೆ. ದೇಶದಲ್ಲಿ ಉಳಿದೆಲ್ಲಾ ಉತ್ಪನ್ನಗಳಿಗೆ ಇನ್‌ಫ್ಲೇಷನ್ ಇದೆ, ಕೃಷಿ ಉತ್ಪನ್ನಗಳಿಗೆ ಮಾತ್ರ ಡಿಫ್ಲೇಷನ್ ಇದೆ. (ಕೈಯಲ್ಲಿದ್ದ ಪೆನ್ನನ್ನು ತೋರಿಸುತ್ತಾ) ಒಂದು ಪೆನ್ನನ್ನು ಉತ್ಪಾದನೆ ಮಾಡೋದಕ್ಕೆ ೨ ರೂಪಾಯಿ ಖರ್ಚಾಗುತ್ತೆ, ಅದನ್ನು ನಾವು ಮಾರ್ಕೆಟ್ಟಿನಲ್ಲಿ ೨೦ ರೂಪಾಯಿ ಕೊಟ್ಟು ತಗೋಬೇಕು. ಅದೇ ಒಂದು ಕೆ.ಜಿ. ಟೊಮ್ಯಾಟೊ ಬೆಳೆಯೋದಕ್ಕೆ ೨ ರೂಪಾಯಿ ಖರ್ಚಾಗುತ್ತದೆ. ಆದರೆ ರೈತ ಅದನ್ನು ನಾಲ್ಕು ಆಣೆಗೆ ಮಾರಬೇಕಾಗುತ್ತೆ. ಇಂಥ ಡಿಫ್ಲೇಷನ್ ಬಂದಾಗ ರೈತರು ಸಾಲಗಾರರಾಗುತ್ತಾರೆ, ಬಿಕ್ಕಟ್ಟು ಅತಿಯಾಗಿ ಅವರು ಆತ್ಮಹತ್ಯೆ ಮಾಡಿಕೊಳ್ಳುತ್ತಾರೆ. ಕಲ್ಯಾಣ ಜನತಂತ್ರ ಮತ್ತು ರೈತರ ಆತ್ಮಹತ್ಯೆ ಒಟ್ಟಿಗೇ ಇರುವುದಕ್ಕೆ ಹೇಗೆ ಸಾಧ್ಯ? ಕಲ್ಯಾಣ ಎಂದರೆ ರೈತರಿಗೆ ಅಗತ್ಯ ಬಿದ್ದಾಗ ಸಹಾಯಹಸ್ತ ನೀಡೋದು ಸರಕಾರದ ಕರ್ತವ್ಯ, ಸರಕಾರದ ಕ್ರಮ ನ್ಯಾಯಯುತವಾಗಿಯೇ ಇದೆ ಎಂದು ತೀರ್ಪನ್ನು ಬರೆದೆ.

ಇನ್ನೊಂದು ಹುಲಿಕಲ್ ನಟರಾಜ್ ಎನ್ನುವವರ ಮೇಲೆ ಹಾಕಲಾಗಿದ್ದ ಪ್ರಕರಣ. ನಟರಾಜ್ ಅವರು ಮಡಕೇರಿಯಲ್ಲಿ ಒಂದು ಪವಾಡ ಬಯಲು ಕಾರ್ಯಕ್ರಮ ನಡೆಸುವ ವೇಳೆಯಲ್ಲಿ, 'ತಲಕಾವೇರಿಯಲ್ಲಿ ತೀರ್ಥೋದ್ಭವ ಆಗುವುದರಲ್ಲಿ ಯಾವುದೇ ಪವಾಡವಿಲ್ಲ, ಅದು ಕೇವಲ ಏರ್ ಟೆಕ್ನಿಕ್' ಅಂತಂದ್ರು. 'ಅದೇ ರೀತಿ ಅಯ್ಯಪ್ಪ ಸ್ವಾಮಿ ಬೆಟ್ಟದ ಮೇಲೆ ಮಕರ ಜ್ಯೋತಿ ಕಾಣಿಸಿಕೊಳ್ಳುವುದರಲ್ಲಿ ಯಾವುದೇ ದೈವಿಕತೆ ಇಲ್ಲ, ಯಾವುದೋ ದೇವಸ್ಥಾನದ ಗರುಡಗಂಭದ ಸುತ್ತ ಗರುಡವೊಂದು ಸುತ್ತುವುದು ಕೇವಲ ಅಭ್ಯಾಸ ಬಲದಿಂದ' ಎಂದು ಹೇಳಿದರು. ಕೆಲವರು 'ಇದು ನಮ್ಮ ಧಾರ್ಮಿಕ ನಂಬಿಕೆಗೆ ನೋವು ಉಂಟುಮಾಡುತ್ತದೆ' ಎಂದು ಪೊಲೀಸರಿಗೆ ದೂರಿತ್ತರು. ಪೊಲೀಸರು ನಟರಾಜರ ಮೇಲೆ ಕೇಸನ್ನು ದಾಖಲಿಸಿಯೇ ಬಿಟ್ಟರು.

೨೦೧೧ರಲ್ಲಿ ಅಂತ ಕಾಣುತ್ತೆ ಈ ಪ್ರಕರಣ ಹೈಕೋರ್ಟಿನಲ್ಲಿ ನನ್ನ ಎದುರಿಗೆ ಬಂತು. ಈ ಪ್ರಕರಣದಲ್ಲಿ ಪೊಲೀಸರು ಅನುಸರಿಸಬೇಕಾದ ಕನಿಷ್ಠ ಕ್ರಮವನ್ನೂ ಸರಿಯಾಗಿ ತೆಗೆದುಕೊಂಡಿರಲಿಲ್ಲ ಎಂಬುದನ್ನು ನಾನು ಅವರ ಗಮನಕ್ಕೆ ತಂದೆ. ಇದನ್ನು ಒಪ್ಪಿಕೊಂಡ ಗೃಹ ಕಾರ್ಯದರ್ಶಿಯವರು ಆ ತಪಾಸಣೆ ಅಧಿಕಾರಿಯ ಮೇಲೆ ಕ್ರಮ ತೆಗೆದುಕೊಂಡರು. ಆದರೂ ನಾನು ಕೇಸನ್ನು ರದ್ದು ಮಾಡದೇ ವಿಚಾರಣೆಗೆ ಎತ್ತಿಕೊಂಡೆ. ಕೊನೆಯಲ್ಲಿ ತೀರ್ಪನ್ನು ಬರೆದೆ.

ಇದರಲ್ಲಿ ನಾನು ಮುಖ್ಯವಾಗಿ ಬರೆದದ್ದು ಏನೆಂದರೆ, ವ್ಯಕ್ತಿಯ ವಾಕ್ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯವು ಅಭಿಪ್ರಾಯ ಭೇದವನ್ನು ಹೊಂದಿರುವ ಮತ್ತು ಟೀಕಿಸುವ ಮತ್ತು ಸಾಂಪ್ರದಾಯಿಕತೆಯನ್ನು ಪ್ರಶ್ನಿಸುವ ಸ್ವಾತಂತ್ರ್ಯವನ್ನೂ ಒಳಗೊಂಡಿರುತ್ತದೆ. ಬುದ್ಧನಿಂದ ಹಿಡಿದು ಬಸವಣ್ಣನವರವರೆಗೆ ಅನೇಕರು ಸಂಪ್ರದಾಯಗಳನ್ನು, ವಾಡಿಕೆಗಳನ್ನು ಪ್ರಶ್ನಿಸಿದ್ದಾರೆ. ಜಗತ್ತಿನ ಎಲ್ಲ ದಾರ್ಶನಿಕರು ಆಯಾ ಕಾಲದ ಸಂಪ್ರದಾಯ ಕತೆಯನ್ನು ವಿರೋಧಿಸಿ ಕೊಂಡೇ ಬಂದಿದ್ದಾರೆ. ಪ್ರವಾದಿಗಳಾದ ಜೀಸಸ್, ಮುಹಮ್ಮದ್, ಜೊರಾಷ್ಟರ್ ಎಲ್ಲರೂ. ಕೆಲವು ನಂಬಿಕೆಗಳು ಮನಸ್ಸಿಗೆ ಸಮಾಧಾನವನ್ನು ನೀಡುತ್ತವೆ, ಇನ್ನು ಕೆಲವು ಅಮಾನವೀಯ, ಕ್ರೂರ, ಅನಾರೋಗ್ಯಕರ, ವಿನಾಶಕಾರಿ ಆಗಿರುತ್ತವೆ, ಇವುಗಳನ್ನು ವಿರೋಧಿಸಬೇಕು. ಇದರ ಜೊತೆಯಲ್ಲಿ ಸಂವಿಧಾನದ ಭಾಗ ೪, ಅನುಚ್ಛೇದ ೫೧ (ಎ) (ಎಚ್)ರಲ್ಲಿ, ವೈಜ್ಞಾನಿಕ ಮನೋವೃತ್ತಿಯನ್ನು ಬೆಳೆಸಿಕೊಳ್ಳುವುದನ್ನು ಮೂಲಭೂತ ಕರ್ತವ್ಯವಾಗಿದೆ ಎಂಬುದನ್ನು ಬರೆದೆ.

ನಮ್ಮಲ್ಲಿ ಮೂಲಭೂತ ಹಕ್ಕುಗಳನ್ನು ಕಾನೂನು ಪ್ರಕಾರ ಜಾರಿಗೆ ತರಬಹುದು, ಮೂಲಭೂತ ಕರ್ತವ್ಯಗಳನ್ನು ಅಲ್ಲ ಎಂಬ ಪರಿಕಲ್ಪನೆ ಇದೆ. ಇಲ್ಲಿ ನಾನೊಂದು ವ್ಯತ್ಯಾಸ ಮಾಡಿದೆ. ಈಗ ನಮಗೆ ವಾಕ್ ಸ್ವಾತಂತ್ರ್ಯ ಇದೆ. ನಾನು ಮಾತಾಡದೇ ಇದ್ದರೆ ಶಿಕ್ಷೆ ಇದೆಯಾ? ಇಲ್ಲ. ನಾನು ಮಾತಾಡುತ್ತೇನೆ ಅಂತ ಹೋದಾಗ ಯಾರಾದರೂ ಅದಕ್ಕೆ ಅಡ್ಡಿ ಪಡಿಸಿದರೆ ನಾನು ಸರಕಾರದ, ನ್ಯಾಯಾಲಯದ ನೆರವು ಕೇಳುತ್ತೇನೆ. ಆಗ ನೀವು ಆ ಹಕ್ಕನ್ನು ಚಲಾಯಿಸಬಹುದು. ಕರ್ತವ್ಯವೂ ಒಂದು ರೀತಿಯಲ್ಲಿ ಜಾರಿಗೆ ತರಲು ಯೋಗ್ಯವಾಗುತ್ತದೆ. ಅಂದರೆ ಹುಲಿಕಲ್ ನಟರಾಜ್ ಎಂಬ ಒಬ್ಬ ವ್ಯಕ್ತಿ ತನ್ನ ವೈಜ್ಞಾನಿಕ ಮನೋವೃತ್ತಿಯ ಕರ್ತವ್ಯವನ್ನು ನಿಭಾಯಿಸಲು ನೋಡುತ್ತಾರೆ, ಅದಕ್ಕೆ ಕೆಲವರು ಅಡ್ಡಿಪಡಿಸುತ್ತಾರೆ. ಇಲ್ಲಿ ಸರಕಾರ ಹುಲಿಕಲ್ ನಟರಾಜರಿಗೇ ಬೆಂಬಲ ನೀಡಬೇಕೇ ವಿನಾ ಅವರ ಮೇಲೆನೇ ಚಾರ್ಜ್ ಶೀಟ್ ಹಾಕಿದರೆ ಹೇಗೆ?

**ನ್ಯಾ. ದಾಸ್ :** ಮೊದಲನೆಯದಾಗಿ ಭಾರತ ಸಂವಿಧಾನವನ್ನು ಎಲ್ಲರೂ ಏಕೆ ಅರ್ಥ ಮಾಡಿಕೊಳ್ಳಬೇಕೆನ್ನೋ ಪ್ರಶ್ನೆ. ನೋಡಿ, ಈಗ ಸಂವಿಧಾನವನ್ನು ಉಲ್ಲಂಘನೆ ಮಾಡುವ ಶಕ್ತಿಗಳು ಬೆಳೀತಾ ಇವೆ. ಪಂಜಾಬದ ಒಬ್ಬ ಮಂತ್ರಿ 'ನಮಗೆ ಸಂವಿಧಾನಕ್ಕಿಂತ ಕುರಾನೇ ಶ್ರೇಷ್ಠ' ಅಂತಾನೆ, ಇನ್ನೊಬ್ಬ ಕೇಂದ್ರ ಮಂತ್ರಿ, 'ನಾವು ಅಧಿಕಾರಕ್ಕೆ ಬಂದಿರೋದೇ ಸಂವಿಧಾನವನ್ನು ಬದಲಾಯಿಸೋದಕ್ಕೆ' ಅಂತಾನೆ. ದೆಹಲಿಯ ಸಂಸದ್ ಮಾರ್ಗದಲ್ಲಿರೋ ಜಂತರ್ ಮಂತರ್‌ನಲ್ಲಿ ಕೆಲವು ಹುಡುಗರು ಹಾಡುಹಗಲೇ ಸಂವಿಧಾನವನ್ನು ಸುಟ್ಟುಹಾಕುತ್ತಾರೆ, ಸರಕಾರ ಈ ಕುರಿತು ಮೌನವಹಿಸುತ್ತೆ. ಇದು ಬಹಳ ಅಪಾಯಕಾರಿ. ನಾವು ಈಗಿರುವ ಸಂವಿಧಾನವನ್ನು ಕಳೆದುಕೊಂಡರೆ ನಮಗೇ ಕೇಡು. ಸಂವಿಧಾನವನ್ನು ವಿಮರ್ಶೆ ಮಾಡೋದು ತಪ್ಪಲ್ಲ. ಇನ್ನೂ ಸುಧಾರಣೆ ಅಗತ್ಯವಿರುವ ವಿಚಾರಗಳಲ್ಲಿ ತಿದ್ದುಪಡಿಗಳನ್ನು

ನ್ಯಾ. ನಾಗಮೋಹನ ದಾಸ್ ನೀಡಿದ ಹಲವಾರು ತೀರ್ಪುಗಳ ಒಂದು ಬಗೆಯ ಭಿನ್ನವಾದ ಮಾನವ ಸಂವೇದನೆ ಇದೆ, ವೈಜ್ಞಾನಿಕ ಮನೋವೃತ್ತಿ ಇದೆ, ನ್ಯಾಯದ ಸ್ಪಷ್ಟ ಪರಿಕಲ್ಪನೆ, ಅಷ್ಟೇ ನಿಸ್ಸಂದಿಗ್ಧ ನಿರೂಪಣೆ ಇದೆ. ೨೦೧೪ರಲ್ಲಿ ಅವರು ಉಚ್ಚ ನ್ಯಾಯಾಲಯದ ನ್ಯಾಯಾಧೀಶರ ಹುದ್ದೆಯಿಂದ ನಿವೃತ್ತಿ ಹೊಂದಿದ ನಂತರ ಸರ್ವೋಚ್ಚ ನ್ಯಾಯಾಲಯದಲ್ಲಿ ಹಿರಿಯ ವಕೀಲರಾಗಿ ಸೇವೆಯನ್ನು ಮುಂದುವರಿಸಿದ್ದಾರೆ. ಜೊತೆಗೆ, ಸಮಾಜವಾದ, ಕರ್ನಾಟಕದಲ್ಲಿ ನ್ಯಾಯಾಂಗ, ಅಸ್ಪೃಶ್ಯತೆ ಮತ್ತು ಕಾನೂನು, ಡಾ॥ ಅಂಬೇಡ್ಕರ್ ಮತ್ತು ಕಾರ್ಮಿಕ ಕಾನೂನು ಇತ್ಯಾದಿ ೧೧ಕ್ಕೂ ಹೆಚ್ಚು ಮಹತ್ವದ ಪುಸ್ತಕಗಳನ್ನು ಕನ್ನಡ ಮತ್ತು ಇಂಗ್ಲಿಷಿನಲ್ಲಿ ಬರೆದಿದ್ದಾರೆ. ಕಾನೂನು ಮತ್ತು ಭಾರತ ಸಂವಿಧಾನದ ಕುರಿತು ೧೦೦೦ಕ್ಕೂ ಹೆಚ್ಚು ಉಪನ್ಯಾಸಗಳನ್ನು ನೀಡಿ ವಿದ್ಯಾರ್ಥಿಗಳು, ಮಹಿಳೆಯರು, ದಲಿತರು, ವಕೀಲರು, ಶಿಕ್ಷಕರು, ಕಾರ್ಮಿಕರು ಇತ್ಯಾದಿ ವರ್ಗಗಳಲ್ಲಿ ಕಾನೂನು ಅರಿವನ್ನು ಮೂಡಿಸಿದ್ದಾರೆ. ಕರ್ನಾಟಕ ಉಚ್ಚನ್ಯಾಯಾಲಯದ ಕಾನೂನು ಸೇವೆಗಳ ಸಮಿತಿ, ಕಾನೂನು ಸೇವೆಗಳ ಪ್ರಾಧಿಕಾರದ ಸಾಮಾಜಿಕ ನ್ಯಾಯಸಮಿತಿ, ವಿಧಾನಸಭೆಯ ನೈಸ್ ಸದನ ಸಮಿತಿ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ಮಾರ್ಗಸೂಚಿ ಸಮಿತಿ ಇತ್ಯಾದಿ ಮಹತ್ವದ ಸಮಿತಿಗಳ ಅಧ್ಯಕ್ಷರು, ಪದಾಧಿಕಾರಿಗಳು, ಸಲಹಾಗಾರರಾಗಿ ಸೇವೆ ಸಲ್ಲಿಸಿದ್ದಾರೆ. ಇತ್ತೀಚೆಗೆ 'ಸಂವಿಧಾನ ಓದು' ಎಂಬ ಸರಳವಾದ ಗ್ರಂಥವನ್ನು ಪ್ರಕಟಿಸಿ, ಸಹಯಾನ ಮತ್ತು ಸಮುದಾಯ ಕರ್ನಾಟಕ ಸಂಘಟನೆಗಳ ಸಹಯೋಗದಲ್ಲಿ ಇಡೀ ರಾಜ್ಯದಲ್ಲಿ ಹೊಸ ಹುಮ್ಮಸ್ಸಿನಲ್ಲಿ ಸಂವಿಧಾನದ ಕುರಿತ ಜಾಗೃತಿ ಮೂಡಿಸುವಲ್ಲಿ ಅವಿರತವಾಗಿ ಶ್ರಮಿಸುತ್ತಿದ್ದಾರೆ. ಇದರ ಕುರಿತು ನಾವು ಕೇಳಿದೆವು.



ತರಬೇಕು ಅನ್ನೋದು ತಪ್ಪಲ್ಲ. ಜನಸಂಖ್ಯೆಯ ೪೯% ಭಾಗ ಇರುವ ಮಹಿಳೆಯರಿಗೆ ಶಾಸಕಾಂಗ ದಲ್ಲಿ ಮೀಸಲಾತಿ ಇರುವುದು ಕೇವಲ ೧೧.೫%, ಮಹಿಳೆಯರಿಗೆ ಹೆಚ್ಚಿನ ಪ್ರಾತಿನಿಧ್ಯಬೇಕು ಅನ್ನಿ. ಶಿಕ್ಷಣ, ಉದ್ಯೋಗ, ಆರೋಗ್ಯ, ಆಹಾರ, ವಸತಿ ಇವೆಲ್ಲವೂ ಮೂಲಭೂತ ಹಕ್ಕುಗಳಾಗಬೇಕು ಅನ್ನಿ. ಇಂಥ ತಿದ್ದುಪಡಿಗಾಗಿ ಜನಾಂದೋಲನ ಮಾಡಿ. ಅದನ್ನು ಬಿಟ್ಟು ಇರೋ ಸಂವಿಧಾನವನ್ನೇ ಸುಡಬೇಕು ಎಂದರೆ ಇದು ಅರಾಜಕತೆಯೇ ಸರಿ. ಯಾವುದನ್ನು ಆಧರಿಸಿ ನಮ್ಮನ್ನು ಆಳಿಕೊಳ್ಳುವ ಸಂಕಲ್ಪವನ್ನು ಭಾರತೀಯ ಜನತೆಯಾದ ನಾವು ಮಾಡಿದ್ದೇವೆಯೋ ಆ ಸಂವಿಧಾನದ ಪ್ರಾಥಮಿಕ ಪರಿಚಯವೂ ನಮ್ಮ ಜನರಿಗೆ ಇಲ್ಲದಿರುವುದೇ ಈ ದುರಂತಕ್ಕೆ ಕಾರಣ.

ಇವತ್ತು ಜಗತ್ತಿನ ೧೯೮ ರಾಷ್ಟ್ರಗಳ ಪೈಕಿ ೧೯೦ ರಾಷ್ಟ್ರಗಳು ತಮ್ಮದೇ ಆದ ಸಂವಿಧಾನವನ್ನು ಹೊಂದಿವೆ. ಸಂವಿಧಾನದ ಆಡಳಿತವನ್ನು ಜಗತ್ತಿನ ಜನ ಬಯಸುತ್ತಾ ಇದ್ದಾರೆ. ನಮಗೆ ಸ್ವಾತಂತ್ರ್ಯ ಬಂದು ೭೦ ವರ್ಷ ಆಯ್ತು, ಸಂವಿಧಾನ ಬಂದು ೬೮ ವರ್ಷ ಆಯ್ತು. ಈ ೬೮ ವರ್ಷದಲ್ಲಿ ಸಂವಿಧಾನವನ್ನು ಜನರಿಗೆ ತಿಳಿಸುವಂಥ ಕೆಲಸವನ್ನು ನಾವು ಮಾಡಲಿಲ್ಲ. ಹೀಗಾಗಿ ಶಿಕ್ಷಿತರಲ್ಲಿಯೂ ಸಂವಿಧಾನವನ್ನು ಅರಿತಿರುವವರು ಬಹಳ ಕಡಿಮೆ. ನಮ್ಮ ದೇಶದ ಜನಸಾಮಾನ್ಯರೂ ನಮ್ಮ ಸಂವಿಧಾನದ ಬಗ್ಗೆ ತಿಳಿದು ಕೊಳ್ಳಬೇಕಾಗಿದೆ, ಅರ್ಥಮಾಡಿಕೊಳ್ಳಬೇಕಾಗಿದೆ, ಅದರ ಆಶಯಗಳನ್ನು ಮೈಗೂಡಿಸಿಕೊಳ್ಳಬೇಕಾಗಿದೆ ಮತ್ತು ಅದರಂತೆ ನಡೆದುಕೊಳ್ಳಬೇಕಾಗಿದೆ.

ನನ್ನದೇ ಉದಾಹರಣೆ ತೆಗೆದುಕೊಳ್ಳಿ. ನಾನು ಮಧ್ಯಮ ವರ್ಗದ ಕೃಷಿ ಕುಟುಂಬದಲ್ಲಿ ಹುಟ್ಟಿದ್ದು, ನಮ್ಮೂರಿನ ಸರಕಾರಿ ಕನ್ನಡ ಮಾಧ್ಯಮ ಶಾಲೆಯಲ್ಲೇ ನಾನು ಓದಿದ್ದು. ಬೆಂಗಳೂರಿಗೆ ಬಂದು ಲಾ ಓದಿದ್ದು. ೨೬ ವರ್ಷಗಳ ಕಾಲ ನಾನು ಲಾ ಪ್ರಾಕ್ಟೀಸ್ ಮಾಡಿದ್ದು, ೧೦ ವರ್ಷಗಳ ಕಾಲ ನಾನು ನ್ಯಾಯಾಧೀಶ ಆಗಿದ್ದು. ರಿಟೈರ್ ಆದನಂತರ ನಾಲ್ಕು ವರ್ಷ ಸುಪ್ರೀಂ ಕೋರ್ಟಿನಲ್ಲಿ ಡೆಸಿಗ್ನೇಟೆಡ್ ಸೀನಿಯರ್ ಕೌನ್ಸಿಲ್ ಆಗಿ ಕೆಲಸ ಮಾಡಿದ್ದು, ಇದೆಲ್ಲಾ ಸಾಧ್ಯವಾಗಿದ್ದು ಸಂವಿಧಾನವು ನನಗೆ ಒದಗಿಸಿಕೊಟ್ಟ ಹಕ್ಕುಗಳಿಂದಾಗಿ, ಅವಕಾಶಗಳ ದೆಸೆಯಿಂದಾಗಿ. ಇವತ್ತೇನಾದರೂ ನಮ್ಮ ದೇಶದಲ್ಲಿ ಗಂಭೀರವಾದ ಆರ್ಥಿಕ, ರಾಜಕೀಯ, ಸಾಮಾಜಿಕ ಸಮಸ್ಯೆಗಳಿವೆ ಅನ್ನೋದಾದರೆ ಇವೆಲ್ಲಕ್ಕೂ ಸಂವಿಧಾನವನ್ನು ನಾವು ಅರ್ಥಮಾಡಿಕೊಂಡು ಸರಿಯಾಗಿ ಅನುಷ್ಠಾನ ಮಾಡದೇ ಇರುವುದೇ ಕಾರಣ, ನಾವು ಕಾರಣ. ನಾವು ಸಂವಿಧಾನವನ್ನು ಉಳಿಸಿಕೊಂಡರೆ ನಮ್ಮ ಸಮಸ್ಯೆಗಳನ್ನು ಬಗೆಹರಿಸ ಬಹುದು, ದೇಶ ಎದುರಿಸುತ್ತಿರೋ ಸವಾಲುಗಳನ್ನು ಹಿಮ್ಮೆಟ್ಟಿಸಬಹುದು. ಆದ್ದರಿಂದ ಸಂವಿಧಾನವನ್ನು ಎಲ್ಲಾ ವರ್ಗದ ಜನರಿಗೆ ಅರ್ಥ ಮಾಡಿಸುವ ಅಭಿಯಾನಕ್ಕೆ ನಾನು ಚಾಲನೆ ಕೊಟ್ಟಿದ್ದು.

ಇನ್ನು ಈ ಶಿಬಿರಗಳ ಕಾರ್ಯತಂತ್ರ ಹೇಗಿರ

# ನಿತ್ಯ ಪಯಣ



೧

ಅವರೊಬ್ಬೊಬ್ಬರು ಹೋದರು ಹಾಗೇ, ಬದುಕಿನ
ಬದಿಬದಿಗೆ. ಯಾವುದೊ ಗಿಡಬಳ್ಳಿಯ ನೆಟ್ಟರು
ಹೂತಿಟ್ಟರು ಸುಖ–ದುಃಖವನೊಳಗೊಳಗೇ. ಮನ–
ದಾಳದ ಮುತ್ತು: ಹೊಳೆಯದೆ ಒಳಗೇ ಇಟ್ಟವರು.

ಸುತ್ತಲು ಗುಡ್ಡಗಳೇರಿಳಿದು ಒಜ್ಜೆಯ ಹೊತ್ತು
ಕಲ್ಲಿಗೆ ಮುಳ್ಳಿಗೆ ತಾಗಿ, ಹಳ್ಳಿಗೆ ಸಾಗಿದರು.
ಸೋರುವ ಮಣ್ಣಿನ ಮನೆ ಮೆತ್ತಿ, ಹೊತ್ತಿಸಿ ಚಿಮಣಿ
ರೊಟ್ಟಿಗೆ ಹಂಚಿಟ್ಟರು, ಕೂಗಿತ್ತು ಹಿಟ್ಟಿನ ಗಿರಣಿ.

ಹಗಲು : ಎತ್ತಿಗೆ ಹೆಗಲು, ಹೊಲದುದ್ದಕು ನೇಗಿಲು.
ಪಾಟಿ–ಪುಸ್ತಕ–ಶಾಲೆ, ಮಗ್ಗಿ ವಾಚನಮಾಲೆ,
ಹಬ್ಬ–ಹುಣ್ಣಿವೆ ವೆಚ್ಚ, ಸುಗ್ಗಿ ಹಿಗ್ಗಿನ ಗುಚ್ಛ
ದೊಡ್ಡಾಟ : ಕತ್ತಿ, ಕಿರೀಟ; 'ಹೇದೇವಾ' ಮದ್ದಳೆ.

ಈ ನೆನಪಿನ ಗಡಿದಾಟಿ, ಕವಲೊಡೆದವು ದಾರಿ
ಚಕ್ಕಡಿ ಇಳಿಯುತ್ತ ರಭಸದ ರೈಲನ್ನೇರಿ.

೨

ನಿಲ್ದಾಣಗಳೂ ಬೇರೆ–ಗುರುತಿಸಿ ಇಳಿದವರು
ದಾರಿಗೆ ಹತ್ತಿ, ಅಲ್ಲಲ್ಲಿಗೆ ಬಾಳಿನ ಬೇರು
ಮೆಲ್ಲಗೆ ನೆಲಕಿಳಿದವು ಹೀರುತ ಹೊಸ ನೀರು.
ಸ್ನೇಹದ ಕುಡಿ ಚಾಚುತ ಕಂಗೊಳಿಸಿತು ಹಸಿರು.

ಆನೆಗೆ ಆನೆಯ ಭಾರ ಇರುವೆಗೆ ಇರುವುದು
ಸಂಸಾರ. ಬೇಸಿಗೆಯಲಿ ಕೂಡಿಸಿ ಕಾಳು–ಕಡಿ
ಮಳೆಗಾಲಕೆ ಈಡು. ತುಂಬಿದ ಕೆರೆ ದಂಡೆಗೆ
ಕೊಂಬೆಗೆ ಪಕ್ಷಿಯ ಗೂಡು; ತಕ್ಕಡಿ ಸಮತರಡಿ.

ಸ್ವಭಾವದ ಸಂತುಷ್ಟಿಗೆ ಸಂಕಷ್ಟದ ಕಾವು
ಇಷ್ಟಾನಿಷ್ಟವ ಕರಗಿಸಿ ಸೃಷ್ಟಿಗು ತುಸು ನೋವು.
ತೂಗಾಟ, ತೇಕಾಟವೊ ನೀಗದ ಜಂಜಾಟ.
ಬಾಗಿದ ಗೊನೆ ಮಾಗಿಸಿದೆ ಬೇಲಿಯ ಒಳತೋಟ.

ಒಂದೆಡೆ ನೆಲಸಿದ್ದರು ನಿತ್ಯವು ಜೀವಕೆ ಪಯಣ
ಇದ್ದುದನಿಲ್ಲೇ ಒಗೆವುದು, ತೀರದು ಎಲ್ಲ ಋಣ.

**ನಾಡೋಜ ಡಾ. ಚೆನ್ನವೀರ ಕಣವಿ**
'ಚೆಂಬೆಳಕು', ೯ನೇ ಅಡ್ಡರಸ್ತೆ, ಕಲ್ಯಾಣ ನಗರ, ಧಾರವಾಡ – ೫೮೦ ೦೦೭



*ಸಂದರ್ಶಕರೊಂದಿಗೆ ನ್ಯಾಯಮೂರ್ತಿ ಎಚ್. ಎನ್. ನಾಗಮೋಹನ ದಾಸ್*

ಬೇಕು ಎನ್ನುವ ಪ್ರಶ್ನೆ. ನೋಡಿ, ಭಾರತದ ಸಂವಿಧಾನ ಒಂದು ಕಥೆ, ಕಾದಂಬರಿ, ಕಾವ್ಯ ಅಲ್ಲ. ಹಾಗಾಗಿ ಯಾವುದೇ ಭಾಷೆಯಲ್ಲಿ ಹತ್ತು ಸಲ ಓದಿದರೂ ಅಷ್ಟು ಸುಲಭವಾಗಿ ಅರ್ಥವಾಗುವುದಿಲ್ಲ. ಅದನ್ನು ಅರ್ಥ ಮಾಡಿಕೊಳ್ಳುವುದಕ್ಕೆ ಏನು ವಿಧಾನ ಅನುಸರಿಸಬೇಕು ಅನ್ನೋದನ್ನು ನಾವು ಆಲೋಚಿಸಬೇಕು. ನನ್ನ ಸಂವಿಧಾನ ಓದು ಪುಸ್ತಕದಲ್ಲಿ, ಮತ್ತು ಅಭಿಯಾನದಲ್ಲಿ ಇದನ್ನೇ ಹೇಳುತ್ತಾ ಬಂದಿದ್ದೀನಿ. ನನ್ನ ಮೊದಲ ತತ್ವ ಏನೂಂದ್ರೆ, ಮೊದಲು ನಾವು ಭಾರತ ದೇಶವನ್ನು ಅರ್ಥ ಮಾಡಿಕೊಳ್ಳದೇ ಹೋದರೆ ಭಾರತದ ಸಂವಿಧಾನ ಅರ್ಥವಾಗಲ್ಲ. ತೆಲುಗಿನ ಸಮಾಜ ಸುಧಾರಕ ಮಹಾಕವಿ ವೆಂಕಟ ಅಪ್ಪಾರಾವ್ ಗುರಜಾಡ ಎನ್ನುವವರು, 'ದೇಶಮಂಟೆ ಮಟ್ಟಿ ಕಾದು, ದೇಶಮಂಟೆ ಮನುಷಲು' (ದೇಶವೆಂದರೆ ಮಣ್ಣಲ್ಲ, ದೇಶವೆಂದರೆ ಮಂದಿ) ಎನ್ನುತ್ತಾರೆ. ಆದ್ದರಿಂದ ಭಾರತವನ್ನು ಅರ್ಥ ಮಾಡಿಕೊಳ್ಳಲು ಭಾರತದ ಜನರ ಇತಿಹಾಸವನ್ನು ಅರ್ಥ ಮಾಡಿಕೊಳ್ಳಬೇಕು. ನಮ್ಮ ಮೂಲ ಯಾವುದು, ಸಾಮಾಜಿಕ, ಆರ್ಥಿಕ, ರಾಜಕೀಯ ಸಂಬಂಧಗಳೇನು, ಇಲ್ಲಿನ ಧರ್ಮಗಳು, ಜಾತಿಗಳು, ಮೌಲ್ಯಗಳನ್ನು ಅರ್ಥ ಮಾಡಿಕೊಳ್ಳಬೇಕು. ನಮ್ಮ ದೇಶದ ಜನ ಐತಿಹಾಸಿಕವಾಗಿ ಅನುಭವಿಸುತ್ತಾ ಬಂದಿರುವ ಸಾಮಂತಶಾಹಿ, ವಸಾಹತುಶಾಹಿ ವ್ಯವಸ್ಥೆಗಳನ್ನು ಅರ್ಥ ಮಾಡಿಕೊಳ್ಳದೇ ಇವತ್ತು ನಾವು ಜಾರಿಗೆ ತಂದಿರುವ ಜನಸತ್ತಾತ್ಮಕ ವ್ಯವಸ್ಥೆ ಹೇಗೆ ಅರ್ಥವಾಗುತ್ತೆ ನಿಮಗೆ? ಅದಕ್ಕೆ ನನ್ನ ಪುಸ್ತಕದಲ್ಲಿ ನಮ್ಮ ದೇಶದ ಐತಿಹಾಸಿಕ ಹಿನ್ನೆಲೆಯನ್ನು ಸಂಕ್ಷಿಪ್ತವಾಗಿ ಬರೆದಿದ್ದೇನೆ. ನಂತರ ಸಂವಿಧಾನದ ಪರಿಚಯಕ್ಕೆ ಹೋಗುತ್ತೇನೆ.

ಸರಳವಾದ ಒಂದು ಪುಸ್ತಕ ಇದೆ, 'ಸಂವಿಧಾನ ಓದು' ಅಂತ. ಪಿಪಿಟಿ, ಸಂವಾದದ ಮೂಲಕ ಶಿಬಿರಗಳನ್ನು ನಡೆಸುತ್ತೇವೆ. ನೂರಾರು ಯುವಜನ, ಮುಖ್ಯವಾಗಿ ಕಾಲೇಜು ವಿದ್ಯಾರ್ಥಿಗಳು ಇದರ ಪ್ರಯೋಜನ ಪಡೆಯುತ್ತಿದ್ದಾರೆ. ಇತ್ತೀಚೆಗೆ ಕಾಲೇಜು ಪಠ್ಯಕ್ರಮದಲ್ಲಿ ಸಂವಿಧಾನದ ಕುರಿತು ಒಂದು ಪೇಪರ್ ಅನ್ನು ಇಟ್ಟಿದ್ದಾರೆ. ಆದರೆ ಇದು ನಾಮಕಾವಾಸ್ತೆ ಎನ್ನುವಂತಾಗಿದೆ. ಆದ್ದರಿಂದ ಹೊರಗಿನಿಂದಲೇ ಈ ಜಾಗೃತಿಯ ಕೆಲಸವನ್ನು ಎಷ್ಟು ವ್ಯಾಪಕವಾಗಿ ಮಾಡಿದರೂ ಸಾಲದು. ನಾವು ಕಾಲೇಜು ವಿದ್ಯಾರ್ಥಿಗಳಲ್ಲದೇ ಎಲ್ಲ ಬಗೆಯ ಯುವಜನರು, ಮಕ್ಕಳು, ಮಹಿಳೆಯರು, ಕಾರ್ಮಿಕರು, ರೈತರು, ವ್ಯಾಪಾರಿಗಳು, ಎಸ್‌ಎಚ್‌ಜಿ, ಎನ್‌ಜಿಓ ಇತ್ಯಾದಿಗಳ ಕಾರ್ಯಕರ್ತರು ಎಲ್ಲರನ್ನೂ ತಲುಪುವ ಕೆಲಸ ಆಗಬೇಕು. ಆಯಾ ವರ್ಗಗಳ ಹಿನ್ನೆಲೆ, ಅಗತ್ಯ, ಗ್ರಹಿಕೆ ಕೌಶಲ ಇತ್ಯಾದಿಗಳಿಗೆ ಅನುಗುಣವಾಗಿ ಇದೇ ಸಂವಿಧಾನ ಜಾಗೃತಿ ಶಿಬಿರಗಳನ್ನು ಬೇರೆ ಬೇರೆ ತರಹ ರೂಪಿಸಿ ನಡೆಸಬೇಕು.

ಲೇಖನ ಸಿದ್ಧಪಡಿಸಿದವರು : **ಎಂ. ಅಬ್ದುಲ್ ರೆಹಮಾನ್ ಪಾಷ**
'ನಮ್ಮನೆ', ನಂ. ೮೧/೩೭-೩, ೪ನೇ ಅಡ್ಡರಸ್ತೆ, ೧೨ನೇ 'ಡಿ' ಮುಖ್ಯರಸ್ತೆ
ಶಿವನಗರ, ಬೆಂಗಳೂರು – ೫೬೦ ೦೧೦

ದಿನದೂಟಕ್ಕೆ ಪರದಾಡುವವರು ಇರುವ ಸಮಾಜದಲ್ಲಿ, ಉಣ್ಣುವ ವಿಷಯ ಯಾಕೆ ಸಮಸ್ಯೆಯಾಗಿದೆ? ಆಹಾರ ಸೇವನೆ ನಿಜವಾಗಿ ಸಮಸ್ಯೆಯೊ ಅದನ್ನೊಂದು ಸಮಸ್ಯೆಯನ್ನಾಗಿ ಮಾಡಲಾಗಿದೆಯೊ? ನಿಜ, ಆಹಾರದ ವಿಷಯದಲ್ಲಿ ಜಗತ್ತಿನ ಎಲ್ಲ ಸಮಾಜಗಳಲ್ಲಿ ವಿಧಿನಿಷೇಧಗಳಿವೆ. ಅವು ಜಗಳಕ್ಕೂ ಸಾಮರಸ್ಯಕ್ಕೂ ತಮಾಷೆಗೂ ಕಾರಣವಾಗಿವೆ. ಪ್ರಾಣಿ, ಪಕ್ಷಿ, ಕೀಟ ಜಗತ್ತಿನಲ್ಲಿ ಬದುಕುಳಿಯಲು ಅಗತ್ಯವಾಗಿರುವ ಗಾಳಿ ನೀರುಗಳಂತೆ ಆಹಾರವು ಪ್ರವೃತ್ತಿಗೆ ಸಂಬಂಧಪಟ್ಟಿದೆ. ಆದರೆ ಮಾನವ ಸಮಾಜದಲ್ಲಿ ಆಹಾರ ತಯಾರಿಕೆ, ಬಡಿಸುವಿಕೆ, ಸೇವನೆ ಕೇವಲ ಹಸಿವನ್ನು ತಣಿಸುವ ಪ್ರವೃತ್ತಿಯ ಸಂಗತಿಯಲ್ಲ. ಸಾಮಾಜಿಕ ಭೇದಭಾವದ, ಸಾಂಸ್ಕೃತಿಕ ಸಭ್ಯತೆಗಳ, ವೈಯಕ್ತಿಕ ಮಾನಾಪಮಾನದ, ಧಾರ್ಮಿಕ ಪವಿತ್ರ ಅಪವಿತ್ರೀಕರಣದ, ಲಿಂಗ ತಾರತಮ್ಯದ, ಸಂತೋಷ ಪ್ರೀತಿ ಅಪಮಾನ ದುಃಖಗಳ ಭಾಗವೂ ಹೌದು. ಸಹಸ್ರಾರು ವರ್ಷಗಳಿಂದ ನಡೆದಿರುವ ಸೃಜನಶೀಲ ಪ್ರಯೋಗಗಳಿಂದ ಕೂಡಿರುವ ಆಹಾರವು, ಕೃಷಿಪದ್ಧತಿ, ಭೌಗೋಳಿಕ ವ್ಯತ್ಯಾಸ, ಜಾತಿ-ಧರ್ಮ, ಸಂಪ್ರದಾಯ, ದೈವಿಕ ಆರಾಧನೆಗಳ ಜತೆಗೆ ಸಂಬಂಧ ಹೊಂದಿದೆ.



# ಆಹಾರ ಲೋಕದ ಕೋಲಾಹಲ

**ರಹಮತ್ ತರೀಕೆರೆ**

**ಭಾ**ರತದ ಪ್ರತಿ ರಾಜ್ಯದಲ್ಲಿರುವಂತೆ ಕರ್ನಾಟಕದ ಆಹಾರ ಪದ್ಧತಿಯೂ ಪ್ರಾದೇಶಿಕ ವಿಶಿಷ್ಟತೆಯನ್ನು ಹೊಂದಿದೆ. ಹಾಗೆಂದು ಇಡೀ ನಾಡಿಗೆ ಏಕರೂಪಿ ಆಹಾರವಿಲ್ಲ. ಕುಚ್ಚುಲಕ್ಕಿ ಅನ್ನ, ಮೀನಿನ ಸಾರು ಕರಾವಳಿಯ ವಿಶೇಷತೆಯಾದರೆ, ಜೋಳದ ರೊಟ್ಟಿ ಬದನೆ ಪಲ್ಲೆಯ ಬೀದರ್, ಗುಲಬರ್ಗದ ಜನರಿಗಿದು ಅಪರಿಚಿತ. ಮುದ್ದೆಯೂಟದ ಹಳೇಮೈಸೂರು ಭಾಗಕ್ಕೆ ಇವೆರಡೂ ಹೊಸವು. ಭಾಷೆಯ ರೂಪದ ಹಾಗೆ ಆಹಾರ ಸಂಸ್ಕೃತಿಯು ಭಾಷೆಯಂತೆ ಪ್ರತಿ ೫೦ ಕಿ.ಮಿ.ಗೂ ಬದಲಾಗುತ್ತದೆ. ಹೀಗೆ ಕರ್ನಾಟಕ ಆಹಾರ ಸಂಸ್ಕೃತಿಯು, ಮುಖ್ಯ ಧಾನ್ಯಗಳಾದ ರಾಗಿ, ಜೋಳ, ಅಕ್ಕಿಗಳ ಸುತ್ತ ರೂಪುಗೊಂಡಿದೆ. ರಾಗಿ, ಜೋಳ, ಅಕ್ಕಿಗಳು ಸೃಷ್ಟಿಸಿರುವ ಬಹುರೂಪಿ ತಿನಿಸುಗಳು ಸೋಜಿಗ ಬರಿಸುತ್ತವೆ.

ದಕ್ಷಿಣ ಕರ್ನಾಟಕದಲ್ಲಿ ರಾಗಿಯಲ್ಲಿ ರೊಟ್ಟಿ ಮತ್ತು ಅಂಬಲಿ ಮಾಡಿದರೂ ಅದರ ಅತ್ಯುತ್ಕೃಷ್ಟ ಸೃಷ್ಟಿ ಮುದ್ದೆ. ರಾಗಿಯನ್ನು ನಿರ್ದಿಷ್ಟ ಹದದಲ್ಲಿ ಹಿಟ್ಟು ಮಾಡಿ, ಅದನ್ನು ಕೊಟ್ರೆ ಕುದಿವಾಗ ಹಾಕಿ, ಹದವಾಗಿ ಬೇಯಿಸಿ, ಬಿಸಿಯಾಗಿರುವಾಗಲೇ ಉಂಡೆ ಕಟ್ಟುವುದು ಸರಳ ಕೆಲಸವಲ್ಲ. ಅದನ್ನು ಸಾರಿನಲ್ಲಿ ಉರುಳಾಡಿಸಿ ನುಂಗಬೇಕು. ಗಜನಿಂಬೆಗಾತ್ರದಲ್ಲಿ ತುತ್ತು ಮುರಿದು, ಗಂಟಲಲ್ಲಿ ಸಿಕ್ಕಿಕೊಳ್ಳಬಹುದು ಎಂದು ನೋಡುವಷ್ಟರಲ್ಲೇ ಸಲೀಸಾಗಿ ಒಳಗೆ ಕಳಿಸುವರು. ಮುದ್ದೆಗೆ ತಕ್ಕ ಸಾರುಗಳೆಂದರೆ ಅವರೆಕಾಳು, ಸೊಪ್ಪು, ಮೀನು ಹಾಗೂ ಕೋಳಿಸಾರು. ಬೆಂಗಳೂರಿನಲ್ಲಿ ಕೋಳಿಸಾರು ಮುದ್ದೆ ದೊರೆಯುತ್ತದೆ ಎಂಬ ಬೋರ್ಡುಳ್ಳ ಹೋಟೆಲುಗಳು ರಾರಾಜಿಸುತ್ತಿವೆ. ಮೈಸೂರು ಮಂಡ್ಯಗಳ ರಸ್ತೆಬದಿ ಹೋಟೆಲುಗಳಲ್ಲಿ ಕಡಿಮೆ ಬೆಲೆಗೆ ಸೊಪ್ಸಾರು ಮುದ್ದೆ ಊಟ ಸಿಗುತ್ತದೆ. ರಾಗಿಮುದ್ದೆಯನ್ನು ಬಂದವರಿಗೆ ಮುರಿದು ಬಡಿಸುತ್ತ ಆ ಊಟಕ್ಕೊಂದು ತಾಯ್ತನ ತುಂಬಿದವರು ಗಾಂಧಿನಗರದ ಸಿದ್ಧಪ್ಪನವರ ಹೋಟೆಲು.

ಈಚಿನವರೆಗೂ ರಾಗಿಯ ಮುದ್ದೆ-ರೊಟ್ಟಿಗಳು ಬಡವರ ಆಹಾರವಾಗಿದ್ದವು. ಶಾಲಾ ದಿನಗಳಲ್ಲಿ ಮಧ್ಯಾಹ್ನದ ಊಟಕ್ಕೆಂದು ಒಯ್ಯುತ್ತಿದ್ದ ರಾಗಿಯ ಮುದ್ದೆ-ರೊಟ್ಟಿಗಳನ್ನು ಗೆಳೆಯರ ಮುಂದೆ ಬಿಚ್ಚಿ ತಿನ್ನಲು ಸಂಕೋಚಪಟ್ಟು ಒಬ್ಬರೇ ತಿನ್ನುತ್ತಿದ್ದೆವು. ಸಾಧ್ಯವಾದಷ್ಟೂ ಮನೆಯಲ್ಲೆ ಮುದ್ದೆ ತಿಂದು ಮಧ್ಯಾಹ್ನಕ್ಕೆ ಅನ್ನ ಒಯ್ಯುತ್ತಿದ್ದೆವು. ಮುದ್ದೆ ನಿತ್ಯದೂಟ. ವಿಶೇಷ ಸನ್ನಿವೇಶಗಳಿಗಲ್ಲ. ಹಬ್ಬ ಬಂದಾಗ ಮಾತ್ರ ಅನ್ನ ಕಾಣುತ್ತಿತ್ತು. ಆಗಿನ್ನೂ ನೀರಾವರಿ ಪದ್ಧತಿ ಹರಡಿಕೊಂಡು ಅಕ್ಕಿ ದೊಡ್ಡ ಪ್ರಮಾಣದಲ್ಲಿ ಉತ್ಪಾದನೆ ಆಗುತ್ತಿರಲಿಲ್ಲ. ತರತಮ ಮನೋಭಾವ ಹಾಸುಹೊಕ್ಕಾಗಿರುವ ಸಮಾಜದಲ್ಲಿ ಪ್ರಾಣಿ, ಸಸ್ಯ, ಮನುಷ್ಯರ ಹಾಗೆ ಆಹಾರವೂ ಶ್ರೇಣೀಕರಣಗೊಂಡಿದೆ. ಅನ್ನದ ಬಿಳುಪಿಗೆ ಹೋಲಿಸಿದರೆ, ಮುದ್ದೆ ಕಪ್ಪಾಗಿರುವುದು ಕೂಡ ಈ ವರ್ಣಭೇದಕ್ಕೆ ಕಾರಣವಾಗಿದ್ದಿರಬಹುದು. ರಾಗಿ-ಅಕ್ಕಿಗಳ ನಡುವಣ ತಾರತಮ್ಯವನ್ನೇ ವಸ್ತುವಾಗಿಟ್ಟುಕೊಂಡು ಕನಕದಾಸರು 'ರಾಮಧಾನ್ಯ ಚರಿತೆ' ಕಾವ್ಯ ರಚಿಸಿದ್ದು ನಮಗೆ ನಮ್ಮದೇ ಆತ್ಮಕತೆಯಾಗಿತ್ತು. ರಾಗಿಯ ಗೆಲುವು ಕಾವ್ಯಸತ್ಯವಲ್ಲ. ವಾಸ್ತವಿಕ ಕೂಡ. ಈಗಲೂ ರಾಗಿ ಕಡಿಮೆ ಮಳೆ ಬೀಳುವ ಪ್ರದೇಶದಲ್ಲಿ ಹೆಚ್ಚು ಉಪಚಾರವಿಲ್ಲದೆ ಬೆಳೆಯುವ ಧಾನ್ಯ. ಅದಕ್ಕೆ ಹುಳು ಹಿಡಿಯುವುದಿಲ್ಲ. ಕನಕದಾಸರ ರಾಗಿಯ ಕಥನದ ಹಿಂದೆ ಅವರು ಮೇಲ್ಜಾತಿಯ ಜನರ ಒಡನಾಡಿರುವಾಗ ಪಟ್ಟಿರುವ ಅಪಮಾನದ ನೆನಪುಗಳಿರಬಹುದು. ಆಹಾರದ ಬಗೆಗಿನ ಸಾಮಾಜಿಕ ಮನೋಭಾವದಿಂದ ಅಕ್ಕಿ ಕುರಿತಷ್ಟು ನಡೆದ ಸಂಶೋಧನೆಗಳು ರಾಗಿ ಜೋಳ ಕುರಿತು ನಡೆಯಲಿಲ್ಲ. ಅನೇಕ ರಾಗಿ – ತಳಿಗಳೇ ನಾಶವಾಗುತ್ತಿವೆ ಎಂದು ಕೆಲವರು ಆತಂಕಿತರಾಗಿದ್ದಾರೆ. ರಾಗಿ ಲಕ್ಷ್ಮಣಯ್ಯ ಎಂಬ ಕೃಷಿವಿಜ್ಞಾನಿ ಆಫ್ರಿಕಾದ ರಾಗಿ ತಳಿಯ ಜತೆ ಸ್ಥಳೀಯ ರಾಗಿಯನ್ನು ಬೆರೆಸಿ ಸಂಶೋಧನೆ ಮಾಡಿದ್ದುಂಟು. ಜನರನ್ನು ಕೊಲ್ಲುವ ಅಸ್ತ್ರ ಕಂಡುಹಿಡಿಯುವವರು ಪಡೆವ ಕೀರ್ತಿಯನ್ನು ಆಹಾರ



ಔಷಧಿ ಮೇಲೆ ಸಂಶೋಧನೆ ಮಾಡುವವರು ಪಡೆಯುವುದಿಲ್ಲ.

ಇಂತಹ ರಾಗಿಮುದ್ದೆಗೆ ಮಾನ್ಯತೆ ದೊರೆಯಲು ದೇವೇಗೌಡರು ಹಾಗೂ ಸಕ್ಕರೆ ಕಾಯಿಲೆ ಕಾರಣ. ಗೌಡರು ಪ್ರಧಾನಿಯಾಗಿ ದೆಹಲಿಗೆ ಹೋಗುವಾಗ, ಜತೆಯಲ್ಲಿ ರಾಗಿಮುದ್ದೆ ಮತ್ತು ಸೊಪ್ಪುಸಾರು ಮಾಡುವ ಅಡಿಗೆಯವನನ್ನು ವಿಮಾನದಲ್ಲಿ ಕರೆದೊಯ್ದುರು. ಅವನು ಕವೆಕೋಲನ್ನೂ ತೆಳ್ಳನೆಯ ಕ್ರಿಕೆಟ್ ಬ್ಯಾಟಿನಂತಿರುವ ಮುದ್ದೆಕೋಲನ್ನು ವಿಮಾನದಲ್ಲಿ ಒಯ್ಯುವಾಗ ಭದ್ರತಾ ಸಿಬ್ಬಂದಿಯವರು ತಡೆದರೆಂದೂ, ಪ್ರಧಾನಮಂತ್ರಿಯ ಕಡೆಯವನೆಂದು ಬಿಟ್ಟರೆಂದೂ ಸುದ್ದಿ ಹಬ್ಬಿತ್ತು. ಕಡಿಮೆ ಸಕ್ಕರೆ ಅಂಶವಿದೆಯೆಂದು ರಾಗಿ ಸಿರಿವಂತರಿಗೂ ಆಹಾರವಾಗುತ್ತಿದೆ. ಪ್ರತಿಷ್ಠಿತ ಹೋಟೆಲುಗಳಲ್ಲಿ ರಾಗಿಯ ಸೇವಿಗೆ, ಬಿಸ್ಕತ್ತು, ದೋಸೆಗಳು ಬರುತ್ತಿವೆ. ಆದರೂ ಸ್ಟಾರ್ ಹೋಟೆಲುಗಳಲ್ಲಿ ರಾಗಿ ಪ್ರವೇಶ ಪಡೆಯುವಲ್ಲಿ ವಿಫಲವಾಗಿದೆ. ಆದರೆ ಮಾಂಸಾಹಾರದ ಜಾತ್ರೆಗಳಲ್ಲಿ ರಾಗಿಮುದ್ದೆಯ ಗೌರವದ ಸ್ಥಾನ ಅಚಲ. ಬೀಗರೂಟಗಳಲ್ಲೂ ರಾಗಿಮುದ್ದೆಗಾಗಿ ಬೇಡಿಕೆ ಹೆಚ್ಚುತ್ತಿದೆ. ಕಾರಣ, ಬಾಡಿನ ಸಾರು.

ರಾಗಿಯಂತೆ ಜೋಳವು ಉತ್ತರ ಕರ್ನಾಟಕದ ಪ್ರಮುಖ ಆಹಾರ ಧಾನ್ಯ. ಅನ್ನದ ಋಣ ಎಂಬರ್ಥದಲ್ಲಿರುವ ಜೋಳದಪಾಳಿಯಲ್ಲಿ ಈ ಧಾನ್ಯದ ಉಲ್ಲೇಖವಿದೆ. ಈಗಲೂ ತುಂಗಭದ್ರೆಯ ಉತ್ತರದ ಮುಖ್ಯ ಬೆಳೆ ಜೋಳವೇ. ಜೋಳದಲ್ಲಿ ಕಿಚಡಿ ನುಚ್ಚಂಬಲಿ ಹಪ್ಪಳ ಮಾಡಲಾಗುತ್ತದೆ. ಜೋಳದ ನುಚ್ಚನ್ನು ಹುಳಿಮಜ್ಜಿಗೆಯಲ್ಲಿ ಎರಡು ದಿನವಿಟ್ಟು ನೆನೆಸಿಟ್ಟು ತಿನ್ನುವ ನುಚ್ಚಂಬಲಿ ಸರಳವಾದ ಉತ್ಕೃಷ್ಟ ಆಹಾರ. ನಾನಿದನ್ನು ಸಿದ್ಧನಕೊಳ್ಳದ ಒಂದು ಮಠದಲ್ಲಿ ಸೇವಿಸಿದೆ. ಜೋಳದ ಪ್ರಧಾನ ರೂಪವೆಂದರೆ ರೊಟ್ಟಿ. ಮುದ್ದೆ ಬಹುರೂಪಿ ಸಾರುಗಳ ಶೋಧಕ್ಕೆ ಕಾರಣವಾಗಿರುವಂತೆ, ರೊಟ್ಟಿಯು ಬಹುರೂಪಿ ಪಲ್ಯಗಳಿಗೆ ಕಾರಣವಾಗಿದೆ. ಬದನೆ, ಜವಳಿ ಕಾಳುಗಳ ಪಲ್ಯಗಳೂ, ಬಗೆಬಗೆಯ ಚಟ್ನಿಗಳು, ಶೇಂಗಾಹಿಂಡಿ, ಹುಚ್ಚೆಳ್ಳುಪುಡಿ, ಮೊಸರು, ಮೆಂತೆಸೊಪ್ಪು-ಸೌತೆಕಾಯಿ ನೀರುಳ್ಳಿಗಳ ಸಲಾಡು, ಅದನ್ನು ಸಮೃದ್ಧಗೊಳಿಸಿವೆ. ರೊಟ್ಟಿಯೂಟಕ್ಕಾಗಿ ಲಿಂಗಾಯತ ಖಾನಾವಳಿಗಳು ಖ್ಯಾತವಾಗಿವೆ. ನಾನು ಶ್ರೇಷ್ಠರೊಟ್ಟಿ ಊಟವನ್ನು ಸವದತ್ತಿ ನರಗುಂದ ಅಕ್ಕಲಕೋಟೆ ಧಾರವಾಡ ಹುಬ್ಬಳ್ಳಿಗಳಲ್ಲಿ ಸವಿದಿರುವೆ. ಅಕ್ಕಲಕೋಟೆಯ ಖಾನಾವಳಿಯಲ್ಲಿ ದೊಡ್ಡತಾಟಿಗೆ ರೇಷ್ಮೆಸೊಪ್ಪನ್ನು ಕೊಯ್ದು ಹುಳ್ಳುಗಳ ತಟ್ಟೆಗಳಿಗೆ ಹಾಕುವಂತೆ ಉಳ್ಳಾಗಡ್ಡಿ ದಂಟನ್ನು ಕೊಯ್ದು ಹಾಕುವರು. ರೊಟ್ಟಿಯನ್ನು ಬಿಸಿಯಾಗಿಯೇ ತಿನ್ನಬೇಕು. ರಾಯಚೂರು ಭಾಗದಲ್ಲಿ ಬಿಸಿರೊಟ್ಟಿ ತಿನ್ನಲು ಕರೆಯುವುದು ಒಬ್ಬ ವ್ಯಕ್ತಿಯನ್ನು ಗೌರವಿಸುವ ವಿಧಾನ. ಬಿಸೇರೊಟ್ಟಿ ಎಂಬ ಅಡ್ಡಹೆಸರಿನ ಜನರೂ ಉತ್ತರ ಕರ್ನಾಟಕದಲ್ಲುಂಟು. ಐಹೊಳೆಯಲ್ಲಿ ಸಂಜೆ ಹೊಲದಿಂದ ಬಂದ ರೈತನೊಬ್ಬ ಚಂದ್ರನಂತಹ ರೊಟ್ಟಿಯನ್ನು ಕೈಲಿ ಇಟ್ಟುಕೊಂಡು, ಅದರಲ್ಲೇ ಚಟ್ನಿಪುಡಿ ಹಾಕಿಕೊಂಡು ಹಸಿನೀರುಳ್ಳಿ ದಂಟನ್ನು ಕಡಿಯುತ್ತ ಮನೆಯ ಮಾಳಿಗೆಯ ಮೇಲೆ ಕುಳಿತು ತಿನ್ನುವುದನ್ನು ನೋಡಿದೆ. ಕೆಲವರು ದೂರದ ಪ್ರವಾಸ ಹೋದರೂ ರೊಟ್ಟಿಯನ್ನು ಖಡಕ್ ಮಾಡಿಕೊಂಡು ಕಟ್ಟಿಕೊಂಡು ಹೋಗುವರು. ಮುದ್ದೆಗೆ ಇಂಥ ಪಯಣಭಾಗ್ಯ ಸಾಧ್ಯವಾಗಿಲ್ಲ. ಅದನ್ನು ಬಿಸಿಯಾಗಿರುವಾಗಲೇ ತಿನ್ನಬೇಕು. ದಕ್ಷಿಣ ಕರ್ನಾಟಕದಲ್ಲಿ ಬ್ರಾಹ್ಮಣರು ಮುದ್ದೆ ತಿನ್ನುವುದು ಕಡಿಮೆ. ಆದರೆ ಉತ್ತರ ಕರ್ನಾಟಕದಲ್ಲಿ ಬ್ರಾಹ್ಮಣರು ರೊಟ್ಟಿಯನ್ನು ತಿನ್ನುತ್ತಾರೆ. ಆದರೆ ಅದಕ್ಕೆ ಅವರು ಭಕ್ರಿ ಎಂದು ಕರೆಯುವ ಮೂಲಕ ತಮ್ಮ ವಿಶಿಷ್ಟತೆಯನ್ನು ಸಾಧಿಸಿದ್ದಾರೆ.

ಆದರೆ ಕೃಷಿಪದ್ಧತಿಯಲ್ಲಿ ಆಗುತ್ತಿರುವ ಕ್ರಾಂತಿಕಾರಕ ಬದಲಾವಣೆಯಿಂದ ರಾಗಿ-ಜೋಳ ಬೆಳೆವ ಪ್ರದೇಶ ಕುಗ್ಗುತ್ತಿದೆ. ಅನ್ನವು ರೈಸ್ ಹೆಸರಲ್ಲಿ ನುಗ್ಗುತ್ತಿದೆ. ಬಳ್ಳಾರಿ ಜಿಲ್ಲೆಯಲ್ಲಿ ಜೋಳದರಾಶಿ ಎಂಬ ಊರಿದೆ. ಹೊಸಪೇಟೆಗೆ ಹತ್ತಿಕೊಂಡು ಜೋಳದರಾಶಿ ಗುಡ್ಡವಿದೆ. ಇವೆಲ್ಲ ಇಲ್ಲಿನ ಬೆಳೆ ಮತ್ತು ಆಹಾರವನ್ನು ಸೂಚಿಸುವಂತಹ ಪ್ರತೀಕಗಳು. ಆದರೆ ತುಂಗಭದ್ರಾ ಡ್ಯಾಮು ಬಂದ ಬಳಿಕ ಕಾಲುವೆಯುದ್ದಕ್ಕೂ ಭತ್ತ ಬಂದು, ರೊಟ್ಟಿ ಸಂಸ್ಕೃತಿ ಪ್ರದೇಶಗಳೆಲ್ಲ ಅಕ್ಕಿ ಸಂಸ್ಕೃತಿಯಾಗಿ ಬದಲಾಗಿವೆ.

ಅಕ್ಕಿಯ ಬಳಕೆ ಇಡೀ ಕರ್ನಾಟಕದಲ್ಲಿದ್ದರೂ ಕರಾವಳಿ ಮತ್ತು ಮಲೆನಾಡುಗಳ ಪ್ರಧಾನ ಧಾನ್ಯವಾಗಿದೆ. ಇಲ್ಲಿ ಬೀಳುವ ಮಳೆಗೂ ಭತ್ತದ ಬೆಳೆಗೂ ಆಹಾರಕ್ಕೂ ಸಂಬಂಧವಿದೆ. ಇಲ್ಲಿನ ತೇವಾಂಶಕ್ಕೆ ರಾಗಿ-ಜೋಳ ಬೆಳೆಯುವುದೂ ಇಲ್ಲ. ಅಕ್ಕಿಯು ಈ ಭಾಗದ ಆಚರಣೆಗಳನ್ನು ಆವರಿಸಿಕೊಂಡಿದೆ. ಭೂಮಿಪೂಜೆಯನ್ನು ಭತ್ತದ ಗದ್ದೆಯಲ್ಲೇ ಮಾಡುತ್ತಾರೆ. ಹುಟ್ಟಿನಿಂದ ಸಾವಿನವರೆಗೆ ಅಕ್ಕಿ ಈ ಭಾಗದ ಜನರ ಸಾಂಸ್ಕೃತಿಕ ಆಚರಣೆಗಳಲ್ಲಿ ಬಳಕೆಯಾಗುತ್ತದೆ. ಭೌಗೋಳಿಕತೆ-ಕೃಷಿ-ಆಹಾರ-ಧಾರ್ಮಿಕತೆಗಳ ಚಚ್ಚೌಕವಿದು. ರೊಟ್ಟಿ, ದೋಸೆ, ಇಡ್ಲಿ, ಕಡುಬು, ಪಾಯಸ, ಸ್ಯಾವಿಗೆ, ನೀರುದೋಸೆ,

ಕೋರಿರೊಟ್ಟಿ ಮುಂತಾದ ಭಕ್ಷ್ಯಗಳಿಗೆ ಅಕ್ಕಿಯೇ ಆಧಾರ. ಉಡುಪಿಗರು ತಮ್ಮ ಹೋಟೆಲುಗಳ ಮೂಲಕ ಕರ್ನಾಟಕದಲ್ಲಿ ಇಡ್ಲಿ, ದೋಸೆಗಳನ್ನು ಹರಡಿದರು. ಆದರೂ ಕ್ಯಾತ್ಸಂದ್ರ ಮತ್ತು ಬಿಡದಿಗಳ ತಟ್ಟೆ ಇಡ್ಲಿಯು ನನಗೆ ಪ್ರಿಯ. ಅಲ್ಲಿ ತಟ್ಟೆ ಇಡ್ಲಿಗಾಗಿ ಜನ ಕಾರುಗಳನ್ನು ಸಾಲಾಗಿ ನಿಲ್ಲಿಸಿರುವರು. ಅಕ್ಕಿಯ ಉತ್ಪನ್ನಗಳಾದ ಬಳೆರೊಟ್ಟಿ ಹಾಸನ ಜಿಲ್ಲೆಯ ವಿಶೇಷವಾದರೆ, ಅಕ್ಕಿಕಡುಬು ಕೋಳಿಸಾರು ಮಲೆನಾಡಿನ ಜನಪ್ರಿಯ ಆಹಾರ. ಅಕ್ಕಿಯ ಉತ್ಪನ್ನಗಳ ಏಕತಾನತೆಯನ್ನು ಪಲ್ಯ, ಸಾರುಗಳಲ್ಲಿ ವೈವಿಧ್ಯದ ಮೂಲಕ ಮುರಿಯಲಾಗಿದೆ. ಆದರೆ ಭತ್ತ ಬೆಳೆಯಲು ಬಳಸುವ ಕ್ರಿಮಿನಾಶಕ ರಸಗೊಬ್ಬರ ಕಂಡರೆ, ರಾಗಿ ಜೋಳಗಳೇ ಕಡಿಮೆ ಅಪಾಯಕಾರಿ. ಆರೋಗ್ಯ ಕಾಳಜಿಯುಳ್ಳ ಮಂದಿ ಸಾವಯವದಲ್ಲಿ ಬೆಳೆದ ಪಾಲಿಶ್ ಮಾಡದ ಕೆಂಪಕ್ಕಿ ಅನ್ನಕ್ಕೆ ಹೋಗುತ್ತಿದ್ದಾರೆ.

ರಾಗಿ, ಜೋಳ, ಅಕ್ಕಿ ತಿನಿಸುಗಳಲ್ಲಿ ಕಾಣದ ಕೋಲಾಹಲವು ಅವುಗಳಿಗೆ ಸಾರಾಗಿ ಪಲ್ಯವಾಗಿ ಬರುವ ತರಕಾರಿ ಮತ್ತು ಮೀನು ಮಾಂಸಗಳಲ್ಲಿದೆ. ಮಾಂಸಾಹಾರವು ಸಂಭ್ರಮಕ್ಕೆ ಕಾರಣವಾಗಿರುವಂತೆ ವಿಧಿನಿಷೇಧಗಳ ಸಂಕಲೆಯಲ್ಲೂ ಬಂಧಿತವಾಗಿದೆ. ಯಾವಾಗಲೂ ನಿಷೇಧವು ಉತ್ಕಟತೆಯನ್ನು ಹೆಚ್ಚಿಸುತ್ತದೆ. ರಹಸ್ಯವಾಗಿ ಸೇವಿಸುವಂತೆ ಪ್ರೇರಿಸುತ್ತವೆ. ತಿನ್ನು ಕುಡಿ ಎಂದರೆ ಕನ್ನಡದಲ್ಲಿ ಮಾಂಸ ತಿನ್ನು ಮದ್ಯಸೇವನೆ ಎಂಬರ್ಥವಿದೆ. ಕೆಲವು ಸಮುದಾಯಗಳ ಹಬ್ಬ ಜಾತ್ರೆಗಳಲ್ಲಿ ಮಾಂಸಾಹಾರ ಕಡ್ಡಾಯ. ಆದರೆ ಕೆಲವರು 'ಶುಭ' ಸಂದರ್ಭಗಳಲ್ಲಿ, ಮನೆದೇವರ ದಿನಗಳಲ್ಲಿ ಅದನ್ನು ನಿಷೇಧಿಸಿಕೊಳ್ಳುವರು. ಸಾಮಾನ್ಯವಾಗಿ ಶೈವ ಕೆಳಜಾತಿಗಳು ಸೋಮವಾರ, ವೈಷ್ಣವ ಕೆಳಜಾತಿಗಳು ಶನಿವಾರ ಮಾಂಸ ತಿನ್ನುವುದಿಲ್ಲ. ಆ ಸಂದರ್ಭ – ದಿನ ಮುಗಿದ ಕೂಡಲೆ ನಿಷೇಧದಿಂದ ಆದ ನಷ್ಟ ಸರಿದೂಗಿಸಲಾಗುವುದು. ಎಂತಲೇ ಕೆಲವು ಜಾಣರು ಸಸ್ಯಾಹಾರವಿರುವ ಧಾರೆಗೆ ಹೋಗುವುದಿಲ್ಲ. ಆದರೆ ಬೀಗರೂಟ ತಪ್ಪಿಸುವುದಿಲ್ಲ. ಕೆಲವು ಕಡೆ ಯುಗಾದಿಯ ಮಾರನೆಯ ದಿನ ಮಾಂಸದೂಟ ಕಡ್ಡಾಯ. ದಕ್ಷಿಣ ಕರ್ನಾಟಕದಲ್ಲಿ ಹರಿಸೇವೆ ಎಂಬ ವೈಷ್ಣವ ಆಚರಣೆಯಿದ್ದು, ಕೊನೆಯ ದಿನ ಮಾಂಸದೂಟವಿದೆ. ಮೈಸೂರು ಭಾಗದ ಮಂಟೆಸ್ವಾಮಿ ಜಾತ್ರೆಯಲ್ಲಿ ಮಾಂಸದ ಸಾರು–ಮುದ್ದೆ ಖ್ಯಾತವಾಗಿದೆ. ಕೆಲವು ಶಕ್ತಿದೇವತೆಗಳ ಜಾತ್ರೆಗಳಲ್ಲಿ ಕುರಿಯ ಬಲಿ ಮತ್ತು ಮಾಂಸದೂಟಕ್ಕೆ ದೂರದ ಬಂಧುಗಳೆಲ್ಲ ಸೇರುತ್ತಾರೆ. ಗುಲಬರ್ಗಾ ಜಿಲ್ಲೆಯ ಕೆಲವು ಕಡೆ ಎಷ್ಟು ಮರಿಗಳು ಬಿದ್ದವು ಎಂಬುದರ ಮೇಲೆ ಊರಿನ ಮೊಹರಂ ವೈಭವವನ್ನು ಅಳೆಯಲಾಗುತ್ತದೆ.

ಪ್ರಿಯವಾದ ಗೆಳೆಯರಿಗೆ, ನಂಟರಿಗೆ ಮಾಂಸದಡಿಗೆ ಬಡಿಸುವುದು ಸಾಮಾನ್ಯ. ಹಾಗೆ ಮಾಡದೆ ಕಳಿಸಿದರೆ ನಂಟರಿಗೆ ಮಾಡುವ ಅಪಮಾನ ಎಂಬ ಗ್ರಹಿಕೆಯಿದೆ. ತಮ್ಮ ತಟ್ಟೆಗೆ ಯಾವ ಭಾಗದ ಮಾಂಸದ ತುಂಡು ಬಿದ್ದಿದೆ ಎಂಬುದರ ಮೇಲೆ ಅತಿಥಿಗಳು ಸಂತುಷ್ಟರಾಗುವ ಅಥವಾ ಮುನಿಸಿಕೊಳ್ಳುವ ಪದ್ಧತಿಯೂ ಇದೆ. ಉಂಡವರಾದರೂ ಒಳ್ಳೆಯ ಮಾಂಸದೌತಣವನ್ನು ಬಹುಕಾಲ ನೆನೆಸುವುದುಂಟು. ಮಾಂಸದಡಿಗೆ ತಯಾರಿಕೆಯಲ್ಲಿ ಇಡೀ ಕುಟುಂಬವೇ ಸ್ವಯಂಸೇವಕರಾಗಿ ಮಾರ್ಪಟ್ಟು ಶ್ರಮವಿಭಜನೆ ಮಾಡಿಕೊಂಡು ನೆರವಾಗುತ್ತದೆ. ಹೆಂಗಸರು ಬೆಳ್ಳುಳ್ಳಿ ಸುಲಿಯುತ್ತ ಕಾರೆ ಅರೆಯುತ್ತ ಇರುವಾಗ, ಗಂಡಸರು ಕಲ್ಲುಗುಂಡು ತಂದು ಒಲೆ ಹೂಡುವುದು, ಸೌದೆ ಮುರಿದು ಕೊಡುವುದು, ಕೋಳಿ ಕೊಯ್ದು ಪುಕ್ಕ ತರಿದು, ಅದರ ಮೇಲಿನ ನವಿರು ರೋಮಗಳನ್ನು ಸಣ್ಣಬೆಂಕಿಯಲ್ಲಿ ಸುಟ್ಟು, ಅರಿಷಿಣ ಹಚ್ಚಿ ತೊಳೆದು ಅದರ ಒಂದೊಂದೇ ಭಾಗಗಳನ್ನು ಅಪ್ಪ ಕತ್ತರಿಸಿ ಕೊಡುವುದು ಕೆಲಸಗಳನ್ನು ಮುತುವರ್ಜಿಯಿಂದ ಮಾಡುತ್ತಾರೆ. ಅಪ್ಪ ಕೋಳಿ ಸುಟ್ಟು ತುಂಡುಗಳಾಗಿ ಕತ್ತರಿಸುವ ಕೆಲಸವನ್ನು ನಾವು ಪವಿತ್ರ ಆಚರಣೆಯಂತೆ ನೋಡುತ್ತಿದ್ದೆವು.

ಈಗಲೂ ಬಂಗಾಳ, ಅಸ್ಸಾಂ, ನೇಪಾಳದ ಬ್ರಾಹ್ಮಣರು ಮಾಂಸಾಹಾರಿಗಳು. ಆದರೆ ದಕ್ಷಿಣ ಭಾರತದ ಬ್ರಾಹ್ಮಣರಲ್ಲಿರುವಂತೆ ಕರ್ನಾಟಕದ ಬ್ರಾಹ್ಮಣರೂ ಸಸ್ಯಾಹಾರಿಗಳು. ಬಲಿಪದ್ಧತಿ ಮತ್ತು ಮಾಂಸಾಹಾರವಿದ್ದ ಶೈವಧರ್ಮಕ್ಕೆ ಪ್ರತಿಯಾಗಿ ಹುಟ್ಟಿದ ಲಿಂಗಾಯತ ಧರ್ಮದಲ್ಲಿ ಮಾಂಸಾಹಾರ ಸೇವನೆಯ ಖಂಡನೆಯಿದೆ. ಕೆಳಜಾತಿಗಳು ಲಿಂಗದೀಕ್ಷೆಯನ್ನು ಪಡೆಯಲು ಇದುವೇ ಒಂದು ತೊಡಕಾಗಿದೆ. ಎಂತಲೇ ಮಠಾಧೀಶರೊಬ್ಬರು ಲಿಂಗಾಯತ ಧರ್ಮಸ್ವೀಕಾರಕ್ಕೆ ಆಹಾರದ ಸಮಸ್ಯೆಯಿಲ್ಲ ಎಂದು ಹೇಳಿ ಟೀಕೆಗೆ ಗುರಿಯಾದರು.

ಆದರೆ ಈ ಸಸ್ಯಾಹಾರಿ ಮೇಲ್ಜಾತಿಗಳಲ್ಲಿ ಆಧುನಿಕ ಜೀವನಕ್ಕೆ ತೆರೆದುಕೊಂಡಿರುವ ಅನೇಕರು ತಿನ್ನಲು ಕಲಿತಿದ್ದಾರೆ. ಸತ್ವಾಂಶಕ್ಕಾಗಿ ಮೊಮ್ಮಕ್ಕಳು ಮೊಟ್ಟೆ ತಿನ್ನುವುದನ್ನು ಸಂಪ್ರದಾಯಸ್ಥ ಹಿರಿಯರು ಸಹಿಸಿಕೊಳ್ಳುವಷ್ಟು ಸುಧಾರಣೆಯಾಗಿದೆ. ನಗರ–ಪಟ್ಟಣ ಸಂಪರ್ಕವನ್ನು ಪಡೆದ ಹಳ್ಳಿಗಳಲ್ಲಿ ಮಾಂಸಾಹಾರಿ ಹೋಟೆಲುಗಳು ಬರುತ್ತಿವೆ. ಮನೆಯಲ್ಲಿ ಬಿರಿಯಾನಿ, ಚಿಕನ್ ಕಬಾಬ್ ಮಾಡಿ ಸರಬರಾಜು ಮಾಡುವವರೂ ಹುಟ್ಟಿಕೊಂಡಿದ್ದಾರೆ. ವೈರುಧ್ಯವೆಂದರೆ, ಮಾಂಸಾಹಾರದ ಪರಿಭಾಷೆಯನ್ನು ಸಸ್ಯಾಹಾರ ಪಡೆದುಕೊಳ್ಳುತ್ತಿದೆ. 'ವೆಜಿಟಬಲ್' ಎಂಬ ವಿಶೇಷಣ ಲಗತ್ತಿಸಿಕೊಂಡ ಕುಫ್ತ, ಕೀಮಾ, ಬಿರಿಯಾನಿ, ಕಬಾಬ್, ಪಲಾವ್, ಕುರ್ಮಗಳು ಅಡಿಗಾಸ್ ಮಯ್ಯಾಸ್‌ಗಳ ಮೆನುಗಳನ್ನು ಅಲಂಕರಿಸಿವೆ. ವೆಜಿಟಬಲ್ ಪಲಾವಿನಲ್ಲಿ ಮಾಂಸದ ಅನುಭವವನ್ನು ನೀಡುವ ಸಸ್ಯಾಹಾರದ ಒಂದು ವಸ್ತುವನ್ನೊ ಅಥವಾ ಎಣ್ಣೆಯಲ್ಲಿ ಕರಿದ ಬ್ರೆಡ್ಡನ್ನೊ ಸೇರಿಸುವುದುಂಟು.

ಮಾಂಸಾಹಾರದ ಆಕರ್ಷಣೆ ಹೀಗೆ ವೃದ್ಧಿಯಾಗುತ್ತಿರುವ ಹೊತ್ತಲ್ಲೇ ಅದರ ಮೇಲಿನ ಸಾಮಾಜಿಕ ನಿಷೇಧ ಮತ್ತು ಹಲ್ಲೆಗಳು ಕೂಡ ಹೆಚ್ಚಾಗುತ್ತಿವೆ. ಇದೇ ಹೊತ್ತಲ್ಲಿ ಬ್ರಾಹ್ಮಣೀಕರಣಗೊಂಡಿರುವ ಮಾಂಸಾಹಾರಿ ಕೆಳಜಾತಿಯ ಕುಟುಂಬಗಳು 'ಶುಭ' ಸಂದರ್ಭಗಳಲ್ಲಿ ಮಾಂಸ, ಮೀನು, ತ್ಯಾಗ ಮಾಡುತ್ತಿವೆ. ಇದಕ್ಕೆ ಪೂರಕವಾಗಿ ಸಸ್ಯಾಹಾರವಾದಿ ಚಳುವಳಿಯು ಹುಟ್ಟಿಕೊಂಡಿದೆ. ಕೊಲೆಸ್ಟರಾಲ್ ಮತ್ತು ಹೃದಯಾಘಾತದ ಸಮಸ್ಯೆಯನ್ನು ಅದು ಮುಂದಿಟ್ಟುಕೊಂಡಿದೆ. ಮಾಂಸಾಹಾರ ಮಾಡುವವರ ಸಂಖ್ಯೆ ದೊಡ್ಡ ಪ್ರಮಾಣದಲ್ಲಿದ್ದರೂ ಅವರಿಗೆ ಸಾಂಸ್ಕೃತಿಕ ರಾಜಕೀಯ ಬೆಂಬಲವಿಲ್ಲ.

ಕರ್ನಾಟಕದಲ್ಲಿ ದನದ ಮಾಂಸದ ವಿಷಯದಲ್ಲಿ ಸಂಘ ಪರಿವಾರದ ಗುಂಪುಗಳಿಂದ ಹಲ್ಲೆಗಳು ನಡೆಯುತ್ತಿವೆ. ಅನೇಕರು ಕೊಲೆಯಾದರು ಮತ್ತು ಜೈಲು ಪಾಲಾದರು. ದನದ ಮಾಂಸ ತಿನ್ನುವವರ ಕೈ ಕಡಿಯಬೇಕು, ನಾಲಿಗೆ ಕತ್ತರಿಸಬೇಕು ಎಂಬ ಹೇಳಿಕೆಗಳನ್ನು ಬಿಜೆಪಿಯ ರಾಜಕಾರಣಿಗಳು ಎಗ್ಗಿಲ್ಲದೆ ಹೇಳುತ್ತಿರುತ್ತಾರೆ. ಬಿಜೆಪಿ ಕೆಳಜಾತಿಗಳಲ್ಲಿ ವಿಸ್ತರಣೆ ಪಡೆಯುತ್ತಿದ್ದರೂ ಆಹಾರದ ವಿಷಯದಲ್ಲಿ ಗೋವಾ, ಕೇರಳ ಮತ್ತು ಈಶಾನ್ಯ ಭಾರತದಲ್ಲಿ ಇರುವಂತೆ ಕರ್ನಾಟಕದ ಬಲಪಂಥೀಯ ರಾಜಕಾರಣ ಉದಾರವಾದಿಯಾಗಿಲ್ಲ. ಅದು ಬ್ರಾಹ್ಮಣವಾದಿ ಮೌಲ್ಯಗಳನ್ನು ಹೇರುತ್ತಿದೆ. ಇದು ಬೇಸಾಯಕ್ಕೂ ಹೈನಿಗೂ ಉಪಯೋಗಕ್ಕೆ ಬಾರದ ರಾಸುಗಳನ್ನು ಮಾರಾಟ ಮಾಡುವ ರೈತರ ಅವಕಾಶಗಳನ್ನು ಕಸಿದುಕೊಂಡಿದೆ. ದನದ ಮಾಂಸವು ಕ್ರೈಸ್ತರು ಮುಸ್ಲಿಮರ – ದಲಿತರದ್ದು ಮಾತ್ರವಲ್ಲ, ಕೆಳಜಾತಿಯ ಬಡವರ ಆಹಾರ ಕೂಡ. ಕೋಣನ ಮಾಂಸವು ಶಾಕ್ತಾಚರಣೆಗಳ ಜತೆ ಸಂಬಂಧ ಪಡೆದಿದೆ. ಈ ಧಾರ್ಮಿಕ ಆಚರಣೆಗಳು ಆಹಾರ ಸಂಸ್ಕೃತಿ, ಪಶುಪಾಲನೆ ಮತ್ತು ಕೃಷಿ ಆರ್ಥಿಕತೆಯ ಜತೆ ಸಂಬಂಧ ಪಡೆದಿವೆ.

ಬ್ರಾಹ್ಮಣೀಕರಣ ಮತ್ತು ಸಂಘಪರಿವಾರದ ರಾಜಕಾರಣವು ಆಹಾರದ ಮೇಲೆ ನಿರ್ಮಿಸಿರುವ ಒತ್ತಡವು ಅನೇಕ ಹೊಸ ಪದ್ಧತಿಗಳನ್ನು ಹುಟ್ಟುಹಾಕಿದೆ. ಕೆಲವು ಕೆಳಜಾತಿಯ ಮತ್ತು ದಲಿತ ಸಮುದಾಯದ ಜನ ತಾವು ಮಾಂಸ ತಿನ್ನುವುದಿಲ್ಲ ಎಂದು ಹೇಳಿಕೊಳ್ಳುವುದು ಇದರಲ್ಲಿ ಒಂದು. ಇದಕ್ಕೆ



ಮೇಲ್ಜಾತಿಯವರು ವಾಸಿಸುವ ಏರಿಯಾಗಳಲ್ಲಿ ಬಾಡಿಗೆ ಮನೆ ಪಡೆಯುವ ಕಷ್ಟವೂ ಕಾರಣವಾಗಿದೆ. ಕರ್ನಾಟಕದಲ್ಲಿ ಲಾಗಾಯ್ತಿನಿಂದಲೂ ದಲಿತರ ಮತ್ತು ಶೂದ್ರರ ಹಬ್ಬ–ಜಾತ್ರೆಯ ಆಚರಣೆಗಳಲ್ಲಿ ಮಾಂಸಾಹಾರವು ನಿಷೇಧಗೊಳ್ಳುತ್ತಿದೆ. ಬ್ರಾಹ್ಮಣವಾದಿ ಮಾಧ್ಯಮಗಳು ಇಂಥ ಹಬ್ಬ–ಜಾತ್ರೆಗಳಲ್ಲಿ ಪ್ರಾಣಿ ಬಲಿಕೊಡುವುದನ್ನು ಮತ್ತು ಆಹಾರವಾಗಿ ಸ್ವೀಕರಿಸುವುದನ್ನು 'ಬರ್ಬರ ಹತ್ಯೆ' ಎಂದು ವರ್ಣಿಸುತ್ತವೆ. ಜನ ಕದ್ದು ಮುಚ್ಚಿ ಅಥವಾ ದೂರದಲ್ಲಿ ಬಲಿ ಕೊಟ್ಟು ಸೇವಿಸುತ್ತಿದ್ದಾರೆ. ಜನಪ್ರಿಯ ಕನ್ನಡ ಸಿನಿಮಾಗಳಲ್ಲಿ ಭೂಗತ ಜಗತ್ತಿನ ಕೇಡಿಗಳು ಮಾಂಸದೂಟ ಮಾಡುವ ದೃಶ್ಯಗಳು ಸಾಮಾನ್ಯ. ಬ್ರಾಹ್ಮಣವಾದಿ ಲೇಖಕರು ಕೂಡ ತಮ್ಮ ಕೃತಿಗಳಲ್ಲಿ ನೀಚ ಪಾತ್ರಗಳು ಜಾತಿಕಟ್ಟಳೆ ಮೀರಿ ಮಾಂಸ ತಿನ್ನುವುದನ್ನು ಚಿತ್ರಿಸುತ್ತವೆ. ಯಾಕೆಂದರೆ ಮಾಂಸಾಹಾರಕ್ಕೂ ದುಷ್ಟತನಕ್ಕೂ ಸಂಬಂಧ ಕಲ್ಪಿತವಾಗಿರುವುದು. ಇದರ ಪರಿಣಾಮವೆಂದರೆ, ಕರ್ನಾಟಕದ ಶಾಲಾಮಕ್ಕಳಿಗೆ ಬಿಸಿಯೂಟ ಪೂರೈಸುತ್ತಿರುವ ಇಸ್ಕಾನ್, ಅಡುಗೆಯಲ್ಲಿ ಈರುಳ್ಳಿ, ಬೆಳ್ಳುಳ್ಳಿ ಬಳಸದೆ ಇರುವುದು.

ಆದರೆ ಈ ಬಗೆಯ ಆಹಾರ ನಿಷೇಧಗಳು ಆಹಾರದ ಹಕ್ಕಿನ ಚಳುವಳಿಗಳನ್ನೂ ಹುಟ್ಟುಹಾಕಿವೆ. ಉದಾಹರಣೆಗೆ, ದಲಿತರು ದನದ ಮಾಂಸವನ್ನು ಸಾರ್ವಜನಿಕವಾಗಿ ತಿನ್ನುವ ಕಾರ್ಯಕ್ರಮಗಳು. ಈ ನಿಷೇಧ ಮತ್ತು ಹಕ್ಕು ಪ್ರತಿಪಾದಕ ಚಳುವಳಿಗೆ ಒಂದು ಪರಂಪರೆಯೂ ಇದೆ. ಮಾಂಸಾಹಾರವನ್ನು ನಿಷೇಧಿಸಿದ ಕಲ್ಯಾಣ ಪಟ್ಟಣದಲ್ಲಿ, ಸತ್ತ ದನದ ಕರುವನ್ನು ಹೊತ್ತುಕೊಂಡು ಮಂಟೆಸ್ವಾಮಿಯು ಹೋಗುವ ಪ್ರಸಂಗ; ತಾಮಸವೆಂದು ನಿಷೇಧಿಸಿದ ನೀರುಳ್ಳಿಯನ್ನು ತಿಂದ ಕಾರಣಕ್ಕೆ ಶರಣನೊಬ್ಬ ಅಪಮಾನಕ್ಕೆ ಒಳಗಾಗುವ ಪ್ರಸಂಗ ಬಂದಾಗ, ಬಸವಣ್ಣ ಈ ಆಹಾರ ತಾರತಮ್ಯ ವಿರೋಧಿಸಲು, ಕೊರಳಲ್ಲಿ ನೀರುಳ್ಳಿ ಹಾರ ಧರಿಸಿ ಮೆರವಣಿಗೆ ಬರುವ ಪ್ರಸಂಗ. ಲಿಂಗಾಯತರು ಬಹುಸಂಖ್ಯಾತರಾಗಿರುವ ಉತ್ತರ ಕರ್ನಾಟಕವು ಎರೆಭೂಮಿಯನ್ನು ಹೊಂದಿದ್ದು ನೀರುಳ್ಳಿ ಬೆಳೆಯುವ ಪ್ರದೇಶವಾಗಿದೆ. ಆಹಾರವು ಯಾವತ್ತೂ ಭೌಗೋಳಿಕ ಪರಿಸರದ ಭಾಗವಾಗಿದ್ದು, ಅದು ಧಾರ್ಮಿಕ ಆಚರಣೆಯಾಗಿ ರೂಪಾಂತರ ಹೊಂದುತ್ತದೆ.

ಸಾರಿಗೆ ಸಂಪರ್ಕ ಸಾಧನಗಳು ಅಖಿಲ ಭಾರತೀಯ ಊಟಗಳನ್ನು ಜನಪ್ರಿಯಗೊಳಿಸಿವೆ. ರಾಷ್ಟ್ರೀಯ ಹೆದ್ದಾರಿಗಳ ಪಕ್ಕ ಧಾಬಾಗಳು ಬಂದಿವೆ. ಅವು ಪಯಣಿಗರನ್ನು ಮಾತ್ರವಲ್ಲ, ಅಕ್ಕಪಕ್ಕದ ಹಳ್ಳಿಗಳ ಜನರಲ್ಲೂ ಉತ್ತರ ಭಾರತದ ಆಹಾರವನ್ನು ಜನಪ್ರಿಯಗೊಳಿಸಿವೆ. ಈಚೆಗೆ ಪಟ್ಟಣಗಳಲ್ಲೂ ಮಧ್ಯಮವರ್ಗದವರು ಬಿಂಕದಿಂದ ಹೋಗಿಬರುವ ನಾರ್ತ್ ಇಂಡಿಯನ್ ತಿಂಡಿಗಳ ಹೋಟೆಲುಗಳು ಬಂದಿವೆ. ಇದರ ಹಿಂದೆ ರಾಜಸ್ತಾನ, ಗುಜರಾತುಗಳಿಂದ ವ್ಯಾಪಾರಕ್ಕಾಗಿ ಬಂದು ನೆಲೆಸಿರುವ ವ್ಯಾಪಾರಿ ಸಮುದಾಯಗಳಿವೆ. ಉತ್ತರ ಭಾರತದಲ್ಲಿ ದೋಸಾ ವಿಶೇಷವಾಗಿರುವಂತೆ, ಕರ್ನಾಟಕದಲ್ಲಿ ಮಧ್ಯಮವರ್ಗಗಳು ನಾರ್ತ್ ಇಂಡಿಯನ್ ಊಟವನ್ನು




ವಿಶೇಷವೆಂದು ಭಾವಿಸಿವೆ. ಹೈದರಾಬಾದ್ ಆಂಬೂರು ದಂ ಬಿರಿಯಾನಿಗಳು ಬಂದಿವೆ. ತಮಿಳುನಾಡಿನ ಊಟಗಳು ಕನಕಪುರ, ಕೊಳ್ಳೇಗಾಲಗಳಲ್ಲೂ ಆಂಧ್ರದ ಗಡಿಯಿರುವ ಊರುಗಳಲ್ಲಿ ಆಂಧ್ರ ಮೀಲ್ಸ್ ಪದ್ಧತಿಯೂ ಕರಾವಳಿಯಲ್ಲಿ ಕೇರಳದ ಆಹಾರವೂ ಸಿಗುತ್ತವೆ. ಭಾಷೆ ಮತ್ತು ರಾಜಕಾರಣಗಳು ಭಾರತ ಮತ್ತು ಕರ್ನಾಟಕವನ್ನು ಉತ್ತರ–ದಕ್ಷಿಣವಾಗಿ ವಿಭಜಿಸಿವೆ. ಆದರೆ ಜನವಲಸೆ ಮತ್ತು ಆಹಾರಗಳು ಇವನ್ನು ಬೆಸೆಯುತ್ತಿವೆ.

ಹೊಸ ಆಹಾರ ಪದ್ಧತಿಯ ಎಷ್ಟೇ ಸ್ವೀಕಾರವಿದ್ದರೂ, ಜನ ತಮ್ಮ ಸಾಂಪ್ರದಾಯಿಕ ಆಹಾರ ಪದ್ಧತಿಯ ಬಗ್ಗೆ ಜಿಗುಟರು. ಕರಾವಳಿಯವರ ಗಂಜಿ ಊಟ, ದಕ್ಷಿಣ ಕರ್ನಾಟಕದವರ ಮುದ್ದೆ, ಉತ್ತರ ಕರ್ನಾಟಕದವರ ರೊಟ್ಟಿ ಇವು ಎಂಥ ವ್ಯಾಮೋಹಗಳೆಂದರೆ, ಏಕೀಕರಣವಾದ ಬಳಿಕ, ಒಂದು ಪ್ರಾಂತ್ಯದ ನೌಕರರು ಇನ್ನೊಂದೆಡೆಗೆ ವರ್ಗವಾದಾಗ, ತಮ್ಮ ಆಹಾರ ಪದ್ಧತಿಯ ಕಾರಣವೊಡ್ಡಿ ತಪ್ಪಿಸಿಕೊಳ್ಳುತ್ತಿದ್ದರು. ಹೋಗಲೇಬೇಕಾದಾಗ ತಮ್ಮೂರಿಂದ ರಾಗಿ, ಜೋಳ, ಅವರೆಕಾಯಿ, ಕಡಲಮೀನು, ಉಡುಪಿಯ ಗುಳ್ಳ, ಅಪ್ಪೆಮಿಡಿ, ದಿವಿಹಲಸು ತರಿಸಿಕೊಳ್ಳುವರು. ಆಯಾ ಭಾಗದಿಂದ ಜನ ಕೆಲಸಕ್ಕಾಗಿ ಗುಳೆ ಹೋದರೆ, ಅವರ ಹಿಂದೆಯೇ ಅವರ ಸೀಮೆಯ ಊಟದ ಹೋಟೆಲುಗಳೂ ಹಿಂಬಾಲಿಸುತ್ತವೆ. ಆಹಾರದ ವಿಷಯದಲ್ಲಿ ಕರ್ನಾಟಕವನ್ನು ಏಕರೂಪಿಯಾಗಿ ಗ್ರಹಿಸುವಂತಿಲ್ಲ.

ವಿಶೇಷವೆಂದರೆ, ಆಹಾರ ಸಂಸ್ಕೃತಿಯನ್ನು, ಅದು ಸೃಷ್ಟಿಮಾಡುವ ತಮಾಶೆ ವೈರುಧ್ಯ ಮನುಷ್ಯತ್ವಗಳನ್ನು ಕನ್ನಡ ಸಾಹಿತ್ಯ ಕಾಣಿಸುತ್ತ ಬಂದಿದೆ. ಕೆಲವು ಪ್ರಸಂಗಗಳನ್ನು ಉಲ್ಲೇಖಿಸಬಹುದು:

ಅ) 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಜಮೀನುದಾರ ಗೌಡರೊಬ್ಬರ ಮನೆಗೆ ಪಾದ್ರಿ ಅತಿಥಿಯಾಗಿ ಬರುವ ಪ್ರಸಂಗ ಅದು. ಬೇರೆ ಬೇರೆ ಜಾತಿಯವರಿಗೆ ಊಟ ಹಾಕುವಾಗ ಎಲ್ಲಿ ಕೂರಿಸಬೇಕು ಎಂಬುದಾಗಲಿ, ಬ್ರಾಹ್ಮಣರ ಮನೆಗೆ ಹೋದರೆ ತಾವೆಲ್ಲಿ ಕೂರಬೇಕು ಎಂಬುದಾಗಲಿ, ಅವರಿಗೆ ಲಾಗಾಯ್ತಿನಿಂದ ತಿಳಿದಿದೆ. ಆದರೆ ಕ್ರೈಸ್ತರಿಗೆ ಎಲ್ಲಿ ಕೂರಿಸಬೇಕು ಎಂಬುದು ಗೊತ್ತಿಲ್ಲ. ಹೀಗಾಗಿ, ಊಟವನ್ನು ತಟ್ಟೆಯಲ್ಲಿ ಕೊಡಬೇಕೊ ಅಥವಾ ಬಾಳೆಲೆಯಲ್ಲಿ ಕೊಡಬೇಕೊ; ಒಳಗೆ ಕರೆಯಬೇಕೊ ಹೊರಗೆ ಕೂರಿಸಬೇಕೊ ಎಂದು ಗೊಂದಲವಾಗುತ್ತದೆ. ಅತಿಥಿಯನ್ನು ಹೊರಗೆ ಕೂರಿಸುವಂತಿಲ್ಲ. ಬ್ರಿಟಿಷ್ ಸರ್ಕಾರದ ಹಾಗೂ ಯೂರೋಪಿನ ಆಧುನಿಕತೆಯ ಪ್ರತಿನಿಧಿ ಅವನು; ಒಳಗೆ ಕರೆದೊಯ್ಯುವಂತಿಲ್ಲ. ದನದ ಮಾಂಸ ಉಂಡಿರುವ ಆತನಿಂದ ಮುಟ್ಟು ಚಿಟ್ಟು ಆಗುತ್ತದೆ. ಇಲ್ಲಿ ಸಮಸ್ಯೆ ಆಹಾರ ತಯಾರಿಸುವುದಲ್ಲ. ಬಡಿಸುವುದು.

ಆ) ಗೊರೂರ 'ಉಣ್ಣಿ ಉಣ್ಣಿ' ಪ್ರಬಂಧದಲ್ಲಿ ವೈದಿಕರ ತಿಥಿಯೂಟದ ಪ್ರಸಂಗವಿದೆ. ಭೋಜನಕ್ಕೆ ಕುಳಿತ ವೈದಿಕರು ಎಲೆಯ ತುಂಬ ಬಡಿಸಿದ ಭಕ್ಷ್ಯಗಳನ್ನು ಮುರಿದು ಇನ್ನೇನು ಮೊದಲ ತುತ್ತನ್ನು ಎತ್ತಬೇಕು, ಅಷ್ಟರಲ್ಲಿ ಹಟ್ಟಿ ಕಸ ಎತ್ತಲು ಬಂದ ರೈತನೊಬ್ಬ, ಮನೆಯೊಳಗಿನ ನಿಶ್ಶಬ್ದದಿಂದ ಕುತೂಹಲಗೊಂಡು ಕಿಟಕಿಯಲ್ಲಿ ಇಣುಕಿನೋಡುತ್ತಾನೆ. ಎಲ್ಲರೂ ಭೋಜನಕ್ಕೆ ಕುಳಿತಿರುವುದನ್ನು ಕಂಡು 'ಉಣ್ತೀರಾ ಬುದ್ಧಿ ಉಣ್ಣಿ ಉಣ್ಣಿ' ಎನ್ನುತ್ತಾನೆ. ಬ್ರಾಹ್ಮಣ ಭೋಜನದ ನಡುವೆ ಶೂದ್ರನೊಬ್ಬ ಮಾತಾಡಿದರೆ ಏನು ಮಾಡಬೇಕು ಎಂದು ಎಲೆಯ ಮುಂದೆಯೆ ಕುಳಿತು ಶಾಸ್ತ್ರಗ್ರಂಥಗಳಲ್ಲಿ ಪರಿಹಾರ ಹುಡುಕಲು ಆರಂಭಿಸುವರು. ಎಲ್ಲೂ ಉತ್ತರ ಸಿಗುವುದಿಲ್ಲ. ಸಂಜೆಯಾಗುತ್ತದೆ. ಎಲ್ಲರೂ ಹಸಿವಿನಿಂದ ಕಂಗಾಲಾಗುತ್ತಾರೆ. ಕಡೆಗೆ ಆಪತ್ ಧರ್ಮದ ಹಾದಿ ಸಿಕ್ಕು, ಊಟವಾಗುವ ಹೊತ್ತಿಗೆ ಎಲ್ಲರಿಗೂ ಸಾಕಾಗಿರುತ್ತದೆ.

ಇ) ವಸುಧೇಂದ್ರರ ಒಂದು ಬರೆಹದಲ್ಲಿ ನಿರೂಪಕನು ತನ್ನ ಗೆಳೆಯನಿಗೆ 'ನೀನು ಜೀವನದಲ್ಲಿ ಮಾಡಿದ ಅತ್ಯುತ್ತಮ ಊಟ ಯಾವುದು?' ಎಂದು ಕೇಳುತ್ತಾನೆ. ಆತ ತಾನು ಪರಸ್ಥಳದಲ್ಲಿದ್ದು ತುಂಬ ಹಸಿದಿದ್ದ ಹೊತ್ತಲ್ಲಿ, ಅಪರಿಚಿತ ಮನೆಯೊಂದರಲ್ಲಿ ಉಂಡ ಸಾಮಾನ್ಯ ರೊಟ್ಟಿ ಊಟ ಶ್ರೇಷ್ಠ ಊಟವಾಗಿ ನೆನಪಲ್ಲಿ ಉಳಿದಿದೆಯೆಂದೂ ಉತ್ತರಿಸುತ್ತಾನೆ. ನಿರೂಪಕ ಇದೇ ಪ್ರಶ್ನೆಯನ್ನು ತನ್ನ ಚಾಲಕನಿಗೆ ಕೇಳುತ್ತಾನೆ. ಕೆಳಜಾತಿಯಿಂದ ಬಂದ ತನ್ನನ್ನು ಮೇಲ್ಜಾತಿಯ ಯಜಮಾನರು ಜತೆಗೆ ಕೂರಿಸಿಕೊಂಡು

ಉಂಡಿದ್ದು ಜೀವನದ ಶ್ರೇಷ್ಠ ಊಟವೆಂದು ಉತ್ತರಿಸುತ್ತಾನೆ.

ಮೇಲ್ಕಾಣಿಸಿದ ಪ್ರಸಂಗಗಳಲ್ಲಿ ಕೋಲಾಹಲಕ್ಕೆ ಕಾರಣವಾಗಿರುವುದು ಅಡುಗೆಯಲ್ಲ. ಅದನ್ನು ಮಾಡಿದವರು, ಬಡಿಸುವವರು, ಜತೆಯಲ್ಲಿ ಕೂತವರ ಸಾಮಾಜಿಕ ಆರ್ಥಿಕ ಹಿನ್ನೆಲೆ. ಊಟವು ನೆನಪಿನಲ್ಲಿ ಉಳಿಯಲು ಅದರ ವಿಶಿಷ್ಟ ರುಚಿ ಮಾತ್ರ ಕಾರಣವಲ್ಲ. ಉಣ್ಣುವ ಹೊತ್ತಿನ ನಮ್ಮ ಹಸಿವು, ಮನಃಸ್ಥಿತಿ ಹಾಗೂ ಬಡಿಸುವವರ ಪ್ರೀತಿ ಕೂಡ. ಹಿರಿಯ ಲೇಖಕರಾದ ಕಾಮರೂಪಿಯವರು ತಮ್ಮ ಮಾತುಕತೆಯಲ್ಲಿ ಅಸ್ಸಾಮಿಗೆ ಹೋಗುವಾಗ, ಕೊಲ್ಕತ್ತೆಯ ಹೋಟೆಲೊಂದರಲ್ಲಿ ಮಾಡಿದ ಊಟವನ್ನು ನೆನೆಯುವುದುಂಟು. ದಿನನಿತ್ಯದ ಚಟುವಟಿಕೆಯ ಭಾಗವಾಗಿ ಊಟವನ್ನು ನಮ್ಮ ಜೀವಿತಾವಧಿಯಲ್ಲಿ ಸಾವಿರಾರು ಬಾರಿ ಮಾಡುತ್ತೇವೆ. ಆದರೂ ಯಾಕೆ ಕೆಲವು ಊಟಗಳು ನೆನಪಿನಲ್ಲಿ ಉಳಿದುಬಿಡುತ್ತವೆ? ಹಸಿವು ದೇಹದ್ದು. ಊಟ, ಉಣ್ಣುವ ಸಮಯ, ಜಾಗ, ಜತೆಯಲ್ಲಿರುವವರು ಹಾಗೂ ಬಡಿಸುವವರ ಜತೆಗೆ ನಮಗಿರುವ ಭಾವನೆ ಮನಸ್ಸಿನವು. ಕೆಲವು ಕಡೆಯ ರಿವಾಜಿನ ಪ್ರಕಾರ, ಸೇವಕರು ಒಡೆಯರ ಜತೆ, ಮಹಿಳೆಯರು ಗಂಡಸರ ಜತೆ, ಕೆಳಜಾತಿಯವರು ಮೇಲ್ಜಾತಿಯವರೊಡನೆ, ಬಡವರು ಸಿರಿವಂತರೊಡನೆ ಊಟಕ್ಕೆ ಕೂರುವಂತಿಲ್ಲ. ಉಣ್ಣುವ ಸಮಯವೂ ಉಣ್ಣುವವರ ಸ್ಥಾನವನ್ನು ಸೂಚಿಸುತ್ತದೆ. ದೇವರಿಗೆ ಪ್ರಥಮ. ನಂತರ ಮಾನವರ ಭೋಜನ. ಧಾರ್ಮಿಕವಾಗಿ ಗುರುಗಳಾದವರಿಗೆ ಹಿರಿಯರಿಗೆ ಗಣ್ಯರಿಗೆ ಮೊದಲು. ಬಹುತೇಕ ಮನೆಗಳಲ್ಲಿ ಗಂಡಸರಿಗೆ ಮೊದಲು; ಹೆಂಗಸರು ಮಕ್ಕಳು ನಂತರ. ಸೇವಕರಿಗೆ ಕೊನೆಯಲ್ಲಿ. ಬಡಿಸುವಾಗ ಧೊಪ್ಪೆಂದು ತಟ್ಟೆಗೆ ಎತ್ತಿ ಹಾಕಿದರೆ, ನೀರಿನ ಲೋಟ ಕುಕ್ಕಿದರೆ ಬಡಿಸುವವರಿಗೆ ಕೋಪ ಬಂದಿದೆಯೆಂದು ಅರ್ಥ. ಭಿನ್ನ ಸ್ವೀಕರಿಸಬೇಕು, ಊಟ ಮಾಡಿ, ತಿಂದು ಸಾಯಿ–ಮಾತಿನಲ್ಲೂ ಬಡಿಸುವವರ ಭಾವನೆ ಪ್ರಕಟವಾಗುತ್ತದೆ. ಅಡುಗೆ ಮಾಡುವವರ ಪಾಕ ಪ್ರವೀಣತೆಗಿಂತ ಅವರ ಜಾತಿಧರ್ಮದ ಹಿನ್ನೆಲೆ ಮುಖ್ಯವಾಗುತ್ತದೆ. ಸಾರ್ವಜನಿಕ ಔತಣಗಳಲ್ಲಿ ಗಂಡಸರೇ ಅಡುಗೆಕಾರರಾದರೂ, ಸ್ವಂತ ಮನೆಯಲ್ಲಿ ಅಡುವುದು ಅಗೌರವ ಎಂದು ತಿಳಿಯುವರು. ಬ್ರಾಹ್ಮಣರ ಹೋಟೆಲೆಂದು ಬರುವ ಮಡಿವಂತರು ಅಡುಗೆ ಮನೆಯಲ್ಲಿ ಎಲ್ಲ ಜಾತಿಯ ಬಾಣಸಿಗರೂ ಇರುತ್ತಾರೆಂದು ಅರಿಯದೇ ಹೋಗುವರು. ಉಣ್ಣುವ ವಿಷಯದಲ್ಲಿ ಸಂಘರ್ಷ ನಡೆಯುತ್ತಿದೆ. 'ಬಿಸಿಯೂಟದ ಅಡುಗೆ ಮಾಡುವವರು ದಲಿತರಾದರೆ ನಮ್ಮ ಮಕ್ಕಳನ್ನು ಶಾಲೆಗೆ ಕಳಿಸುವುದಿಲ್ಲ; ಶಾಲಾಮಕ್ಕಳಿಗೆ ಮಧ್ಯಾಹ್ನದ ಊಟದ ಜತೆ ಮಕ್ಕಳಿಗೆ ಮೊಟ್ಟೆ ಕೊಟ್ಟರೆ ದುಷ್ಟರಾಗುತ್ತಾರೆ; ಧಾರ್ಮಿಕ ಸ್ಥಳಗಳಲ್ಲಿ ಮೇಲ್ಜಾತಿಯವರಿಗೆ ಪ್ರತ್ಯೇಕ ಪಂಕ್ತಿಯಿರುವುದು ಸರಿ; ಸಸ್ಯಾಹಾರಿಗಳ ಜತೆ ಮಾಂಸಾಹಾರಿಗಳು ಕೂತು ಆಹಾರ ಸೇವಿಸುವುದು ಸಾಧ್ಯವಿಲ್ಲ; ಹಿಂದುಗಳೆಲ್ಲ ಒಂದೆಂದು ಘೋಷಿಸುವವರು ದಲಿತರ ಮನೆಯಲ್ಲಿ ಊಟಮಾಡಲಿ; ನಾವು ಯತಿಗಳು. ಯತಿಯ ಕಟ್ಟುಪಾಡಿನ ಪ್ರಕಾರ, ನಮ್ಮ ಜಾತಿಯ ಮನೆಯವರ ಮನೆಯಲ್ಲೇ ಆಹಾರ ಸೇವಿಸುವುದಿಲ್ಲ. ದನದ ಮಾಂಸ ತಿನ್ನುವವರ ನಾಲಗೆ ಸೀಳಬೇಕು; ನಮ್ಮ ಆಹಾರ ನಮ್ಮ ಆಯ್ಕೆ. ಕೇಳುವುದಕ್ಕೆ ನೀವ್ಯಾರು? – ಈ ಹೇಳಿಕೆಗಳು ಆಹಾರ ಸಂಸ್ಕೃತಿಯ ಲೋಕದ ಕೋಲಾಹಲಗಳನ್ನು ಬಿಂಬಿಸುತ್ತವೆ.

ವಾಸ್ತವದಲ್ಲಿ ಜತೆಯಲ್ಲಿ ಕೂರಿಸಿಕೊಂಡು ಊಟ ಮಾಡಲು ಸಾಧ್ಯವಾಗದಿದ್ದರೂ, ಊಟವಿರದಿದ್ದರೂ, ಊಟಕ್ಕೆ ಕೂರುವಾಗ ಯಾರಾದರೂ ಹೊಸಬರು ಕಂಡರೆ, ಬನ್ನಿ ಊಟ ಮಾಡೋಣ ಎಂದು ಆಹ್ವಾನಿಸುವ ಸಭ್ಯತೆ; ಹಾಗೆ ಕರೆಸಿಕೊಂಡವರು ತಾವು ಉಣ್ಣುವ ಸಾಧ್ಯತೆಯಿಲ್ಲವೆಂದು ಗೊತ್ತಿದ್ದರೂ, ಹೆಚ್ಚಾಗಲಿ ಎಂದು ಹಾರೈಸುವ ಶಿಷ್ಟಾಚಾರ ಉಳಿದುಕೊಂಡಿದೆ. ಊಟದ ಹೊತ್ತಲ್ಲಿ ಬಡವರೆಂದೊ ಅಪರಿಚಿತರೆಂದೊ ಬೇರೆ ಜಾತಿಯವರೆಂದೊ ಅಪಮಾನ ಆಗುವಂತೆ; ಊಟದಲ್ಲಿ ಜಾತಿಕಟ್ಟಳೆ ಮುರಿದು ಮಾನವೀಯತೆ ಮೆರೆದವರೂ ಇದ್ದಾರೆ. ಪಕ್ಕದಲ್ಲಿ ಕೂತಿರುವವರು ಯಾರೆಂದು ವಿಚಾರ ಮಾಡದೆ ಒಟ್ಟಿಗೆ ಉಣ್ಣುವ ಆಧುನಿಕ ಹೋಟೆಲುಗಳಿಂದ ಈ ತರತಮಗಳು ಸಾಕಷ್ಟು ಭಗ್ನವಾಗಿವೆ. ಆದರೂ ಸಂಪ್ರದಾಯದ ಕಸುರು ಉಳಿದುಕೊಂಡಿದೆ.

ದಿನದೂಟಕ್ಕೆ ಪರದಾಡುವವರು ಇರುವ ಸಮಾಜದಲ್ಲಿ, ಉಣ್ಣುವ ವಿಷಯ ಯಾಕೆ ಸಮಸ್ಯೆಯಾಗಿದೆ? ಆಹಾರ ಸೇವನೆ ನಿಜವಾಗಿ ಸಮಸ್ಯೆಯೊ, ಅದನ್ನೊಂದು ಸಮಸ್ಯೆಯನ್ನಾಗಿ ಮಾಡಲಾಗಿದೆಯೊ? ನಿಜ, ಆಹಾರದ ವಿಷಯದಲ್ಲಿ ಜಗತ್ತಿನ ಎಲ್ಲ ಸಮಾಜಗಳಲ್ಲಿ ವಿಧಿನಿಷೇಧಗಳಿವೆ. ಅವು ಜಗಳಕ್ಕೂ ಸಾಮರಸ್ಯಕ್ಕೂ ತಮಾಷೆಗೂ ಕಾರಣವಾಗಿವೆ. ಪ್ರಾಣಿ, ಪಕ್ಷಿ, ಕೀಟ ಜಗತ್ತಿನಲ್ಲಿ ಬದುಕುಳಿಯಲು ಅಗತ್ಯವಾಗಿರುವ ಗಾಳಿ ನೀರುಗಳಂತೆ ಆಹಾರವು ಪ್ರವೃತ್ತಿಗೆ ಸಂಬಂಧಪಟ್ಟಿದೆ. ಆದರೆ ಮಾನವ ಸಮಾಜದಲ್ಲಿ ಆಹಾರ ತಯಾರಿಕೆ, ಬಡಿಸುವಿಕೆ, ಸೇವನೆ ಕೇವಲ ಹಸಿವನ್ನು ತಣಿಸುವ ಪ್ರವೃತ್ತಿಯ ಸಂಗತಿಯಲ್ಲ. ಸಾಮಾಜಿಕ ಭೇದಭಾವದ, ಸಾಂಸ್ಕೃತಿಕ ಸಭ್ಯತೆಗಳ, ವೈಯಕ್ತಿಕ ಮಾನಾಪಮಾನದ, ಧಾರ್ಮಿಕ ಪವಿತ್ರ ಅಪವಿತ್ರೀಕರಣದ, ಲಿಂಗ ತಾರತಮ್ಯದ, ಸಂತೋಷ ಪ್ರೀತಿ ಅಪಮಾನ ದುಃಖಗಳ ಭಾಗವೂ ಹೌದು. ಸಹಸ್ರಾರು ವರ್ಷಗಳಿಂದ ನಡೆದಿರುವ ಸೃಜನಶೀಲ ಪ್ರಯೋಗಗಳಿಂದ ಕೂಡಿರುವ ಆಹಾರವು, ಕೃಷಿಪದ್ಧತಿ, ಭೌಗೋಳಿಕ ವ್ಯತ್ಯಾಸ, ಜಾತಿ–ಧರ್ಮ, ಸಂಪ್ರದಾಯ, ದೈವಿಕ ಆರಾಧನೆಗಳ ಜತೆಗೆ ಸಂಬಂಧ ಹೊಂದಿದೆ. ಸನ್ನಿವೇಶಾನುಸಾರ ನಿರ್ದಿಷ್ಟ ಆಹಾರವನ್ನು ನಿಯಂತ್ರಿಸುವುದು ಮತ್ತು ಉತ್ತೇಜಿಸುವುದನ್ನು ಪ್ರಭುತ್ವವು ಮಾಡುತ್ತ ಬಂದಿದೆ. ಆದ್ದರಿಂದ ಆಹಾರವು ರಾಜಕೀಯ ಸಂಗತಿಯೂ ಆಗಿದೆ. ಪ್ರಾಣಿ–ಪಕ್ಷಿಗಳ ಜಗತ್ತಿನಲ್ಲೂ ಬಲಿಷ್ಠರು ದುರ್ಬಲರಿಂದ ಆಹಾರವನ್ನು ಕಿತ್ತುಕೊಳ್ಳುವುದು ಸಾಮಾನ್ಯ; ಅದು ಬಲಿಷ್ಠರು ಬದುಕಬೇಕು ಎಂಬ ಕಾಡಿನ ನ್ಯಾಯದ ಪ್ರಶ್ನೆಯಾಗಿದೆ. ಮನುಷ್ಯ ಸಮಾಜದಲ್ಲಿರುವಂತೆ ಶ್ರೇಷ್ಠತೆ ಕನಿಷ್ಠತೆಯನ್ನು ಸಾಧಿಸುವ ಪ್ರಶ್ನೆಯಾಗಿಲ್ಲ.

**ರಹಮತ್ ತರೀಕೆರೆ**
ಎಂ. ಪಿ. ಪ್ರಕಾಶ್ ನಗರ, ಹೊಸಪೇಟೆ
ಬಳ್ಳಾರಿ – ೫೮೩ ೨೦೧




*ಅಂತರರಾಷ್ಟ್ರೀಯ ಮಾನವ ಹಕ್ಕುಗಳ ದಿನವಾದ ಡಿಸೆಂಬರ್ ೧೦ರಂದು ಕೆ. ಆರ್. ಪೇಟೆಯ ತೆಂಡೇಕೆರೆ ಎಂಬ ಊರಲ್ಲಿ ಪ್ರೌಢಶಾಲೆಯ ಶಿಕ್ಷಕರಿಗಾಗಿ 'ಸಂವಿಧಾನ ಸಾಕ್ಷರತಾ ಶಿಬಿರ' ನಡೆಯಿತು. ಕೆ. ಆರ್. ಪೇಟೆಯ ಬಿ.ಇ.ಒ. ಶ್ರೀ ರೇವಣ್ಣ ಅವರು ನವಕರ್ನಾಟಕ ಪ್ರಕಾಶನ ಪ್ರಕಟಿಸಿರುವ ಎಂ. ಅಬ್ದುಲ್ ರೆಹಮಾನ್ ಪಾಷರವರ "ಭಾರತ ಸಂವಿಧಾನ: ಅರ್ಥ – ಅರಿವು – ಜಾಗೃತಿ" ಕೃತಿಯನ್ನು ಬಿಡುಗಡೆ ಮಾಡಿದರು. ಶಿಬಿರದಲ್ಲಿ ಹಲವರು ಭಾಗವಹಿಸಿದ್ದರು.*

# ಇರುವ ತೊರೆವ ಕಷ್ಟ



**ಯಾ**ರು ನನ್ನವರು
ಗುರುತಿಸಲಿ ಹೇಗೆ
ಗೆರೆ ಗೀಚು
ಮಧ್ಯೆ ವಿಕಾರ ಚಹರೆಗಳು
ಮನುಷ್ಯರಿರುವಲ್ಲಿ

ಸುತ್ತ ಆಳೆತ್ತರದ ಹುತ್ತ
ಅಗೆದಷ್ಟು ಅನುಮಾನ
ನನ್ನ ರಕ್ತ ಬೆವರು ಬಣ್ಣಿಸಿ
ಹೂ ಬೆಳೆದ ಈ ನೆಲಕ್ಕೆ
ನಾನು ಯಕಃಶ್ಚಿತ್.. ನನ್ನ ಪರಿಚಯ

ಅಪ್ಪಾ , ನಿಮ್ಮ ಪುರಾಣದ ಕಂತೆ
ಇನ್ನೂ ಮುಗಿದಿಲ್ಲ ಖುರಾನಿನ ಸಂತೆ
ಮಧ್ಯೆ ನಿಂತ ನಾನು ಯಾತರವ ?
ಧರ್ಮ ಕರ್ಮಗಳ ಗೊಡವೆ
ಈ ನೆಲಕ್ಕಂಟಿದ ಮಸಿ ಮುಖದ ಮೇಲೂ

ತೊಳೆಯುವದು ಹೇಗೆ
ಎಷ್ಟು ಗುಡಿಸುವಿರಿ
ಕಣ್ಣ ಕಸರು ಪಿಚ್ಚು ಪಿಸರು
ಕನ್ನಡಿಯೊಳಗಿನ ಕೊಸರು
ನಾನು ನಾನೆ ? ವಿಕಟ ನಗು..




ಅನ್ನದ ಬಟ್ಟಲಲಿ
ನೀವೇ ಚಂಡಾಡಿದ ರುಂಡ
ನೇತು ಹಾಕಿರುವ ಬೆತ್ತಲೆ ದೇಹ
ಕನಲುತ್ತಿವೆ ಆತ್ಮ
ಅಬ್ಬಾ ! ಒಳಗಿನ ತಿಳಿಗೂ ಅಂಥದೆ ಬಣ್ಣ

ನೆತ್ತರು ಸವಿದ ನೆಲಕ್ಕೆ ಬಂಪರ್
ಬಹುಮಾನ
ಅವಮಾನದ ಕಿಚ್ಚು ಹಾದು ಬಂದವರಿಗೆ ಕಾದಿದೆ..
ಸುದ್ದಿಗೂ ರಕ್ತದ ರುಚಿ
ಮೂಗರಳಿಸಿಕೊಂಡೇ ಹುಟ್ಟುತ್ತಿದೆ ಸೈತಾನನ ಸಂತಾನ
ಈ ಧಗೆಗೆ ಸುಡುವದೆಷ್ಟು ಸಲೀಸು

ಉಂಡುಡಲು ಅವರಿವರ ಫರ್ಮಾನು
ಪಹರೆ ಕಾಯುತ್ತಿವೆ ತಲವಾರು
ಮೂಗ ನೇರಕೆ ಉಸಿರು
ಆಡುವ ಕಷ್ಟ
ಆಡದಿರುವ ಕಷ್ಟ ... ಬದುಕು ಬಡವ

ಬರೀ ಹಣೆಗೆ ತಿಲಕವಿಡಲು
ನಿಗಿನಿಗಿ ತುಬಾಕಿ ತವಕ
ಬಾಬಾ, ನೀ ಸುಟ್ಟ ಅಧರ್ಮದ ಪುಟಗಳ ಭಸ್ಮ
ನೊಸಲೇರಿ ಅಣಕಿಸುತಿದೆ
ನೆತ್ತಿ ಮೇಲೆ ದಣಿವಿರದ ದೇವರ ನರ್ತನ
ಹೀಗೆ ತೆರೆಯುತ್ತಿದೆ ಪ್ರತೀ ಬೆಳಗು
ಮುಟ್ಟಾದವಳಿನ್ನೂ ಹೊರಗೆ ಇದ್ದಾಳೆ
ಅಣ್ಣ.. ನೀನಷ್ಟೆ ಅಲ್ಲ
ಆನೂ ಹೊರಗಣವ

ಆಡಿದ್ದು ತೊರೆವ ಮಾತಲ್ಲ
ತೊರೆವ ಕಷ್ಟ

**ಚ. ಲಿಂಗರಾಜ ಸೊಟ್ಟಪ್ಪನವರ**
ನಂ. ರೇಣುಕಾ ನಿಲಯ
ಕಾಳೆ ಬಿಲ್ಡಿಂಗ್, ವಿದ್ಯಾ ನಗರ-ಪಶ್ಚಿಮ
ಹಾವೇರಿ - ೫೮೧ ೧೧೦

## ಟಿ. ಎಸ್. ಗೊರವರ

# ರನ್ನಿಂಗ್ ರೇಸ್

ಇನ್ನೇನು ನಾಲ್ಕು ನೂರು ಮೀಟರ್ ರನ್ನಿಂಗ್ ರೇಸ್ ಶುರು ಆಗಲಿದೆ. ಗಜೇಂದ್ರಗಡದ ಭೂಮರಡ್ಡಿ ಕಾಲೇಜಿನ ಆವರಣದಲ್ಲಿ ಆಗಲೇ ಕ್ರೀಡಾಪಟುಗಳ ಸದ್ದು ಗದ್ದಲ ಶುರುವಾಗಿತ್ತು. ಅದು ಅಂತರ್‌ಕಾಲೇಜು ಕ್ರೀಡಾಕೂಟ. ವಿದ್ಯಾರ್ಥಿನಿಯರ ರನ್ನಿಂಗ್ ಬೇರೆ. ಪುಂಡ ಹುಡುಗರ ಸಿಳ್ಳೆ, ಕೇಕೆಗಳು ಮುಗಿಲು ಮುಟ್ಟಿದ್ದವು. ಪಿ. ಟೀಚರ್‌ಗಳು ಕೈಯಲ್ಲೊಂದು ಲಿಸ್ಟ್ ಹಿಡಿದುಕೊಂಡು ಸ್ಪರ್ಧಾಳುಗಳ ಹೆಸರು ಕೂಗುತ್ತಾ ಗಡಿಬಿಡಿಯಲ್ಲಿದ್ದರು. ಟೀ ಶರ್ಟ್, ಸ್ಪೋರ್ಟ್ಸ್ ಚೆಡ್ಡಿ ಧರಿಸಿದ್ದ ಹುಡುಗಿಯರು ರನ್ನಿಂಗ್ ಟ್ರ್ಯಾಕ್‌ನಲ್ಲಿ ನಿಂತಿದ್ದರು. ಒಬ್ಬರಿಗಿಂತ ಮತ್ತೊಬ್ಬರು ಚೆಂದ ಕಾಣುತ್ತಿದ್ದ ಹುಡುಗಿಯರು ಥೇಟ್ ಜಾತ್ರೆಯ ಗೊಂಬೆಗಳ ಹಾಗೆ ತೋರಿ ಹುಡುಗರ ಕಣ್ಣುಗಳಿಗೆ ಹಬ್ಬ ತಂದಿದ್ದರು. ಕಂಡೂ ಕಾಣದಂತೆ ಹುಡುಗಿಯರ ಮುಖದಲ್ಲಿ ನಾಚಿಕೆ ಲಾಸ್ಯವಾಡತೊಡಗಿತ್ತು.

ಭೂಮರಡ್ಡಿ ಕಾಲೇಜಿನ ಸುಲೋಚನಾ ಕೂಡ ರನ್ನಿಂಗ್ ಟ್ರ್ಯಾಕ್‌ನಲ್ಲಿ ನಿಂತಿದ್ದಳು. ನಾಲ್ಕು ನೂರು ಮೀಟರ್ ಓಟದಲ್ಲಿ ಯಾವತ್ತೂ ಸೋಲೊಪ್ಪದ ಸುಲೋಚನಾ ಗೆದ್ದೇ ಗೆಲ್ಲುವಳೆಂಬ ಉತ್ಸಾಹ ಆ ಕಾಲೇಜಿನ ವಿದ್ಯಾರ್ಥಿಗಳ ಮಾತುಗಳಲ್ಲಿ ಅನುರಣಿಸತೊಡಗಿತ್ತು. ಪಿ. ಟಿ. ಟೀಚರ್ 'ಆನ್ ಯುವರ್ ಮಾರ್ಕ್ ಸೆಟ್. ಗೋ..' ಅಂತ ಕ್ಲಾಪ್ಸ್ ಹಾಕಿದ ತಕ್ಷಣ ಎಲ್ಲ ಸ್ಪರ್ಧಾಳುಗಳು ಓಟ ಕಿತ್ತರು.

ಕ್ರೀಡಾಂಗಣದ ಸುತ್ತ ನೆರೆದಿದ್ದ ಆಯಾ ಕಾಲೇಜಿನ ಹುಡುಗರು ತಮ್ಮ ಕಾಲೇಜಿನ ಸ್ಪರ್ಧಾಳುಗಳ ಹೆಸರು ಕೂಗಿ ಹುರಿದುಂಬಿಸತೊಡಗಿದ್ದರು. ಎರಡು ರೌಂಡ್ ಹೊಡೆಯುತ್ತಲೇ ಕೆಲ ಹುಡುಗಿಯರು ದಮ್ಮು ಹತ್ತಿ ಅಲ್ಲಲ್ಲೇ ಕುಸಿದುಬಿದ್ದರು. ಕೊನೆಗೆ ಉಳಿದವರು ಮೂರ್‍ನಾಲ್ಕು ಜನ ಮಾತ್ರ. ಇವರಿಗೂ ದಮ್ಮು ಹತ್ತಿ, ಸಣ್ಣಗೆ ಓಡತೊಡಗಿದ್ದರು. ಇನ್ನೊಂದು ರೌಂಡ್ ಹೊಡೆದರೆ ಆಟ ಮುಗಿಯುತ್ತಿತ್ತು. ಸುಲೋಚನಾ ಓಡಿಯೇ ಓಡುತ್ತಿದ್ದಾಳೆ. ಅವಳ ಕಾಲೇಜಿನ ಹುಡುಗರು ಕೇಕೆ, ಶಿಳ್ಳೆ ಹೊಡೆಯುತ್ತಾ ಹುರಿದುಂಬಿಸುತ್ತಿದ್ದುದರಿಂದ ದಮ್ಮು ಹತ್ತಿರುವುದನ್ನು ಮರೆತು ಓಟವನ್ನು ಮತ್ತೆ ಚುರುಕುಗೊಳಿಸಿದಳು. ಅವಳ ಕಾಲುಗಳು ದಣಿವನ್ನು ಮರೆತಂತಿದ್ದವು. ಅದು ಚಿಗರೆಯಂಥ ಓಟ. ಸ್ವಲ್ಪ ಸಮಯ ಕಳೆದಿರಬಹುದು. ಕೇಕೆ, ಶಿಳ್ಳೆಗಳು ನಿಂತಂತೆ ಅನಿಸಿ ಓಡುತ್ತಲೇ ಆ ಕಡೆ ಈ ಕಡೆ ದಿಟ್ಟಿಸಿದಳು. ಯಾರೊಬ್ಬರೂ ಕಾಣುತ್ತಿಲ್ಲ. ಒಮ್ಮೆ ಹಿಂದಿರುಗಿ ನೋಡಿದಳು. ತನ್ನ ಹಿಂದೆ ಯಾರೂ ಓಡುತ್ತಿಲ್ಲ. ಗಾಬರಿಗೆ ಬಿದ್ದಳು. ಗ್ರೌಂಡಿನ ತುಂಬಾ ತಾನೊಬ್ಬಳೇ ಓಡುತ್ತಿದ್ದಾಳೆ. ಇದ್ದಕ್ಕಿದ್ದಂತೆ ಕುಸಿದುಬಿದ್ದಳು.

ಸುಲೋಚನಾಳಿಗೆ ಥಟ್ಟನೆ ಎಚ್ಚರವಾಯಿತು. ಕನಸು ಮಾಡಿದ ಗಾಯದ ಕುರುಹು ಎಂಬಂತೆ ಅವಳ ಮುಖದ ಮ್ಯಾಲೆ ಇನ್ನೂ ಗಾಬರಿ ತೆಳ್ಳಗೆ ಹರಡಿತ್ತು. ರೂಮಿನ ತುಂಬ ಕರ್‍ರನೆ ಕತ್ತಲು. ಹಚ್ಚಿದ ಕಂದೀಲು ಯಾವಾಗಲೋ ಆರಿಹೋಗಿತ್ತು. ಅವಳಿಗೆ ಮತ್ತೆ ಕಂದೀಲು ಹಚ್ಚಬೇಕು ಅನಿಸಲಿಲ್ಲ. ತಲೆದಿಂಬಿನ ಹತ್ತಿರವೇ ಇಟ್ಟುಕೊಂಡಿದ್ದ ಚರಿಗೆ ಎತ್ತಿ ಕತ್ತಲಲ್ಲೇ ನೀರು ಕುಡಿದಳು. ಆದರೂ ಜನಕ್ಕೆ ಸಮಾಧಾನ ಅನಿಸಲೇ ಇಲ್ಲ. ತಾನು ಕ್ರೀಡಾಪಟುವಾಗಿದ್ದ ಸುಂದರ ದಿನಗಳು ನೆನಪಾಗಿ ಅವಳನ್ನು ಮತ್ತಷ್ಟು ದುಃಖದಲ್ಲಿ ತೊಯ್ಯುವಂತೆ ಮಾಡಿದ್ದವು. ಗಾಢ ಕತ್ತಲಲ್ಲಿ ಅವಳ ಕಣ್ಣಿಂದ ಜಾರಿದ ಕಣ್ಣೀರು, ಬಿಸಿ ಉಸಿರು, ಸಂಕಟವೇ ಮೂರ್ತಿವೆತ್ತಂತಿದ್ದ ಮುಖ ಯಾರಿಗೂ ಕಾಣಿಸದೇ ಹೋಯಿತು. ಕಾಲೇಜು ದಿನಗಳು ಮತ್ತು ವರ್ತಮಾನದ ಸುಡು ದಿನಗಳು ಕಲಸುಮೇಲೋಗರವಾಗಿ ಅವಳ ಕರುಳನ್ನು ಅವಳಿಗೇ ಗೊತ್ತಿಲ್ಲದಂತೆ ಯಾರೋ ಸಣ್ಣಗೆ ಕೊಯ್ದಂತೆನಿಸಿ, ಆ ಯಾತನೆ ಅನಾಮತ್ತಾಗಿ ಮುತ್ತಿಕೊಂಡು ಜೀವ ತಿನ್ನತೊಡಗಿದ್ದವು. ಬೆಳಕು ಹರಿಯಲು ಇನ್ನೂ ಭಾಳ ಹೊತ್ತಿರಬೇಕು. ಸುಮ್ಮನೆ ಕತ್ತಲು ದಿಟ್ಟಿಸುತ್ತ ಮಲಗಿದಳು.

✳ ✳ ✳

ಸುಲೋಚನಾ ಡಿಗ್ರಿ ಮುಗಿದ ನಂತರ ಬಿ.ಎಡ್.ಗೆ ಸೀಟು ಸಿಗದೆ



ಮನೆಯಲ್ಲೇ ಉಳಿದುಕೊಂಡಳು. ಬಿ.ಎಡ್. ಸೀಟು ಸಿಗದಿದ್ದರೇನಂತೆ ಬಿ.ಪಿಎಡ್ ಮಾಡಿದರೆ ತನ್ನ ಆಸಕ್ತಿಗೂ ಸರಿ ಹೊಂದುತ್ತದೆ ಅನಿಸಿ ಅವರಪ್ಪನಿಗೆ ಹೇಳಿದ್ದಳು. ಆದರೆ ಅವರಪ್ಪ ಮಲಕಾಜಪ್ಪ "ಬಿ. ಪಿಎಡ್ ಇಲ್ಲೆಲ್ಲೂ ಹತ್ರ ಇಲ್ಲ. ಕಲಿಯಾಕ ನಿ ದೂರದ ಧಾರವಾಡಕ್ಕ ಹೋಗಬೇಕು. ಅಲ್ಲಿ ನಿನ್ನ ಊಟ, ವಸ್ತಿ ಎಲ್ಲ ಸಮಸ್ಯೆ ಆಗುತ್ತ. ಕಲಿತರ ಏನ್ ಮಾಡುವಾಕಿ ಅದಿ. ನಿಮ್ಮ ಅಕ್ಕಂದು ಮದುವಿ ಆಗ್ಲಿ. ನಿನಗ ಒಳ್ಳೆ ನೌಕರಿ ಹುಡುಗನ್ನ ಹುಡುಕಿ ಮದುವಿ ಮಾಡ್ತಿನಿ. ಈಗ ಆರಾಮ ಮನಾಗ ಉಣ್ಕೊಂಡು ತಿನ್ಕೊಂಡು ಇದ್ದು ಬಿಡು.." ಅಂತ ಮಾತಾಡಿ ಸುಲೋಚನಾಳ ಕಲಿಕೆಯ ಆಸೆಗೆ ಕಲ್ಲು ಹಾಕಿದ್ದರು. ಕ್ರೀಡಾಪಟುವಾಗುವ ಕನಸು ಅವಳ ಕಣ್ಣೆದುರೇ ಕಮರತೊಡಗಿತ್ತು.

ಆಗ ಸುಲೋಚನಾಳ ಹಾದಿಯಲ್ಲಿದ್ದ ಬೆಳಕಿನ ಕಿರಣವನ್ನು ಯಾವುದೋ ಒಂದು ಮೃಗ ನುಂಗಿ ಹಾಕಿದಂತೆ ಸಂಕಟ ಪಟ್ಟಿದ್ದಳು. ಆ ರಾತ್ರಿ ಕಣ್ಣೀರು, ಕೂಳು ಏಕ ಮಾಡಿದ್ದಳು. ಅವ್ವ ದಾಕ್ಷಾಯಣಿ, ಅಕ್ಕ ಭಾಗ್ಯ ಅವಳನ್ನು ರಮಿಸಿ ನೋಡಿದರೂ ದುಃಖ ಕಡಿಮೆಯಾಗಿರಲಿಲ್ಲ. ಎಂದೂ ಗದರಿಸದ ಮಲಕಾಜಪ್ಪ ಎದೆ ಎತ್ತರ ಬೆಳೆದ ಮಗಳನ್ನು ಅವತ್ತು ಕೆಂಗಣ್ಣು ಬಿಟ್ಟು ಗದರಿಸಿದ್ದ. ಸುಲೋಚನಾ ಒದ್ದುಕೊಂಡು ಬರುತ್ತಿದ್ದ ಅಳುವನ್ನು ಅಷ್ಟಕ್ಕೇ ನಿಲ್ಲಿಸಿ ಮನಸ್ಸು ಗಟ್ಟಿ ಮಾಡಿಕೊಂಡಿದ್ದಳು.

ಕೂಡಿ ಬಂದರೆ ಕಾರ್ತಿಕ ಮಾಸದಲ್ಲಿ ಲಗ್ನ ಮಾಡಿದರಾಯಿತು ಎಂದುಕೊಂಡು ಮನೆಯೊಳಗೆ ಭಾಗ್ಯಾಳಿಗೆ ವರ ನೋಡತೊಡಗಿದ್ದರು. ಸುಲೋಚನಾ ದಿನಗಳೆಯುತ್ತಿದ್ದಂತೆ ಅವರವ್ವನಿಗೆ ಮನೆಗೆಲಸದಲ್ಲಿ ಸಹಾಯ ಮಾಡುತ್ತ, ಭಾಗ್ಯಾಳೊಂದಿಗೆ ಕೀಟಲೆ ಮಾಡುತ್ತ, ಅವಳಪ್ಪನ ಮೇಲಿನ ಸಿಟ್ಟು ಕಡಿಮೆ ಮಾಡಿಕೊಂಡು ದಿನಗಳ ಜೊತೆ ಸಾಗತೊಡಗಿದ್ದಳು. ಇದೇ ರೂಢಿಯಾಗಿ ಅವಳೊಳಗೆ ನೆಮ್ಮದಿಯೂ ಆವರಿಸಿಕೊಂಡಂತಿತ್ತು. ಆ ನೆಮ್ಮದಿಯ ಪ್ರಭೆ ಮುಖದ ಮೇಲೂ ಚೆಲ್ಲಿಕೊಂಡು ಅವಳ ಚೆಂದವನ್ನು ನೂರ್ಮಡಿಗೊಳಿಸಿದ್ದವು.

ಇವಳ ಚೆಂದವೇ ಭಾಗ್ಯಾಳಿಗೆ ಮುಳುವಾದಂತಿತ್ತು. ಅಕ್ಕನನ್ನು ನೋಡಲು ಬರುತ್ತಿದ್ದ ವರಗಳೆಲ್ಲಾ ಸುಲೋಚನಾಳ ಚಂದವನ್ನೇ ಕಣ್ತುಂಬಿಕೊಂಡು ಭಾಗ್ಯಾಳನ್ನು ಒಲ್ಲೆವೆಂದೂ, ಬೇಕಾದರೆ ಸುಲೋಚನಾಳನ್ನು ಮಾಡಿಕೊಳ್ಳು ವುದಾಗಿ ತಿಳಿಸುತ್ತಿದ್ದರು. ಇದು ಭಾಗ್ಯಾಳಿಗೆ ಬೇಸರ, ಜಿಗುಪ್ಸೆ ತರಿಸಿ ತಂಗಿಯ ಮೇಲಿದ್ದ ಪ್ರೀತಿಯೂ ತುಸು ಕಮ್ಮಿಯಾಗಿ ಅಸಹನೆ ಮೊಳಕೆಯೊಡೆವಂತೆ ಮಾಡಿತ್ತು. ವರಗಳು ಬರುವುದು, ಹೋಗುವುದು, ಸುಲೋಚನಾಳನ್ನೇ ಲಗ್ನವಾಗುವುದಾಗಿ ತಿಳಿಸುವುದು ಮಲಕಾಜಪ್ಪ, ದಾಕ್ಷಾಯಣಿಯರಲ್ಲಿ ಬೇಗುದಿಯನ್ನುಂಟುಮಾಡಿದ್ದವು. ಅಕ್ಕನ ಲಗ್ನ ಮಾಡುವುದು ಬಿಟ್ಟು ಮೊದಲು ತಂಗಿಯ ಲಗ್ನ ಮಾಡಿದರೆ ಅಕ್ಕನ ಲಗ್ನ ಮಾಡೋದು ಕಷ್ಟವೆಂದರಿತ ಇಬ್ಬರೂ ಪೇಚಿಗೆ ಸಿಲುಕಿಕೊಂಡಿದ್ದರು. ಓಣಿಯ ಮಂದಿ ಕೂಡ ಪ್ರತಿ ವರ ಬಂದು ಹೋದಾಗಲೂ ಏನಾಯಿತೆಂದು ಬೇಕಂತಲೇ ಕೇಳುತ್ತಿದ್ದರು. ಇದರಿಂದ ಭಾಗ್ಯ ನಿತ್ಯ ಅವಮಾನದಲ್ಲಿ ಕುದ್ದುಹೋಗುತ್ತಿದ್ದಳು.

ದಿನಗಳು ಉರುಳಿದವು. ವರ್ಷಗಳೂ ಕಳೆದವು. ಭಾಗ್ಯಾಳಿಗೆ ಲಗ್ನ ಭಾಗ್ಯ ಸಿಗಲಿಲ್ಲ. ಇದರಿಂದ ಮನೆ ಮಂದಿಯೆಲ್ಲ ಚಿಂತೆಯಲ್ಲೇ ಕಾಲ ಕಳೆಯುವಂತಾಯಿತು. ಮನೆಯಲ್ಲಿ ಎಲ್ಲವೂ ಇದೆ. ಆದರೆ ನೆಮ್ಮದಿ ಮಾತ್ರ ದೀಪ ಹಚ್ಚಿ ಹುಡುಕುವಂತಾಗಿತ್ತು. ಭಾಗ್ಯಾಳಿಗೆ ಆಗಲೇ ಮೂವತ್ತರ ಆಸು–ಪಾಸು ವಯಸ್ಸು. ಇವಳಿಗಿಂತ ಒಂದೇ ವರ್ಷ ಚಿಕ್ಕವಳು ಸುಲೋಚನಾ. ಈ ಎರಡೂ ಹೆಣ್ಣು ಜೀವಗಳು ಊಟಕ್ಕಿಂತ ನೋವು ತಿಂದದ್ದೇ ಹೆಚ್ಚು.

ಭಾಗ್ಯಾಳನ್ನು ನೋಡಿಕೊಂಡು ಹೋದ ವರಗಳು ಒಲ್ಲೆ ಅನ್ನುವುದು ಸುಲೋಚನಾಳಿಗೆ ದಿಗಿಲು ಮೂಡಿಸಿತ್ತು. ಲಗ್ನವೆಂದರೆ ಇಷ್ಟೊಂದು ಪಡಿಪಾಟಲು ಪಡಬೇಕೆ ಎಂದು ತನಗೆ ತಾನೇ ಪ್ರಶ್ನಿಸಿಕೊಂಡು ಉತ್ತರ ಹೊಳೆಯದೆ ವಿಲಿಗುಟ್ಟುತ್ತಿದ್ದಳು. ಬಂದ ವರ ಸುಮ್ಮನೇ ಹೋಗುತ್ತಿರಲಿಲ್ಲ. ಇಷ್ಟವಿಲ್ಲದಿದ್ದರೆ ಇಷ್ಟವಾಗಿಲ್ಲವೆಂದಷ್ಟೇ ಹೇಳುತ್ತಿರಲಿಲ್ಲ. ಬದಲಾಗಿ ಹುಡುಗಿ ಚೆಲುವಿ ಅಲ್ಲವೆಂದು ಕಡ್ಡಿ ಮುರಿದಂತೆ ಹೇಳುತ್ತಿದ್ದರು. ಇದಷ್ಟೇ ಸಾಲದೆಂಬಂತೆ ವರನ ಅಕ್ಕನೋ, ತಂಗಿಯೋ, ಅವರ ಜೊತೆ ಬಂದ ಹೆಣ್ಣುಮಗಳೋ ಹುಡುಗಿಯ ಕಾಲ್ಬೆರಳು, ಅಂಗೈ ನೋಡುತ್ತಿದ್ದರು. ಆ ಮೇಲೆ ಎಂಥದೋ ಒಂದು ಕುಂಟು ಕಾರಣ ಹೇಳಿ ಹುಡುಗಿಯನ್ನು ತಿರಸ್ಕರಿಸುತ್ತಿದ್ದರು. ಇದು ಪುನರಾವರ್ತನೆಯಾದಂತೆಲ್ಲ ಸುಲೋಚನಾಳ ಒಳಗೆ ಹಾಲು ಉಕ್ಕಿದಂತೆ ಸಿಟ್ಟು ಉಕ್ಕುತ್ತಿತ್ತು. ಅವಳಿಗೇ ಗೊತ್ತಿಲ್ಲದಂತೆ ಲೋಕದ ಗಂಡುಗಳ ಬಗೆಗೆ ಅವಳೊಳಗೆ ತಿರಸ್ಕಾರ ಬಲವಾಗಿ ಮೂಡತೊಡಗಿತ್ತು.

ಭಾಗ್ಯಾಳಿಗೂ ಈಗೀಗ ಲಗ್ನವೆಂದರೆ ತಲೆ ಧಿಮಿಗುಡುತ್ತಿತ್ತು. ತತ್‌ಕ್ಷಣವೇ ಸಿಟ್ಟೆಂಬುದು ಯಾವುದೋ ರೂಪದಲ್ಲಿ ಹೊರಬೀಳುತ್ತಿತ್ತು. ಮಲಕಾಜಪ್ಪ ಇದೆಲ್ಲವನ್ನೂ ಗಮನಿಸಿದ್ದ. ಇನ್ನು ಬಾಳೆಂಬುದು ಮಸಣವಾಗುತ್ತದೆಂದು ಮನಗಂಡು ಅಲ್ಲಿ ಇಲ್ಲಿ ಹುಡುಕಿ ಹೇಗೋ ಎರಡನೇ ಸಂಬಂಧ ನೋಡಿ ಭಾಗ್ಯಾಳ ಲಗ್ನ ಮಾಡಿದ. ಆಗ ಮನೆ ಮಂದಿಯೆಲ್ಲಾ ಅಕ್ಷರಶಃ ಆಪತ್ತಿನಿಂದ ತಪ್ಪಿಸಿಕೊಂಡವರಂತೆ ನಿರುಮ್ಮಳಗೊಂಡರು.

ಭಾಗ್ಯಾಳ ಲಗ್ನವಾಗಿ, ಅವಳು ಗಂಡನ ಮನೆ ಸೇರಿ ತಾನಾಯಿತು, ತನ್ನ ಸಂಸಾರವಾಯಿತೆಂದು ಹೊಂದಿಕೊಳ್ಳುವ ಹೊತ್ತಿಗೆ ಸುಲೋಚನಾಳನ್ನೂ ತೋರಿಸತೊಡಗಿದ್ದರು. ಮಲಕಾಜಪ್ಪ, ದಾಕ್ಷಾಯಣಿ 'ಇವಳದೊಂದು ಬಾಳ್ವೆ ಸರಿಯಾದರೆ ಸಾಕು..' ಅಂದುಕೊಂಡರು. ಕಾಲ ಸುಲೋಚನಾಳ ಆಸೆ, ಆಕಾಂಕ್ಷೆಗಳನ್ನು ಸಣ್ಣಗೆ ಹೊಸಕಿ ಹಾಕಿ ಹಣ್ಣುಗಾಯಿ ನೀರುಗಾಯಿ ಮಾಡಿತ್ತು. ಚೇತರಿಕೆ ಅನ್ನೋದು ಮೊದಲ ಮಳೆಗೆ ಬುದುಗ್ಗನೇ ಏಳುವ ಅಣಬೆಯಷ್ಟು ಸಲೀಸಲ್ಲ. ಅವಳನ್ನು ನೋಡಲು ಅನೇಕ ವರಗಳು ಬಂದವು. ಸುಲೋಚನಾಳಿಗೆ ವರಗಳು ಬಂದಾಗ ಕೂಡುವುದು ಹಿಂಸೆಯಾಗುತ್ತಿತ್ತು. ಆಗ ಹುಡುಗರ ಬಗೆಗಿನ ತಿರಸ್ಕಾರ ನಿಗಿ ನಿಗಿ ಅನ್ನುತ್ತಿತ್ತು. ವರಗಳು ಬಂದಾಗ, ಅವರು ಮಾತಾಡಿಸಿದಾಗ ಸರಿಯಾಗಿ ಮಾತನಾಡಲು ಆಗದೆ ಎಡವಟ್ಟು ಮಾಡುತ್ತಿದ್ದಳು. ವರಗಳು ಸಹಜವಾಗಿಯೇ 'ಇವಳೊಂದಿಗೆ ಬಾಳ್ವೆ ಮಾಡೋದು ಕಷ್ಟ' ಎಂದುಕೊಂಡು ಒಲ್ಲೆ ಅನ್ನುತ್ತಿದ್ದರು. ಇದು ಮಲಕಾಜಪ್ಪ, ದಾಕ್ಷಾಯಣಿಗೆ ಉಡಿಯಲ್ಲಿಯ ಉರಿಯಂತೆ ಸುಡತೊಡಗಿತ್ತು. ಹೇಗೋ ಭಾಗ್ಯಾಳನ್ನು ಲಗ್ನ ಮಾಡಿ ಕೊಟ್ಟೆವೆಂದು ನಿರಾಳಗೊಂಡವರಿಗೆ ಧುತ್ತೆಂದು ಅಂಗಳದಲ್ಲಿ ಕೆಂಡದ ಮಳೆ ಸುರಿದಂತಾಗಿತ್ತು. ಚಿಂತೆ ಎಂಬುದು ಅವರನ್ನು ಅಟ್ಟಾಡಿಸಿಕೊಂಡು ಹೊಡೆಯತೊಡಗಿತ್ತು.

ಈಗ ಯಾಕಾದರೂ ಹಗಲಾಗುತ್ತದೋ ಎಂದು ಸುಲೋಚನಾ ಶಪಿಸುತ್ತಿದ್ದಳು. ಹಗಲಾದರೆ ಯಾವನೋ ವರನ ವೇಷ ಧರಿಸಿ ಬರುವುದು, ನೋಡುವುದು, ತಾನು ಒಲ್ಲೆ ಅನ್ನುವುದು ನಡೆದೇ ಇರುತ್ತಿತ್ತು. ರಾತ್ರಿಯ ಕತ್ತಲೆ ಅವಳಿಗೆ ಸಹ್ಯವೆನಿಸತೊಡಗಿತ್ತು. ನೆಮ್ಮದಿಯ ನಿಲ್ದಾಣದಂತೆ ತೋರುತ್ತಿತ್ತು. ತಾನಾಯಿತು, ಆ ಕತ್ತಲಾಯಿತು ಇದಿಷ್ಟೇ ಇರಬೇಕೆಂದು ಹಂಬಲಿಸುತ್ತಿದ್ದಳು. ಮತ್ತೊಬ್ಬರ ಪ್ರವೇಶವನ್ನೇ ಅವಳು ನಿರಾಕರಿಸತೊಡಗಿದ್ದಳು.

ಸುಲೋಚನಾಳ ಈ ರೀತಿಗೆ ಮಲಕಾಜಪ್ಪ ಸಿಟ್ಟಿಗೆದ್ದಿದ್ದ. 'ನಿ ಹೀಂಗ ಬಂದವರನ್ನೆಲ್ಲ ಒಲ್ಲೆ ಅಂದ್ರ ಲಗ್ನ ಆಗೋದು ಬಾಳ ಕಷ್ಟ ಐತಿ. ಇಷ್ಟು ವರ್ಷ ನಾವು ಅನುಭವಿಸಿದ್ದು ಸಾಕು. ದಿನ ಹೋದಂಗೆಲ್ಲ ವಯಸ್ಸು ಬರಲ್ಲ...' ಎಂದು ಒದರಾಡಿದ.

✶ ✶ ✶

ಸುಲೋಚನಾಳಿಗೆ ಪ್ರಿಯವಾದ ಕತ್ತಲು ಹಾಜರಿ ಹಾಕಿತ್ತು. ಅವಳಿಗೆ ಗಾಢವಾದ ನಿದ್ದೆ ಆವರಿಸಿತು. ತಾಸೊತ್ತು ಕಳೆದಿರಬಹುದು. ಪಿ. ಟಿ. ಟೀಚರ್ 'ಆನ್ ಯುವರ್ ಮಾರ್ಕ್. ಸೆಟ್. ಗೋ..' ಅಂದಂಗಾಯಿತು. ಎದ್ದಳು. ಮನೆ ದಾಟಿಕೊಂಡು ಬೀದಿಗಿಳಿದು ಓಡತೊಡಗಿದಳು. ದಮ್ಮು ಹತ್ತಿತು. ಅದನ್ನು ಲೆಕ್ಕಕ್ಕೆ ತೆಗೆದುಕೊಳ್ಳದೆ ಓಟ ಮತ್ತಷ್ಟು ಚುರುಕುಗೊಳಿಸಿದಳು. ಅವಳ ಕಾಲುಗಳಲ್ಲಿ ಎಂಥದೋ ಶಕ್ತಿ ಹುರಿಗೊಂಡಿತ್ತು. ಓಡುತ್ತ ಓಡುತ್ತ ತಮ್ಮೂರು ದಾಟಿದಳು. ಕಾಲುಗಳು ಬೀದಿಯಲಿ ಅಮೂರ್ತ ಚಿತ್ರ ಬಿಡಿಸುತ್ತ ಓಡುತ್ತಲೇ ಇದ್ದವು. ದಣಿವು ತನ್ನ ಕರ್ತವ್ಯ ಮರೆತಿತ್ತು. ಒಲ್ಲದ ಆ ವರಗಳು, ಬೇಸರ, ಬೀದಿಗಳು, ಮರಗಳು, ಊರುಗಳನ್ನು ಹಿಂದಿಕ್ಕುತ್ತ ಲೋಕದ ಕಟ್ಟ ಕಡೆಯ ಊರು ತಲುಪಬೇಕೆನ್ನುವ ಉಮೇದಿಯಲ್ಲಿ ಚಿಗರಿಯ ಹಾಗೆ ಓಡತೊಡಗಿದಳು.

**ಟಿ. ಎಸ್. ಗೊರವರ**
ರಾಜೂರ ಅಂಚೆ – ೫೮೨ ೧೧೪, ಗಜೇಂದ್ರಗಡ ತಾ॥, ಗದಗ ಜಿಲ್ಲೆ



# ಮೇಘನಾದ ಸಾಹಾ ಮತ್ತು ರಾಷ್ಟ್ರೀಯ ಪಂಚಾಂಗ

**ರಾಷ್ಟ್ರೀಯ ಪಂಚಾಂಗ ಎಂಬುದೊಂದು ಕನಸಿನ ಕೂಸು. ೧೯೪೭ರಲ್ಲಿ ಭಾರತ ಸ್ವಾತಂತ್ರ್ಯ ಪಡೆದಾಗ ತನ್ನದೇ ಆದ ಕ್ಯಾಲೆಂಡರ್‌ಅನ್ನು ಮಾಡಿಕೊಳ್ಳಬೇಕು ಎಂದು ಉದ್ದೇಶಿಸಿ ನಡೆಸಿದ ಸಂಶೋಧನೆಯ ಫಲ. ಇದರಲ್ಲಿ ಮೇಘನಾದ ಸಾಹಾ ಅವರ ಪಾತ್ರ ಬಹಳ ದೊಡ್ಡದು.**

**ಮೇ**ಘನಾದ ಸಾಹಾ ಅವರ ಹೆಸರು ಭೌತವಿಜ್ಞಾನದ ವಿದ್ಯಾರ್ಥಿಗಳಿಗೆಲ್ಲಾ ಪರಿಚಿತ. ನಾವಂತೂ ಅವರು ಬರೆದ "Treatise on Heat" ಎಂಬ ಪಠ್ಯಪುಸ್ತಕವನ್ನು ಓದಿಕೊಂಡೇ ಬೆಳೆದೆವು. ಮೊನ್ನೆ ಅಕ್ಟೋಬರ್‌ಗೆ ಅವರು ಹುಟ್ಟಿ ೧೨೫ ವರ್ಷಗಳಾದವು. ಅವರನ್ನು ನೆನಪಿಸಿಕೊಳ್ಳುವ ಹತ್ತು ಹಲವಾರು ಕಾರ್ಯಕ್ರಮಗಳು ದೇಶದಾದ್ಯಂತ ನಡೆದವು. ಭೌತವಿಜ್ಞಾನಕ್ಕೆ, ಅದರಲ್ಲೂ ಖಭೌತವಿಜ್ಞಾನಕ್ಕೆ ಅವರ ಕೊಡುಗೆಯನ್ನು ಸ್ಮರಿಸಿಕೊಳ್ಳುವ ಸಂದರ್ಭ ಒದಗಿತು.

ಢಾಕಾ ಸಮೀಪದ ಹಳ್ಳಿಯೊಂದರಲ್ಲಿ ಮೇಘನಾದ ಸಾಹಾ ೧೮೯೩ರ ಅಕ್ಟೋಬರ್ ೬ರಂದು ಜನಿಸಿದರು. ಬಹಳ ಬಡತನದಲ್ಲಿದ್ದ ಕಾರಣ ಶಾಲೆಗೆ ಹೋಗುವುದೇ ಕಷ್ಟವಾಗಿತ್ತು. ಆದರೆ ಬುದ್ಧಿವಂತನಾಗಿದ್ದ ಬಾಲಕನಿಗೆ ವಿದ್ಯಾರ್ಥಿ ವೇತನ ದೊರೆಯಿತು. ಉಪಾಧ್ಯಾಯರೊಬ್ಬರು ವಿಶೇಷ ಆಸಕ್ತಿ ತೋರಿಸಿ ಆತನನ್ನು ಮುಂದಕ್ಕೆ ತಂದರು. ಆದ್ದರಿಂದ ಮುಂದೆ ಹಿಂದೂ ಕಾಲೇಜಿಗೆ ಸೇರುವುದು ಸಾಧ್ಯವಾಯಿತು. (ಈಗ ಇದಕ್ಕೆ ಪ್ರೆಸಿಡೆನ್ಸಿ ಕಾಲೇಜ್ ಎಂಬ ಹೆಸರಿದೆ; ಈಚೆಗೆ ವಿಶ್ವವಿದ್ಯಾಲಯವಾಗಿದೆ). ೧೮೧೭ರಲ್ಲಿ ರಾಜಾರಾಂ ಮೋಹನರಾಯ್ ಸ್ಥಾಪಿಸಿದ ಕಾಲೇಜು ಇದು. ಗಣಿತದಲ್ಲಿ ಬಿ.ಎಸ್‌ಸಿ. ಓದಿದ ಮೇಘನಾದ ಸಾಹಾಗೆ ಸಹಪಾಠಿಯಾಗಿದ್ದವರು ಸತ್ಯೇಂದ್ರನಾಥ್ ಬೋಸ್, ವಿಖ್ಯಾತ ವಿಜ್ಞಾನಿ. ಇನ್ನೊಬ್ಬ ಪ್ರಖ್ಯಾತ ವಿಜ್ಞಾನಿ ಪ್ರಶಾಂತ ಮಹಾಲನೋಬಿಸ್ ಒಂದು ವರ್ಷ ಹಿರಿಯರು. ಸ್ವಾತಂತ್ರ್ಯ ಹೋರಾಟಗಾರ ಸುಭಾಷ್‌ಚಂದ್ರ ಬೋಸ್ ಒಂದು ವರ್ಷ ಕಿರಿಯರು. ೧೯೧೬ರಲ್ಲಿ ಮೇಘನಾದ ಮತ್ತು ಸತ್ಯೇಂದ್ರನಾಥ ಇಬ್ಬರೂ ಅಧ್ಯಾಪಕರಾಗಿ ವೃತ್ತಿ ಆರಂಭಿಸಿ, ಮುಂದಿನ ವರ್ಷವೇ ಸಿ.ವಿ.ರಾಮನ್ ಅವರ ಭೌತಶಾಸ್ತ್ರ ವಿಭಾಗಕ್ಕೆ ಸೇರಿಕೊಂಡರು. ಅದೇ ತಾನೇ ಐನ್‌ಸ್ಟೈನ್ ಅವರ ಸಾಪೇಕ್ಷತಾವಾದದ ಪ್ರಬಂಧಗಳು ಪ್ರಕಟವಾಗಿದ್ದವು. ಈ ಇಬ್ಬರೂ ಆ ಜರ್ಮನ್ ಲೇಖನಗಳನ್ನು ಇಂಗ್ಲಿಷ್‌ಗೆ ಅನುವಾದಿಸಿದರು. ಇದನ್ನು ಒಂದು ಮುಖ್ಯ ತಿರುವು ಎನ್ನಬಹುದು. ಇದರಿಂದ ಇಬ್ಬರಿಗೂ ಇದೇ ಕ್ಷೇತ್ರದಲ್ಲಿ ಅಧ್ಯಯನ ಮುಂದುವರೆಸಲು ಅವಕಾಶಗಳು ಸಿಕ್ಕಿದವು. ಸಾಹಾ ಅವರು ಎರಡು ವರ್ಷ ಯೂರೋಪಿನಲ್ಲಿ ಸಂಶೋಧನೆ ಮುಂದುವರೆಸಲು ಅಧ್ಯಯನ ಮಾಡಲು ಹೊರಟಾಗ ಸಿ. ವಿ. ರಾಮನ್ ಮೊದಲಾಗಿ ಎಲ್ಲರೂ ಇವರನ್ನು ಆತ್ಮೀಯತೆಯಿಂದ ಬೀಳ್ಕೊಟ್ಟರು. ಭೌತಶಾಸ್ತ್ರದ ಪಠ್ಯಪುಸ್ತಕಗಳಲ್ಲಿ ಕೇಳಿಬರುವ ಹೆಸರು ವಿಜ್ಞಾನಿ ವಾಲ್ಟರ್ ನೆರ್ಸ್ಟ್. ಇವರೊಂದಿಗೆ ಸಂಶೋಧನೆ ನಡೆಸಿ ಅನೇಕ ಮಹತ್ವದ ಸಂಶೋಧನಾ ಪ್ರಬಂಧಗಳನ್ನು ಪ್ರಕಟಿಸಿದರು. ಇವುಗಳಲ್ಲಿ ಎರಡು ಎಲ್ಲರ ಗಮನ ಸೆಳೆದವು. ಮೊದಲನೆಯದು, ಅಯಾಣುಗಳು ಸಮತೋಲನವನ್ನು ಸಾಧಿಸಿಕೊಳ್ಳುವ ಬಗೆ. ಎರಡನೆಯದು, ಅಯಾಣುಗಳ ಸಮತೋಲನದ ಪ್ರಾತ್ಯಕ್ಷಿಕೆಯಾಗಿ ನಕ್ಷತ್ರಗಳೇ ಆಗಬಲ್ಲುವು ಎಂಬುದು. ಇವು ನಕ್ಷತ್ರಗಳ ರಚನೆ ಹಾಗೂ ವಿಕಾಸವನ್ನು ಅರ್ಥಮಾಡಿಕೊಳ್ಳುವಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ಸಾಹಾ ಅವರ ಸೂತ್ರವನ್ನೇ ಬಳಸಿ ಎಲ್ಲ ನಕ್ಷತ್ರಗಳಲ್ಲೂ ಹೈಡ್ರೋಜನ್ ಪರಮಾಣುಗಳೇ ಹೆಚ್ಚಿನ ಸಂಖ್ಯೆಯಲ್ಲಿವೆ ಎಂದೊಬ್ಬರು ತೋರಿಸಿಕೊಟ್ಟರೆ, ಮತ್ತೊಬ್ಬರು ಸಾಹಾ ಅವರ ಸಿದ್ಧಾಂತವನ್ನು ಬಳಸಿ ಸೂರ್ಯನ ಹೊರಾವರಣದಲ್ಲಿ ವರ್ಣಾವರಣದ ಎತ್ತರದ ಮಿತಿಯನ್ನು ಲೆಕ್ಕ ಹಾಕಿದರು. ಸೂರ್ಯನಲ್ಲಿ ಕ್ಯಾಲ್ಸಿಯಂ ಅಣುಗಳ ಸಂಖ್ಯೆ, ಅವುಗಳೆಲ್ಲವೂ ಅಯಾಣುಗಳೇ ಆಗಿರಬೇಕೇಕೆ ಎಂದು ಲೆಕ್ಕ ಮಾಡಿದರು.

ನಕ್ಷತ್ರಗಳು ದೈತ್ಯವಾಗಿ ವಿಕಾಸವಾಗುವ ಹಂತವನ್ನು ಗುರುತಿಸಲೂ ಸಾಹಾ ಅವರ ಸೂತ್ರವೇ ಬಳಕೆಯಾಯಿತು. ಈ ಸೂತ್ರಕ್ಕಾಗಿ ೧೯೨೭ರಲ್ಲೇ ಇವರ ಹೆಸರನ್ನು ನೊಬೆಲ್ ಪ್ರಶಸ್ತಿಗಾಗಿ ನಾಮಕರಣ ಮಾಡಲಾಗಿತ್ತು. ಅದಾದ ಮೇಲೆಯೂ ಹಲವಾರು ಬಾರಿ ಪ್ರಸ್ತಾಪಗೊಂಡಿತ್ತು.

೧೯೨೧ರಲ್ಲಿ ಸಾಹಾ ಭಾರತಕ್ಕೆ ಹಿಂದಿರುಗಿ ಕಲ್ಕತ್ತಾದಲ್ಲಿ ಪ್ರೊಫೆಸರ್ ಆಗಿ ನೇಮಕಗೊಂಡರೂ ಸಂಶೋಧನೆಯನ್ನು ಮುಂದುವರೆಸಲು ಧನ ಸಹಾಯ ದೊರಕಲಿಲ್ಲ. ಹೀಗಾಗಿ ಪುನಃ ಸ್ಥಳ ಬದಲಿಸಿ ಅಲಹಾಬಾದ್ ವಿಶ್ವವಿದ್ಯಾಲಯ ಸೇರಿದರು. ಅಲ್ಲಿ ಅನೇಕ ಶಿಷ್ಯರನ್ನು ತಯಾರುಮಾಡುವುದರ ಜೊತೆಗೆ ರಾಷ್ಟ್ರವ್ಯಾಪಿ ಯೋಜನೆಗಳತ್ತ ಗಮನಕೊಟ್ಟರು. ವಿಜ್ಞಾನಕ್ಕಾಗಿ ಒಂದು ಅಕಾಡೆಮಿಯನ್ನು ಸ್ಥಾಪಿಸಿದರು. ಅಲಹಾಬಾದ್‌ನ ನೆರೆಹೊರೆಗೆ ಮಾತ್ರ ಸೀಮಿತವಾಗಿ ಆರಂಭಗೊಂಡ ಇದು ಸ್ವಾತಂತ್ರ್ಯಾನಂತರ ನ್ಯಾಷನಲ್ ಅಕಾಡೆಮಿ ಆಫ್ ಸೈನ್ಸಸ್ ಆಗಿ ದೇಶದಾದ್ಯಂತ ವಿಸ್ತರಿಸಿತು.

೧೯೩೮ ಎಂಬುದು ಭೌತವಿಜ್ಞಾನದ ಬೆಳವಣಿಗೆಯಲ್ಲಿ ಮಹತ್ವದ ವರ್ಷ. ಓಟ್ಟೋ ಹಾಹ್ನ್ ಮತ್ತು ಲೀಸ್ ಮೈಟ್ನರ್ ಇವರು ಬೈಜಿಕ ಸಂಲಯನ (ನ್ಯೂಕ್ಲಿಯರ್ ಫಿಶನ್) ಕಂಡುಹಿಡಿದರು. ಇದು ಅಗಾಧ ಪ್ರಮಾಣದಲ್ಲಿ ಚೈತನ್ಯ ಉತ್ಪತ್ತಿ ಮಾಡಬಲ್ಲುದು ಎಂಬ ಅಂಶವನ್ನು ಗಮನಿಸಿದ ಸಾಹಾ ಎಲ್ಲ ವಿಶ್ವವಿದ್ಯಾಲಯಗಳಲ್ಲಿ ನ್ಯೂಕ್ಲಿಯರ್ ಫಿಸಿಕ್ಸ್‌ಅನ್ನು ವಿಶೇಷವಾಗಿ ಬೋಧಿಸಲೇಬೇಕು ಎಂದು ಮನದಟ್ಟು ಮಾಡಿಕೊಟ್ಟರು. ಈ ಶಾಖೆಯಲ್ಲಿ

ಡಾ॥ ಬಿ. ಎಸ್. ಶೈಲಜಾ

ಸಂಶೋಧನೆ ನಡೆಸಲು ಒಂದು ಹೊಸ ಸಂಸ್ಥೆಯನ್ನೇ ಹುಟ್ಟುಹಾಕಿದರು. ಇದನ್ನು ನೊಬೆಲ್ ಪುರಸ್ಕೃತ ವಿಜ್ಞಾನಿ ಐರೀನ್ ಜೂಲಿಯೋ ಕ್ಯೂರಿ ೧೯೫೦ರಲ್ಲಿ ಉದ್ಘಾಟಿಸಿದರು. ಈಗ ಅದಕ್ಕೆ ಸಾಹಾ ಇನ್ಸ್ಟಿಟ್ಯೂಟ್ ಆಫ್ ನ್ಯೂಕ್ಲಿಯರ್ ಫಿಸಿಕ್ಸ್ ಎಂದೇ ಹೆಸರಾಗಿದೆ.



ಸ್ವತಂತ್ರ ಭಾರತದ ಮೊದಲ ಲೋಕಸಭೆಗೆ ಸ್ವತಂತ್ರ ಅಭ್ಯರ್ಥಿಯಾಗಿ ಆಯ್ಕೆಯಾದ ಸಾಹಾ ಶಿಕ್ಷಣ ಕ್ಷೇತ್ರದಲ್ಲೂ ಸಾಕಷ್ಟು ಸುಧಾರಣೆಗಳನ್ನು ಮಾಡಿದರು.

ಇಡೀ ದೇಶಕ್ಕೆ ಅನ್ವಯವಾಗುವ ಕ್ಯಾಲೆಂಡರ್ (ಪಂಚಾಂಗ) ಒಂದನ್ನು ರಚಿಸಲು ಅಂದಿನ ಪ್ರಧಾನಿ ನೆಹರೂ ರಚಿಸಿದ ಸಮಿತಿಗೆ ಇವರೇ ಅಧ್ಯಕ್ಷರಾದರು. ಹೆಸರಾಂತ ವಿಜ್ಞಾನಿಗಳಾದ ಎನ್. ಸಿ. ಬ್ಯಾನರ್ಜಿ, ಕೆ. ಕೆ. ದಫ್ತರಿ, ಎನ್. ಸಿ. ಲಾಹಿರಿ, ಜೆ. ಕೆ. ಕರಂದೀಕರ್ ಮುಂತಾದವರು ಸಮಿತಿಯ ಸದಸ್ಯರಾಗಿದ್ದರು. ಇಡೀ ರಾಷ್ಟ್ರಕ್ಕೆ ಅನ್ವಯವಾಗುವ ಒಂದು ಕ್ಯಾಲೆಂಡರ್‌ಅನ್ನು ಸೃಷ್ಟಿಸಬೇಕು ಎಂಬುದು ಮೂಲ ಉದ್ದೇಶ. ದೇಶದಲ್ಲಿ ೩೦ಕ್ಕೂ ಹೆಚ್ಚು ಕ್ಯಾಲೆಂಡರ್‌ಗಳು ಚಾಲ್ತಿಯಲ್ಲಿದ್ದವು / ಇವೆ. ಬಹಳ ಆಳವಾದ ಅಧ್ಯಯನ ನಡೆಸಿ, ಮುಖ್ಯವಾದ ಅಂಶಗಳನ್ನು ಒಟ್ಟುಗೂಡಿಸಿದರು. ಭೌತಶಾಸ್ತ್ರದ ಅಪಾರ ಕೊಡುಗೆಯನ್ನು ನೆನೆಯುವಾಗ ಅವರ ಈ ವಿಭಾಗಕ್ಕೆ ಅವರ ಕೊಡುಗೆ ಬಿಟ್ಟುಹೋಗುತ್ತದೆ.

ಕ್ಯಾಲೆಂಡರ್ ಎಂಬುದನ್ನು ಪಂಚಾಂಗ ಎಂದು ತರ್ಜುಮೆ ಮಾಡಲಾಗದು. ಏಕೆಂದರೆ ಪಂಚಾಂಗ ಎಂಬ ಪದವನ್ನು ಐದು ಸಮಯಸೂಚಕಗಳಿಗೆಂದು (ವರ್ಷ, ವಾರ, ತಿಥಿ, ಯೋಗ ಮತ್ತು ಕರಣ) ಬಳಸಲಾಗುತ್ತದೆ. ಇವುಗಳಲ್ಲಿ ಎರಡು (ಯೋಗ ಮತ್ತು ಕರಣ) ಯಾವುದೇ ಖಗೋಳೀಯ ಘಟನೆಗೆ ಸಂಬಂಧಿಸಿದ್ದಲ್ಲ; ಜೊತೆಗೆ ಅವುಗಳಿಗೆ ಪ್ರಾಯೋಗಿಕ ಉಪಯೋಗವೂ ಇಲ್ಲ.

ಕಾಲಗಣನೆಗೆ ಅತಿ ಹಿಂದೆಯೇ ಆರಂಭವಾದ ಪ್ರಯತ್ನಗಳು ಬಹಳ ಸುಲಭವಾದ ತತ್ತ್ವಗಳನ್ನೇ ಆರಿಸಿಕೊಂಡವು. ದಿನದುದ್ದಕ್ಕೂ ನಿಯಮಿತವಾಗಿ ವ್ಯತ್ಯಯವಾಗುವ ನೆರಳೇ ಮೊದಲ ಸಾಧನ. ನೆರಳು ಹೇಗೆ ಚಲಿಸುತ್ತದೆ ಎಂದು ಗಮನಿಸಿ, ಮುಂದೆ ಯಾಂತ್ರಿಕ ಗಡಿಯಾರಗಳನ್ನು ತಯಾರು ಮಾಡಿದಾಗ ಅದರ ಫಲಕಗಳು ನೆರಳಿನ ಹಾಗೆಯೇ ಸಮಯ ತೋರಿಸುವಂತೆ ವಿನ್ಯಾಸಗೊಳಿಸಲಾಯಿತು. (ಕ್ಲಾಕ್‌ವೈಸ್ ಎಂಬ ಪದದ ವ್ಯುತ್ಪತ್ತಿಗೂ ನೆರಳೇ ಕಾರಣ ಎಂಬುದನ್ನು ಗಮನಿಸಿ.) ಬೇರೆ ಬೇರೆ ಸಂಸ್ಕೃತಿಗಳಲ್ಲಿ ಬೆಳೆದು ಬಂದ ವಿಧಾನಗಳೆಲ್ಲದರಲ್ಲೂ ವೃತ್ತಕ್ಕೆ ೩೬೦ ಡಿಗ್ರಿಗಳಿರುವುದು ಕೂಡ ಪರೋಕ್ಷವಾಗಿ ಸೂರ್ಯನ ವಾರ್ಷಿಕ ಚಲನೆಯನ್ನೇ ಗುರುತಿಸಿರುವದರ ಪರಿಣಾಮ. ದಿನ, ವರ್ಷ, ತಿಂಗಳು – ಇವೆಲ್ಲಾ ಖಗೋಳೀಯ ಘಟನೆಗಳನ್ನು ಆಧರಿಸಿ ಸೃಷ್ಟಿಯಾದ ಮಾಪಕಗಳು. ಆದರೆ ಘಂಟೆ, ನಿಮಿಷ, ವಾರ ಇವು ಮಾನವನ ಸೌಕರ್ಯಕ್ಕಾಗಿ ಸೃಷ್ಟಿಯಾದವು. ಯಾವುದೇ ಕ್ಯಾಲೆಂಡರನ್ನೂ ಅಧ್ಯಯನ ಮಾಡಿದಾಗಲೂ ಹೊರಬೀಳುವ ಮುಖ್ಯವಾದ ಅಂಶ – ಎಲ್ಲವೂ ಸೂರ್ಯ, ಚಂದ್ರರ ಚಲನೆಯ ಮಾಪಕಗಳು. (ಭೂಮಿಯಿಂದ ಕಂಡಂತೆ ಸೂರ್ಯನೇ ಚಲಿಸುತ್ತಾನೆ ಎಂಬ ತೋರ್ಕೆಯ ನೇರ ಅನ್ವಯ ಇದು). ಈ ಎರಡೂ ಚಲನೆಗಳು ಒಂದು ನಿರ್ದಿಷ್ಟ ಅನುಪಾತದಲ್ಲಿಲ್ಲ. ದಶಮಾಂಶ ಪದ್ಧತಿಗೆ ಈಗ ಚೆನ್ನಾಗಿ ಹೊಂದಿಕೊಂಡಿರುವ ಎಳೆಯರು, ೧೦ ಗಂಟೆಗಳಿಗೆ ಒಂದು ದಿನ, ೧೦ ದಿನಗಳಿಗೆ ೧ ವಾರ, ಹತ್ತು ವಾರಕ್ಕೆ ೧ ತಿಂಗಳು, ೧೦ ತಿಂಗಳಿಗೆ ೧ ವರ್ಷ ಇದ್ದಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು

ಎಂದುಕೊಳ್ಳಬಹುದು. ಹಾಗಾಗುವುದಿಲ್ಲ, ಏಕೆಂದರೆ ಚಂದ್ರನ ಪರಿಭ್ರಮಣೆ ೨೭.೩೨ ದಿನಗಳಲ್ಲಿ ಮುಗಿದರೆ, ಸೂರ್ಯನದು ೩೬೫.೨೪ ದಿನಗಳಲ್ಲಿ ಮುಗಿಯುತ್ತದೆ. ಈಗ ದಶಮಾಂಶ ಪದ್ಧತಿಯಲ್ಲಿ ಹೀಗೆ ಚುಕ್ಕೆಯನ್ನಿಟ್ಟು ಭಿನ್ನಾಂಶಗಳನ್ನು ಸುಲಭವಾಗಿ ಸೂಚಿಸಬಹುದು. ಆದರೆ ಹಿಂದಿನವರು ಇದನ್ನು ಭಿನ್ನಾಂಶಗಳನ್ನಾಗಿಯೇ ಇರಿಸಿಕೊಂಡು ಲೆಕ್ಕ ಮಾಡುತ್ತಿದ್ದರು. ಉದಾಹರಣೆಗೆ, ಪೈ ಎಂಬ ಸಂಖ್ಯೆಯನ್ನು ಈಗ ೩.೧೪ ಎಂದು ಹೇಳುತ್ತೇವೆ. ಹಿಂದಿನ ವ್ಯಾಖ್ಯೆ ಹೀಗಿದೆ – "೨೦೦೦೦ ಅಂಗುಲ ವ್ಯಾಸದ ವೃತ್ತದ ಪರಿಧಿ ೬೨೮೩೨". ಅಂದರೆ, ಪೈ ಎಂಬುದು ಇದರೊಳಗೆ ಅಡಕವಾಗಿದೆ ಎನ್ನುವಂತೆ ಸೂಚಿಸುತ್ತಿದ್ದರು. ಪೈ ಎಂಬುದು ದಶಮಾಂಶದ ನಾಲ್ಕು ಅಂಕೆಗಳವರೆಗೂ ನಿಖರವಾಗಿದೆ ಎಂದಿದರ ಅರ್ಥ (೩.೧೪೧೬).

ಖಗೋಳ ಪಠ್ಯಗಳಲ್ಲಿ ಕಂಡುಬರುವ ವ್ಯಾಖ್ಯೆಯ ಪ್ರಕಾರ ಒಂದು ಮಹಾಯುಗದಲ್ಲಿ ೧೫೭೭೯೧೭೮೨೮ ದಿನಗಳಿರುತ್ತವೆ. ಇದರಲ್ಲಿ ಸೂರ್ಯನು ೪೩೨೦೦೦೦ ಪರಿಭ್ರಮಣೆಗಳನ್ನು ಮುಗಿಸುತ್ತಾನೆ. ಚಂದ್ರ ೫೭೭೫೩೩೩೬ ಪರಿಭ್ರಮಣೆಗಳನ್ನು ಮುಗಿಸಿರುತ್ತಾನೆ ಎಂದು ಪಠ್ಯಗಳಲ್ಲಿ ಬರೆದಾಗ, ಪರಿಭ್ರಮಣಾವಧಿಯ ನಿಖರತೆ ತಿಳಿಯುತ್ತದೆ. ಹೀಗೆ ಸೂರ್ಯ, ಚಂದ್ರರ ಚಲನೆಗಳನ್ನು ತಾಳೆಹಾಕುವ ಪ್ರಯತ್ನಗಳಲ್ಲಿ ಬಗೆಬಗೆಯ ಕ್ಯಾಲೆಂಡರ್‌ಗಳು ರೂಪುಗೊಂಡವು. ಸ್ಥೂಲವಾಗಿ ಸೌರಮಾನ ಮತ್ತು ಚಾಂದ್ರಮಾನ ಎಂದು ವಿಂಗಡಿಸಬಹುದಾದರೂ ಎರಡನ್ನೂ ಮೇಳಯಿಸುವ ಕ್ಯಾಲೆಂಡರ್‌ಗಳೇ ಹೆಚ್ಚು ಪ್ರಚಲಿತವಾಗಿವೆ.

ಕರ್ನಾಟಕ–ಮಹಾರಾಷ್ಟ್ರ–ಆಂಧ್ರದಲ್ಲಿ ಚಾಂದ್ರಮಾನ ಪದ್ಧತಿ ಆಚರಣೆಯಲ್ಲಿದೆ. ಆದರೆ ಯುಗಾದಿ ಅಂದರೆ ವರ್ಷದ ಆರಂಭವನ್ನು ನಿಗದಿಪಡಿಸುವುದು ಸೂರ್ಯ – ಅದು ಹೇಗೆ ಎಂದು ತಿಳಿಯೋಣ. ಮಾರ್ಚ್ ೨೨ರಂದು ವಸಂತ ವಿಷುವ. ಹಗಲು – ರಾತ್ರಿಗಳ ಅವಧಿ ಸಮ. ಇದಾದ ನಂತರ ಬರುವ ಅಮಾವಾಸ್ಯೆಯ ಮುಂದಿನ ದಿನವೇ ಯುಗಾದಿ. ಕೇರಳ ಮತ್ತು ತಮಿಳುನಾಡುಗಳಲ್ಲಿ ಸೌರಮಾನ ಪದ್ಧತಿ ಆಚರಣೆಯಲ್ಲಿದೆ. ಅವರ ಯುಗಾದಿಯ ದಿನಾಂಕ (ಏಪ್ರಿಲ್ ೧೪) ಸೂರ್ಯನಿಂದ ನಿರ್ಧಾರವಾಗುವುದರಿಂದ ವರ್ಷದಿಂದ ವರ್ಷಕ್ಕೆ ವ್ಯತ್ಯಾಸವಾಗುವುದೇ ಇಲ್ಲ ಎಂದು ಹೇಳುವಂತಿಲ್ಲ. ಭೂಮಿಯ ಇನ್ನೊಂದು ಚಲನೆ ಇದನ್ನೂ ಮುಂದಕ್ಕೆ ತಳ್ಳುತ್ತದೆ.

ಇಸ್ಲಾಮೀ ಕ್ಯಾಲೆಂಡರ್ ಸೂರ್ಯನ ಜೊತೆ ಮೇಳಯಿಸುವುದಿಲ್ಲ. ಹಾಗಾಗಿ ರಂಜಾನ್ ಚಳಿಗಾಲದಲ್ಲೂ ಬರಬಹುದು; ಬೇಸಿಗೆಯಲ್ಲೂ ಬರಬಹುದು.

ಕೆಲವು ಚಾಂದ್ರಮಾನ ಕ್ಯಾಲೆಂಡರ್‌ಗಳಲ್ಲಿ ತಿಂಗಳು ಆರಂಭವಾಗುವುದು ಕೃಷ್ಣ ಪಕ್ಷದ ಪಾಡ್ಯದಿಂದ ಅಂದರೆ ಹುಣ್ಣಿಮೆಯ ಮರುದಿನ. ಇನ್ನೂ ಕೆಲವು (ಉದಾಹರಣೆಗೆ ಪಂಜಾಬ್) ಪ್ರಾಂತಗಳಲ್ಲಿ ವೈಶಾಖದಲ್ಲಿ ಹೊಸ ವರ್ಷ ಆರಂಭವಾಗುತ್ತದೆ. ಗುಜರಾತ್‌ನಲ್ಲಿ ದೀಪಾವಳಿಯ ಅಮಾವಾಸ್ಯೆಯ ಮರುದಿನ ಹೊಸವರ್ಷ ಆರಂಭವಾಗುತ್ತದೆ. ಇವಲ್ಲದೆ ಕೃಷಿಕರದ್ದು ಬೇರೆ ಬಗೆಯ ಲೆಕ್ಕಗಳಿರುತ್ತವೆ.

ವರ್ಷಗಣನೆಗೂ ಬೇರೆ ಬೇರೆ ವಿಧಾನಗಳಿವೆ. ಕ್ರಿಸ್ತಶಕ ೭೮ರಿಂದ ಆರಂಭವಾಗಿರುವ ಶಾಲಿವಾಹನ ಶಕೆ ಬಹಳ ಜನಪ್ರಿಯ. ಈಗ ಕ್ರಿಸ್ತಶಕ ಎಂಬ ಪದದ ಬದಲು ಸಾಮಾನ್ಯ ವರ್ಷ (ಕಾಮನ ಇರ) ಎಂಬ ಪದವನ್ನು ಬಳಸುತ್ತಾರೆ. ವಿಕ್ರಮ ಶಕ ಎಂಬುದು ಹಳೆಯದು – ಕ್ರಿಸ್ತಪೂರ್ವ ೫೭ರಿಂದಲೇ ಆರಂಭವಾಗಿದೆ. ಕಲಿವರ್ಷ ಎಂಬುದು ಇನ್ನೂ ಹಳೆಯದು. ಕ್ರಿಸ್ತಪೂರ್ವ ೩೧೦೨ರಿಂದಲೇ ಆರಂಭವಾಗಿದೆ. ಇದಲ್ಲದೆ ಆಯಾ ಪ್ರಾಂತಗಳಲ್ಲಿ ರಾಜರು ಪಟ್ಟಕ್ಕೇರಿದ ದಿನದಿಂದ ಎಣಿಸುತ್ತಿದ್ದ ಗಣನೆಗಳು ಇವೆ. ಎಲ್ಲ ಕ್ಯಾಲೆಂಡರ್‌ಗಳಲ್ಲೂ ವರ್ಷಕ್ಕೆ ಹನ್ನೆರಡು ತಿಂಗಳುಗಳಾದರೂ ಅವುಗಳ ಹೆಸರಿನಲ್ಲೇ ವೈವಿಧ್ಯತೆ ಇದೆ. ವೇದಗಳಲ್ಲಿರುವ ಹೆಸರುಗಳು ಮಧು, ಮಾಧವ.... ಇವು ಋತುಮಾನಗಳನ್ನೇ ಸೂಚಿಸುತ್ತವೆ. ಹೆಚ್ಚು ಬಳಕೆಯಲ್ಲಿರುವ ಚೈತ್ರ, ವೈಶಾಖ.... ಇವು ಹುಣ್ಣಿಮೆಯ ಚಂದ್ರನ ಸ್ಥಾನದಿಂದ ನಿರ್ಧರಿತವಾಗುತ್ತವೆ. ಮೇಷ, ವೃಷಭ ಮುಂತಾದವು ಸೂರ್ಯನ ಸ್ಥಾನದಿಂದ ನಿರ್ಧರಿತವಾಗುತ್ತವೆ. ಸೂರ್ಯ ಮೇಷರಾಶಿಯಲ್ಲಿ ಇದ್ದಾಗ ಹುಣ್ಣಿಮೆಯ ಚಂದ್ರ ಚಿತ್ರಾ ನಕ್ಷತ್ರದ ಪಕ್ಕ ಇರುತ್ತದೆ. ಇದು ಮಾರ್ಚ್ – ಏಪ್ರಿಲ್‌ಗಳಲ್ಲಿ ಮಾತ್ರ ಸಾಧ್ಯ.

ಸಾಹಾ ಅವರು ಈ ಎಲ್ಲ ವೈವಿಧ್ಯಗಳನ್ನೂ ಆಳವಾಗಿ ಅಧ್ಯಯನ ಮಾಡಿ ಅವುಗಳ ಅನುಕೂಲ, ಕೊರತೆಗಳನ್ನು ಕಂಡುಹಿಡಿದುಕೊಂಡರು. ಅನುಕೂಲಕರ ಅಂಶಗಳನ್ನು ಒಟ್ಟುಗೂಡಿಸಿ ಹೊಸ ರಾಷ್ಟ್ರೀಯ ಶಕೆಯನ್ನು ಆರಂಭಿಸಿದರು. ಚಂದ್ರನ ಚಲನೆ ಬಹಳ ಸಂಕೀರ್ಣವಾದದ್ದು; ಪರಿಭ್ರಮಣಾವಧಿ ೨೭.೩೨ ದಿನಗಳು; ಆದರೆ ಹುಣ್ಣಿಮೆಯಿಂದ ಹುಣ್ಣಿಮೆಗೆ ೨೯.೫೩ ದಿನಗಳು. ಅದು ಭೂಕಕ್ಷೆಯ ಸಮತಲವನ್ನು ದಾಟುವ ಬಿಂದುಗಳಿಗೆ 'ಪಾತಬಿಂದುಗಳು' ಎಂಬ ಹೆಸರಿದೆ. ಇವು ಸ್ಥಿರ ಬಿಂದುಗಳಲ್ಲ; ಸತತವಾಗಿ ಚಲಿಸುತ್ತವೆ. ಚಂದ್ರ ಪಾತಬಿಂದುವನ್ನು ದಾಟುವ ಅವಧಿ ೨೭.೨೧ ದಿನಗಳು. ಇದಲ್ಲದೆ ಚಂದ್ರಕಕ್ಷೆ ವೃತ್ತವಾಗಿರದೆ, ದೀರ್ಘವೃತ್ತವಾಗಿರುವುದರಿಂದ ಅದರ ವೇಗ ಕ್ಷಣ ಕ್ಷಣಕ್ಕೂ ಬದಲಾಗುತ್ತದೆ. ಪುರರವಿಯಿಂದ ಪುರರವಿಗೆ ಹಿಂದಿರುಗುವ ಅವಧಿ ೨೭.೫೫ ದಿನಗಳು. ಇಷ್ಟೊಂದು ಅಂಶಗಳನ್ನು ಸೇರಿಸಿಕೊಂಡು ಚಂದ್ರನ ಸ್ಥಾನವನ್ನು ಲೆಕ್ಕ ಮಾಡುವುದು ಒಂದು ಸವಾಲೇ ಆಗಿತ್ತು. ಇದಕ್ಕಾಗಿ ಹಿಂದಿನವರು ಅನೇಕ ತಿದ್ದುಪಡಿಗಳನ್ನು ಜಾರಿ ಮಾಡಿ, ತಿಥಿನಿರ್ಣಯ ಎಂಬ ಗ್ರಂಥಗಳನ್ನು ರಚಿಸಿದರು. ಇದನ್ನು ಧರ್ಮಗ್ರಂಥವನ್ನಾಗಿ ಪರಿಗಣಿಸಿದ ಶಿಷ್ಯರು ಕಾಲಕಾಲಕ್ಕೆ ಅಗತ್ಯವಾದ ತಿದ್ದುಪಡಿ ಮಾಡದೇ ನಿಖರತೆಯನ್ನು ಕಳೆದುಕೊಂಡರು. ಆದರೆ ಎಲ್ಲ ಗ್ರಂಥಗಳಲ್ಲೂ ತಿದ್ದುಪಡಿ ಮಾಡಬೇಕು ಎಂಬ ಅಂಶವನ್ನು ಒತ್ತಿ ಹೇಳಲಾಗಿತ್ತು.

ಹೊಸ ರಾಷ್ಟ್ರೀಯ ಪಂಚಾಂಗವನ್ನು ರಚಿಸುವುದಕ್ಕಾಗಿ ಆರಂಭವಾದ ಪುಟ್ಟ ಸಂಸ್ಥೆ ಈಗ ಒಂದು ಸ್ವಾಯತ್ತ ಸಂಸ್ಥೆ, ಪೊಸಿಷನಲ್ ಅಸ್ಟ್ರಾನಮಿ ಸೆಂಟರ್ – ಇದು ಕೊಲ್ಕತಾದಲ್ಲಿದೆ. ಪಂಚಾಂಗವನ್ನು ತಯಾರಿಸಿ ಎಲ್ಲ ಭಾಷೆಗಳ ಆವೃತ್ತಿಯನ್ನೂ ಪ್ರಕಟಿಸುತ್ತದೆ. ಬೇರೆ ಬೇರೆ ಸ್ಥಳಗಳ ಸೂರ್ಯಾಸ್ತ, ಸೂರ್ಯೋದಯ, ಚಂದ್ರಾಸ್ತ, ಚಂದ್ರೋದಯ, ಗ್ರಹಗಳ ಸ್ಥಾನ ವಿವರಗಳು ಜೊತೆಗೆ ಗ್ರಹಣ ಮುಂತಾದ ಖಗೋಳೀಯ ಘಟನೆಗಳ ವಿವರಗಳನ್ನೂ ಪ್ರಕಟಿಸುತ್ತದೆ. ಇದನ್ನು ಬಹುತೇಕ ಎಲ್ಲ ಪತ್ರಿಕೆಗಳೂ ಪ್ರಕಟಿಸುತ್ತವೆಯಾದರೂ ಆಕರವನ್ನು ಮಾತ್ರ ಸ್ಮರಿಸುವುದಿಲ್ಲ.

**ರಾಷ್ಟ್ರೀಯ ಪಂಚಾಂಗ ಎಂಬುದರ ವಿವರಗಳೆಂದರೆ:**

- ಹೊಸ ವರ್ಷ ಮಾರ್ಚ್ ೨೨ರಂದು ಆರಂಭವಾಗುತ್ತದೆ.
- ದೇಶದಾದ್ಯಂತ ಬಳಕೆಯಲ್ಲಿರುವ ಶಾಲಿವಾಹನ ಶಕೆಯನ್ನೇ ಮುಂದುವರೆಸಲಾಗಿದೆ.
- ತಿಂಗಳಿಗೆ ೩೦ ಅಥವಾ ೩೧ ದಿನಗಳ ತಿಂಗಳುಗಳಿವೆ.
- ತಿಂಗಳುಗಳಿಗೆ ಚಾಂದ್ರಮಾನ ಹೆಸರುಗಳು ಚೈತ್ರ, ವೈಶಾಖ..... ಹೀಗೆ.
- ಹಬ್ಬಗಳ ಆಚರಣೆಯ ದಿನಗಳನ್ನು ನಿರ್ಧರಿಸುವವರು ಆಯಾ ಧರ್ಮದ ಅನುಯಾಯಿಗಳು.
- ಅಧಿಕ ಮಾಸ ಹಾಗೂ ಕ್ಷಯದಿನಗಳನ್ನು ಆಯಾ ಸ್ಥಳಗಳಿಗೆ ಅನುಗುಣವಾಗಿ ಪಂಚಾಂಗಕರ್ತೃಗಳು ನಿಶ್ಚಯಿಸಲು ಅಗತ್ಯವಾದ ಅಯನಾಂಶ ಮುಂತಾದ ಸ್ಥಿರಾಂಕಗಳನ್ನೂ ಲೆಕ್ಕ ಹಾಕಿ ಕೊಡಲಾಗುತ್ತದೆ.

(http://www.packolkata.gov.in/rashtriya-panchang-others.php)

ಹೀಗೊಂದು ವೈಜ್ಞಾನಿಕ ಕ್ಯಾಲೆಂಡರ್ ಅನ್ನು ರೂಪಿಸಲು ಅವರಿಗೆ ೨ ವರ್ಷಗಳೇ ಬೇಕಾದವು. ಆದರೆ ಯಾವ ಧರ್ಮಸಂಸ್ಥೆಗಳೂ ಇದನ್ನು ಸ್ವೀಕರಿಸಲೇ ಇಲ್ಲ. ಈ ಲೆಕ್ಕಗಳ ಫಲಿತಾಂಶಗಳನ್ನು ಮಾತ್ರ ಬಳಸಿಕೊಳ್ಳುತ್ತಿದ್ದಾರೆ. ಈಗ ರಾಷ್ಟ್ರೀಯ ಪಂಚಾಂಗವು, ಆಕಾಶವಾಣಿಗೆ ಮಾತ್ರ ಸೀಮಿತವಾಗಿರುವುದೇ ವಿಪರ್ಯಾಸದ ಸಂಗತಿ.

**ಡಾ॥ ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಟಿ. ಚೌಡಯ್ಯ ರಸ್ತೆ, ಹೈಗ್ರೌಂಡ್ಸ್
ಬೆಂಗಳೂರು – ೫೬೦ ೦೦೧

# ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ

## ಇವರಿಂದ ರಚಿತವಾದ ಕೃತಿಗಳು




ಪ್ರಸ್ತುತ ಭೂಗೋಳ ಸಂಗಾತಿ ಪುಸ್ತಕವನ್ನು ಪ್ರಾಥಮಿಕ ಹಾಗೂ ಪ್ರೌಢಶಾಲಾ ಶಿಕ್ಷಕರಿಗೆ ಮತ್ತು ವಿದ್ಯಾರ್ಥಿ ವೃಂದಕ್ಕೆ ವಿಶಾಲವಾದ ವಿಶ್ವ ಸೌರವ್ಯೂಹ ಹಾಗೂ ಮಾನವನ ಆವಾಸ ಸ್ಥಾನವಾದ ಪೃಥ್ವಿಯನ್ನು ಕುರಿತ ಆಳವಾದ ಅಧ್ಯಯನ ಮಾಡಲು ವಿಶೇಷವಾಗಿ ರಚಿಸಲಾಗಿದೆ. ಶಿಲೆಗಳು ಮತ್ತು ಭೂ ಮೇಲ್ಮೈ ಸ್ವರೂಪಗಳನ್ನು ರೂಪಿಸಿ ಹಾಗೂ ಏರ್ಪಡಿಸಿ ವೈವಿಧ್ಯಮಯವಾದ ಸ್ವರೂಪಗಳನ್ನು ಸೃಷ್ಟಿಸುವ ಶಕ್ತಿಗಳಿಂದ ಗೋಚರಿತ ಮತ್ತು ಆಕರ್ಷಣೀಯ ವಿವಿಧ ಮಜಲುಗಳನ್ನು ಈ ಪುಸ್ತಕವು ಪ್ರತಿಬಿಂಬಿಸುತ್ತದೆ.

............ ಈ ಸಂಪುಟದಲ್ಲಿ ನಾವು ಜೀವಮಂಡಲ ಎಂಬ ನಾಲ್ಕನೆಯ ಮಂಡಲದ ಬಗ್ಗೆ ಪರಿಚಯ ಮಾಡಲು ಪ್ರಯತ್ನಿಸಿದ್ದೇವೆ... ಇಲ್ಲಿ ಜೀವ ಮಂಡಲದ ಪ್ರಾಮುಖ್ಯತೆ ಹಾಗೂ ಪರಿಸರದ ಮೇಲೆ ಮಾನವನ ಪ್ರಭಾವದಿಂದ ಉಂಟಾದ ಪರಿಸರದ ನಾಶ ಮತ್ತು ಪರಿಸರ ಮಾಲಿನ್ಯ ಕುರಿತು ಸವಿಸ್ತಾರವಾಗಿ ಬರೆಯಲಾಗಿದೆ.

... 'ಭೂಗೋಳ ಸಂಗಾತಿ ಸಂಪುಟ 3 'ಪೃಥ್ವಿಯ ಮೇಲೆ ದೊರೆಯುವ ವಿವಿಧ ಬಗೆಯ ಸಂಪನ್ಮೂಲಗಳು, ವಿವಿಧ ಪ್ರದೇಶಗಳಲ್ಲಿ ಮಾನವ ಚಟುವಟಿಕೆಗಳಲ್ಲಿನ ವ್ಯತ್ಯಾಸಗಳು ಹಾಗೂ ಅವುಗಳ ಪರಿಣಾಮ ಸ್ವರೂಪವಾಗಿ ಮಾನವನ ವಿವಿಧ ಉದ್ಯೋಗಗಳ, ಉಂಟಾದ ಸಂಪನ್ಮೂಲಗಳ ಅಭಿವೃದ್ಧಿಗಳನ್ನು ವಿವರಿಸುತ್ತದೆ. ಶಿಕ್ಷಕರ ಮತ್ತು ವಿದ್ಯಾರ್ಥಿಗಳ ಸೃಜನಾತ್ಮಕ ಶಕ್ತಿಯನ್ನು ಹೆಚ್ಚಿಸಲು ಹಾಗೂ ಭೂಗೋಳ ಶಾಸ್ತ್ರದ ಅಧ್ಯಯನವನ್ನು ಚಟುವಟಿಕೆ ಆಧಾರಿತವನ್ನಾಗಿ ಮಾಡಲು ಸೂಕ್ತ ಚಟುವಟಿಕೆಗಳನ್ನು ಸೂಚಿಸಲಾಗಿದೆ... ಮಾನವನ ಚಟುವಟಿಕೆಗಳ ಮೇಲೆ ನೈಸರ್ಗಿಕ ಪರಿಸರವು ಪ್ರಭಾವ ಬೀರುತ್ತದೆ ಹಾಗೂ ಮಾನವನು ನೈಸರ್ಗಿಕ ಪರಿಸರದೊಳಗೆ ತನ್ನ ಲಾಭಕ್ಕಾಗಿ ಮಧ್ಯೆ ಪ್ರವೇಶಿಸುತ್ತಾನೆ ಎಂಬುದನ್ನು ಈ ಸಂಪುಟವು ವಿವರಿಸುತ್ತದೆ.

... ಈ ಪುಸ್ತಕದ ವಿಷಯವು ಪ್ರೌಢಶಾಲಾ ಹಂತದ ಪಠ್ಯ ವಸ್ತುವನ್ನು ಒಳಗೊಂಡಿದೆ. ಭೂಮಿಯ ಉಗಮದಿಂದ, ಜೀವಿಗಳ ವಿಕಾಸದಿಂದ ಹಿಡಿದು ಆಧುನಿಕ ಯುಗದ ಘಟನೆಗಳನ್ನು ಒಳಗೊಂಡಿದೆ... ಚಿತ್ರ ನೋಡಿ ನಿರೂಪಣೆ ಓದುತ್ತ ಹೋದರೆ ಗತಕಾಲದ ವಾಸ್ತವ ಮನಸ್ಸಿನಲ್ಲಿ ಅಚ್ಚಳಿಯದೇ ಉಳಿಯುತ್ತದೆ.... ಚರಿತ್ರೆಯ ಸಾಮಾಜಿಕ, ಸಾಂಸ್ಕೃತಿಕ, ಸಾಧನೆಗಳ ದರ್ಶನ, ಜನತೆಯ ಜೀವನ ರೂಪುಗೊಂಡ ವಿಧಾನದ ಪರಿಚಯ, ಮಾನವ ಜನಾಂಗದ ಅಧ್ಯಯನ, ಕಾಲದೊಂದಿಗೆ ಮಾನವರ ಪಯಣ ಎಂಬ ಮಹತ್ವದ ಅಂಶಗಳನ್ನು ಮಕ್ಕಳಿಗೆ ತಿಳಿಯಹೇಳಿ, ಚರಿತ್ರೆಯ ಬೋಧನೆಗೆ ಹೊಸ ಆಯಾಮಗಳನ್ನೂ ಸೂಚಿಸುವುದು. ವೈಜ್ಞಾನಿಕ ದೃಷ್ಟಿಕೋನವನ್ನು ಮೂಡಿಸುವುದು ಹಾಗೂ ಚರಿತ್ರೆಯ ಅಭ್ಯಾಸವನ್ನು ಸುಸಂಗತಗೊಳಿಸುವುದೇ ಈ ಪುಸ್ತಕ ರಚನೆಯ ಮೂಲ ಆಶಯವಾಗಿದೆ.

## ಶ್ರೀ ಗಾಯತ್ರಿ ಎಂಟರ್‌ಪ್ರೈಸಸ್

**285/ಎಫ್ - 6, ಉತ್ತರಾಧಿ ಮಠ ರಸ್ತೆ, 5ನೇ ಪಶ್ಚಿಮ ಅಡ್ಡರಸ್ತೆ**
**ಮೈಸೂರು -570004 ಇ-ಮೇಲ್ : kar_mas56@yahoo.co.in**
**ಮೊಬೈಲ್ : 9448074435, 9449853308, 9242459332**

# ಕಾರ್ಪೊರೇಟ್ ಮೌಲ್ಯಗಳು ಮತ್ತು ಸಾಹಿತ್ಯ – ಮುಖಾಮುಖಿ

**ಎಸ್. ನಟರಾಜ ಬೂದಾಳು**

ಕಾರ್ಪೊರೇಟ್ ಜಗತ್ತಿನಲ್ಲಿ 'ಖಾಸಗಿ/ವೈಯಕ್ತಿಕ' ಎನ್ನುವ ಪದ ಇಲ್ಲ. ಅದೇಕೆ ಇರಬೇಕು? ಎನ್ನುವ ಮರುಪ್ರಶ್ನೆಯೊಂದೇ ಅಲ್ಲಿಂದ ನಾವು ನಿರೀಕ್ಷಿಸಬಹುದಾದ ಪ್ರತಿಕ್ರಿಯೆ. ತಾಯಿಗರ್ಭವೂ ಅಲ್ಲಿ ಪ್ರೈವೇಟ್ ಅಲ್ಲ. ಅದಕ್ಕೂ ಒಂದು ಪ್ರೈಸ್ ಟ್ಯಾಗ್ ಹಚ್ಚಿ ಕಮೊಡಿಫೈ ಮಾಡಬಹುದು ಎನ್ನುವಷ್ಟು, ಎಲ್ಲವೂ ಶುದ್ಧ ವ್ಯವಹಾರ ಮಾತ್ರ ಎನ್ನುವುದೇ ಅದರ ಮೊದಲ ಮತ್ತು ಕಡೆಯ ಆಶಯ.

ಇಲ್ಲಿ ಉಚಿತ ಎನ್ನುವ ಪದವೇ ಇಲ್ಲ ಎನ್ನುವುದು ಎರಡನೆಯದು. ಇಲ್ಲಿ ಯಾವುದೂ ಓಪನ್ ಸೋರ್ಸ್ ಅಲ್ಲ. ಎಲ್ಲಕ್ಕೂ ಕಾಪಿರೈಟ್ ಇದೆ ಮತ್ತು ಪೇಟೆಂಟ್ ಮುಕ್ತವಾಗಿ ಯಾವುದನ್ನೂ ಕೊಡಲಾಗದು. ಅದರ ಪಾಲಿಗೆ ಇದೊಂದೆ ಸತ್ಯ. ಅದು ಅಮೆರಿಕದ ಸತ್ಯ. ಆದರೆ ಲೋಕ ಹಾಗೇನಿಲ್ಲ. ಉಬುಂಟು ಎನ್ನುವ ಒಂದು ಮುಕ್ತ ಕಾರ್ಯವ್ಯವಸ್ಥೆ ಇದೆ. ಅದು ಅಮೇರಿಕದ ಪದವಲ್ಲ; ಆಫ್ರಿಕಾದ ಪದ. ಅದರ ಅರ್ಥ quality that includes the essential human virtues; compassion and humanity. ಅದರ ಘೋಷವಾಕ್ಯವೆಂದರೆ I am human because you are human. ಆದರೆ ಕಾರ್ಪೊರೇಟ್ ಸಂಸ್ಕೃತಿಯ ಘೋಷವಾಕ್ಯವೆಂದರೆ: ನಾನು ವ್ಯಾಪಾರಿಯಾಗಿರುವುದರಿಂದ ನೀನು ಗಿರಾಕಿಯಾಗುವುದು ಅನಿವಾರ್ಯ. ಆಫ್ರಿಕಾದ ಈ ಉಬುಂಟು ಪರಿಕಲ್ಪನೆಗೆ ಅರಿವೆಂಬುದು ಲೋಕಸಮಸ್ತದ ಉಪಯೋಗಕ್ಕೆ ಇರುವಂತಹದ್ದು ಮತ್ತು ಮಾನವತೆಗಾಗಿ ಬಳಕೆಯಾಗಬೇಕಾದದ್ದು. ನೀನೂ ಮನುಷ್ಯನಾಗಿರುವುದರಿಂದ ನಾನೂ ಮನುಷ್ಯ ಎಂಬ ನಿಸರ್ಗವಿವೇಕದ್ದು.

ಕಾರ್ಪೊರೇಟ್ ಸಂಸ್ಕೃತಿ ಎನ್ನುವುದು ಒಂದು ವ್ಯಾಪಾರೀ ವ್ಯಾಖ್ಯಾನ. ಕತೆ / ಕಥನ / ಸಾಹಿತ್ಯ ಮುಂತಾದುವು ಕೇವಲ ಕತೆ / ಕಥನ / ಸಾಹಿತ್ಯ ಅಲ್ಲ. ಅವೂ ಕೂಡ ವ್ಯಾಖ್ಯಾನಗಳೇ ಆಗಿವೆ. ಅವುಗಳ ಸಂಕಥನ (ಡಿಸ್‌ಕೋರ್ಸ್) – ನಾನು ಹೇಗಿರಬೇಕು – ಎನ್ನುವುದನ್ನು ನೀವಾಗಲೀ, ನೀವು ಸೃಷ್ಟಿಸುವ ಸಂದರ್ಭವಾಗಲೀ ನಿರ್ಧರಿಸಬಾರದು. ಇಡೀ ಲೋಕವೇ ಒತ್ತಾಯಿಸಿದರೂ ಸರಿ, ಅದು ನನ್ನದೇ ನಿರ್ಧಾರವಾಗಿರಬೇಕು. ಇದನ್ನೂ ಒಪ್ಪಿಬಿಡಬಹುದು ಆದರೆ ಅದು ಲೋಕದ ನಡೆಗೆ ಕೇಡುಂಟುಮಾಡಬಾರದು ಅಷ್ಟೆ.

ನಮ್ಮ ಮೌಲ್ಯಗಳನ್ನು ವ್ಯಾಖ್ಯಾನಿಸುವ ಅನೇಕ ವ್ಯಾಖ್ಯಾನಗಳಿವೆ. ವಿಜ್ಞಾನದ ವ್ಯಾಖ್ಯಾನ, ಮೀಮಾಂಸೆಯ ವ್ಯಾಖ್ಯಾನ, ಚರಿತ್ರೆಯ ವ್ಯಾಖ್ಯಾನ, ದರ್ಶನದ ವ್ಯಾಖ್ಯಾನ ಇತ್ಯಾದಿ. ಇನ್ನೊಬ್ಬರ ಬದುಕನ್ನು (ಅನ್ನ, ಭಾಷೆ, ದುಡಿಮೆ, ನಿದ್ರೆ ಮುಂತಾದುವುಗಳನ್ನು) ಮತ್ತೊಬ್ಬರು ಆಕ್ರಮಿಸಿಕೊಳ್ಳಬಾರದು ಎನ್ನುವ ನಿಲುವು ಈ ಎಲ್ಲ ವ್ಯಾಖ್ಯಾನಗಳಿಂದಾಚೆಗೆ ಇರುವ ನೈಸರ್ಗಿಕ ನಿಲುವು. ಲೋಕಕ್ಕೆಲ್ಲ ಒಂದೇ ವ್ಯಾಖ್ಯಾನ ನೀಡಬಯಸುವ ಕಾರ್ಪೊರೇಟ್ ವ್ಯಾಖ್ಯಾನವನ್ನು ನಾವು ಯಾಕೆ ಅನುಮಾನಿಸಬೇಕು? ಅಂತಹ ಒಂದು ವ್ಯಾಖ್ಯಾನ ಎನ್ನುವುದೇ ಸರ್ವಾಧಿಕಾರದ ಮೊದಲ ಮೆಟ್ಟಿಲು. ಅದು ನಿಶ್ಚಿತವಾಗಿ ಸರ್ವಾಧಿಕಾರದಲ್ಲಿ ಕೊನೆಗೊಳ್ಳಲೇಬೇಕು. ಎಲ್ಲವನ್ನೂ ಏಕತ್ರಗೊಳಿಸಬೇಕು. ಒಂದೇ ಮಾರುಕಟ್ಟೆ, ಒಂದೇ ಕರೆನ್ಸಿ, ಒಂದೇ ಭಾಷೆ, ಒಂದೇ ಆಹಾರ ಮುಂತಾದುವುಗಳ ಮೂಲಕ ಜಾರಿಗೆ ಬರುವ ಈ ಅದ್ವೈತೀ ವ್ಯಾಖ್ಯಾನಗಳು ತಮ್ಮನ್ನು ವ್ಯಾಖ್ಯಾನಿಸಿಕೊಳ್ಳುವ ಭಾಷೆಯನ್ನೇ ಕಳೆದುಕೊಂಡು ನುಡಿಯಲಾರದ ಸಂಕಟಕ್ಕೆ ಸಿಕ್ಕಿ ನಲುಗಿರುವ ಸಮೂಹಗಳನ್ನು ಮೊದಲಿಗೆ ದಮನ ಮಾಡುತ್ತವೆ. ನುಡಿಯಿಲ್ಲದ ಅನೇಕ ನೆಲೆಗಳಿವೆ. ಉದಾಹರಣೆಗೆ, ಬುಡಕಟ್ಟುಗಳು, ಮಂಗಳಮುಖಿಯರು, ಸಿರಿಧಾನ್ಯಗಳು, ದೇಶ ಭಾಷೆಗಳು ಇತ್ಯಾದಿ. ಮುಖ್ಯ ಸಂಗತಿಯೆಂದರೆ, ಇವ್ಯಾವುವೂ ದುರ್ಬಲವಲ್ಲ; ಬದಲಿಗೆ ಅವನ್ನು ದುರ್ಬಲಗೊಳಿಸಲಾಗಿದೆ. ಇವುಗಳಿಗೆ ದನಿ ನೀಡಬಲ್ಲ ಸಾಧ್ಯತೆ ಇರುವ ಸಾಹಿತ್ಯವನ್ನು ಕಾರ್ಪೊರೇಟ್ ಸಂಸ್ಕೃತಿ ತಿರಸ್ಕರಿಸುವಂತೆ ಮಾಡುತ್ತದೆ.

ಕಾರ್ಪೊರೇಟ್ ಸಂಸ್ಕೃತಿಗೆ ಒಗ್ಗದ ಸಂಗತಿಗಳೆಂದರೆ ಪ್ರಜಾಪ್ರಭುತ್ವ, ವ್ಯಕ್ತಿ ಭಿನ್ನತೆ, ಚರಿತ್ರೆ, ಜೀವನ ಮೀಮಾಂಸೆ, ನಿಸರ್ಗಸಂರಕ್ಷಣೆ ಇತ್ಯಾದಿ. ಅದರ ಸಾಂಸ್ಕೃತಿಕ ಯಜಮಾನಿಕೆಯನ್ನು ಪ್ರಶ್ನಿಸುವ ಈ ಎಲ್ಲ ಸಂಗತಿಗಳನ್ನೂ ನಿರ್ದಾಕ್ಷಿಣ್ಯವಾಗಿ ಅದು ಹೊಸಕಿ ಹಾಕುತ್ತದೆ. ಅದಕ್ಕೆ ಬೇಕಾದ ಪ್ರಲೋಭನೆಯನ್ನು ಅದು ನಿರಂತರ ಪ್ರಚೋದಿಸುತ್ತದೆ. The 'otherways' to conceive the world, the gods, the nature, the feminine and the masculine ಇವುಗಳೆಲ್ಲ ಅದಕ್ಕೆ ತಿರಸ್ಕಾರಯೋಗ್ಯ.

ಹಾಗಾದರೆ ನಮ್ಮ ಸಾಹಿತ್ಯ ಅಂತ ಯಾವುದನ್ನು ಕುರಿತು ನಾವು ಮಾತನಾಡುತ್ತಿದ್ದೇವೆಯೋ ಅದೇನು ನಮ್ಮತನವನ್ನು ರಕ್ಷಿಸಿಕೊಡುವ ನಮಗೋಸ್ಕರ ಇರುವ ನಮ್ಮದೆ? ಉಹುಂ ಅದೂ ನಮ್ಮದಲ್ಲ. ಅದೂ ಒಂದು ರೀತಿಯ ವಸಾಹತುಶಾಹಿಯೇ. ನಮ್ಮದಲ್ಲದ ರಾಮಾಯಣ ಮಹಾಭಾರತ ಕಾವ್ಯಗಳು, ನಮ್ಮದಲ್ಲದ ದರ್ಶನಗಳು, ನಮ್ಮದಲ್ಲದ ಕಾವ್ಯ ಮೀಮಾಂಸೆ, ನಮ್ಮವಲ್ಲದ ದೈವಗಳು, ನಮ್ಮದಲ್ಲದ ಆಹಾರವನ್ನು ಮಾನ್ಯಮಾಡುವ, ನಮ್ಮ ಚಹರೆಗಳನ್ನು ಅಪಮಾನಿಸುವ, ಒಟ್ಟಾರೆಯಾಗಿ ನಮ್ಮನ್ನು ನಮ್ಮ ಮನೆಯಿಂದ ಆಚೆನಿಲ್ಲಿಸುವ ಸಾಹಿತ್ಯವನ್ನು ನಮ್ಮದು ಎಂದುಕೊಂಡಿರುವುದು, ಈ ವ್ಯಾಪಾರೀ ಕಾರ್ಪೊರೇಟ್ ಅಭಿವ್ಯಕ್ತಿಗಿಂತ ಅಪಾಯಕಾರಿಯಾದುದು. ಇದನ್ನು



ಅಭಿವೃದ್ಧಿ ಮಂತ್ರವು ಜೀವಾವರಣವನ್ನು ಆತಂಕಕ್ಕೆ ತಳ್ಳುತ್ತಿದೆ. ಇದರಿಂದಾಗಿ ಪೋಷಕ ಆರ್ಥಿಕತೆಯು ಆತಂಕಕ್ಕೀಡಾಗಿದೆ. ಇದು ಬಡವರ ಚೇತನವನ್ನು ಅವರ ಬದುಕುವ ಕಲೆಯನ್ನು ನಾಶಮಾಡುತ್ತದೆ. ಹಾಗೆಂದು ಬಡವರಿಗೆ ಹಣ ಬೇಡವೆಂದಲ್ಲ. ತಮ್ಮ ಸ್ವಾಯತ್ತ ನೆಲೆಗಳನ್ನು ಕಳೆದುಕೊಂಡ ಬಡವರು ಅನಿವಾರ್ಯವಾಗಿ ಮಾರುಕಟ್ಟೆ ನಿರ್ಧರಿತ ಬದುಕಿಗೆ ವರ್ಗಾವಣೆಯಾಗಿ ತಮ್ಮ ಜೀವನ ಕೌಶಲಗಳನ್ನು, ಕರ್ತೃತ್ವ ಶಕ್ತಿಯನ್ನು ಕೇವಲ ಧನಾರ್ಜನೆಗಾಗಿ ಬಳಸಬೇಕಾದ ಅನಿವಾರ್ಯ ಸ್ಥಿತಿಗೆ ದೂಡಲ್ಪಡುತ್ತಾರೆ. ಇಂತಹ ಮಾರುಕಟ್ಟೆಯಲ್ಲಿ, ಅಸಹಜವಾಗಿ, ಆತ್ಮರಹಿತ ಅನಾಮಿಕ ವಸ್ತುಗಳಾಗಿ ಮಾರ್ಪಾಡಾಗುತ್ತಾರೆ.

ಕಾರ್ಪೊರೇಟ್ ಮೌಲ್ಯಗಳೊಡನೆ ಮುಖಾಮುಖಿ ಮಾಡಿದರೆ ಏನಾಗುತ್ತದೆ? ಇಂಥದೇ ಇಬ್ಬಂದಿ ಅನೇಕ ಸಲ ಬಂದಿವೆ. ನಗರೀಕರಣವೂ ಇಂಥದೇ ಇಕ್ಕಟ್ಟನ್ನು ಅಥವಾ ಬಯಲನ್ನು ಸೃಷ್ಟಿಸುತ್ತೆ. ಕೆಲವರಿಗೆ ನಗರ ಬಲು ಇಕ್ಕಟ್ಟಾದರೆ, ಕೆಲವರಿಗೆ ಬಿಡುಗಡೆ. ಭಾರತಕ್ಕೆಲ್ಲ ಒಂದೇ ಧರ್ಮ ಇದ್ದರೆ ಸಾಕುಬಿಡಿ ಅನ್ನುವ ಹಾಗೆ. ಇದು ಅತ್ಯಂತ ಜಾರುದಾರಿಯ ನಡೆ. ವಸಾಹತುಶಾಹಿಯಡಿಯಲ್ಲಿ ನಲುಗಿರುವ ನಮ್ಮ ದೇಶ ಅನೇಕ ಸ್ತರಗಳ ವಸಾಹತು. ಹಾಗಾಗಿ ಒಂದು ತೆರವಾದರೆ ಇನ್ನೂ ಕೆಲವು ಹಾಗೇ ಇರುತ್ತವೆ. ಹೊಸ ಹೊಸ ವಸಾಹತುಶಾಹಿ ವರಸೆಗಳು ಸೇರ್ಪಡೆಯಾಗುತ್ತ ಇರುತ್ತವೆ. ಹಾಗಾಗಿ ನಿರಂತರ ವಸಾಹತುವಾಗಿಯೇ ಈ ದೇಶ 'ಮುಂದುವರಿದಿದೆ.'

ವ್ಯಾಪಾರೀ ಹಿತಾಸಕ್ತಿಗಳು ಸಾಹಿತ್ಯಾಭಿವ್ಯಕ್ತಿಯನ್ನು ನಿಯಂತ್ರಿಸುವುದಕ್ಕೆ ಆರಂಭಿಸಿದರೆ ಏನಾಗುತ್ತದೆ? ಅದನ್ನು ಸಾಹಿತ್ಯ ಹೇಗೆ ನಿಭಾಯಿಸಬೇಕು? ಇವು ಈ ಮಾತುಕತೆಯ ಮುಖ್ಯ ಸಂಗತಿಗಳು. ಇಂಥದ್ದೊಂದು ಪ್ರಶ್ನೆಯನ್ನು ಮುಕ್ತಸಾಹಿತ್ಯ ವಾತಾವರಣ ಇದ್ದಾಗ ಕೇಳಿಕೊಳ್ಳಬಹುದೇ ಹೊರತು ಸುಮಾರು ಮೂರು ಸಾವಿರ ವರುಷಗಳ ವಸಾಹತು ಚರಿತ್ರೆ ಇರುವ ಭಾರತದ ಯಾವ ದೇಶಭಾಷೆಗಳಾದರೂ ಕೇಳಿಕೊಳ್ಳಲು ಸಾಧ್ಯವೆ? ನಮಗೆ ಏನಿದ್ದರೂ ಈಗಿರುವ ವಸಾಹತುಪ್ರಜ್ಞೆಯಿಂದ ಹೊಸದೊಂದು ವಸಾಹತುಪ್ರಜ್ಞೆಗೆ ಹೋದರೆ ಆಗುವ ವ್ಯತ್ಯಾಸಗಳೇನು? ಎನ್ನುವ ಪ್ರಶ್ನೆಯಷ್ಟೆ ಎದುರಿಗೆ ಇದೆ.

ಈಗ ನಾವೆಲ್ಲ ಒಂದು ಸಾಂಸ್ಕೃತಿಕ ಉದ್ದಿಮೆಯ (cultural industry) ನಟ್ಟ ನಡುವೆ ಇದ್ದೇವೆ. ಸಮೂಹ ಮಾಧ್ಯಮಗಳು ಕೂಡ ಈಗ ಸಾಂಸ್ಕೃತಿಕ ಉದ್ದಿಮೆಯಾಗಿ ಕಾರ್ಯ ನಿರ್ವಹಿಸುತ್ತಿವೆ. ಅದರ ದೊಡ್ಡಪಾಲನ್ನು ಸಾಂಸ್ಕೃತಿಕ ವಸಾಹತುಶಾಹಿ ಪಡೆದುಕೊಂಡಿದೆ. ಅದು ಉದ್ದಿಮೆ ಏಕೆಂದರೆ ಜ್ಯೋತಿಷ್ಯ, ವಾಸ್ತು ಇತ್ಯಾದಿಗಳ ವಹಿವಾಟು ದಿನವಹಿ ಕೋಟ್ಯಂತರ ರೂಪಾಯಿಗಳನ್ನು ಮೀರಿದೆ.

ಇನ್ನು ಸಾಹಿತ್ಯವೇನು ಕಡಿಮೆ ಉದ್ದಿಮೆಯಲ್ಲ. ಬಿಡುಗಡೆಯಾದ ದಿನವೇ ಮೂರು ನಾಲ್ಕು ಆವೃತ್ತಿಗಳನ್ನು ಕಾಣುವ ಕೃತಿಗಳನ್ನು ರಚಿಸುವ ಒಂದೇ ಜಾತಿಯ ಜನ ಎಲ್ಲ ಕಡೆ ಎಲ್ಲ ಮಾಧ್ಯಮಗಳನ್ನು ಆವರಿಸಿದ್ದಾರೆ. ಅಳಿದುಳಿದ ಸಂದಿಗೊಂದಿಗಳನ್ನೂ ತಡಕಿ ತಡಕಿ ದೋಚಿಕೊಳ್ಳುತ್ತಿದ್ದಾರೆ. ನೀವು ಯಾವುದೇ ಒಂದು ಸಾಮಾನ್ಯ ದಿನಪತ್ರಿಕೆ, ನಿಯತಕಾಲಿಕೆಗಳಿಂದ ಹಿಡಿದು, ಪ್ರಶಸ್ತಿ, ಸಾಂಸ್ಕೃತಿಕ ಅಧಿಕಾರ ಕೇಂದ್ರಗಳು, ದಿನಾ ನಡೆಯುವ ಸಾಂಸ್ಕೃತಿಕ ಕಾರ್ಯಕ್ರಮಗಳ ಪಟ್ಟಿ – ಒಮ್ಮೆ ಕುತೂಹಲಕ್ಕೆ ಗಮನಿಸಿ. ಇಲ್ಲೆಲ್ಲ ಒಂದೇ ಜಾತಿಯ ಜನರ ಪಾಂಚಜನ್ಯ ಮೊಳಗುತ್ತಿರುತ್ತದೆ. ಇನ್ನೂ ದುರಂತವೆಂದರೆ ಬೇರೆಯವರ ಕೈಲೂ ಇದನ್ನೇ ಊದಿಸುತ್ತಿದ್ದಾರೆ. ಈ ಉದ್ದಿಮೆ ಕಾರ್ಪೊರೇಟ್ ಸಂಸ್ಕೃತಿಯ ಮುಖ್ಯ ಭಾಗವೆಂದರೂ ಒಪ್ಪುತ್ತದೆ.

ಬೆಂಗಳೂರಿನ ಸಪ್ನ ಪುಸ್ತಕದ ಅಂಗಡಿಯಲ್ಲಿ ಸ್ವಲ್ಪ ಹೊತ್ತು ಕಾಲ ಕಳೆಯಬೇಕಾಯಿತು. ಕನ್ನಡ ಪುಸ್ತಕಗಳಲ್ಲಿ ಅತಿ ಹೆಚ್ಚು ಭರಾಟೆಯಿಂದ ಖರ್ಚಾಗುವ ಪುಸ್ತಕಗಳು ಯಾವುವು ಎಂದು ಅಲ್ಲಿಯ ಮಾರಾಟ ಸಹಾಯಕರನ್ನು ವಿಚಾರಿಸಿದೆ. ರಾಮಾಯಣ, ಮಹಾಭಾರತದ ಬೇರೆ ಬೇರೆ ಆವೃತ್ತಿಗಳು, ಭಗವದ್ಗೀತೆಯ ಪಾಕೆಟ್ ಎಡಿಷನ್, ವಾಸ್ತು ಮತ್ತು ವಾಸ್ತು ದೋಷ ನಿವಾರಣೆಯ ಪುಸ್ತಕಗಳು, ಸೌಂದರ್ಯಲಹರಿಯ ಪಾಕೆಟ್ ಎಡಿಷನ್ ಇತ್ಯಾದಿ ಇವೇ ಜಾಸ್ತಿ ಖರ್ಚಾಗುತ್ತವೆ ಅಂದರು. ಅವು ಬಿಟ್ಟರೆ ಯಥಾಪ್ರಕಾರ ಭೈರಪ್ಪ ಇತ್ಯಾದಿಗಳ ಹೆಸರು ಹೇಳಿದರು. ಅಲ್ಲಿ ಕೆಲವು ಪುಸ್ತಕಗಳನ್ನು ಬನಶಂಕರಿ ಜಾತ್ರೆಯಲ್ಲಿ ಮೈಸೂರು ಪಾಕ್, ಜಿಲೇಬಿಗಳನ್ನು ಜೋಡಿಸುವ ಗೋಪುರದ ಮಾದರಿಯಲ್ಲಿ ಜೋಡಿಸಿದ್ದರು. ಯಾರ ಪುಸ್ತಕಗಳು ಎಂದು ಗಮನಿಸಿದೆ. ಭೈರಪ್ಪ ಮತ್ತು ಅದ್ಯಾವುದೋ ಅಸುರ ಅನ್ನುವ ಹೆಸರಿನ ಪುಸ್ತಕ, ಅದರ ಲೇಖಕ ಪರಿಚಿತ ಹೆಸರಿನಂತೆ ಕಾಣಲಿಲ್ಲ. ಅದ್ಯಾವುದೋ ಭಾಷಾಂತರ. ಆದರೂ ಅದರ ಪೋಸ್ಟರ್‌ಗಳು ಮತ್ತು ಕವರ್ ಪೇಜ್ ಎಲ್ಲ ಕಡೆ ರಾರಾಜಿಸುತ್ತಿತ್ತು. ಇನ್ನು ಜ್ಯೋತಿಷ್ಯ, ಭವಿಷ್ಯ, ವಾಸ್ತುಶಿಲ್ಪ, ವರಮಹಾಲಕ್ಷ್ಮಿ ವ್ರತಮಹಿಮೆ ಮತ್ತು ಅದನ್ನು ಮಾಡುವ ಸರಿಯಾದ ರೀತಿ, ಫಲ ಜೋತಿಷ್ಯ, ರವಿಶಂಕರ್ ಗುರೂಜಿ ಪುಸ್ತಕಗಳು ಮತ್ತು ಒಂದಷ್ಟು ಕಾದಂಬರಿಗಳು ಎಲ್ಲ ಕಡೆ ಅವೇ ಕಾಣುತ್ತಿದ್ದವು. ನಾವುಗಳು ಯಾವುದನ್ನು ನಿಜವಾದ ಸಾಹಿತ್ಯ

ಎಂದುಕೊಂಡಿದ್ದೇವೋ ಅದೆಲ್ಲ ತೀರಾ ಕೆಳಗಿನ ರ್‍ಯಾಕುಗಳಲ್ಲಿ ಒಂದೊಂದೇ ಕಾಪಿಗಳಲ್ಲಿದ್ದವು. ಪಾಪ ಪುಸ್ತಕದ ಅಂಗಡಿಯವರಿಗೆ ವ್ಯಾಪಾರ ಮುಖ್ಯ. ಇನ್ನೊಂದು ಚಿತ್ರಣವನ್ನು ನಾವು ಬೇರೆಡೆಗಳಲ್ಲಿ ಕಾಣಬಹುದು. ನಮ್ಮ ಸಂತೆ ಜಾತ್ರೆಗಳಲ್ಲಿ ಕಾಣಬರುವ ಜನಪ್ರಿಯ ಪ್ರಕಟಣೆಗಳು ಹೇಗಿರುತ್ತವೆ? ಶಿಶುನಾಳ ಶರೀಫರ ತತ್ವಪದಗಳು, ಕಡಕೋಳ ಮಡಿವಾಳಪ್ಪನ ಭಜನೆ ಪದಗಳು, ಚಿದಾನಂದಾವಧೂತನ ಜ್ಞಾನ ಸಿಂಧು, ಮುಂತಾದ ಅಲ್ಲಿಯ ಬೇಡಿಕೆಗೆ ಅನುಗುಣವಾದ ಪುಸ್ತಕಗಳು, ತುಂಬ ಕಡಿಮೆ ಬೆಲೆ ಇರಬೇಕು ಎನ್ನುವುದು ಅಲ್ಲಿಯ ಮುಖ್ಯ ಕೋರಿಕೆ.



'ಸಿರಿ–ಸಂಭ್ರಮಗಳ' ಅಕೆಡೆಮಿಕ್ ವಲಯದಿಂದ ಆಚೆಗೆ ನಿಲ್ಲಿಸಿದ್ದಾರೆ. ಇದು ಯಾರನ್ನೋ ಹೊರಗೆ ನಿಲ್ಲಿಸಿರುವುದಲ್ಲ; ನಮ್ಮನ್ನೇ ಹೊರಗೆ ನಿಲ್ಲಿಸಿ ಹೊರಗಿನಿಂದ ಬಂದವರು ಮಾಡುತ್ತಿರುವ ಯಜಮಾನಿಕೆ. ನಮ್ಮ ಕಾರ್ಪೊರೇಟ್ ಕತೆಗಾರರೂ ಹಾಗೆಯೇ. ನಾನು ಅಸ್ಪೃಶ್ಯತೆಯ ಆಚರಣೆ ಮಾಡುವವನೂ ಅಲ್ಲ; ಅದರೊಂದಿಗೆ ನನ್ನ ಸಂಬಂಧವೇನೂ ಇಲ್ಲ; ನನಗೆ ನನ್ನ ಬದುಕಿನ ವರ್ತಮಾನದ ಸಂಕಟಗಳು ಮುಖ್ಯವೇ ಹೊರತು ಸಮೂಹ ಹೇಳಿಕೊಳ್ಳುತ್ತಿರುವ ಸಾವಿರಾರು ವರುಷಗಳ ಕೊಳಕಿಗೆ ನಾನು ಪ್ರತಿಕ್ರಿಯಿಸಲಾರೆ. – ಇಂತಹ ನಿಲುವನ್ನು ದೀರ್ಘಕಾಲೀನ ವಸಾಹತು ಅನುಭವದ ಭಾಷೆಯೊಂದು, ನಾಡೊಂದು ತಿರಸ್ಕರಿಸಬೇಕೆ? ಇಲ್ಲಿ ಗಮನಿಸಬೇಕಾದ ಸಂಗತಿಯೆಂದರೆ: ಅದು ಭವಿಷ್ಯದ ಬಗೆಗೆ ಯಾವ ಭರವಸೆಯನ್ನೂ ಮಂಡಿಸುವುದಿಲ್ಲ.

ಕಾರ್ಪೊರೇಟ್ ಮೌಲ್ಯಗಳು ಮತ್ತು ಸಾಹಿತ್ಯವನ್ನು ಎರಡು ಅವಳಿ ವಿರುದ್ಧಗಳೆಂದೇನೂ ನೋಡಬೇಕಾಗಿಲ್ಲ, ಎಂಬುದನ್ನು ಸೂಚಿಸಲು ಈ ಉದಾಹರಣೆಗಳನ್ನು ಕೊಡಬೇಕಾಯಿತು. ವಿಶ್ವದಲ್ಲಿರುವ ಎಲ್ಲ ವಸಾಹತುಶಾಹಿಗಳ ಸಮಸ್ತ ಲಕ್ಷಣಗಳನ್ನೂ ಕಾಣಲು ಸಾಧ್ಯವಿರುವ ದೇಶವೆಂದರೆ ಭಾರತವೇ. ಸಾಂಸ್ಕೃತಿಕ ವಸಾಹತುಶಾಹಿಯ ಸಾವಿರಾರು ವರ್ಷಗಳ ಇತಿಹಾಸವಿರುವ ಈ ದೇಶಕ್ಕೆ ಹೊಸದೊಂದು ನವ ವಸಾಹತುಶಾಹಿಯ ಸೇರ್ಪಡೆಯಿಂದಾಗಿ ಆಗಬಹುದಾದ ಪರಿಣಾಮಗಳನ್ನು ಚಿಂತಿಸುವುದು ನಮ್ಮ ಸದ್ಯದ ದಂದುಗ. ಆಯ್ಕೆಗೆ ಅವಕಾಶಗಳಿಲ್ಲದ ಎರಡು ಅನಿವಾರ್ಯಗಳನ್ನು ನಾವು ನಿಭಾಯಿಸಬೇಕಾಗಿದೆ. ಕಾರ್ಪೊರೇಟೀಕರಣವೆನ್ನುವುದು ಒಂದು ವೈಶ್ವಿಕ ಪ್ರಕ್ರಿಯೆ. ಪಾಲ್ಗೊಳ್ಳಿ ಅಥವಾ ನಿರ್ಲಕ್ಷ್ಯಕ್ಕೀಡಾಗಿ – ಇದು ಅದರ ಧ್ಯೇಯವಾಕ್ಯ. ಎರಡನೆಯದು ಅದೊಂದು ವ್ಯಾಪಾರೀ ಅಧಿಕಾರ ಕೇಂದ್ರ. ಹಾಗಾಗಿ ಎಲ್ಲ ಅಧಿಕಾರ ಕೇಂದ್ರಗಳಂತೆಯೇ ಅದೂ ಕೂಡ ಸಾಹಿತ್ಯ, ಜೀವನಮೀಮಾಂಸೆ ಮತ್ತು ತಾತ್ವಿಕತೆಯನ್ನು ತಮ್ಮ ಪರವಾಗಿರುವಂತೆ ಎಚ್ಚರದಿಂದ ನಿರ್ವಹಿಸುತ್ತದೆ. ಅದನ್ನು ಅವು ಹೇಗೆ ಸಾಧಿಸುತ್ತವೆ? ಸಮೂಹಕ್ಕೆ ತನ್ನ ಆಯ್ಕೆಯನ್ನು ತಾನು ಮಾಡಿಕೊಳ್ಳದ ಹಾಗೆ ನೋಡಿಕೊಳ್ಳುವುದು ಮೊದಲನೆಯದು. ತನ್ನ ಇತಿಹಾಸವನ್ನು ಗುರುತಿಸಿಕೊಳ್ಳುವ, ತನ್ನ ಅಸ್ಮಿತೆಯನ್ನು ಕಂಡುಕೊಳ್ಳುವ, ತನ್ನ ವರ್ತಮಾನದ ಅಗತ್ಯಗಳನ್ನು ಗುರುತಿಸಿಕೊಳ್ಳುವ, ಯಾವುದು ತನಗೆ ಸರಿ ಎಂದು ಆಯ್ದುಕೊಳ್ಳುವ ವಿವೇಕವನ್ನು ಕಿತ್ತುಕೊಂಡರೆ ಮುಗಿಯಿತು. ಸಾಹಿತ್ಯ ಇದಕ್ಕೊಂದು ಶಕ್ತವಾದ ವೇದಿಕೆ. ಯಾವ ಪುಸ್ತಕಗಳನ್ನು ಕೊಂಡು ಓದಬೇಕು ಎನ್ನುವ ವಿವೇಕ ಬೀದಿಬದಿಯಲ್ಲಿ ಇನ್ನೂ ಸಂಪೂರ್ಣ ಕಳೆದುಹೋಗಿಲ್ಲ, ಆದರೆ ಇದೇ ಮಾತನ್ನು ಕಾರ್ಪೊರೇಟ್ ಅಂಗಡಿಗಳಲ್ಲಿ ಸುಳಿಯದಂತೆ ನೋಡಿ ಕೊಳ್ಳಲಾಗಿದೆ ಎನ್ನುವುದನ್ನು ಸೂಚಿಸಲು ಈ ಉದಾಹರಣೆ ಕೊಡಬೇಕಾಯಿತು.

ಕಾರ್ಪೊರೇಟ್ ಜಗತ್ತು ಚರಿತ್ರೆಯೊಡನೆ ನಮಗಿರುವ ಸಂಬಂಧವನ್ನು ನಿರ್ದಾಕ್ಷಿಣ್ಯವಾಗಿ ತುಂಡರಿಸುತ್ತದೆ. ಸಾಹಿತ್ಯದ ಆತ್ಯಂತಿಕ ಉದ್ಯೋಗವೇನು? ಎನ್ನುವ ಮೀಮಾಂಸೆಯ ಪ್ರಶ್ನೆಗೆ ಕೊಡಬಹುದಾದ ಎರಡು ಉತ್ತರದ ಮಾದರಿಗಳು ನಮ್ಮ ಕಣ್ಣೆದುರಿಗೆ ಇವೆ. ಸಾಹಿತ್ಯದ ಉದ್ದೇಶವೇ ಲೋಕದ ತಲ್ಲಣಗಳಿಗೆ ಸಮಾಧಾನ ಹುಡುಕುವುದು. ಅದು ಅಸಮಾನತೆಯೋ, ಬರಗಾಲವೋ, ಜಾತಿಯೋ, ಅಸ್ಪೃಶ್ಯತೆಯೋ, ಯುದ್ಧವೋ, ನಿಸರ್ಗದಿಂದ ಒದಗುವ ದುಃಖವೋ – ಅದರ ಅನುಸಂಧಾನವೇ ಅದರ ಉದ್ಯೋಗ. ಇದು ಒಂದು ನಿಲುವು. ಇಲ್ಲ ಅದೊಂದು ಸಂಭ್ರಮ, ಸಿರಿ, ಆನಂದ, ಅದರ ಮೂಲಕ ಪರಬ್ರಹ್ಮ, ಪರಾವಾಕ್ಕು ಇತ್ಯಾದಿ ಎನ್ನುವುದು ಇನ್ನೊಂದು ನಿಲುವು. ಯಾವ ವಚನಕಾರನೂ ಹಾಗೆ ಆನಂದಕ್ಕೆ ವಚನ ಕಟ್ಟಿಲ್ಲವಲ್ಲ ಎಂದು ನೀವೇನಾದರೂ ಅಂದರೆ, ಹಾಗಾದರೆ ವಚನ ಸಾಹಿತ್ಯವಲ್ಲ ಎಂದು ಅದನ್ನು ಹೊರಗೆ ನಿಲ್ಲಿಸುತ್ತಾರೆ; ನಿಲ್ಲಿಸಿದ್ದರು, ಕನಕನನ್ನು ನಿಲ್ಲಿಸಿದ್ದರು, ನಿಲ್ಲಿಸಿದ್ದಾರೆ; ನೂರಾರು ತತ್ವಪದಕಾರರನ್ನು ಅವರ ಏಕತಾರಿಯ ಸಮೇತ ಇವತ್ತಿಗೂ ಈ

ಮತ್ತೊಂದು ಬಹು ಮುಖ್ಯ ಸಂಗತಿಯೆಂದರೆ ಇದು ಸಾಹಿತ್ಯಕ್ಕಷ್ಟೆ ಸಂಬಂಧಿಸಿದುದಲ್ಲ. ಕಾರ್ಪೊರೇಟ್ ಜಗತ್ತಿನಲ್ಲಿ ನೆಲದ ಕಾನೂನೆಂಬ ನಿಲುವೇ ಅಸಂಗತ. ಯಾವ ಮೀಸಲಾತಿಯ ಕಲ್ಪನೆಯೂ ಅಲ್ಲಿರಲು ಸಾಧ್ಯವಿಲ್ಲ. ವ್ಯಕ್ತಿಗತ, ವೈಯಕ್ತಿಕ ಮತ್ತು ಸ್ಥಳೀಯವಾಗಿ ಬದುಕಬಲ್ಲ ಜೀವಗಳಿಗೆ ಇಲ್ಲಿ ಜಾಗವಿಲ್ಲ. ರಾಷ್ಟ್ರೀಯ ಆಡಳಿತವು ಇಲ್ಲಿ ಯಾವ ಎಗ್ಗೂ ಇಲ್ಲದೆ ಅಂತರರಾಷ್ಟ್ರೀಯ ಆಡಳಿತವಾಗಿ ಪರಿವರ್ತಿತವಾಗುತ್ತದೆ. ಸ್ಥಳೀಯ ಆಡಳಿತಗಳು ಅಲ್ಲಿ ದೈನೇಸಿ ಸ್ಥಿತಿಗೆ ಬಂದು ನಿಲ್ಲುತ್ತವೆ. ಹಾಗಾಗಿ ಇಲ್ಲಿ ಮೊದಲು ದುರ್ಬಲವಾಗುವುದು ಪ್ರಜಾಸತ್ತಾತ್ಮಕ ಅಧಿಕಾರ ಕೇಂದ್ರಗಳು.

ಕಾರ್ಪೊರೇಟ್ ಮೌಲ್ಯಗಳು ನಮ್ಮ ಜೀವನ ಕ್ರಮದಲ್ಲಿನ ಸ್ವಾಯತ್ತ ನೆಲೆಗಳನ್ನು ಕಡೆಗಣಿಸುತ್ತವೆ, ಅಪಮಾನಿಸುತ್ತವೆ ಮತ್ತು ನಿರ್ಲಕ್ಷ್ಯಕ್ಕೀಡು ಮಾಡಲು ಬೇಕಾದ ಸಾಮೂಹಿಕ ಒಪ್ಪಿಗೆಯನ್ನು ಉತ್ಪಾದಿಸಿಕೊಳ್ಳುತ್ತವೆ. ಹೀಗೆ ಒಪ್ಪಿಗೆ ಪಡೆದ ಮೇಲೆ ಸ್ವಾಯತ್ತ ನೆಲೆಗಳನ್ನು ಕಡೆಗಣಿಸಿ ಅಧಿಕಾರ ಕೇಂದ್ರಗಳನ್ನು ಮಾನ್ಯಮಾಡುತ್ತವೆ. ಇದು ವೈರಿ ಒಡ್ಡಿದ ಬಲೆಯನ್ನು ನಾವಾಗಿ ಅಪ್ಪಿಕೊಂಡಂತಾಗುತ್ತದೆ. ಹೋರಾಟಗಳು ಇನ್ನಷ್ಟು ಮತ್ತಷ್ಟು ಸವಲತ್ತುಗಳಿಗಾಗಿ, ಅಧಿಕಾರಕ್ಕಾಗಿ ನಡೆಸುವ ಚೌಕಾಸಿಗೆ ಇಳಿಯಲೇಬೇಕಾಗುತ್ತದೆ. ಇಂತಹ ಹೋರಾಟಗಳನ್ನು ನಿರಾಕರಿಸಬೇಕೆಂದೇನೂ ಅಲ್ಲ. ಆದರೆ ಅವು ಅಂತಿಮವಾಗಿ ಕ್ಷಣಿಕ ಪರಿಣಾಮಗಳಲ್ಲಿ ತೃಪ್ತಿ ಹೊಂದಿ ಸ್ಥಗಿತವಾಗುತ್ತವೆ. ಆದರೆ ಸ್ವಾಯತ್ತ ನೆಲೆಯ ಚಿಂತನೆಗಳಿಗೆ ಮುಖ್ಯವಾಗುವುದು ಅಧಿಕಾರದ ಮರು ಹಂಚಿಕೆಯೂ ಅಲ್ಲ, ಹೆಚ್ಚಿನ ಪಾಲೂ ಅಲ್ಲ, ಬದಲಿಗೆ ಎಲ್ಲ ರೀತಿಯ ಅಧಿಕಾರ ನಿರಸನವು ಇಲ್ಲಿನ ಪ್ರಮುಖ ನಿಲುವು. ಇದೊಂದು ಭಿನ್ನ ರೀತಿಯ, ಭಿನ್ನ ದಿಕ್ಕಿನ ಪಯಣ. ಇದುವರೆಗಿನ ನಮ್ಮ ಸಾಮಾಜಿಕ, ಸಾಂಸ್ಕೃತಿಕ ಹೋರಾಟಗಳು ಹಿಡಿದ ಅಧಿಕಾರಮುಖೀ ದಿಕ್ಕಿನ ಪಯಣಗಳು ತಲುಪಿರುವ ಗುರಿಗಳು ನಮ್ಮ ಉದ್ದೇಶವನ್ನು ಎಷ್ಟರ ಮಟ್ಟಿಗೆ ಈಡೇರಿಸಿವೆ ಎಂಬುದನ್ನು ನಾವೀಗ ಮರುಚಿಂತನೆ ಮಾಡಬೇಕಾಗಿದೆ. ಒಂದೆರಡು ಸ್ವಾಯತ್ತ ನೆಲೆಗಳನ್ನು ಉದಾಹರಿಸುವುದಾದರೆ, ಭೂಮಿಯ ಧಾರಣ ಶಕ್ತಿ, ಬಹುಮುಖಿ ಜೀವನಪದ್ಧತಿಗಳು, ಸ್ಥಳೀಯ ಸಂಪನ್ಮೂಲಗಳನ್ನು ಬಳಸಿ ಬದುಕಿನ ಮಾದರಿಗಳನ್ನು ಕಟ್ಟಿಕೊಳ್ಳುವ ಕರ್ತೃತ್ವಶಕ್ತಿ, ಮುಂತಾದುವು. ಅನ್ಯ ಪ್ರವೇಶದಿಂದ ಇವುಗಳು ನಾಶವಾಗದಂತೆ, ದುರ್ಬಲವಾಗದಂತೆ ನೋಡಿಕೊಂಡರೆ ಸಾಕು. ಇಂತಹ ಸ್ವತಂತ್ರ ಜೀವನ ಅಭಿವ್ಯಕ್ತಿಯನ್ನು ಭ್ರಷ್ಟಗೊಳಿಸುತ್ತಿರುವ ಜಾಗತೀಕರಣದ ಹತಾರುಗಳು ಯಾವುವೆಂದರೆ: ೧) ಭಾಷೆ ೨) ಸಂಕೇತಗಳು ೩) ಮಾರುಕಟ್ಟೆ ೪) ಲೋಕಸಮಸ್ತವನ್ನು ಭಿನ್ನ ಭಿನ್ನ ಘಟಕಗಳನ್ನಾಗಿಸಿ ವಿಂಗಡಿಸಿ ಮಾರುಕಟ್ಟೆಯ ಸರಕನ್ನಾಗಿಸುವುದು. ೫) ಪ್ರಮಾಣೀಕರಣ ೬) ಸ್ಥಳೀಯ ಭೂಗೋಳದ ನಿರಾಕರಣೆ. ಈ ಪರಿಕಲ್ಪನೆಗಳು ಈಗಾಗಲೇ ಅನೇಕ ಕಡೆ ಚರ್ಚಿತವಾಗಿರಬಹುದು.

ಆದರೆ ಇವುಗಳ ಮರುವ್ಯಾಖ್ಯಾನವು ಹೊಸ ಚಿಂತನೆಗಳಿಗೆ ಚಾಲನೆ ನೀಡಲು ಸಾಧ್ಯವಿದೆ.

ಇದೆಲ್ಲ ಬಾಗಿಲು ಮುಚ್ಚಿಕೊಂಡು ನಡೆಸಬೇಕಾದ ವಹಿವಾಟಲ್ಲ. ಲೋಕವ್ಯವಹಾರದ ಎಲ್ಲ ಬಾಗಿಲುಗಳನ್ನೂ ಹಾರುಹೊಡೆದ ಈ ಹೊತ್ತಿನಲ್ಲಿ ನಾವು ಹೊಸ ಪ್ರವೇಶಗಳನ್ನು ಎದುರಿಸುವ ಬಗೆ ಹೇಗೆ? ಜ್ಞಾನ ಪ್ರಸರಣ ಮತ್ತು ತಿಳುವಳಿಕೆಯ ವೃದ್ಧಿ (ವಿಜ್ಞಾನ ಮತ್ತು ತಂತ್ರಜ್ಞಾನವನ್ನೂ ಒಳಗೊಂಡಂತೆ) ಹಾಗೂ ರಾಷ್ಟ್ರ ರಾಷ್ಟ್ರಗಳ ನಡುವಿನ ಕೊಳು ಪಡೆಗಳೇನೂ ಹೊಸತಲ್ಲ. ವ್ಯಾಪಾರ, ಪ್ರವಾಸ, ವಲಸೆಗಳು ನಾಗರಿಕತೆಯ ಆದಿಯಿಂದಲೂ ಜೀವಂತಿಕೆಯ ಲಕ್ಷಣಗಳಾಗಿ ಮುಂದುವರಿದಿವೆ. ಇಪ್ಪತ್ತನೆಯ ಶತಮಾನವು ವಿಜ್ಞಾನ ಮತ್ತು ತಂತ್ರಜ್ಞಾನ ಕ್ಷೇತ್ರದಲ್ಲಿ ಗಮನಾರ್ಹವಾದ ಸಾಧನೆಯನ್ನು ಮಾಡಿದೆ. ಭೂಮಿಯನ್ನು ಸಂಕುಚಿತಗೊಳಿಸಿದ್ದೇವೆ. ಖಂಡಗಳನ್ನು ಕೆಲವೇ ಗಂಟೆಗಳಷ್ಟು ಹತ್ತಿರ ತಂದಿದ್ದೇವೆ. ವಿಚಾರಗಳನ್ನು ಕೆಲವೇ ಸೆಕೆಂಡುಗಳಿಗೆ ಕುಗ್ಗಿಸಿದ್ದೇವೆ. ಅಗಣಿತ ಸಂಪತ್ತನ್ನು 'ಉತ್ಪಾದಿಸಿದ್ದೇವೆ'. ನಮ್ಮ ಮಾರುಕಟ್ಟೆಗಳನ್ನು ಕಲ್ಪಿಸಲೂ ಆಗದ ಭೋಗವ್ಯೂಹದಿಂದ ಸಿಂಗರಿಸಿದ್ದೇವೆ. ಎಲ್ಲ ರಾಷ್ಟ್ರಗಳೂ ಹೆಚ್ಚುಕಡಿಮೆ 'ಪ್ರಜಾಪ್ರಭುತ್ವ'ವನ್ನು ತಮ್ಮದಾಗಿಸಿಕೊಂಡಿವೆ. ಮಾನವ ಹಕ್ಕುಗಳ ಸಂರಕ್ಷಕರೆಂದು ಘೋಷಿಸಿಕೊಂಡಿವೆ. ಜಾಗತೀಕರಣವೆಂಬ ಹೆಸರಿನ ಈ ಯಾನವನ್ನು ಇಡಿಯಾಗಿ ನಿರ್ಲಕ್ಷಿಸಲಾಗಲೀ, ಈ ಪ್ರಕ್ರಿಯೆಯಿಂದ ಆಚೆ ಉಳಿಯುವುದಾಗಲೀ, ಸಮಂಜಸವಲ್ಲ. ಮಾರುಕಟ್ಟೆ ಆರ್ಥಿಕತೆಯನ್ನು ಉಪಯೋಗಿಸಿಕೊಳ್ಳಬೇಕೋ ಬೇಡವೋ ಎಂಬುದು ನಮ್ಮ ಪ್ರಶ್ನೆಯೇ ಅಲ್ಲ. ವಿಸ್ತಾರವಾದ ಬಳಕೆಯಿಂದ ಮಾತ್ರವೇ ಸಮೃದ್ಧವಾದ ಆರ್ಥಿಕತೆ ಸಾಧ್ಯ. ಚರ್ಚೆ ಇಲ್ಲಿಗೆ ಮುಗಿದಂತೆ ಅಲ್ಲ, ಬದಲಿಗೆ ಶುರುವಾಗುವುದೇ ಇಲ್ಲಿಂದ. ಮಾರುಕಟ್ಟೆ ಆರ್ಥಿಕತೆಯ ಲಾಭಾಂಶಗಳು ಹೇಗೆ ಹಂಚಿಕೆಯಾಗುತ್ತವೆ, ಮಾನವ ಹಾಗೂ ಪ್ರಾಕೃತಿಕ ಸಂಪನ್ಮೂಲಗಳು ಹೇಗೆ ಅಭಿವೃದ್ಧಿಯಾಗುತ್ತವೆ ಮತ್ತು ಅಧಿಕಾರ ಕೇಂದ್ರಗಳು ಹೇಗೆ ವ್ಯವಸ್ಥಿತವಾಗಿ ಅಂಚಿಗೆ ತಳ್ಳಲ್ಪಟ್ಟವರನ್ನು

# ಕೋಲನು ಕಂಡೀರಾ ಮುಟ್ಟುಗೋಲನು ಕಂಡೀರಾ



**ಕೋ**ಲನು ಕಂಡೀರಾ ಮುಟ್ಟುಗೋಲನು ಕಂಡೀರಾ

ಬಾಯನು ತೆರೆದರೆ ಹೆಟ್ಟುವ ಕೋಲು
ತಲೆಯೆತ್ತಿದರೆ ಕುಟ್ಟುವ ಕೋಲು
ಗಂಟಲಲ್ಲಿ ಗದಬಡಿಸುವ ಕೋಲು
ಸೆಟೆದ ಎದೆಯಾ ಮೆಟ್ಟುವ ಕೋಲು
ಕೋಲನು ಕಂಡೀರಾ ಮುಟ್ಟುಗೋಲನು ಕಂಡೀರಾ

ಅರಮನೆಯಲ್ಲಿ ಹುಟ್ಟೋ ಕೋಲು
ಗುರುಮನೆಯಲ್ಲಿ ಬೆಳೆಯೋ ಕೋಲು
ಸಿರಿವಂತರ ಬಲಗೈಲಾಡೋ ಕೋಲು
ಬಡವರ ಹೊಟ್ಟೆಗೆ ಹೊಡೆಯೋ ಕೋಲು
ಕೋಲನು ಕಂಡೀರಾ ಮುಟ್ಟುಗೋಲನು ಕಂಡೀರಾ

ಸಾಕ್ರೆಟಿಸ್‌ಗೆ ವಿಷ ಕುಡಿಸಿದ ಕೋಲು
ಅರಿಸ್ಟಾಟಲ್‌ನ ಊರು ಬಿಡಿಸಿದ ಕೋಲು
ಬ್ರೂನೋ ಮಹಾಶಯಗೆ ಬೆಂಕಿ ಹಚ್ಚಿದ ಕೋಲು
ಗೆಲಿಲಿಯೋನ ಗಲ್ಲಿಗೇರಿಸಿದ ಕೋಲು
ಕೋಲನು ಕಂಡೀರಾ ಮುಟ್ಟುಗೋಲನು ಕಂಡೀರಾ

ಗೌತಮ ಬುದ್ಧನ ಬೆನ್ನಟ್ಟಿದ ಕೋಲು
ಯೇಸುಕ್ರಿಸ್ತಗೆ ಶಿಲುಬೆಯಾದ ಕೋಲು
ಬಸವನ ಕೂಡಲದಿ ಹೂಳಿದ ಕೋಲು
ಗಾಂಧಿ ಮಹಾತ್ಮನ ಸೀಳಿದ ಕೋಲು
ಕೋಲನು ಕಂಡೀರಾ ಮುಟ್ಟುಗೋಲನು ಕಂಡೀರಾ

ಮಂದಿರ ಮಸೀದಿ ಕೆಡವುವ ಕೋಲು
ಮೂರ್ತಿಗಳನು ಒಡೆಯುವ ಕೋಲು
ಲಾಡೆನ್‌ಗೆ ಊರುಗೋಲಾದ ಕೋಲು
ಸಂಘದ ಸಂಗದಿ ಕುಣಿಯೋ ಕೋಲು
ಕೋಲನು ಕಂಡೀರಾ ಮುಟ್ಟುಗೋಲನು ಕಂಡೀರಾ

ಅಕ್ಷರಗಳನು ಅಳಿಸುವ ಕೋಲು
ಹಾಡುಗಳ ಹೊಡಮರಳಿಸೋ ಕೋಲು
ಬೆಳಕಿನ ಚಿಗುರನು ಚಿವುಟುವ ಕೋಲು
ಕತ್ತಲೆ ಬಿತ್ತಿ ಬೆಳೆಯುವಕೋಲು
ಕೋಲನು ಕಂಡೀರಾ ಮುಟ್ಟುಗೋಲನು ಕಂಡೀರಾ

ಕಂಡವರೆಲ್ಲ ಕೂಡೋಣ
ಕೋಲನು ಪುಡಿಪುಡಿ ಮಾಡೋಣ
ಪನ್ಸಾರೆ ದಾಭೋಲ್ಕರ್ ಕಲ್ಬುರ್ಗಿ ಗೌರಿ
ನೆನಪಿನ ಕಾಳನು ಬಿತ್ತೋಣ
ಕೋಲನು ಕಂಡೀರಾ ಮುಟ್ಟುಗೋಲನು ಕಂಡೀರಾ

**ಡಾ|| ಎಂ. ಡಿ. ಒಕ್ಕುಂದ**
'ನೆಮ್ಮದಿ', ಸಂಖ್ಯೆ. ೧೨೪, ಸಿ.ಐ.ಟಿ.ಬಿ. ಕಾಲೋನಿ, ಶ್ರೀನಗರ, ಧಾರವಾಡ – ೫೮೦ ೦೦೩

ಮತ್ತೂ ಮೂಕವಾಗಿಸುತ್ತವೆ ಎಂಬಿತ್ಯಾದಿ ಪ್ರಶ್ನೆಗಳು ನಮ್ಮ ಚಿಂತನೆಗೆ ಗ್ರಾಸ ಒದಗಿಸುತ್ತವೆ. ಅನೇಕ ಸಂಸ್ಥೆಗಳಂತೆ ಮಾರುಕಟ್ಟೆಯೂ ಕೂಡ ಒಂದು ಸಂಸ್ಥೆ. ಸಂಸ್ಥೀಕರಣವು ಎಲ್ಲ ತರಹದ ಶೋಷಣೆಗಳಿಗೂ ಮೂಲ. ಜಾಗತೀಕರಣವು ಎಲ್ಲ ತರಹದ ಸಂಸ್ಥೀಕೃತ ಶೋಷಣೆಗಳನ್ನು ಅವ್ಯಾಹತವಾಗಿ ಮುಂದುವರಿಯುವಂತೆ ನೋಡಿಕೊಳ್ಳುತ್ತದೆ. ಈ ಪ್ರಕ್ರಿಯೆಯನ್ನು ನಿಭಾಯಿಸುವಾಗ ನಮ್ಮ ಸ್ವಾಯತ್ತ ನೆಲೆಗಳು ದುರ್ಬಲವಾಗದಂತೆ ಎಚ್ಚರ ವಹಿಸುವುದು ಅಗತ್ಯ.

**ವ್ಯಾಖ್ಯಾನ ಮತ್ತು ಅಪವ್ಯಾಖ್ಯಾನಗಳು**

ನಾಲಿಗೆ ಇಲ್ಲದ ಅನೇಕ ಸಮೂಹಗಳಿವೆ. (ಉದಾಹರಣೆಗೆ: ಮಂಗಳಮುಖಿಯರು, ಅನೇಕ ಬುಡಕಟ್ಟು ಸಮೂಹಗಳು, ಕನ್ನಡದಂತಹ ಅನೇಕ ದೇಶಭಾಷೆಗಳು, ತೃಣಧಾನ್ಯದಂತಹ ನಿರ್ಲಕ್ಷಿತ ಧಾನ್ಯ ಸಮೂಹ, ಇತ್ಯಾದಿ). ಅಭಿವೃದ್ಧಿಯ ವ್ಯಾಖ್ಯಾನದಲ್ಲಿ ಇವ್ಯಾವುವೂ ಇರುವುದಿಲ್ಲ. ಈ ನಿರ್ಲಕ್ಷಿತ ಸಮೂಹಗಳೆಲ್ಲವೂ ಜಾಗತೀಕರಣದ ವ್ಯಾಖ್ಯೆಯಲ್ಲಿ 'ಅನ್ಯರು', 'ಕೊರತೆಯಿರುವವರು' ಮತ್ತು 'ಅವಕಾಶವಂಚಿತರು'. ಪರಿಸರ ಒಡ್ಡುವ ಎಲ್ಲ ನ್ಯೂನತೆಗಳೊಡನೆ ಬದುಕುವುದೂ ಒಂದು ಕೌಶಲ. ಕೇವಲ ವಸ್ತುವಾಗಲೀ ಹಣವಾಗಲೀ ಒಂದು ಸಮೂಹದ ಅಭಿವೃದ್ಧಿಯನ್ನು ನಿರ್ಧರಿಸುತ್ತಿದ್ದರೆ, ಈ ಪ್ರಶ್ನೆಯನ್ನು ಕೇಳಲೇಬೇಕು. "ನೀವು ಹೇಗೆ ನನ್ನ ಅಭಿವೃದ್ಧಿಯ ವ್ಯಾಖ್ಯಾನಕಾರರು? ನಾನು ಹೇಗೆ ಅಥವಾ ಎಂಥವನಾಗಿ ಬಾಳಬೇಕೆಂದು ನೀವು ಯಾಕೆ ನಿರ್ಧರಿಸಬೇಕು?"

ಜಾಗತೀಕರಣವು ಸ್ಥಳೀಯ ಬದುಕಿನ ಕ್ರಮಕ್ಕೆ ವ್ಯತಿರಿಕ್ತವಾದುದು ಮತ್ತು ಸ್ಥಳೀಯ ಪ್ರಜ್ಞೆಯನ್ನು ಮಸುಕಾಗಿಸಿ ಅಮಾನ್ಯಮಾಡುತ್ತದೆ. ಮಾರುಕಟ್ಟೆಯು ಮುಂದಿಡುವ ಅವಶ್ಯಕತೆಗಳು ಅಥವಾ ಕೊರತೆಗಳು ಕೊರತೆಗಳಾಗಬೇಕಿಲ್ಲ. ಸುಮಾರು ಆರು ಸಾವಿರ ಬತ್ತದ ತಳಿಗಳನ್ನು ಬೆಳೆದು ಉಣ್ಣುವ ನಮ್ಮ ಆಹಾರವನ್ನು ಕೇವಲ ಸೋನಾಮಸ್ಸೂರಿಗೋ, ಬಾಸುಮತಿಗೋ ಅನಿವಾರ್ಯವಾದ ಮಿತಿಗೊಳಪಡಿಸುವುದು ಸ್ವಾತಂತ್ರ್ಯಹರಣವಲ್ಲದೇ ಮತ್ತೇನು? ಅದು ಸಮೂಹದ ನಾಲಗೆಯ ರುಚಿಸಂಸ್ಕಾರಕ್ಕೆ ಮಾಡುವ ಅವಮಾನ ಕೂಡ. ಹೀಗೆ ಎಲ್ಲವನ್ನೂ ಏಕಕ್ಕೆ ಎರಕಹೊಯ್ಯುವ ಪ್ರಕ್ರಿಯೆಯು ಅಂತಿಮವಾಗಿ ಏಕಾಧಿಕಾರದ ಕಡೆಗೆ ಕರೆದೊಯ್ಯುತ್ತದೆ ಎಂಬುದೀಗ ಅರಿವಾಗಿರುವ ಸಂಗತಿಯಾಗಿದೆ.

ನಮ್ಮ ಬದುಕು ಒಂದು ಜೀವಜಾಲ. ಇಲ್ಲಿ ಯಾವುದೂ ಮುಖ್ಯವೂ ಅಲ್ಲ ಅಮುಖ್ಯವೂ ಅಲ್ಲ. ಜನಸಮುದಾಯಗಳಿಗೆ ಬದುಕಿಗೆ ಬೇಕಾದ ಜೀವ ಪೋಷಕಾಂಶಗಳು ಸಮುದಾಯದಿಂದಲೇ ದೊರಕಬೇಕು. ತಮ್ಮ ಕಷ್ಟಕಾಲದಲ್ಲಿ ಕರ್ತೃತ್ವ ಶಕ್ತಿಯಿಂದ ಪರಿಸರದ ಸಂಪನ್ಮೂಲಗಳಿಗೆ ಹಾನಿಯಾಗದಂತೆ ಜೀವಪ್ರೇರಕವಾಗಿ ಬದುಕುವ ಭೂಮಿಕೆಯನ್ನು ಸಮುದಾಯಗಳು ಕಟ್ಟಿಕೊಡಬೇಕು. ಬಡತನಕ್ಕೂ ದಾರಿದ್ರ್ಯಕ್ಕೂ ವ್ಯತ್ಯಾಸವಿದೆ. ಬಡತನವೆಂಬುದು ಅಥವಾ ಅಂತಹ ಬದುಕಿನ ರೀತಿಯು ತನ್ನ ಮತ್ತು ತನ್ನ ಸುತ್ತಲ ಜನರೊಂದಿಗೆ ಹಂಚಿಕೊಳ್ಳುತ್ತ, ವಿನಿಮಯ ಮಾಡಿಕೊಳ್ಳುತ್ತ ಸಂಬಂಧವನ್ನು ಕಟ್ಟುವ ರೀತಿ. ತನ್ನನ್ನೂ, ಪರರನ್ನೂ, ಸಾಮಾಜಿಕ ಸ್ವಾಸ್ಥ್ಯವನ್ನೂ, ಪ್ರಕೃತಿಯ ಆರೋಗ್ಯವನ್ನೂ ಹೆಪ್ಪಿಟ್ಟು ಕಾಯ್ದಿಡುವ ಸ್ಥಿತಿ. ಬಡತನವು ಸಾಂಸ್ಕೃತಿಕ ಭ್ರಷ್ಟತೆ ಮತ್ತು ವಿಷಯಲಂಪಟತೆಯಿಂದ ಸಮುದಾಯವನ್ನು ಕಾಪಾಡಿದರೆ, ದಾರಿದ್ರ್ಯವು ಸಮುದಾಯಗಳ ಕರ್ತೃತ್ವವನ್ನು ನಾಶಗೊಳಿಸಿ ಭ್ರಷ್ಟತೆಯ ಹೀನಸ್ಥಿತಿಗೆ ಕೊಂಡೊಯ್ಯುತ್ತದೆ. ವ್ಯಕ್ತಿಯು ಹೊಸ ಹೊಸದಾಗಿ ಬಂಡವಾಳಶಾಹಿಯ ಅಗತ್ಯಕ್ಕೆ ಅನುಗುಣವಾಗಿ ಸೃಷ್ಟಿಯಾಗುವ ಅವಶ್ಯಕತೆಗಳನ್ನು ಕೊಂಡುಕೊಳ್ಳುವ ಗ್ರಾಹಕನಾಗಿ ಮಾತ್ರವೇ ಜೀವಿಸಿರುತ್ತಾನೆ. ಇಂತಹ ಗ್ರಾಹಕರು ದರಿದ್ರರು, ಬಡವರಲ್ಲ. ಇವರ ಸೈನ್ಯ ಹೆಚ್ಚಾದಂತೆಲ್ಲ ಮಾರುಕಟ್ಟೆ ಆರ್ಥಿಕತೆಯು ವಿಜೃಂಭಿಸುತ್ತದೆ.

ಬಡತನದ ವ್ಯಾಖ್ಯೆಯನ್ನು ಸಾರ್ವತ್ರಿಕಗೊಳಿಸುವುದು ಸಾಧ್ಯವಿಲ್ಲ. ಅದರ ವಿಸ್ತಾರ ಏಕಗ್ರಹಿಕೆಗೆ ಸಿಗುವಂಥದ್ದಲ್ಲ. ಅದು ಏಕ ಕಾಲದಲ್ಲಿ ಇತ್ಯಾತ್ಮಕವೂ ಆಗಬಲ್ಲುದು, ನೇತ್ಯಾತ್ಮಕವೂ ಆಗಬಲ್ಲುದು. ಅದು ಸಾಪೇಕ್ಷ, ಸಾಂದರ್ಭಿಕ ಮತ್ತು ಸಂಸ್ಕೃತಿ ನಿರ್ಧರಿತವಾಗಿರುತ್ತದೆ. ಯಾವುದೇ ವ್ಯಾಖ್ಯೆಗಳು ಸಾರ್ವತ್ರಿಕಗೊಂಡಷ್ಟು ಅಂತಿಮವಾಗಿ ವ್ಯಾಖ್ಯಾನಕಾರರ ಪರವಾಗಿರುತ್ತವೆಯೇ ಹೊರತು ವ್ಯಾಖ್ಯಾನಗೊಂಡವರ ಪರವಾಗಿರುವುದಿಲ್ಲ. ಬಡತನವನ್ನು ವ್ಯಾಖ್ಯಾನಿಸುವವನ ಕುತಂತ್ರ ಮತ್ತು ಉದ್ದೇಶಗಳನ್ನು ಅವನ ವ್ಯಾಖ್ಯೆ ತಿಳಿಸುವುದೇ ಹೊರತು ಬಡವರ ಬದುಕನ್ನಲ್ಲ. ಬಡತನದ ನಿಜಸಮಸ್ಯೆಯನ್ನು ವಿಶ್ವಬ್ಯಾಂಕು ತನ್ನದೆಂದು ಭಾವಿಸಿಲ್ಲ. ಹೆಣ್ಣು ಅದರ ಪಟ್ಟಿಯಲ್ಲಿದೆಯೆ? ಅವರ ಯಾವುದೇ ಮೂಲಭೂತ ಸಮಸ್ಯೆಯನ್ನು ಅದು ಎದುರಾಗುತ್ತಿಲ್ಲ. ಅದು ಹೇಳುತ್ತಿರುವ ಅಭಿವೃದ್ಧಿ ಮಂತ್ರವು ಜೀವಾವರಣವನ್ನು ಆತಂಕಕ್ಕೆ ತಳ್ಳುತ್ತಿದೆ. ಇದರಿಂದಾಗಿ ಪೋಷಕ ಆರ್ಥಿಕತೆಯು ಆತಂಕಕ್ಕೀಡಾಗಿದೆ. ಇದು ಬಡವರ ಚೇತನವನ್ನು ಅವರ ಬದುಕುವ ಕಲೆಯನ್ನು ನಾಶಮಾಡುತ್ತದೆ. ಹಾಗೆಂದು ಬಡವರಿಗೆ ಹಣ ಬೇಡವೆಂದಲ್ಲ. ತಮ್ಮ ಸ್ವಾಯತ್ತ ನೆಲೆಗಳನ್ನು ಕಳೆದುಕೊಂಡ ಬಡವರು ಅನಿವಾರ್ಯವಾಗಿ ಮಾರುಕಟ್ಟೆ ನಿರ್ಧರಿತ ಬದುಕಿಗೆ ವರ್ಗಾವಣೆಯಾಗಿ ತಮ್ಮ ಜೀವನ ಕೌಶಲಗಳನ್ನು, ಕರ್ತೃತ್ವ ಶಕ್ತಿಯನ್ನು ಕೇವಲ ಧನಾರ್ಜನೆಗಾಗಿ ಬಳಸಬೇಕಾದ ಅನಿವಾರ್ಯಸ್ಥಿತಿಗೆ ದೂಡಲ್ಪಡುತ್ತಾರೆ. ಇಂತಹ ಮಾರುಕಟ್ಟೆಯಲ್ಲಿ, ಅಸಹಜವಾಗಿ, ಆತ್ಮರಹಿತ ಅನಾಮಿಕ ವಸ್ತುಗಳಾಗಿ ಮಾರ್ಪಾಡಾಗುತ್ತಾರೆ. ನಮ್ಮ ನಡುವಿನ ಚಿಂತಕಿಯ ಮಾತೊಂದನ್ನು ಇಲ್ಲಿ ಉದ್ಧರಿಸಬೇಕು.

'ಜಾಗತೀಕರಣವೆಂಬುದು ಒಂದು ಮುದ್ದಾದ ಮಾಯೆ. ಮುದ್ದಾಡುವವರ ಸಂಖ್ಯೆ ದೊಡ್ಡದಿದೆ. ಅದು ಒಂದು ವ್ಯವಸ್ಥಿತವಾದ ವಿಸ್ಮೃತಿ ಅಥವಾ ಅರಿವಳಿಕೆ. ಅದರ ಬುನಾದಿಯು ಅಧಿಕಾರ ಕೇಂದ್ರಗಳ ಸ್ಥಾಪನೆ ಮತ್ತು ಅದರ ಭಾಗವಾದ ಮಾರುಕಟ್ಟೆ ಆರ್ಥಿಕತೆ. ಅದರ ದೌರ್ಬಲ್ಯ ಮತ್ತು ನಾಶದ ಬೀಜ ಅದರೊಟ್ಟಿಗೇ ಇವೆ. ಆದುದರಿಂದ ನನ್ನ ಒಟ್ಟಾರೆ ಬದುಕಿನ ಶೈಲಿಯ ಅಂತಿಮ ನಿರ್ಧಾರ ನನ್ನಿಂದಲೇ ಆಗಬೇಕು. ಅದನ್ನು ನನ್ನ ಸುತ್ತಲಿನ ನಿಸರ್ಗದೊಡನೆ ಹೊಂದಿಸಿಕೊಳ್ಳುವ ಎಲ್ಲ ಆಯ್ಕೆಗಳೂ ನನಗಿರಬೇಕು. ಸ್ವಾತಂತ್ರ್ಯವೆಂದರೆ ಹೆಚ್ಚು ಅವಕಾಶಗಳೆಂದೇ ಅರ್ಥ. ನನ್ನ ಸ್ವಾಯತ್ತತೆಯು ನನ್ನ ಸ್ವಾತಂತ್ರ್ಯ. ಜಾಗತೀಕರಣವು ಸ್ಥಳೀಯ ಬದುಕಿನ ಕ್ರಮಕ್ಕೆ ವ್ಯತಿರಿಕ್ತವಾದುದು ಮತ್ತು ಸ್ಥಳೀಯ ಪ್ರಜ್ಞೆಯನ್ನು ಮಸುಕಾಗಿಸಿ ಅಮಾನ್ಯಮಾಡುತ್ತದೆ. ಮಾರುಕಟ್ಟೆಯು ಮುಂದಿಡುವ ಅವಶ್ಯಕತೆಗಳು ಅಥವಾ ಕೊರತೆಗಳು ನನ್ನವಾಗಬೇಕಿಲ್ಲ. ಉಪಭೋಗ ಸಂಸ್ಕೃತಿಯ ಸಂಕೇತಗಳಾದ ಟಿ.ವಿ. ಆಗಲಿ, ಮೊಬೈಲ್ ಆಗಲಿ ನನ್ನ ಮಣ್ಣಿನ ಗುಡಿಸಲಿಗೆ ಬಂದ ಮಾತ್ರಕ್ಕೆ ನಾನು ಸಿರಿವಂತನಾದೆ ಎಂದಲ್ಲ. ಇಂತಹ ವಸ್ತುಗಳನ್ನು ನಾನು ಬಳಸಲೇಬೇಕೆಂಬ ಪರೋಕ್ಷ ಒತ್ತಡವು ನನ್ನ ಅಗತ್ಯಗಳ ನಿರ್ಧಾರವನ್ನು ನನ್ನಿಂದ ಕಿತ್ತುಕೊಳ್ಳುತ್ತಿದೆ.' (ಡಾ॥ ಕೆ. ಬಿ. ಸರಸ್ವತಿ).

ಕೈಗಾರಿಕಾ ಕ್ರಾಂತಿಯವರೆಗೆ ಕೆಲವೇ ವಸ್ತುಗಳನ್ನು ಹೊಂದಿ ಮಿತವಾಗಿ ಬಾಳುವುದು ಸಾಧ್ಯವಿತ್ತು. ಕುಟುಂಬಗಳಿಗಾಗಿ, ಸಮುದಾಯಕ್ಕಾಗಿ ಉತ್ಪಾದಿಸುವ ಸಂಪ್ರದಾಯವು ಚೇತೋಹಾರಿಯಾಗಿತ್ತು. ಆದ್ದರಿಂದಲೇ ಫ್ರೆಂಚ್ ತತ್ವಜ್ಞಾನಿ ಜೋಸೆಫ್ ಪ್ರೂಧೋನ್ ಬಡತನವು ಮನುಕುಲ ನಾಗರಿಕತೆಯ ಸಹಜ ಸ್ಥಿತಿ ಎನ್ನುತ್ತಾನೆ. ಮಾರ್ಷಲ್ ಸಾಹ್ಲಿನ್ಸ್ ಕೂಡ ಶಿಲಾಯುಗದಲ್ಲಿ ಬಡತನ ಮಾನವನಿಗೆ ಅಪರಿಚಿತವಾಗಿತ್ತು ಹಾಗೂ ಬಡತನವು ನಾಗರಿಕತೆಯ ಆವಿಷ್ಕಾರ ಎಂದಿದ್ದಾನೆ. ಈ ವ್ಯಾಖ್ಯೆಗಳನ್ನು ಪ್ರಚಲಿತ ವಿಶ್ವಬ್ಯಾಂಕ್ ಹೇಗೆ ಅಪವ್ಯಾಖ್ಯಾನಕ್ಕೀಡುಮಾಡಿದೆ ಎಂಬುದನ್ನು ಗಮನಿಸುವುದಾದರೆ, ೨೦೦೧ರ ವಿಶ್ವಬ್ಯಾಂಕ್ ವರದಿಯ ಪ್ರಕಾರ ಬಡವರೆಂದರೆ ದಿನಕ್ಕೆ ಒಂದು ಅಥವಾ ಎರಡು ಡಾಲರ್‌ಗಳಿಗಿಂತ ಕಡಿಮೆ ಗಳಿಸುವವರು. ಬಡವರನ್ನು ಅವರು ಅಳೆಯುವುದು ಇದೇ ಮಾಪನದಿಂದ. ಈ ಆಧಾರದ ಮೇಲೆ ವಿಶ್ವದ ಜನಸಂಖ್ಯೆಯಲ್ಲಿ ಶೇಕಡಾ ೫೬ರಷ್ಟು ಮಂದಿ ಬಡವರಿದ್ದಾರೆ. ನಾಗರಿಕತೆಯ ಇತಿಹಾಸದಲ್ಲಿ ಇದೇ ಪ್ರಥಮ ಬಾರಿಗೆ ಇಷ್ಟೊಂದು ಪ್ರಮಾಣದ ಜನ ಅವರೆಲ್ಲರ ವೈವಿಧ್ಯಮಯ ಸಂಸ್ಕೃತಿ ಮತ್ತು ಪರಿಸರಗಳೊಂದಿಗೆ ವಿಶ್ವ ಆರ್ಥಿಕ ಮಾರುಕಟ್ಟೆಯಲ್ಲಿ ಬಡವರಾಗಿ, ಯಾಚಿಸುವವರಾಗಿ ದಾಖಲಾಗಿದ್ದಾರೆ. ಬದುಕಿನ ಸಂಪತ್ತುಗಳಾದ ತತ್ವಪದಗಳೋ, ಬಯಲಾಟದ ಮಟ್ಟುಗಳೋ, ಗಂಗಜ್ಜಿ, ಮನಸೂರರ ಸಂಗೀತದ ಬೋಲ್‌ಗಳೋ ಇಲ್ಲದ ಬದುಕು ನಿಜವಾದ ದರಿದ್ರ ಬದುಕು ಎಂಬುದನ್ನು ಸಾಹಿತ್ಯ ತೋರಿಸಿಕೊಡಬೇಕು.

**ಎಸ್. ನಟರಾಜ ಬೂದಾಳು**
"ಗೌರಿ", ನಳಂದ ಶಾಲೆ ಹಿಂಭಾಗ, ಸಪ್ತಗಿರಿ ಬಡಾವಣೆ, ತುಮಕೂರು – ೫೭೨ ೧೦೨

# ನನ್ನ ಅಂತರಾಳಕ್ಕೊಂದು ಕವಚ




**ನಾ**ನು ನನ್ನ ಆಯುಷ್ಯದ ವರುಷಗಳನ್ನೆಣಿಸಿದೆ :
ಈ ವರೆಗೆ ಕಳೆದುದಕಿಂತ
ಉಳಿದ ಕಾಲ ಬಲು ಕಡಿಮೆಯೆಂಬ ಅರಿವಾಯಿತು.

ನನ್ನ ಕಲ್ಪನೆಯ ಬಾಲಕನೊಬ್ಬ
ಸಿಹಿತಿಂಡಿಯ ಪೊಟ್ಟಣವನು ಗೆದ್ದು ತರುತ್ತಾನೆ
ಆರಂಭದಲ್ಲಿ ಆನಂದದಿಂದಲೇ
ಅದರ ರುಚಿ ನೋಡುತ್ತಾನೆ,
ಅದು ತೀರುತ್ತ ಬಂದಂತೆ ಬಾಯಿ ಚಪ್ಪರಿಸಿ
ಬಲು ಹಿಗ್ಗಿನಿಂದ ಅದರ ಸವಿ ಹೀರುತ್ತಾನೆ.

ಅಂತಿಮ ಪರಿಣಾಮ ಶೂನ್ಯವೆಂಬ ಅರಿವಿದ್ದರೂ
ವಿಧಿ-ವಿಧಾನಗಳ, ಕ್ರಮ-ಉಪಕ್ರಮಗಳ
ಆಂತರಿಕ ಬದ್ಧತೆಗಳ ಕುರಿತು ಒಣ ಚರ್ಚೆಗಿಳಿವ
ಸಭೆಗಳಿಗಾಗಿ ನನ್ನಲ್ಲಿ ಸಮಯವಿಲ್ಲ.

ತಲೆಗೂದಲು ಹಣ್ಣಾಗಿದ್ದರೂ
ಅಂತರಾಳದಲಿ ಕುಳ್ಳರಾಗಿಯೇ ಉಳಿದ
ಮಳ್ಳ ಜನಗಳ ಸಹವಾಸದಲ್ಲಿರುವನಿತು
ಸಹನಶೀಲತೆ ನನ್ನೊಳಗಿಲ್ಲ.

ನನಗಿರುವುದು ಅತ್ಯಲ್ಪ ಕಾಲ
ನನಗೀಗ ಬೇಕಾದದ್ದು ಶುದ್ಧಸಾರ
ನನ್ನ ಚೇತನಕೆ ಈಗ ಬಲು ಅವಸರ
ಹೆಚ್ಚಿಗೆ ಸಿಹಿತಿಂಡಿಯೂ ನನ್ನ ಬಳಿಗುಳಿದಿಲ್ಲ
ನನ್ನ ಪೊಟ್ಟಣವೀಗ ಖಾಲಿಯಾದಂತೆಯೆ.

ಸ್ವಂತ ತಪ್ಪುಗಳ ನೆನೆನೆನೆದು ನಗಬಲ್ಲ,
ತಮ್ಮ ಜಯ-ವಿಜಯಗಳದೇ ನಗಾರಿ
ಹೊಡೆಯಲು ಹಾತೊರೆಯದ,
ತಮ್ಮ ಕ್ರಿಯೆಗಳ ಹೊಣೆಯ ತಾವೆ ಹೊರಬಲ್ಲ
ವಾಸ್ತವಿಕ ಮನೋವೃತ್ತಿಯ ಸಜ್ಜನರ
ಸಹವಾಸ ನನಗೀಗ ಬೇಕೆನಿಸಿದೆ;

ಹೀಗೆ ಮಾನವತೆಯ ಘನತೆಯನು ಪೋಷಿಸುತ
ಸತ್ಯ ಮತ್ತು ಪ್ರಾಮಾಣಿಕತೆ ಪಾಲಿಸುತ
ನಾವು ಜೀವಿಸಬಹುದು.

ಮೂಲತತ್ತ್ವಾನುಸರಣೆಯಿಂದಲೇ
ಜೀವನವು ಉಪಯುಕ್ತವೆನಿಸುವುದು.
ಬದುಕಿನಲಿ ಹಲವೊಂದು ಹೊಡೆತಗಳ ತಿಂದು
ತಮ್ಮಾತ್ಮಗಳ ಮಧುರಸ್ಪರ್ಶದಿಂದ
ಸ್ವ-ವಿಕಾಸದ ದಾರಿ ಕಂಡುಕೊಂಡವರ
ಹೃದಯಗಳ ಮಿಡಿವ ಸಂಪನ್ನಜೀವಿಗಳ
ಸಹವಾಸದಲ್ಲಿರುವ ಅಭಿಲಾಷೆಯೆನಗೆ.
ನಿಜ, ನಾನೀಗ ಅವಸರದಲ್ಲಿರುವೆ
ಈ ನನ್ನ ಅವಸರವು ಪರಿಪಕ್ವತೆಯಿಂದ ಮಾತ್ರ
ಸಾಧಿಸಲಾದ ತೀವ್ರತೆಯ ಫಲ;
ನನ್ನ ಬಳಿಗುಳಿದಷ್ಟು ಸಿಹಿತಿಂಡಿಗಳ
ಕೇಡು ಮಾಡುವ ಇರಾದೆ ನನಗಿಲ್ಲ.

ಅವು ಈ ತನಕ ತಿಂದುದಕಿಂತ
ಅಧಿಕ ಉತ್ಕೃಷ್ಟವಾದವುಗಳೆಂದು
ನನಗೆ ಖಾತರಿಯುಂಟು.
ಒಂದು ಸಂತೃಪ್ತಿಭಾವ ಮತ್ತು ನನ್ನ ಪ್ರಿಯಜನರ
ಶಾಂತಿ ಮತ್ತು ವಿವೇಕಸಮ್ಮತವಾಗಿ
ಕೊನೆಯಂಚು ತಲುಪುವ ಗುರಿ ನನ್ನದು.

ನಮಗೆ ಎರಡು ಬದುಕುಗಳಿದ್ದು
ಎರಡನೆಯ ಬದುಕು ಶುರುವಾಗುವುದು
ಮೊದಲನೆಯದೊಂದೇ ಒಂದು ಬದುಕೆಂಬ
ಅರಿವಾಗುವ ಅಂಚಿನಲ್ಲಿ !

*(ಬ್ರಾಝಿಲ್ ದೇಶದ ಕಾವ್ಯಪ್ರಪಂಚದಲ್ಲಿ ಆಧುನಿಕತೆ ಮೂಡಿಸಿದ ಪಂಚಪ್ರಮುಖರಲ್ಲೊಬ್ಬರಾದ ಮಾರಿಯೊ ದ ಅಂದ್ರಾಡೆ (೧೮೯೩-೧೯೪೫) ಅವರದೊಂದು ಮಾದರಿ ಕವಿತೆಯಿದು : "ನನ್ನ ಅಂತರಾಳಕ್ಕೊಂದು ಕವಚ")*

ಕನ್ನಡಕ್ಕೆ : **ಡಾ|| ಬಿ. ಎ. ಸನದಿ**
'ಮಿಲನ', ಸಾ ಮಿಲ್ ಎದುರು, ಹೆರವಟ್ಟ, ಕುಮಟಾ – ೫೮೧ ೩೩೨ ಉತ್ತರ ಕನ್ನಡ ಜಿಲ್ಲೆ

# ರಾಷ್ಟ್ರೀಯ, ಅಂತರರಾಷ್ಟ್ರೀಯ ವಿದ್ಯಮಾನಗಳ ಸಮೀಕ್ಷೆ

‘ಹೊಸತು’ ಮಾಸ ಪತ್ರಿಕೆ ಪ್ರಾರಂಭವಾದಾಗಿನಿಂದ ‘ವಿಶ್ವವೀಕ್ಷಣೆ’ ಅಂಕಣ ತಪ್ಪದೆ ಪ್ರಕಟವಾಗುತ್ತಿದೆ. ಓದುಗರಿಗೆ ಅಂತರರಾಷ್ಟ್ರೀಯ ವಿದ್ಯಮಾನಗಳ ಕುರಿತು ಸಾಂದರ್ಭಿಕ ವಿವರಣೆ, ಹಿನ್ನೆಲೆ–ಮುನ್ನೆಲೆಗಳ ಪರಿಚಯ ಮಾಡಿಕೊಡುತ್ತ ಬಂದಿದೆ. ಈಗ ಇಪ್ಪತ್ತನೇ ವರ್ಷದ ಮೆಟ್ಟಿಲೇರುತ್ತಿರುವ ‘ಹೊಸತು’ ಪ್ರತಿ ತಿಂಗಳು ವಿಶೇಷ ಲೇಖನ ನೀಡುತ್ತಿದೆ. ಈ ಲೇಖನದಲ್ಲಿ ಕಳೆದ ಇಪ್ಪತ್ತು ವರ್ಷಗಳಲ್ಲಿ ಭಾರತದ ವಿದೇಶಿ ನೀತಿಯಲ್ಲಿ, ಪ್ರಪಂಚದ ಘಟನೆಗಳಲ್ಲಿ ಸಂಭವಿಸಿರುವ ತಿರುವುಗಳನ್ನು ಗುರುತಿಸಲು ಪ್ರಯತ್ನಿಸಲಾಗಿದೆ.

– *ಸಂಪಾದಕ*

**ಹೊಸತು-೨೦**
**ವಿಶೇಷ ಲೇಖನ**

**ಸಿ. ಆರ್. ಕೃಷ್ಣರಾವ್**

ಇಪ್ಪತ್ತನೆ ಶತಮಾನ ಎರಡು ಮಹಾಯುದ್ಧಗಳಿಗೆ, ರಷ್ಯ, ಚೀಣ ಮೊದಲಾದ ದೇಶಗಳಲ್ಲಿ ಜರುಗಿದ ಮಹಾಕ್ರಾಂತಿಗಳಿಗೆ, ನಿರ್ವಸಾಹತೀಕರಣಕ್ಕೆ, ಸ್ವತಂತ್ರ ರಾಷ್ಟ್ರಗಳ ಉದಯಕ್ಕೆ ಸಾಕ್ಷಿಯಾಗಿತ್ತು. ಇಪ್ಪತ್ತೊಂದನೆ ಶತಮಾನದ ಆರಂಭವೇ ಭಿನ್ನ. ಸೋವಿಯತ್ ಒಕ್ಕೂಟದ ವಿಘಟನೆಯ ನಂತರ ಅಸ್ತಿತ್ವಕ್ಕೆ ಬಂದ ಏಕಕೇಂದ್ರಿತ ವ್ಯವಸ್ಥೆಯಿಂದ ಅತ್ಯಂತ ಪ್ರಬಲವಾಗಿ ಉದಯಿಸಿದ ಅಮೆರಿಕ ಅಧಿನಾಯಕತ್ವ ಬಯಸಿ ಹೆಚ್ಚು ಆಕ್ರಮಣಕಾರಿಯಾಯಿತು. ಭಯೋತ್ಪಾದನೆಯ ವಿರುದ್ಧ ಸಮರ ಸಾರಿದ ಅಮೆರಿಕ ಆಫ್ಘಾನಿಸ್ತಾನ, ಇರಾಕ್‌ಗಳ ಮೇಲೆ ದಾಳಿ ನಡೆಸಿತು, ಬಂಡವಾಳಶಾಹಿ ಜಗತ್ತು ಆರ್ಥಿಕ ಬಿಕ್ಕಟ್ಟಿನಲ್ಲಿ ಮುಳುಗಿತು. ಪ್ರಪಂಚದ ಅನೇಕ ರಾಷ್ಟ್ರಗಳು ಬಲಪಂಥದ ಕಡೆಗೆ ವಾಲಿದವು. ಈ ಎಲ್ಲ ಘಟನೆಗಳ ಹಿನ್ನೆಲೆಯಲ್ಲಿ ಭಾರತದ ವಿದೇಶಿ ನೀತಿಯಲ್ಲಿ ಆಗಿರುವ ಬದಲಾವಣೆಗಳನ್ನು ಪರಿಶೀಲಿಸೋಣ.

ಭಾರತದ ವಿದೇಶೀ ನೀತಿ ಸ್ವಾತಂತ್ರ್ಯಾನಂತರದ ಎಪ್ಪತ್ತು ವರ್ಷಗಳಲ್ಲಿ ಅಲಿಪ್ತತೆಯಿಂದ ಅಮೆರಿಕದೊಂದಿಗೆ ಎಲ್ಲ ಬಗೆಯ ನಿಕಟ ಸಂಬಂಧದವರೆಗೆ ಬಂದಿದೆ. ಸುಮಾರು ಐದು ದಶಕಗಳ ಅಲಿಪ್ತ ಚಳವಳಿ ಈಗ ನಿಷ್ಕ್ರಿಯಗೊಂಡಿದೆ. ಸದ್ಯಕ್ಕೆ ಸ್ಥಗಿತಗೊಂಡಿದೆ ಭಾರತ ಪ್ರಮುಖಪಾತ್ರ ವಹಿಸಿರುವ ನೆರೆರಾಷ್ಟ್ರಗಳ ಸಹಕಾರ ಕೂಟ ‘ಸಾರ್ಕ್’. ಜಾಗತೀಕರಣದ ಭರಾಟೆಯ ಸುಳಿಯಲ್ಲಿ ಸಿಲುಕಿದ ಭಾರತ ವಿದೇಶೀ ಬಂಡವಾಳವನ್ನು ಆಕರ್ಷಿಸಲು ಹೊರಟಿದ್ದು ಕಾಂಗ್ರೆಸ್ ಆಡಳಿತದ ಕಾಲದಲ್ಲಿಯೆ, ಪಿ. ವಿ. ನರಸಿಂಹರಾವ್ ಪ್ರಧಾನಿಯಾಗಿದ್ದಾಗ. ಅದುವರೆಗೆ ಭಾರತದಲ್ಲಿ ವಿದೇಶೀ ಬಂಡವಾಳ ಹೂಡಿಕೆಗೆ ಇದ್ದ ನಿರ್ಬಂಧಗಳೆಲ್ಲವನ್ನು ಗಾಳಿಗೆ ತೂರಲಾಯಿತು. ಉದ್ಯಮಗಳು ಭಾರತೀಯ ಒಡೆತನದಲ್ಲೇ ಇರುವಂತೆ ವಿದೇಶಿ ಬಂಡವಾಳ ಶೇ. ೪೯ರಷ್ಟು ಇರಬೇಕು ಎಂಬ ಮಿತಿ ಇತ್ತು. ಇದರ ಜೊತೆಗೇ ವಿದೇಶಿ ವಸ್ತುಗಳ ಆಮದು ನೀತಿಯನ್ನು ಪರಿಷ್ಕರಿಸಿ ಹಿಂದೆ ವಿಧಿಸಿದ್ದ ಎಲ್ಲ ನಿರ್ಬಂಧಗಳನ್ನು ರದ್ದುಗೊಳಿಸಿ ಮುಕ್ತ ಮಾರುಕಟ್ಟೆಗೆ ಅವಕಾಶ ನೀಡಲಾಯಿತು. ಮನಮೋಹನ್ ಸಿಂಗ್ ಆಗ ಭಾರತದ ಹಣಕಾಸಿನ ಸಚಿವರಾಗಿದ್ದರು. ಸಾರ್ವಜನಿಕ ಕ್ಷೇತ್ರದಲ್ಲಿರುವ ಉದ್ಯಮಗಳನ್ನು ಖಾಸಗೀಕರಿಸುವ ಯೋಜನೆ ರೂಪುಗೊಂಡಿದ್ದೂ ಆಗಲೆ. ಈ ಎಲ್ಲ ಕ್ರಮಗಳಿಂದಾಗಿ ಸ್ಥಳೀಯ ಉದ್ಯಮಗಳಿಗೆ, ಪ್ರಮುಖವಾಗಿ ಸಣ್ಣ ಮತ್ತು ಮಧ್ಯಮ ಉದ್ಯಮಗಳಿಗೆ ಭಾರಿ ಹೊಡೆತ ಬಿತ್ತು. ಮುಂದೆ ಅಧಿಕಾರಕ್ಕೆ ಬಂದ ಭಾಜಪ ನೇತೃತ್ವದ ವಾಜಪೇಯಿ ಸರಕಾರ ಸಾರ್ವಜನಿಕ ಉದ್ಯಮಗಳ ಖಾಸಗೀಕರಣಕ್ಕೆ ಪ್ರತ್ಯೇಕ ಸಚಿವಾಲಯವನ್ನೇ ರಚಿಸಿತು. ಈಗ ಮೋದಿ ಸರಕಾರ ಅದನ್ನೇ ಮುಂದುವರಿಸಿದೆ. ಯುಪಿಎ ನೇತೃತ್ವದಲ್ಲಿ ಮನಮೋಹನ್ ಸಿಂಗ್ ಸರಕಾರ ಈ ವಿಷಯದಲ್ಲಿ ಹಿಂದೇನೂ ಇರಲಿಲ್ಲ. ಒಂದು ದೇಶ ಅನುಸರಿಸುವ ಆಂತರಿಕ ಆರ್ಥಿಕ ನೀತಿಗಳು ವಿದೇಶೀ ನೀತಿಯ ಮೇಲೂ ಪರಿಣಾಮ ಬೀರುತ್ತವೆ. ಇದು ಎಷ್ಟು ನಿಜ ಎನ್ನುವುದನ್ನು ನಮ್ಮ ದೇಶದ ಸಮ್ಮಿಶ್ರ ಸರಕಾರಗಳು ಅನುಸರಿಸಿದ ನೀತಿಗಳು ದೃಢಪಡಿಸುತ್ತವೆ.

ಕಳೆದ ಶತಮಾನದ ಕೊನೆಯಲ್ಲಿ ಅಸ್ಥಿರತೆಯನ್ನು ಕಂಡ ಭಾರತದಲ್ಲಿ ೨೦೦೦ದ ಇಸವಿಯ ಹೊತ್ತಿಗೆ ಸಮ್ಮಿಶ್ರ ಸರಕಾರಗಳ ಯುಗ ಪ್ರಾರಂಭವಾಯಿತು. ಮೊದಲ ಎನ್‌ಡಿಎ ಸರಕಾರದ ಅವಧಿಯಲ್ಲಿಯೇ ಇಸ್ರೇಲಿನೊಂದಿಗೆ ಸಂಬಂಧ ಕುದುರಿಸಲಾಯಿತು. ೨೦೦೧ರ ಸೆಪ್ಟೆಂಬರ್ ೧೧ರಂದು ಅಮೆರಿಕದ ನ್ಯೂಯಾರ್ಕ್ ನಗರದಲ್ಲಿರುವ ವರ್ಲ್ಡ್ ಟ್ರೇಡ್ ಸೆಂಟರ್ ಮೇಲೆ ಉಗ್ರರು ನಡೆಸಿದ ದಾಳಿ ಅಂತರರಾಷ್ಟ್ರೀಯ ವಿದ್ಯಮಾನದಲ್ಲಿ ಬಹುದೊಡ್ಡ ಬದಲಾವಣೆಯನ್ನು ತಂದಿತು. ಭಯೋತ್ಪಾದನೆಯ ವಿರುದ್ಧ ಅಮೆರಿಕ ಸಮರವನ್ನು ಸಾರಿತು. ಭಾರತ ಅದಕ್ಕೆ ಕೈ ಜೋಡಿಸಿತು. ಸಮರ ಮುಂದುವರಿದಿದೆಯೇ ಹೊರತು ಭಯೋತ್ಪಾದನ ಕೃತ್ಯಗಳು ಕಮ್ಮಿ ಏನಾಗಲಿಲ್ಲ. ಆಫ್ಘಾನಿಸ್ತಾನ, ಇರಾಕ್‌ಗಳು ಅಮೆರಿಕದ ದುರಾಕ್ರಮಣಕ್ಕೆ ಬಲಿಯಾದವು, ಅಷ್ಟೆ. ನೆರೆಯ ಪಾಕಿಸ್ತಾನದ ಜೊತೆ ಸಂಬಂಧಗಳು ವಾಜಪೇಯಿ ಪ್ರಧಾನಿಯಾಗಿದ್ದಾಗ ಸುಧಾರಿಸುವಂತೆ ಕಂಡುಬಂದಿತ್ತಾದರೂ ನಂತರ ಸಂಭವಿಸಿದ ಕಾರ್ಗಿಲ್ ಯುದ್ಧ ಅದಕ್ಕೆ ಮಾರಕವಾಯಿತು. ಒಂದು ರೀತಿಯಲ್ಲಿ ಎನ್‌ಡಿಎ ಎರಡನೇ ಅವಧಿಯಲ್ಲಿ ಮೋದಿ ಸರಕಾರದ ಪಾಕಿಸ್ತಾನ ಸಂಬಂಧಗಳಲ್ಲಿ ಕೂಡ ಅಂಥದ್ದೇ ಮರುಕಳಿಸಿದೆ. ಗುಜರಾತ್ ರಾಜ್ಯದಲ್ಲಿ ಗೋಧ್ರಾ ಹತ್ಯಾಕಾಂಡ ಜರುಗಿದ್ದು ವಾಜಪೇಯಿ ಅಧಿಕಾರಾವಧಿಯಲ್ಲೆ. ಅಮೆರಿಕ ಮತ್ತು ಇಸ್ರೇಲಿನಿಂದ ಶಸ್ತ್ರಾಸ್ತ್ರಗಳ ಖರೀದಿಗೆ ನಾಂದಿ ಹಾಕಿದ್ದೂ ಕೂಡ ಆಗಲೆ. ಮುಂದೆ ಅಧಿಕಾರಕ್ಕೆ ಬಂದದ್ದು ಕಾಂಗ್ರೆಸ್ ನೇತೃತ್ವದ ಯುಪಿಎ ಸಮ್ಮಿಶ್ರ ಸರಕಾರ. ಪ್ರಧಾನಿಯಾಗಿ ಹತ್ತು ವರ್ಷ ಅಧಿಕಾರ ನಡೆಸಿದ ಮನಮೋಹನ್ ಸಿಂಗ್ ಬಲಪಂಥೀಯ ರಾಜಕಾರಣಕ್ಕೆ, ಅಮೆರಿಕದೊಂದಿಗೆ ನಿಕಟ ಬಾಂಧವ್ಯಕ್ಕೆ ಅಡಿಗಲ್ಲನ್ನು ಭದ್ರಗೊಳಿಸಿದರು. ಅಧಿಕಾರದ ಮೊದಲ ಅವಧಿಯಲ್ಲಿ ಅಮೆರಿಕದೊಂದಿಗೆ ನಾಗರಿಕ ನ್ಯೂಕ್ಲಿಯರ್ ಸರಬರಾಜು ಒಪ್ಪಂದ ಮಾಡಿಕೊಂಡರು. ವಿವಾದಾತ್ಮಕವಾದ ಈ ಒಪ್ಪಂದಕ್ಕೆ ಎಡಪಕ್ಷಗಳ ತೀವ್ರವಾದ ವಿರೋಧವಿತ್ತು. ಈ ವಿಷಯದಲ್ಲಿ ಎಡಪಕ್ಷಗಳು ಸರಕಾರಕ್ಕೆ ನೀಡುತ್ತಿದ್ದ ಬೆಂಬಲವನ್ನು ಹಿಂಪಡೆದವು. ಒಪ್ಪಂದವಾಗಿದ್ದರೂ ಈಗಲೂ ಅದು ಕಾರ್ಯಗತವಾಗಿಲ್ಲ. ಭಾರತ ಮತ್ತು ಪಾಕಿಸ್ತಾನಗಳು ನ್ಯೂಕ್ಲಿಯರ್ ಶಕ್ತ ರಾಷ್ಟ್ರಗಳು ಆದದ್ದೂ ಕೂಡ ವಾಜಪೇಯಿ ಪ್ರಧಾನಿಯಾಗಿದ್ದಾಗಲೆ. ಪಾರ್ಲಿಮೆಂಟಿನ ಮೇಲೆ ಭಯೋತ್ಪಾದಕರು ದಾಳಿ ನಡೆಸಿದ್ದೂ ಕೂಡ ಆಗಲೆ. ಪರಮಾಣು ಅಸ್ತ್ರಗಳ ನಿಷೇಧ ಕೌಲಿಗೆ ಸಹಿ ಹಾಕಲು, ಕಾಶ್ಮೀರ ವಿವಾದದಲ್ಲಿ ಪಾಕ್ ಆಕ್ರಮಿತ ಕಾಶ್ಮೀರದ ಭಾಗವನ್ನು ಬಿಟ್ಟುಕೊಡಲು, ಆಫ್ಘಾನಿಸ್ತಾನದ ಮೇಲೆ ದಾಳಿಗೆ ಭಾರತದಲ್ಲಿ ಅಮೆರಿಕಾಗೆ ನೆಲೆ ಒದಗಿಸಲು, ಇರಾಕ್‌ನ



*ಸರ್ಜಿಕಲ್ ಸ್ಟ್ರೈಕ್*

ಮೇಲೆ ದಾಳಿಗೆ ಸೇನೆಯನ್ನು ರವಾನಿಸಲು ವಾಜಪೇಯಿ ಸರಕಾರ ಸಿದ್ಧವಾಗಿತ್ತು. ಆದರೆ ಅದು ಕಾರ್ಯಗತವಾಗಲಿಲ್ಲ ಬಲವಾದ ವಿರೋಧ ಇದ್ದುದರಿಂದ. ಜಾಗತಿಕ ಬಂಡವಾಳಶಾಹಿ ವ್ಯವಸ್ಥೆಯಲ್ಲಿ ತಲೆದೋರಿದ ಆರ್ಥಿಕ ಹಿಂಜರಿತ ಬಿಸಿ ಭಾರತದ ಆರ್ಥಿಕ ವ್ಯವಸ್ಥೆಗೂ ತಟ್ಟಿತು. ಈ ಎಲ್ಲ ಬೆಳವಣಿಗೆಗಳೂ ದೇಶದಲ್ಲಿ ಬಲಪಂಥೀಯ ರಾಜಕಾರಣದ ವೇದಿಕೆ ನಿರ್ಮಿಸಿತು. ಮನಮೋಹನ್ ಸಿಂಗ್ ನೇತೃತ್ವದ ಯುಪಿಎ ಸರಕಾರ ಅನುಸರಿಸಿದ ನೀತಿಗಳು ಅದಕ್ಕೆ ಪೂರಕವಾಗಿದ್ದವು. ಭ್ರಷ್ಟಾಚಾರದ ಸರಮಾಲೆಯಲ್ಲಿ ಮುಳುಗಿದ್ದ ಸರಕಾರ ಚುನಾವಣೆಗಳಲ್ಲಿ ಪರಾಜಯಗೊಂಡು ಎರಡನೇ ಬಾರಿಗೆ ಎನ್‌ಡಿಎ ಸರಕಾರ ಅಧಿಕಾರಕ್ಕೇರಲು ಅನುವು ಮಾಡಿಕೊಟ್ಟಿತು. ಭಾರಿ ಬಹುಮತದಿಂದ ಭಾಜಪ ನೇತೃತ್ವದಲ್ಲಿ ನರೇಂದ್ರ ಮೋದಿ ಸರಕಾರ ಅಸ್ತಿತ್ವಕ್ಕೆ ಬಂದಿತು.

ನೆರೆಯ ರಾಷ್ಟ್ರಗಳ ಜೊತೆ ಸಂಬಂಧವನ್ನು ವರ್ಧಿಸುವ ದೃಷ್ಟಿಯಿಂದ ಮೋದಿ ಸರಕಾರ ಪ್ರಮಾಣ ವಚನ ಸಮಾರಂಭಕ್ಕೆ ಮೊದಲ ಬಾರಿಗೆ ಎಲ್ಲ 'ಸಾರ್ಕ್' ದೇಶಗಳ (ನೇಪಾಳ, ಭೂತಾನ, ಮ್ಯನ್ಮಾರ್, ಅಫ್ಘಾನಿಸ್ತಾನ, ಶ್ರೀಲಂಕಾ, ಬಂಗ್ಲಾದೇಶ) ಅಧಿಪತಿಗಳಿಗೆ ಆಹ್ವಾನ ನೀಡಿದ್ದರು. ಅವರುಗಳೂ ಭಾಗವಹಿಸಿದ್ದರು. ಆದರೆ ಮುಂದೆ ಆದದ್ದೇ ಬೇರೆ. ಕೆಲವೇ ತಿಂಗಳುಗಳಲ್ಲಿ ಪಾಕಿಸ್ತಾನದೊಂದಿಗೆ ಸಂಬಂಧಗಳು ಹಳಸಿಕೊಂಡುವು. ಹೊರದೇಶಗಳ ಸಂಬಂಧದ ವಿಚಾರದಲ್ಲಿ ಮೋದಿಯವರದೇ ಅಂತಿಮ ತೀರ್ಮಾನ. ವಿದೇಶಾಂಗ ಸಚಿವರು ಇದ್ದಾಗ್ಯೂ ಹೆಸರಿಗೆ ಮಾತ್ರ. ಅತ್ಯಂತ ಹೆಚ್ಚು ದೇಶಗಳಿಗೆ ಭೇಟಿ ನೀಡಿರುವ ಪ್ರಧಾನಿ ಎಂಬ ಪಟ್ಟ ಪಡೆದಿರುವ ಮೋದಿ ಅಮೆರಿಕದ ಜೊತೆ ಕೈಜೋಡಿಸಿ, ಅದರೊಂದಿಗೆ ವ್ಯೂಹಾತ್ಮಕ ಸಂಬಂಧಗಳನ್ನು ಬೆಳೆಸಿದ್ದಾರೆ. ಭಾರಿ ಪ್ರಮಾಣದಲ್ಲಿ ಅಮೆರಿಕದಿಂದ ಶಸ್ತ್ರಾಸ್ತ್ರಗಳನ್ನು ಖರೀದಿಸಿ, ಏಶಿಯಾ-ಪೆಸಿಫಿಕ್ ವಲಯದಲ್ಲಿ ಅಮೆರಿಕದ ಕಾರುಬಾರುಗಳಲ್ಲಿ ಸಹಭಾಗಿಯಾಗಿದ್ದಾರೆ. ನಮ್ಮ ವಿದೇಶೀ ನೀತಿಯನ್ನು ಅಮೆರಿಕದ ಬಾಲಂಗೋಚಿಯಾಗಿಸಿದ್ದಾರೆ. ಇಸ್ರೇಲಿನ ಜೊತೆ ಬಾಂಧವ್ಯವನ್ನು ಭದ್ರಗೊಳಿಸಿರುವ ಅವರು ದೊಡ್ಡ ಪ್ರಮಾಣದಲ್ಲಿ ಶಸ್ತ್ರಾಸ್ತ್ರಗಳನ್ನು ಅಲ್ಲಿಂದ ಖರೀದಿಸಿದ್ದಾರೆ. ಮಧ್ಯ ಏಶಿಯದ ಪ್ರದೇಶದಲ್ಲಿ ಮೊದಲಿನಿಂದ ಪ್ಯಾಲಸ್ತೀನಿಯನ್ನರ ತಾಯ್ನಾಡಿನ ಹೋರಾಟಕ್ಕೆ ಬೆಂಬಲ ನೀಡುತ್ತಿದ್ದ ಭಾರತ ಮೋದಿ ಆಡಳಿತಾವಧಿಯಲ್ಲಿ ಅದನ್ನು ಕೈಚೆಲ್ಲಿದೆ. ಜೆರೂಸಲೆಮ್‌ನಲ್ಲಿ ಅಮೆರಿಕದ ರಾಯಭಾರಿ ಕಚೇರಿ ಪ್ರಾರಂಭವಾದಾಗಲೂ ಮೋದಿಯವರು ಮೌನವಾಗಿದ್ದರು. ಪಾಕಿಸ್ತಾನದೊಂದಿಗೆ ಸಂಬಂಧಗಳು ಇಂದು ಅತ್ಯಂತ ಬಿಗಡಾಯಿಸಿವೆ. ಇದರ ಪರಿಣಾಮ 'ಸಾರ್ಕ್' ಶೃಂಗಸಭೆಯ ಸ್ಥಗಿತ. ಇದಕ್ಕೆ ಪಾಕಿಸ್ತಾನವೇ ಹೆಚ್ಚು ಹೊಣೆಯಾದರೂ, ಭಾರತದ ಜವಾಬ್ದಾರಿ ಕೂಡ ಇದೆ. ಭಯೋತ್ಪಾದನೆಗೆ ಪಾಕಿಸ್ತಾನದ ಕುಮ್ಮಕ್ಕು ಇರುವವರೆಗೆ ಸಂಬಂಧಗಳು ಸುಧಾರಿಸುವುದು ಕ್ಲಿಷ್ಟ. ಒಂದು ಕಾಲಘಟ್ಟದಲ್ಲಿ ಪಾಕಿಸ್ತಾನದೊಂದಿಗೆ ಸಂಬಂಧಗಳು ಸುಧಾರಿಸುವ ಸೂಚನೆಗಳಿದ್ದಾಗ ಸಂಭವಿಸಿದ್ದು ಪಠಾಣ್‌ಕೋಟ್ ಪ್ರಕರಣ. ಆನಂತರ ಪ್ರತೀಕಾರವಾಗಿ ಭಾರತ


ಬರಾಕ್ ಒಬಾಮಾ

ನಡೆಸಿದ 'ಸರ್ಜಿಕಲ್ ಸ್ಟ್ರೈಕ್ಸ್' ಕಾರ್ಯಾಚರಣೆ, ಗಡಿಯಲ್ಲಿ ನಿರಂತರ ಘರ್ಷಣೆಗಳು ಹಾಗೂ ಜಮ್ಮು ಕಾಶ್ಮೀರದಲ್ಲಿ ಪ್ರತ್ಯೇಕವಾದಿಗಳಿಗೆ ಪಾಕಿಸ್ತಾನದ ಬೆಂಬಲದಿಂದಾಗಿ ಹದಗೆಟ್ಟ ಪರಿಸ್ಥಿತಿ, ಇವೆಲ್ಲ ಎರಡೂ ದೇಶಗಳ ಮಧ್ಯೆ ಸಂಬಂಧಗಳನ್ನು ಅಧೋಗತಿಗೆ ತಂದಿವೆ. ನೇಪಾಳದಲ್ಲಿ ಕಮ್ಯುನಿಸ್ಟ್ ಸರಕಾರ ಅಸ್ತಿತ್ವಕ್ಕೆ ಬಂದಿರುವುದರಿಂದ ಮೈತ್ರಿ ಅಷ್ಟಕ್ಕಷ್ಟೆ. ರೋಹಿಂಗ್ಯಾ ಮುಸಲ್ಮಾನರ ವಲಸೆ ಮೈನ್ಮಾರ್ ಜೊತೆ ಸ್ನೇಹಕ್ಕೆ ಅಡ್ಡಿ. ಇದಲ್ಲದೆ ಭಾರತದ ನೆರೆಯ ರಾಷ್ಟ್ರಗಳಲ್ಲಿ ಚೀಣೀಯರ ಪ್ರಾಬಲ್ಯ ಅಧಿಕಗೊಂಡಿರುವುದು ಕಾಣ ಬರುತ್ತಿದೆ. ಭಾರತ–ಚೀಣಾ ಸಂಬಂಧಗಳು ಮುಂದುವರಿದಿದ್ದರೂ ನಂಬಿಕಾರ್ಹತೆ ಕುಂದಿದೆ. ಗಡಿವಿವಾದ ಇತ್ಯರ್ಥವಾಗುವುದು ಸದ್ಯಕ್ಕಂತೂ ಸಾಧ್ಯವಾಗದು. ಚೀಣವನ್ನು ಕಟ್ಟಿಹಾಕುವ ಅಮೆರಿಕದ ಪ್ರಯತ್ನಗಳಲ್ಲಿ ಭಾರತ ಭಾಗಿಯಾಗಿದೆ ಎಂಬ ಸಂಶಯ ಚೀಣಾಕ್ಕಿದೆ. ಇದಕ್ಕೆ ಪರ್ಯಾಯವಾಗಿ ಚೀಣ ಹಲವು ದೇಶಗಳನ್ನು ಸಂಪರ್ಕಿಸುವ ರಸ್ತೆ ನಿರ್ಮಾಣದ ಯೋಜನೆ ಕೈಗೆತ್ತಿಕೊಂಡಿದೆ. ಈ ರಸ್ತೆ ನಿರ್ಮಾಣದಲ್ಲಿ ಪಾಕ್ ಆಕ್ರಮಿತ ಕಾಶ್ಮೀರ ಭಾಗವೂ ಒಳಗೊಂಡಿರುವುದರಿಂದ ಇದಕ್ಕೆ ಭಾರತದ ವಿರೋಧ ಇದೆ. ಒಟ್ಟಿನಲ್ಲಿ ಮೋದಿ ಆಳ್ವಿಕೆಯಲ್ಲಿ ಭಾರತದ ವಿದೇಶೀ ನೀತಿ ಗೊತ್ತು ಗುರಿಯಿಲ್ಲದೆ ಏಕಮುಖವಾಗಿ ಸಾಗಿದೆ. ಬಲಪಂಥೀಯ, 'ಹಿಂದುತ್ವ' ಪ್ರತಿಪಾದಕ ಸರಕಾರದಿಂದ ಇನ್ನೇನು ನಿರೀಕ್ಷಿಸಲು ಸಾಧ್ಯ?

ಮೂರನೇ ಸಹಸ್ರಮಾನದ ಪ್ರಾರಂಭವೇ ಎಡವಟ್ಟು. ಜಾಗತಿಕ ರಾಜಕಾರಣ ಬಲಪಂಥದ ಕಡೆಗೆ ಸಾಗುತ್ತಿದೆಯೇ ಎಂಬ ಗಂಭೀರ ಅನುಮಾನ ಹುಟ್ಟುಹಾಕಿದೆ ಎರಡು ದಶಕಗಳಲ್ಲಿ. ಭಯೋತ್ಪಾದನೆಯ ವಿರುದ್ಧವಾಗಿ ಅಮೆರಿಕ ಸಾರಿದ ಸಮರ ಹಲವು ತಿರುವುಗಳನ್ನು ಪಡೆದುಕೊಂಡಿದೆ. ಪಶ್ಚಿಮ ಏಶಿಯದಲ್ಲಿ ಅಲ್ಲೋಲಕಲ್ಲೋಲ ಮುಂದುವರಿದಿದೆ. ಇರಾನಿನೊಂದಿಗೆ ಅಮೆರಿಕದ ದ್ವೇಷ ಮುಂದುವರಿದಿದ್ದು ಲಿಬಿಯ, ಇರಾಕ್‌ಗಳಲ್ಲಿ, ಈಜಿಪ್ಟಿನಲ್ಲಿ ಆಡಳಿತ ಬದಲಾಗಿದೆ. ಸಿರಿಯಾದಲ್ಲಿ ಏನೇ ಮಾಡಿದರೂ ಅಮೆರಿಕದಿಂದ ಅಸ್ಸಾದ್ ಬಷರ್ ಆಡಳಿತವನ್ನು ಕೆಡವಲು ಸಾಧ್ಯವಾಗಿಲ್ಲ, ಬದಲಾಗಿ ಅಂತರ್ಯುದ್ಧ ಮುಂದುವರಿಯುತ್ತಿದೆ, ಇಸ್ಲಾಮಿಕ್ ರಾಜ್ಯದ ಉಪಟಳದಿಂದ, ಅಮೆರಿಕದ 'ಡ್ರೋನ್' ದಾಳಿಯಿಂದ ದೇಶ ಮುಕ್ತವಾಗಿಲ್ಲ. ಪಶ್ಚಿಮ ಏಶಿಯದಲ್ಲಿ ಎರಡನೇ ಮಹಾಯುದ್ಧಕ್ಕಿಂತ ಹೆಚ್ಚು ಸಾವು–ನೋವುಗಳು ಸಂಭವಿಸಿವೆ ಈ ಶತಮಾನದ ಪ್ರಾರಂಭದಿಂದ ಎನ್ನಬಹುದು. ದಕ್ಷಿಣ ಅಮೆರಿಕದಲ್ಲಿ ವೆನೆಜುವೇಲ, ಕ್ಯೂಬಾಗಳನ್ನು ಬಿಟ್ಟು ಉಳಿದ ದೇಶಗಳಲ್ಲಿ ಬಲಪಂಥೀಯ ಆಡಳಿತಗಳನ್ನು ತರುವುದರಲ್ಲಿ ಅಮೆರಿಕ ಯಶಸ್ವಿಯಾಗಿದೆ ಎನ್ನಬಹುದು. ಈ ಭೂ ಭಾಗದಲ್ಲಿ ಅಮೆರಿಕ ಅನುಸರಿಸಿದ ತಂತ್ರ ಕೂಡ ಭಿನ್ನ. ನ್ಯಾಯಾಲಯವನ್ನು ಬಳಸಿಕೊಂಡು ಆಡಳಿತಗಾರರನ್ನು ಕಾರಾಗೃಹಕ್ಕೆ ದೂಡಿದ್ದಕ್ಕೆ ಉದಾಹರಣೆ ಬ್ರೆಜಿಲ್. ಶತಮಾನದ ಪ್ರಾರಂಭದಲ್ಲಿ ದಕ್ಷಿಣ ಅಮೆರಿಕದ ದೇಶಗಳು ಜಾಗತೀಕರಣಕ್ಕೆ ಸಾಮ್ರಾಜ್ಯಶಾಹಿ ವ್ಯವಸ್ಥೆಗೆ ಪರ್ಯಾಯ ವ್ಯವಸ್ಥೆಗೆ ತೋರುದೀಪವಾಗಿದ್ದುದನ್ನು ನೆನಪಿಸಿಕೊಳ್ಳಬಹುದು.


ಡ್ರೋನ್

ಜಾರ್ಜ್ ಬುಷ್ ನಂತರ ಅಧಿಕಾರಕ್ಕೆ ಬಂದ ಮೊದಲ ಆಫ್ರಿಕನ್ – ಅಮೆರಿಕನ್ ಬರಾಕ್ ಒಬಾಮಾ ಬುಷ್ ಅಧಿಕಾರಾವಧಿಯಲ್ಲಿ ಪ್ರಾರಂಭಿಸಿದ್ದ ಯುದ್ಧಗಳನ್ನು ಮುಂದುವರಿಸಿಕೊಂಡು ಹೋದರು. ಎರಡು ಅವಧಿಗೆ ಅಧ್ಯಕ್ಷ ಸ್ಥಾನ ಅಲಂಕರಿಸಿದ್ದ ಒಬಾಮಗೆ ನೊಬೆಲ್ ಶಾಂತಿ ಪುರಸ್ಕೃತ ಬೇರೆ. ಕ್ಯೂಬಾ, ಇರಾನ್‌ಗಳ ಜೊತೆಗೆ ಅಮೆರಿಕದ ಸಂಬಂಧಗಳನ್ನು ಸಹಜಗೊಳಿಸಿದ್ದು ಬಿಟ್ಟರೆ ಉಳಿದದ್ದೆಲ್ಲ ಎಂದಿನಂತೆಯೇ ಅಮೆರಿಕನ್ ಸಾಮ್ರಾಜ್ಯಶಾಹಿಯ ಹಿತ ಕಾಪಾಡುವುದೇ. ಪ್ರಥಮ ಮಹಿಳಾ ಅಭ್ಯರ್ಥಿ, ಡೆಮಾಕ್ರಟಿಕ್ ಪಕ್ಷದ ಹಿಲರಿ ಕ್ಲಿಂಟನ್‌ರನ್ನು ಪರಾಜಯಗೊಳಿಸಿ ಅಮೆರಿಕದಲ್ಲಿ ಅಧಿಕಾರಕ್ಕೆ ಬಂದಿದ್ದು ರಿಪಬ್ಲಿಕನ್ ಪಕ್ಷದ ಟ್ರಂಪ್ ಮಹಾಶಯ. ಈತ ಬಹುದೊಡ್ಡ ಪ್ರಮಾಣದಲ್ಲಿ ರಿಯಲ್ ಎಸ್ಟೇಟ್ ದಂಧೆ ನಡೆಸುತ್ತಿರುವಾತ. ಈ ಕಾರ್ಪೊರೇಟ್ ವಲಯದ ಹಿತರಕ್ಷಕ. ತನ್ನ ಉದ್ಯಮವನ್ನೂ ಕಾರ್ಪೊರೇಟ್ ಆಗಿಯೇ ನಡೆಸುತ್ತಿದ್ದಾನೆ. ದೇಶವನ್ನು ಅದೇ ರೀತಿ ಯದ್ವಾತದ್ವಾ ಆಳತೊಡಗಿದ್ದಾನೆ. 'ಅಭಿವೃದ್ಧಿ', 'ಒಳ್ಳೆಯ ಆಡಳಿತ' ಘೋಷಣೆಗಳಿಂದ ಭಾಜಪವನ್ನು ಅಧಿಕಾರಕ್ಕೆ ತಂದ ನರೇಂದ್ರ ಮೋದಿಯಂತೆಯೇ, ಉಗ್ರ ಬಲಪಂಥೀಯ ಡೊನಾಲ್ಡ್ ಟ್ರಂಪ್ ಕೂಡ 'ಅಮೆರಿಕ ಫಸ್ಟ್', 'ಅಮೆರಿಕ ಅಮೆರಿಕನ್ನರಿಗೆ ಮಾತ್ರ' ಎಂಬ ಪೊಳ್ಳು ಘೋಷಣೆಗಳಿಂದ ಅಧಿಕಾರಕ್ಕೇರಿದ ವ್ಯಕ್ತಿ. ಅಮೆರಿಕದ ಹಿತಾಸಕ್ತಿಯನ್ನು ಕಾಪಾಡಲು ಈತ ಕೈಗೊಂಡ ಮೊದಲ ಕ್ರಮಗಳೆಂದರೆ ಅಕ್ರಮ ವಲಸೆ ತಡೆಯುವ ನಿಟ್ಟಿನಲ್ಲಿ ಪಶ್ಚಿಮ ಏಶಿಯದ ದೇಶಗಳ ಪ್ರವಾಸಿಗಳ ಮೇಲೆ ನಿರ್ಬಂಧ ವಿಧಿಸಿದ್ದು, ಮೆಕ್ಸಿಕೋದಿಂದ ವಲಸೆ ತಡೆಯಲು ತಡೆಗೋಡೆ ನಿರ್ಮಿಸುವ ಯೋಜನೆ. ಎರಡೂ ಕೂಡ ಮೋದಿ ಸರಕಾರ ಸ್ವಿಸ್ ಬ್ಯಾಂಕ್‌ನಲ್ಲಿರುವ ಕಪ್ಪು ಹಣ ತಂದಂತೆಯೇ ಇದುವರೆಗೆ ಕೈಗೂಡಿಲ್ಲ. ಟ್ರಂಪ್ ಕೈಗೊಂಡ ಒಂದು ಒಳ್ಳೆಯ ಕಾರ್ಯವೆಂದರೆ ಉತ್ತರ ಕೊರಿಯಾದೊಂದಿಗೆ ಅಮೆರಿಕದ ಅಧ್ಯಕ್ಷನೊಬ್ಬ ಶೃಂಗಸಭೆ ನಡೆಸಿದ್ದು. ಭಾರತಕ್ಕೆ ಭಾರಿ ಪ್ರಮಾಣದಲ್ಲಿ ಶಸ್ತ್ರಾಸ್ತ್ರಗಳನ್ನು ಒದಗಿಸಿ, ಚೀಣಾದ ವಿರುದ್ಧ ಭಾರತವನ್ನು ಎತ್ತಿಕಟ್ಟುತ್ತಿರುವುದು. ಅಮೆರಿಕದ ಹಿತಾಸಕ್ತಿಯನ್ನು ಕಾಪಾಡುವ ಹೆಸರಿನಲ್ಲಿ ಪ್ಯಾರಿಸ್ ಪರಿಸರ ಒಪ್ಪಂದದಿಂದ ಕಳಚಿಕೊಂಡಿದ್ದು ಹಾಗೂ ವಿಶ್ವಸಂಸ್ಥೆಯ ಹಲವು ಕಲ್ಯಾಣ ಯೋಜನೆಗಳಿಂದ ಹೊರಬಿದ್ದದ್ದು. ಭಾರತದ ಮಟ್ಟಿಗೆ ಐಟಿ ಉದ್ಯಮಕ್ಕೆ ಬಾಧಕವಾಗುವಂಥ ಅಮೆರಿಕ ಪ್ರವೇಶಕ್ಕೆ ಅಡ್ಡಿಯಾಗುವ ವೀಸಾ ನೀತಿ. ಎರಡು ವರ್ಷಗಳಲ್ಲಿ ಅಮೆರಿಕವನ್ನು ಮತ್ತಷ್ಟು ಬಲಪಂಥದ ರಾಜಕಾರಣದತ್ತ ಒಯ್ಯುವುದನ್ನು ಬಿಟ್ಟರೆ ಸಾಧನೆ ಏನಿಲ್ಲ. ಈ ಎಲ್ಲ ಯಥಾಸ್ಥಿತಿ ಅಮೆರಿಕದಲ್ಲಿ ಇದ್ದರೂ ಟ್ರಂಪ್ ಆಡಳಿತದಲ್ಲಿ ಅನಿಶ್ಚಿತತೆ ಕಾಡುತ್ತಿರುವ ಸಮಸ್ಯೆ. ಅಂತರರಾಷ್ಟ್ರೀಯ ಪರಿಸ್ಥಿತಿಯನ್ನು ಅವಲೋಕಿಸಿದಾಗ, ವಿದ್ಯಮಾನಗಳನ್ನು ವಿಶ್ಲೇಷಿಸಿದಾಗ ಕಂಡುಬರುವ ಒಂದು ಪ್ರಮುಖ ಅಂಶವೆಂದರೆ ಜಗತ್ತು ಬಲಪಂಥೀಯ ಪರವಾಗಿ ವಾಲುತ್ತಿದೆಯೇ ಎಂಬುದು. ಇದು ಒಂದು ಕಾಲಘಟ್ಟ ಹಾಗೂ ತಾತ್ಕಾಲಿಕ ಎಂದು ತೋರುತ್ತದೆ ಕಳೆದ ಎರಡು ದಶಕಗಳ ಘಟನೆಗಳನ್ನು ಪರಿಶೀಲಿಸಿದಾಗ.


ಡೊನಾಲ್ಡ್ ಟ್ರಂಪ್

**ಸಿ. ಆರ್. ಕೃಷ್ಣರಾವ್**
'ಸೂರ್ಯ ರೆಸಿಡೆನ್ಸಿ', ಫ್ಲಾಟ್–೧, # ೩೧೩೩, ೩ನೇ ಅಡ್ಡರಸ್ತೆ
ಗಿರಿನಗರ ೪ನೇ ಹಂತ, ಬೆಂಗಳೂರು – ೫೬೦ ೦೮೫



# ಸ್ತನ ತೆರಿಗೆ

## ಒಂದು ಅಮಾನವೀಯ ಪದ್ಧತಿ, ಕೇರಳ ಇತಿಹಾಸದ ಕರಾಳ ಪುಟ

ವಿಗ್ರಹವನ್ನೇ ಗುರುವೆಂದು ಭಾವಿಸಿ ಧನುರ್ವಿದ್ಯಾ ಪಾರಂಗತನಾದ ಏಕಲವ್ಯನ ಹೆಬ್ಬೆರಳನ್ನೇ ಗುರುದಕ್ಷಿಣೆಯಾಗಿ ಪಡೆದ ದ್ರೋಣ ಗುರುಮಹಾಶಯನ, ತುಂಬಿದ ಸಭೆಯಲ್ಲಿ ಪಂಚಸೋದರಪತ್ನಿಯ ವಸ್ತ್ರಾಪಹರಣಕ್ಕೆ ಪ್ರಯತ್ನಿಸಿ ಸೋತ ಶತಸೋದರರ ಮಹಾಭಾರತದ ಸಿರಿಬೀಡು–ಭಾರತ. ವಾನರನನ್ನು ಗೆಲ್ಲಲಾಗದೆ ಮರದ ಮರೆಯಿಂದ ಬಾಣ ಹೂಡಿ ವಾಲಿಯನ್ನು ವಧಿಸಿದ, ಅಗಸನ ಮಾತಿಗೆ ತುಂಬು ಗರ್ಭಿಣಿ ಸತಿ ಸೀತೆಯನ್ನು ಘೋರಾರಣ್ಯದಲ್ಲಿ ಬಿಟ್ಟು ಬರಲಾದೇಶಿಸಿದ, ಮರ್ಯಾದಾ ಪುರುಷೋತ್ತಮನ ದಿವ್ಯ ಕಥಾನಕದ ಭವ್ಯ ರಾಮಾಯಣದ ಪುಣ್ಯಭೂಮಿ–ಭಾರತ. ಸಲಹುವಳೆಂದು ಶರಣು ಬರುವ ಕೆಳವರ್ಗದ ಬಾಲೆಯರನ್ನು ಧರ್ಮದ ಹೆಸರಿನಲ್ಲಿ ಮುತ್ತು ಕಟ್ಟಿಸಿ, ಗೆಜ್ಜೆಪೂಜೆ ಮಾಡಿಸಿ ದೇವದಾಸಿಯರನ್ನಾಗಿಸಿ ನರಕಸದೃಶ ಜೀವನ ಕರುಣಿಸುವ, ದೈವ ಕೋಪದ–ಧರ್ಮಭೀತಿ ಹುಟ್ಟಿಸಿ ತಮ್ಮ ಕಾಮತೀಟೆ ತೀರಿಸಿಕೊಳ್ಳುವ ಮೇಲುಕುಲದವರ ಪೊರೆಯುವ ತಾಯಿ ರೇಣುಕಮ್ಮನ ಧರ್ಮಭೂಮಿ–ಭಾರತ. ವೇದಪಾಠ ಕೇಳುವ ಕಿವಿಗೆ ಕಾದ ಸೀಸ ಸುರಿಯುವಂತಹ ಅಮಾನುಷ ಪದ್ಧತಿಯ ಪುರೋಹಿತಶಾಹಿ ಧರ್ಮಕ್ಷೇತ್ರ ಭಾರತವಲ್ಲದೇ ಇನ್ಯಾವುದಿರಲು ಸಾಧ್ಯ! ಇಂಥ ಹಲವು ಅನಿಷ್ಟ ನಿದರ್ಶನಗಳನ್ನು ನಮ್ಮ ಮಹಾನ್ ಭಾರತದಲ್ಲಿ ಕಾಣಬಹುದು. ಇಂಥ ಪಾವನ ಭೂಮಿಯಲ್ಲಿ ದಲಿತ–ದಮನಿತ ಸ್ತ್ರೀಯರು ನಿರ್ದಿಷ್ಟ ತೆರಿಗೆ ಸಂದಾಯಿಸಿದರೆ ಮಾತ್ರ ಮೊಲೆಗಳನ್ನು ಮುಚ್ಚಿಕೊಳ್ಳಬಹುದೆಂಬ ಕ್ರೂರ ಶಾಸನವೂ ಜಾರಿಯಲ್ಲಿತ್ತು.

ಕೆಳಸ್ತರದ ಸ್ತ್ರೀಯರು ಎದೆಯ ಭಾಗವನ್ನು ಮುಚ್ಚಿಕೊಳ್ಳುವಂತಿಲ್ಲ. ಸ್ತನಗಳು ದೃಗ್ಗೋಚರವಾಗುವಂತೆ ಮೇಲ್ಭಾಗವನ್ನು ನಗ್ನವಾಗಿರಿಸಿ ಕೆಳಭಾಗಕ್ಕೆ ಮಾತ್ರ ಉಡುಪು ಧರಿಸಬೇಕು. ಸ್ತನಗಳನ್ನು ಮುಚ್ಚಿಕೊಳ್ಳಬಯಸುವ ನಿಮ್ನ ವರ್ಗದ ಮಹಿಳೆಯರು ಅದಕ್ಕೆ ನಿಗದಿತ ತೆರಿಗೆ ಸಂದಾಯಿಸಬೇಕು. ಇಂಥದೊಂದು ಅತ್ಯಂತ ಕ್ರೂರ ಅಮಾನವೀಯ ನೀಚ ಪದ್ಧತಿಯು ಮುನ್ನೂರು ವರ್ಷಗಳ ಹಿಂದೆ ಭಾರತದ ಕೆಲಭಾಗ, ಮುಖ್ಯವಾಗಿ ಕೇರಳದಲ್ಲಿ ಪ್ರಚಲಿತದಲ್ಲಿತ್ತು. ವಿಶ್ವದ ಕೆಲವೆಡೆ ಈ ಅನಾಗರಿಕ ಪದ್ಧತಿ ಜಾರಿಯಲ್ಲಿದ್ದ ಬಗ್ಗೆ ಅಲ್ಲಲ್ಲಿ ಉಲ್ಲೇಖಗಳುಂಟು. ಪ್ರಾಚೀನ ಕಾಲದಿಂದಲೂ ಆಡಳಿತಗಾರರು ಪ್ರಜೆಗಳ ಮೇಲೆ ನಾನಾ ರೀತಿಯ ತೆರಿಗೆಗಳನ್ನು ವಿಧಿಸುತ್ತಿದ್ದುದು, ವಸೂಲಿಗೆ ಕಠೋರ ನಿಯಮಗಳನ್ನು ಅನುಸರಿಸುತ್ತಿದ್ದುದು ಸರ್ವವಿದಿತ.

ಕೇರಳದ ಟ್ರಾವಂಕೂರ್ ಸಾಮ್ರಾಜ್ಯದಲ್ಲಿ ೧೮–೧೯ನೇ ಶತಮಾನದಲ್ಲಿ ಮುಲಕ್ಕರಂ (ಮೊಲೆಯ ತೆರಿಗೆ) ಎಂದು ಕರೆಯಲಾಗುವ ಈ ಕ್ರೂರ ಪಾಶವೀಯ ಪದ್ಧತಿ ರೂಢಿಯಲ್ಲಿತ್ತೆಂದು ತಿಳಿದುಬರುತ್ತದೆ. ಆಂಗ್ಲಾಡಳಿತಾವಧಿಯಲ್ಲಿ ಅಸ್ತಿತ್ವದಲ್ಲಿದ್ದ ೫೫೦ ಸರ್ವಾಧಿಕಾರೀ ಧೋರಣೆಯ ರಾಜಪ್ರಭುತ್ವದ ಪ್ರಾಂತ್ಯಗಳಲ್ಲಿ ಇದು ಚಾಲ್ತಿಯಲ್ಲಿತ್ತು. ಕೇರಳದ ಶ್ರೀ ಶಂಕರಾಚಾರ್ಯ ವಿಶ್ವವಿದ್ಯಾಲಯದ "ಲಿಂಗ ಪರಿಸರ ವಿಜ್ಞಾನ ಮತ್ತು ದಲಿತ ಅಧ್ಯಯನ" ವಿಭಾಗದ ಸಹಾಯಕ ಪ್ರಾಧ್ಯಾಪಕ ಡಾ॥ ಕೆ. ಎಂ. ಶೀಬಾ "ಕೆಳ ವರ್ಗದ ಮಹಿಳೆಯರ ಸ್ತನ ತೆರಿಗೆ ಜಾತಿಪದ್ಧತಿಯನ್ನು ಕಾಪಾಡಿಕೊಳ್ಳಲು ಮೇಲ್ವರ್ಗದವರು ರೂಪಿಸಿದ ಕರಾಳ ಶಾಸನ" ಎಂದು ವ್ಯಾಖ್ಯಾನಿಸುತ್ತಾರೆ. ವಸ್ತ್ರ ಸಂಬಂಧಿತ ಸಾಮಾಜಿಕ ಸಂಪ್ರದಾಯಗಳು ಒಬ್ಬ ವ್ಯಕ್ತಿಯ ಜಾತಿ–ಸ್ಥಿತಿಗೆ ಅನುಗುಣವಾಗಿರುತ್ತವೆ, ಅವರವರ ಧರಿಸುವಿಕೆಯ ವಿಧಾನದಿಂದ ಜಾತಿಗಳನ್ನು ಗುರುತಿಸಲಾಗುತ್ತಿತ್ತೆಂಬುದು ಪ್ರಾಜ್ಞರ ಅಭಿಪ್ರಾಯ. ಮೇಲ್ವರ್ಗದ ಆಡಳಿತಗಾರರು ತಮ್ಮ ಕಾಮುಕ ನೋಟದ ತೀಟೆ ತೀರಿಸಿಕೊಳ್ಳಲು ಇಂಥದೊಂದು ಕ್ರೂರ ಪದ್ಧತಿ ಜಾರಿಗೊಳಿಸಿರಬಹುದೆನ್ನುವುದು ಆಧುನಿಕ ಪ್ರಗತಿಶೀಲ ಕ್ರಾಂತಿಪಥಿಕರ ವಿಚಾರ. ನಿಮ್ನವರ್ಗಗಳ ಸ್ತ್ರೀಯರು ಹೊರಗಡೆ ಸಂಚರಿಸುವ ಸಂದರ್ಭದಲ್ಲಿ ಎದೆಗೆ ಯಾವುದೇ ಬಟ್ಟೆಯನ್ನು ಧರಿಸುವಂತಿಲ್ಲ. ಸ್ತನಗಳನ್ನು ಮುಚ್ಚಿಕೊಳ್ಳುವಂತಿಲ್ಲ. ಈ ಆಜ್ಞೆ ಪಾಲಿಸದವರು ಅಂದರೆ ರವಿಕೆ ಅಥವಾ ಯಾವುದೇ ವಸ್ತ್ರ ಧರಿಸುವವರು ದಂಡ ಭರಿಸುವುದು ಕಡ್ಡಾಯವಾಗಿತ್ತು. ಮೇಲ್ವರ್ಗದ ಆಡಳಿತಾಧಿಕಾರಿ ಗಂಡಸರು ಅಂಥ ಹೆಂಗಸರ ಎದೆ ವಸ್ತ್ರದ ಒಳಗೆ ಕೈ ತೂರಿಸಿ ಅವರ ಸ್ತನದ ಅಳತೆ ಪರೀಕ್ಷಿಸುತ್ತಿದ್ದರು. ಸ್ತನದ ಗಾತ್ರ ಆಧರಿಸಿ ತೆರಿಗೆಯ ಮೊತ್ತವನ್ನು ನಿರ್ಧರಿಸಲಾಗುತ್ತಿತ್ತು. ನಾಗರಿಕ ಲೋಕ ನಾಚಿಕೊಳ್ಳುವ ಇಂಥ ಲಜ್ಜಾಹೀನ ಕಾನೂನು ಜಾರಿಗೊಳಿಸಿದ, ಆ ಮಾನವ ರೂಪದ ದಾನವರ ಮನೋಸ್ಥಿತಿ ಎಷ್ಟು ವಿಕೃತವಾಗಿದ್ದಿರಬಹುದು!

ಈ ಪದ್ಧತಿ ವಿರುದ್ಧ ಸಿಡಿದೆದ್ದು ಮೊಟ್ಟಮೊದಲಿಗೆ ಪ್ರತಿಭಟಿಸಿದ್ದು ಟ್ರಾವಂಕೂರು ಸಾಮ್ರಾಜ್ಯದ ಚೆರ್ತಾಲದ ಇಜಾವ್ ಮಹಿಳೆ – 'ನಂಗೆಲಿ'. ಶೋಷಿತ – ದಮನಿತ ಸ್ತ್ರೀಯರ ಪ್ರತಿನಿಧಿಯೆಂಬಂತೆ ಹೊರಹೊಮ್ಮಿದ ನಂಗೆಲಿ ಎದೆವಸ್ತ್ರ ಧರಿಸಿದ್ದಲ್ಲದೆ ರಾಜಪ್ರಭುತ್ವ ವಿಧಿಸಿದ ತೆರಿಗೆ ಸಂದಾಯಿಸಲು ನಿರಾಕರಿಸಿದಳು. ಕರ ವಸೂಲಿಗೆ ಬಂದ ಅಧಿಕಾರಿ ಗಂಭೀರ ಪರಿಣಾಮ ಎದುರಿಸಬೇಕಾಗುತ್ತದೆಂದು ಗರ್ಜಿಸಿದ. ಗಟ್ಟಿ ನಿರ್ಧಾರದ ದಿಟ್ಟ ಸ್ತ್ರೀ ನಂಗೆಲಿ "ತೆರಿಗೆ ಬಾಬತ್ತು ಇದರಲ್ಲಿದೆ"ಯೆಂದು ಬಾಳೆಯೆಲೆಯನ್ನು ತಂದು ಅಧಿಕಾರಿಯ ಎದುರಿಗಿಟ್ಟಳು. ಅದನ್ನು ತೆರೆದ ಕಲ್ಲೆದೆಯ ಅಧಿಕಾರಿ ಆ ಘೋರವನ್ನು ನೋಡಿ ಗಡಗಡ ನಡುಗಿಬಿಟ್ಟ. ನಂಗೆಲಿ ತನ್ನ ಸ್ತನಗಳನ್ನೇ ಕತ್ತರಿಸಿಟ್ಟಿದ್ದಳು. ಪರಿಣಾಮ ವಿಪರೀತ ರಕ್ತಸ್ರಾವದಿಂದ ನಂಗೆಲಿ ಮರಣಿಸುತ್ತಾಳೆ. ಸತಿಯ ಅಗಲಿಕೆ ತಾಳದೆ ಗಂಡನೂ ಆತ್ಮಹತ್ಯೆಗೆ ಶರಣಾಗುತ್ತಾನೆ. ಶತಮಾನದ ಚಳುವಳಿ ನಂಗೆಲಿಯ ಸ್ತನಾರ್ಪಣೆಯಿಂದ ಮಂಗಳವಾಗುತ್ತದೆ.

ಈ ಕ್ರೂರ ಪದ್ಧತಿ ಈ ತನಕ ದಾಖಲಾಗದಿರುವುದು ವಿಪರ್ಯಾಸ. ೨೦೦೦ದಲ್ಲಿ ಎ. ಎನ್. ಸದಾಶಿವನ್‌ರವರ "ಸಾಮಾಜಿಕ ಇತಿಹಾಸ" ಪುಸ್ತಕದಲ್ಲಿ, ೨೦೦೭ರಲ್ಲಿ ಸಿ. ಕೆ. ರಾಧಾಕೃಷ್ಣನ್ ಬರೆದ "ಕೇರಳದ ನಂಗೆಲಿಯ ಮರೆಯಲಾಗದ ಕೊಡುಗೆ" – ಲೇಖನದಲ್ಲಿ ಈ ಸಂಗತಿಯ ಪ್ರಸ್ತಾಪವಿದೆ. ತಮಿಳಿನ "ಶಿಲಪ್ಪದಿಕಾರಂ" ಆದಿಕಾವ್ಯದ ನಾಯಕಿ ಕಣ್ಣಗಿ ತನ್ನ ಸ್ತನಗಳನ್ನು ಕತ್ತರಿಸಿಕೊಂಡು ರಾಜಧಾನಿ ಸುಟ್ಟುಹೋಗುವಂತೆ ಶಪಿಸುವ ಘಟನೆಗೂ, ನಂಗೆಲಿಯ ಸ್ತನಭೇದನ ಘಟನೆಗೂ ಸಂಬಂಧವಿಲ್ಲವೆನ್ನಬಹುದು.

**ಟಿ. ಕೆ. ಗಂಗಾಧರ ಪತ್ತಾರ**
'ಭಾವಗಂಗೋತ್ರಿ', ಪ್ಲಾಟ್ ನಂ.೩, ೬ನೇ ಕ್ರಾಸ್, ವಿದ್ಯಾನಗರ ಪಶ್ಚಿಮ
ಕೊಳಗಲ್ಲು ರಸ್ತೆ, ಬಳ್ಳಾರಿ – ೫೮೩ ೧೦೪

# ಕ್ರಿಕೆಟ್ ಮತ್ತು ಕುರುಡು ಕಾಂಚಾಣ

**ಡಾ॥ ಬಿ. ಆರ್. ಮಂಜುನಾಥ್**

**ಪರಿಸರವನ್ನು, ಮಾನವ ಸಂಬಂಧಗಳನ್ನು, ಸಂಗೀತ, ಕಲೆ, ಕ್ರೀಡೆಯನ್ನು ಪ್ರೀತಿಸುವ ಎಲ್ಲ ಜನ, ಈ ಕೊಳೆತ ಸಮಾಜ ತನ್ನೊಂದಿಗೆ ನಾವು ಮೆಚ್ಚುವ ಎಲ್ಲವನ್ನೂ ಅಧಃಪತನಕ್ಕೆ ಎಳೆದು ಒಯ್ಯುತ್ತಿದೆ ಎಂಬ ಕಠೋರ ಸತ್ಯವನ್ನು ಗ್ರಹಿಸಬೇಕು. ಇದನ್ನು ಬದಲಾಯಿಸದೆ, ಇದರ ಬುಡಕ್ಕೇ ಪೆಟ್ಟುನೀಡದೆ ಅಮೂಲ್ಯವಾದ ಏನನ್ನೂ ಉಳಿಸಿಕೊಳ್ಳುವುದು ಸಾಧ್ಯವಿಲ್ಲ ಎಂಬುದನ್ನು ಮನಗಾಣಬೇಕು. ಕ್ರೀಡೆಯನ್ನು ಉಳಿಸುವ ಪ್ರಯತ್ನ ಸಮಾಜವನ್ನು ಉಳಿಸುವ ವಿಶಾಲ ಪ್ರಯತ್ನದ ಭಾಗವಾಗಬೇಕು.**

"ನವಾನಗರ್ ಎಂಬ ಪುಟ್ಟ ಸಂಸ್ಥಾನದ ರಾಜಕುಮಾರರಿಗೆ, ಅದೇ ಸಮಯದಲ್ಲಿ ಮಹಾನ್ ಕ್ರೀಡೆ ಕ್ರಿಕೆಟ್‌ನ ಸಾರ್ವಭೌಮ, 'ನವನಗರದ ಜಾಮ್‌ಸಾಹಿಬ್' ರಣಜಿತ್‌ಸಿಂಗ್‌ಗೆ ನಮ್ಮ ನಮನ. ಆತ ಇಂಗ್ಲೆಂಡಿನ ರಜಾದಿನಗಳ ಕ್ರೀಡಾಭಿಮಾನಿಗಳ ಹೃದಯವನ್ನೇ ಕದ್ದವನು. ಜನ ಮುಂದೆಯೂ ಬರುತ್ತಾರೆ, ಹೋಗುತ್ತಾರೆ ಆದರೆ ನಮ್ಮ ಜನರ ಪ್ರೀತಿಯನ್ನು ಆತನಂತೆ ಗೆದ್ದವರು ಯಾರೂ ಇಲ್ಲ."

"...ಪ್ರೇಕ್ಷಕರು ಆತನಿಗಾಗಿ ಎಳೆಬಿಸಿಲಲ್ಲಿ ಕಾಯುತ್ತಾರೆ. ಆದರೆ ಇನ್ನು ಮುಂದೆ ಅವನ ಆಕರ್ಷಕ ಹೊಡೆತಗಳಾಗಲೀ, ಆತನ ದುಂಡು ಮುಖದ ನಗೆಯಾಗಲೀ ನಮಗೆ ಕಾಣಸಿಗದು."

"ಬ್ಯಾಟ್ಸ್‌ಮನ್ ಎಷ್ಟು ರನ್ ಹೊಡೆಯುತ್ತಾನೋ ಅದು ಮುಖ್ಯವಲ್ಲ; ಹೇಗೆ ಹೊಡೆಯುತ್ತಾನೆ ಎಂಬುದು ಮುಖ್ಯ. ವಾಷಿಂಗ್‌ಟನ್ ಇರ್ವಿಂಗ್ ಹೇಳಿದ್ದ "ಬದುಕಿನಲ್ಲೂ ಅಷ್ಟೇ ಸಾಹಿತ್ಯದಲ್ಲೂ ಅಷ್ಟೇ ಮನುಷ್ಯನ ಸುತ್ತ ಕಾಗದದ ರಾಶಿ ಬಿದ್ದಿದ್ದೂ ಆತ ದರಿದ್ರನಾಗಿರಬಹುದು." ಕ್ರಿಕೆಟ್‌ನಲ್ಲೂ ಅಷ್ಟೇ ರನ್‌ಗಳ ರಾಶಿಯೂ, ರಸಹೀನತೆಯೂ ಒಟ್ಟೊಟ್ಟಿಗೆ ಇರಲು ಸಾಧ್ಯ! ಕ್ರಿಕೆಟ್‌ನಲ್ಲಿ ಆನಂದದ ಸಾಹಸ ಯಾತ್ರೆ ಮಾಯವಾಗುತ್ತಿದೆ. ಭಾವನೆಗಳ ಸ್ಪರ್ಶವೇ ಇಲ್ಲದೆ ಯಂತ್ರಗಳಂತೆ ರನ್ ಗಳಿಸುವವರಿದ್ದಾರೆ. ಅದರಲ್ಲಿ ವರ್ಣಮಯತೆ ಇಲ್ಲ. ಖುಷಿ ಇಲ್ಲ, ವ್ಯಕ್ತಿ ವೈಶಿಷ್ಟ್ಯವಿಲ್ಲ! ಅಂಥ ಆಟದಲ್ಲಿ ಎಳೆಬಿಸಿಲಿನ ಬೆಳಕಿರುವುದಿಲ್ಲ, ವೇಗವಾದ ಆಶ್ಚರ್ಯಕರತೆ ಇಲ್ಲ, ಮನೋಹರವಾದ ನಿಸ್ವಾರ್ಥತೆ ಇರುವುದಿಲ್ಲ. ಆದರೆ ನಮ್ಮ ಜಾಮ್‌ಸಾಹಿಬ್ ಹಾಗಲ್ಲ. ಆತ ರನ್ ಕೂಡಿಹಾಕುವ ಜಿಪುಣನಲ್ಲ, ಆತ ಕೊಡುಗೈ ದಾನಿಯಾಗಿರುವ ಕೋಟ್ಯಧೀಶ. ಆತನ ಆನಂದ ಇದ್ದುದೇ ಬೇರೆಯವರಿಗೆ ಆನಂದ ನೀಡುವಲ್ಲಿ! ಇಂಗ್ಲೆಂಡಿನ ಜನಸಾಮಾನ್ಯರಿಗೆ ಗೋಖಲೆಗಳು, ಬ್ಯಾನರ್ಜಿಗಳು, ಟ್ಯಾಗೋರರು ಗೊತ್ತಿಲ್ಲದೆ ಇರಬಹುದು. ಆದರೆ ಈ ಜನತೆಯ ರಾಜ ಅವರಿಗೆ ಚೆನ್ನಾಗಿ ಗೊತ್ತು. ಏಕೆಂದರೆ ಅವನು ತನ್ನ ಬ್ಯಾಟಿನಿಂದಲೂ ಮುಗುಳ್ನಗೆಯಿಂದಲೂ ಅವರ ಎದೆಯ ಕದಗಳನ್ನು ತಟ್ಟಿದ್ದ!"

ಇದು ಇಂಗ್ಲಿಷ್ ಭಾಷೆಯ ಹೆಸರಾಂತ ಪ್ರಬಂಧಕಾರ ಎ. ಜಿ. ಗಾರ್ಡನರ್‌ನ 'ಜಾಮ್ ಸಾಹಿಬ್ ಆಫ್ ನವನಗರ್' ಪ್ರಬಂಧದ ಆಯ್ದ ವಾಕ್ಯಗಳ ಭಾವಾನುವಾದ. ಕಳೆದ ಶತಮಾನದ ಆರಂಭಕಾಲದ ಲೇಖನವಿದ್ದೀತು. ಕ್ರಿಕೆಟನ್ನಾಗಲೀ, ಗಾರ್ಡನರ್‌ನನ್ನಾಗಲೀ ಮೆಚ್ಚದಿದ್ದವರು ಸಹ ಒಬ್ಬ ಕ್ರೀಡಾಪಟುವಿನ ಕುರಿತು ಬಂದಿರುವ ಈ ಬರೆಹದ ಲಾಲಿತ್ಯವನ್ನೂ, ಸತ್ಯವನ್ನೂ ಮೆಚ್ಚದೇ ಇರಲಾರರು. ಆ ಆಟ, ಆ ಮಾದರಿಯ ಲೇಖನ, ಆ ಜೀವನಶೈಲಿ ಇನ್ನೊಂದು ಯುಗಕ್ಕೆ ಸೇರಿದಂಥದ್ದು.

ಕ್ರಿಕೆಟ್ ಹದಿನಾರನೆಯ ಶತಮಾನದಲ್ಲಿ ಆರಂಭವಾಯಿತೆಂದು ಕೆಲವರು, ಹನ್ನೆರಡನೆಯ



ಶತಮಾನದಲ್ಲೇ ಶುರುವಾಯಿತೆಂದು ಕೆಲವರು ಹೇಳುತ್ತಾರೆ. ಒಟ್ಟಿನಲ್ಲಿ ಅದರ ನಿಯಮಗಳು, ಬ್ಯಾಟು–ಬಾಲುಗಳು, ಆಟಗಾರನ ವೇಷ ಎಲ್ಲವೂ ಅನೇಕ ಶತಮಾನಗಳ ದೀರ್ಘಾವಧಿಯಲ್ಲಿ ಬದಲಾಗುತ್ತಾ ಬಂದವು. ಕುರಿಗಾಹಿಗಳು, ನಂತರ ದೊರೆಗಳು, ಇಂಗ್ಲೆಂಡಿನ ಸಣ್ಣ ಅವಧಿಗೆ ಮಾತ್ರ ಲಭ್ಯವಾದ ಆಹ್ಲಾದಕರ ಬೇಸಿಗೆಯಲ್ಲಿ ಇದನ್ನು ಆಡಿಕೊಂಡು ಬಂದರು. ನಮ್ಮ ಗಿಲ್ಲಿದಾಂಡಿನ ಒಂದು ರೂಪದ ಹಾಗಿದ್ದದ್ದು ಕೈಗಾರಿಕಾ ಕ್ರಾಂತಿಯೊಂದಿಗೆ ಒಂದು ಸ್ಪಷ್ಟ ನಿಯಮಾವಳಿಯಿದ್ದ ಪ್ರಬುದ್ಧ ಆಟವಾಯಿತು. ಗಣಿ ಮತ್ತು ಗಿರಣಿ ಕಾರ್ಮಿಕರು ಹೆಚ್ಚುಹೆಚ್ಚಾಗಿ ಫುಟ್‌ಬಾಲ್‌ನತ್ತ ಹೊರಳಿದರೆ, ಮಧ್ಯಮ ವರ್ಗ ಮತ್ತು ಮೇಲ್ವರ್ಗ ಕ್ರಿಕೆಟ್‌ಗೆ ಆಕರ್ಷಿತರಾದಂತೆ ಕಾಣುತ್ತದೆ. ಇಂಗ್ಲಿಷರು ಹೋದಲ್ಲೆಲ್ಲಾ ಹಿಂಬಾಲಿಸಿದ ಕ್ರಿಕೆಟ್ ಆಸ್ಟ್ರೇಲಿಯಾ, ಇಂಡಿಯಾ, ದಕ್ಷಿಣ ಆಫ್ರಿಕಾ, ಕೆರಿಬಿಯನ್ ದ್ವೀಪಗಳಲ್ಲಿ ನೆಲೆಯೂರಿತು. ವಿಕ್ಟೋರಿಯನ್ ಯುಗದ 'ಸಭ್ಯತೆ', ರೀತಿ–ರಿವಾಜುಗಳ ಕುರಿತಾದ ಎಚ್ಚರ, ಕ್ರೀಡಾ ಮನೋಭಾವ, ಗೆದ್ದವನ ಔದಾರ್ಯ, ಸೋತವನ ಘನತೆ ಇವನ್ನೆಲ್ಲಾ ಯಥೇಚ್ಛವಾಗಿ ಬಹುಕಾಲ ಕಾಪಾಡಿಕೊಂಡು ಬರಲಾಗಿತ್ತು.

ಬರ್ನಾರ್ಡ್ ಶಾ ಮತ್ತು ಅವನಂಥ ಬುದ್ಧಿವಂತ ಜನ ಕ್ರಿಕೆಟ್‌ಅನ್ನು ಬೇಕಾದಷ್ಟು ಲೇವಡಿ ಮಾಡಿದರು. 'ಸೋಮಾರಿಗಳ ಆಟ, ಮೂರ್ಖರ ಕೂಟ' ಎಂದು ಜರಿದರು. ಆದರೂ ಕ್ರಿಕೆಟ್‌ಗೆ ಏನೋ ಆಕರ್ಷಣೆ ಇದ್ದೇ ಇತ್ತು. ಆರ್. ಕೆ. ನಾರಾಯಣ್ ಸೃಷ್ಟಿಸಿದ ಮಾಲ್‌ಗುಡಿಯ ಪುಟ್ಟ ಹುಡುಗ, ಪಂಚೆ ಜುಟ್ಟು ಇದ್ದಂಥ ಪ್ರಚಂಡ ಬಾಲಕ, ಕ್ರಿಕೆಟಿಗ ಸ್ವಾಮಿಯನ್ನೇ ಬೇಕಾದರೂ ಕೇಳಿ!

**ಮುಗ್ಧತೆಯ ಯುಗ**

ನಾವೆಲ್ಲಾ ಹುಡುಗರಿದ್ದಾಗ ರೇಡಿಯೋ ಇರುವ ಮನೆಗೆ ಎಲ್ಲ ಸ್ನೇಹಿತರೂ ವಕ್ಕರಿಸಿಕೊಂಡು ಕಾಮೆಂಟರಿ ಕೇಳುತ್ತಾ, ಅಷ್ಟಿಷ್ಟು ಇಂಗ್ಲಿಷ್‌ನೊಂದಿಗೆ ಕ್ರಿಕೆಟ್ ಕಲಿತೆವು. ಪ್ರಸನ್ನ, ಚಂದ್ರಶೇಖರ್, ಕುಂದರನ್‌ರನ್ನು ಪ್ರೀತಿಸುತ್ತಾ, ವೆಂಕಟರಾಘವನ್ ಮಿಲ್ಖಾ ಸಿಂಗ್‌ರನ್ನು ಬೈದುಕೊಳ್ಳುತ್ತಾ, ಹಾಲ್–ಗ್ರಿಫಿತ್–ಸೋಬರ್ಸ್‌ಗೆ ಬೆದರುತ್ತಾ ಬೆಳೆದವು. ಸೆಂಟ್ರಲ್ ಕಾಲೇಜು ಮೈದಾನದಲ್ಲಿ ಒಂದು ರೂಪಾಯಿ ಕೊಟ್ಟು ದಿನವಿಡೀ ಬಿಸಿಲಲ್ಲಿ ಬೆಂದು ಆಟ ನೋಡಿ ಬರುತ್ತಿದ್ದೆವು. ಮನೆಯ ಬಳಿ, ಮೈದಾನದಲ್ಲಿ ರಸ್ತೆಯಲ್ಲಿ ಮುರಿದ ಹಲಗೆಯ ಬ್ಯಾಟುಗಳಲ್ಲಿ, ಬಿದಿರಿನ ವಿಕೆಟ್‌ಗಳಲ್ಲಿ ಆಡಿದೆವು.

ಅಂಥ ಪರಿಸರದಲ್ಲೇ ಕಾಡುವ ಬಡತನದಲ್ಲೇ ಜಿ. ಆರ್. ವಿಶ್ವನಾಥರಂಥ ಪ್ರತಿಭಾವಂತರು ಅರಳಿಕೊಂಡರು. ಆಟವು ನಮಗೆ ಒಂದಿಷ್ಟು ಒಳ್ಳೆಯತನವನ್ನು ಹೇಳಿಕೊಡುತ್ತಿತ್ತು. ಎದುರಾಳಿ ಆಟಗಾರನ ಆಟವನ್ನೂ ಮೆಚ್ಚಿ ಚಪ್ಪಾಳೆ ಹೊಡೆಯಬೇಕು, ಅವನಿಗೆ ಶುಭ ಹಾರೈಸಬೇಕು. ವೈರಿ ವಿಫಲನಾದಾಗ ಅವನನ್ನು 'ಬೆಟರ್ ಲಕ್ ನೆಕ್ಸ್ಟ್ ಟೈಮ್' ಎಂದು ಹುರಿದುಂಬಿಸಬೇಕು. ನಾನು ಔಟಾದೆ ಎಂದು ಗೊತ್ತಾದರೆ ಅಂಪೈರ್ ಏನನ್ನುತ್ತಾನೋ ನೋಡೋಣ ಎಂದು ಕಳ್ಳಾಟ ಆಡುತ್ತಾ ನಿಲ್ಲಬಾರದು. ಒಬ್ಬ ಜಂಟಲ್‌ಮನ್ ಆಗಿ ಮಾತನಾಡದೆ ನಡೆಯಬೇಕು, 'ವಾಕರ್' ಅನಿಸಿಕೊಳ್ಳಬೇಕು!

ಟೆಸ್ಟ್‌ಮ್ಯಾಚ್‌ಗಳು ಐದು ದಿನ ಆಟ ಮತ್ತು ಮಧ್ಯದಲ್ಲಿ ಒಂದು ವಿಶ್ರಾಂತಿಯ ದಿನವೂ ಸೇರಿದಂತೆ ಆರು ದಿನಗಳ ಕಾಲ ನಡೆಯುತ್ತಿದ್ದವು. ಕ್ರಿಕೆಟ್ ಟೀಕಾಕಾರರು ಬಯ್ಯದಿದ್ದರೆ ಒಂದು ಹೋಲಿಕೆ ಕೊಡುತ್ತೇನೆ ನೋಡಿ, ಅದು ವಿಸ್ತಾರವಾದ ಧ್ರುಪದ್ ಗಾಯನದಂತೆ. ಈ ಒನ್‌ಡೇ ಮ್ಯಾಚ್ ಅನ್ನುವುದು ಖಯಾಲ್ ಅಥವಾ ಗಝಲ್ ಅನ್ನಿ. ಇನ್ನು ಈ ೨೦–೨೦ ಎಂಬ ಆಟ, ವಿಚಿತ್ರ ವೇಷ ಧರಿಸಿ ರಂಗದ ಮೇಲೆ ಕುಣಿಯುತ್ತಾ ಹಾಡುವ ಕೆಟ್ಟ ಸಾಹಿತ್ಯದ ಅಬ್ಬರದ ಚಿತ್ರಗೀತೆಯಂತೆ ಎಂದು ನನ್ನ ಭಾವನೆ!

ಇರಲಿ, ಕ್ರಿಕೆಟ್‌ಗೆ ಇರುವ ಅಪಾರ ಜನಪ್ರಿಯತೆಯಿಂದಾಗಿ ಅದರ ಆಟಗಾರರಿಗೆ ತಾರಾಪಟ್ಟ ಬರಲಾರಂಭಿಸಿತು. ತಾರೆಯರು ಕ್ರಿಕೆಟ್ ಆಟಗಾರರನ್ನು ಮದುವೆಯಾಗಲು ಇಷ್ಟಪಡುತ್ತಿದ್ದರು. ಅವರ ಆಟೋಗ್ರಾಫ್‌ಗೆ ಹುಡುಗರು ಮುಗಿಬೀಳುತ್ತಿದ್ದರು. ಒಂದಷ್ಟು ಜಾಹಿರಾತು ಕಂಪೆನಿಗಳು ಕ್ರಿಕೆಟ್‌ನ ಹಿಂದೆ ಬಿದ್ದದ್ದೂ ಉಂಟು. ಆದರೂ ಅಂದಿನ ರಣಜಿ ಆಟಗಾರ ಒಂದು ಮೂರುದಿನದ ಮ್ಯಾಚಿಗೆ ೧೫೦ರೂ ಪಡೆದರೆ ಹೆಚ್ಚು. ಮೂರನೇ ದರ್ಜೆ ರೈಲಿನಲ್ಲಿ ಪ್ರಯಾಣ. ಟೆಸ್ಟ್ ಆಟಗಾರನಿಗೆ ಐನೂರು ರೂಪಾಯಿ, ಚಿತ್ರಾನ್ನ–ಮೊಸರನ್ನ ಸಿಗುತ್ತಿತ್ತೇನೋ! ಆದ್ದರಿಂದಲೇ ನಾನು ಹೇಳುವುದು ಅದು ಕ್ರಿಕೆಟ್‌ನ ಬಾಲ್ಯ, 'ಮುಗ್ಧತೆಯ ಯುಗ'. ಆದರೆ ಇದು ಎಷ್ಟು ಕಾಲ ನಡೆದೀತು. ಕ್ರಿಕೆಟ್‌ನ ಲೋಕಪ್ರಿಯತೆ, ಆಕರ್ಷಣೆ ಇವುಗಳನ್ನು ವ್ಯಾಪಾರಸ್ಥರು ಸುಮ್ಮನೆ ಬಿಡುತ್ತಾರೆಯೇ! ಚಿನ್ನದ ಮೊಟ್ಟೆ ಇರುವ ಕೋಳಿಯನ್ನು ಬಚ್ಚಿಡಲು ಸಾಧ್ಯವೇ!

**ಪ್ಯಾಕರ್‌ನ ಪಾಪದ ಹಣ್ಣು!**

*"ಬೂರ್ಷ್ವಾವರ್ಗವು ಇದುವರೆಗೂ ಗೌರವ ಗಳಿಸಿಕೊಂಡಿದ್ದ, ಜನತೆ ಅಭಿಮಾನದಿಂದ ನೋಡುತ್ತಿದ್ದ ಎಲ್ಲ ವೃತ್ತಿಗಳ ಪ್ರಭಾವಳಿಯನ್ನು ಹರಿದು ಚಿಂದಿಮಾಡಿದೆ. ವೈದ್ಯ, ವಕೀಲ, ಪುರೋಹಿತ, ಕವಿ, ವಿಜ್ಞಾನಿ ಎಲ್ಲರನ್ನೂ ತನ್ನ ಕೂಲಿಗೆ ಕೈ ಒಡ್ಡಬೇಕಾದ ಬಾಡಿಗೆ ಕೆಲಸಗಾರರ ಮಟ್ಟಕ್ಕಿಳಿಸಿದೆ."*

*– ಕಾರ್ಲ್ ಮಾರ್ಕ್ಸ್, ಫ್ರೆಡರಿಕ್ ಏಂಗೆಲ್ಸ್ (ಕಮ್ಯುನಿಸ್ಟ್ ಪಾರ್ಟಿ ಪ್ರಣಾಳಿಕೆ).*

ಇವರೆಲ್ಲರಿಗೂ ಆದದ್ದು ಕ್ರೀಡಾಪಟುವಿಗೆ ಆಗದಿರುವುದು ಸಾಧ್ಯವೇ. ಕಾಡಿನಲ್ಲಿ ಕೊಳಲು ನುಡಿಸುವವನು, ನಾಡಿನಲ್ಲಿ ಆನಂದದಿಂದ ಬಾಗುತ್ತಾ ಬಳುಕುತ್ತಾ ಮನರಂಜನೆ ನೀಡುವ ಮುಗ್ಧ ದೊಂಬರವನು, ಯಾರೇ ಆಗಲಿ ಅವರ ಪ್ರದರ್ಶನದಿಂದ ಹಣ ಮಾಡುವ ಸಾಧ್ಯತೆ ಇದ್ದರೆ ಬಂಡವಾಳಗಾರರು ಅವನನ್ನು 'ಮಹಾಪ್ರಭುಗಳೇ ಇತ್ತ ಬನ್ನಿ' ಎಂದು ಸರಪಳಿಯನ್ನೂ ಕಿರೀಟವನ್ನೂ ಏಕಕಾಲದಲ್ಲಿ ತೊಡಿಸಿ ಮಾರುಕಟ್ಟೆ ಎಂಬ ವೇದಿಕೆಗೆ ಕರೆತರುತ್ತಾರೆ. ಫುಟ್‌ಬಾಲ್, ಬೇಸ್‌ಬಾಲ್‌ಗೆ ಒದಗಿದ್ದ ದುರಂತ ಕ್ರಿಕೆಟ್‌ಗೂ ಎರಗಬೇಕಿತ್ತು. ಅದಕ್ಕೆ ಕಾರಣಪುರುಷನಾದವನೇ ಕೆರಿ ಪ್ಯಾಕರ್.




***ಹಗರಣದಲ್ಲಿ ಹ್ಯಾನ್ಸಿ ಕ್ರೋನ್ಯೆ***

ಆಸ್ಟ್ರೇಲಿಯಾದ 'ಚಾನೆಲ್ ನೈನ್' ಟೆಲಿವಿಷನ್ ಸಂಸ್ಥೆಯನ್ನು ನಡೆಸುತ್ತಿದ್ದ ಕೆರಿ ಪ್ಯಾಕರ್ ಇಂಗ್ಲೆಂಡ್–ಆಸ್ಟ್ರೇಲಿಯಾಗಳ ನಡುವೆ ನಡೆಯುವ ಹೆಸರಾಂತ ಜಿದ್ದಾ–ಜಿದ್ದಿ ಟೆಸ್ಟ್ ಸರಣಿಯ ಪ್ರಸಾರದ ಎಲ್ಲ ಹಕ್ಕುಗಳನ್ನು ತನಗೆ ನೀಡಬೇಕೆಂದು ಆಗ್ರಹಪಡಿಸಿದ. ಅದಕ್ಕೆ ಅದರ ಮೇಲೆ ಏಕಸ್ವಾಮ್ಯವನ್ನು ಹೊಂದಿದ್ದ ಆಸ್ಟ್ರೇಲಿಯನ್ ಬ್ರಾಡ್‌ಕಾಸ್ಟಿಂಗ್ ಕಾರ್ಪೊರೇಷನ್ (ಎಬಿಸಿ) ಒಪ್ಪಲಿಲ್ಲ. ಅಲ್ಲಿನ ಕ್ರಿಕೆಟ್ ಆಸ್ಟ್ರೇಲಿಯಾ ಎಂಬ ಅಧಿಕೃತ ಸಂಸ್ಥೆಗೇ ಸೆಡ್ಡುಹೊಡೆದ ಪ್ಯಾಕರ್ ೧೯೭೭ರಲ್ಲಿ ಗುಟ್ಟಾಗಿ ಅಂತರರಾಷ್ಟ್ರೀಯ ಆಟಗಾರರನ್ನು ಖರೀದಿಸಿ ಸಮಾನಾಂತರ ಸರಣಿ ನಡೆಸುವ ಯೋಜನೆಯನ್ನು ಹೆಣೆದ. ಕ್ಲೈವ್‌ಲಾಯ್ಡ್, ಟೋನಿ ಗ್ರೆಗ್, ಇಯಾನ್ ಚಾಪೆಲ್, ಲಿಲ್ಲಿ, ಇಮ್ರಾನ್ ಖಾನ್ ಮೊದಲಾದ ಎಲ್ಲಾ ಘಟಾನುಘಟಿಗಳೂ ಬಲೆಗೆ ಬಿದ್ದರು. ಈಡನ್ ಉದ್ಯಾನವನದಲ್ಲಿ ಆ್ಯದಂ–ಈವ್‌ರಂತೆ ಮುಗ್ಧರಾಗಿ ಓಡಾಡಿಕೊಂಡಿದ್ದ ಆಟಗಾರರು ಪ್ಯಾಕರ್ ನೀಡಿದ ಪಾಪದ ಸೇಬನ್ನು ತಿಂದುಬಿಟ್ಟರು. ಇನ್ನು ಜಗತ್ತು ಮುಂಚಿನ ಹಾಗೆ ಇರುವಂತಿಲ್ಲ.

**ವಿಶ್ವಾಮಿತ್ರ ಸೃಷ್ಟಿ**

ಕ್ರಿಕೆಟ್ ಜಗತ್ತನ್ನು ಆಳುತ್ತಿದ್ದ ಸಂಸ್ಥೆಯೆಂದರೆ ಇಂಟರ್‌ನ್ಯಾಷನಲ್ ಕ್ರಿಕೆಟ್ ಕೌನ್ಸಿಲ್ (ಐ.ಸಿ.ಸಿ.). ಇಂಗ್ಲೆಂಡಿನಲ್ಲಿ ಅದರ ಕೇಂದ್ರ. ಯಾವುದೇ ರಾಷ್ಟ್ರಗಳ ನಡುವಿನ ಆಟಕ್ಕೆ ಅಧಿಕೃತ ಮೊಹರು

ಅಲ್ಲಿಂದಲೇ ಬೀಳಬೇಕು. ಇಡೀ ಜಗತ್ತಿಗೆ ಕ್ರಿಕೆಟ್ ನೀತಿ–ನಿಯಮ ನಿರೂಪಿಸುತ್ತಿದ್ದದ್ದು ಅವರೇ. ಅವರು ಮಾನ್ಯತೆ ನೀಡಿದರೆ ಮಾತ್ರ ಅದು ಟೆಸ್ಟ್ ಪಂದ್ಯ, ವ್ಯಾಪಾರಿ ಹಕ್ಕು, ಮಾನ್ಯತೆ ಎಲ್ಲಕ್ಕೂ ಅವರ ಅಂಕಿತ ಬೇಕಾಗಿತ್ತು. ಕ್ರಿಕೆಟ್ ಆಸ್ಟ್ರೇಲಿಯಾ ಸಂಸ್ಥೆ ಅಥವಾ ನಮ್ಮ ಬಿಸಿಸಿಐ (ಬೋರ್ಡ್ ಆಫ್ ಕಂಟ್ರೋಲ್ ಫಾರ್ ಕ್ರಿಕೆಟ್ ಇನ್ ಇಂಡಿಯಾ) ಇವೆಲ್ಲಾ ಐಸಿಸಿ ಕೆಳಗೆ ನೋಂದಾಯಿತ, ಮಾನ್ಯತೆ ಗಿಟ್ಟಿಸಿಕೊಂಡ ಸಂಸ್ಥೆಗಳು. ಇವರಿಗೆ ಪ್ಯಾಕರ್ ಸೆಡ್ಡು ಹೊಡೆದಿದ್ದ. ಇವರು ಅವನ ಜೊತೆ ಹೋದ ಆಟಗಾರರಿಗೆ, ಅಧಿಕಾರಿಗಳಿಗೆ ಬಹಿಷ್ಕಾರ ಹಾಕುತ್ತೇವೆ ಎಂದು ಹೆದರಿಸಿದರು. ಆದರೆ ಆಗಲೇ ಅಡ್ವಾನ್ಸ್ ಪಡೆದು ಹಣದ ವಾಸನೆ ಹಿಡಿದಿದ್ದ ಹೆಸರಾಂತ ಆಟಗಾರರು ಐಸಿಸಿ ಬೆದರಿಕೆಗೆ 'ಕ್ಯಾರೆ' ಎನ್ನಲಿಲ್ಲ. ಯುದ್ಧ ಶುರುವಾಯಿತು.

ಪ್ಯಾಕರ್ ವರ್ಲ್ಡ್ ಇಲೆವನ್ ಮತ್ತು ಆಸ್ಟ್ರೇಲಿಯಾ ಎಂಬ ತಂಡಗಳನ್ನು ರಚಿಸಿ ವಿಪರೀತ ಪ್ರಚಾರ ಮಾಡಿ ಜನರನ್ನು ಕ್ರೀಡಾಂಗಣಕ್ಕೆ ಆಹ್ವಾನಿಸಿದ. ಕೆಲಸ ಮುಗಿಸಿಕೊಂಡು ಬರುವ ಉದ್ಯೋಗಸ್ಥರೂ ನೋಡಲಿ ಎಂದು ಹಗಲು–ರಾತ್ರಿ ಪಂದ್ಯಗಳನ್ನು ಆರಂಭಿಸಿದ. ನಿಧಾನಗತಿಯ ಆಟದ ಬದಲು ವೇಗವಾದ, ತೀರ್ಮಾನ ಬರಲೇಬೇಕಾದ ಒಂದು ದಿನದ ಪಂದ್ಯಗಳನ್ನು ಹೆಚ್ಚು ಮಾಡಿದ. ಹೊನಲು ಬೆಳಕಿನ ಪಂದ್ಯ, ಅತ್ಯುತ್ತಮ ಟಿ.ವಿ. ಪ್ರಸಾರ, ಆಟಗಾರರಿಗೆ ಬಣ್ಣಬಣ್ಣದ ಪೋಷಾಕು ಎಲ್ಲವನ್ನೂ ಜಾರಿ ಮಾಡಿದ. ಐಸಿಸಿಯ ಅಧಿಕೃತ ಜಗತ್ತಿಗೆ ಪರ್ಯಾಯವಾದ ವಿಶ್ವಾಮಿತ್ರ ಪ್ರತಿಸೃಷ್ಟಿ ಇದು. ಇದರ ಹಿಂದೆ ಇದ್ದದ್ದು ವಿಶ್ವಾಮಿತ್ರನ ಸ್ವಾಭಿಮಾನವಲ್ಲ. ಹಠವಲ್ಲ, ಕೇವಲ ಹಣದ ಥೈಲಿಯ ಕುಣಿತ.

ಒಟ್ಟಿನಲ್ಲಿ, ಇದೊಂದು ದೊಡ್ಡ ಆಘಾತ. ಮೊದಮೊದಲು ಅಧಿಕೃತ ಕ್ರಿಕೆಟ್‌ನ ಬೆಂಬಲಿಗರು ಇದನ್ನು 'ಪಾಯಿಜಾಮ ಕ್ರಿಕೆಟ್' ಎಂದು ತಮಾಷೆ ಮಾಡಿದರೂ, ಇದರ ಮುಂದೆ ಅಧಿಕೃತ ಕ್ರಿಕೆಟ್ ಸಪ್ಪಗಾಯಿತು. ಕಡೆಗೆ ಅಧಿಕೃತ ಕ್ರಿಕೆಟ್ ಪ್ಯಾಕರ್‌ನೊಂದಿಗೆ ರಾಜಿ ಮಾಡಿಕೊಂಡಿತು. ಅವನ ವಿಧಾನಗಳನ್ನು ತಾನೂ ಅನುಷ್ಠಾನಕ್ಕೆ ತಂದಿತು. ಕ್ರಿಕೆಟ್‌ನಲ್ಲಿ ಹೊಸ ಶಕೆ ಆರಂಭವಾಯಿತು. ಕ್ರಿಕೆಟ್ ಮೊದಲಿನ ಆಟವಾಗಿ ಉಳಿಯಲಿಲ್ಲ. ಕೋಲಾಗಳಂತೆ, ಕೆ.ಎಫ್.ಸಿ. ಚಿಕನ್‌ನಂತೆ ಕ್ರಿಕೆಟ್ ಸಹ ಮಾರಾಟದ ಸರಕಾಯಿತು.

**ವಿಶ್ವಕಪ್ ಎಂಬ ಹೊಸ ಮಾರುಕಟ್ಟೆ**

೧೯೭೫ರಲ್ಲಿ ಆರಂಭವಾದ ಏಕದಿನ ಪಂದ್ಯಗಳ ಟೂರ್ನಮೆಂಟಿಗೆ ಈಗ ಹೊಸ ಕಿಮ್ಮತ್ತು ಬಂತು. ನೀರಸವಾದ ಡ್ರಾಗಳಲ್ಲಿ ಮುಗಿಯುತ್ತಿದ್ದ ಆರು ದಿನಗಳ ಪೇಲವ ಪಂದ್ಯಾವಳಿಗಳ ಜಾಗದಲ್ಲಿ ಹೊಸ 'ಇನ್‌ಸ್ಟಂಟ್ ಕ್ರಿಕೆಟ್' ಎಂಬ ಮಾಯಾಂಗನೆ ಕಂಡುಬಂದಳು. ಮೊದಲ ಎರಡು ವಿಶ್ವಕಪ್‌ಗಳನ್ನು ದೈತ್ಯರಿದ್ದ ವೆಸ್ಟ್ ಇಂಡೀಸ್ ತಂಡ ಗೆದ್ದುಕೊಂಡಿದ್ದರಲ್ಲಿ ವಿಶೇಷವೇನೂ ಇರಲಿಲ್ಲ. ಆದರೆ ಅದು ಆಸಕ್ತಿಯನ್ನು ಕೆರಳಿಸಿತ್ತು.

## INDIAN PATHETIC LEAGUE

೧೯೭೫, ೧೯೭೯ರ ಟೂರ್ನಿಯಲ್ಲಿ ಯಾವಾಗಲೂ, ಪಟ್ಟಿಯ ಕೊನೆಯಲ್ಲೇ ಇದ್ದ ಭಾರತ ಎಲ್ಲರ ಹಾಸ್ಯಕ್ಕೆ ತುತ್ತಾಗಿತ್ತು. ಆದರೆ ಯಾರು ಎಣಿಸದೇ ಇದ್ದ ದುರ್ಬಲ ಭಾರತ ತಂಡ ೧೯೮೩ರಲ್ಲಿ ಕಪ್ ಗೆದ್ದಾಗ ಎಲ್ಲರಿಗೂ ಅದು ಆಶ್ಚರ್ಯಾಘಾತದ ವಿಷಯ. ಅದೇನೇ ಇರಲಿ ,ಅದರೊಂದಿಗೆ ಭಾರತದಲ್ಲಿ ಕ್ರಿಕೆಟ್ ಉನ್ಮಾದ ಹೊಸ ಎತ್ತರಕ್ಕೆ ಹೋಯಿತು. ಕೋಟ್ಯಂತರ ಜನ ಟಿ.ವಿ.ಗೆ ಅಂಟಿಕೊಂಡು ಕೂರಲಾರಂಭಿಸಿದರು. ಅದರಲ್ಲೂ ಮಧ್ಯಮವರ್ಗದ ಮನೆಗಳೊಳಕ್ಕೆ ಕಲರ್ ಟಿ.ವಿ. ಪ್ರವೇಶ ಮಾಡಿದ ಹೊತ್ತು ಅದು.

**ಭಾರತದ ಮುಂಜಿಗಿತ**

ಟಿ.ವಿ. ವ್ಯಸನಕ್ಕೆ ತುತ್ತಾದ ಭಾರತೀಯ ಮಧ್ಯಮ ವರ್ಗದ ಸಂಖ್ಯೆ ಬಹಳ ದೊಡ್ಡದು. ಎಷ್ಟರ ಮಟ್ಟಿಗೆ ಎಂದರೆ ಉಳಿದ ಎಲ್ಲಾ ದೇಶಗಳಲ್ಲಿ ಕ್ರಿಕೆಟ್ ನೋಡುವವರ ಸಂಖ್ಯೆಗಿಂತ ಭಾರತೀಯರ ಸಂಖ್ಯೆ ಹೆಚ್ಚು. ಹಾಗಾಗಿ ಜಾಹಿರಾತಿನ ಹಣದ ಹೊಳೆಯೇ ಕ್ರಿಕೆಟ್ ಪರವಾಗಿ ಭಾರತದಲ್ಲಿ ಹರಿಯುತ್ತದೆ. ತತ್ಫಲವಾಗಿ ಅಹಂಕಾರದಿಂದ ಬೀಗುತ್ತಿದ್ದ ಐಸಿಸಿ ಈಗ ಹೊಸ ದೊಣೆನಾಯಕನ ಎದುರು ಕಾಲೂರುವಂತಾಯಿತು. ಕಳೆದ ಎರಡು–ಮೂರು ದಶಕಗಳಲ್ಲಿ ಕ್ರಿಕೆಟ್ ವಿಶ್ವದ ದೊಡ್ಡಣ್ಣ ಇಂಗ್ಲೆಂಡ್ ಅಲ್ಲ, ಅಹಂಕಾರಿ ಆಸ್ಟ್ರೇಲಿಯಾ ಅಲ್ಲ! ಅದು 'ಬಲ್ಲಿದ' ಭಾರತ! ೨೦೧೫–೨೦೨೩ರ ಅವಧಿಯ ಜಾಗತಿಕ ಟಿ.ವಿ. ಹಕ್ಕುಗಳ ಮಾರಾಟದ ಮೊತ್ತ ಮೂರು ಬಿಲಿಯನ್ ಡಾಲರ್ ಇದ್ದರೆ, ಅದರಲ್ಲಿ ಭಾರತದ ಕೊಡುಗೆ ೨.೧ ಬಿಲಿಯನ್ ಅಂತೆ. ಹಾಗಾಗಿ ಲಾಭದ ಸಿಂಹಪಾಲು ಸಹ ಭಾರತಕ್ಕೆ. ಭಾರತ ಆರುನೂರು ಮಿಲಿಯನ್ ಡಾಲರ್‌ಗೂ ಹೆಚ್ಚು ಲಾಭದ ಪಾಲನ್ನು ಪಡೆಯುವಾಗ ಇಂಗ್ಲೆಂಡ್ ೧೪೦ ಮಿಲಿಯನ್‌ಗೆ, ಆಸ್ಟ್ರೇಲಿಯಾ ಜುಜುಬಿ ೮೮ ಮಿಲಿಯನ್ ಡಾಲರ್‌ಗೆ ತೃಪ್ತಿಪಡಬೇಕಾಗುತ್ತದೆ.

ಇಷ್ಟೆಲ್ಲಾ ಹಣ ಇರುವ ಬಿಸಿಸಿಐ ಎಂಬ ಭಾರತದ ಕ್ರಿಕೆಟ್ ಸಂಸ್ಥೆ ಇಂದು ಜಗತ್ತಿನ ಅತ್ಯಂತ ಬಲಾಢ್ಯ, ಶ್ರೀಮಂತ ಸಂಸ್ಥೆ.

**ಬದಲಾದ ಆಟದ ಸ್ವರೂಪ**

ವಿಶ್ವಕಪ್ ವಿಜಯದ ನಂತರ ಭಾರತದಲ್ಲಿ ಆಟದ ಚಹರೆಯೇ ಸಂಪೂರ್ಣ ಬದಲಾಯಿತು. ವಿಪರೀತ ಹಣ ಇರುವ ರಾಜ್ಯಮಟ್ಟದ ಮತ್ತು ರಾಷ್ಟ್ರಮಟ್ಟದ ಕ್ರಿಕೆಟ್ ಬೋರ್ಡ್‌ಗಳಲ್ಲಿ ರಾಜಕಾರಣಿಗಳು ಆಯ್ಕೆಯಾಗಿ ಮಿಂಚ ತೊಡಗಿದರು. ಶರದ್ ಪವಾರ್, ಸಿಂಧಿಯಾ, ಜೇಟ್ಲಿ ಹೀಗೆ ಕಾಂಗ್ರೆಸ್, ಬಿಜೆಪಿ ಮೊದಲಾದ ವಿವಿಧ ಪಕ್ಷಗಳ ಜನ ಕ್ರಿಕೆಟ್‌ನಲ್ಲಿ ಕೈಯಾಡಿಸಿ ಕೊಂಡು ಬಂದಿದ್ದಾರೆ.

ಕ್ರಿಕೆಟ್ ಈಗ 'ಚಳಿಗಾಲದ ಆಟ' ಎಂಬಂತೆ ಇಲ್ಲ. ವರ್ಷಪೂರ್ತಿ ಕ್ರಿಕೆಟ್ ಇರುತ್ತದೆ. ವಿದೇಶ ಪ್ರವಾಸವು ಈಗ ಅಪರೂಪ ಅಲ್ಲ, ದಿನನಿತ್ಯದ ರಂಪ. ಟೆಸ್ಟ್, ಏಕದಿನ, ಟ್ವೆಂಟಿ–ಟ್ವೆಂಟಿ, ಅಂತರರಾಷ್ಟ್ರೀಯಗಳಲ್ಲದೆ ಐಪಿಎಲ್ ಎಂಬ ಹೊಸ ಟೂರ್ನಿ ನಡೆಯುತ್ತಿದೆ. ಆಟಗಾರರು ಬೇರೆ ಉದ್ಯೋಗ ಬಿಟ್ಟು ವೃತ್ತಿಪರರಾಗಿದ್ದಾರೆ. ವಿಪರೀತ ಹಣ ಗಳಿಸುತ್ತಿದ್ದಾರೆ. ಯುವರಾಜ್‌ಸಿಂಗ್ ಆರು ಸಿಕ್ಸರ್ ಹೊಡೆದಾಗ ಸಿಕ್ಕ ಬಹುಮಾನ ೧ ಕೋಟಿ. ಐಪಿಎಲ್ ಹರಾಜಿನಲ್ಲಿ ೬–೮ ಕೋಟಿಗಳಿಗೆ ಮಾರಾಟವಾಗುವ ಆಟಗಾರರಿದ್ದಾರೆ.

ಜಾಹಿರಾತು ಸರ್ವಾಂತರ್ಯಾಮಿಯಾಗಿದೆ.




Bet on us - BUY a Great Match

*ಹಣದಲ್ಲಿ ಮುಳುಗಿದ ಕ್ರಿಕೆಟ್*

ಇನ್ನಿಂಗ್ಸ್ ಮುಗಿದ ಮೇಲೆ, ಆಟದ ನಡುವೆ, ಓವರ್‌ಗಳ ಮಧ್ಯೆ, ಆಟಕ್ಕೆ ಮುನ್ನ, ಮುಗಿದಮೇಲೆ ಜಾಹಿರಾತಿನ ಜಿಟಿಜಿಟಿ ಮಳೆ ಸುರಿಯುತ್ತಿರುತ್ತದೆ. ಆಟಗಾರನ ಶರ್ಟಿನ ಮೇಲೆ, ಬ್ಯಾಟಿನ ಮೇಲೆ, ವಿಕೆಟ್ ಮೇಲೆ, ಮೈದಾನದ ಮೇಲೆ ಎಲ್ಲಾ ಕಡೆ ಜಾಹಿರಾತು ದೇವರಂತೆ ಪ್ರತ್ಯಕ್ಷ.

ಇದರೊಂದಿಗೆ ಮೈದಾನದಲ್ಲಿನ ರೀತಿ–ರಿವಾಜು, ಸಭ್ಯತೆ, ಕ್ರೀಡಾಸ್ಫೂರ್ತಿ ಎಲ್ಲ ಮಾಯವಾದವು. ಏಕೆಂದರೆ ಈಗ ಕ್ರೀಡೆಯಲ್ಲಿರುವುದು ಬಂಡವಾಳಶಾಹಿ ವ್ಯಾಪಾರದ ಸೂತ್ರ, "ಎಲ್ಲರೂ ಅವರಿಗಾಗೇ ಬದುಕಬೇಕು, ಹಿಂದೆ ಉಳಿದವನನ್ನು ದೆವ್ವ ಹಿಡಿದು ತಿನ್ನಲಿ." "ಬಲಿಷ್ಠರೇ ಬದುಕಲು ಯೋಗ್ಯರು."

**ಬೆಟ್ಟಿಂಗ್ ಭೂತದ ಪ್ರವೇಶ**

೧೯೮೧ರಲ್ಲಿ ಲಿಲಿ ಮತ್ತು ಮಾರ್ಶ್ ಎಂಬ ಇಬ್ಬರು ಆಸ್ಟ್ರೇಲಿಯಾದ ಆಟಗಾರರು ಮೊದಲಬಾರಿ ತಾವೇ ಆಡುತ್ತಿದ್ದ ಪಂದ್ಯ ಒಂದರ ಮೇಲೆ ಬಾಜಿ ಕಟ್ಟಿದ್ದರು. ಅದರಿಂದ ಹಣ ಮಾಡಿಕೊಂಡರು. ಆದರೆ ಆಗ ಅದು ಅಪರಾಧ ಎನಿಸಿರಲಿಲ್ಲ. ಆಮೇಲಿನ ದಿನಗಳಲ್ಲಿ ಇದೊಂದು ಬೃಹತ್ ದಂಧೆಯಾಗಿ ಬೆಳೆದಿದೆ. ಮ್ಯಾಚಿನಲ್ಲಿ ಯಾರು ಗೆಲ್ಲುತ್ತಾರೆ ಎಂಬುದರ ಬಗ್ಗೆ 'ಬೆಟ್' ಮಾಡಬಹುದು. ಅದಕ್ಕೆ ನೀವು ಒಡ್ಡುವ ಹಣವನ್ನು ಸ್ವೀಕರಿಸಿ, ಗೆದ್ದರೆ ಹಣಕೊಡಲು 'ಬುಕ್ಕಿ'ಗಳು ಇರುತ್ತಾರೆ. ಬಲಿಷ್ಠ ಟೀಮಿನ ಮೇಲೆ ಹಣ ಕಟ್ಟಿದರೆ ಹೆಚ್ಚು ಲಾಭವಾಗದು. ಆದರೆ ಯಾರೂ ನಿರೀಕ್ಷಿಸದಿದ್ದ ತಂಡದ ಮೇಲೆ ಹಣ ಹಾಕಿದರೆ ನೀವು ಒಂದೇ ದಿನದಲ್ಲಿ ಲಕ್ಷಾಧೀಶರೂ ಆಗಬಹುದು. ಬುಕ್ಕಿಗಳ ಮೇಲೆ ಇನ್ನೂ ದೊಡ್ಡ ಬಾಸ್‌ಗಳಿರುತ್ತಾರೆ. ಕಡೆಗೆ ತೀರಾ ಉನ್ನತ ಸ್ಥಾನದಲ್ಲಿ ಇರುವವನು ಯಾರು ಎಂಬುದು ಯಾರಿಗೂ ಗೊತ್ತಿರುವುದಿಲ್ಲ. ಸಾಮಾನ್ಯವಾಗಿ ಇವೆಲ್ಲಾ ಅಪರಾಧದ ಸಿಂಡಿಕೇಟ್‌ಗಳಾಗಿರುತ್ತವೆ.



*ನವನಗರದ ಜಾಮ್‌ಸಾಹಿಬ್ – ರಣ್‌ಜಿತ್‌ಸಿಂಗ್*

ಆದರೆ ಇಷ್ಟೇ ಆದರೆ ಬೆಟ್ಟಿಂಗ್ ದೊಡ್ಡ ಅಪರಾಧವಾಗುತ್ತಿರಲಿಲ್ಲ. ನಂತರ ಬೆಟ್‌ಗಳನ್ನು ಮೊದಲ ಹತ್ತು ಓವರ್‌ಗಳಲ್ಲಿ ಎಷ್ಟು ರನ್ ಹೊಡೆಯುತ್ತಾರೆ, ಮೊದಲ ವಿಕೆಟ್ ಯಾವಾಗ ಬೀಳಬಹುದು, ಈ ಬಾರಿ ಪಂದ್ಯ ಪುರುಷೋತ್ತಮ ಯಾರಾಗುತ್ತಾನೆ. ಹೀಗೆ ಅನೇಕ ಸಣ್ಣ ಅಂಶಗಳಿಗೂ ಬೆಟ್ ಕಟ್ಟುವುದು ಶುರುವಾಯಿತು.

ಇದರ ಆಚೆಗೆ ಮ್ಯಾಚ್ ಫಿಕ್ಸಿಂಗ್ ಎಂಬ ಅಪರಾಧ ಹುಟ್ಟಿಕೊಂಡಿತ್ತು. ಲಕ್ಷಾಂತರ ಜನರಿಂದ ಹಣ ಕಟ್ಟಿಸಿಕೊಂಡ ಬುಕ್ಕಿಗಳು ಈಗ ತಮಗೆ ಲಾಭ ಬರುವಂತೆ ಪಂದ್ಯದ ಫಲಿತಾಂಶವನ್ನೇ ಗುಟ್ಟಾಗಿ ತಿರುಚಿಬಿಟ್ಟರೆ ಹೇಗೆ ಎಂದು ಯೋಚಿಸಲಾರಂಭಿಸಿದರು. ಅದಕ್ಕಾಗಿ ಅವರು ಆಟಗಾರರನ್ನೇ ಬಲೆಗೆ ಕೆಡವಿಕೊಳ್ಳಲಾರಂಭಿಸಿದರು. "ನೀನು ಸೊನ್ನೆ ಹೊಡೆದರೆ ಇಷ್ಟು ಕೋಟಿ ಕೊಡುತ್ತೇವೆ, ಪಂದ್ಯ ಸೋಲಿಸಿದರೆ ಕ್ಯಾಪ್ಟನ್‌ಗೆ ಇಷ್ಟು ಲಾಭ ಉಂಟು" ಎಂಬ ಆಮಿಷವನ್ನು ಒಡ್ಡಲಾರಂಭಿಸಿದರು. ಹಣವೇ ಸರ್ವಸ್ವವಾದ ಕ್ರಿಕೆಟ್ ಜಗತ್ತಿನಲ್ಲಿ ಆಟಗಾರರು ಮಾರಾಟದ ವಸ್ತುವಾದರು. ೨೦೦೦ ಇಸವಿಯಲ್ಲಿ ಹ್ಯಾನ್ಸಿ ಕ್ರೋನ್ಯೆ ಎಂಬ ದಕ್ಷಿಣ ಆಫ್ರಿಕಾದ ಕ್ಯಾಪ್ಟನ್ ಮತ್ತು ಅವನ ಇಬ್ಬರು ಅನುಯಾಯಿಗಳು ಕಳ್ಳಾಟಕ್ಕಾಗಿ ಫೋನ್‌ನಲ್ಲಿ ಮಾತನಾಡಿ ದೆಹಲಿ ಪೊಲೀಸರಿಗೆ ಸಿಕ್ಕಿಬಿದ್ದರು. ಅಜಯ್ ಜಡೇಜ, ಮನೋಜ್ ಪ್ರಭಾಕರ್ ಮೊದಲಾದ ಭಾರತೀಯ ಆಟಗಾರರೂ ಸಿಕ್ಕಿಬಿದ್ದಿದ್ದುಂಟು. ಈ ಕ್ರೋನ್ಯೆ ಏನನ್ನಾದರೂ ಬಾಯಿಬಿಡುವ ಮುನ್ನವೇ ಅಪಘಾತದಲ್ಲಿ ಸತ್ತ!

ಮ್ಯಾಚ್ ಫಿಕ್ಸಿಂಗ್‌ನ ನಂತರ ಸ್ಪಾಟ್ ಫಿಕ್ಸಿಂಗ್ ಎಂಬುದು ಶುರುವಾಯಿತು ನೋಡಿ. ಒಂದು ಬಾಲ್ ವೈಡ್ ಆಗುತ್ತದೆಯೇ, ನೋ ಬಾಲ್ ಆಗುತ್ತದೆಯೇ, ಬೌಂಡರಿ ಹೊಡೆಯುತ್ತಾರೆಯೇ ಹೀಗೆ ಅತಿ ಸಣ್ಣ ಅಂಶಗಳ ಮೇಲೂ ನಿಮಿಷ ನಿಮಿಷವೂ ಬಾಜಿ ಕಟ್ಟಲು ಬುಕ್ಕಿಗಳು ಅವಕಾಶ ಮಾಡಿಕೊಟ್ಟರು. ಏಕೆಂದರೆ ಅನೇಕ ಜೂಜುಗಾರರಿಗೆ ಪ್ರತಿನಿಮಿಷವೂ ಉದ್ರೇಕ ಬೇಕಾಗಿರುತ್ತೆ. ಇದಕ್ಕೂ ಆಟಗಾರರಿಗೆ ಗುಟ್ಟಾಗಿ ಲಂಚ ನೀಡಿ ನೀನು ಈ ಬಾಲ್ ಬಂದಾಗ ಹೀಗೆಯೇ ವರ್ತಿಸಬೇಕು ಎಂದು ಹೇಳಿಕೊಡಲಾಯಿತು. ಅದರ ಸೂಚನೆಗಳನ್ನು ಗುಪ್ತಸಂಕೇತಗಳ ಮೂಲಕ ರವಾನಿಸುವುದು ಕೂಡ ಆರಂಭವಾಯಿತು. ಇದರಲ್ಲಿ ಅತ್ಯಂತ ಪ್ರತಿಭಾವಂತರಾದ ಅನೇಕ ಪಾಕಿಸ್ತಾನದ ಆಟಗಾರರು ಭಾಗಿಯಾಗಿ ಅವರಿಗೆ ಶಿಕ್ಷೆಯಾಯಿತು.

ಕಠಿಣವಾದ ನಿಯಂತ್ರಣವನ್ನು ಹೇರುತ್ತೇವೆ ಎಂದು ಅಧಿಕೃತ ಕ್ರಿಕೆಟ್ ಮಂಡಳಿಗಳು ಹೇಳಿಕೊಳ್ಳುತ್ತಲೇ ಬಂದಿವೆ. ಅದಕ್ಕಾಗಿ ಭ್ರಷ್ಟಾಚಾರ ವಿರೋಧಿ ದಳ, ಬೇಹುಗಾರರ ತಂಡ ಎಲ್ಲವನ್ನೂ ನೇಮಿಸಲಾಗುತ್ತದೆ. ಆದರೆ ಇಂದು ಬೆಟ್ಟಿಂಗ್ ರ್‍ಯಾಕೆಟ್ ತೀರಾ ದೊಡ್ಡದು ಮತ್ತು ಬಲಿಷ್ಠ. ಇಂದು ಈ ಉದ್ಯಮ ೫೦೦ ಬಿಲಿಯನ್ ಡಾಲರ್‌ಗಳ ವಹಿವಾಟಿರುವಂಥದ್ದಂತೆ. ಎಂದರೆ ಜಗತ್ತಿನ ಅತಿದೊಡ್ಡ ಕಾರ್ ಉತ್ಪಾದಕ ಟೊಯೊಟಾದ ಐವತ್ತರಷ್ಟು ದೊಡ್ಡದಾದ ವ್ಯವಹಾರ. ಇಲ್ಲಿನ ಕೇಡಿಗರು ಎಳೆಯ ಆಟಗಾರರಿಗೆ ಉಡುಗೊರೆ ನೀಡಿ, ಬೆಲೆವೆಣ್ಣುಗಳನ್ನು ಕಳಿಸಿ, ಬೆದರಿಸಿ, ಮಾದಕದ್ರವ್ಯಗಳನ್ನು ತಿನ್ನಿಸಿ ತಮ್ಮ ಕೈವಶಮಾಡಿಕೊಳ್ಳುತ್ತಾರೆ. ಅವರು ಯಾವ ಆಟಗಾರರು ದುರ್ಬಲರು, ದುರಭ್ಯಾಸ ಇರುವವರು, ಬೆದರಿಕೆಗೆ ಬಗ್ಗುವವರು ಎಂಬುದರ ಲೆಕ್ಕಾಚಾರ ಇಟ್ಟುಕೊಂಡಿರುತ್ತಾರೆ. ಇದಕ್ಕೆ ಮಂಡಳಿಯ ಅಧಿಕಾರಿಗಳು, ಕೋಚ್‌ಗಳು, ತಂಡದ ನಾಯಕರು, ವರದಿಗಾರರು,

ಐಪಿಎಲ್ ಸ್ಪಾಟ್ ಫಿಕ್ಸಿಂಗ್ ವಿರುದ್ಧ ಪ್ರತಿಭಟನೆ

ಪೊಲೀಸರು ಸಹ ಶಾಮೀಲಾಗುತ್ತಾರೆ. ಈ ಜಾಲದ ವಿರುದ್ಧ ಹೋದವರನ್ನು ಅವರು ಮುಗಿಸಿಬಿಡುವುದೂ ಉಂಟು. ಪಾಕಿಸ್ತಾನ ತಂಡದ ಕೋಚ್ ಆಗಿದ್ದ ಬಾಬ್ ವೂಲ್ಮರ್ ಎಂಬ ಹೆಸರಾಂತ ಹಳೇ ಆಟಗಾರನ ಸಾವು ಹಠಾತ್ತಾಗಿ ಸಂಭವಿಸಿದಾಗ ಅದು ಕ್ರೈಮ್ ಸಿಂಡಿಕೇಟ್‌ನ ಕೈವಾಡ ಎಂಬ ವದಂತಿ ಇತ್ತು.

**ಐಪಿಎಲ್ ಎಂಬ ಅಧಃಪತನ**

ಇನ್ನೇನು ಕೆಲವೇ ದಿನಗಳಲ್ಲಿ ಈ ವರ್ಷದ ಹನ್ನೆರಡನೆಯ ಐಪಿಎಲ್ ಎಂಬ ಸಮೂಹ ಸನ್ನಿ ಆರಂಭವಾಗಲಿದೆ. ೬.೩ ಬಿಲಿಯನ್ ಡಾಲರ್‌ಗಳಷ್ಟು ಬ್ರಾಂಡ್ ಮೌಲ್ಯವಿರುವ ಈ ಟೂರ್ನಮೆಂಟ್‌ನ ಹನ್ನೊಂದು ಆವೃತ್ತಿಗಳು ಮುಗಿದು ಅದು ಈಗ ಹನ್ನೆರಡನೆಯ ಅವತಾರವನ್ನು ಆರಂಭಿಸಲಿದೆ. ಲಲಿತ್ ಮೋದಿ ಎಂಬಾತನ ವ್ಯಾಪಾರಿ ಮೆದುಳು ಇದರ ಹಿಂದೆ ಕೆಲಸ ಮಾಡಿತು ಎಂದು ಹೇಳಲಾಗಿದೆ. ಇದನ್ನು ಬಿಸಿಸಿಐ ಅಧಿಕೃತವಾಗಿ ನಡೆಸಲಿದೆ.

ಇಲ್ಲಿನ ತಂಡಗಳು ಇಲ್ಲಿಯವರೆಗೂ ಇದ್ದಂತೆ ದೇಶದ ಅಥವಾ ರಾಜ್ಯದ ಹೆಸರನ್ನು ಹೊಂದಿರುವುದಿಲ್ಲ. ಜನರನ್ನು ಸೆಳೆಯಲೋಸುಗ ಪ್ರತಿ ತಂಡಕ್ಕೂ ಭಾರತದ ಒಂದು ಮಹಾನಗರದ ಹೆಸರನ್ನೇನೋ ಇಡುತ್ತಾರೆ. ಆದರೆ ತಂಡದಲ್ಲಿ ಆ ಊರಿನವರೇ ತುಂಬಿರುವುದಿಲ್ಲ. ದೇಶ–ವಿದೇಶದ ಆಟಗಾರರಿರುವ ಈ ತಂಡಗಳು ವಾಸ್ತವದಲ್ಲಿ ಜಾನುವಾರುಗಳನ್ನೋ, ಗುಲಾಮರ ಮಾರುಕಟ್ಟೆಯಲ್ಲಿ ಬಾಡಿಗೆಯೋಧರನ್ನೋ ಕೊಂಡುಕೊಳ್ಳುವಂತೆ ಹರಾಜಿನಲ್ಲಿ ಆಟಗಾರರನ್ನು ಕೂಗಿ ಕೊಂಡುಕೊಂಡು ಕರೆತಂದು ಕೂಡಿಸಿಟ್ಟ ಟೀಂಗಳು. ಇವರಿಗೆ ರಾಷ್ಟ್ರಪ್ರೇಮದಂಥ ಪ್ರಜ್ಞೆಯೂ ಇರುವುದಿಲ್ಲ.

ಈ ಟೂರ್ನಮೆಂಟ್‌ನಲ್ಲಿ ಯಾವ ಮೌಲ್ಯಗಳೂ ಉಳಿಯುವುದಿಲ್ಲ. ಈ ತಂಡಗಳಿಗೆ ಮಾಲೀಕ ಎಂಬುವನಿರುತ್ತಾನೆ. ಅವನು ದೊಡ್ಡ ಕೈಗಾರಿಕೋದ್ಯಮಿ ಅಥವಾ ಸಿನಿಮಾತಾರೆ ಆಗಿರುತ್ತಾನೆ. ಅತ್ಯಂತ ಪ್ರತಿಭಾವಂತ ಕ್ರಿಕೆಟ್ ಆಟಗಾರ ಇವರಿಗೆಲ್ಲಾ ಡೊಗ್ಗು ಸಲಾಮು ಹಾಕಿ ಬದುಕಿಕೊಂಡಿರಬೇಕು. ಅವರ ಮರ್ಜಿ ಹಿಡಿಯಬೇಕು. ಪ್ರತಿ ಪಂದ್ಯದ ನಂತರ ವಿಪರೀತ ಕುಡಿತ, ನರ್ತನ, ಜಗಳ, ಲೈಂಗಿಕ ದುಃಸಾಹಸಗಳು ಹೇರಳವಾಗಿರುವ ಪಾರ್ಟಿಗಳಲ್ಲಿ ಭಾಗಿಯಾಗಬೇಕು.



ಪಂದ್ಯದ ಮೈದಾನದಲ್ಲೇ ಪ್ರತಿಬಾರಿ ಬೌಂಡರಿ ಹೊಡೆದಾಗ ಅಬ್ಬರದ, ಕರ್ಕಶ ಸಂಗೀತದೊಂದಿಗೆ ಕುಣಿಯಲು ಅರೆನಗ್ನ ಹೆಣ್ಣುಮಕ್ಕಳ ಗುಂಪು (ಚೆಯರ್ ಲೀಡರ್ಸ್) ಇರುತ್ತದೆ.

ಇಂಥ ವಾತಾವರಣ ಹೇಗೆ ಪಾಪವನ್ನು ಉತ್ಪಾದಿಸದೆ ಇರುತ್ತದೆ. ಐಪಿಎಲ್‌ನಲ್ಲೂ ಬಹಳ ದೊಡ್ಡ ಹಗರಣವಾಯಿತು. ಹೆಸರಾಂತ ತಂಡಗಳು, ಆಟಗಾರರು, ಅಧಿಕಾರಿಗಳು ಶಾಮೀಲಾಗಿ ಮ್ಯಾಚ್ ಫಿಕ್ಸಿಂಗ್ ಮಾಡಿದರು. ಅದರ ನಾಯಕನಾದ ಕುಖ್ಯಾತ ಕೇಡಿ ಲಲಿತ್ ಮೋದಿ ಎಂಬುವನು ಇಂದಿನ ನರೇಂದ್ರ ಮೋದಿ ಸರ್ಕಾರದ ಆಡಳಿತಾವಧಿಯಲ್ಲಿ ನೆಲದ ಕಾನೂನನ್ನು ತಪ್ಪಿಸಿಕೊಂಡು ವಿದೇಶಕ್ಕೆ ಹೋಗಿ ನೆಲೆಸಿದ್ದಾನೆ. ಇವರೆಲ್ಲಾ ಸಾವಿರಾರು ಕೋಟಿ ಹಣವನ್ನು ಚಿಲ್ಲರೆ ದುಡ್ಡಿನಂತೆ ಕೈ ಬದಲಾಯಿಸಬಲ್ಲ ತಂತ್ರಗಾರರು. ಇವರ ಕೈಗಳು ಎಲ್ಲ ದೊಡ್ಡ ರಾಜಕೀಯ ಪಕ್ಷಗಳ ಒಳಗೂ ಸಂಚರಿಸುತ್ತವೆ. ಹಾಗಾಗಿ ಯಾರಿಗೂ ಶಿಕ್ಷೆಯಾಗುವುದಿಲ್ಲ.

**ಕ್ರೀಡೆ ಎಂಬುದು ಸಮಾಜದ ಕನ್ನಡಿ**

ಹೀಗಾಗಿ ನಾವು ಟಿ.ವಿ.ಯ ಮುಂದೆ ಮುಗ್ಧರಾಗಿ ಕುಳಿತು ಕ್ರಿಕೆಟ್ ನೋಡುತ್ತೇವೆ. ಆದರೆ ಕ್ರಿಕೆಟ್ ಈಗ ಮುಗ್ಧವಾಗಿ ಉಳಿದಿಲ್ಲ. ಅದನ್ನು ಕಾಣದ ಕೈಗಳು ನಿಯಂತ್ರಿಸುತ್ತಿವೆ. ಕಳ್ಳಾಟ, ಮೋಸ, ಪಾತಕ, ದುರ್ವ್ಯಸನ ಇವೆಲ್ಲಾ ನಡೆಯುವ ಪಾಪಕೂಪ ಇದು. ಇದನ್ನು ಸಹಿಸುತ್ತಾ, ಹೊಗಳುತ್ತಾ ಜನ ಸಂವೇದನೆಯನ್ನೂ ಕಳೆದುಕೊಳ್ಳುತ್ತಾರೆ ಎಂಬ ಆತಂಕವಿದೆ.

ಇಂಥ ಅಧಃಪತನ ಒಂದು ಕ್ರೀಡೆಗೆ ಮೀಸಲಲ್ಲ. ಬರೀ ಕ್ರೀಡಾಜಗತ್ತಿಗೂ ಮಿತವಾಗಿಲ್ಲ. ನಮ್ಮ ಸುತ್ತಲಿನ ಎಲ್ಲ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಬದುಕು ಕೊಳೆತು ಹೋಗುತ್ತಿರುವುದರ ಪ್ರತಿಫಲನ ಅದು. ಬಂಡವಾಳ, ಲಾಭ, ಕೊಳ್ಳುಬಾಕತನ ಎಂಬ ಕೊಳಕುಮಂಡಲ ಯಾವುದೆಲ್ಲವನ್ನು ಮುಟ್ಟುತ್ತದೋ ಅವೆಲ್ಲಾ ಕೊಳೆತು ಹೋಗುತ್ತದೆ. ನಮ್ಮ ಮನೆಗಳ ಒಳಗಿನ ಪ್ರೀತಿ, ವಾತ್ಸಲ್ಯ, ಅಂತಃಕರಣಗಳು ಸಹ ಲಾಭದಿಂದ ಕಲುಷಿತಗೊಂಡಿವೆ. ಮತ್ತೊಮ್ಮೆ ಮಾರ್ಕ್ಸ್ ನೆನಪಾಗುತ್ತಾರೆ.

*"ಬೂರ್ಷ್ವಾ ವರ್ಗವು ಮನುಷ್ಯ–ಮನುಷ್ಯರ ನಡುವೆ ಕೇವಲ ನಗ್ನವಾದ ಸ್ವಾರ್ಥಪರತೆ ಮತ್ತು ನಿರ್ಮಮಕಾರದ ನಗದು ವ್ಯವಹಾರವನ್ನು ಬಿಟ್ಟು ಇನ್ಯಾವ ಸಂಬಂಧವನ್ನೂ ಉಳಿಯಬಿಟ್ಟಿಲ್ಲ." (ಪ್ರಣಾಳಿಕೆ)*

ಹಾಗಾಗಿ ಪರಿಸರವನ್ನು, ಮಾನವ ಸಂಬಂಧಗಳನ್ನು, ಸಂಗೀತ, ಕಲೆ, ಕ್ರೀಡೆಯನ್ನು ಪ್ರೀತಿಸುವ ಎಲ್ಲ ಜನ, ಈ ಕೊಳೆತ ಸಮಾಜ ತನ್ನೊಂದಿಗೆ ನಾವು ಮೆಚ್ಚುವ ಎಲ್ಲವನ್ನೂ ಅಧಃಪತನಕ್ಕೆ ಎಳೆದು ಒಯ್ಯುತ್ತಿದೆ ಎಂಬ ಕಠೋರ ಸತ್ಯವನ್ನು ಗ್ರಹಿಸಬೇಕು. ಇದನ್ನು ಬದಲಾಯಿಸದೆ, ಇದರ ಬುಡಕ್ಕೇ ಪೆಟ್ಟುನೀಡದೆ ಅಮೂಲ್ಯವಾದ ಏನನ್ನೂ ಉಳಿಸಿಕೊಳ್ಳುವುದು ಸಾಧ್ಯವಿಲ್ಲ ಎಂಬುದನ್ನು ಮನಗಾಣಬೇಕು. ಕ್ರೀಡೆಯನ್ನು ಉಳಿಸುವ ಪ್ರಯತ್ನ ಸಮಾಜವನ್ನು ಉಳಿಸುವ ವಿಶಾಲ ಪ್ರಯತ್ನದ ಭಾಗವಾಗಬೇಕು.

**ಡಾ॥ ಬಿ. ಆರ್. ಮಂಜುನಾಥ್**
ನಂ. ೬೧, ೪ನೇ ಅಡ್ಡರಸ್ತೆ, ಅಶೋಕನಗರ, ಎನ್. ಆರ್. ಕಾಲೋನಿ ಹತ್ತಿರ
ಬೆಂಗಳೂರು – ೫೬೦ ೦೫೦



## ಹೊಸ ಓದು



### ನರ್ಮದೆಯ ನಾಡಿನಲ್ಲಿ

**(ಪ್ರವಾಸ ಕಥನ)**

*ವೆಂಕಟೇಶ್ ಮಾಚಕನೂರ*

**ಪುಟ : ೧೩೬**

**ಬೆಲೆ : ರೂ. ೧೩೦**

**ಸಾಹಿತ್ಯ ಪ್ರಕಾಶನ,** ಹುಬ್ಬಳ್ಳಿ

**ಜೀವನಕ್ರಮವನ್ನು ತೆರೆದಿಡುವ ಪ್ರವಾಸ ಕಥನ**

*ವೆಂಕಟೇಶ ಮಾಚಕನೂರ ಬರೆದಿರುವ 'ನರ್ಮದೆಯ ನಾಡಿನಲ್ಲಿ' ಮಧ್ಯಪ್ರದೇಶ ರಾಜ್ಯದ ಪ್ರಮುಖ ಪ್ರೇಕ್ಷಣೀಯ ಸ್ಥಳಗಳ ಕುರಿತಾದ ಪ್ರವಾಸ ಕಥನ. ಇದು ಕೇವಲ ಪ್ರವಾಸಕಥನವಾಗಿರದೆ ಅದರಾಚೆ ಇಡಿಯಾಗಿ ಮಧ್ಯಪ್ರದೇಶದ ಆರ್ಥಿಕ, ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ವಿಚಾರಗಳೊಂದಿಗೆ ಅಲ್ಲಿನ ಜನರ ಜೀವನ ಕ್ರಮವನ್ನೂ ಸಹ ತೆರೆದಿಡುವಲ್ಲಿ ಯಶಸ್ವಿಯಾಗಿದೆ. ಜೊತೆಗೆ, ಲೇಖಕರು ತಮ್ಮ ಪ್ರವಾಸದ ಸಂದರ್ಭದಲ್ಲಿನ ಅಪರೂಪದ ಅನುಭವಗಳನ್ನೂ ಸಹ ದಾಖಲಿಸಿರುವುದರಿಂದ ವಿಶಿಷ್ಟವೆನಿಸುತ್ತದೆ. ಭಾರತದ ಮಧ್ಯಭಾಗವಾಗಿರುವ ಮಧ್ಯಪ್ರದೇಶವು ನಮ್ಮ ದೇಶದ ವೈವಿಧ್ಯಮಯ ಬದುಕು ಬವಣೆಗಳು, ರಾಜಕೀಯ ಸ್ಥಿತ್ಯಂತರಗಳ ಪ್ರತೀಕವಾಗಿಯೂ ನೋಡಬಹುದಾದ ಸಾಧ್ಯತೆಗೆ ಪೂರಕವಾದ ವಿವರಗಳನ್ನು ಸಂಗ್ರಹಿಸಿ ಕೃತಿಯಲ್ಲಿ ನೀಡಿದ್ದಾರೆ.*

*ವೆಂಕಟೇಶ ಮಾಚಕನೂರ ಅವರಿಗೆ ವಿಶ್ವ ಸುತ್ತುವ ಕ್ರಿಯೆಯು ಕೇವಲ ಇಷ್ಟದ ಹವ್ಯಾಸವಷ್ಟೇ ಆಗಿರದೆ ಆ ಸಂದರ್ಭದಲ್ಲಿ ತಾವು ಮುಖಾಮುಖಿಯಾದ ಅಲ್ಲಿನ ಸಂಗತಿ, ಸ್ಥಳ, ಸಂಸ್ಕೃತಿ–ಸಂಪ್ರದಾಯಗಳ ಕುರಿತಾದ ಹೊಸದೊಂದು ಅನುಭವಕ್ಕೆ ತಮ್ಮನ್ನು ತಾವೇ ತೆರೆದುಕೊಂಡು, ಆ ಅನುಭವಗಳೆಲ್ಲವನ್ನೂ ಇಲ್ಲಿನ ಐತಿಹಾಸಿಕ ಸಂಗತಿಗಳೊಂದಿಗೆ ಸಮೀಕರಿಸಿ ಹೇಳುವುದರ ಮೂಲಕ ಓದುಗನಿಗೆ ದಾಟಿಸುತ್ತಾರೆ. ಇದು ಓದಿದ ನಂತರವೂ ಬಹುಕಾಲ ನೆನಪಿನಲ್ಲುಳಿಯುವ ಕೃತಿ.*

– ***ಕಲ್ಲೇಶ್ ಕುಂಬಾರ್,*** *ಹಾರೂಗೇರಿ ಅಂಚೆ,*
*ರಾಯಭಾಗ ತಾ॥, ಬೆಳಗಾವಿ – ೫೯೧ ೨೨೦*



### ಕೈ ಚಾಚುತಿವೆ ಕಂದಮ್ಮಗಳು

*ರೂಪ ಹಾಸನ*

**ಪುಟ : ೨೪೮** **ಬೆಲೆ : ರೂ. ೨೨೫**

**ಅಭಿರುಚಿ ಪ್ರಕಾಶನ,** ನಂ. ೩೮೬, ೧೪ನೆಯ ಮುಖ್ಯರಸ್ತೆ, ೩ನೆಯ ಅಡ್ಡರಸ್ತೆ, ಸರಸ್ವತೀಪುರ, ಮೈಸೂರು – ೫೭೦ ೦೦೯

*ರೂಪ ಹಾಸನ ಕ್ರಿಯಾಶೀಲ ಬರಹಗಾರ್ತಿ ಮತ್ತು ಸಾಮಾಜಿಕ ಕಾರ್ಯಕರ್ತೆ. ಪ್ರೇರಣಾ ವಿಕಾಸ ವೇದಿಕೆಯಿಂದ ಮಕ್ಕಳ ಹಕ್ಕು, ವಿಕಾಸ, ಆರೋಗ್ಯ, ಪುನರ್‌ವಸತಿ, ಶಿಕ್ಷಣ, ಹೀಗೆ ಕಂದಮ್ಮಗಳ ಸರ್ವಾಂಗೀಣ ಅಭಿವೃದ್ಧಿಗಾಗಿ ನಿರಂತರ ಶ್ರಮಿಸುತ್ತಿದ್ದಾರೆ. ತಮ್ಮನ್ನು ತಾವು ಮಕ್ಕಳ ಕ್ಷೇತ್ರಕ್ಕೆ ಅರ್ಪಿಸಿಕೊಂಡ ಅವರ ಬದ್ಧತೆ ಅನುಕರಣೀಯವಾದದ್ದು. ಕಳೆದ 15–20 ವರ್ಷಗಳಿಂದ ಈ ಕ್ಷೇತ್ರದಲ್ಲಿ ದುಡಿದ ಅವರ ಅನುಭವ, ಅಧ್ಯಯನದ ಹಿನ್ನೆಲೆಯಿಂದ ಮಕ್ಕಳ ವಿವಿಧ ಸಮಸ್ಯೆ, ಪರಿಹಾರ ಕುರಿತು ಬರೆದ ಒಟ್ಟು 48 ಲೇಖನಗಳನ್ನು 'ಕೈ ಚಾಚುತಿವೆ ಕಂದಮ್ಮಗಳು' ಎಂಬ ಕೃತಿಯಲ್ಲಿ ಪ್ರಕಟಿಸಿದ್ದಾರೆ.*

*ಭ್ರೂಣಹತ್ಯೆಯಿಂದ ಬಾಲಕಾರ್ಮಿಕರ ಸಮಸ್ಯೆಯವರೆಗೆ, ಮಕ್ಕಳ ಹಕ್ಕುಗಳಿಂದ ಅವರ ಪ್ರತಿಭೆಯವರೆಗೆ ಎಲ್ಲ ವಿಷಯಗಳನ್ನೂ ಒಳಗೊಂಡ ಈ ಕೃತಿ ಮಹತ್ವದ ದಾಖಲೆಯಾಗಿದೆ. ಶಿಶುಮರಣ, ಕಾಣೆಯಾದ ಮಕ್ಕಳ ಅಂಕಿ ಸಂಖ್ಯೆ, ಸರಕಾರದ ಯೋಜನೆಗಳು, ಮಕ್ಕಳ ಸಾಹಿತ್ಯ, ಮಕ್ಕಳ ಕುರಿತು ಸಮಾಜ ನಿರ್ವಹಿಸಬೇಕಾದ ಕರ್ತವ್ಯ ಇಂಥ ಎಲ್ಲ ವಿಷಯಗಳೂ ಒಂದೇ ಕೃತಿಯಲ್ಲಿ ಲಭಿಸುವಂತೆ ಮಾಡಿದ್ದಾರೆ ರೂಪ ಹಾಸನ. ಚಿಂತನೆ ಚಟುವಟಿಕೆ ಜೊತೆ ಜೊತೆಗೇ ನಡೆದಾಗ ಬರಹಕ್ಕೆ ಅಧಿಕೃತತೆ ಒದಗುತ್ತದೆ. ಇಲ್ಲಿನ ಲೇಖನಗಳಲ್ಲಿ ಲೇಖಕಿಯ ಕಾಳಜಿ ಪ್ರಮುಖವಾಗಿದೆ. ಶಿಕ್ಷಣ ಇಲಾಖೆ, ಆರೋಗ್ಯ ಇಲಾಖೆ, ಮಕ್ಕಳ ಹಕ್ಕುಗಳ ಹೋರಾಟಗಾರರಿಗೆ ಈ ಕೃತಿ ಉಪಯುಕ್ತ ಕೈಪಿಡಿಯೆಂಬುದರಲ್ಲಿ ಯಾವ ಸಂಶಯವೂ ಇಲ್ಲ.*

### ಚಿತ್ತರಗಿ ಗಂಗಾಧರ ಶಾಸ್ತ್ರಿ (ಜನ್ಮಶತಮಾನೋತ್ಸವದ ಸಂಸ್ಮರಣ ಗ್ರಂಥ)

*ಗಣೇಶ ಅಮೀನಗಡ*

**ಪುಟ : viii+೧೧೨** **ಬೆಲೆ : ರೂ. ೧೫೦**

**ವೈರಾಗ್ಯದ ಮಲ್ಲಣಾರ್ಯ ಪ್ರಕಾಶನ,** ಬಸವೇಶ್ವರ ವೀರಶೈವ ವಿದ್ಯಾವರ್ಧಕ ಸಂಘ, ಬಾಗಲಕೋಟೆ – ೫೮೭ ೧೦೧

*ಒಂದು ಕಾಲದ ಪರಿಣಾಮಕಾರಿ ಸಾಂಸ್ಕೃತಿಕ ಮಾಧ್ಯಮವಾದ 'ರಂಗಭೂಮಿ' ಇಂದಿನ ಸಿನಿಮಾ, ಟಿ. ವಿ.ಗಳ ದಾಂಗುಡಿಯಲ್ಲಿ ತನ್ನ ಅಸ್ತಿತ್ವಕ್ಕಾಗಿ ಹೋರಾಡುತ್ತಿದೆ. ಅದರಲ್ಲೂ ವೃತ್ತಿರಂಗಭೂಮಿ ಇನ್ನೂ ಸಂಕಷ್ಟದಲ್ಲಿದೆ. ಕಳೆದ ಶತಮಾನದ ಕೊನೆಯ ದಶಕಗಳವರೆಗೂ ವೃತ್ತಿರಂಗಭೂಮಿ ತನ್ನ ಹಿರಿಮೆಯನ್ನು ಕಾಯ್ದುಕೊಂಡಿತ್ತು. ಸ್ವಾತಂತ್ರ್ಯ ಪೂರ್ವದಲ್ಲಿಯೇ ಶ್ರೀ ಕುಮಾರ ವಿಜಯ ನಾಟ್ಯ ಸಂಘ ಸ್ಥಾಪಿಸಿ ವೃತ್ತಿ ರಂಗಭೂಮಿಯನ್ನು ಶ್ರೀಮಂತಗೊಳಿಸಿದವರು ಚಿತ್ತರಗಿಯ ಗಂಗಾಧರ ಶಾಸ್ತ್ರಿಗಳು. ಸಹೋದರ ಮುಪ್ಪಯ್ಯ ಸ್ವಾಮಿಗಳ ಜೊತೆ ಸೇರಿ ನಡೆಸಿದ ಅವರ ರಂಗಚಟುವಟಿಕೆಗಳು, ಸಾಧನೆಗಳು, ಸಂಕಷ್ಟಗಳು ಎಲ್ಲವನ್ನೂ ಸಾದರಪಡಿಸುವ ವಿವಿಧ ಹೆಸರಾಂತ ಲೇಖಕರ ಲೇಖನಗಳ ಸಂಗ್ರಹವನ್ನು ಪತ್ರಕರ್ತ ಗಣೇಶ ಅಮೀನಗಡ ಅವರು ಸಂಪಾದಿಸಿ 'ಚಿತ್ತರಗಿ ಗಂಗಾಧರ ಶಾಸ್ತ್ರಿ' ಎಂಬ ಕೃತಿಯನ್ನು ಪ್ರಕಟಿಸಿದ್ದಾರೆ. ಇಲ್ಲಿನ ಲೇಖನಗಳು ವ್ಯಕ್ತಿಕೇಂದ್ರಿತವಾಗದೆ ಆ ಸಂದರ್ಭದ ಸಾಂಸ್ಕೃತಿಕ ಲೋಕಕ್ಕೆ ರಂಗಭೂಮಿ ಕೊಟ್ಟ ಕೊಡುಗೆ, ರಂಗಕರ್ಮಿಗಳು ಪಟ್ಟ ಪರಿಶ್ರಮವನ್ನು ದಾಖಲಿಸುತ್ತವೆ. ರಾಜ್ಯದ ಸಾಂಸ್ಕೃತಿಕ ಇತಿಹಾಸದ ಮೈಲಿಗಲ್ಲುಗಳನ್ನು ಸ್ಮರಿಸುವುದು ಇಂದಿನ ಸಾಹಿತ್ಯ ಸಾಂಸ್ಕೃತಿಕ ಲೋಕದ ಜವಾಬ್ದಾರಿ.*

– ***ಶ್ರೀಸುಮಿತ್ರಾಸುತ ಅಗಸಬಾಳ,*** *ಲಗ್ಗೆರೆ, ಬೆಂಗಳೂರು*

### ಮೂಕನಾಯಕ *(ಸಿ. ಎಸ್. ದ್ವಾರಕಾನಾಥ್ ಅವರ ಸಾಂದರ್ಭಿಕ ಲೇಖನಗಳು)*

*ವಿ. ಹರೀಶ್ ಕುಮಾರ್*

**ಪುಟ : ೬೦೦** **ಬೆಲೆ : ರೂ. ೫೫೦**

**ಅವಿರತ ಪುಸ್ತಕ,** ಬೆಂಗಳೂರು




*ಡಾ॥ ಸಿ. ಎಸ್. ದ್ವಾರಕಾನಾಥ್ ಅವರ ಬರಹ ವಿಶೇಷವಾಗಿ ಪತ್ರಿಕಾ ಶೈಲಿಯದು. 'ಲಂಕೇಶ್' ಪತ್ರಿಕೆಯ ಮೂಲಕ ಅವರು ಬರೆಹದ ಲೋಕಕ್ಕೆ ಹೆಚ್ಚು ಪರಿಚಿತರಾದರೂ, ನಾಡಿನ ಹಲವಾರು ಪತ್ರಿಕೆಗಳಿಗೂ ಲೇಖನಗಳನ್ನು ಬರೆದಿದ್ದಾರೆ. 'ಲಂಕೇಶ್ ಪತ್ರಿಕೆ'ಯ ಲೇಖನಗಳನ್ನು ಹೊರತುಪಡಿಸಿದಂತೆ ಉಳಿದ ಪತ್ರಿಕೆಗಳಿಗೆ ಬರೆದ ಲೇಖನಗಳು ಇದರಲ್ಲಿ ಸೇರಿವೆ. ಅಸಮಾನ ಭಾರತ, ಮಾಧ್ಯಮಗಳ ವೈದಿಕಶಾಹಿತನ, ಕಿಂಚಿತ್ತೂ ಕಾಳಜಿ ಇಲ್ಲದ ರಾಜಕಾರಣ, ಮೇಲ್ವರ್ಗಗಳ ದ್ವೇಷಾಸೂಯೆ, ತಳಸಮುದಾಯಗಳ ಮುಗ್ಧತೆ, ಅನನ್ಯತೆ, ಅವರ ಬಡತನ, ದಾರಿದ್ರ್ಯದ ಕುರಿತು ದ್ವಾರಕಾನಾಥ್ ಬರೆದಿರುವ ಸುಮಾರು ತೊಂಭತ್ತಾರು ಲೇಖನಗಳ ಸಂಗ್ರಹವನ್ನು ವಿ. ಹರೀಶ್ ಕುಮಾರ್ ಅಚ್ಚುಕಟ್ಟಾಗಿ ಸಂಕಲಿಸಿದ್ದಾರೆ. ಈ ಕೃತಿಯಲ್ಲಿ ಶತಮಾನಗಳಿಂದ ದಮನಿತರಾದ ಹಲವು ಅಲಕ್ಷಿತ ಸಮುದಾಯಗಳನ್ನು ಗುರುತಿಸಿ ಅವರ ಸಮಸ್ಯೆಗಳ ಬಗ್ಗೆ ಕ್ಷಕಿರಣ ಬೀರಿ ಬರೆದ ಲೇಖನಗಳಿವೆ. 'ಅಂಬೇಡ್ಕರ್ ಮೆದುಳು, ಲೋಹಿಯಾರ ಹೃದಯ ಹಾಗೂ ಗಾಂಧೀಜಿಯ ದೇಹ ನನ್ನಲ್ಲಿದೆ' ಎನ್ನುವ ದ್ವಾರಕಾನಾಥ್ ಹಿಂದುಳಿದ ಆಯೋಗದ ಅಧ್ಯಕ್ಷರಾಗಿ ಮಾಡಿದ ಕೆಲಸಗಳ ಸಂದರ್ಭದಲ್ಲಿ ಕಂಡ ಅನುಭವಗಳನ್ನು ಆಧರಿಸಿ ಬರೆದ ಲೇಖನಗಳ ಮೂಲಕ ಈ ಪುಸ್ತಕದಲ್ಲಿ ಭಾರತದ 'ಬಹುತ್ವದ ದರ್ಶನ' ಮಾಡಿಸುತ್ತಾರೆ. ಇಲ್ಲಿಯ ಲೇಖನಗಳಲ್ಲಿ ಯಾವುದನ್ನೂ ನಿರಾಕರಿಸುವಂತಿಲ್ಲ. ಟಿಪ್ಪು ಸುಲ್ತಾನ, ಖುಷವಂತಸಿಂಗ್, ನಾಲ್ವಡಿ ಕೃಷ್ಣರಾಜ ಒಡೆಯರ್, ಮಾಜಿ ಮುಖ್ಯಮಂತ್ರಿ ದೇವರಾಜ ಅರಸ್ ಅವರ ಬಗ್ಗೆ, ದಕ್ಕಲರ ಸ್ವಾತಂತ್ರ್ಯ ಉತ್ಸವವನ್ನು ಹಂಚಿಕೊಂಡಿರುವ ರೀತಿ, ತೃತೀಯ ಲಿಂಗಿಗಳ, ಹಿಂದುಳಿದ, ದಲಿತ, ಅಲ್ಪಸಂಖ್ಯಾತರ ಬಗ್ಗೆ ಕಾಳಜಿಯಿಂದ ಬರೆದಿರುವ ಲೇಖನಗಳ ಮೂಲಕ ಜಗತ್ತಿನ ಎಲ್ಲ ವಿಷಯಗಳು ಅನಾವರಣಗೊಂಡಿವೆ.*

– **ಎನ್. ಆಶಾ,** ಗವಿಪುರಂ, ಬೆಂಗಳೂರು






# ಬಡವರ, ಶೋಷಿತರ ಪರವಾಗಿರುವ ಎಡಪಂಥದ ಜೊತೆ ನನ್ನ ಧ್ವನಿ

– ಡಾ॥ ವಿಜಯಾ

ಸಂದರ್ಶಕರು
ಡಾ॥ ಜಿ. ರಾಮಕೃಷ್ಣ
ಡಾ॥ ಎನ್. ಗಾಯತ್ರಿ
ಡಾ॥ ಸಿದ್ದನಗೌಡ ಪಾಟೀಲ

ವಿಜಯಾ ಸುಬ್ರಹ್ಮಣ್ಯಂ ಆಗಿದ್ದ ವಿಜಯಾ, ಇಳಾ ವಿಜಯಾ, ಡಾ॥ ವಿಜಯಾ, ವಿಜಯಮ್ಮ – ಹೀಗೆ ಹತ್ತು ಹಲವು ಹೆಸರುಗಳಿಂದ ಕರೆಸಿಕೊಳ್ಳುವ ವಿಜಯಾ ಕನ್ನಡದ ಸಾಂಸ್ಕೃತಿಕ ಲೋಕದ ವಿಶಾಲವಾದ ಕ್ಯಾನ್‌ವಾಸಿನಲ್ಲಿ ಕಾಣಿಸಿಕೊಳ್ಳುವ ಮಿನುಗು ತಾರೆ. ಪತ್ರಿಕಾ ವ್ಯವಸಾಯ, ಮುದ್ರಣ–ಪ್ರಕಾಶನ, ಸಾಹಿತ್ಯ, ಚಿತ್ರಕಲೆ, ಸಂಗೀತ, ಚಿತ್ರರಂಗ, ರಂಗಭೂಮಿ, ರಾಜಕಾರಣದ ನಂಟು, ಸಂಘಟನೆಗಳು, ಚಳುವಳಿಗಳು ಹೀಗೆ ಹತ್ತು ಹಲವಾರು ಆಸಕ್ತಿಗಳನ್ನು ಮೈಗೂಡಿಸಿಕೊಂಡಿರುವ ಬೃಹತ್ ವೃಕ್ಷದಂತೆ ಗೋಚರಿಸುವ, ಹೊಸತು ಸಲಹಾ ಮಂಡಳಿಯ ಸದಸ್ಯರೂ ಆಗಿರುವ ವಿಜಯಾ ಅವರನ್ನು ಹೊಸತು ವಿಶೇಷ ಸಂಚಿಕೆಗೆಂದು ಇತ್ತೀಚೆಗೆ ಅವರ ಮನೆಯಲ್ಲಿ ಸಂಪಾದಕ ಮಂಡಳಿಯ ಡಾ॥ ಜಿ. ರಾಮಕೃಷ್ಣ, ಡಾ॥ ಎನ್. ಗಾಯತ್ರಿ ಮತ್ತು ಡಾ॥ ಸಿದ್ದನಗೌಡ ಪಾಟೀಲ ಸಂದರ್ಶಿಸಿದ್ದಾರೆ.

**ಹೊಸತು** : ಮೇಡಂ ನಮಸ್ಕಾರ. ನಿಮ್ಮನ್ನು 'ಹೊಸತು' ಪತ್ರಿಕೆಗೆಂದು ಸಂದರ್ಶಿಸಲು ಬಂದಿದ್ದೇವೆ.

**ವಿಜಯಾ** : ಅಯ್ಯೋ, ನಾನೇನಮ್ಮ ಮಹಾ! ನನಗೆ ಹೇಳೋದೇನಿದೆ? ಸಂದರ್ಶನ ಏಕೆ?

**ಹೊಸತು** : 'ಮಹಾ' ಏನು ಅನ್ನೋದನ್ನು ನಾವು ಹೇಳ್ತೀವಿ. ಹೇಗೂ ನೀವು ನಿಮ್ಮ ಆತ್ಮಚರಿತ್ರೆಯನ್ನು ಬರೆದಿದ್ದೀರಿ. ಆದ್ದರಿಂದ ನಿಮ್ಮ ಬಗ್ಗೆ ಯಾವುದೇ ಮೂಲಭೂತ ಮಾಹಿತಿಯನ್ನು ಕುರಿತು ಕೇಳುವುದಿಲ್ಲ. ಈ ನಿಮ್ಮ ಆತ್ಮಚರಿತ್ರೆಯಲ್ಲಿ ನೀವು ಹೇಳಿರುವ ಮಾಹಿತಿಯ ಬಗ್ಗೆಯೇ ಒಂದು ಪ್ರಶ್ನೆ. ನೀವು ಯಾವಾಗಲೂ ಒಂದು ರೀತಿಯ ಪ್ರತ್ಯೇಕತೆಯನ್ನು ಉಳಿಸಿಕೊಳ್ತೀರಾ, ಎಂದು ನಿಮ್ಮ ಸಾಹಿತಿ ಮಿತ್ರರು ನಿಮ್ಮ ಬಗ್ಗೆ ಹೇಳುತ್ತಿದ್ದರು ಎಂದಿದ್ದೀರಿ. ಈಗ ನನ್ನ ಪ್ರಶ್ನೆ, 'ಈ ಪ್ರತ್ಯೇಕತೆ ನಿಮ್ಮ ವ್ಯಕ್ತಿತ್ವ ವಿಶೇಷವೋ ಅಥವಾ ನೀವು ಪ್ರಜ್ಞಾಪೂರ್ವಕವಾಗಿ ಮಾಡಿಕೊಂಡ ಆಯ್ಕೆಯೋ?'

**ವಿಜಯಾ** : ನಿಮಗೆ ಏನು ಅನ್ನಿಸುತ್ತದೆ? ಇದು ನಿಮ್ಮ ಅಭಿಪ್ರಾಯವೂ ಹೌದಾ?

**ಹೊಸತು** : ನನ್ನ ಅಭಿಪ್ರಾಯ ಆಮೇಲೆ ಹೇಳ್ತೀನಿ. ನಾನು ನಿಮ್ಮಲ್ಲಿ ಕಂಡ ಪ್ರತ್ಯೇಕತೆಯ ಬಗ್ಗೆ ಆಮೇಲೆ ಹೇಳ್ತೀನಿ. ಈಗ ಇತರರು ನಿಮ್ಮಲ್ಲಿ ಗುರುತಿಸಿದ ಪ್ರತ್ಯೇಕತೆಯ ಬಗ್ಗೆ ನಿಮ್ಮ ಅಭಿಪ್ರಾಯವೇನು?

**ವಿಜಯಾ** : ಮೇಲ್ನೋಟಕ್ಕೆ ನನ್ನನ್ನು ಕಂಡವರಿಗೆ ನಾನು ತುಂಬ ಗಂಭೀರ, ಕೋಪಿಷ್ಠೆ ಅಂತಾನೋ, ಇಲ್ಲವೆ ನನಗೆ ತುಂಬ ಅಹಂಕಾರಾನೋ



ಅಂದುಕೊಂಡವರೂ ಕೂಡ ನಾನು ಅವರಿಗೆ ಹತ್ತಿರವಾದಾಗ 'ಅಯ್ಯೋ ನೀನೆಷ್ಟು ಮೃದು, ಸಹನಾಮಯಿ' ಎಂದುಕೊಳ್ಳುತ್ತಿದ್ದರು. ನೀವು ಕೇಳಿದ ಪ್ರತ್ಯೇಕತೆ ಈ ನೆಲೆಯದಾ?

**ಹೊಸತು** : ಹಾಗಲ್ಲ ಮೇಡಂ, ನಿಮ್ಮ ಸರೀಕ ಲೇಖಕಿಯರು, ಸಮಕಾಲೀನ ವ್ಯಕ್ತಿಗಳಿಗಿಂತ ನೀವು ಒಂದು ರೀತಿಯಲ್ಲಿ ಭಿನ್ನರಿದ್ದೀರಿ. ಉದಾಹರಣೆಗೆ, ಅಂತರರಾಷ್ಟ್ರೀಯ ಮಹಿಳಾ ದಶಕದ ಸಂದರ್ಭದಲ್ಲಿ ಹಲವಾರು ಸಂಘಟನೆಗಳು ಹುಟ್ಟಿಕೊಂಡವು; ಕ್ರಿಯಾಶೀಲ ವಾಗಿದ್ದವು. ಇವುಗಳ ಒಳಗೆ ನಾನು ನಿಮ್ಮನ್ನೆಂದೂ ಕಂಡಿಲ್ಲ. ಅದು ಕರ್ನಾಟಕ ಲೇಖಕಿಯರ ಸಂಘಟನೆಯಿರಬಹುದು, ಪತ್ರಕರ್ತೆಯರ ಸಂಘಟನೆಯಿರಬಹುದು ಅಥವಾ ಬಂಡಾಯ ಸಾಹಿತ್ಯ ಸಂಘಟನೆಯ ಚಳುವಳಿಗಳು, ಪರ್ಯಾಯ ಸಾಹಿತ್ಯ ಸಮ್ಮೇಳನಗಳು... ಹೀಗೆ ನೀವೆಂದೂ ಅವುಗಳ ಭಾಗವಾಗಿದ್ದು ನೋಡಿಲ್ಲ. ಈ ಪ್ರತ್ಯೇಕತೆಗೆ ಕಾರಣವೇನು?

**ವಿಜಯಾ** : ಮೊದಲಿಗೆ ಕರ್ನಾಟಕ ಲೇಖಕಿಯರ ಸಂಘದ ಬಗ್ಗೆ ಹೇಳುವುದಾದರೆ, ಹೌದು ನಾನು ಅದರೊಂದಿಗೆ ಆರಂಭದಲ್ಲಿ ಒಂದು ದೂರತ್ವವನ್ನು ಬೆಳೆಸಿಕೊಂಡೆ. ಅದಕ್ಕೆ ಕಾರಣ, ಅದಕ್ಕೂ ಮುಂಚೆ, ಎಚ್. ಆರ್. ಇಂದಿರಾ ಅವರು ಕಾರ್ಯದರ್ಶಿಯಾಗಿದ್ದ ಕನ್ನಡ ಲೇಖಕಿಯರ ಸಂಘವಿತ್ತು. ಆಕೆ ಒಳ್ಳೆಯ ಕಾದಂಬರಿಗಳನ್ನು ಬರೆದಿದ್ದರು. ಕಾಫಿ ಬೋರ್ಡಿನಲ್ಲಿ ಕೆಲಸ ಮಾಡುತ್ತಿದ್ದರು. ಅವರು ಕಾರ್ಯದರ್ಶಿಯಾಗಿದ್ದ ಕಾಲದಲ್ಲಿ ನಾನು ಅವರು ನಡೆಸುತ್ತಿದ್ದ ಹಲವಾರು ಕಾರ್ಯಕ್ರಮಗಳಿಗೆ ಹೋಗುತ್ತಿದ್ದೆ. ಈ ಸಂಘದ ಸದಸ್ಯೆಯಾಗಿದ್ದೆ. ನನಗೇನಾದರೂ ಹೊರಲೋಕ ಕಂಡಿದ್ದರೆ, ಅದು ಈ ಸಂಘದ ಮೂಲಕವೇ. ಇನ್ನೂ ನೆನಪಿದೆ. ಅವರು ಸುಮಾರು ೭೦–೭೫ ಲೇಖಕಿಯರು ಬರೆದ ಸಣ್ಣ ಕಥೆಗಳ ಸಂಕಲನ 'ಕಥಾ ಪಲ್ಲವ'ವನ್ನು ತಂದಿದ್ದರು. ಅದರ ಬಿಡುಗಡೆಯ ಕಾರ್ಯಕ್ರಮಕ್ಕೆ ಹೋಗಿದ್ದೆ. ಆ ಸಂಕಲನದ ಪ್ರತಿಯೊಬ್ಬ ಲೇಖಕಿಯ ರೇಖಾಚಿತ್ರವನ್ನು ಕಲಾವಿದ ಬಿ. ಕೆ. ಎಸ್. ವರ್ಮಾ ಬಿಡಿಸಿದ್ದರು. ಅವರ ಚಿತ್ರಗಳ ಕೆಳಗೆ ಲೇಖಕಿಯರ ಕಥೆಗಳ ಸಾಲು ಇರುತ್ತಿದ್ದವು. ಆ ರೇಖಾಚಿತ್ರಗಳನ್ನು ಅಂದು ಸಮಾರಂಭದಲ್ಲಿ ಪ್ರದರ್ಶಿಸಿದ್ದರು. ಪ್ರತಿಯೊಬ್ಬ ಲೇಖಕಿಯೂ ಈ ಪ್ರದರ್ಶಿಸಿದ ಚಿತ್ರಗಳನ್ನು ನೋಡಿ ಹಿರಿ ಹಿಗ್ಗುತ್ತಿದ್ದರು. ನಂತರದ ದಿನಗಳಲ್ಲಿ ಎಚ್. ಎಸ್. ಪಾರ್ವತಿ ಈ ಸಂಘದ ಅಧ್ಯಕ್ಷೆಯಾದರು. ಸ್ವಲ್ಪ ದಿನಗಳಾದ ಮೇಲೆ ಜಿ. ನಾರಾಯಣ ಅವರ ಬೆಂಬಲದೊಂದಿಗೆ ಈ ಸಂಘದ ಸುಮಾರು ೭೦–೮೦ ಸದಸ್ಯರನ್ನು ಇಲ್ಲಿಂದ ಕರೆದುಕೊಂಡು ಹೋಗಿ ಕ.ಸಾ.ಪ.ದ ಮಹಿಳಾ ಘಟಕವಾಗಿ ಮಾಡಿದರು. ಕೆ. ಟಿ. ಬನಶಂಕರಮ್ಮನವರ ನೇತೃತ್ವದಲ್ಲಿ. ಅಲ್ಲಿಗೆ ಎಚ್. ಆರ್. ಇಂದಿರಾ ಅವರು ಕಟ್ಟಿದ ಸಂಘ ಕೊಚ್ಚಿಕೊಂಡು ಹೋಯಿತು. ಜಿ. ನಾರಾಯಣರ ಪರಿಷತ್ತಿನ ಅಧ್ಯಕ್ಷರ ಅವಧಿ ಮುಗಿದ ಮೇಲೆ ಪರಿಷತ್ತಿನ ಈ ಮಹಿಳಾ ಘಟಕ 'ಕರ್ನಾಟಕ ಲೇಖಕಿಯರ ಸಂಘ'ವಾಗಿ ಪ್ರತ್ಯೇಕ ಅಸ್ತಿತ್ವ ಪಡೆದುಕೊಂಡಿತು.

ಕನ್ನಡ ಲೇಖಕಿಯರ ಸಂಘದ ಸದಸ್ಯರೂ, ಸಲಹೆ–ಸಹಕಾರ

ನೀಡುತ್ತಿದ್ದ ಹಿರಿಯ ಲೇಖಕಿಯರು – ಎಂ. ಕೆ. ಇಂದಿರಾ, ನೀಳಾದೇವಿ, ವಿಶಾಲಾಕ್ಷಿ ದಕ್ಷಿಣಾಮೂರ್ತಿ, ಅನಸೂಯರೆಡ್ಡಿ, ಅನುಪಮಾ ನಿರಂಜನ, ಎ. ಪಂಕಜ, ಎನ್. ಪಂಕಜ, ನಿರುಪಮಾ, ದೇವಕಿ ಮೂರ್ತಿ, ವಿಜಯಶ್ರೀ ಮೊದಲಾದ ಎಲ್ಲ ಕನ್ನಡ ಲೇಖಕಿಯರು ಸಂಘದಲ್ಲಿದ್ದರು. ಎಲ್ಲರನ್ನೂ ಹೊಸ ಸಂಘಕ್ಕೆ ಸದಸ್ಯರಾಗಿಸಿಕೊಂಡರು. ಇದೆಲ್ಲದಕ್ಕೂ ಎಚ್. ಎಸ್. ಪಾರ್ವತಿಯವರು ಕೊಟ್ಟ ಕಾರಣ 'ಕನ್ನಡ ಲೇಖಕಿಯರ ಸಂಘ'ದಲ್ಲಿ ಏಷ್ಯನ್ ಟ್ರಾವಲ್ ಲೈನ್ಸ್‌ನ ಮಾಲೀಕರೂ 'ಕತೆಗಾರ'ದ ಸಂಪಾದಕರೂ ಆಗಿದ್ದ ಎಚ್. ವಿ. ನಾರಾಯಣ್ ಹಾಗೂ ಎ. ಎಸ್. ಮೂರ್ತಿಯವರ ನಿಯಂತ್ರಣವಿತ್ತೆಂಬುದು. ಆದರೆ 'ಕರ್ನಾಟಕ ಲೇಖಕಿಯರ ಸಂಘ'ಕ್ಕೂ ಜಿ. ನಾರಾಯಣರ ನೇತೃತ್ವವಿತ್ತು. ಟಿ. ಸುನಂದಮ್ಮನವರನ್ನು ಅದರ ಮೊದಲ ಅಧ್ಯಕ್ಷರನ್ನಾಗಿ ಮಾಡಿಸಿದರು. ಇದರಿಂದ ನನ್ನ ಮನಸ್ಸಿಗೆ ಸ್ವಲ್ಪ ಬೇಸರವಾಯಿತು. ಅವರ ಕಾರ್ಯಕ್ರಮಗಳಿಗೆ ಹೋಗುತ್ತಲೂ ಇರಲಿಲ್ಲ. ಆ ದಿನಗಳಲ್ಲಿ ಪತ್ರಕರ್ತೆಯರ ಸಂಘಟನೆ ಇರಲಿಲ್ಲ. ನೂಪುರ್ ಬಸು ೮೦ರ ದಶಕದಲ್ಲಿ ಪ್ರೆಸ್‌ಕ್ಲಬ್‌ನಲ್ಲಿ ಪ್ರಾರಂಭಿಸಿದರು. ಅದು ಬಹಳ ಕಾಲ ಉಳಿಯಲಿಲ್ಲ. ಇವತ್ತಿನವರೆಗೆ ಪತ್ರಕರ್ತೆಯರ ಗಟ್ಟಿಯಾದ ಸಂಘಟನೆ ಇಲ್ಲ. ಮೈಸೂರಲ್ಲಿ ಕುವೆಂಪು ನೇತೃತ್ವದಲ್ಲಿ ನಡೆದ ಒಕ್ಕೂಟಕ್ಕೆ ಬ್ರಾಹ್ಮಣರಿಗೆ ಪ್ರವೇಶವಿಲ್ಲ ಎಂದರು. ಲಂಕೇಶರೊಡನೆ ಅನೇಕ ಚಳವಳಿಗಳಲ್ಲಿ ಭಾಗವಹಿಸಿದೆ. ಅಡಿಗರು ಧರ್ಮಸ್ಥಳ ಸಮ್ಮೇಳನಾಧ್ಯಕ್ಷರಾದಾಗ ಇಲ್ಲಿ ನಡೆದ ಪರ್ಯಾಯ ಸಮ್ಮೇಳನದ ಕಾರ್ಯಕಾರಿ ಸಮಿತಿಯಲ್ಲಿದ್ದೆ. ಹಾ. ಮಾ. ನಾಯಕರ ಅಂಕಣ ಬರಹಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಬಂದದ್ದನ್ನು ಸೌಜನ್ಯ ಮೀರಿ ಟೀಕಿಸಿದ ಡಿ. ಆರ್. ನಾಗರಾಜ್, ಶೂದ್ರ ಶ್ರೀನಿವಾಸ್ ಮೊದಲಾದವರ ವರ್ತನೆಯನ್ನು ವಿರೋಧಿಸಿ ದೂರ ಸರಿದೆ. ಆದರೆ ಅದರ ವರದಿ ಮಾಡಿದ್ದೇನೆ. 'ಧರ್ಮಕಾರಣ'ದ ಬಗ್ಗೆ ಲಂಕೇಶರು ಚಳವಳಿ ಮಾಡಿದಾಗ, ಜಿ. ಎಸ್. ಎಸ್. ಕನ್ನಡಪರ ಹೋರಾಟ ಪ್ರಾರಂಭಿಸಿದಾಗ ನಾನೂ ಇದ್ದೆ. ಆಗ ಹೆಣ್ಣು ಮಕ್ಕಳು ಚಳವಳಿಗೆ ಬರುತ್ತಿದ್ದುದೇ ಕಡಿಮೆ. ಮುಂದೆ ಗೋಕಾಕ್ ಚಳವಳಿ, ನಂಜುಂಡಸ್ವಾಮಿಯವರ ಜೊತೆ, ಸಿಜಿಕೆ ಜೊತೆ ಅನೇಕ ಚಳವಳಿಗಳಲ್ಲಿದ್ದೆ. ಜಿ. ರಾಮಕೃಷ್ಣ ನೇತೃತ್ವದಲ್ಲಿ ಕೋಮು ಸೌಹಾರ್ದಕ್ಕೆ, ಬಾಬ್ರಿ ಮಸೀದಿ ಪತನದ ಪೂರ್ವಭಾವಿ ನಡೆದ ಕಾಲ್ನಡಿಗೆ ಜಾಥಾಗೂ, ತುರ್ತು ಪರಿಸ್ಥಿತಿಯಲ್ಲಿ ನಡೆದ ಪ್ರತಿಭಟನೆಗೂ ಎಲ್ಲ ಕಡೆ ನಾನಿದ್ದೆ.



**ಹೊಸತು :** ಮೇಡಂ, ನೀವು ಆಗ ನಡೆದಿರುವ ಘಟನೆಯೊಂದನ್ನು ಉದಾಹರಿಸುತ್ತಾ ಕರ್ನಾಟಕ ಲೇಖಕಿಯರ ಸಂಘದೊಂದಿಗಿನ ನಿಮ್ಮ ದೂರತ್ವವನ್ನು ಕುರಿತು ಹೇಳುತ್ತಿದ್ದೀರ. ಆದರೆ, ಅದಕ್ಕಿಂತ ಭಿನ್ನವಾದ ಯಾವುದಾದರೂ ತಾತ್ವಿಕ ನಿಲುವು ನಿಮ್ಮ ಕ್ರಿಯೆಯ ಹಿಂದೆ ಇತ್ತಾ?

**ವಿಜಯಾ :** ನಿಜ. ಮಹಿಳೆಯರಿಗೇ ಪ್ರತ್ಯೇಕ ಸಂಘಟನೆಯ ಅಗತ್ಯವನ್ನು ನಾನು ವಿರೋಧಿಸಿದ್ದು ನಿಜ. ನನ್ನಂತೆ ಚಿ. ನ. ಮಂಗಳಾ, ಅನುಪಮಾ ನಿರಂಜನ ಅವರುಗಳೂ ಕೂಡ ಸ್ತ್ರೀ ಪ್ರತ್ಯೇಕತೆಯನ್ನು ವಿರೋಧಿಸುತ್ತಿದ್ದರು. ನಾನು ಜಿ. ನಾರಾಯಣ ಅವರು ಅಧ್ಯಕ್ಷರಾಗಿದ್ದಾಗ ನಡೆಸುತ್ತಿದ್ದ ಪರಿಷತ್ತಿನ ಕಾರ್ಯಕಲಾಪಗಳಲ್ಲಿ ಸ್ತ್ರೀಯರ ಬಗೆಗಿನ ಅವರ ಧೋರಣೆಗಳನ್ನು ಕಟುವಾಗಿ ಟೀಕಿಸುತ್ತಿದ್ದೆ. ತುಂಬ ತೀಕ್ಷ್ಣವಾಗಿ, ಬಹು ಒರಟಾಗಿ ಬರೆಯುತ್ತಿದ್ದೆ. ನಾನು ಆಗ ಈಗಿನಷ್ಟು ಮೃದುವಾಗಿರಲಿಲ್ಲ. ಅವರು ಅಧ್ಯಕ್ಷರಾಗಿದ್ದಾಗ ಜವರೇಗೌಡರನ್ನು ಅಧ್ಯಕ್ಷರಾಗಿ ಮಾಡಿ ಸಮ್ಮೇಳನ ನಡೆಸಿದರು. ರಾಜರತ್ನಂಗೆ ಕೊಡಲಿಲ್ಲ ಅಂತಲೂ ಪಿ. ಲಿಂಗಯ್ಯ ಮೊದಲಾದವರೊಂದಿಗೆ ಧರಣಿ ಕುಳಿತೆವು. ಆ ಸಮ್ಮೇಳನದಲ್ಲಿ ಮಹಿಳಾ ಗೋಷ್ಠಿ ಇತ್ತು. ಮಹಿಳೆ ಬಗ್ಗೆ ಮಹಿಳೆಯೇ ಮಾತಾಡಬೇಕೆ, ಪುರುಷರೇಕೆ ಮಾತಾಡಬಾರದು ಅಂತ ನಾನು, ಚಿ. ನ. ಮಂಗಳಾ, ಅನುಪಮ ನಿರಂಜನ ಧರಣಿ ಮಾಡಿದೆವು. ಆ ಪ್ರತಿಭಟನೆಗೆ ಪ್ರೇರಣೆ ನೀಡಿದವರು ದ. ರಾ. ಬೇಂದ್ರೆ. ಮಹಿಳಾ ಪ್ರಾತಿನಿಧ್ಯ ಕುರಿತಂತೆ ನಾವಾಡುತ್ತಿದ್ದ ಜಗಳ, ಹಠದ ಪರಿಣಾಮ ವಾಗಿಯೇ ಜಿ. ನಾರಾಯಣರು ಮಂಡ್ಯದಲ್ಲಾದ ಸಮ್ಮೇಳನಕ್ಕೆ ಜಯದೇವಿ ತಾಯಿ ಲಿಗಾಡೆಯವರನ್ನು ಅಧ್ಯಕ್ಷರನ್ನಾಗಿಸಿದರು. ಆಗಲೂ ಕೆಲವು ಕಾರಣಕ್ಕೆ ವಿರೋಧ ವ್ಯಕ್ತಮಾಡಿದ್ದೆ! ನಂತರದ ದಿನಗಳಲ್ಲಿ ಹೇಮಲತಾ ಮಹಿಷಿಯವರು ಸಂಘದ ಅಧ್ಯಕ್ಷರಾದ ಮೇಲೆ ನಾನು ಕರ್ನಾಟಕ ಲೇಖಕಿಯರ ಸಂಘದ ಕಾರ್ಯಕ್ರಮಗಳಿಗೆ ಹೋಗಲಾರಂಭಿಸಿದೆ. ನಾಗಮಣಿ, ಉಷಾ ರೈ, ಸಂಧ್ಯಾರೆಡ್ಡಿ, ವಸುಂಧರಾ ಎಲ್ಲರೂ ನನಗೆ ಪ್ರಿಯವಾದವರೇ.

**ಹೊಸತು :** ಬೇರೆ ಲೇಖಕಿಯರಿಗೆ ಹೋಲಿಸಿದರೆ, ನಿಮ್ಮ ಕಾರ್ಯವ್ಯಾಪ್ತಿ ವಿಶಾಲವಾಗಿರುವುದರಿಂದಲೂ ನೀವು ಪ್ರತ್ಯೇಕತೆಯನ್ನು ಕಾಯ್ದುಕೊಳ್ಳಲು ಕಾರಣವಾಗಿರಬಹುದಾ?

**ವಿಜಯಾ :** ಒಂದು ರೀತಿಯಲ್ಲಿ ನನ್ನ ಕಾರ್ಯಕ್ಷೇತ್ರ ವಿಸ್ತಾರವಾಗಿತ್ತು. ೧೯೭೪ರಲ್ಲಿಯೇ ಬೀದಿ ನಾಟಕ ಬರೆದು ಆಡಿಸುವುದರಲ್ಲಿ ತೊಡಗಿಕೊಂಡಿದ್ದೆವು. ೧೯೭೫ರ ವೇಳೆಗಾಗಲೇ ನಾನು ಪ್ರೆಸ್ ಹಾಕಿದ್ದೆ. ಅದು ಎಮರ್ಜೆನ್ಸಿಯ ಸಂದರ್ಭ. ರಾತ್ರೋ ರಾತ್ರಿ ಕರಪತ್ರಗಳನ್ನು ಪ್ರಿಂಟ್ ಮಾಡಿ ಹಂಚುವುದಕ್ಕೆ ಸಿದ್ಧ ಮಾಡುತ್ತಿದ್ದೆವು. ಅನಂತಮೂರ್ತಿಯವರು ಪ್ರಿಂಟ್ ಮಾಡುವ ಮಾಹಿತಿಯನ್ನು ಕಳುಹಿಸಿಕೊಡುತ್ತಿದ್ದರು. ನಮ್ಮ ಪ್ರೆಸ್‌ಗೆ ಶಂಕರಪ್ಪ ಬರುತ್ತಿದ್ದರು. ಎಸ್. ವೆಂಕಟ್ರಾಮ್ ಭೂಗತರಾಗಿದ್ದರು. ಅವರನ್ನು ನೋಡಲು ಅನಂತಮೂರ್ತಿಯವರು ಕಳಿಸುತ್ತಿದ್ದ ಮಾಹಿತಿ ತಲುಪಿಸಲು ಗುಟ್ಟಾಗಿ ಹೋಗುತ್ತಿದ್ದೆವು. ಸ್ನೇಹಲತಾ, ಜಾರ್ಜ್ ಫರ್ನಾಂಡಿಸ್ ಮೊದಲಾದವರ ಜೊತೆ ಎಮರ್ಜೆನ್ಸಿ ವಿರೋಧಿ ಚಟುವಟಿಕೆಯಲ್ಲಿದ್ದೆ. ಈ ವ್ಯಾಪಕವಾದ ಕಾರ್ಯ ಚಟುವಟಿಕೆಯಲ್ಲಿ ಮುಳುಗಿ ಹೋಗಿರುವಾಗ ನನಗೆ ಲೇಖಕಿಯರ ಸಂಘದ ಸೀಮಿತ ಚಟುವಟಿಕೆಗಳು ಅಷ್ಟು ಮುಖ್ಯ ಅಂತ ಅನ್ನಿಸಲಿಲ್ಲ.

**ಹೊಸತು :** ನೀವು ಸರ್ಕಾರ ನೀಡುವ ಪ್ರಶಸ್ತಿಗಳನ್ನು ಸ್ವೀಕರಿಸದೇ ನಿಮ್ಮದೇ ಪ್ರತ್ಯೇಕತೆಯನ್ನು ಕಾಯ್ದುಕೊಂಡಿದ್ದೀರಿ. ಇದರ ಹಿಂದಿನ ತಾತ್ವಿಕ ನಿಲುವೇನು?

**ವಿಜಯಾ :** ನನಗೆ ಮೊದಲು ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಬಂದದ್ದು ನನ್ನ 'ಬಂದರೋ ಬಂದರು' ಬೀದಿ ನಾಟಕ ಪುಸ್ತಕಕ್ಕೆ. ಆಗ ಡಾ॥ ಹಾ. ಮಾ. ನಾಯಕ್ ಅಧ್ಯಕ್ಷರಾಗಿದ್ದರು. ಆ ಸಂದರ್ಭದಲ್ಲಿ ಅ. ನ. ಸುಬ್ಬರಾಯರು ತಮ್ಮ ಕಲಾಶಾಲೆಯನ್ನು ಅಭಿವೃದ್ಧಿಪಡಿಸಲು ಸಹಾಯ ಕೋರಿ ಒಂದು ಮನವಿಯನ್ನು ಹಿಡಿದುಕೊಂಡು ಬಂದು ಹನುಮಂತಯ್ಯನವರನ್ನು ಕಾಣಬೇಕೆಂದು ಪ್ರಯತ್ನಿಸಿದಾಗ ಅವರತ್ತ ದೃಷ್ಟಿಯನ್ನು ಹರಿಸದೆ ಕಡೆಗಣಿಸಿ ಹನುಮಂತಯ್ಯ ಹೊರಟು ಹೋದರು. ಇದು ನನ್ನ ಮನಸ್ಸಿಗೆ ಬಹಳ ಬೇಜಾರಾಗಿತ್ತು. ಅವರಿಗೆ ದೇವಾಲಯ ಕಟ್ಟುವುದೇ ಮುಖ್ಯವಾ? ಪಕ್ಕದಲ್ಲಿದ್ದ ಸುಂಕೇನಹಳ್ಳಿಯ ಸರ್ಕಾರಿ ಶಾಲೆ ಸೂರಿಲ್ಲದೆ ಮಳೆ ಬಂದಾಗ ಮಕ್ಕಳು

ತೊಂದರೆ ಅನುಭವಿಸುತ್ತಿರುವಾಗ ಇವರಿಗೆ ದೇವಾಲಯ ಕಟ್ಟುವುದೇ ಮುಖ್ಯವಾಯಿತಾ ಎಂದೆನಿಸಿತ್ತು. ಅದೇ ನಾಟಕಕ್ಕೆ ಸಾಹಿತ್ಯ ಅಕಾಡೆಮಿ ಬಹುಮಾನ ಮೊದಲ ಬಾರಿಗೆ ಬಂದದ್ದು. ವ್ಯವಸ್ಥೆಯನ್ನು ವಿರೋಧಿಸಿ ಬರೆದ ನಾಟಕಕ್ಕೆ ವ್ಯವಸ್ಥೆಯಿಂದ ಬಹುಮಾನ ಒಂದು ವಿಪರ್ಯಾಸ. ನಾಟಕ ಜನ ನೋಡಿ ಮೆಚ್ಚಿದ್ದರು. ಅದೇ ನನಗೆ ಪ್ರಶಸ್ತಿಯೆನಿಸಿತ್ತು. ಅದೇ ಕಾರಣ ಕೊಟ್ಟು ಪ್ರಶಸ್ತಿ ನಿರಾಕರಿಸಿದೆ. ಒತ್ತಡಕ್ಕೆ ಮಣಿದು ಪ್ರಶಸ್ತಿಯ ಸರ್ಟಿಫಿಕೇಟ್ ಮಾತ್ರ ಸ್ವೀಕರಿಸಿ, ನಗದನ್ನು ನಿರಾಕರಿಸಿದ್ದೆ. ಮುಂದೆ ಶಾಂತರಸರು ಅಧ್ಯಕ್ಷರಾಗಿದ್ದಾಗ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿಯ ನಗದು ನಿರಾಕರಿಸಿ ಸರ್ಟಿಫಿಕೇಟ್ ಮಾತ್ರ ಪಡೆದಿದ್ದೆ. ಆಗೆಲ್ಲ, ಪ್ರಶಸ್ತಿ ವಿಜೇತರ ಪಟ್ಟಿಯಲ್ಲಿ ನಮ್ಮ ಹೆಸರನ್ನು ಹಾಕುವಾಗ ಬ್ರಾಕೆಟ್‌ನಲ್ಲಿ 'ನಗದು ಸ್ವೀಕರಿಸಿಲ್ಲ' ಎಂದು ನಮೂದಿಸುತ್ತಿದ್ದರು. ಆದರೆ ನಂತರದ ದಿನಗಳಲ್ಲಿ ಈ ಪದ್ಧತಿ ಮುಂದುವರೆಯಲಿಲ್ಲ. ಸರ್ಕಾರದ ಲೆಕ್ಕದಲ್ಲಿ ನಾನು ಹಣ ಸ್ವೀಕರಿಸಿದ ಹಾಗೇ ಆಯಿತಲ್ಲ. ಆದ್ದರಿಂದ ರೋಸಿ ಹೋಗಿ ಮುಂದೆ ರಾಜ್ಯೋತ್ಸವ ಪ್ರಶಸ್ತಿ, ಅತ್ತಿಮಬ್ಬೆ ಪ್ರಶಸ್ತಿ... ಮುಂತಾದ ಯಾವುದೇ ಸರ್ಕಾರದ ಪ್ರಶಸ್ತಿಯನ್ನೂ ತೆಗೆದುಕೊಳ್ಳಲಿಲ್ಲ. ಸರ್ಕಾರದ ಹಂಗಿಗೊಳಗಾಗುವೆನೋ ಎನ್ನುವ ಆತಂಕ ನನಗೆ. ಈ ವ್ಯವಸ್ಥೆಯನ್ನು ವಿರೋಧಿಸುವ ಸ್ವಾತಂತ್ರ್ಯ ನನಗಿರಬೇಕು. ಹಾಗೆಂದ ಮಾತ್ರಕ್ಕೆ ಪ್ರಶಸ್ತಿ ಪಡೆದವರು ಹಂಗಿಗೊಳಗಾಗಿ ಅಭಿವ್ಯಕ್ತಿ ಸ್ವಾತಂತ್ರ್ಯ ಕಳೆದುಕೊಂಡಿಲ್ಲ. ಆದರೆ ನನಗೆ ಈ ದಾರಿ ಸರಿ ಅನ್ನಿಸಿತು. ಖಾಸಗಿಯವರ ಪ್ರಶಸ್ತಿಗಳನ್ನು ಒಪ್ಪಿಕೊಂಡಾಗಲೂ ಆ ಹಣವನ್ನು ಸಾರ್ವಜನಿಕವಾಗಿ ಘೋಷಿಸಿ ಅದನ್ನು ಸಾರ್ವಜನಿಕ ಕಾರ್ಯಗಳಿಗಾಗಿ ಕೊಟ್ಟುಬಿಟ್ಟಿದ್ದೇನೆ. ಇದರಿಂದ ನನ್ನ ಮನಸ್ಸಿಗೆ ನೆಮ್ಮದಿ ಎನಿಸುತ್ತದೆ.



**ಹೊಸತು** : ನಿಮ್ಮ ಆತ್ಮಚರಿತ್ರೆಯನ್ನು ಕುರಿತೇ ಮತ್ತೊಂದು ಪ್ರಶ್ನೆ. 'ಪರ್ಸನಲ್ ಈಸ್ ಪೊಲಿಟಿಕಲ್' ಎಂಬ ಮಾತಿನ ಬಗ್ಗೆ ಹೇಳುತ್ತಾ ನೀವು ಸಾರ್ವಜನಿಕವಾಗಿ ನಿಮ್ಮ ಅನುಭವವನ್ನು ಅಭಿವ್ಯಕ್ತಿಸಿಕೊಂಡದ್ದರ ಬಗ್ಗೆ ಹೇಳಿದ್ದೀರ. ಆದರೆ ನೀವು ಕ್ರಿಯಾಶೀಲವಾಗಿ ನಿಮ್ಮ ಗಂಡನಿಂದ ಹೊರಬರಲು ಕಾನೂನಿನ ನೆರವು ತೆಗೆದುಕೊಳ್ಳಲಿಲ್ಲವೆ?

**ವಿಜಯಾ** : ಇಲ್ಲಮ್ಮ. ಇಂತಹ ವಿಚಾರಗಳೇ ಅಂದು ನನ್ನ ತಲೆಗೆ ಹೊಳೆದಿರಲಿಲ್ಲ. ಅದು ಆ ದಿನಗಳಲ್ಲಿ ಸುಲಭವೂ ಆಗಿರಲಿಲ್ಲ. ಮನೆಯವರಿಗೆ ಇಂದಲ್ಲ ನಾಳೆ ಸಂಸಾರ ಸರಿ ಹೋಗುತ್ತೆ ಎಂತಲೇ ನಂಬಿಕೆ ಇತ್ತು. ಒಂದು ಸಮಯ ನನ್ನ ಗಂಡ ನನ್ನನ್ನು ಬಿಟ್ಟು ಹೋಗದೆ ಇದ್ದಿದ್ದರೆ, ನಾನು ಎಲ್ಲ ಅನುಭವಿಸಿಕೊಂಡು ಅವರ ಜೊತೆಯೇ ಇರುತ್ತಿದ್ದೆನೋ ಏನೋ. ಆಗಷ್ಟೇ ಕಾಲೇಜು ಸೇರಿದ್ದೆ. ಆದರೂ ಅಂತಹ ಹೊಸ ವಿಚಾರಗಳು ನನಗೆ ಹೊಳೆದಿತ್ತು ಅಂಥ ಹೇಳಿದರೆ ತಪ್ಪಾಗುತ್ತದೆ. ಆದರೆ ಒಂದು ವಿಷಯ ನಿಜ, ನಾನು ಮದುವೆಯನ್ನು ಸಂಭ್ರಮದಿಂದ ಸ್ವೀಕರಿಸಿದ್ದಕ್ಕೆ ಕಾರಣ, ಸದ್ಯ ತಾಯಿಮನೆ ಬಿಟ್ಟು ಹೊರಗೆ ಹೋಗೋದಿಕ್ಕೆ ಸಂತೋಷ ಆಗಿತ್ತು. ಅದು ಒಂದು ರೀತಿಯ ವಿಮೋಚನೆಯೇನೋ ಅಂದ್ಕೊಂಡಿದ್ದೆ. ಆದರೆ ಅದೂ ಒಂದು ಸೆರೆಯಾದಾಗ ಮುಂದೇನು ಮಾಡಬೇಕೆಂದು ತೋಚಿರಲಿಲ್ಲ.

**ಹೊಸತು** : ಇವತ್ತಿನ ವಿಜಯಾಗೂ, ಹಿಂದೆ ನಾನು ೮೦ರಲ್ಲಿ ಕಂಡ ವಿಜಯಾಗೂ ಅಗಾಧ ವ್ಯತ್ಯಾಸ ಕಾಣಿಸುತ್ತದೆ. ಆ ಸಂದರ್ಭದಲ್ಲಿ 'ಶೂದ್ರ' ಪತ್ರಿಕೆಯಲ್ಲಿ "ನಾವು ಗಂಡಸರ ಮುಂದೆ ಸೋತು" ಎಂಬ ಲೇಖನವೊಂದನ್ನು ಬರೆದಿದ್ದಿರಿ. ಅದರಲ್ಲಿ ಹೆಂಗಸರ ಹೆರಿಗೆ ರಜೆ, ಭತ್ಯೆ ಕುರಿತು ಹೋರಾಟ ಮಾಡುತ್ತಿದ್ದ ನಮ್ಮಂಥವರನ್ನು ಕುರಿತು ಹೋರಾಟಗಳ ಬಗ್ಗೆ ಒಂದು ನೇತ್ಯಾತ್ಮಕವಾದ ದೃಷ್ಟಿಕೋನವನ್ನು ವ್ಯಕ್ತಪಡಿಸಿದ್ದಿರಿ. ಇವತ್ತಿನ ವಿಜಯಾ ಅದನ್ನು ಒಪ್ಪಲ್ಲ, ಅಂದ್ಕೋತೀನಿ.

**ವಿಜಯಾ** : ಹೌದು. ನನಗೆ ಆ ಸಂದರ್ಭ ನೆನಪಿದೆ. ಹೆಂಗಸರು ಹೆರಿಗೆ ರಜೆ, ಭತ್ಯೆ ಕೇಳಿದರೆ ಅದರಿಂದ ಉದ್ದಿಮೆಗೆ ತೊಂದರೆ ಆಗುತ್ತೆ ಅನ್ನುವ ನನ್ನ ಅಭಿಪ್ರಾಯಾನ ಪ್ರಶ್ನಿಸಿ ನೀವು ಮತ್ತೊಂದು ಲೇಖನ ಬರೆದಿದ್ದುದೂ ನನಗೆ ನೆನಪಿದೆ. ನನಗೆ ಆಗ ಸ್ನೇಹಿತರಾಗಿದ್ದ ರಚನಾ ಅಡ್ವರ್ಟೈಸ್‌ನ ಶ್ರೀ ಸಿ. ಆರ್. ರಾವ್ ಅವರೊಡನೆ ಹಲವಾರು ವಿಷಯಗಳನ್ನು ಚರ್ಚಿಸುತ್ತಿದ್ದೆ. ಅವರು ತುಂಬ ಓದಿಕೊಂಡಿದ್ದರು. ಬೊಂಬಾಯಿಯಿಂದ ಆಗಷ್ಟೇ ಬಂದಿದ್ದರು. ಅವರೇ ನನಗೆ ಎಸ್. ವೆಂಕಟ್ರಾಮ್ ಅವರ ಪರಿಚಯ ಮಾಡಿಸಿದ್ದೂ ಕೂಡ. ಅವರ ವಿಚಾರಗಳಿಂದ ಸಹಜವಾಗಿ ಪ್ರಭಾವಿತಳಾಗಿದ್ದೆ. ಅವರು ಮಾಲೀಕರಾದ್ದರಿಂದ ಅವರು ಅಂತಹ ವಿಚಾರಗಳನ್ನು ಪ್ರತಿಪಾದಿಸುತ್ತಿದ್ದರು. ಏನು ಮಾಡೋದು ಹೊಸ ವಿಶ್ಲೇಷಣೆ, ವಿಚಾರಗಳಿಗೆ ನಾನು ಲೇಟ್ ಕಮರ್. ಅನಂತರ ನನ್ನ ಹಲವಾರು ಆಲೋಚನೆಗಳನ್ನು ಬದಲಿಸಿಕೊಂಡಿದ್ದೇನೆ. ಅನುಭವ ಬಹಳಷ್ಟನ್ನು ಕಲಿಸಿದೆ.

**ಹೊಸತು** : ನೀವು ಮುಖ್ಯ ವಾಹಿನಿಯ ಪತ್ರಿಕಾ ವ್ಯವಸಾಯವನ್ನು ವೃತ್ತಿಯಾಗಿ ಮಾಡುವುದರ ಜೊತೆಗೆ ಮಾನಸ, ಸಂಕುಲ, ಮಹಿಳಾ ಮುನ್ನಡೆ, ಹೊಸತು ಪತ್ರಿಕೆಗಳ ಜೊತೆಗೂ ಒಂದು ಸಂಬಂಧವಿಟ್ಟುಕೊಂಡಿದ್ದೀರ. ಉದ್ದಿಮೆ ಮತ್ತು ಚಳುವಳಿಯ ಭಾಗವಾಗಿರುವ ಈ ಎರಡೂ ಭಿನ್ನ ರೀತಿಯ ಪತ್ರಿಕೆಗಳೊಂದಿನ ಸಂಬಂಧದಲ್ಲಿ ಅವು ಬೇಡುವ ಗುಣಲಕ್ಷಣಗಳು ಹೇಗಿರುತ್ತವೆ?

**ವಿಜಯಾ** : ನಾನು ಈ ಚಳುವಳಿಯ ಸಣ್ಣ ಪತ್ರಿಕೆಗಳಿಗೆ ಬರುವ ವೇಳೆಗೆ ಪ್ರಧಾನ ವಾಹಿನಿಯ ಪತ್ರಿಕೆಯಿಂದ ಹೊರ ಬಂದಾಗಿತ್ತು. ನನ್ನದು ಯಾವುದೇ ದೊಡ್ಡ ತತ್ವ ಸಿದ್ಧಾಂತ ಅಂತ ಇಲ್ಲ. ನನ್ನದೇ ಆದ ಒಂದು ಅಘೋಷಿತ ಧರ್ಮ ಇದೆ. ನನ್ನ ಬಳಿಗೆ ಯಾವುದೇ ಹೆಣ್ಣು ಮಗಳು ಸಹಾಯ ಕೇಳಿಕೊಂಡು ಬಂದಾಗಲೂ ನಾನು ಸ್ಪಂದಿಸುತ್ತೇನೆ. ಈ 'ಮಾನಸ' ಪತ್ರಿಕೆಯನ್ನೇ ತೆಗೆದುಕೊಳ್ಳಿ. ಅವರು ಮೊದಲು ಅದನ್ನು ಕಾಡುಗೋಡಿಯಲ್ಲಿ ಮಾಡುತ್ತಿದ್ದರು. ನಾನು ಅದಕ್ಕೆ ಪ್ರಿಂಟರ್ ಆಗಿ ನೆರವಾಗಿದೀನಿ. ಕಾಡುಗೋಡಿಯಲ್ಲಿ ಒಂದು ಹೆಣ್ಣು ಹುಡುಗಿಗೆ ಕೆಲಸ ಕೊಡಿಸಬೇಕೆಂದು ಒಂದು ಕೊಠಡಿಯನ್ನು ತೆಗೆದುಕೊಂಡು ಅವಳಿಗೆ ಮೊಳೆ ಜೋಡಿಸುವ ಪ್ಲಾಂಟನ್ನು ಹಾಕಿಕೊಟ್ಟಿದ್ದರು. ಅಲ್ಲಿ ಮೊಳೆ ಜೋಡಿಸಿ ಸಿದ್ಧವಾದ ಆ ಫ್ಲೇಟ್(ಚೆಸ್)ಗಳನ್ನು ನಮ್ಮ ಗುರು ಮೋಟರ್ ಬೈಕಿನಲ್ಲಿ ಹೋಗಿ ತಂದು ಇಲ್ಲಿ ಪ್ರೆಸ್‌ನಲ್ಲಿ ಪ್ರಿಂಟ್ ಮಾಡಿಕೊಡ್ತಿದ್ದ. ಆಗ ನ್ಯೂಸ್ ಪ್ರಿಂಟಿಗೂ ಬಹಳ ತೊಂದರೆಯಿತ್ತು. ನನಗೆ ಸಾಧ್ಯವಾದಲ್ಲೆಲ್ಲ ನೆರವಾಗಿದ್ದೇನೆ.

**ಹೊಸತು** : ನೀವು ಬೃಹತ್ ಯೋಜನೆಗಳಿಗಾಗಿ ದುಡಿಯುವುದರಲ್ಲಿ ನಿಮ್ಮ ಜೀವನದ ಬಹುಸಮಯವನ್ನು ಕಳೆದಿದ್ದೀರಿ. ಉದಯಭಾನು ಕಲಾಸಂಘ, ನವಕರ್ನಾಟಕ ಪ್ರಕಾಶನ ಮುಂತಾಗಿ. ಹೀಗೆ ವಿವಿಧ ಸಂಸ್ಥೆಗಳಲ್ಲಿ ದುಡಿಯುವಾಗಿನ ನಿಮ್ಮ ಅನುಭವವು ವಿವಿಧ ರೀತಿಯದಾಗಿರುತ್ತದೆ. ಇದನ್ನು ಕುರಿತು ಸ್ವಲ್ಪ ಹೇಳುತ್ತೀರ?

**ವಿಜಯಾ** : ನಾನು ಸ್ವಯಂ ನಿವೃತ್ತಿ ತೆಗೆದುಕೊಂಡ ಮೇಲೆ ಕೆಲವು ಬೃಹತ್ ಯೋಜನೆಗಳಿಗೆ ದುಡಿದಿದ್ದು ನಿಜ. ಯಾವುದೇ ಹಿರಿಯರ ಬಗ್ಗೆ ನನ್ನ ಕಾಮೆಂಟ್ ಅಂತ ಅಲ್ಲದಿದ್ದರೂ ಇಂತಹ ಯೋಜನೆಗಳಲ್ಲಿ ಸಮಿತಿ ಅಂತ ಇದ್ದರೂ ಬಹುಪಾಲು ಜವಾಬ್ದಾರಿಯನ್ನು ನಾನೇ ಹೊತ್ತುಕೊಳ್ಳಬೇಕಾಗಿ ಬಂದಿತ್ತು. ಕನ್ನಡ ಚಲನಚಿತ್ರದ ಇತಿಹಾಸದ ಬಗ್ಗೆಯಂತೂ ನಿಮಗೆ ಗೊತ್ತಲ್ಲ. ಅಷ್ಟು ಕಷ್ಟಪಟ್ಟು, ಆದರೆ ತುಂಬ ಸಂತೋಷದಿಂದಲೇ ಕೆಲಸ ಮಾಡಿದ್ದರೂ ಅದಕ್ಕೆ ಸಿಗಬೇಕಾದ ಮಾನ್ಯತೆ ಸಿಗಲಿಲ್ಲ. ಮಾರಾಟ ನಿಷೇಧ ಮಾಡಿದರು. ಆ ಇಡೀ ಯೋಜನೆಯಲ್ಲಿ ಹಲವಾರು ಮಂದಿ ಭಾಗಿಗಳಾಗಿದ್ದರು, ಸಿದ್ಧವಾದ ಲೇಖನಗಳನ್ನೂ ಓದಲೆಂದೇ ೧೨ ಸದಸ್ಯರ ಸಲಹಾ ಸಮಿತಿ ಇತ್ತು. ಎಲ್ಲರೂ ಆ ಲೇಖನಗಳನ್ನು ಅಚ್ಚಿಗೆ ಮೊದಲು ಓದಿ, ಒಪ್ಪಿದ್ದರು. ಓದಿದ್ದಾರೆ. ಆದರೆ



ತಕರಾರುಗಳಿದ್ದಾಗ ಮೂಲವನ್ನು ಉಳಿಸುವ ಕೆಲಸಕ್ಕೆ ನಿರ್ದೇಶಕರುಗಳಾದ ಗಿರೀಶ್ ಕಾಸರವಳ್ಳಿ, ಸಿದ್ಧಲಿಂಗಯ್ಯ ಬಿಟ್ಟರೆ ಉಳಿದವರು ಯಾರೂ ಮುಂದಾಗದೇ ಮೌನವಾದರು!

**ಹೊಸತು :** ಮೇಡಂ, ಈ ಚಲನಚಿತ್ರ ಸಂಪುಟದ ಅನುಭವ ಮುಂದೆ ನಿಮಗೆ ಇಂತಹ ಪ್ರಾಜೆಕ್ಟ್‌ಗಳನ್ನು ತೆಗೆದುಕೊಳ್ಳಲಿಕ್ಕೆ ಹಿಂದೇಟು ಹಾಕುವಂತೆ ಮಾಡಿತಾ?

**ವಿಜಯಾ :** ಹಿಂದೇಟು ಹಾಕುವಂತೆ ಮಾಡಲಿಲ್ಲ. ಆದರೆ ಹೆಚ್ಚು ಎಚ್ಚರವಹಿಸುವಂತೆ ಮಾಡಿತು. ಅನುಭವಕ್ಕಿಂತ ದೊಡ್ಡದು ಯಾವುದೂ ಇಲ್ಲಮ್ಮ. ಈ ಪ್ರಾಜೆಕ್ಟ್‌ನ ಅನುಭವ ತುಂಬ ಪಾಠ ಕಲಿಸಿತು. ಆಮೇಲೂ ಪ್ರಾಜೆಕ್ಟ್‌ಗಳನ್ನು ಮಾಡಿದೀನಲ್ಲಾ.

**ಹೊಸತು :** ನಿಮ್ಮ ಕಣ್ಣ ಮುಂದೆಯೇ ಹಲವಾರು ಸಾಹಿತ್ಯ ಚಳುವಳಿಗಳು ಹಾದುಹೋಗಿವೆ. ನವ್ಯ, ಪ್ರಗತಿಶೀಲ, ಬಂಡಾಯ... ಇತ್ಯಾದಿ. ಇವರಲ್ಲಿ ಬಹುಪಾಲು ಮಂದಿ ನಿಮ್ಮ ನಿಕಟವರ್ತಿಗಳೂ ಆಗಿರಬಹುದು. ಈ ಚಳುವಳಿಯ ಹಿನ್ನೆಲೆಯಲ್ಲಿ ನಿಮ್ಮ ಅನುಭವ ಏನು?

**ವಿಜಯಾ :** ಬಂಡಾಯ ಚಳುವಳಿಯ ಬಗ್ಗೆ ನನಗೆ ಹೇಳೋದಿದೆ. ದೇವಾಂಗ ಸಂಘದಲ್ಲಿ ಬಂಡಾಯ ಸಾಹಿತ್ಯ ಚಳುವಳಿಯ ಮೊದಲ ಸಮ್ಮೇಳನ ನಡೆದಾಗ, ಅದಕ್ಕೆ ಸಂಬಂಧಪಟ್ಟಂತೆ ಹಲವಾರು ಕೆಲಸಗಳಲ್ಲಿ ತೊಡಗಿಕೊಂಡೆ. ಕೆ. ಎಂ. ಶಂಕರಪ್ಪ ಅವರು ಅದರಲ್ಲಿ ಹೆಚ್ಚು ಕ್ರಿಯಾಶೀಲವಾಗಿ ತೊಡಗಿ ಕೊಂಡಿದ್ದರು. ಸಮ್ಮೇಳನಕ್ಕೆ ಹಣ ಸಂಗ್ರಹಿಸುವುದರಿಂದ ಹಿಡಿದು ನಿರಂಜನ ಅವರನ್ನು ಸಮ್ಮೇಳನಕ್ಕೆ ಕರೆದುಕೊಂಡು ಬರಲು ಒಪ್ಪಿಸಿ, ವ್ಯವಸ್ಥೆ ಮಾಡುವವರೆಗೂ ಕೆಲಸ ಮಾಡಿದ್ದೆ. ಆಶ್ಚರ್ಯ ಅಂದರೆ, ನಮ್ಮ ಮನೆಯಲ್ಲಿ ಆಶ್ರಯ ಪಡೆದಿದ್ದ ಶಾಂತಾ ಎಂಬ ಹುಡುಗಿಯನ್ನು ಹೆಚ್ಚು ತೊಡಗಿಸಿಕೊಂಡರು, (ಈಗಿರುವ 'ನಾಯಕ'ರು ಆಗ ಮುಂಚೂಣಿಯಲ್ಲಿರಲಿಲ್ಲ) ನನಗೆ ಈ ಸಮ್ಮೇಳನಕ್ಕೆ ಆಹ್ವಾನವೇ ಇರಲಿಲ್ಲ. ಅದಕ್ಕೆ ನಾನು ಬ್ರಾಹ್ಮಣಳಾಗಿರುವುದೇ ಕಾರಣ ಅಂತ ಹೇಳಿದರು. ತುಂಬ ಬೇಜಾರಾಯ್ತು. ವರದಿಗಾರ್ತಿಯಾಗಿ ಹೋಗಿ ಸಮ್ಮೇಳನದ ಕಾರ್ಯಕ್ರಮವನ್ನು ವರದಿಮಾಡಿದೆ. ಅದೇಕೋ ಅವರ ದೃಷ್ಟಿಕೋನವೇ ಇಷ್ಟವಾಗಲಿಲ್ಲ. ಹಾಗಾಗಿ ಇಲ್ಲಿಯವರೆಗೂ ಬಂಡಾಯದ ಕಾರ್ಯಕ್ರಮಗಳಿಗೆ ಒಪ್ಪಿಕೊಂಡು ಹೋದದ್ದೇ ಕಡಿಮೆ.

**ಹೊಸತು :** ಮೇಡಂ, ಇವತ್ತಿನ ಸಮಕಾಲೀನ ಸಂದರ್ಭದ ಚಳುವಳಿಗಳ ವಿಷಯಕ್ಕೆ ಬರುವುದಾದರೆ, ಐಕ್ಯ ಹೋರಾಟ ಬೇಕು ಅಂತ ಪ್ರಗತಿಪರರೆಲ್ಲ ಒಕ್ಕೊರಲಿನಲ್ಲಿ ಹೇಳ್ತಾರೆ. ಆದರೆ ನಿಜವಾಗಿ ಐಕ್ಯ ಹೋರಾಟಗಳು ನಡೆಯುತ್ತಿಲ್ಲ. ನೀವು ಸಾಮಾಜಿಕ ಚಳುವಳಿಗಳ ಜೊತೆ ಕ್ರಿಯಾಶೀಲರಾಗಿರುವವರು. ಇದಕ್ಕೆ ಕಾರಣ ಏನು ಹೇಳ್ತೀರಾ?

**ವಿಜಯಾ :** ನೀವು ಹೇಳೋದು ನಿಜ. ಕೆಲವೊಮ್ಮೆ ಚಳುವಳಿಗಳಿಗೆ ಅವರ ಕಾರ್ಯವೈಖರಿ ಇಷ್ಟವಾಗದಿದ್ದರೂ ಸಾಲಿಡಾರಿಟಿ ಅಂತ ಸೇರಿಕೊಳ್ತೀವಿ. ನಾನು ಸಾಮಾನ್ಯವಾಗಿ ಯಾವುದೇ ಚಳುವಳಿ ಕಡು ಬಡವರಿಗೆ ಸಹಾಯ ಮಾಡುತ್ತೆ, ಅಂದರೆ ನಾನು ಅದರೊಂದಿಗೆ ಸೇರಿಕೊಳ್ತೀನಿ. ಈ ಭೂಮಿ ಮತ್ತು ವಸತಿಹೀನರ ಚಳುವಳಿಯಲ್ಲಿ ನಾನು ಪಾತ್ರವಹಿಸಿದ್ದು ಅದಕ್ಕೆ. ನೀವು ಹೇಳಿದಂತೆ ಎಷ್ಟೇ ಐಕ್ಯ ಹೋರಾಟದ ಮಾತು ಇಂದು ನಾವು ಕೇಳುತ್ತಿದ್ದರೂ ಇಂದಿನ ಚಳುವಳಿಗಳು ಛಿದ್ರ ಛಿದ್ರವಾಗಿ ಹೋಗುತ್ತಿರುವುದನ್ನು ನೋಡುತ್ತಿದ್ದೇವೆ. ಇಂತಹ ಪ್ರತಿಕೂಲ ವಾತಾವರಣದಲ್ಲೂ ತಣ್ಣಗೆ ಯಾವುದೇ ಪ್ರಚಾರದ ಆಸೆ ಇಲ್ಲದೆ ಕೆಲಸ ಮಾಡೋರು ನಮ್ಮ ನಡುವೆ ಇದಾರೆ, ಎನ್ನುವುದೇ ಸಮಾಧಾನ. ಉದಾಹರಣೆಗೆ, ಇತ್ತೀಚೆಗೆ ಬೀದರ್‌ನ ಶಾರದಾ ಅನ್ನುವ ಹುಡುಗಿ ಅಲ್ಲಿ ಆದಿವಾಸಿಗಳ ನಡುವೆ ಕೆಲಸ ಮಾಡಿ ಅವರಿಗೆಲ್ಲಾ ಆಧಾರ್‌ಕಾರ್ಡ್ ಸಿಗುವಂತೆ ಮಾಡಿ, ಮನೆಗಳು ಸಿಗುವುದಕ್ಕೆ ಪ್ರಯತ್ನಿಸುತ್ತಿದ್ದಾರೆ. ಈ ಬಗ್ಗೆ ಪ್ರಜಾವಾಣಿಯಲ್ಲಿ ಲೇಖನವೊಂದು ಬಂದಿತ್ತು. ನೀವೂ ನೋಡಿರಬಹುದು. ಆದರೆ ಅವರು ಮಾಡಿದ್ದನ್ನು ಇನ್ನು ಕೆಲವರು ತಮ್ಮ ಸಾಧನೆ ಅಂತ ಹೇಳಿಕೊಂಡು ಅದರ ಕ್ರೆಡಿಟ್ ತೊಗೋಳಕ್ಕೆ ಹೋಗ್ತಾರೆ, ಅನ್ನುವುದು ಬೇಸರದ ವಿಷಯ.

**ಹೊಸತು :** ಎಂಭತ್ತರ ದಶಕದ ಚಳುವಳಿಗಳಿಗೂ ಇವತ್ತಿನದಕ್ಕೂ ಮುಖ್ಯವಾಗಿ ಏನು ವ್ಯತ್ಯಾಸ ಕಾಣುತ್ತೀರಿ?

**ವಿಜಯಾ :** ಇವತ್ತಿನ ಚಳುವಳಿಗಳಲ್ಲಿ ಮುಖ್ಯವಾಗಿ ಶೋ ಇರುತ್ತದೆ. ಪ್ರದರ್ಶನ ಹೆಚ್ಚು, ನಿಜವಾದ ಕಾಳಜಿ ಸ್ವಲ್ಪ ಕಡಿಮೆಯೇ. ಎಂದರೆ ಚಳವಳಿ ಒಂದು ಕಾರ್ಯಕ್ರಮ ಆಗಿದೆ. ಕೊನೆವರೆಗೆ ಹೋರಾಟ ಇರಲ್ಲ. ಎನ್.ಜಿ.ಓ.ಗಳಲ್ಲಿ ಇಂಥ ಪ್ರವೃತ್ತಿ ಹೆಚ್ಚು. ಹಿಂದೆ ನೋಡಿ ಚಳುವಳಿಯ ನಾಯಕತ್ವದಲ್ಲಿ ನಮಗೆ ಎಷ್ಟು ವಿಶ್ವಾಸ, ನಂಬಿಕೆ ಇರುತ್ತಿತ್ತೆಂದರೆ, ಅವರು ಹೋರಾಟಕ್ಕೆ ಕರೆ ಕೊಟ್ಟರೆ ಅದನ್ನು ಗೌರವಿಸಿ ಭಾಗವಹಿಸುತ್ತಿದ್ದೆವು. ನನ್ನದೇ ಒಂದು ಉದಾಹರಣೆಯನ್ನು ಹೇಳುವುದಾದರೆ, ಹಿಂದೆ ಒಮ್ಮೆ ನಾನು ಮಣಿಪಾಲ್‌ನಲ್ಲಿದ್ದೆ. ಇಲ್ಲಿ ಬೆಂಗಳೂರಿನಲ್ಲಿ ಎಂ. ಎಸ್. ಕೃಷ್ಣನ್ ಅವರು ಹೆಣ್ಣು ಮಗಳೊಬ್ಬಳಿಗೆ ವಿಧಿಸಿದ್ದ ಮರಣದಂಡನೆ ವಿರೋಧಿಸಿ ಒಂದು ದೊಡ್ಡ ಮೆರವಣಿಗೆಯನ್ನು ಸಂಘಟಿಸಿ ನಮಗೆ ಬರಲು ಆಹ್ವಾನಿಸಿದ್ದರು. ಆಗ ಮಣಿಪಾಲದಿಂದ ಬೆಂಗಳೂರಿಗೆ ಈ ಕಾರ್ಯಕ್ರಮದಲ್ಲಿ ಭಾಗವಹಿಸಲಿಕ್ಕೆಂದೇ ನಾನು ಬಂದಿದ್ದೆ. ಆದರೆ ಇಂದು ಅಂತಹ ಯಾವುದೇ ಕಾರ್ಯಕ್ರಮಕ್ಕೆ ಕರೆ ಬಂದರೂ ಎರಡು ಸಲ ಯೋಚಿಸಬೇಕಾಗುತ್ತದೆ. ಅದ್ಯಾಕೋ, ಪ್ರತಿಯೊಂದು ಸಂಘಟನೆಗೂ ಇನ್ನೊಬ್ಬರ ಮೇಲೆ ಅನುಮಾನ, ಅವಿಶ್ವಾಸ. ಹಾಗಾಗಿ ಏಕತೆ ಎನ್ನುವುದೇ ಬರೀ ಬಾಯಿಮಾತಿನ ಹೇಳಿಕೆಯಾಗಿದೆ.

**ಹೊಸತು :** ಮೇಡಂ, ನೀವು ಬೀದಿ ನಾಟಕಗಳನ್ನು ಆಡಿದ ಆರಂಭದ ಕಾಲದಲ್ಲಿ ಅದಕ್ಕೊಂದು ಪ್ರತಿಭಟನೆಯ ಅಂಶವಿತ್ತು. ಎಮರ್ಜೆನ್ಸಿ ಕಾಲದಲ್ಲಿ ಬೀದಿ ನಾಟಕಗಳನ್ನು ಆಡಿದಾಗ ಅದನ್ನು ಅಂದಿನ ಸರ್ಕಾರಗಳು ವಿರೋಧಿಸಿರಬಹುದು. ಆದರೆ ಇಂದು ಪ್ರಚಾರಕ್ಕಾಗಿ, ಸರ್ಕಾರದ ನೀತಿಯ ಪ್ರಸಾರಕ್ಕಾಗಿ ಬೀದಿ ನಾಟಕಗಳನ್ನು ಆಡಲಾಗುತ್ತಿದೆ. ಈಗ ಅದನ್ನು ಸರ್ಕಾರಕ್ಕಿಂತ ಹೆಚ್ಚಾಗಿ ರಾಜಕೀಯ ಕಾರ್ಯಕರ್ತರು ಪ್ರತಿಭಟಿಸುವ ಹೊಸ ಎಮರ್ಜೆನ್ಸಿ ಬಂದಿದೆ. ಈ ವ್ಯತ್ಯಾಸವನ್ನು ನೀವು ಹೇಗೆ ಕಾಣ್ತೀರ?

**ವಿಜಯಾ :** ಹೌದು. ೧೯೭೩-೧೯೭೪ರಲ್ಲಿ ಶುರು ಮಾಡಿದೆವು. ಅನಂತರ ನಾನು 'ಬಂದರೋ ಬಂದರು' ನಾಟಕ ಬರೆದೆ. ಅದು ಎಮರ್ಜೆನ್ಸಿಯ ಕಾಲವಾಗಿತ್ತು. ಈ ಬೀದಿನಾಟಕಗಳಲ್ಲಿ ನಮ್ಮದು ಒಂದು ರೀತಿಯ ಸುಧಾರಣಾವಾದಿ ನಿಲುವು ಆಗಿತ್ತು. ನನಗಿನ್ನೂ ನೆನಪಿದೆ. ಜಯನಗರ ಕಾಂಪ್ಲೆಕ್ಸ್‌ನಲ್ಲಿ ಒಂದು ಬೀದಿ ನಾಟಕೋತ್ಸವ ಆಯೋಜಿಸಿದ್ದೆವು. ಎ. ಎಸ್. ಮೂರ್ತಿಯವರು ಬಂದು ಭಾಷಣ ಮಾಡಿದರೆ, ಅದೆ ಒಂದು ಆಕರ್ಷಣೆ. ಅವರ ಆಕಾಶವಾಣಿ ಖ್ಯಾತಿ ತುಂಬ ಪ್ರಯೋಜನಕ್ಕೆ ಬರ್ತಿತ್ತು. ಮೊದಲ ನಾಲ್ಕು ದಿನಗಳು ಬೀದಿ ನಾಟಕಗಳು ಶಾಂತವಾಗಿ ನಡೆದವು. ಐದನೆಯ ದಿನ ಸಮುದಾಯದ ಪ್ರಸನ್ನ ಅವರು ಆ ದಿನಗಳಲ್ಲಿ ಮುಖ್ಯಮಂತ್ರಿ ಗುಂಡೂರಾಯರ ಹೇಳಿಕೆಯಾಗಿದ್ದ, ಇಂದಿರಾ ಕೃಪಾಪೋಷಿತ ನಾಟಕ ಮಂಡಳಿ ಅಂತ (ನಾಟಕದ ಹೆಸರು) ಬ್ಯಾನರ್ ಹಾಕಿ 'ಮೊಯಿಲಿ ಟೇಪ್ ಹಗರಣ' ಕುರಿತು ನಾಟಕ ಮಾಡಿಸಿದರು. ಆ ನಾಟಕದ ವಿಷಯ ಮತ್ತು ಮಾತುಗಳು ತುಂಬ ನೇರವಾಗಿದ್ದವು. ಸಹಜವಾಗಿಯೇ ಅಲ್ಲಿದ್ದ ಕಾಂಗ್ರೆಸ್ ಕಾರ್ಯಕರ್ತರು ನಾಟಕದವರ ಮೇಲೆ ಹಲ್ಲೆ ಮಾಡಿ ದೊಡ್ಡ ಗಲಾಟೆಯೇ ಆಗಿ ನಾಟಕ ನಿಂತುಹೋಯಿತು. ಮಾರನೆಯ ದಿನ ಕಲಾಕ್ಷೇತ್ರದಲ್ಲಿ ಇದನ್ನು ಪ್ರತಿಭಟಿಸಿ ಧರಣಿ, ಪ್ರತಿಭಟನೆಗಳೇ ನಡೆದವು. ಈ ದಿನಗಳಲ್ಲಿ ನೀವು ಗುರುತಿಸಿದ ಹಾಗೆ ಬೀದಿನಾಟಕ ಒಂದು ಚಳವಳಿ, ಪ್ರತಿರೋಧ ಆಗಿ ಬಹಳ ಕಡೆ ಉಳಿದಿಲ್ಲ. ರಾಜಕಾರಣಿಗಳು, ಬೇರೆಬೇರೆ ವ್ಯವಸ್ಥೆಗಳು, ಪ್ರಚಾರ











ವಿಜಯಾ ಅವರು ೧೯೪೨ರ ಮಾರ್ಚ್‌ನಲ್ಲಿ ದಾವಣಗೆರೆಯಲ್ಲಿ ಬಡಕುಟುಂಬದಲ್ಲಿ ಜನಿಸಿದರು. ಚಿಕ್ಕ ವಯಸ್ಸಿನಲ್ಲಿ ತಾಯಿಯ ಅಗಲಿಕೆ. ಅವರಿವರ ಸಂಬಂಧಿಗಳ ಕೃಪಾಕಟಾಕ್ಷದಲ್ಲಿ ಬೆಳೆದರು. 'ಮದುವೆ'ಯೆಂಬುದು ವಿಮೋಚನೆಯೇನೋ ಎಂದುಕೊಂಡವಳಿಗೆ ಅದೂ ನೋವಿನ ಕೂಪವಾಗಿ ಪರಿಣಮಿಸಿತು. ಹದಿವಯಸ್ಸಿಗೇ ಎರಡು ಗಂಡು ಮಕ್ಕಳ ತಾಯಿಯಾಗಿ, ಸಾಂಸಾರಿಕ ಬದುಕು ಸರಿದೂಗದಾಗ ಸ್ವತಂತ್ರ ಬದುಕನ್ನು ಕಟ್ಟಿಕೊಂಡವರು. ಹತ್ತನೆಯ ತರಗತಿ ಮಾತ್ರ ಓದಿದ್ದ ವಿಜಯ ಮಕ್ಕಳುಗಳ ಓದಿನ ಜೊತೆಯಲ್ಲೇ ಛಲದಿಂದ ತಮ್ಮ ಓದನ್ನು ಮುಂದುವರೆಸಿದರು. ಕನ್ನಡದಲ್ಲಿ ಎಂ.ಎ. ಮತ್ತು ಪಿಎಚ್.ಡಿ. ಮಾಡಿದ್ದು ಅವರ ಛಲದ ಸಾಧನೆಯೇ ಹೌದು.

ಹಲವಾರು ಕ್ಷೇತ್ರಗಳಲ್ಲಿನ ಅವರ ಕಾರ್ಯಚಟುವಟಿಕೆ ಅವರ ವ್ಯಕ್ತಿತ್ವಕ್ಕೆ ಆಳ, ಅಗಲಗಳನ್ನು ಕೊಟ್ಟಿರುವುದೇ ಅಲ್ಲದೆ ವಿಶಾಲವಾದ ಸ್ನೇಹವಲಯವನ್ನು ಸೃಷ್ಟಿಸಿದೆ. ಪ್ರಜಾಮತ, ಮಲ್ಲಿಗೆ, ತುಷಾರ, ರೂಪತಾರ, ಉದಯವಾಣಿ, ಅರಗಿಣಿ, ನಕ್ಷತ್ರಲೋಕ, ಬೆಳ್ಳಿಚುಕ್ಕಿ (ವಿಡಿಯೊ ಮ್ಯಾಗಜೈನ್) ಮುಂತಾದ ಪತ್ರಿಕೆಗಳೇ ಅಲ್ಲದೆ, ಸಂಕುಲ, ನಮ್ಮಮಾನಸ, ಹೊಸತು ಪತ್ರಿಕೆಗಳ ಜೊತೆಗೂ ತಮ್ಮ ಬಾಂಧವ್ಯವಿರಿಸಿಕೊಂಡಿದ್ದಾರೆ. ಪತ್ರಿಕೆಯ ಹೂರಣ ಎಷ್ಟು ಮುಖ್ಯವೋ ಅದರ ಅಂದ ಚೆಂದಕ್ಕೂ ಗಮನ ಕೊಡುವ ವಿಜಯ ಅವರು ಕಾಲಿಟ್ಟಲ್ಲೆಲ್ಲಾ ಅವರ ವಿಶಿಷ್ಟತೆಯ ಛಾಪು ಎದ್ದು ಕಾಣುತ್ತದೆ. ಕಲಾತ್ಮಕ ರುಚಿ ಹಾಗೂ ವಿವಿಧ ಕಲೆಗಳ ಬಗ್ಗೆ ಅವರು ರೂಢಿಸಿಕೊಂಡ ಆಸಕ್ತಿಗಳು ಹಲವಾರು. ಬೀದಿ ನಾಟಕ ರಚನೆ ಮತ್ತು ಚಿತ್ರಾ ನಾಟಕ ತಂಡ, ಸೂತ್ರದ ಬೊಂಬೆಯಾಟ ಆಡಿಸಲು ಕಟ್ಟಿದ 'ಪಪೆಟ್ ಲ್ಯಾಂಡ್', ಸಿನಿಮಾ ಪತ್ರಿಕಾ ಜಗತ್ತು, ಚಲನಚಿತ್ರೋತ್ಸವಗಳ ವ್ಯವಸ್ಥೆಯಲ್ಲಿ ಇವರದು ಸಿಂಹಪಾಲು. ಅಲ್ಲದೆ 'ಇಳಾ ಮುದ್ರಣ' ಎಂಬ ಸ್ವತಂತ್ರ ಮುದ್ರಣಾಲಯವೊಂದನ್ನು ಸ್ಥಾಪಿಸಿ ಇಳಾ ಪ್ರಕಾಶನವನ್ನು ನಡೆಸಿದರು.

ಕರ್ನಾಟಕದ ನಾಡು, ನುಡಿ, ಸಂಸ್ಕೃತಿಗಳ ಬಿಂಬವಾದ ಬೃಹತ್ ಯೋಜನೆಗಳಲ್ಲಿ ಇವರದು ಸಕ್ರಿಯ ಭಾಗವಹಿಸುವಿಕೆ. ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಬೃಹತ್ ಯೋಜನೆ 'ಕಿರಿಯರ ಕರ್ನಾಟಕ (ವಿಶ್ವಕೋಶ)' ಉದಯಭಾನು ಕಲಾಸಂಘದ ಮಹತ್ವದ ಯೋಜನೆಗಳಾದ "ಸ್ವಾತಂತ್ರ್ಯೋತ್ತರ ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ" ಮತ್ತು "ಬೆಂಗಳೂರು ದರ್ಶನ" ಸಂಪುಟಗಳ ನಿರ್ಮಾಣದಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದರು. ಕನ್ನಡ ವಿಶ್ವವಿದ್ಯಾಲಯ ಮತ್ತು ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿಯ ಯೋಜನೆಯಾದ "ಕನ್ನಡ ಚಲನಚಿತ್ರ ಇತಿಹಾಸ" ಮತ್ತು ನವಕರ್ನಾಟಕ ಪ್ರಕಾಶನದ "ಕಲಾ ದರ್ಶನ" ಯೋಜನೆಯಲ್ಲೂ ಅತ್ಯಂತ ಕ್ರಿಯಾಶೀಲವಾಗಿ ಕಾರ್ಯ ನಿರ್ವಹಿಸಿದ್ದಾರೆ. ಹೀಗೆ ಕನ್ನಡ ನಾಡಿನ ಸಾಂಸ್ಕೃತಿಕ ಲೋಕಕ್ಕೆ ಅವರು ನೀಡಿರುವ ಕಾಣಿಕೆ ಅಪಾರವಾದದ್ದು.

ಈ ಎಲ್ಲ ಸಾಂಸ್ಕೃತಿಕ ಚಟುವಟಿಕೆಗಳ ಜೊತೆಗೆ ಮಹಿಳಾ ಸಬಲೀಕರಣದ ಭಾಗವಾಗಿ ಗಾರ್ಮೆಂಟ್ ಮಹಿಳೆಯರು, ಪೌರ ಕಾರ್ಮಿಕರ ಸಂಘಟನೆ, ಮಾನಸ ಬಳಗ ಮುಂತಾದ ಚಟುವಟಿಕೆಗಳ ಜೊತೆಗೆ ಮಹಿಳಾ ಮುನ್ನಡೆಗಾಗಿ ಶ್ರಮಿಸಿದ್ದಾರೆ.

ತಮ್ಮ ಬರವಣಿಗೆ ಮತ್ತು ಕೆಲಸಗಳಿಗಾಗಿ ಕರ್ನಾಟಕ ಸಾಹಿತ್ಯ ಅಕಾಡೆಮಿ, ಮಾಧ್ಯಮ ಅಕಾಡೆಮಿ, ನಾಟಕ ಅಕಾಡೆಮಿಯ ಫೆಲೊ, ಮಾಸ್ತಿ ಪ್ರಶಸ್ತಿ, ಅನುಪಮ ಪ್ರಶಸ್ತಿ... ಹೀಗೆ ಅಸಂಖ್ಯಾತ ಗೌರವಗಳಿಗೆ ಭಾಜನರಾಗಿದ್ದಾರೆ. ಪುಟಿಯುವ ಉತ್ಸಾಹದ ಬುಗ್ಗೆಯಂತಿರುವ ವಿಜಯಾ ಅವರು ನಮ್ಮ ನಡುವಿನ ಎಲ್ಲ ಹೆಣ್ಣು ಮಕ್ಕಳಿಗೂ ಮಾದರಿಯಾಗಿದ್ದಾರೆ.

ಬೇಕಾಗಿರುವ ಹಲವು ಸಂದರ್ಭಗಳಿಗೆ 'ಬೀದಿನಾಟಕ' ತನ್ನನ್ನೂ ಮಾರಿಕೊಂಡಿದೆ. ಅದು ಪ್ರತಿರೋಧದ ಮಾಧ್ಯಮ ಎಂಬ ಅಸ್ಮಿತೆ ಕಳೆದುಕೊಳ್ಳುತ್ತಿದೆ.

**ಹೊಸತು:** ನೀವು ೨೦ನೇ ಶತಮಾನದಲ್ಲಿ ಸಾಂಸ್ಕೃತಿಕವಾಗಿ ಕ್ರಿಯಾಶೀಲರಾಗಿದ್ದಿರಿ. ಈಗ ಕಳೆದ ಒಂದು ಇಪ್ಪತ್ತು ವರ್ಷಗಳಿಂದೀಚೆಗೆ ಸಾಮಾಜಿಕ ಚಳುವಳಿಗಳಲ್ಲಿ ಹೆಚ್ಚು ತೊಡಗಿಸಿಕೊಂಡಿದ್ದೀರ. ಈ ಬದಲಾವಣೆಗೆ ಏನು ಕಾರಣ?

**ವಿಜಯಾ :** ಕಾರಣ ಅಂತ ಏನು ಇಲ್ಲ. ಸಾಂಸ್ಕೃತಿಕ ರಂಗ ಒಂದು ವಿಚಿತ್ರ ನಿಷ್ಕ್ರಿಯತೆಯ ಕಡೆಗೆ ಸರಿಯುತ್ತಿದೆ ಅನ್ನಿಸಿದೆ. ಆ ದಿನಗಳಲ್ಲಿ ನಾನು ಬಾಬಾ ಬುಡನ್ ಗಿರಿ ಹೋರಾಟದಲ್ಲಿ ನಾಲ್ಕಾರು ಬಾರಿ ಈಗಾಗಲೇ ಹೇಳಿರುವಂತೆ ಅನೇಕ ಸಾಮಾಜಿಕ ಚಳವಳಿಗಳಲ್ಲಿ ಇದ್ದೆ. ಭಾಗವಹಿಸಿದೆ. ಇನ್ನು ಹೆಣ್ಣು ಮಕ್ಕಳ ಹೋರಾಟದ ವಿಷಯಕ್ಕೆ ಬಂದರೆ, ನೀವು ಹೆಣ್ಣು ಮಕ್ಕಳೆಲ್ಲಾ ನಡೆಸಿದ ಹೋರಾಟಗಳಲ್ಲಿ ನಿಮ್ಮೊಂದಿಗೆ ಭಾಗವಹಿಸುತ್ತಾ ಬಂದಿದ್ದೀನಿ. ಈಗ ಹೆಚ್ಚಾಗಿ ಭಾಗವಹಿಸುತ್ತಿದ್ದೇನೆ, ಅಂದರೆ ಅದಕ್ಕೆ ನೀವುಗಳೇ ಕಾರಣ.

**ಹೊಸತು :** ನೀವು ಕೆಲಸ ಮಾಡಿರುವ ಬಹುಪಾಲು ಕ್ಷೇತ್ರಗಳು ಪುರುಷಪ್ರಧಾನವಾದುದು. ಇದನ್ನು ನೀವು ಹೇಗೆ ನಿರ್ವಹಿಸಿದಿರಿ?

**ವಿಜಯಾ :** ಹೌದು, ನಿಮ್ಮ ಮಾತು ನಿಜ. ನನಗೆ ನಿಜವಾಗಲೂ ಹೆಚ್ಚು ಮಂದಿ ಸ್ನೇಹಿತರು ಪುರುಷರೇ. ಗೆಳತಿಯರು ಬೆರಳೆಣಿಕೆಯಷ್ಟು ಮಂದಿಯೇ. ಮೊದಲೇ ಹೇಳಿಬಿಡ್ತೀನಿ. ಎಲ್ಲ ಗಂಡಸರು ಕೆಟ್ಟವರಲ್ಲ. ನಿಜವಾಗಿಯೂ ನನ್ನ ಎಲ್ಲ ಕಷ್ಟದ ದಿನದ ಸಂದರ್ಭಗಳಲ್ಲಿ ನನಗೆ ಬೆಂಬಲಿಸಿ ಧೈರ್ಯ ತುಂಬಿದವರು ಗಂಡಸರೇ. ಅದರಲ್ಲೂ ಹೆಚ್ಚಾಗಿ ಹಿರಿಯರು. ನನಗೇನಾದರೂ ತೊಂದರೆ ಯಾಗಿದ್ದರೆ, ಅದು ನನ್ನ ಸರೀಕರಾದ ಮಧ್ಯವಯಸ್ಸಿನ ಗಂಡಸರಿಂದಲೇ. ಅದೂ ಸಾಹಿತಿಗಳಿಂದಲೇ ಹಲವಾರು ತೊಡಕುಗಳಾಗಿವೆ. ಸಿನಿಮಾ ಜನ ನನ್ನನ್ನು ಅತ್ಯಂತ ಗೌರವದಿಂದ ನಡೆಸಿಕೊಂಡಿದ್ದಾರೆ. ಬೇರೆಯವರಿಗೆ ಸಿನಿಮಾ, ರಂಗಭೂಮಿ ಕ್ಷೇತ್ರದಲ್ಲಿ ಕೆಟ್ಟ ಅನುಭವವಾಗಿರಬಹುದು. ಅವರ ಪರ ನಾನು ಹೋರಾಟ ಮಾಡಿದೀನಿ. ಆದರೆ ನನಗೇನೂ ಅಲ್ಲಿ ತೊಂದರೆಯಾಗಿಲ್ಲ.

ಆದರೆ ಈ ಸಾಹಿತ್ಯ ಲೋಕದ ಕೆಲವರಿಂದ ತೊಂದರೆ ಅನುಭವಿಸಿದೀನಿ. ಅದಕ್ಕೆ ನಾನು ಕೆಲಸ ಮಾಡುತ್ತಿದ್ದ ವ್ಯವಸ್ಥೆಯೂ ಕಾರಣ ಇರಬೇಕು. ನನಗೆ ಒಂದು ಕಛೇರಿ ಅಂತ ಇರಲಿಲ್ಲ. ಈಗ ಯಾವುದೋ ಸಾಹಿತಿಯಿಂದ ವಿಶೇಷ ಸಂಚಿಕೆಗೆ ಲೇಖನ ಕೇಳಿರ್ತೀವಿ. ಬಹಳ ಸತಾಯಿಸಿ ಆಮೇಲೆ ಮನೆಗೆ ಬಂದು ತೆಗೊಂಡು ಹೋಗಿ ಅಂತ ಹೇಳ್ತಾರೆ. ಆಗ ಕಥೆ ತರೋಕೆ ಅವರ ಮನೆಗೆ ಹೋದಾಗ ಅಲ್ಲಿ ಮನೆಯಲ್ಲಿ ಯಾರೂ ಇಲ್ಲದ ಸಂದರ್ಭ ಕಲ್ಪಿಸಿ, ಅನುಚಿತವಾಗಿ ವರ್ತಿಸ್ತಾರೆ. ಮತ್ತೊಂದು ಸಂದರ್ಭದಲ್ಲಿ ಒಬ್ಬ ಲೇಖಕಿಯ ಸಂದರ್ಶನ ಮಾಡಿ ಲೇಖನ ಬರೆದಿದ್ದೆ. ಆ ಸಂದರ್ಶನ ಪ್ರಕಟವಾದ ಮೇಲೆ ಅವರನ್ನು ಬೆಂಬಲಿಸುವ ಕೆಲವು ಪುರುಷ ಸಾಹಿತಿಗಳು ನನಗೆ ಬಂದು ಧಮಕಿ ಹಾಕಿದ್ದರು. ಇಡೀ ಸಂದರ್ಶನವನ್ನು ಟೇಪ್ ಮಾಡಿ ಅದರ ಆಧಾರದ ಮೇಲೆಯೇ ಬರೆದಿದ್ದಾದರೂ ನಮ್ಮ ಮಾಲೀಕರು ನಮ್ಮ ರಕ್ಷಣೆಗೆ ಬರ್ತಿರಲಿಲ್ಲ. ಮತ್ತೊಬ್ಬ ನವ್ಯ ಸಾಹಿತಿ, ಆಮೇಲೆ ಬಂಡಾಯ ಸಾಹಿತಿಯೂ ಆದವರು ಇಬ್ಬರು ಲೇಖಕಿಯರಿಗೆ ಪ್ರೇಮಪತ್ರ ಬರೆಯೋದು ಬೇಕಂತಲೇ ಅದನ್ನು ಅದಲು ಬದಲು ಮಾಡಿ ಕಳುಹಿಸಿ ಕೀಟಲೆ ಮಾಡೋರು. ಇನ್ನೊಬ್ಬರು ಸ್ವಲ್ಪ ಹಿರಿಯ ಸಾಹಿತಿಯೇ ನನ್ನೊಡನೆ ಕೆಲಸಮಾಡಿದವರು ಹಲವಾರು ಸೂಚನೆಗಳ ಮೂಲಕ ನನ್ನಲ್ಲಿ ಆಸಕ್ತಿ ಇದೆ, ಅಂತ ಸೂಚಿಸಿದರು. ನಾನು ಅವರಿಗೆ, "ನೀವು ನನಗೆ ವಯಸ್ಸಿನಿಂದಲೂ, ಮನಸ್ಸಿನಿಂದಲೂ ಹೊಂದಾಣಿಕೆಯಾಗಲ್ಲ" ಎಂದು ಕಠಿಣವಾಗಿ ತಿಳಿಸಬೇಕಾಯ್ತು. ಏನೇ ಆದರೂ ಹೊಟ್ಟೆಪಾಡಿಗಾಗಿ ದುಡಿಯುವಾಗ ಈ ಸಾಹಿತಿಗಳ ಕಿರುಕುಳಗಳ ನಡುವೆಯೇ ವೃತ್ತಿ ಮುಂದುವರೆಸಬೇಕಾಗಿತ್ತು. ನನಗಿಂತ ಹಿರಿಯ ಸಾಹಿತಿಗಳು, ದೊಡ್ಡ ನಾಟಕಕಾರರೊಬ್ಬರು ಬಂದು 'ಬಾರೆ ವಿಜಯಾ, ಹೇಗಿದೀಯಾ ಅಂತ ತಬ್ಬಿಕೊಳ್ಳುತ್ತಿದ್ದರು. ಅದು ಹೇಗೆ ಅಂದ್ರೆ, ಆ ತಬ್ಬಿಸಿಕೊಂಡವರಿಗೆ ಮಾತ್ರ ಗೊತ್ತು ಅದೆಂತದ್ದು ಅಂತ. ಹೊರಗಿನವರಿಗೆ ಅದನ್ನು ಹೇಗೆ ಹೇಳೋದು, ಹೇಳಿದರೆ ನಂಬ್ತಾರಾ? – ಹಿರಿಯರು, ವಯಸ್ಸಾದವರಿಗೆ ಅದೇ ಲೈಸೆನ್ಸ್!

**ಹೊಸತು :** ಇವತ್ತಿನ ಪರಿಸ್ಥಿತಿಯೂ ಹಾಗೆ ಇದೆಯಲ್ಲವೆ?

**ವಿಜಯಾ :** ಹೌದು. ಮೀಟು ಪ್ರಕರಣಗಳು ಬಹಳ ಹಿಂದಿನಿಂದಲೇ ಇದ್ದರೂ ಇವತ್ತಿನ ಹೆಣ್ಣು ಮಕ್ಕಳು ಶ್ರುತಿ ಹರಿಹರನ್ ಮತ್ತು ಇತರರು ಧೈರ್ಯವಾಗಿ ಅದಕ್ಕೆ ದನಿಕೊಡುತ್ತಿದ್ದಾರೆ. ಇನ್ನೂ ಹೆಚ್ಚು ಸಂಘಟಿತ ಹೋರಾಟ ಆಗಬೇಕಿದೆ. ಚಿತ್ರರಂಗದವರು ಮಾಡಿಕೊಂಡಿರುವ 'ಫೈರ್'ನ ICC (ಆಂತರಿಕ ವಿಚಾರಣಾ ಸಮಿತಿ)ಗೆ ಗೌರವಾಧ್ಯಕ್ಷೆಯೂ ಆಗಿದೀನಿ.

**ಹೊಸತು :** ಈಗ ನುಡಿ ಸಂಭ್ರಮಗಳು, ಉತ್ಸವಗಳು ನಡೆಯುತ್ತಿರುವ ಕಾಲ. ನೀವು ನುಡಿ ಸಿರಿಯ ಅಧ್ಯಕ್ಷತೆಗೆ ಆಹ್ವಾನ ಬಂದಾಗಲೂ ಹೋಗಿಲ್ಲ. ಅದಕ್ಕೆ ಕಾರಣ ಏನು ?

**ವಿಜಯಾ :** ನಾನು ಹಿಂದೆ ನುಡಿಸಿರಿಯ ಒಂದು ಕಾರ್ಯಕ್ರಮದಲ್ಲಿ ಭಾಗವಹಿಸಿದ್ದೇನೆ. ಆಗ ನನಗೆ ಅದರ ಬಗ್ಗೆ ಹೆಚ್ಚು ಗೊತ್ತಿರಲಿಲ್ಲ. ಅನಂತರ ಧರ್ಮಸ್ಥಳದ ಬಾಲೆಯೊಬ್ಬಳಿಗಾದ ಅನ್ಯಾಯದ ವಿರುದ್ಧದ ಪ್ರತಿಭಟನೆಯಲ್ಲಿ ಭಾಗವಹಿಸಿದ್ದೇನೆ. ನಿರಂತರ ಸಾವು – ನೋವಿನ ಸುದ್ದಿ ಕೇಳುತ್ತಿದ್ದೇನೆ. ಅಂತಹವರ ಆಶೀರ್ವಾದ ಪಡೆದು ನಡೆವ 'ನುಡಿಸಿರಿ'ಯಲ್ಲಿ ಭಾಗವಹಿಸಲು ಒಪ್ಪಿಗೆ ಇಲ್ಲ. ಇತ್ತೀಚಿನ ದಿನಗಳಲ್ಲಿ ಅವರ ಚಟುವಟಿಕೆಗಳು, ವ್ಯವಹಾರಗಳು ತಿಳಿದು ಬಂದ ಮೇಲೆ ಅದೆಲ್ಲಾ ಒಂದು ಬೂಟಾಟಿಕೆ ಎಂದೆನಿಸಿದೆ. ಒಂದು ರೀತಿಯಲ್ಲಿ 'ವಲ್ಗರ್ ಡಿಸ್ಪ್ಲೇ ಆಫ್ ರಿಚ್‌ನೆಸ್'. ಯಾಕೋ ನನ್ನ ಮನಸ್ಸಿಗೆ ಹಿತಕಾಣಲಿಲ್ಲ. ಅದಕ್ಕೆ ಬರೋಲ್ಲ, ಎಂದೆ. ಆದರೆ ಕೆಲವರು ದಕ್ಷರು ಇದ್ದಾರೆ. ಅವರು ಅಲ್ಲಿ ಹೋಗಿಯೂ ಅದೇ ವೇದಿಕೆಯಲ್ಲಿ ತಮ್ಮ ವಿಚಾರಗಳನ್ನು ಗಟ್ಟಿಯಾಗಿ ಹೇಳಿ ಬಂದಿದ್ದಾರೆ. ಆದರೆ "ನುಡಿಯು ಸಿರಿಯಲ್ಲ ಬದುಕು" ಎನ್ನುವ 'ಜನನುಡಿಯ' ಕಾರ್ಯಕ್ರಮಕ್ಕೆ ಸಂತೋಷದಿಂದ ಹೋಗಿರುವೆ.

**ಹೊಸತು :** ಕಳೆದ ಒಂದೆರಡು ವರ್ಷಗಳಿಂದ ಸಾಹಿತ್ಯದಲ್ಲಿ 'ಎಡ–ಬಲ'ಗಳ ಚರ್ಚೆ ನಡೆಯುತ್ತಿದೆ. ಈ ಚರ್ಚೆಯ ಬಗ್ಗೆ ನಿಮಗೇನನ್ನಿಸುತ್ತೆ?

**ವಿಜಯಾ :** ಇವತ್ತು ಬಹಳಷ್ಟು ಜನ 'ಮಧ್ಯಮ ಮಾರ್ಗಿ'ಗಳಿದ್ದಾರೆ. ಗಿರಡ್ಡಿಯವರು ಈ ಚರ್ಚೆ ತೆಗೆದದ್ದು ಬಹಳಷ್ಟು ಜನಕ್ಕೆ ಅನುಕೂಲವಾಯಿತು. ಈ ಚರ್ಚೆ ನಡೆದು ಕೆಲವು ಸಾಹಿತಿಗಳ ಬಣ್ಣ ಗೊತ್ತಾಯಿತು. ಅವರ ಬರವಣಿಗೆಗೂ ಕ್ರಿಯೆಗೂ ನಡುವಿರುವ ವ್ಯತ್ಯಾಸಗಳು ಗೊತ್ತಾದವು. ಸಾಹಿತಿಗಳು ಜಾಣತನದಿಂದ ತಮ್ಮ ವಾದವನ್ನು ಸಮರ್ಥಿಸಲು ಆರಂಭಿಸಿದ್ದಾರೆ. ಬಡವರ ಪರವಾಗಿರುವುದು ಎಡ ಧ್ವನಿ ಮಾತ್ರ. ಹಾಗಂದ ಮಾತ್ರಕ್ಕೆ ನಾನು ಯಾವುದೇ ಪಕ್ಷದವಳಲ್ಲ. ನನಗೆ ಯಾವ ಹೈಕಮಾಂಡ್ ಇಲ್ಲ. ಬಡವರ ಪರ ಶೋಷಣೆಯ ವಿರುದ್ಧವಿರುವ ಎಡಪಂಥದ ಜೊತೆ ನಾನಿದ್ದೇನೆ. ಯಾವ ಪಕ್ಷ, ಎನ್.ಜಿ.ಓ. ಅಲ್ಲದ ನ್ಯಾಯಕ್ಕಾಗಿ ಹೋರಾಡುವವರ ಜೊತೆಗೂ ಸಕ್ರಿಯವಾಗಿದ್ದೇನೆ. ಅದು ಪ್ರಿಯವಾದ ಕೆಲಸ.

**ಹೊಸತು :** ಮೇಡಂ, ನೀವು ಹೊಸತು ಪತ್ರಿಕೆಯನ್ನು ಒಳಗಿನಿಂದಲೂ ಹೊರಗಿನಿಂದಲೂ ನೋಡಿದವರು. ೨೦ ವರ್ಷಗಳನ್ನು ಪೂರೈಸುತ್ತಿರುವ ಈ ಸಂದರ್ಭದಲ್ಲಿ ಈ ಪತ್ರಿಕೆಯ ಸ್ವರೂಪ ಮತ್ತು ಪ್ರಭಾವದ ಬಗ್ಗೆ ಏನನ್ನಿಸುತ್ತದೆ?

**ವಿಜಯಾ :** ನನಗೆ ಇವತ್ತಿಗೂ ಕಾದಿದ್ದು, ನೋಡುವಂಥ ಪತ್ರಿಕೆ ಇದು. ಈ ಪತ್ರಿಕೆಯನ್ನು ಆರಂಭಿಸುವುದಕ್ಕೆ ಮುಂಚೆ ಜನಾರ್ದನ ಹೋಟೆಲ್‌ನಲ್ಲಿ ನಡೆಸಿದ ಸಭೆ ನನಗಿನ್ನು ನೆನಪಿದೆ. ಇದು ಗಂಭೀರವಾದ ಒಂದು ವರ್ಗವನ್ನು ತಲುಪುವ ಪತ್ರಿಕೆಯಾಗಿ ಬರುತ್ತಿದೆ. ಇದನ್ನು ರೂಪಿಸುವಾಗಲೇ ಇದನ್ನು 'ಸುಧಾ' ಪತ್ರಿಕೆ ತರಹ ತರಬೇಕೆಂಬ ಉದ್ದೇಶವಿರಲಿಲ್ಲ. ಮುಖ್ಯವಾಗಿ ಎಡ ನಿಲುವಿನವರು ತರುತ್ತಿರುವ ಪತ್ರಿಕೆಯಾದರೂ ಎಲ್ಲೂ ಆ ನಿಲುವನ್ನು ಪ್ರಜ್ಞಾಪೂರ್ವಕವಾಗಿ ಹೇರುವ ಪ್ರಯತ್ನ ನಡೆದಿಲ್ಲ. ಯಾರೂ ಓದಬಯಸುವ, ಎಲ್ಲರೂ ಬರೆಯಲು ಬಯಸುವ ಪತ್ರಿಕೆಯಾಗಿದೆ, ಅಂತ ಹೇಳಲು ಬಯಸುತ್ತೇನೆ.

**ಹೊಸತು :** ಮೇಡಂ, ನಮಗಾಗಿ ಬಹಳ ಸಮಯ ಕೊಟ್ಟು ಹಲವಾರು ವಿಷಯಗಳನ್ನು ಚರ್ಚಿಸಿದ್ದೀರ. ವಂದನೆಗಳು.

**ವಿಜಯಾ :** ನಮಸ್ಕಾರ.

ಲೇಖನ ಸಿದ್ಧಪಡಿಸಿದವರು : **ಡಾ॥ ಎನ್. ಗಾಯತ್ರಿ**
ನಂ. ೨೦೧, 'ಸ್ಕೈಲೈನ್ ಗೋಲ್ಡನ್ ರೇಸ್'
ಛತ್ರಂ ಬ್ಲಾಕ್, ಕೆಂಪೇಗೌಡ ನಗರ, ಗವೀಪುರಂ
ಬೆಂಗಳೂರು – ೫೬೦ ೦೧೯

# ಭಾರತದ ರಾಷ್ಟ್ರೀಯ ಸಂಸ್ಥೆಗಳಿಗೆ ಮೋದಿಯವರ ದ್ರೋಹ

**ಭಾರತದಲ್ಲಿ ಪ್ರಜಾಸತ್ತಾತ್ಮಕ ಸಂಸ್ಥೆಗಳು ವಿನ್ಯಾಸಗೊಂಡಿರುವುದೇ ಅವುಗಳನ್ನು ಸರ್ವಾಧಿಕಾರಿ ಪ್ರವೃತ್ತಿಗಳಿಂದ ರಕ್ಷಿಸುವ ಮಾದರಿಯಲ್ಲಿ. ಆದರೆ ಬಿಜೆಪಿ–ಆರ್.ಎಸ್.ಎಸ್. ಒಗ್ಗೂಡಿ ಜಾಣ್ಮೆಯಿಂದ ಅವುಗಳನ್ನು ದುರ್ಬಲಗೊಳಿಸುವತ್ತ ಹೂಡಿರುವ ಹವಣಿಕೆಯ ಫಲ ಇತ್ತೀಚಿನ ವಿದ್ಯಮಾನಗಳು. ರಿಸರ್ವ್ ಬ್ಯಾಂಕಿನ ಗವರ್ನರ್ ಉರ್ಜಿತ್ ಪಟೇಲರ ರಾಜಿನಾಮೆ ಹಾಗೂ ಹಿರಿಯ ಪರಮೋಚ್ಚ ನ್ಯಾಯಾಲಯದ ಹಿರಿಯ ನ್ಯಾಯಾಧೀಶರುಗಳ ಪ್ರತಿಭಟನೆ ಇವು ಯಾವುದೇ ರಾಜಕೀಯ ಪಕ್ಷಕ್ಕೆ ಸೇರಿದವರಿಗೂ ಎಚ್ಚರಿಕೆಯ ಗಂಟೆಯಾಗಿದೆ.**

**ಮೋ**ದಿಯವರ ಆಡಳಿತದಲ್ಲಿ ಭಾರತದ ಹಲವು ಅಮೂಲ್ಯ ಹಾಗೂ ಗೌರವಾನ್ವಿತ ರಾಷ್ಟ್ರೀಯ ಸಂಸ್ಥೆಗಳು ತೀವ್ರತರ ದಾಳಿಯಿಂದಾಗಿ ನಿರ್ಬಂಧಕ್ಕೊಳಗಾಗಿವೆ. ಆಡಳಿತಾರೂಢ ಪಕ್ಷ ಮತ್ತು ಅದರ ಅಂಗ ಸಂಸ್ಥೆಗಳು ತಮ್ಮ ಸಂಕುಚಿತ ಸಿದ್ಧಾಂತ ಮತ್ತು ರಾಜಕೀಯ ಗುರಿಗಳ ಈಡೇರಿಕೆಗಾಗಿ ಈ ಮಾರ್ಗವನ್ನು ಹಿಡಿದಿವೆ. ಕಾನೂನಾತ್ಮಕ ರೂಢಿಗಳು ಮತ್ತು ಸಾಂಸ್ಥಿಕ ರುಜುತ್ವಗಳನ್ನು ತಿರಸ್ಕಾರದಿಂದ ಕಾಣುವ ತೀವ್ರಗಾಮಿ ನೀತಿಯನ್ನನುಸರಿಸಲಾಗುತ್ತಿದೆ. ಇವು ಕೆಲವೊಮ್ಮೆ ಬಳಸು ಮಾರ್ಗದಿಂದಾಗಿದ್ದರೆ, ಕೆಲವು ಬಾರಿ ಭಂಡತನದಿಂದಲೂ, ಇನ್ನು ಕೆಲವು ಸಲ ಹಠಾತ್ ದಾಳಿಗಳ ಮೂಲಕವೂ ಆಗಿವೆ. ಈ ದಾಳಿಗಳ ಪರಿಣಾಮವಾದ ಎರಡು ನಿರ್ಧಾರಗಳು ನಮ್ಮನ್ನು ಚಕಿತಗೊಳಿಸುವುದಿಲ್ಲ. ಮೊದಲನೆಯದು, ತನ್ನ ಸಮಾಜೋ–ಆರ್ಥಿಕ ಹಾಗೂ ಸಾಂಸ್ಕೃತಿಕ ಗುರಿಗಳ ಸಾಧನೆಗಾಗಿ ಸರ್ವವ್ಯಾಪಿ ಆರ್.ಎಸ್.ಎಸ್. (ರಾಷ್ಟ್ರೀಯ ಸ್ವಯಂಸೇವಕ ಸಂಘ) ಅದರ ಪ್ರಭಾವ ಮತ್ತು ಸರ್ಕಾರದ ವ್ಯವಸ್ಥೆಯೊಳಗೆ ನುಸುಳಿರುವ ರೀತಿ. ಎರಡನೆಯದು, ಪ್ರಧಾನಿ ಮೋದಿಯವರ ವ್ಯಕ್ತಿತ್ವ. ಅವರೊಬ್ಬ ಪ್ರಬಲ ಕಾರ್ಯನಿರ್ವಾಹಕ, ಸಂಕುಚಿತ ಮನೋಧರ್ಮದ ರಾಷ್ಟ್ರಪ್ರೇಮಿ, ರಾಜನೀತಿಜ್ಞನ ವೇಷಧಾರಿ. ಅಧಿಕಾರವನ್ನು ಕೇಂದ್ರೀಕರಿಸಿಕೊಂಡಿರುವ ಹಾಗೂ ಪ್ರಜಾಪ್ರಭುತ್ವದಲ್ಲಿನ ಪ್ರಮಾದಗಳ ಸೋಂಕಿಗೆ ನಿರೋಧಕ ಭಾವ ಬೆಳೆಸಿಕೊಂಡ ವ್ಯಕ್ತಿ.

ಪ್ರಜಾಸತ್ತಾತ್ಮಕ ಸಂಸ್ಥೆಗಳು ಪ್ರಜಾಪ್ರಭುತ್ವವಾದಿ ಆದರ್ಶಗಳನ್ನು ಕಾರ್ಯರೂಪಕ್ಕಿಳಿಸುವ ಹಾಗೂ ಸಂವಿಧಾನ ಅಂಗೀಕರಿಸಿರುವ ಮೌಲ್ಯಗಳ ಒಂದು ಜೀವಂತ ಒಡಂಬಡಿಕೆ. ಸಾಂಸ್ಥಿಕ ಸ್ವಾಯತ್ತತೆಯನ್ನು ಗೌರವಿಸುವುದು ಪ್ರಜಾಪ್ರಭುತ್ವವಾದಿ ತತ್ವಗಳನ್ನು ಆಯ್ಕೆಮಾಡಿಕೊಳ್ಳುವ ಪ್ರಾಮಾಣಿಕತೆಯನ್ನು ಸೂಚಿಸುತ್ತದೆ. ನಮ್ಮ ಅಸ್ಥಿರ ಚುನಾಯಿತ ನಾಯಕರುಗಳು ಅಂತಹ ಸಂಸ್ಥೆಗಳನ್ನು ಕ್ರಿಯಾಶೀಲವಾಗಿ ಬಲಗೊಳಿಸದಿದ್ದರೂ ನಾವು ಕನಿಷ್ಠ ಅವರಿಂದ ಅಪೇಕ್ಷಿಸುವುದು ಈ ಸಂಸ್ಥೆಗಳನ್ನು ಗೌರವಿಸುವುದನ್ನು. ಲ್ಯಾಟಿನ್ ಅಮೆರಿಕಾದ ದೇಶಗಳನ್ನು ಅಂದಾಜು ಮಾಡುತ್ತಾ ರಾಜಕೀಯ ವಿಜ್ಞಾನಿಗಳಾದ ಸ್ಕಾಟ್ ಮೇನವರಿಂಗ್ ಮತ್ತು ಅನಿಬಾಲ್ ಪೆರೆಜ಼್–ಲಿಣನ್ ಹೀಗೆ ಹೇಳುತ್ತಾರೆ: 'ರಾಜಕೀಯ ಪಾತ್ರಧಾರಿಗಳು ಪ್ರಜಾಪ್ರಭುತ್ವದ ಶಕ್ತ ಪ್ರಾಮಾಣಿಕತೆಯ ಆಯ್ಕೆಯನ್ನು ಮಾಡಿಕೊಂಡಾಗ ಪ್ರಜಾಪ್ರಭುತ್ವಗಳ ಉಳಿವು ಹೆಚ್ಚು ಸಾಧ್ಯವಾಗುತ್ತದೆ' ಹಾಗೂ 'ಅತ್ಯಂತ ಶಕ್ತ ಪಾತ್ರಧಾರಿಗಳು ಉದಾರ ಪ್ರಜಾಪ್ರಭುತ್ವದ ಸಹಜ ಮೌಲ್ಯಗಳ ಬಗ್ಗೆ ಅಸಡ್ಡೆಯಿಂದ ಇದ್ದಾಗ ಅವು ಕುಸಿಯುವ ಸಾಧ್ಯತೆ ಹೆಚ್ಚು' ಎನ್ನುತ್ತಾರೆ. ಮೋದಿಯವರ ಉಸ್ತುವಾರಿಯಲ್ಲಿ ಭಾರತದ ಪ್ರಜಾಪ್ರಭುತ್ವವಾದ ನಾಶವಾಗುತ್ತಿರುವುದನ್ನು ಹಲವಾರು ಸಂಸ್ಥೆಗಳಲ್ಲಿ ಕಾಣಬಹುದು. ನ್ಯಾಯಾಂಗ ಮತ್ತು ಕೇಂದ್ರ ಬ್ಯಾಂಕಿನ ಒಂದೆರಡು ಉದಾಹರಣೆಗಳನ್ನು ಇಲ್ಲಿ ಗಮನಿಸಬಹುದು.

**ಭಾರತದ ಪರಮೋಚ್ಚ ನ್ಯಾಯಾಲಯ**

ಜನವರಿ ೨೦೧೮ರಲ್ಲಿ ಭಾರತದ ಪರಮೋಚ್ಚ ನ್ಯಾಯಾಲಯದ ನಾಲ್ವರು ಅತ್ಯಂತ ಹಿರಿಯ ನ್ಯಾಯಮೂರ್ತಿಗಳು ಕಾರ್ಯಾಂಗವು ನ್ಯಾಯಾಂಗದ ವಿಷಯಗಳಲ್ಲಿ ಮೂಗು ತೂರಿಸುತ್ತಿರುವುದಕ್ಕೆ ತೀವ್ರ

ಮೂಲ : **ವಿನಯ್ ನಾಗರಾಜು** ಅನುವಾದ : **ಟಿ. ವೆಂಕಟೇಶಮೂರ್ತಿ**

ನಿರಾಶೆಯನ್ನು ವ್ಯಕ್ತಪಡಿಸಿದರು. ಭಾರತದ ಮುಖ್ಯ ನ್ಯಾಯಾಧೀಶರ ನಂತರದ ಹಿರಿಯ ನ್ಯಾಯಾಧೀಶರಾದ ಜೆ. ಚಲಮೇಶ್ವರ್‌ರವರ ಪ್ರಕಾರ "ಈ ಸಂಸ್ಥೆಯನ್ನು (ಪರಮೋಚ್ಚ ನ್ಯಾಯಾಲಯ) ಪೋಷಿಸಿ, ಅದರ ಸಮಚಿತ್ತತೆಯನ್ನು ಉಳಿಸಿಕೊಳ್ಳದಿದ್ದಲ್ಲಿ ಈ ದೇಶದಲ್ಲಿ ಪ್ರಜಾಪ್ರಭುತ್ವ ಉಳಿಯುವುದಿಲ್ಲ. ಒಂದು ಉತ್ತಮ ಪ್ರಜಾಪ್ರಭುತ್ವದ ಶ್ರೇಷ್ಠತೆಯಿರುವುದು ಒಬ್ಬ ಸ್ವತಂತ್ರ ಹಾಗೂ ನಿಷ್ಪಕ್ಷಪಾತಿ ನ್ಯಾಯಾಧೀಶನಿದ್ದಲ್ಲಿ ಮಾತ್ರ." ಕೆಲವು ವಿವಾದಿತ ವಿಷಯಗಳನ್ನು ವಿವರಿಸಿದ ನ್ಯಾಯಾಧೀಶರುಗಳು "ರಾಷ್ಟ್ರ ಮತ್ತು ಸಂಸ್ಥೆಗೆ ಅತ್ಯಂತ ಮಹತ್ವದ ಪರಿಣಾಮಗಳುಳ್ಳ ಮೊಕದ್ದಮೆಗಳನ್ನು ಮುಖ್ಯ ನ್ಯಾಯಾಧೀಶರು ಯಾವುದೇ ಸಕಾರಣವಿಲ್ಲದೆ "ಆಯ್ದ ನ್ಯಾಯಪೀಠಗಳಿಗೆ" ನಿಗದಿಮಾಡುತ್ತಿದ್ದುದಕ್ಕೆ ಉದಾಹರಣೆಗಳಿವೆ ಎಂದು ಪ್ರತಿಪಾದಿಸಿದರು.

ಕಾನೂನು ತಜ್ಞರು ಹಾಗೂ ವಿಮರ್ಶಕರು, ಇವು ಕಾನೂನಿನ ವಿಷಯಗಳಲ್ಲಿ ಕಾರ್ಯಾಂಗದ ಕಾಣದ ಕೈಯಿನ ಪಾತ್ರವಿರುವುದನ್ನು ತೋರಿಸುತ್ತದೆಂದು ವಾದಿಸುತ್ತಾರೆ. ಪಾಳಿಪಟ್ಟಿಯನ್ನು ನಿಗದಿಪಡಿಸುವ ಮುಖ್ಯಸ್ಥರಾದ ಮುಖ್ಯ ನ್ಯಾಯಾಧೀಶರ ಮೇಲೆ ಪ್ರಭಾವ ಬೀರುವ ಮೂಲಕ ರಾಜಕೀಯವಾಗಿ ಅತ್ಯಂತ ಮಹತ್ವದ ಪರಿಣಾಮ ಬೀರಬಲ್ಲ




ಮೊಕದ್ದಮೆಗಳನ್ನು ಆಯ್ದ ನ್ಯಾಯಪೀಠಗಳಿಗೆ ವಿವೇಚನಾರಹಿತ ಆಧಾರಗಳ ಮೇಲೆ ಒಪ್ಪಿಸಲಾಗುತ್ತಿದೆಯೆಂದೂ ಅವರು ವಾದಿಸುತ್ತಾರೆ. ಮತ್ತೊಂದು ಮುಖ್ಯ ವಿಷಯದೆಡೆಗೆ ಅವರು ನಮ್ಮ ಗಮನ ಸೆಳೆಯುವುದು ನ್ಯಾಯಾಧೀಶರ ನೇಮಕಾತಿಯ ಕುರಿತಾದ ದಸ್ತಾವೇಜು ವಿಧಿಯನ್ನು ಅಂತಿಮಗೊಳಿಸುವಲ್ಲಿನ ಅನಗತ್ಯ ವಿಳಂಬದ ಬಗ್ಗೆ. ಇದು ನ್ಯಾಯಾಲಯದ ಸ್ವಾಯತ್ತತೆ ಮತ್ತು ಕಾರ್ಯಶೈಲಿಗೆ ಪೆಟ್ಟು ನೀಡುವಂಥದ್ದು.

ಟರ್ಕಿಯಲ್ಲಿಯೂ ಕೂಡ ರಿಸೆಸ್ ತಯ್ಯಿಸ್ ಎರ್ಡೋಗಾನ್ ನ್ಯಾಯಾಂಗ ವ್ಯವಸ್ಥೆಯನ್ನು ತನಗೆ ಬೇಕಾದಂತೆ ತಿರುಚಿದ್ದುದಕ್ಕೂ ಭಾರತದಲ್ಲಿ ನಡೆದುದಕ್ಕೂ ಸಮನಾಗಿದೆಯಷ್ಟೇ ಅಲ್ಲ, ಅದಕ್ಕಿಂತ ಹೆಚ್ಚು ಪಶ್ಚಾತ್ತಾಪ ಪಡುವ ಕ್ರಿಯೆಯಾಗಿದೆ. ಪ್ರಜಾಪ್ರಭುತ್ವ ಅವನತಿಯ ಮಾರ್ಗ ಹಿಡಿಯುವಂಥ ಸಾಮಾನ್ಯ ವಿದ್ಯಮಾನದಲ್ಲಿ ನಿರಂಕುಶ ಕಾನೂನು ತಜ್ಞರು ಉದಾರವಾದಿ ಸಂವಿಧಾನಗಳನ್ನು ಹಾಳುಗೆಡವುದಕ್ಕೆ ಹಿಡಿಯುವ ಮಾರ್ಗಗಳನ್ನು ವರ್ಣಿಸುತ್ತಾ, ಪ್ರಿನ್ಸ್‌ಟನ್ ವಿಶ್ವವಿದ್ಯಾಲಯದ ಕಿಂ ಲೇಣ್ ಸ್ಕೆಪ್ಪಲಿಯವರು ಎರ್ಡೋಗಾನ್ ಹೇಗೆ 'ಟರ್ಕಿಯ ಸಾಂವಿಧಾನಿಕ ನ್ಯಾಯಾಲಯದಲ್ಲಿ ತಮಗೆ ಬೇಕಾದವರಿಂದ ತುಂಬಿದ್ದೇ ಅಲ್ಲದೆ ಅವರ ನ್ಯಾಯ ನಿರ್ವಹಣಾ ವ್ಯಾಪ್ತಿಯನ್ನೂ ವಿಸ್ತರಿಸಿದ್ದರು' ಎಂದು ಹೇಳುತ್ತಾರೆ. ಭಾರತದಲ್ಲಿ ನರೇಂದ್ರ ಮೋದಿಯವರು ಇದಕ್ಕಿಂತ ಹಿಂದೆ ಬಿದ್ದಿಲ್ಲ.

ಪರಮೋಚ್ಚ ನ್ಯಾಯಾಲಯದ ಮೇಲೆ ಪ್ರಭಾವ ಬೀರುವುದರಲ್ಲಿ ಹೀನವೆಂದು ತೋರಬಹುದಾದ ಮಾರ್ಗವನ್ನು ಬಳಸುವುದರಿಂದ ಹಿಡಿದು ಪರಮೋಚ್ಚ ನ್ಯಾಯಾಲಯ ಹಾಗೂ ಉಚ್ಚ ನ್ಯಾಯಾಲಯಗಳ ನ್ಯಾಯಾಧೀಶರನ್ನು ನೇಮಕಗೊಳಿಸುವವರೆಗೂ ಮೋದಿಯವರ ಆಡಳಿತ ನ್ಯಾಯಾಂಗದ ಸಮಗ್ರತೆ ಮತ್ತು ಸ್ವಾಯತ್ತತೆಯ ಮೇಲೆ ಭಂಡ ದಾಳಿ ನಡೆಸಿದೆ. ಕಾರ್ಯಾಂಗದ ಈ ಸೊಕ್ಕಿನ ಬಗ್ಗೆಯೇ ಖ್ಯಾತ ಕಾನೂನು ತಜ್ಞರು ನಮ್ಮನ್ನೆಚ್ಚರಿಸಿರುವುದು ಮತ್ತು ನಮ್ಮ ಅಮೂಲ್ಯ ಸಂಸ್ಥೆಗಳನ್ನು ಕಾಪಾಡಿಕೊಂಡು ಬರುವ ಅಗತ್ಯವನ್ನು ಒತ್ತಿಹೇಳಿರುವುದು.

**ಭಾರತೀಯ ರಿಸರ್ವ್ ಬ್ಯಾಂಕ್**

ಭಾರತೀಯ ರಿಸರ್ವ್ ಬ್ಯಾಂಕಿನ ೮೩ ವರ್ಷದ ಇತಿಹಾಸದಲ್ಲಿ ಮೊದಲ ಬಾರಿಗೆ ಈ ಸಂಸ್ಥೆ ಆರ್.ಬಿ.ಐ. ಕಾಯಿದೆ (೧೯೩೪)ರ ೭ನೇ ಪರಿಚ್ಛೇದ ಮೊರೆಹೊಕ್ಕಿತೆಂದು ಮಾಧ್ಯಮಗಳು ಸೂಚಿಸಿವೆ. ಇದಕ್ಕೆ ಕಾರಣ ಕೇಂದ್ರೀಯ ಬ್ಯಾಂಕನ್ನು ಅಂಕೆಯಲ್ಲಿಡುವುದು ಅರ್ಥಾತ್ ಅದರ ಸ್ವಾಯತ್ತತೆಯನ್ನು ಕಸಿದುಕೊಂಡು ಅದರ ಕಾರ್ಯವಿಧಾನಗಳನ್ನು ನಿರ್ದೇಶಿಸುವುದು. ಪೂರ್ವ ದೃಷ್ಟಾಂತವಿಲ್ಲದ ಈ ನಡೆಯ ಉದ್ದೇಶ ನಿಯಂತ್ರಕ ಆರ್.ಬಿ.ಐ.ನ ರಟ್ಟೆ ತಿರುಚುವುದು. ಹಾಗೆ ಮಾಡುವುದರ ಮೂಲಕ ಅಶಕ್ತ ಬ್ಯಾಂಕುಗಳನ್ನು ಚುರುಕಾಗಿಸುವ ನಿಟ್ಟಿನಲ್ಲಿ ವಿಧಿಸಲಾಗಿದ್ದ ಕಟ್ಟುಪಾಡುಗಳನ್ನು




## ಗಝಲ್

ಹದವಾದ ನನ್ನ ಹರೆಯಕೆ ಮುದವಾದ ಬಯಕೆ ನೀನು ಗೆಳೆಯಾ
ಪದವಾದ ನನ್ನ ಪ್ರೇಮಕೆ ಶೃತಿಯಾದ ಬಯಕೆ ನೀನು ಗೆಳೆಯಾ

ಮುಪ್ಪಡರಿದ ಆಸೆಗಳನು ರಮಿಸುವ ನಿನ್ನ ಪರಿಗೆ ವಂದನೆ
ಇಲ್ಲದ ಸಾಂಗತ್ಯಕ್ಕೆ ಜೊತೆಯಾದ ಹಾರೈಕೆ ನೀನು ಗೆಳೆಯಾ

ಒಲವೆಂಬ ಹೆಸರಿಗೆ ನಿನ್ನ ಉಸಿರು ಬಳಿದಿರುವೆ
ಭಾಗಿಸಿದ ನನ್ನ ಲೋಕಕೆ ಕೂಡಿಸಿದ ಆರೈಕೆ ನೀನು ಗೆಳೆಯಾ

ಕಿಚ್ಚು ಆರಿ ನಿನ್ನೊಳಗೆ ಹಿಮದಂತೆ ಕರಗಿರುವೆ
ಮಾಯದ ನನ್ನ ಗಾಯಕೆ ಸೋಕಿದ ಗರಿಕೆ ನೀನು ಗೆಳೆಯಾ

ಸುಕ್ಕು ಬೀಳದ ಚರ್ಮದಲಿ ನಿನ್ನ ಹುಡುಕಿಕೊಳ್ಳುವೆ
ಆರಿದ ನನ್ನ ದೀಪಕೆ ತಾಕಿದ ಬೆಳಕೇ ನೀನು ಗೆಳೆಯಾ

ಎರೆಮಣ್ಣ ಬದುವಿನಲಿ ಹೂಗಿಡಗಳನು ನೆಟ್ಟಿರುವೆ
ಮುಗಿಯದ ನನ್ನ ಒಂಟಿತನಕೆ ಒಲಿದ ಆಸರೆ ನೀನು ಗೆಳೆಯಾ

ಬೆಳಗಿಲ್ಲದ ರಾತ್ರಿಗಳನು ನಿನಗಾಗಿ ಕೂಡಿಟ್ಟಿರುವೆ
ವಸರಿದ ನನ್ನ ನೆಲಕೆ ಪಸರಿಸಿದ ಸ್ವಂತಿಕೆ ನೀನು ಗೆಳೆಯಾ

ರಸವಂತಿ 'ದಾಚಿ'ಯ ರಸಗವಳದ ಒಡೆಯ ನೀನು
ನಿಲ್ಲದ ನನ್ನ ಮನಕೆ ಕಟ್ಟಿದ ಬಯಕೆ ನೀನು ಗೆಳೆಯಾ

**ದಾಕ್ಷಾಯಿಣಿ ಹುಡೇದ**
ನಂ. ೧೨೭, ವಿವೇಕನಗರ (ಪಶ್ಚಿಮ), ವಿಜಯಪುರ – ೫೮೬ ೧೦೯

ಸಡಿಲಿಸುವುದಾಗಿತ್ತು. ರಿಸರ್ವ್ ಬ್ಯಾಂಕಿನ ಡೆಪ್ಯುಟಿ ಗವರ್ನರ್ ವಿರಳ್ ಆಚಾರ್ಯ ಅವರು ಅರ್ಜೆಂಟೈನಾದ ಬಿಕ್ಕಟ್ಟಿನೊಂದಿಗೆ ಹೋಲಿಸಿ ಭಾರತೀಯ ರಿಸರ್ವ್ ಬ್ಯಾಂಕಿನ ಕಾರ್ಯಾತ್ಮಕ ಸ್ವಾಯತ್ತತೆಯ ನಿರಾಕರಣೆಯ ಬಗ್ಗೆ ತಮ್ಮ ಅಸಂತೋಷವನ್ನು ಬಹಿರಂಗವಾಗಿ ವ್ಯಕ್ತಪಡಿಸಿದ್ದಾರೆ.

ಮೋದಿ ಸರ್ಕಾರ ರಿಸರ್ವ್ ಬ್ಯಾಂಕಿನ ಸ್ವಾಯತ್ತತೆಯನ್ನು ದುರ್ಬಲಗೊಳಿಸುವ ಅಥವಾ ಅದರ ಅಭಿಪ್ರಾಯವನ್ನು ನಿರ್ಲಕ್ಷಿಸುವ ನಿಟ್ಟಿನಲ್ಲಿ ಇದು ಮೊದಲ ನಿದರ್ಶನವೇನಲ್ಲ. ನೋಟು ಅಮಾನ್ಯೀಕರಣದ ಬಗ್ಗೆ ಸಲಹೆಯನ್ನು ಕೇಳಿದಾಗ ರಿಸರ್ವ್ ಬ್ಯಾಂಕಿನ ಮಾಜಿ ಗವರ್ನರ್ ರಘುರಾಂ ರಾಜನ್ ಅವರು ಸರ್ಕಾರದ ಈ ನಡೆ "ಸುಯೋಜಿತ, ಆಲೋಚನಾಯುಕ್ತ, ಉಪಯುಕ್ತ ಪ್ರಯೋಗವಲ್ಲ"ವೆಂದು ೨೦೧೬ರ ಆದಿಭಾಗದಲ್ಲೇ ಸ್ಪಷ್ಟಪಡಿಸಿದ್ದರು. ಅಷ್ಟೇ ಅಲ್ಲದೆ ಇಂಥ ನಡೆ ದೀರ್ಘಕಾಲದ ಲಾಭಗಳಿಗಿಂತಲೂ ಹೆಚ್ಚಾಗಿ ಆರ್ಥಿಕ ಖರ್ಚಿನಲ್ಲಿ ಪರ್ಯವಸಾನವಾಗಬಹುದೆಂದು ಎಚ್ಚರಿಸಿದ್ದರು. ಮಾಹಿತಿ ಹಕ್ಕು ಕಾಯಿದೆ (ಆರ್.ಟಿ.ಐ.) ಅಡಿಯ ಪ್ರಶ್ನೆಯೊಂದಕ್ಕೆ ೨೦೧೬ರ ನವೆಂಬರ್ ೮ರಂದು ಸಚಿವ ಸಂಪುಟದ ಸಭೆಗೆ ಕೆಲವೇ ಗಂಟೆಗಳ ಮುಂಚೆ ಹಾಗೂ ಪ್ರಧಾನ ಮಂತ್ರಿಯವರು ರಾಷ್ಟ್ರೀಯ ದೂರದರ್ಶನದ ಮೂಲಕ ಹೇಳಿಕೆ ನೀಡುವುದಕ್ಕೆ ಮುಂಚೆ, ರಿಸರ್ವ್ ಬ್ಯಾಂಕಿನ ಕೇಂದ್ರ ಮಂಡಳಿಯು ನೋಟು ಅಮಾನ್ಯೀಕರಣಕ್ಕೆ ಸಮ್ಮತಿಯನ್ನು ನೀಡಲು ಸಭೆ ಸೇರಿತ್ತು. ಇದರಿಂದ ರಿಸರ್ವ್ ಬ್ಯಾಂಕಿನ ಸ್ವಾಯತ್ತತೆಯ ಬಗ್ಗೆ ಮಾತ್ರ ಪ್ರಶ್ನೆಗಳೇಳುವುದಿಲ್ಲ. ಆದರೆ ಅದರ ಆಡಳಿತದ ಬಗ್ಗೆಯೂ ಕೂಡ ಏಳುತ್ತವೆ. ಏಕೆಂದರೆ, ಆ ಸಮಯದಲ್ಲಿ, ಕೇಂದ್ರ ಮಂಡಳಿಯ ಅರ್ಧಕ್ಕಿಂತ ಕಡಿಮೆ ಸದಸ್ಯರು ಕಾರ್ಯನಿರತರಾಗಿದ್ದರು. ಮಂಡಳಿಯ ೧೦ ಸದಸ್ಯರು (ನಿಯಮದ ಪ್ರಕಾರ ೨೧)ಗಳಲ್ಲಿ ಎಂಟು ಮಂದಿ ಮಾತ್ರ ನಿರ್ಧಾರವನ್ನು ಸಮರ್ಥಿಸುವ ಈ ನಿರ್ಣಾಯಕ ಸಭೆಯಲ್ಲಿ ಹಾಜರಿದ್ದರು.

ರಿಸರ್ವ್ ಬ್ಯಾಂಕಿನ ಮೇಲಿನ ನಿರ್ಬಂಧ ಕಾರ್ಯನಿರ್ವಾಹಕ ಪ್ರತಿಷ್ಠೆಗೆ ಒಂದು ಉದಾಹರಣೆ. ಇದೊಂದು ಕಾರ್ಯನಿರ್ವಾಹಕ ಅಧಿಕಾರವನ್ನು ಕ್ರಮೇಣ ಶಕ್ತಿಹೀನವಾಗಿಸುವ ರೀತಿ. ಕೇಂದ್ರ ಮಂಡಳಿಯನ್ನು ನಿಸ್ಸಾರಗೊಳಿಸುವ ಮುಖೇನ ಹಾಗೂ ರಿಸರ್ವ್ ಬ್ಯಾಂಕ್ ಕಾಯಿದೆಯ ೭ನೇ ಪರಿಚ್ಛೇದವನ್ನು ಜಾರಿಗೊಳಿಸುವಂಥ ವಿಪರೀತ ಕ್ರಮ. ಸಾಂಸ್ಥಿಕ ಸ್ವಾಯತ್ತತೆಗೆ ಭಂಗ ಬರುವುದೇ ಇಂಥ ಕಾನೂನಾತ್ಮಕ ಮತ್ತು ಹೊರನೋಟಕ್ಕೆ ಹಾನಿಯಿಲ್ಲವೆಂದೆನಿಸುವ ಮಾರ್ಗಗಳ ಮೂಲಕ. ಉದಾರ ವ್ಯವಸ್ಥೆ ಕ್ಷೀಣಿಸುತ್ತಿದ್ದಂತೆ ಸಾಂಸ್ಥಿಕ ಸ್ವಾಯತ್ತತೆ ದಾಳಿಗೊಳಗಾಗುತ್ತದೆ, ಏಕೆಂದರೆ ಬಲಪಂಥ 'ರಾಜಕೀಯದಿಂದ ಪ್ರತ್ಯೇಕಿಸುವುದೆಂದರೆ ಮುಖ್ಯವಾಗಿ ಸಮಾಜ ಶ್ರೇಷ್ಠರನ್ನು ಜನರ ಒತ್ತಡಗಳಿಂದ ರಕ್ಷಿಸುವುದು' ಎಂಬ ವಾದವನ್ನು ಮುಂದಿಡುತ್ತದೆಂದು ಚಿಂತಕ ಪ್ರತಾಪ್ ಭಾನು ಮೆಹ್ತ ಅಭಿಪ್ರಾಯಪಡುತ್ತಾರೆ. ಆರ್.ಎಸ್.ಎಸ್. ಚಿಂತಕರ ಚಾವಡಿಗಳು ಎಬ್ಬಿಸುತ್ತಿರುವ ಗದ್ದಲಗಳು ಹಾಗೂ ಮೋದಿ ಆಡಳಿತ ಇಂಥ ಆಧಾರಗಳ ಮೇಲಿನ ಸ್ವಾಯತ್ತತೆಯ ಕೋರಿಕೆಗಳನ್ನು ಸಂದೇಹಿಸುತ್ತವೆ.

ಭಾರತೀಯ ಪ್ರಜಾಪ್ರಭುತ್ವ ಗಂಭೀರ ಅಪಾಯದಲ್ಲಿದೆ. ಅದರ ಸಂಸ್ಥೆಗಳು ಸಂಕಟದಲ್ಲಿವೆ. ಪ್ರಬಲ ನಾಯಕ ಮೋದಿಯವರು ಒಳ್ಳೆಯ ದಿನಗಳನ್ನು (ಅಚ್ಛೇ ದಿನ್) ಪ್ರಾರಂಭಿಸುವ ಕನಸಿನ ಹುಚ್ಚುತನ ಎಂದೋ ಬಯಲಾಗಿದೆ. ಟ್ವೀಟ್‌ಗಳ ಮೂಲಕ ಅವರು ಸಾಂಸ್ಥಿಕ ಋಜುತ್ವದ ಬಗ್ಗೆ ತಮ್ಮ ವಾಗ್ಝರಿಯನ್ನು ಹರಿಸುತ್ತಾರೆ. ಆದರೆ ಅವರು ಹಾಗೂ ಅವರ ಆಡಳಿತ ತುರ್ತುಪರಿಸ್ಥಿತಿಯ ಕರಾಳ ದಿನಗಳ ಕುರಿತು ಮಾಡುವ ಆಪಾದನೆಗಳಿಂದ ಮುಕ್ತವಾಗೇನಿಲ್ಲ.

ಅವರು ಸಿಂಹಾಸನದಿಂದಿಳಿದ ಬಹುಕಾಲದ ನಂತರವೂ ಅಶಕ್ತ ಸಂಸ್ಥೆಗಳು ಜನರಿಗೆ ಸೇವೆ ಸಲ್ಲಿಸುವುದನ್ನು ಮುಂದುವರೆಸುತ್ತವೆ. ಹೊಸ ವ್ಯವಸ್ಥೆಯಲ್ಲಿ ಋಜುತ್ವವನ್ನು ಹಿಂದಿನ ಆರೋಗ್ಯ ಸ್ಥಿತಿಗೆ ತರುವುದು, ಅವುಗಳಿಗೆ ಶಕ್ತಿ ತುಂಬಿ ಪರಿಣಾಮಕಾರಿಯಾಗಿಸುವುದು ಒಂದು ಕಠಿಣ ಸವಾಲು. ಭಾರತೀಯ ಪ್ರಜಾಪ್ರಭುತ್ವ ಆ ವೇಳೆಗೆ ಅಶಕ್ತವಾಗಿರುತ್ತದೆ.

ಹಾರ್ವರ್ಡ್ ವಿಶ್ವವಿದ್ಯಾಲಯದ ಸ್ಟೀವನ್ ಲೆವಿಟ್ಸ್‌ಕಿ ಮತ್ತು ಡೇನಿಯಲ್ ಜ಼ಿಬಾಟ್ಟ್ ಅವರು ತಮ್ಮ 'ಪ್ರಜಾಪ್ರಭುತ್ವಗಳು ಹೇಗೆ ಅಂತ್ಯವಾಗುತ್ತವೆ' ಎಂಬ ಕೃತಿಯಲ್ಲಿ ಹೇಳುವಂತೆ "ನಿರಂಕುಶಪ್ರಭುಗಳು ಪ್ರಜಾಪ್ರಭುತ್ವವನ್ನು ನಿಸ್ಸತ್ವಗೊಳಿಸುವಾಗ ಅದಕ್ಕೆ ಪೋಷಣೆಯ ಥಳಕು ಹಾಕುತ್ತಾರೆ. ಹೆಚ್ಚು ಪ್ರಜಾಪ್ರಭುತ್ವಗಳು ಇಂದು ಅಂತ್ಯಗೊಳ್ಳುವುದು ಹೀಗೆಯೇ: ನಿಧಾನವಾಗಿ, ಕಂಡೂ ಕಾಣದಂತೆ ... ಅಧಿಕಾರಶಾಹಿಯ ಚುನಾಯಿತ ಮಾರ್ಗದ ವಿರೋಧಾಭಾಸದಿಂದ ಕೂಡಿದ ದುರಂತವೆಂದರೆ ಪ್ರಜಾಪ್ರಭುತ್ವದ ಶತ್ರುಗಳು ಅದರ ಸಂಸ್ಥೆಗಳನ್ನೇ ಅದನ್ನು ಕೊಲ್ಲಲು ಬಳಸಿಕೊಳ್ಳುತ್ತಾರೆ – ನಿಧಾನವಾಗಿ, ನಯವಾಗಿ ಮತ್ತು ಕಾನೂನಾತ್ಮಕವಾಗಿಯೂ ಸಹ."

ಕಾನೂನುಗಳು ತಾವಾಗಿಯೇ ಸಹಾಯ ಮಾಡುವುದಿಲ್ಲ, ಅವು ಹಾಗೆಂದೂ ಮಾಡಿಲ್ಲ. ಪ್ರಜಾಪ್ರಭುತ್ವದ ವಿಭಿನ್ನ ಪಾತ್ರಧಾರಿಗಳು ಶಕ್ತಿಯುತವಾಗಿ ಪ್ರತಿರೋಧಿಸಬೇಕು. ಮೇಲಿನೆರಡೂ ಉದಾಹರಣೆಗಳಲ್ಲಿ ಪ್ರತಿಭಟನೆಗಳು ಹಾಗೂ ಪ್ರತಿರೋಧ ಬಂದಿದ್ದು ಆ ಸಂಸ್ಥೆಗಳಿಗೆ ನಿಯೋಜಿತರಾಗಿದ್ದವರಿಂದಲೇ. ಹಿರಿಯ ಪರಮೋಚ್ಚ ನ್ಯಾಯಾಲಯದ ನ್ಯಾಯಾಧೀಶರುಗಳು ಮತ್ತು ಗವರ್ನರ್‌ಗಳಿಂದಲೇ.

ಭಾರತದಲ್ಲಿ ಪ್ರಜಾಸತ್ತಾತ್ಮಕ ಸಂಸ್ಥೆಗಳು ವಿನ್ಯಾಸಗೊಂಡಿರುವುದೇ ಅವುಗಳನ್ನು ಸರ್ವಾಧಿಕಾರಿ ಪ್ರವೃತ್ತಿಗಳಿಂದ ರಕ್ಷಿಸುವ ಮಾದರಿಯಲ್ಲಿ. ಆದರೆ ಬಿಜೆಪಿ–ಆರ್.ಎಸ್.ಎಸ್. ಒಗ್ಗೂಡಿ ಜಾಣ್ಮೆಯಿಂದ ಅವುಗಳನ್ನು ದುರ್ಬಲಗೊಳಿಸುವತ್ತ ಹೂಡಿರುವ ಹವಣಿಕೆಯು ಕೇವಲ ಉಚ್ಚ ನ್ಯಾಯಾಲಯದ ನ್ಯಾಯಾಧೀಶರುಗಳಿಗೆ ಮತ್ತು ಅಧಿಕಾರಶಾಹಿಗಳಿಗೆ ಮಾತ್ರವಲ್ಲ, ಯಾವುದೇ ರಾಜಕೀಯ ಪಕ್ಷಕ್ಕೆ ಸೇರಿದವರಿಗೂ ಎಚ್ಚರಿಕೆಯ ಗಂಟೆಯಾಗಿದೆ.

---

ಮೂಲ : **ವಿನಯ್ ನಾಗರಾಜು**
ಈ ಲೇಖನದ ಕರ್ತೃ ಹಾರ್ವರ್ಡ್ ವಿಶ್ವವಿದ್ಯಾಲಯದ
ಜಾನ್ ಎಫ್. ಕೆನಡಿ ಸ್ಕೂಲ್‌ನ ಪದವೀಧರರು ಮತ್ತು ಫೆಲೋ
ಅನುವಾದ : **ಟಿ. ವೆಂಕಟೇಶಮೂರ್ತಿ**
ಗವಿಪುರಂ, ಬೆಂಗಳೂರು

ನಮ್ಮ ಬಿಜಾಪುರ–ಬಾಗಲಕೋಟೆಗಳನ್ನು ಬಹುವಾಗಿ ನೆನಪಿಸಿದ ವಾರ್ಧಾ–ನಾಗಪುರಕ್ಕೆ ಕರ್ನಾಟಕ ಮಹಿಳಾ ದೌರ್ಜನ್ಯ ವಿರೋಧಿ ಒಕ್ಕೂಟದ ೩೭ ಜನ ಅಧ್ಯಯನ ಪ್ರವಾಸ ಕೈಗೊಂಡಿದ್ದೆವು. ಗಾಂಧಿ–ಅಂಬೇಡ್ಕರರನ್ನು ಅವರವರ ಕರ್ಮಭೂಮಿಯಲ್ಲೇ ನಿಂತು ಅರಿಯುವುದು, ಒಳಗು ಮಾಡಿಕೊಳ್ಳುವಿಕೆಯ ಸಾಧ್ಯತೆಗಳನ್ನು ಪರಿಶೀಲಿಸುವುದು ಪ್ರವಾಸದ ಉದ್ದೇಶ. ಡಿಸೆಂಬರಿನ ಚಳಿಯಲ್ಲಿ ಗಡಗಡ ನಡುಗುತ್ತ, ಜೋಳದ ಬಾಕ್ರ–ಜುಣಕಾ–ಗಜ್ಜರಿ–ಕಡಿ ಸವಿಯುತ್ತ, ಬಾಪುಕುಟಿಯ ಚೆಲುವನ್ನು ಒಳಗಿಳಿಸಿಕೊಂಡ ನಾವು 'ನಯೀ ತಾಲೀಮಿ'ನ ಶಾಲೆ ಮತ್ತು ಗ್ರಾಮ ಸೇವಾ ಮಂಡಲಕ್ಕೆ ಭೇಟಿನೀಡಿ ವಿಸ್ಮಿತರಾಗಿ ಹೊರಬಂದ ಫಲ ಈ ಬರಹ.

ಡಾ॥ ಎಚ್. ಎಸ್. ಅನುಪಮಾ

**ಈ**ಗ ದೇಶಾದ್ಯಂತ ಕೆಂಪು – ಹಸಿರು ಮಿಶ್ರಣ ಕಾಣತೊಡಗಿದೆ. ೨೦೧೮ರ ಮಾರ್ಚಿಯಲ್ಲಿ ನಾಸಿಕ್‌ನಿಂದ ಮುಂಬಯಿಯವರೆಗೂ ೩೫೦೦೦ಕ್ಕೂ ಮಿಗಿಲು ರೈತರು ಸಾಲಮನ್ನಾ ಮತ್ತಿತರ ಬೇಡಿಕೆಗಳನ್ನಿಟ್ಟುಕೊಂಡು ೧೮೦ ಕಿ.ಮೀ.ಗಳ ಕಿಸಾನ್ ಲಾಂಗ್ ಮಾರ್ಚ್ ನಡೆಸಿದರು. ನವೆಂಬರಿನಲ್ಲಿ ಭಾರತದ ಎಲ್ಲ ಕಡೆಗಳಿಂದ ಹೊರಟ ಒಂದು ಲಕ್ಷ ರೈತರು ದೆಹಲಿಯಲ್ಲಿ ಕಿಸಾನ್ ಕ್ರಾಂತಿ ಪಾದಯಾತ್ರಾ ಸಂಘಟಿಸಿದರು. ಇತ್ತ ಕರ್ನಾಟಕದಲ್ಲಿ ಬೆಳಗಾವಿಯ ವಿಧಾನಸಭಾ ಅಧಿವೇಶನಕ್ಕಿಂತ ಸ್ವಲ್ಪ ಮುಂಚೆ ಕಬ್ಬು ಬೆಳೆಗಾರರ ಉಪವಾಸ ಸತ್ಯಾಗ್ರಹ ಮತ್ತು ಪ್ರತಿಭಟನೆ ನಡೆಯಿತು. ರೈತ ಮಹಿಳೆಯ ಆಕ್ರೋಶಕ್ಕೆ ತುತ್ತಾದ ಮುಖ್ಯಮಂತ್ರಿಗಳು ಮುಜುಗರ ಅನುಭವಿಸಿದ್ದೂ ಆಯಿತು.

ಒಂದೆಡೆ ರೈತರು ಹೀಗೆ ಸಂಘಟಿತರಾಗುತ್ತ ಬೆಂಬಲ ಬೆಲೆ, ಸಾಲಮನ್ನಾ, ಬೆಳೆವಿಮೆಯೇ ಮೊದಲಾದ ಬೇಡಿಕೆಗಳಿಗಾಗಿ ಹೋರಾಟ ನಡೆಸುತ್ತಿದ್ದರೆ ಮತ್ತೊಂದೆಡೆ ರೈತರ ಆತ್ಮಹತ್ಯೆಗಳು ನಿರಂತರ ಸಂಭವಿಸುತ್ತಿವೆ. ಅದರಲ್ಲೂ ಕಬ್ಬು, ಹತ್ತಿ, ಅಡಕೆಯೇ ಮೊದಲಾದ ವಾಣಿಜ್ಯ ಬೆಳೆ ಬೆಳೆಯುತ್ತಿರುವ ರೈತರೇ ಹೆಚ್ಚು ಸಂಕಷ್ಟಕ್ಕೀಡಾಗಿದ್ದಾರೆ. ವಿಶೇಷವಾಗಿ ದೇಶದ ಮುಖ್ಯ ವಾಣಿಜ್ಯ ಬೆಳೆಯಾದ ಹತ್ತಿ ಬೆಳೆಯುವ, ದೇಶದ ಕಾಲುಭಾಗ ಹತ್ತಿ ಉತ್ಪಾದಿಸುವ ವಿದರ್ಭದ ರೈತರು ಸಾಲದ ಸುಳಿಗೆ ಸಿಲುಕಿ ಅವ್ಯಾಹತವಾಗಿ ಬದುಕು ಕೊನೆಗೊಳಿಸುತ್ತಿದ್ದಾರೆ. ಕಳೆದ ಒಂದು ದಶಕದಲ್ಲಿ ಅಲ್ಲಿ ೧.೪ ಲಕ್ಷ ರೈತರು ಆತ್ಮಹತ್ಯೆಯ ದಾರಿ ತುಳಿದಿದ್ದಾರೆ!

ದೇಶವಿದೇಶದ ಗಮನ ಸೆಳೆದ ವಿದರ್ಭದ ರೈತ ಆತ್ಮಹತ್ಯೆಗಳ ಬಗೆಗೆ ಸಿನಿಮಾ, ಅಧ್ಯಯನ, ವರದಿ, ಹೊತ್ತಗೆ, ಸಾಕ್ಷ್ಯಚಿತ್ರ ಎಲ್ಲವೂ ಬಂದವು. ೨೦೦೬ರಲ್ಲಿ ಪ್ರಧಾನಿ ಮನಮೋಹನ ಸಿಂಗ್ ೩೭.೫ ಬಿಲಿಯನ್ ರೂಪಾಯಿ (ಅಂದರೆ ೩,೭೫೦ ಕೋಟಿ ರೂಪಾಯಿ!)ಗಳ ಬೃಹತ್ ವಿದರ್ಭ ಪ್ಯಾಕೇಜ್ ಘೋಷಿಸಿದರು. ವಿದರ್ಭ ಭಾಗದ ಸರ್ವಾಂಗೀಣ ಪ್ರಗತಿಗೆ ನಾನಾ ಯೋಜನೆ ಹಾಕಲಾಯಿತು. ಆದರೆ ಪಿ. ಸಾಯಿನಾಥ್ ಹೇಳುವಂತೆ 'ಬರ ಅಂದ್ರೆ ಎಲ್ರಿಗು ಇಷ್ಟ'ವಾಯಿತು. ಅಭಿವೃದ್ಧಿಯ ನೀಲನಕ್ಷೆಗಳು ಕಾಗದದ ಮೇಲುಳಿದು ಮಧ್ಯವರ್ತಿಗಳ ಕಿಸೆ ದಪ್ಪವಾಯಿತು. ಹತ್ತಿ ಬೆಳೆವ ರೈತರು ಬೀಜ–ಗೊಬ್ಬರ–ಸಾಲದ ಚಕ್ರವ್ಯೂಹದಲ್ಲಿ ಸಿಲುಕಿ ಆತ್ಮಹತ್ಯೆ ಮಾಡಿಕೊಳ್ಳುವುದು ಮುಂದುವರಿದುಕೊಂಡೇ ಬಂತು.

ದಖ್ಖನ್ ಪ್ರಸ್ಥಭೂಮಿಯ ಉತ್ತರದ ತುದಿಯಲ್ಲಿ ವಿದರ್ಭ ಇದೆ. ಮಹಾರಾಷ್ಟ್ರದ ನಾಗ್ಪುರ ಮತ್ತು ಅಮರಾವತಿ ವಿಭಾಗದ ಹನ್ನೊಂದು ಜಿಲ್ಲೆಗಳನ್ನೊಳಗೊಂಡ, ಸಾತ್ಪುರ ಬೆಟ್ಟ ಶ್ರೇಣಿ

# ಹತ್ತಿ ಮತ್ತು ಸ್ವಾತಂತ್ರ್ಯ





ಹೊರತುಪಡಿಸಿದರೆ ಗುಡ್ಡಗಾಡುಗಳಿರದ ಬಯಲು ಪ್ರದೇಶ ಅದು. ಬ್ರಿಟಿಷ್ ಇಂಡಿಯಾದ ಸೆಂಟ್ರಲ್ ಪ್ರಾವಿನ್ಸ್ ಆಗಿದ್ದ ವಿದರ್ಭ ಗಲಭೆ, ದಂಗೆಗಳಿರದ ಶಾಂತ ನೆಲ. ಫಲವತ್ತಾದ ನೆಲದಲ್ಲಿ ವಾಣಿಜ್ಯ ಬೆಳೆಗಳನ್ನು ವರ್ಷಪೂರ್ತಿ ಬೆಳೆಯುತ್ತಾರೆ. ಹತ್ತಿ, ಕಿತ್ತಳೆ, ಸೋಯಾಬೀನ್‌ಗೆ ಪ್ರಸಿದ್ಧ. ಜೋಳ, ಸಜ್ಜೆ, ಭತ್ತವನ್ನೂ ಬೆಳೆಯುತ್ತಾರೆ. ಮಹಾರಾಷ್ಟ್ರದ ಮುಕ್ಕಾಲು ಪಾಲು ಅರಣ್ಯ ಸಂಪನ್ಮೂಲ ಹಾಗೂ ಮೂರನೇ ಎರಡರಷ್ಟು ಗಣಿ ಸಂಪನ್ಮೂಲ ಅಲ್ಲಿದೆ. ಎಲ್ಲರಿಗೂ ಕೈತುಂಬ ಕೆಲಸವಿದೆ. ಇಷ್ಟಾದರೂ ವಿದರ್ಭ ಬಡವರ ನೆಲವಾಗಿಯೇ ಉಳಿದುಕೊಂಡಿದೆ.

ಏಕೆ? ಹೀಗೇಕೆ?

ಸಂಕಟವುಕ್ಕಿಸುವ ಇಂತಹ ಪ್ರಶ್ನೆಗಳು ಕಾಡುತ್ತಿರುವಾಗಲೇ ಒಂದು ಅಪರೂಪದ ಸ್ಥಳಕ್ಕೆ ಭೇಟಿ ನೀಡಿದೆವು. ಯಾವುದನ್ನು 'ಇಂಪ್ರಾಕ್ಟಿಕಲ್' ಎಂದು ಆಗಲೇ ಅತ್ತ ಸರಿಸಲಾಗಿದೆಯೋ, ಅಂತಹ ತತ್ವಾದರ್ಶಗಳ ಬೆನ್ನತ್ತಿ ಹೊರಟ ಒಂದು ಸಮೂಹವೇ ಅಲ್ಲಿ ಎದುರಾಯಿತು. ಗ್ರಾಮಭಾರತದ ಸಮಗ್ರ ವಿಕಾಸಕ್ಕಾಗಿ, ಅದರಲ್ಲೂ ರೈತರನ್ನು ಸ್ವಾವಲಂಬಿಯಾಗಿಸುವ ಯೋಜನೆ ರೂಪಿಸುವುದಕ್ಕಾಗಿ ತಮ್ಮನ್ನು ತಾವು ತೆತ್ತುಕೊಂಡ ಜೀವಗಳು ಅಲ್ಲಿದ್ದವು. ಅವರು ನಿಶ್ಶಂಕೆಯಿಂದಿದ್ದರು, ತಾವು ಪ್ರತಿಪಾದಿಸುವ ಕ್ರಮಗಳು ಈ ನೆಲದ ಸಮಸ್ಯೆಗಳಿಗೆ ಉತ್ತರ ಆಗಬಲ್ಲವು ಎಂಬ ಬಗೆಗೆ ಗಾಢ ನಂಬುಗೆಯಿತ್ತು. ಅವರು ವಾರ್ಧಾ ಬಳಿ ಇರುವ ಗೋಪುರಿಯ ಗ್ರಾಮಸೇವಾ ಮಂಡಲ ಎಂಬ ಗ್ರಾಮೀಣಾಭಿವೃದ್ಧಿ ಸೇವಾಸಂಸ್ಥೆಯ ಕಾರ್ಯಕರ್ತರು. ಹಳ್ಳಿಗಳು ಎದುರಿಸುತ್ತಿರುವ ಸಮಸ್ಯೆಗಳಿಗೆ ಗಾಂಧೀಮಾರ್ಗದಲ್ಲಿ ಉತ್ತರವಿದೆಯೆ ಎಂದು ಪರಿಶೀಲಿಸಿ ಕಾರ್ಯಪ್ರವೃತ್ತರಾಗಿರುವವರು.

**ಹತ್ತಿ: ರೈತರ ಹೊಟ್ಟೆ ತುಂಬಿಸದ ಬಿಳಿ ಬೆಳೆ**

ತಿನ್ನಲಾಗದ, ಬಿಟ್ಟು ಬದುಕಿರಲಾಗದ ಹತ್ತಿ ಎಂಬ ಬೆಳೆಯ ಒಳಹೊರಗು ತಿಳಿಯದೇ ಚರಕಾ–ವಿದರ್ಭದ ಬಗೆಗೆ ಮಾತನಾಡಲಾಗದು.

ಕ್ರಿ. ಪೂ. ೫೦೦೦ದ ಹೊತ್ತಿಗೆ ಸಿಂಧೂ ಬಯಲ ನಾಗರಿಕತೆ ರೂಪುಗೊಳ್ಳುವಾಗ ಭಾರತ ನೆಲದಲ್ಲಿ ಹತ್ತಿ ಬೆಳೆಯುತ್ತಿದ್ದರು. ಭಾರತದ ಹತ್ತಿಬಟ್ಟೆ, ಮಸ್ಲಿನ್ ಬಟ್ಟೆ ದೇಶವಿದೇಶಗಳಲ್ಲಿ ಪ್ರಖ್ಯಾತವಾಗಿತ್ತು. ಆದರೆ ಈಸ್ಟ್ ಇಂಡಿಯಾ ಕಂಪನಿ ವ್ಯಾಪಾರಕ್ಕೆಂದು ಬಂದಮೇಲೆ, ಯೂರೋಪಿನಲ್ಲಿ ಕೈಗಾರಿಕಾ ಕ್ರಾಂತಿಯಾಗಿ ಬೃಹತ್ ಯಂತ್ರಗಳ ಕಾರ್ಖಾನೆಗಳು ಸ್ಥಾಪನೆಯಾದ ಮೇಲೆ, ಅವರಿಗೆ ಭಾರತದ ಹತ್ತಿ ಬೇಕಾಯಿತು, ಇಲ್ಲಿ ನೂತ ದಾರವಾಗಲೀ, ನೇಯ್ದು ಮಗ್ಗದ ಬಟ್ಟೆಯಾಗಲೀ ಬೇಡವಾಯಿತು. ಎಂದೇ ಭಾರತದ ಹತ್ತಿ ಲಂಡನ್ನಿಗೆ ಹೋಗಿ ಮ್ಯಾಂಚೆಸ್ಟರಿನ ಲಂಕಾಶೈರ್ ಗಿರಣಿಗಳಲ್ಲಿ ಬಟ್ಟೆಯಾಗಿ, ಸಿದ್ಧ ಉಡುಪು ಭಾರತಕ್ಕೆ ಬರುತ್ತಿತ್ತು. ನಾವದನ್ನು ದುಬಾರಿ ಬೆಲೆ ಕೊಟ್ಟು ಕೊಳ್ಳಬೇಕಿದ್ದರಿಂದ ಲಾಭವೆಲ್ಲ ಬ್ರಿಟಿಷರಿಗೆ. ಕೆಲಸ ಕಳೆದುಕೊಂಡಿದ್ದ ಇಲ್ಲಿನ ನೇಕಾರರು, ನೂಲುವವರು, ಕುಶಲಕರ್ಮಿಗಳ ಪಾಲಿಗೆ ಉಳಿದಿದ್ದು ಹಸಿವೆ. ಟೆಕ್ಸ್‌ಟೈಲ್ ಉದ್ಯಮ ಎಂತಹ ಲಾಭಕರವಾಗಿತ್ತೆಂದರೆ 'ನಿಮ್ಮ ಬಟ್ಟೆ ಬೇಡ' ಎಂದು ಭಾರತೀಯರು ಹೇಳಿದಾಗ ಬ್ರಿಟನ್ ಬೆಚ್ಚಿ ಬಿತ್ತು. ಬ್ರಿಟಿಷರನ್ನು ಮಣಿಸಲು ಇದು ಅತ್ಯುತ್ತಮ ಅಹಿಂಸಾ ಮಾರ್ಗ ಎಂದು ನಮ್ಮ ನೂಲು ನಾವೇ ತೆಗೆಯುವ ಚರಕಾ ಪ್ರಚಾರ ಪಡೆಯಿತು. ಗಾಂಧಿ ಸ್ವಾತಂತ್ರ್ಯ ಹೋರಾಟವನ್ನು ಹತ್ತಿಯ ಆರ್ಥಿಕತೆ ಜೊತೆಗೆ ತಳುಕು ಹಾಕಿ ವ್ಯಾಪಾರ ಮಾಡಲಿಕ್ಕೆಂದು ಝಂಡಾ ಊರಿದ್ದ ಬ್ರಿಟಿಷರ ಬುಡವನ್ನೇ ಅಲುಗಾಡಿಸಿದರು. ಹೀಗೆ ಹತ್ತಿ ಮತ್ತು ಸ್ವಾತಂತ್ರ್ಯ ಬೇರ್ಪಡಿಸಲಾರದಂತೆ ಬೆಸೆದುಕೊಂಡವು.

ಪ್ರಪಂಚದ ಅತಿದೊಡ್ಡ ಹತ್ತಿಯ ಕೃಷಿಕ್ಷೇತ್ರ (ವಿಶ್ವದ ಕಾಲುಭಾಗ) ಭಾರತದಲ್ಲಿದೆ. ಚೀನಾ, ಅಮೆರಿಕ ಬಿಟ್ಟರೆ ಅತಿ ಹೆಚ್ಚು ಹತ್ತಿ ಬೆಳೆಯುವ ದೇಶ ನಮ್ಮದು. ಭಾರತ ಮಾತ್ರ ೪೦ ಮಿ.ಮೀ. ಬುಡ್ಡ ಹತ್ತಿಯಿಂದ ೧೨೦ ಮಿ.ಮೀ. ಉದ್ದೆಳೆಯ ಹತ್ತಿ ತನಕ ಐದು ಭಿನ್ನ ಹತ್ತಿ ತಳಿಗಳನ್ನು ಬೆಳೆಯುತ್ತದೆ. ಪಾಕಿಸ್ತಾನ, ಬಾಂಗ್ಲಾ, ಚೀನಾ, ವಿಯೆಟ್ನಾಮ್, ಇಂಡೋನೇಷಿಯಾ ಮತ್ತಿತರ ದೇಶಗಳಿಗೆ ರಫ್ತು ಮಾಡುವಷ್ಟು ಹತ್ತಿ ಬೆಳೆಯುತ್ತಿದ್ದರೂ, ೧೦ ವರ್ಷ ಹಿಂದಿನವರೆಗೂ ಅತಿ ಕಡಿಮೆ ಇಳುವರಿ ನಮ್ಮದಾಗಿತ್ತು. (ಈಗ ಬಿಟಿ ಹತ್ತಿಯಿಂದ ಇಳುವರಿ ಹೆಚ್ಚಿದೆ ಎಂದು ಹೇಳಲಾಗುವುದಾದರೂ ರೈತ ಆತ್ಮಹತ್ಯೆಗಳೂ ಹೆಚ್ಚಾಗಿವೆ ಎನ್ನುವುದನ್ನು ಗಮನಿಸಬೇಕು.) ಭಾರತದ ಹತ್ತಿಬೆಳೆಯ ಮೂರನೆ ಒಂದು ಭಾಗ ಮಾತ್ರ ನೀರಾವರಿ ಪ್ರದೇಶದಲ್ಲಿದೆ. ಮಿಕ್ಕಿದ್ದೆಲ್ಲ ಮಳೆಯಾಧಾರಿತ ಬೇಸಾಯವೇ. ಹತ್ತಿಬೆಳೆಗೆ ಬಿಸಿಲು–ತಂಪು ಎರಡೂ ಹೆಚ್ಚಿರಬೇಕು. ಅಂತಹ ಪರಿಸರದಲ್ಲೇ ಅರಳೆ ಅರಳುತ್ತದೆ. ಸೆಪ್ಟೆಂಬರಿನಿಂದ ಜನವರಿ ತನಕ ಹತ್ತಿ ಬಿಡಿಸುವ ಕಾಯಕ. ಹತ್ತಿ ಉಳಿದ ಬೆಳೆಗಳಂತೆ ಒಂದು ಕಟಾವಿಗೆ ಮುಗಿಯುವುದಿಲ್ಲ. ೪–೫ ಬಾರಿ ಕಟಾವು ಮಾಡಬೇಕು.

ಅರಳೆ ಹತ್ತಿಯನ್ನು ಬೀಜದಿಂದ ಬೇರ್ಪಡಿಸುವುದು ಜಿನ್ನಿಂಗ್. ಇದನ್ನು ಕೈಯಿಂದಲೂ ಮಾಡುತ್ತಾರೆ, ಅರೆಯಂತ್ರಗಳೂ ಬಳಸಲ್ಪಟ್ಟಿವೆ. ಜಿನ್ನಿಂಗ್ ಕೆಲಸವು ಕಚ್ಚಾ ಹತ್ತಿ ಮತ್ತು ಹತ್ತಿಕಾಳು ಎಂಬ ಎರಡು ಉತ್ಪನ್ನಗಳನ್ನು ತಯಾರಿಸುತ್ತದೆ. ಹತ್ತಿಕಾಳಿನ ಸುತ್ತ ಉಳಿದ ಸಣ್ಣಪುಟ್ಟ ಎಳೆಗಳನ್ನು ಮತ್ತೆ ಎರಡು ಬಾರಿ ಬಿಡಿಸಿ ದಿಂಬು, ಹಾಸಿಗೆ, ಕಾಗದದಂತಹ ವಸ್ತುಗಳ ಉತ್ಪಾದನೆಗೆ ಬಳಸಲಾಗುತ್ತದೆ. ಹತ್ತಿಕಾಳಿನಿಂದ ಹಿಂಡಿ, ಎಣ್ಣೆ, ಗೊಬ್ಬರ ತಯಾರಿಸುತ್ತಾರೆ. ಜಿನ್ನಿಂಗ್ ಮಾಡಿದ ಹತ್ತಿರಾಶಿಯನ್ನು ನಾನಾ ಆಕಾರಗಳಲ್ಲಿ ಒತ್ತಿ ಬೇಲ್ ಮಾಡಿ ಸಂಗ್ರಹಿಸಲಾಗುತ್ತದೆ. ಕಚ್ಚಾಹತ್ತಿಯೆಂದು ವಿದೇಶಗಳಿಗೆ, ಗಿರಣಿಗಳಿಗೆ ಲಾರಿ–ಹಡಗುಗಳಲ್ಲಿ ಸಾಗಾಟವಾಗುವುದು ಬೇಲ್‌ಗಳೇ. ಬೇಲ್‌ಗಳಿಂದ ನೂಲುಂಡೆ ತಯಾರಿಸುತ್ತಾರೆ (ಯಾರ್ನ್). ನಂತರ ಸ್ಪಿನ್ನಿಂಗ್ ಮೂಲಕ ದಾರ ತಯಾರಾಗುತ್ತದೆ. ಹೆಚ್ಚೆಚ್ಚು ಬಿಳಿಯಾಗಬೇಕೆಂದಷ್ಟೂ ಹೆಚ್ಚು ಬ್ಲೀಚ್ ಮಾಡುತ್ತಾರೆ. ಕೊನೆಗೆ ದಾರಕ್ಕೆ ಬಣ್ಣ ಹಾಕಿ, ನೇಯ್ದು, ಬಟ್ಟೆ ತಯಾರಾಗಿ ಗ್ರಾಹಕರ ಕೈಸೇರುತ್ತದೆ.

ಈ ದೇಶದ ಅತಿದೊಡ್ಡ ಸಂಘಟಿತ ಉದ್ಯಮ ಹತ್ತಿ–ಗಿರಣಿಗಳದು. ಭಾರತದಲ್ಲಿ ೪೦೦೦ಕ್ಕಿಂತ ಹೆಚ್ಚು ಬೃಹತ್ ಜಿನ್ನಿಂಗ್ ಗಿರಣಿಗಳಿದ್ದು, ಅವು ಹತ್ತಿ ಬೆಳೆಯುವ ಹಳ್ಳಿಗಳ ಸಮೀಪವೇ ಸ್ಥಾಪನೆಯಾಗಿವೆ. ಆರು ಕೋಟಿ ಜನರಿಗೆ ಬೆಳೆ, ಕಳೆ, ಕಟಾವು, ನೂಲುವುದು, ನೇಯುವುದೇ ಮೊದಲಾದ ಉದ್ಯೋಗ ಒದಗಿಸಿವೆ. ದೇಶದ ೩೦% ರಫ್ತು ಬಟ್ಟೆಯದೇ ಆಗಿದೆ. ಒಂದು ಗಿರಣಿ ಅಜಮಾಸು ೩೫೦ ಹಳ್ಳಿಗಳ ಹತ್ತಿ ಕೊಳ್ಳುತ್ತದೆ. ಎಂದರೆ ಹೆಚ್ಚು ಕಡಿಮೆ ಹದಿನಾಲ್ಕು ಲಕ್ಷ ಹಳ್ಳಿಗಳ ಆರ್ಥಿಕತೆ ಮೇಲೆ ಗಿರಣಿಗಳ ನೇರ ಪ್ರಭಾವವಿದೆ.

  

ಇದು ಹತ್ತಿ–ಬಟ್ಟೆಯ ಚಕ್ರ. ಇಷ್ಟೆಲ್ಲ ಕೆಲಸವಿದೆ, ಬೇಡಿಕೆಯಿದೆ, ಮಾರುಕಟ್ಟೆಯಿದೆ. ಆದರೂ ವಿದರ್ಭದ ರೈತ ಆತ್ಮಹತ್ಯೆಗಳು ಮುಖ್ಯವಾಗಿ ಹತ್ತಿ ಬೆಳೆಗಾರರದೇ ಆಗಿರುವುದು ಆಶ್ಚರ್ಯವಲ್ಲವೆ?

ಆಶ್ಚರ್ಯವೇನಿಲ್ಲ. ಇಡೀ ಹತ್ತಿ ಗಿರಣಿ ಉದ್ಯಮದಲ್ಲಿ ಮೂಲ ಉತ್ಪಾದಕರು ರೈತರೇ ಆದರೂ ಬಟ್ಟೆಯಾಗುವ ತನಕ ಹತ್ತಿ ಹಲವು ಕೈಗಳನ್ನು ಹಾದುಹೋಗುತ್ತದೆ. ಎಲ್ಲರಿಗೂ ಕೈತುಂಬ ಲಾಭ ಬೇಕಾದ್ದರಿಂದ ನಷ್ಟ ಭರಿಸುವವರು ಕಚ್ಚಾವಸ್ತು ಉತ್ಪಾದಿಸುವ ರೈತರೇ ಆಗಿದ್ದಾರೆ. ಬೀಜ, ಗೊಬ್ಬರ, ಕೀಟನಾಶಕ, ಹತ್ತಿ ಬಿಡಿಸುವವರ ಕೂಲಿಯೇ ಮೊದಲಾಗಿ ಖರ್ಚು ಹೆಚ್ಚಾಗಿದೆ. ಆದರೆ ನಮ್ಮ ಗಿರಣಿಗಳಿಗೆ ಕಡಿಮೆ ದರಕ್ಕೆ ಹತ್ತಿ ಬೇಕಾಗಿದೆ. ಭಾರತದ ಹತ್ತಿ ತುಟ್ಟಿಯೆನಿಸಿದರೆ ವಿದೇಶದಿಂದ ಬೇಕಾದರೂ ತರಿಸಿಕೊಂಡುಬಿಡುತ್ತಾರೆ. ನಂಬಿ, ನಮ್ಮ ದೇಶದಿಂದ ರಫ್ತಾಗುವುದಕ್ಕಿಂತ ಹೆಚ್ಚು ಹತ್ತಿ ಆಸ್ಟ್ರೇಲಿಯಾ, ಅಮೆರಿಕದಿಂದ ಆಮದಾಗುತ್ತದೆ! ಸಸ್ತಾ ಹತ್ತಿಯಿಂದ ಯಂತ್ರಗಳು ರಾಶಿರಾಶಿ ಸಿದ್ಧ ಉಡುಪುಗಳನ್ನು ತಯಾರಿಸುತ್ತವೆ. ಕೊನೆಯ ಲಾಭ ಮಿಲ್ ಮಾಲಿಕನಿಗೆ, ಗಾರ್ಮೆಂಟ್ ಕಂಪನಿ ಒಡೆಯರಿಗೆ, ಬಟ್ಟೆ ವ್ಯಾಪಾರಿಗೆ ಮತ್ತು ದಲ್ಲಾಳಿಗಳಿಗೆ. ನಷ್ಟದ ಎಲ್ಲ ಹೊರೆ ರೈತರು, ಕಾರ್ಮಿಕರು ಮತ್ತು ಗ್ರಾಹಕರ ಮೇಲೆ.

ಹೀಗಾಗಿ ಹತ್ತಿ ಬೆಳೆಗಾರರು ಸಾಲದ ನಿರಂತರ ವಿಷ ಚಕ್ರಕ್ಕೆ ಒಳಗಾಗುತ್ತ ಸಾಲಮನ್ನಾ–ಬೆಂಬಲ ಬೆಲೆಗಳಿಗೆ ಕಾಯುತ್ತ ಇರುವಂತಹ ಪರಿಸ್ಥಿತಿ ನಿರ್ಮಾಣವಾಗಿದೆ. ಕೈಕೆಸರಾದವರ ಬಾಯಿಗೂ ಕೆಸರೇ ಬೀಳುತ್ತಿದೆ.

**ಗೋಪುರಿಯ ಗ್ರಾಮಸೇವಾ ಮಂಡಲ**

ಇಂತಿಪ್ಪ ಕಷ್ಟಕಾಲದಲ್ಲಿ ಒಂದು ಸುಂದರ ಸ್ವಪ್ನ ನನಸಾಗಿದೆಯೋ ಎಂಬಂತಿರುವ ಗೋಪುರಿಯ ಗ್ರಾಮ ಸೇವಾಮಂಡಲಕ್ಕೆ ಹೋದೆವು. ಕಾಲದ ಯಾವುದೋ ಬಿಂದುವಿನಲ್ಲಿ ನಡೆದ ಅಕಳಂಕಿತ ಪ್ರಯತ್ನದ ಘಳಿಗೆಯೊಂದರೊಳಗೆ ನಾವು ಕಾಲಿಟ್ಟಂತೆ ಭಾಸವಾಯಿತು. ವಿಶಾಲ ಪ್ರಾಂಗಣದೊಳಗೆ ನಿಂತಿರುವ ಹಳೆಯ ಶೈಲಿಯ ಕಟ್ಟಡಗಳು, ಹಳೆಯ ಬೋರ್ಡುಗಳು, ನಾಡಹೆಂಚಿನ ಸೂರು, ಕಿವಿ ಕೆಪ್ಪಾಗಿಸದೆ ಬರಿದೆ ಟಕಟಕಗುಡುವ ಯಂತ್ರಗಳ ಸದ್ದು... ಅಲ್ಲೇ ಆಚೆ ೪೦ ಎಕರೆ ಸಾವಯವ ಕೃಷಿ ಪ್ರದೇಶದಲ್ಲಿ ದೇಸಿ ಬೀಜ ಬಳಸಿ, ಸಾವಯವ ಗೊಬ್ಬರ ಹಾಕಿ ಬೆಳೆ ತೆಗೆಯುವ; ಗೋಮೂತ್ರ, ಸಗಣಿ ಬಳಸಿ ಗೊಬ್ಬರ ತಯಾರಿಸುವ ಪ್ರಯೋಗ ಭೂಮಿ. ಅಕಾ ಅಷ್ಟು ದೂರದಲ್ಲಿ ಹಚ್ಚನೆಯ ಹೊಲದ ಬದುವಿನಲ್ಲಿ ಕಿಣಿಕಿಣಿಸುತ್ತ ದನಕರು ಮೇಯುವ ಸದ್ದು... ಇದುವರೆಗೂ ನಾವು ಕುಳಿತು, ಪ್ರಾರ್ಥಿಸಿ, ನೋಡಿ, ಒಳಗಿಳಿಸಿಕೊಂಡಿದ್ದ ಸೇವಾಗ್ರಾಮದ ಬಾಪು ಕುಟಿಯ ಸಕಲ ಚೈತನ್ಯವನ್ನು, ಆಶಯಗಳನ್ನು ನೆಲದ ಮೇಲೆ ಹರಡಿಟ್ಟಂತೆ ಕಾಣುತ್ತಿತ್ತು.

ಅಷ್ಟೊತ್ತಿಗೆ ದೂರದ ಕಾಲುದಾರಿಯಲ್ಲಿ ಬೆನ್ನ ಮೇಲೆ ಎಳೆಯ ಮಗನನ್ನು ಮೂಟೆಯೋ ಎಂಬಂತೆ ಹೊತ್ತು ಬಂದ ಗೆಳತಿ ಓಜಸ್ ಕಂಡಳು. ಬಂದವಳೇ ಆ ಕೇಂದ್ರದ ಚರಿತ್ರೆ, ಹತ್ತಿ ಬೆಳೆ, ರೈತರ ಇಂದಿನ ಸಂಕಟ, ಕಾರಣ, ಹೊರದಾರಿ ಎಲ್ಲವನ್ನು ಹತ್ತಿ ಬಿಡಿಸುವಂತೆ ಎಳೆ ಎಳೆಯಾಗಿ ಬಿಡಿಸಿ ಕಣ್ಣೆದುರು ಹರಡಿದಳು.

ರೈತರ ಸ್ವಾವಲಂಬನೆ, ಅಹಿಂಸೆ, ಸರಳತೆ, ಪರ್ಯಾಯ ಕೃಷಿ ವಿಧಾನ ಮೊದಲಾದ ಗಾಂಧಿ ತತ್ವಗಳಿಗೆ ಗೌರವ ಸಲ್ಲಿಸುವಂತೆ ಗೋಪುರಿಯ ಗ್ರಾಮ ಸೇವಾ ಮಂಡಲ ರೂಪುಗೊಂಡಿದೆ. ಇದನ್ನು ಕಟ್ಟಿದವರು ವಿನೋಬಾ ಭಾವೆ. ಬನಾರಸ್ ಹಿಂದೂ ವಿಶ್ವವಿದ್ಯಾಲಯದಲ್ಲಿ ಗಾಂಧಿ ಮಾಡಿದ ಭಾಷಣದ ಒಂದು ವರದಿ ತರುಣ ವಿನಾಯಕ ಭಾವೆಯನ್ನು ಗಾಂಧಿ ತತ್ವದೆಡೆಗೆ ಸೂಜಿಗಲ್ಲಿನಂತೆ ಸೆಳೆಯಿತು. ಗಾಂಧಿ ಮತ್ತು ಭಾವೆ ನಡುವೆ ಪತ್ರಗಳು ಹರಿದಾಡಿ ಕೊನೆಗೆ ಸಬರಮತಿ ಆಶ್ರಮದಲ್ಲಿ ಪರಸ್ಪರರು ೧೯೧೬ರಲ್ಲಿ ಭೇಟಿಯಾದರು. ಓದು ನಿಲ್ಲಿಸಿ, ತನ್ನ ಸರ್ಟಿಫಿಕೇಟುಗಳನ್ನು ಬೆಂಕಿಗೆ ಹಾಕಿ, ಬ್ರಹ್ಮಚರ್ಯದ ವ್ರತ ತೊಟ್ಟು ಭಾವೆ ಸತ್ಯಾಗ್ರಹಿಯಾದರು. ಖಾದಿ, ಗ್ರಾಮೀಣ ಕೈಗಾರಿಕೆ, ನಯೀ ತಾಲೀಮ್ ಎಂಬ ಶಿಕ್ಷಣ ಪದ್ಧತಿ, ಗ್ರಾಮ ನೈರ್ಮಲ್ಯ, ಪ್ರಕೃತಿ ಚಿಕಿತ್ಸೆ ಮೊದಲಾದ ಸಂಗತಿಗಳನ್ನು ತಾವೂ ಅಳವಡಿಸಿಕೊಂಡು, ಅವುಗಳ ಆನ್ವಯಿಕ ವಿಧಾನ ರೂಪಿಸತೊಡಗಿದರು. ಬರಬರುತ್ತ ವಿನಾಯಕ ಭಾವೆ ಗಾಂಧೀಜಿಯವರ ಬಾಯಲ್ಲಿ ವಿನೋಬಾ ಆದರು. ಗಾಂಧೀಜಿಯವರ ಸೂಚನೆ ಮೇರೆಗೆ ೧೯೨೧ರಲ್ಲಿ ವಾರ್ಧಾ ಆಶ್ರಮ ಹಾಗೂ ೧೯೩೪ರಲ್ಲಿ ಗ್ರಾಮೀಣ ಉದ್ಯೋಗ ಪ್ರೋತ್ಸಾಹಿಸುವ ಗ್ರಾಮ ಸೇವಾ ಮಂಡಲ ಶುರುವಾಯಿತು. ಆ ಹಳ್ಳಿಗಳಲ್ಲಿ ಮೊದಲ ಒಂದು ವರ್ಷ ಕಾರ್ಯಕರ್ತರು ಗ್ರಾಮನೈರ್ಮಲ್ಯ ಕೆಲಸ ಕೈಗೆತ್ತಿಕೊಂಡರು. ಊರತುಂಬ ಇದ್ದ ತಿಪ್ಪೆಗುಂಡಿಗಳು ಊರಾಚೆ ಹೋದವು. ಸಂಡಾಸು ಕಟ್ಟಿಕೊಳ್ಳಲು ಸಹಾಯ ಮಾಡಲಾಯಿತು. ನೊಣ, ಸೊಳ್ಳೆ ಕಡಿಮೆಯಾಯಿತು. ನಂತರ ಚರಕಾ ಚರ್ಚೆ ಶುರುವಾಯಿತು.

**ಗ್ರಾಮ ಸ್ವರಾಜ್ಯ**

ಗ್ರಾಮ ಸ್ವರಾಜ್ಯ ಸ್ಥಾಪನೆಯೇ ಭಾರತದ ಉನ್ನತಿಗೆ ರಹದಾರಿ ಎಂದು ಗಾಂಧೀಜಿ ದೃಢವಾಗಿ ನಂಬಿದ್ದರು. ಹಳ್ಳಿಗಳು ಎಲ್ಲ ರೀತಿಯಿಂದ ಸ್ವಾವಲಂಬಿಯಾಗಬೇಕೆನ್ನುತ್ತಿದ್ದರು. ವ್ಯಾಪಾರದ ಒಳಹೊರಗುಗಳನ್ನು ಬಲ್ಲ ಅವರ ಪ್ರಕಾರ ಕಚ್ಚಾವಸ್ತುವನ್ನು ಉತ್ಪಾದಿಸಿ ಮಾರುವುದರಿಂದ ದಲ್ಲಾಳಿ–ವ್ಯಾಪಾರಿಗಳಿಗಷ್ಟೆ ಲಾಭವಾಗುತ್ತದೆ; ಅದರ ಬದಲು ಅಂತಿಮ ವಸ್ತುವನ್ನು ಉತ್ಪಾದನೆ ಮಾಡಿ ಮಾರಿದರೆ ನಷ್ಟ ಕಡಿಮೆಯಾಗುತ್ತದೆ. 'ಕಬ್ಬು ಮಾರಬೇಡಿ, ಬೆಲ್ಲ ತಯಾರಿಸಿ ಮಾರಿ. ಭತ್ತ ಮಾರಬೇಡಿ, ಅಕ್ಕಿ–ಅವಲಕ್ಕಿ ತಯಾರಿಸಿ ಮಾರಿ. ಹತ್ತಿ ಮಾರಬೇಡಿ, ಬಟ್ಟೆ–ನೂಲುಂಡೆ ಮಾರಿ. ಸೇಂಗಾ–ಎಳ್ಳು–ಹುಚ್ಚೆಳ್ಳು–ಸೋಯಾಬೀನ್ ಮಾರಬೇಡಿ; ಎಣ್ಣೆ ತಯಾರಿಸಿ ಮಾರಿ' ಎಂದು ಗಾಂಧಿ ಹೇಳಿದರು. ಯಾವುದನ್ನೇ ಆದರೂ ಬೃಹತ್ ಆಗಿ ಮಾಡುವುದರಲ್ಲಿ ಹಿಂಸೆ ಅಡಗಿರುತ್ತದೆ, ಸಣ್ಣದಾಗಿ ಹೆಚ್ಚೆಚ್ಚು ಕಡೆಗಳಲ್ಲಿ ತೊಡಗಿಕೊಳ್ಳುವುದು ಸರ್ವೋದಯ ಸಮಾಜ ರೂಪುಗೊಳ್ಳಲು ಸಹಾಯವಾಗುತ್ತದೆ ಎಂದು ಅವರು ನಂಬಿದ್ದರು.

ಗಾಂಧಿ ಯಂತ್ರ ನಾಗರಿಕತೆ ವಿರೋಧಿಸಿದ್ದರು. ಆದರೆ ಅದನ್ನು ಅಕ್ಷರಶಃ ಅರ್ಥದಲ್ಲಿ ನೋಡಬಾರದು. ಅವರು ಹೊಲಿಗೆ ಯಂತ್ರ, ಸೂಜಿದಾರ, ಚರಕಾ, ಗಡಿಯಾರಗಳನ್ನಾ

ಗೌರಿ

ನಿಂತನಾಗುವತ್ತ
ಗೌರಿ
ಇರಲಿ ;
ಸ್ವಂತವೆಂದರೆ
ಬರಿ
ನೇಯು !

• ಗೋಪಿ •
ಹಿರೇಬೆಟ್ಟು

ನಿರಾಕರಿಸಲಿಲ್ಲ. ಯಾವ ಯಂತ್ರವು ನಮ್ಮ ದೈಹಿಕ ಶ್ರಮ ಕಡಿಮೆ ಮಾಡುವ ಭರದಲ್ಲಿ ಶ್ರಮರಹಿತ ವಿಲಾಸಿಗಳನ್ನಾಗಿಸುವುದೋ, ಅಂಗಹೀನರಾಗಿಸುವುದೋ ಅಂತಹ ಬೃಹತ್ ಬಂಡವಾಳ–ವಿಸ್ತಾರ ಸ್ಥಳಾವಕಾಶ ಬೇಡುವ, ಪರಿಸರ ಮಾಲಿನ್ಯ ಮಾಡುವ ಯಂತ್ರಗಳನ್ನಷ್ಟೆ ಅವರು ವಿರೋಧಿಸಿದ್ದರು. ಅವರ ಪ್ರಕಾರ, 'ಆಧುನಿಕ ನಾಗರಿಕತೆ ಮೂಲದಲ್ಲೇ ಹಿಂಸೆಯನ್ನು ಹೊಂದಿದೆ. ಯಂತ್ರಗಳು ಅದಕ್ಕೆ ಉತ್ತಮ ಉದಾಹರಣೆಗಳು. ತಪ್ಪು ಯಂತ್ರಗಳದ್ದಲ್ಲ, ನಮ್ಮ ಯಂತ್ರ ಮೋಹದ್ದು. ಯಂತ್ರಗಳು ಶ್ರಮ ಉಳಿಸುತ್ತವೆನ್ನುವುದು ಹಾಸ್ಯಾಸ್ಪದ. ಶ್ರಮ ಉಳಿಸಿ ಯಂತ್ರಗಳು ಎಷ್ಟು ಜನರ ಕೆಲಸ ಕದ್ದಿಲ್ಲ? ಎಷ್ಟು ಜನರ ಹಸಿವಿಗೆ ಕಾರಣವಾಗಿಲ್ಲ? ಯಂತ್ರಗಳು ಮನುಷ್ಯರಿಗೆ ನೆರವಾಗಬೇಕೇ ಹೊರತು ಕುಸ್ತಿಗೆ ನಿಲ್ಲುವಂತಿರಬಾರದು. ಯಂತ್ರ ಮನುಷ್ಯನ ಕೈಕಾಲು ಮುರಿಯಬಾರದು. ಈ ಮಾತು ದೇಹವೆಂಬ ಯಂತ್ರಕ್ಕೂ ಅನ್ವಯಿಸುತ್ತದೆ' ಎಂದಿದ್ದರು. ಆದರೆ ಅನಗತ್ಯ ಶ್ರಮ ಕಡಿಮೆ ಮಾಡುವ ಸರಳ ಯಂತ್ರಗಳ ಉತ್ಪಾದನೆ, ರಿಪೇರಿ, ಸುಧಾರಣೆ ಕೆಲಸವನ್ನವರು ಪ್ರೋತ್ಸಾಹಿಸುತ್ತಿದ್ದರು.



ಇಂಥ ಯೋಚನೆಗಳನ್ನೆಲ್ಲ ಅಳವಡಿಸಿಕೊಂಡು ವಿನೋಬಾ ಹಲವು ಆಶ್ರಮ, ತರಬೇತಿ ಕೇಂದ್ರ, ಕಾರ್ಯಾಗಾರಗಳನ್ನು ಶುರುಮಾಡಿದರು. ಅದರಲ್ಲಿ ಗ್ರಾಮಸೇವಾ ಮಂಡಲವೂ ಒಂದು. ಇದು ಬೃಹತ್ ಗಿರಣಿಯಲ್ಲ. ಸುತ್ತಮುತ್ತಲ ಊರವರೆಲ್ಲ ಬಂದು ಇಲ್ಲಿನ ಮಗ್ಗಗಳಲ್ಲಿ ನೇಯುವುದಿಲ್ಲ, ನೂಲುವುದಿಲ್ಲ. ಬದಲಾಗಿ ಹಳ್ಳಿಯ ಹೆಣ್ಣುಮಕ್ಕಳು ಮನೆಯಲ್ಲೇ ನೂಲುತ್ತಾರೆ, ಮಗ್ಗ ನಡೆಸುತ್ತಾರೆ. ನೇಯ್ದ ನೂಲು, ಬಟ್ಟೆ ತಂದು ಇಲ್ಲಿ ಕೊಡುತ್ತಾರೆ. ಗ್ರಾಮೀಣ ಹೆಣ್ಮಕ್ಕಳಿಗೆ ನೂಲುವ–ನೇಯುವ ತರಬೇತಿಯನ್ನೂ ಕೊಡಲಾಗುತ್ತದೆ. ಸಾಧಾರಣವಾಗಿ ಹತ್ತಿ ಕೃಷಿ ಮತ್ತು ನೂಲು ತಯಾರಿಯ ತನಕ ಎಲ್ಲ ಹಂತಗಳಲ್ಲಿ ಕೆಲಸ ಮಾಡುವವರು ಮಹಿಳೆಯರೇ ಆಗಿದ್ದಾರೆ. ಆದರೆ ಮಗ್ಗದಲ್ಲಿ ನೇಯುವ ಕೆಲಸ ಗಂಡಸರದಾಗಿತ್ತು. ಹೀಗಾಗಿ ಅಂತಿಮ ಉತ್ಪಾದನೆಯ ಮೇಲೆ ಗಂಡಸರಿಗೇ ಹಕ್ಕು ಇತ್ತು. ನೇಕಾರಿಕೆ ಉದ್ಯೋಗಕ್ಕಿರುವ ಈ ಲಿಂಗ ಸಂಬಂಧ ಮತ್ತು ಜಾತಿ ಸಂಬಂಧವನ್ನು ಮುರಿಯಲು ಗ್ರಾಮಸೇವಾ ಮಂಡಲ ಪ್ರಜ್ಞಾಪೂರ್ವಕವಾಗಿ ಪ್ರಯತ್ನಿಸುತ್ತಿದೆ. ಅಂತಿಮ ಉತ್ಪನ್ನಗಳಿಗೆ ವ್ಯಾಪಾರದ ವ್ಯವಸ್ಥೆ ಮಾಡಲಾಗಿದೆ.

ಗಾಂಧೀಜಿಯವರ ಚಿಂತನೆಯಂತೆ ಪ್ರತೀ ಹಳ್ಳಿಯೂ ಸ್ವಾವಲಂಬಿಯಾಗುವಂತೆ ಮಾಡುವ ಹಲವು ಯಂತ್ರಗಳನ್ನು ಇಲ್ಲಿ ಅಭಿವೃದ್ಧಿಪಡಿಸಲಾಗುತ್ತಿದೆ. ಗೋಪುರಿಯ ವರ್ಕ್‌ಶಾಪ್‌ನಲ್ಲಿ ಚರಕಾದ ಹಲವು ವಿಧಗಳು, ಮನೆಯಲ್ಲೇ ಇಟ್ಟುಕೊಳ್ಳಬಹುದಾದ ಅರ್ಧ ಯಂತ್ರ – ಅರ್ಧ ಉಪಕರಣದಂತೆ ಸರಳವಾಗಿರುವ ಜಿನ್ನಿಂಗ್ ಯಂತ್ರಗಳು, ವಿದರ್ಭದ ಕಡಿಮೆ ಮಳೆಯಲ್ಲೂ ಬೆಳೆಯುವ ಬುಡ್ಡಹತ್ತಿ ಬಳಸಿ ಬಟ್ಟೆ ತಯಾರಿಸುವ ಜಿನ್ನಿಂಗ್–ಸ್ಪಿನ್ನಿಂಗ್ ಯಂತ್ರಗಳನ್ನು ಅಭಿವೃದ್ಧಿಪಡಿಸಲಾಗುತ್ತಿದೆ.

ಅಲ್ಲಿ ನಮ್ಮ ಗಮನ ಸೆಳೆದ ಮತ್ತೊಂದು ಯಂತ್ರ 'ತಂಪು ಎಣ್ಣೆಗಾಣ' (ಕೋಲ್ಡ್ ಆಯಿಲ್ ಪ್ರೆಸ್).

ಲೋಹದ ಗಾಣಗಳಿಂದ ಎಣ್ಣೆ ತೆಗೆಯುವಾಗ ಎಣ್ಣೆಯ ಉಷ್ಣತೆ ಏರುತ್ತದೆ. ಅದರಲ್ಲಿದ್ದ ಅನ್‌ಸ್ಯಾಚುರೇಟೆಡ್ ಕೊಬ್ಬು ಸ್ಯಾಚುರೇಟೆಡ್ ಆಗುತ್ತದೆ. ಸ್ಯಾಚುರೇಟೆಡ್ ಕೊಬ್ಬು ಹೃದಯಕ್ಕೆ ಮುಳುವಾದ ಎಲ್‌ಡಿಎಲ್ ಕೊಲೆಸ್ಟಿರಾಲ್ ಹೆಚ್ಚಿಸುವ, ಬೊಜ್ಜು ಬರಿಸುವ, ಇನ್ಸುಲಿನ್ ರೆಸಿಸ್ಟೆನ್ಸ್ ಉಂಟುಮಾಡುವ ಕೊಬ್ಬು. ಗಾಣದಿಂದ ಹೊರಬರುವ ಎಣ್ಣೆ ಕೆಟ್ಟ ಕೊಬ್ಬು ಆಗಬಾರದೆಂದರೆ ಮರದ/ಕಲ್ಲಿನ ಗಾಣಗಳಲ್ಲಿ ಅರೆಯಬೇಕು. ಮೊದಲ ಗಾಣಗಳು ಹೀಗೇ ಇದ್ದವು. ಗೋಪುರಿಯಲ್ಲಿ ಮರದ ದಿಮ್ಮಿಯಂತಹ ರುಬ್ಬು ಮೇಲ್ಮೈಯ ಗಾಣವನ್ನು ಸುಧಾರಿತಗೊಳಿಸಿದ್ದಾರೆ. ಎರಡು ಎಚ್‌ಪಿ ಮಶಿನಿನಲ್ಲಿ ನಡೆಸಬಹುದಾದಂಥ, ೧.೧ ಲಕ್ಷ ರೂಪಾಯಿಗೆ ಖರೀದಿಸಬಹುದಾದಂಥ ಸರಳ ಯಂತ್ರ ಅದು. ಹಳ್ಳಿಗೊಂದು ಗಾಣವಿದ್ದರೆ ಸಾಕು, ಎಲ್ಲರೂ ಅವರವರ ಮನೆಯ ಎಣ್ಣೆ ತೆಗೆದುಕೊಳ್ಳಬಹುದು. ಮಿಕ್ಕಿದಲ್ಲಿ ಮಾರಬಹುದು. ಅವರ ಹಿಂಡಿ ಅವರಿಗೇ ಸಿಗುತ್ತದೆ. ಶುದ್ಧ ಎಣ್ಣೆ ಬಳಸಲು ಸಾಧ್ಯವಾಗುತ್ತದೆ. ಸಾಧಾರಣವಾಗಿ ತೌಡೆಣ್ಣೆ, ಹತ್ತಿಕಾಳೆಣ್ಣೆ ಬೆರೆಸಿ ಅಡುಗೆ ಎಣ್ಣೆಯ ದರ ಕಡಿಮೆ ಮಾಡುತ್ತಾರೆ. ಈ ಬೆರೆಸುವಿಕೆಗೆ ಅನುಮತಿಯೂ ಇದೆ. (ಬ್ಲೆಂಡೆಡ್ ಎಣ್ಣೆ ಎಂದರೆ ಅದೇ.) ಊರಿಗೊಂದು 'ತಂಪು ಎಣ್ಣೆಗಾಣ' ಇದ್ದರೆ ಈ ಬೆರೆಸುವಿಕೆಯನ್ನು ತಡೆಗಟ್ಟಿ ಶುದ್ಧ ಎಣ್ಣೆ ಬಳಸಬಹುದಾಗಿದೆ.

'ಬ್ರಿಟಿಷರ ವಸ್ತ್ರಗಳನ್ನು ನಿರಾಕರಿಸಿ' ಎಂದು 'ಸ್ವದೇಶಿ' ಕರೆಯಿತ್ತ ಗಾಂಧಿ ಮ್ಯಾಂಚೆಸ್ಟರಿಗೆ ಹೋಗಿ ಗಿರಣಿ ಕಾರ್ಮಿಕರನ್ನು ಭೇಟಿಯಾಗಿ ತಮ್ಮ ಅಸಹಕಾರ ಚಳುವಳಿ ಭಾರತೀಯರ ಆತ್ಮೋನ್ನತಿಗಾಗಿಯೇ ಹೊರತು ಮ್ಯಾಂಚೆಸ್ಟರಿನ ಜವಳಿ ಕಾರ್ಮಿಕರ ವಿರುದ್ಧವಲ್ಲ ಎಂದು ತಿಳಿಸಿಹೇಳುತ್ತಾರೆ. ಮಿಲಿಯಗಟ್ಟಲೆ ಜನ ತನ್ನ ದೇಶದಲ್ಲಿ ಕೆಲಸ, ದುಡಿಮೆಯಿಲ್ಲದೇ ಇರುವಾಗ ವಿದೇಶಿ ವಸ್ತುಗಳನ್ನು ನಿರಾಕರಿಸುವುದು ಭಾರತೀಯರಿಗೆ ನಿರುದ್ಯೋಗ ಮತ್ತು ಬಡತನ ನಿವಾರಣೆಯ ಮಾರ್ಗವಾಗಿದೆ ಎಂದು ಮನವೊಲಿಸುತ್ತಾರೆ.

ಅದನ್ನೀಗ ನಾವು ನಮ್ಮ ಬಟ್ಟೆಯ ಗಿರಣಿಗಳಿಗೆ, ಬೃಹತ್ ಉತ್ಪಾದನೆ ಮೂಲಕ ತಯಾರಾಗುವ ಕೈಗಾರಿಕೆಯ ವಸ್ತುಗಳಿಗೆ ಹೇಳಬೇಕಾದ ಕಾಲ ಬಂದಿದೆ. ಸ್ವದೇಶಿ ಎಂದರೆ ಭಾರತದ ಬೃಹತ್ ಬಂಡವಳಿಗರ ಕಾರ್ಖಾನೆಗಳು ತಯಾರಿಸಿದ ವಸ್ತುಗಳಲ್ಲ. ಬದಲಾಗಿ ಸಣ್ಣ / ಗುಡಿ ಕೈಗಾರಿಕೆಗಳು ಮತ್ತು ಕೈಯಿಂದ ತಯಾರಾದ ವಸ್ತುಗಳು. ನಮ್ಮ ಜೀವನಾವಶ್ಯಕತೆಗಳ ಮೇಲೆ, ಕೊಳ್ಳುವಿಕೆಯ ಮೇಲೆ ಮಿತಿ ಹೇರಿಕೊಂಡು, ಕೈಮಗ್ಗದ ವಸ್ತುಗಳನ್ನು ಕೊಂಚ ದುಬಾರಿಯೆನಿಸಿದರೂ ಕೊಳ್ಳುವ ಮೂಲಕ ಕೈ ಉತ್ಪನ್ನಗಳಿಗೆ ಮಾರುಕಟ್ಟೆ ಒದಗಿಸಿದರೆ ಅದು ನಿಜವಾದ 'ಸ್ವದೇಶಿ' ಚಳುವಳಿಯಾಗುತ್ತದೆ.

ಗೆಳತಿ ಓಜಸ್ ಜೊತೆ ಮಾತನಾಡುತ್ತಿದ್ದಾಗ ಅವಳ ಕಣ್ಣ ಹೊಳಪಿನಿಂದಲೇ ಇದೆಲ್ಲ ಸಾಧ್ಯ ಎನಿಸುತ್ತಿತ್ತು.

ವಾಪಸು ಬರುವಾಗ ನಮ್ಮೆಲ್ಲರ ಎದೆಗಾಣದಲ್ಲಿ ಹಲವು ಪ್ರಶ್ನೆಗಳು ಹೊರಳುತ್ತಿದ್ದವು. ಯಾಕೆ ನಾವು ನಮಗೆ ಒಳಿತಾಗುವುದನ್ನು ಒಪ್ಪುವುದಕ್ಕೆ ಹಿಂಜರಿಯುತ್ತೇವೆ? ಯಾಕೆ ಭವಿಷ್ಯದ ಲೋಕಹಿತಕ್ಕಿಂತ ಸ್ವಹಿತದ ಸದ್ಯತನಕ್ಕೆ ಮರುಳಾಗುತ್ತೇವೆ?

ಯಾಕೆ?

ಬಹುಶಃ ನಮಗೆ ಭವಿಷ್ಯದ ಕುರಿತು ಯೋಚಿಸುವ ವ್ಯವಧಾನವಿಲ್ಲ. ಈ ಕ್ಷಣದ, ಇಂದಿನ ನನ್ನ ಬದುಕನ್ನು ಸುಲಭಗೊಳಿಸಲು; ಯಾವ ಸಮಯ–ಶ್ರಮವನ್ನೂ ಹಾಕದೇ ಒಳ್ಳೆಯದೆಂದು ಕಂಡದ್ದನ್ನೆಲ್ಲ ನನ್ನದಾಗಿಸಿಕೊಳ್ಳಲು; ಕಡಿಮೆ ಬೆಲೆಗೆ ತಕ್ಷಣ ಎಲ್ಲವನ್ನೂ ಕೈಗೆಟುಕಿಸಿಕೊಳ್ಳಲು ಯಾವ ಬೆಲೆಯನ್ನಾದರೂ ತೆರಲು ನಾವು ಸಿದ್ಧರಾಗಿದ್ದೇವೆ. ನೆಲ–ಜಲ–ಕಡಲು–ಗಾಳಿ–ಕಾಡು ಏನಾದರಾಗಲಿ, ಶ್ರಮಪಟ್ಟ ಕುಶಲಕರ್ಮಿ ಉಪವಾಸ ಮಲಗಲಿ, ನಮಗೆ ಏನೂ ಕಷ್ಟವಿಲ್ಲದೆ ಎಲ್ಲ ಸಿಗಬೇಕು, ಕಡಿಮೆ ಬೆಲೆಗೆ ಸುಲಭವಾಗಿ ಸಿಗಬೇಕು. ಹೀಗೆ ಬದುಕುವುದೇ ಜಾಣತನ, ಇದೇ ಕಾಲಕ್ಕೆ ತಕ್ಕಂತೆ ಬದುಕುವ ಕ್ರಮ ಎನಿಸಿಕೊಂಡಿದೆ!

ಎಲ ಎಲಾ, ಅದೆಂತಹ ಆತ್ಮಹತ್ಯಾತ್ಮಕ ಹಪಾಹಪಿ ಇದು?! ಸರಳವಾಗಿರುವುದು, ನ್ಯಾಯಪರವಾಗಿರುವುದು, ಉದಾತ್ತವಾಗಿರುವುದು ತಂತಾನೇ ಒಲಿಯಲಾರದು. ಅದಕ್ಕೊಂದು ಬದ್ಧತೆ, ಸಹನೆ, ಪ್ರಾಮಾಣಿಕತೆ ಬೇಕು. ಸತ್ಯ–ಅಹಿಂಸೆ ಎಂದರೆ ಇದೇ ಅಲ್ಲವೇ? – ಎಂದು ಮುಂತಾಗಿ ಯೋಚಿಸುತ್ತ, ಭೀಮನಕೋಣೆಯ ಚರಕಾ ಸಂಸ್ಥೆ–ಗ್ರಾಮಸೇವಾ ಸಂಘಗಳನ್ನು ನೆನೆಯುತ್ತ ನಾವು ಹೊರಬರುವಾಗ ಬಾಗಿಲು ತೆರೆಯಿತು. ಕಣ್ಣೆದುರು ಹಲವು ಹೊಸ ದಾರಿಗಳು ಹರಡಿಕೊಂಡವು. ನಮ್ಮೆದೆಗಳಲ್ಲಿ ಹಲವು ಹೊಸ ನಿರ್ಧಾರಗಳು ಮೂಡುತ್ತಿದ್ದವು.

**ಡಾ॥ ಎಚ್. ಎಸ್. ಅನುಪಮಾ**
ಜಲಜಾ ಜನರಲ್ ಮತ್ತು ಹೆರಿಗೆ ಆಸ್ಪತ್ರೆ, ಕವಲಕ್ಕಿ ಅಂಚೆ
ಹೊನ್ನಾವರ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ – ೫೮೧ ೩೩೧




# ಸಂಕಷ್ಟದ ಹಾದಿಯಲ್ಲಿ ಸಣ್ಣ ಪತ್ರಿಕೆಗಳು

ಡಾ॥ ಚಿದಾನಂದ ಕಮ್ಮಾರ್

**ಸ್ವಾ**ತಂತ್ರ್ಯಪೂರ್ವದಲ್ಲಿ ಭಾರತದಲ್ಲಿ ದೇಶ ಸ್ವಾತಂತ್ರ್ಯ ಗಳಿಸಬೇಕೆನ್ನುವ 'ಸ್ವರಾಜ್ಯ' ಕಲ್ಪನೆಯ ಸಾಕಾರಕ್ಕಾಗಿ ದುಡಿದ ಪತ್ರಿಕೆಗಳು, ದೇಶ ಸ್ವಾತಂತ್ರ್ಯ ಕಂಡ ನಂತರ ಸುಭದ್ರ ರಾಷ್ಟ್ರ ನಿರ್ಮಾಣಕ್ಕಾಗಿ ಶ್ರಮಿಸಬೇಕಾಯಿತು. ದೇಶದ ಆಡಳಿತ ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಹೊಂದಿದ ನಂತರ ಪತ್ರಿಕೆಗಳು ಹೊಸ ಬಗೆಯ ಸವಾಲುಗಳಿಗೆ ಹೋರಾಡಬೇಕಾಯಿತು. ಭಾಷಾವಾರು ಪ್ರಾಂತ್ಯಗಳ ರಚನೆ ದೇಶದ ಚರಿತ್ರೆಯಲ್ಲಿ ಮಹತ್ತರ ಪಾತ್ರವಹಿಸಿತು.

ಭಾಷಾವಾರು ರಾಜ್ಯಗಳು ಉದಯಿಸಿದ ನಂತರ ಪ್ರಾದೇಶಿಕ ಭಾಷೆಯ ಪತ್ರಿಕೆಗಳೂ ಬಲಗೊಳ್ಳತೊಡಗಿದವು. ಸಾಕ್ಷರತೆ ಹೆಚ್ಚಿದಂತೆ ಮತ್ತು ಕೈಗಾರಿಕಾ ಉತ್ಪನ್ನಗಳು ತಮ್ಮ ಮಾರುಕಟ್ಟೆ ಸ್ಥಾಪಿಸಿಕೊಳ್ಳಲು ಸ್ಪರ್ಧೆಗಿಳಿದಂತೆ ಪತ್ರಿಕೆಗಳೂ ಓದುಗರ ಮತ್ತು ಜಾಹೀರಾತುದಾರರ ಬೆಂಬಲದಿಂದಾಗಿ ತಮ್ಮ ಪ್ರಸಾರ, ಪ್ರಭಾವ ಬೆಳೆಸಿಕೊಳ್ಳತೊಡಗಿದವು. ಪತ್ರಿಕೋದ್ಯೋಮವನ್ನು ಲಾಭದಾಯಕ ವೃತ್ತಿಯನ್ನಾಗಿ ಕಂಡುಕೊಂಡ ಉದ್ದಿಮೆದಾರರು ಪತ್ರಿಕಾರಂಗ ಪ್ರವೇಶಿಸ ತೊಡಗಿದರು. ೧೯೫೦–೬೦ರ ವೇಳೆಗೆ ದೇಶದಲ್ಲಿ ಕೈಗಾರಿಕೋದ್ಯಮಿಗಳು ಪತ್ರಿಕಾ ಕ್ಷೇತ್ರ ಪ್ರವೇಶಿಸಲಾರಂಭಿಸಿದರು.

ಕೈಗಾರಿಕೋದ್ಯಮಿಗಳ ಪ್ರವೇಶದಿಂದಾಗಿ 'ಪತ್ರಿಕಾ ವ್ಯವಸಾಯ' 'ಪತ್ರಿಕೋದ್ಯಮ' ಸ್ವರೂಪ ಪಡೆಯಿತು. ಪತ್ರಿಕಾ ಮಾಲೀಕರು ಪತ್ರಿಕೆಗಳನ್ನು 'ಚಾಟಿ' ರೀತಿಯಲ್ಲಿ ಉಪಯೋಗಿಸುವ ಮೂಲಕ ಸರಕಾರದ ಮೇಲೆ ಪ್ರಭಾವ ಬೀರತೊಡಗಿದರು. ಇಲ್ಲಿಂದಲೇ ಪತ್ರಿಕೋದ್ಯಮದ ಧ್ಯೇಯ, ಧೋರಣೆಗಳಲ್ಲಿ ಬದಲಾವಣೆ ಕಾಣಲಾರಂಭಿಸಿತು. ಪತ್ರಿಕಾ ಸ್ವಾತಂತ್ರ್ಯ ಮೊಟಕುಗೊಂಡು, ಪತ್ರಕರ್ತರು ಮಾಲೀಕರ ಧೋರಣೆಗಳನ್ನು ಅನುಸರಿಸಬೇಕಾಯಿತು. ಲಾಭ ನಿರೀಕ್ಷೆ ಹೆಚ್ಚಿದಂತೆ, ಪತ್ರಿಕೋದ್ಯಮ ಸಂಪೂರ್ಣ ವ್ಯಾಪಾರಿ ಮನೋಭಾವ ತಳೆಯತೊಡಗಿತು.

ಕರ್ನಾಟಕದಲ್ಲಿ ಪತ್ರಿಕೆಗಳ ಪ್ರಸಾರ ಸಂಖ್ಯೆಯನ್ನೇ ಆಧಾರವಾಗಿಟ್ಟುಕೊಂಡು ಪತ್ರಿಕೆಗಳನ್ನು ವಿಂಗಡಿಸಲಾಗಿದೆ. ಸಣ್ಣ, ಮಧ್ಯಮ ಮತ್ತು ದೊಡ್ಡ ಪತ್ರಿಕೆಗಳೆಂದು ವರ್ಗೀಕರಿಸುವ ನೀತಿಯನ್ನು ಸರಕಾರ ಅನುಸರಿಸಿಕೊಂಡು ಬಂದಿದೆ. ಸರಕಾರದ ಮಾನದಂಡದ ಪ್ರಕಾರ ಕರ್ನಾಟಕದಲ್ಲಿ ೨೫,೦೦೦ಕ್ಕಿಂತ ಕಡಿಮೆ ಪ್ರಸಾರವನ್ನು ಹೊಂದಿರುವ ಪತ್ರಿಕೆಯನ್ನು ಸಣ್ಣ ಪತ್ರಿಕೆ ಎಂದು ಪರಿಗಣಿಸಲಾಗಿದೆ. ೨೫,೦೦೦ದಿಂದ ೭೫,೦೦೦ವರೆಗೆ ಪ್ರಸಾರ ಹೊಂದಿರುವ ಪತ್ರಿಕೆಗಳನ್ನು ಮಧ್ಯಮ ಪತ್ರಿಕೆಗಳೆಂದು ಪರಿಗಣಿಸಲಾಗಿದ್ದರೆ, ೭೫,೦೦೦ಕ್ಕಿಂತ ಹೆಚ್ಚಿನ ಪ್ರಸಾರವುಳ್ಳ ಪತ್ರಿಕೆಗಳನ್ನು ದೊಡ್ಡ ಪತ್ರಿಕೆ ಅಥವಾ ರಾಜ್ಯಮಟ್ಟದ ಪತ್ರಿಕೆಗಳೆಂದು ಗುರುತಿಸಲಾಗಿದೆ. ಸರಕಾರದ ಜಾಹೀರಾತುಗಳನ್ನು ಪತ್ರಿಕೆಗಳಿಗೆ ನೀಡಲು ಈ ಮಾನದಂಡವನ್ನೇ ಅನುಸರಿಸಲಾಗುತ್ತದೆ.

ಸ್ವಾತಂತ್ರ್ಯಪೂರ್ವದಲ್ಲಿ ಸಣ್ಣ ಪತ್ರಿಕೆಗಳು ಸ್ವಾತಂತ್ರ್ಯ ಸಂಗ್ರಾಮಕ್ಕಾಗಿ ಕಹಳೆಯೂದಿದವು. ದೇಶಪ್ರೇಮವನ್ನೇ ಉಸಿರಾಡಿದ ಪತ್ರಿಕೆಗಳು ಸ್ವತಂತ್ರ ಭಾರತಕ್ಕಾಗಿ ಜನಜಾಗೃತಿಯನ್ನುಂಟುಮಾಡುವಲ್ಲಿ, ಹೋರಾಟವನ್ನು ಬಲಗೊಳಿಸುವಲ್ಲಿ ನೇರ ಪಾತ್ರ ವಹಿಸಿದವು. ಸ್ವಾತಂತ್ರ್ಯದ ನಂತರದಲ್ಲಿ ಸಣ್ಣ ಪತ್ರಿಕೆಗಳಿಗೆ ಸಂಪಾದಕರ ಸೈದ್ಧಾಂತಿಕ ಆದ್ಯತೆಗಳಿಗಿಂತ ವ್ಯಾವಹಾರಿಕ ಆಸಕ್ತಿಗಳೇ ಮುಂದಾದವು. ಕೆಲವು ವರ್ಷಗಳ ಕಾಲ ಭಾರತ ಸರ್ಕಾರ ಸಣ್ಣ ಪತ್ರಿಕೆಗಳಿಗೆ ಆದ್ಯತೆ ಮೇಲೆ ಸರಕಾರಿ ಜಾಹೀರಾತು ಹಾಗೂ ಮುದ್ರಣ ಕಾಗದದ ಮೇಲೆ ರಿಯಾಯಿತಿಯನ್ನು ನೀಡುವ ಮೂಲಕ ಬೆಂಬಲ ನೀಡಿತು. ಕಾಲಕ್ರಮೇಣ ರಿಯಾಯಿತಿ ದರದಲ್ಲಿ ಕಾಗದ ನೀಡುವುದನ್ನು ಸರಕಾರ ರದ್ದುಗೊಳಿಸಿತು. ಸಣ್ಣ ಪತ್ರಿಕೆಗಳ ಹೆಸರಿನಲ್ಲಿ ಸರಕಾರ ನೀಡುವ ಮುದ್ರಣ ಕಾಗದವನ್ನು ರಿಯಾಯಿತಿ ದರದಲ್ಲಿ ಪಡೆದು ಅದನ್ನು ಮಾರುಕಟ್ಟೆ ದರದಲ್ಲಿ ಮಾರಾಟ ಮಾಡುವ ದಂಧೆಗೆ ಕಡಿವಾಣ ಬಿತ್ತು. ಆ ಸಂದರ್ಭದಲ್ಲಿ ಪತ್ರಿಕೋದ್ಯಮದಲ್ಲಿ ಉಳಿದದ್ದು ನೈಜ ಪತ್ರಿಕಾ ಧರ್ಮ ಪಾಲಿಸುವ ಕೆಲವು ಸಣ್ಣ ಪತ್ರಿಕೆಗಳು ಮಾತ್ರ. ಇಂಥ ಪತ್ರಿಕೆಗಳು ಸ್ವಾತಂತ್ರ್ಯಾನಂತರದಲ್ಲಿ ಬೃಹತ್ ಉದ್ದಿಮೆಯಾಗಿ ಬೆಳೆದ ಪತ್ರಿಕೋದ್ಯಮದಲ್ಲಿ ಹಲವು ಸವಾಲುಗಳನ್ನು ಎದುರಿಸಬೇಕಾಯಿತು.

ಕನ್ನಡ ಪತ್ರಿಕೋದ್ಯಮದಲ್ಲಿ ವಿಶೇಷವಾಗಿ ಜಾಗತೀಕರಣದ ಕಾಲಘಟ್ಟದಲ್ಲಿ ೯೦ರ ದಶಕದಿಂದೀಚೆಗೆ ಸಣ್ಣ ಪತ್ರಿಕೆಗಳು ಸಂಕಷ್ಟದ ಹಾದಿಯನ್ನು ಸವೆಸಬೇಕಾಯಿತು. ಈ ಅವಧಿಯಲ್ಲಿ ಕನ್ನಡ ಪತ್ರಿಕೋದ್ಯಮವನ್ನು ಪ್ರವೇಶಿಸಿದ ರಾಜ್ಯಮಟ್ಟದ ಹೊಸ ಪತ್ರಿಕೆಗಳು ಮತ್ತು ಪ್ರಸಾರ ಹೆಚ್ಚಳ ದೃಷ್ಟಿಯಿಂದ





ಅವುಗಳು ನಡೆಸಿದ ಪ್ರಯೋಗಗಳು, ಮಾರುಕಟ್ಟೆ ತಂತ್ರಗಳು ಸಣ್ಣ ಮತ್ತು ಮಧ್ಯಮ ಪತ್ರಿಕೆಗಳಿಗೆ ಮುಳುವಾಗಿ ಪರಿಣಮಿಸತೊಡಗಿದವು. ಕನ್ನಡದ ಸಣ್ಣ ಮತ್ತು ಮಧ್ಯಮ ಪತ್ರಿಕೆಗಳು ಈ ಕಾಲಘಟ್ಟದಲ್ಲಿ ಎದುರಿಸಬೇಕಾಗಿ ಬಂದ ಪ್ರಮುಖ ಸವಾಲುಗಳನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ:

ಸಣ್ಣ ಪತ್ರಿಕೆಗಳು ಸಾಮಾನ್ಯವಾಗಿ ಜಿಲ್ಲಾ ಮತ್ತು ತಾಲ್ಲೂಕು ಮಟ್ಟದ ಪತ್ರಿಕೆಗಳಾಗಿವೆ. ಈ ಪತ್ರಿಕೆಗಳ ಪ್ರಸಾರ ಆಯಾ ತಾಲ್ಲೂಕು ಮತ್ತು ಜಿಲ್ಲೆಗಳಿಗೆ ಮಾತ್ರ ಸೀಮಿತವಾಗಿರುತ್ತದೆ. ಪ್ರಸಾರದಿಂದ ಬರುವ ಆದಾಯ ಸಹಜವಾಗಿಯೇ ಕಡಿಮೆಯಾಗಿರುತ್ತದೆ. ಸಣ್ಣ ಮತ್ತು ಮಧ್ಯಮ ಪತ್ರಿಕೆಗಳ ಪ್ರಮುಖ ಆದಾಯ ಮೂಲವೂ ಜಾಹೀರಾತೇ ಆಗಿರುವುದರಿಂದ ಇಂಥ ಪತ್ರಿಕೆಗಳು ಸರಕಾರಿ ಜಾಹೀರಾತುಗಳನ್ನೇ ನೆಚ್ಚಿಕೊಂಡು ಇರಬೇಕಾಗಿದೆ. ಸಣ್ಣ ಪತ್ರಿಕೆಗಳಿಗೆ ಸರಕಾರದ ನೆರವೂ ಕಡಿಮೆ ಆಗಿದೆ. ಜಾಹೀರಾತು ನೀಡುವಲ್ಲಿ ಹೆಚ್ಚು ಪ್ರಸಾರ ಇರುವ ರಾಜ್ಯಮಟ್ಟದ ಪತ್ರಿಕೆಗಳಿಗೇ ಸರಕಾರ ಆದ್ಯತೆ ನೀಡುವುದರಿಂದ ಸಣ್ಣ ಮತ್ತು ಮಧ್ಯಮ ಪತ್ರಿಕೆಗಳಿಗೆ ವ್ಯವಸ್ಥಿತವಾಗಿ ಸರಕಾರಿ ಜಾಹೀರಾತು ಸಿಗುತ್ತಿಲ್ಲ. ಅಲ್ಲದೆ, ಇಂಥ ಪತ್ರಿಕೆಗಳ ಜಾಹೀರಾತು ದರವೂ ಕಡಿಮೆ ಇರುವುದೂ ಈ ಪತ್ರಿಕೆಗಳ ಆರ್ಥಿಕ ಮುಗ್ಗಟ್ಟಿಗೆ ಕಾರಣವಾಗಿದೆ.

ಮುದ್ರಣ ಸೌಲಭ್ಯದ ಕೊರತೆ ಸಣ್ಣ ಪತ್ರಿಕೆಗಳ ಮತ್ತೊಂದು ಪ್ರಮುಖ ಸಮಸ್ಯೆಯಾಗಿದೆ. ಆಫ್‌ಸೆಟ್ ಮುದ್ರಣದ ದಿನಗಳಲ್ಲಿ ಸಣ್ಣ ಪತ್ರಿಕೆಗಳು ಇನ್ನೂ ಟ್ರೆಡಲ್ ಪ್ರೆಸ್ ಕಾಲದಲ್ಲಿಯೇ ಇವೆ. ಆಫ್‌ಸೆಟ್ ಮುದ್ರಣಾಲಯದ ಸ್ಥಾಪನೆಗೆ ಬೇಕಾದ ಹಣಕಾಸು ಹೊಂದಿಸುವ ಶಕ್ತಿ ಸಣ್ಣ ಮತ್ತು ಮಧ್ಯಮ ಪತ್ರಿಕೆಗಳಿಗೆ ಇಲ್ಲ. ಇಂಥ ಪತ್ರಿಕೆಗಳು ಬಹುವರ್ಣಗಳಲ್ಲಿ ಆಕರ್ಷಕವಾಗಿ ಪ್ರಕಟವಾಗುತ್ತಿರುವ ರಾಜ್ಯಮಟ್ಟದ ಪತ್ರಿಕೆಗಳೊಂದಿಗೆ ಸ್ಪರ್ಧಿಸುವುದು ದೂರದ ಮಾತೇ ಆಗಿದೆ.

ಸಿಬ್ಬಂದಿ ಕೊರತೆ ಸಣ್ಣ ಮತ್ತು ಮಧ್ಯಮ ಪತ್ರಿಕೆಗಳ ಬಹುಮುಖ್ಯ ಸಮಸ್ಯೆಗಳಲ್ಲೊಂದು. ಸಣ್ಣ ಪತ್ರಿಕೆಗಳಲ್ಲಿ ವೃತ್ತಿ ಆರಂಭಿಸುವ ಪತ್ರಕರ್ತರು ತಕ್ಕಮಟ್ಟಿನ ಅನುಭವ ಗಳಿಸುತ್ತಲೇ ಹೆಚ್ಚಿನ ಸಂಬಳದ ಕಾರಣದಿಂದಾಗಿ ದೊಡ್ಡ ಪತ್ರಿಕೆಗಳಿಗೆ ವಲಸೆ ಹೋಗಿಬಿಡುತ್ತಿದ್ದಾರೆ. ಇದರಿಂದಾಗಿ ಸಂಪಾದಕೀಯ ಸಿಬ್ಬಂದಿಯೂ ಸೇರಿದಂತೆ ಪತ್ರಿಕಾಲಯದ ಸಿಬ್ಬಂದಿಯನ್ನು ಹಿಡಿದಿಟ್ಟುಕೊಳ್ಳುವುದೇ ತಾಲ್ಲೂಕು ಮತ್ತು ಜಿಲ್ಲಾಮಟ್ಟದ ಪತ್ರಿಕೆಗಳಿಗೆ ಕಷ್ಟವಾಗಿದೆ. ದೊಡ್ಡ ಮೊತ್ತದ ಸಂಬಳ ನೀಡಿ ಅವರನ್ನು ಉಳಿಸಿಕೊಳ್ಳುವುದು ಸಣ್ಣ ಪತ್ರಿಕೆಗಳಿಗೆ ಸಾಧ್ಯವಾಗುತ್ತಿಲ್ಲ.

೯೦ರ ದಶಕದ ಅಂತ್ಯದಲ್ಲಿ ಕನ್ನಡ ಪತ್ರಿಕೋದ್ಯಮದಲ್ಲಿ ಉಂಟಾದ ಬೆಲೆ ಸಮರದಿಂದಾಗಿ ರಾಜ್ಯ ಮಟ್ಟದ ದೊಡ್ಡ ಪತ್ರಿಕೆಗಳು ಅತ್ಯಂತ ಕಡಿಮೆ ಬೆಲೆಯಲ್ಲಿ ಓದುಗರ ಕೈ ಸೇರತೊಡಗಿದವು. ೧೬–೨೦ ಪುಟಗಳ ವರ್ಣಮಯ ಪತ್ರಿಕೆಗಳು ಕೇವಲ ರೂ. ೧.೫೦, ರೂ. ೨ರ ದರದಲ್ಲಿ ಲಭಿಸತೊಡಗಿದಾಗ ನೇರ ಪರಿಣಾಮ ಆಗತೊಡಗಿದ್ದು ಸಣ್ಣ ಪತ್ರಿಕೆಗಳ ಪ್ರಸಾರದ ಮೇಲೆ. ಈ ಪತ್ರಿಕೆಗಳ ಮುಖಬೆಲೆಯಲ್ಲಿಯೇ ದೊಡ್ಡ ಪತ್ರಿಕೆಗಳು ದೊರೆಯತೊಡಗಿದಾಗ ಓದುಗರು ಸಹಜವಾಗಿಯೇ ಸಣ್ಣ ಮತ್ತು ಮಧ್ಯಮ ಪತ್ರಿಕೆಯಿಂದ ದೂರ ಉಳಿಯತೊಡಗಿದರು. ದರ ಇಳಿಕೆಯ ಮಾರುಕಟ್ಟೆ ತಂತ್ರ ಸಣ್ಣ ಪತ್ರಿಕೆಗಳಿಗೆ ಅಸ್ತಿತ್ವಕ್ಕೆ ಕಂಟಕವಾಗಿ ಪರಿಣಮಿಸಿತು.

ಅಪಾರ ಪ್ರಮಾಣದ ಬಂಡವಾಳ, ಆಧುನಿಕ ಮುದ್ರಣ ಸೌಕರ್ಯ, ಆಕರ್ಷಕ ವಿನ್ಯಾಸದಿಂದ ಮನಸೆಳೆಯತೊಡಗಿದ ರಾಜ್ಯಮಟ್ಟದ ಪತ್ರಿಕೆಗಳು ನಿಧಾನವಾಗಿ ಪ್ರಸಾರವನ್ನು ಹೆಚ್ಚಿಸಿಕೊಳ್ಳತೊಡಗಿದರೆ ಸಣ್ಣ ಪತ್ರಿಕೆಗಳಿಗೆ ಬರುತ್ತಿದ್ದ ಜಾಹೀರಾತುಗಳು ದೊಡ್ಡ ಪತ್ರಿಕೆಗಳತ್ತ ಮುಖ ಮಾಡಿದವು. ಸರಕಾರವೂ ಹೆಚ್ಚು ಪ್ರಸಾರವಿರುವ ಪತ್ರಿಕೆಗಳಿಗೇ ಜಾಹೀರಾತುಗಳನ್ನು ಬಿಡುಗಡೆ ಮಾಡುವಲ್ಲಿ ಆದ್ಯತೆ ನೀಡುವುದರಿಂದ ಸಣ್ಣಪತ್ರಿಕೆಗಳು ದೊಡ್ಡ ಪ್ರಮಾಣದ ಜಾಹೀರಾತುಗಳಿಲ್ಲದೆ ಆರ್ಥಿಕ ಸಂಕಷ್ಟಕ್ಕೆ ಒಳಗಾದವು. ಸಣ್ಣ ಪತ್ರಿಕೆಗಳು ಕೇವಲ ಸ್ಥಳೀಯ ವರ್ಗೀಕೃತ ಜಾಹೀರಾತುಗಳನ್ನೇ ನೆಚ್ಚಿಕೊಂಡು ಮುನ್ನಡೆಯಬೇಕಾಯಿತು.

ರಾಜ್ಯಮಟ್ಟದ ದೊಡ್ಡ ಪತ್ರಿಕೆಗಳು ಸಭೆ, ಸಮಾರಂಭಗಳು, ಬೃಹತ್

ರಾಜಕೀಯ ಸಮಾವೇಶಗಳು, ಸಾಹಿತ್ಯ, ಸಂಗೀತಗಳಂತಹ ಸಾಂಸ್ಕೃತಿಕ ಸಮ್ಮೇಳನಗಳಲ್ಲಿ, ಜಾತ್ರೆಗಳ ಸಂದರ್ಭದಲ್ಲಿ ಉಚಿತವಾಗಿ ಪ್ರಾಯೋಜಿತ ಪ್ರತಿಗಳನ್ನು ಓದುಗರಿಗೆ ವಿತರಿಸುವ ಪರಿಪಾಠ ಬೆಳೆಸಿಕೊಂಡಿವೆ. ದೊಡ್ಡ ಪತ್ರಿಕೆಗಳಿಗೆ ಇರುವ ಆರ್ಥಿಕ ಹಾನಿಯನ್ನು ತಡೆದುಕೊಳ್ಳುವಂತಹ ಶಕ್ತಿ ಸಣ್ಣ ಮತ್ತು ಮಧ್ಯಮ ಪತ್ರಿಕೆಗಳಿಗೆ ಇಲ್ಲ. ಕಡಿಮೆ ಪ್ರಸಾರ ಸಂಖ್ಯೆಯ ಇಂಥ ಪತ್ರಿಕೆಗಳಿಗೆ ಪ್ರಾಯೋಜಕತ್ವ ವಹಿಸಲು ಸಂಘ–ಸಂಸ್ಥೆಗಳು, ವ್ಯಕ್ತಿಗಳು, ಸಮುದಾಯಗಳು ಮುಂದಾಗುವುದಿಲ್ಲ. ಹೀಗಾಗಿ ಈ ಪತ್ರಿಕೆಗಳು ಪ್ರಸಾರದಲ್ಲಿಯೂ ಪ್ರಭಾವದಲ್ಲಿಯೂ ಹಿನ್ನಡೆ ಅನುಭವಿಸುವಂತಾಗಿದೆ.

ರಾಜ್ಯಮಟ್ಟದ ಪತ್ರಿಕೆಗಳು ರಾಜ್ಯದ ಎಲ್ಲ ಜಿಲ್ಲೆಗಳಿಗೆ ಪ್ರತ್ಯೇಕ ಆವೃತ್ತಿಗಳನ್ನು ಹೊರತರುತ್ತಿವೆ. ಸ್ಥಳೀಯ ಸುದ್ದಿಗಳಿಗಾಗಿಯೇ ಪ್ರತ್ಯೇಕ ಪುಟಗಳನ್ನು ಮೀಸಲಿಡುತ್ತಿವೆ. ಇದರಿಂದ ಸಣ್ಣ ಮತ್ತು ಮಧ್ಯಮ ಪತ್ರಿಕೆಗಳು ಸ್ಥಳೀಯ ಜಾಹೀರಾತುಗಳನ್ನು ಮತ್ತು ಓದುಗರನ್ನೂ ಕಳೆದುಕೊಳ್ಳಬೇಕಾಯಿತು. ಸ್ಥಳೀಯ ಸಮಸ್ಯೆಗಳ ಮೇಲೆ ಬೆಳಕು ಚೆಲ್ಲುವ ಮೂಲಕ ಆಯಾ ಪ್ರದೇಶಗಳಲ್ಲಿ ಜನರ ಧ್ವನಿಯಾಗಿದ್ದ ಪತ್ರಿಕೆಗಳು ದೊಡ್ಡ ಪತ್ರಿಕೆಗಳ ಜಿಲ್ಲಾ ಆವೃತ್ತಿಗಳ ಆರಂಭದಿಂದಾಗಿ ತೀವ್ರ ಪೈಪೋಟಿ ಎದುರಿಸಬೇಕಾಯಿತು.

ದೊಡ್ಡ ಪತ್ರಿಕೆಗಳು ಜಿಲ್ಲಾ ಆವೃತ್ತಿಗಳನ್ನು ಆರಂಭಿಸುವ ಜೊತೆಗೆ ಸ್ಥಳೀಯವಾಗಿ ಮುದ್ರಣ ಘಟಕಗಳನ್ನೂ ಆರಂಭಿಸತೊಡಗಿದವು. ಇದರಿಂದ ಪತ್ರಿಕೆಗಳು ಬಹುಬೇಗನೆ ಓದುಗರ ಕೈಗೆ ಸಿಗಲಾರಂಭಿಸಿದವು. ಬಹುವರ್ಣ ಗಳಲ್ಲಿ ಪ್ರಕಟವಾಗುವ ಸುದ್ದಿ, ಚಿತ್ರಗಳು ಓದುಗರನ್ನು ಆಕರ್ಷಿಸತೊಡಗಿದವು. ಅಲ್ಲದೆ ಪ್ರತಿದಿನವೂ ವೈವಿಧ್ಯಮಯ ಪುರವಣಿಗಳನ್ನು ಪ್ರಕಟಿಸತೊಡಗಿದವು. ಇಂಥ ಪುರವಣಿಗಳನ್ನು ಪ್ರತಿದಿನವೂ ಪ್ರಕಟಿಸಿ ಓದುಗರನ್ನು ಉಳಿಸಿ ಕೊಳ್ಳುವುದು ಸಣ್ಣ ಮತ್ತು ಮಧ್ಯಮ ಪತ್ರಿಕೆಗಳಿಗೆ ಸಾಧ್ಯವಾಗದೇ ಹೋಯಿತು.

ಸಣ್ಣ ಮತ್ತು ಮಧ್ಯಮ ಪತ್ರಿಕೆಗಳು ಕಡಿಮೆ ಬೆಲೆಗೆ ಓದುಗರನ್ನು ತಲುಪಬೇಕಾದ ಅನಿವಾರ್ಯತೆ ದರ ಸಮರದಿಂದಾಗಿ ಒದಗಿ ಬಂದಿದೆ. ಬೆಲೆ ಹೆಚ್ಚಿಸಿದರೆ ಓದುಗರು ದೊಡ್ಡ ಪತ್ರಿಕೆಗಳತ್ತ ಮುಖ ಮಾಡುವ ಸಾಧ್ಯತೆ ಇರುವುದರಿಂದ ಬೆಲೆ ಹೆಚ್ಚಿಸಲೂ ಆಗದ, ಇರುವ ಬೆಲೆಯಲ್ಲಿಯೇ ಪತ್ರಿಕೆಯನ್ನು ಕೊಡಲೂ ಆಗದ ಸ್ಥಿತಿಯಲ್ಲಿ ಸಣ್ಣ ಮತ್ತು ಮಧ್ಯಮ ಪತ್ರಿಕೆಗಳಿವೆ. ಜಾಗತೀಕರಣದ ಕಾಲಘಟ್ಟದಲ್ಲಿ ಅತ್ಯಾಧುನಿಕ ಸೌಕರ್ಯಗಳನ್ನು ಹೊಂದಿರುವ ದೊಡ್ಡ ಪತ್ರಿಕೆಗಳ ಮಧ್ಯೆಯೇ ಸ್ಥಳೀಯ ಭಾಷಾ ಸೊಗಡಿನ ಪ್ರಾದೇಶಿಕ ಪತ್ರಿಕೆಗಳು ತಮ್ಮ ಇತಿಮಿತಿಯಲ್ಲಿಯೇ ಜನಪರ ಪತ್ರಿಕೋದ್ಯಮವನ್ನು ನಡೆಸುತ್ತಿವೆ.

ಆಧುನಿಕ ಕಾಲದಲ್ಲಿ ಪತ್ರಿಕೆಗಳನ್ನು ನಡೆಸುವುದು ಈಗ ಸುಲಭವಾಗಿದೆ. ೭೦–೮೦ರ ದಶಕದಲ್ಲಿದ್ದ ತಾಂತ್ರಿಕ ಕೊರತೆಗಳು ಈಗ ಇಲ್ಲ. ಸುದ್ದಿ ಸಂಗ್ರಹ ಸುಲಭವಾಗಿದೆ. ಇಂದಿನ ಎಲ್ಲ ರಾಜ್ಯಮಟ್ಟದ ಪತ್ರಿಕೆಗಳಲ್ಲಿ ಪ್ರಕಟವಾಗುವ ಸುದ್ದಿಗಳು ಭಾಷೆ, ಶೈಲಿ, ನಿರೂಪಣೆಯ ದೃಷ್ಟಿಯಿಂದ ಒಂದೇ ರೀತಿಯಾಗಿ ಇರುತ್ತವೆ. 'ಸ್ಕೂಪ್' ಎನಿಸುವ ವರದಿಗಳು ಇಲ್ಲ. ದೊಡ್ಡ ಪತ್ರಿಕೆಗಳಲ್ಲಿರುವ ಇಂಥ ಕೊರತೆಗಳನ್ನು ಸಣ್ಣ ಪತ್ರಿಕೆಗಳು ಅವಕಾಶವಾಗಿ ಬಳಸಿಕೊಳ್ಳಬೇಕಾಗಿದೆ. ಆ ಮೂಲಕ ಓದುಗರ ಗಮನ ಸೆಳೆಯುವ ಪ್ರಯತ್ನ ಮಾಡಬೇಕಾಗಿದೆ. ದೊಡ್ಡ ಪತ್ರಿಕೆಗಳ ಕಣ್ಣಿಗೆ ಬೀಳದೆ ಹೋಗುವ 'ಸುದ್ದಿ'ಗಳ ಮೇಲೆ, ಸ್ಥಳೀಯ ಸಮಸ್ಯೆಗಳ ಮೇಲೆ ಬೆಳಕು ಚೆಲ್ಲುವ ಮೂಲಕ 'ಆಂದೋಲನ' ಹಾಗೂ 'ಮೈಸೂರುಮಿತ್ರ' ದಿನಪತ್ರಿಕೆಗಳು ಪ್ರಸಾರದಲ್ಲಿ ನಿಯಮಿತತೆಯನ್ನು ಕಾಪಾಡಿಕೊಂಡಿರುವುದನ್ನು ಕಾಣಬಹುದಾಗಿದೆ. ಅಲ್ಲದೆ ಸ್ಥಳೀಯ ವರ್ಗೀಕೃತ ಜಾಹೀರಾತುಗಳ ಮೇಲೆ ಹೆಚ್ಚು ಕೇಂದ್ರೀಕರಿಸುವ ಮೂಲಕ ಸಣ್ಣ ಪತ್ರಿಕೆಗಳು ಆದಾಯ ಮೂಲವನ್ನು ಕಂಡುಕೊಳ್ಳಬಹುದಾಗಿದೆ ಎಂಬುದಕ್ಕೆ ಈ ಎರಡೂ ಪತ್ರಿಕೆಗಳು ಮೈಸೂರು ಭಾಗದಲ್ಲಿ ನಿದರ್ಶನಗಳಾಗಿವೆ.

ಮುದ್ರಣ ಕಾಗದದ ಬೆಲೆ ಹೆಚ್ಚಾಗಿರುವುದು ಮತ್ತು ಪತ್ರಿಕೆಗಳ ಬೆಲೆ ಕಡಿಮೆ ಇರುವುದು ಸಣ್ಣ ಮತ್ತು ಮಧ್ಯಮ ಪತ್ರಿಕೆಗಳ ಸಮಸ್ಯೆಯಾಗಿದೆ. ಸಾಧಾರಣ ಮುದ್ರಣ ಕಾಗದ ಬೆಲೆಯೇ ಇಂದು ಒಂದು ಟನ್‌ಗೆ ಇಪ್ಪತ್ಮೂರರಿಂದ ಇಪ್ಪತ್ನಾಲ್ಕು ಸಾವಿರ ರೂಪಾಯಿ ಇದೆ. ಉತ್ತಮ ಮುದ್ರಣ ಕಾಗದದ ಬೆಲೆ ೫೫,೦೦೦ ರೂಪಾಯಿಗೆ ಏರಿದೆ. ದೇಶದಲ್ಲಿ ಸುದ್ದಿಪತ್ರಿಕೆಗಳ ಮುದ್ರಣ ಕಾಗದ ವಾರ್ಷಿಕ ಬೇಡಿಕೆ ಸುಮಾರು ೨.೬ ಮಿಲಿಯನ್ ಟನ್‌ಗಳಷ್ಟು ಇದೆ. ಆದರೆ ಜಿಲ್ಲಾ ಮತ್ತು ಸಣ್ಣ ಪತ್ರಿಕೆಗಳ ಮಾರಾಟದ ಬೆಲೆ ಇವತ್ತಿಗೂ ಕೂಡ ಒಂದರಿಂದ ಎರಡು ರೂಪಾಯಿ ಮಾತ್ರ ಇದೆ. ಎಷ್ಟೇ ತಾಪತ್ರಯಗಳು ಬಂದರೂ ಸಣ್ಣ ಮತ್ತು ಜಿಲ್ಲಾ ಪತ್ರಿಕೆಗಳನ್ನು ನಡೆಸುತ್ತಲೇ ಬಂದಿರುವ ಆಯಾ ಪತ್ರಿಕೆಗಳ ಸಂಪಾದಕರು ಮುಂದೊಂದು ದಿನ ಪರಿಸ್ಥಿತಿ ಸುಧಾರಿಸಲಿದೆ ಎಂಬ ವಿಶ್ವಾಸದಲ್ಲಿದ್ದಾರೆ.

ಮುದ್ರಣ ಕಾಗದದ ಬೆಲೆ ಏರುತ್ತಿರುವ ಈ ಸಂದರ್ಭದಲ್ಲಿ ಯಾವುದೇ ಒಂದು ಪತ್ರಿಕೆಯನ್ನು ಶಾಶ್ವತವಾಗಿ ಕಡಿಮೆ ಬೆಲೆಗೆ ಕೊಡಲಿಕ್ಕೆ ಸಾಧ್ಯವೇ ಇಲ್ಲ. ಕನ್ನಡ ಪತ್ರಿಕೆಗಳ ಮಾರುಕಟ್ಟೆ ಸೀಮಿತವಾದದ್ದು. ಪತ್ರಿಕೆಯ ಬೆಲೆ ಇಳಿಸಿ, ಪ್ರಸಾರ ಹೆಚ್ಚಿಸಿಕೊಂಡು ರಾಷ್ಟ್ರಮಟ್ಟದ ಜಾಹೀರಾತು ಪಡೆಯುವುದೂ ಅಸಾಧ್ಯವೆಂಬಂತೆಯೇ ತೋರುತ್ತಿದೆ.

'ರಾಜ್ಯಮಟ್ಟದ ದೊಡ್ಡ ಪತ್ರಿಕೆಗಳು ಚೆನ್ನಾಗಿ ಬರುತ್ತಿವೆ ಎಂದು ಕರುಬಿದರೆ ಅದು ಸರಿಯಲ್ಲ. ಸಣ್ಣ ಪತ್ರಿಕೆಗಳನ್ನು ನಡೆಸುವವರೂ ಸಾಧ್ಯವಾದಷ್ಟು ಮಟ್ಟಿಗೆ ಪತ್ರಿಕೆಗಳನ್ನು ಚೆನ್ನಾಗಿ ತರಲು ಪ್ರಯತ್ನಿಸಬೇಕು. ಸಿಬ್ಬಂದಿಗೆ ಹೆಚ್ಚು ಸಂಬಳ ಕೊಡಬೇಕು ಅಥವಾ ಇರುವ ಸಂಬಳವನ್ನು ಹೆಚ್ಚು ಮಾಡುವ ಪ್ರಯತ್ನ ಮಾಡಬೇಕು. ಅಲ್ಲದೇ ಪತ್ರಿಕಾ ಸಂಸ್ಥೆಯ ವ್ಯವಸ್ಥೆಯನ್ನು ಅಚ್ಚುಕಟ್ಟಾಗಿ ಮಾಡಿಕೊಂಡರೆ ಸುಧಾರಣೆ ಸಾಧ್ಯವಾಗುತ್ತದೆ' ಎಂಬ 'ಆಂದೋಲನ' ಪತ್ರಿಕೆಯ ಸಂಪಾದಕರಾಗಿದ್ದ ರಾಜಶೇಖರ ಕೋಟಿ ಅವರ ಮಾತುಗಳು ಗಮನಾರ್ಹ.

'ವೃತ್ತಪತ್ರಿಕೆಯೇ ಪ್ರಜೆಯ ಕಣ್ಣೆಂದೂ, ಕಿವಿಯೆಂದೂ, ಬಾಯಿಯೂ ಕೂಡ ಅದೇ ಎಂದೂ ಹೇಳಿದರೆ ಉತ್ಪ್ರೇಕ್ಷೆಯಾಗಲಾರದು' ಎನ್ನುವ ಕನ್ನಡ ಪತ್ರಿಕಾರಂಗದ ದಿಗ್ಗಜರಾದ ಡಿ.ವಿ.ಜಿ. ಅವರ ಉಕ್ತಿಯಲ್ಲಿ ನಾಗರಿಕ ಸಮಾಜದಲ್ಲಿ ಪತ್ರಿಕೆಯ ಮಹತ್ವ ಮತ್ತು ಪತ್ರಕರ್ತರು, ಪತ್ರಿಕೋದ್ಯಮಿಗಳ ಹೊಣೆಗಾರಿಕೆಯನ್ನು ಮನಗಾಣಬಹುದು. ಸ್ವಾತಂತ್ರ್ಯೋತ್ತರ ಕಾಲಘಟ್ಟದಲ್ಲಿ ಪತ್ರಿಕಾರಂಗ ಉದ್ದಿಮೆಯಾಗಿ ಹೊರಹೊಮ್ಮಿರುವ ಸಂದರ್ಭದಲ್ಲಿ ಪತ್ರಿಕಾರಂಗದ ತತ್ವ, ಆದರ್ಶಗಳನ್ನು ಜತನದಿಂದ ಕಾಪಾಡಿಕೊಂಡು ಬರಬೇಕಾಗಿದೆ. ಈ ನಿಟ್ಟಿನಲ್ಲಿ ಕಾರ್ಯ ನಿರ್ವಹಿಸುವ ಪತ್ರಕರ್ತರಿಗೆ, ಪತ್ರಿಕೆಗಳಿಗೆ ಸಮಾಜ, ಸರಕಾರದ ಬೆಂಬಲವೂ ಪ್ರೋತ್ಸಾಹವೂ ಅಗತ್ಯ.

ಪತ್ರಿಕೆಯು ಸಮಾಜದ ಪ್ರತಿಬಿಂಬವಾಗಿದ್ದು, ಅದರ ಸ್ವಾಸ್ಥ್ಯಕ್ಕಾಗಿ ಹೋರಾಡುವ ಧ್ಯೇಯ ಹೊಂದಿರುತ್ತದೆ. ಪ್ರಾಮಾಣಿಕ, ವೃತ್ತಿಬದ್ಧತೆಯುಳ್ಳ ಪತ್ರಕರ್ತರ ಮನೋಬಲವನ್ನು ಹೆಚ್ಚಿಸುವ ನಿಟ್ಟಿನಲ್ಲಿ ಸಮಾಜ, ಸರಕಾರ ಅವರ ಜೊತೆಗಿರುವುದು ಅಪೇಕ್ಷಣೀಯ. ಹಾಗೆಯೇ ಸ್ವನಿಯಂತ್ರಣದ ಮೂಲಕ ಸಮಾಜದ ಸ್ವಾಸ್ಥ್ಯಕ್ಕಾಗಿ, ಜನಹಿತಕ್ಕಾಗಿ ಪತ್ರಕರ್ತರು ಶ್ರಮಿಸುವ ನಿಟ್ಟಿನಲ್ಲಿ ಅವರನ್ನು ವೃತ್ತಿಪರರನ್ನಾಗಿಸುವ ರಚನಾತ್ಮಕ ಕಾರ್ಯಗಳೂ ಅತ್ಯಗತ್ಯ ಎಂದೇ ಹೇಳಬೇಕು. ಇವೆಲ್ಲದರ ನಡುವೆ ವೃತ್ತಿಯ ಅಭದ್ರತೆಯ ನಡುವೆಯೇ ಕಾರ್ಯ ನಿರ್ವಹಿಸಬೇಕಾದ ಪತ್ರಕರ್ತರ ಮನೋಬಲ ಹೆಚ್ಚಿಸುವಲ್ಲಿ ಸಂಘಟನಾತ್ಮಕ ಹೋರಾಟವೂ ಅಗತ್ಯವಾಗಿದೆ. ವೃತ್ತಿಪರತೆ ಮತ್ತು ಪತ್ರಿಕಾಧರ್ಮದ ಸಂರಕ್ಷಣೆಯ ದೃಷ್ಟಿಯಿಂದ ಇದು ಮಹತ್ವದ ಕಾರ್ಯವಾಗಿದೆ.

**ಡಾ|| ಚಿದಾನಂದ ಕಮ್ಮಾರ್**
ನಂ. ೦೦೧, ಪೆಸಿಫಿಕ್ ಪರ್ಲ್ ಅಪಾರ್ಟ್‌ಮೆಂಟ್, ೪ನೇ ಕ್ರಾಸ್
ಎಂಟಿಎಸ್, ವಿದ್ಯಾನಗರ, ಹುಬ್ಬಳ್ಳಿ – ೫೮೦ ೦೩೧

## ಅಭಿನಂದನೆ...

ಆಪ್ಟಿಮಲ್ ಮೀಡಿಯಾ ಸೊಲ್ಯೂಷನ್ (ಟೈಮ್ಸ್ ಗ್ರೂಪ್)ನವರು ಖ್ಯಾತ ಮನೋವೈದ್ಯರಾದ ಡಾ|| ಸಿ. ಆರ್. ಚಂದ್ರಶೇಖರ್ ಅವರಿಗೆ 'ದಿ ಟೈಮ್ಸ್ ಹೆಲ್ತ್ ಎಕ್ಸಲೆನ್ಸ್ ೨೦೧೮' ಪ್ರಶಸ್ತಿಯನ್ನು ನೀಡಿ ಗೌರವಿಸಿದ್ದಾರೆ. ಅವರಿಗೆ 'ನವಕರ್ನಾಟಕ' ಹಾಗೂ 'ಹೊಸತು' ಬಳಗದ ಹೃತ್ಪೂರ್ವಕ ಅಭಿನಂದನೆಗಳು.



ವಾಲ್ಮೀಕಿ ರಾಮಾಯಣವೇ ಮೂಲ ರಾಮಾಯಣ ಅಲ್ಲ. ಹಾಗೆ ನೋಡಿದರೆ ಮೂಲ ಎಂಬುದೊಂದು ಇಲ್ಲ. ರಾಮಾಯಣ ಹಲವು ಲೋಕಗೀತೆಗಳ ಅಕ್ಷರರೂಪ. ಮೌಖಿಕವಾದ ಹಲವು ಲೋಕಗೀತೆಗಳು ಇಂದಿಗೂ ಇವೆ. ಅಂದರೆ ಜನಪದ ಧಾರೆಯಲ್ಲಿ ಹಲವು ರಾಮಾಯಣಗಳು ಇಂದಿಗೂ ಇವೆ. ಇದರ ಕವಲಾಗಿ ನಮ್ಮಲ್ಲಿ (ಸಂಸ್ಕೃತ, ಪ್ರಾಕೃತ, ದೇಶಭಾಷಾ ಧಾರೆಗಳೆಲ್ಲ ಇರುವ) ಬೌದ್ಧ, ಜೈನ, ವೈದಿಕ ಮತ್ತು ವಿದೇಶೀಯ, .......ಹೀಗೆ ಹಲವು ಪರಂಪರೆಗಳು ರಾಮಾಯಣದಲ್ಲಿ ಸೃಷ್ಟಿಯಾಗಿ ಚಾಲ್ತಿಯಲ್ಲಿವೆ. ರಾಷ್ಟ್ರೀಯ ಮಹಾಕಾವ್ಯ, ಹಿಂದೂ ಧರ್ಮಗ್ರಂಥ, ಪವಿತ್ರ ಪುರಾಣ ಎಂದೆಲ್ಲ ಕರೆಸಿಕೊಳ್ಳುವ ಈ ರಾಮಾಯಣ ಒಂದಲ್ಲ ನೂರಾರು. ಅದು ಉಂಟುಮಾಡಿರುವ ಮತ್ತು ಉಂಟುಮಾಡುತ್ತಿರುವ ರಾಮಾಯಣಗಳೂ ಒಂದಲ್ಲ ನೂರಾರು. ಭಾರತ, ಶ್ರೀಲಂಕಾ, ಮ್ಯಾನ್ಮಾರ್, ಭೂತಾನ್, ಟಿಬೆಟ್, ನೇಪಾಳ, ಮಲಯಾ, ಜಾವಾ, ಅಂಡಮಾನ್ ನಿಕೋಬಾರ್, ಇರಾನ್, ಅಫಘಾನಿಸ್ತಾನ್, ಇಂಡೋನೇಶ್ಯಾ, ಚೀನಾ, ಥಾಯ್ಲೆಂಡ್, ಹೀಗೆ ಹಲವಾರು ರಾಷ್ಟ್ರಗಳಲ್ಲೂ ಇದರ ಹಲವಾರು ಪಾಠಾಂತರಗಳು ಚಾಲ್ತಿಯಲ್ಲಿವೆ. ಇಂತಹ ನೂರಾರು ರಾಮಾಯಣಗಳನ್ನು ಓದುವ ಮೂಲಕ ನಮ್ಮ ವಿವೇಕವನ್ನು ಚೂಪು ಮಾಡಿಕೊಳ್ಳಬೇಕು ಎನ್ನುವುದು ಲೋಹಿಯಾ ಅವರ ದೃಷ್ಟಿ.

ಲೋಹಿಯಾ ಅವರ ಬರಹಗಳ ಆರು ಸಂಪುಟಗಳು ಇದುವರೆಗೆ ಕನ್ನಡದಲ್ಲಿ ಬಂದಿವೆ. ಅವುಗಳಲ್ಲಿ ಅವರು ರಾಮಾಯಣದ ಬಗ್ಗೆ ಬರೆದಿರುವುದು ಒಂದೇ ಲೇಖನ; ತುಳಸೀದಾಸರ ರಾಮಚರಿತ ಮಾನಸದ ಬಗ್ಗೆ ಬರೆದಿರುವ ಲೇಖನ. ಇನ್ನು ಮೂರ್‍ನಾಲ್ಕು ಕಡೆ ಅವರು ತಮ್ಮದೇ

# ಲೋಹಿಯಾ ದೃಷ್ಟಿಯಲ್ಲಿ ರಾಮಾಯಣ

ಕೋಟ್ಯಂತರ ಮಂದಿ ಭಾರತೀಯರು ಯುಗಯುಗಾಂತರಗಳ ಅವಧಿಯಲ್ಲಿ ಸಾವಿರಾರು ವರ್ಷಗಳ ಕಾಲ ರಾಮ, ಕೃಷ್ಣ, ಶಿವರನ್ನು ಮಾಡಿಕೊಂಡಿದ್ದಾರೆ. ಇವರೆಲ್ಲ ನಿಜಕ್ಕೂ ಎಂದಾದರೂ ಈ ಪ್ರಪಂಚದಲ್ಲ ಜನ್ಮ ತಳೆದಿದ್ದರೇ ಇಲ್ಲವೇ ಎಂಬುದು ಕೇವಲ ಒಂದು ಸಣ್ಣ ಪ್ರಶ್ನೆ. ಆದರೆ ಬುದ್ಧ, ಅಶೋಕರಂತಹ ವ್ಯಕ್ತಿಗಳಿಗಿಂತ ಹೆಚ್ಚಾಗಿ ರಾಮ, ಕೃಷ್ಣ, ಶಿವ, ಇವರು ಜನಮಾನಸದಲ್ಲ ನೆಲೆಸಿದ್ದಾರೆ. ಇವರು ಜನರ ಬದುಕಿನ ಎಲ್ಲ ಪ್ರಸಂಗಗಳಲ್ಲಿ ಕಣ್ಣಮುಂದೆ ಅಥವಾ ಮನಸ್ಸಿನ ಮುಂದೆ ಮಾದರಿಯಾಗಿ ಕಾಣಿಸಿಕೊಳ್ಳುತ್ತಾರೆ. ಮನುಷ್ಯ ಪ್ರಯತ್ನ ಪೂರ್ವಕವಾಗಿ ಅಥವಾ ತನಗೆ ಅರಿವಿಲ್ಲದಂತೆ ಆ ಮಾದರಿಗೆ ಅನುಗುಣವಾಗಿ ತಾನೂ ಹೆಜ್ಜೆ ಇಡತೊಡಗುತ್ತಾನೆ.

ನಿಲುವುಗಳನ್ನು ಮಂಡಿಸಿದ್ದಾರೆ. ಹಲವು ರಾಮಾಯಣಗಳ ಬಗ್ಗೆ ಮಾತಾಡಿದ್ದಾರೆ. ವಿವಿಧ ಕಾಲಘಟ್ಟಗಳಲ್ಲಿ ವಿವಿಧ ಭಾಷೆಗಳಲ್ಲಿ ನಮ್ಮ ಪುರಾಣಗಳು ಮತ್ತೆ ಮತ್ತೆ ರಚನೆ ಆಗಿರುವ ಬಗ್ಗೆ ಅಲ್ಲಲ್ಲಿ ಉಲ್ಲೇಖಿಸಿದ್ದಾರೆ. ಅದಲ್ಲದೆ ಉತ್ತರಪ್ರದೇಶದ ಜೈಲಿನಲ್ಲಿ ಇದ್ದಾಗ ಆಗಿನ ಬಂದೀಖಾನೆ ಸಚಿವರಿಗೆ ಸುದೀರ್ಘವಾಗಿ ೧೦-೧೨-೧೯೫೦ರಲ್ಲಿ ಇವರು ಬರೆದ ಪತ್ರವೊಂದು ವಸಿಷ್ಠರು ಮತ್ತು ವಾಲ್ಮೀಕಿಗಳು ಎಂಬ ಲೇಖನವಾಗಿ ಪ್ರಕಟವಾಗಿದೆ. ಅಲ್ಲಿ ಮರಾಠಿ ಲೇಖಕ ವರೇರ್‌ಕರ್ ಅವರ ನಾಟಕ 'ಭೂಮಿಕನ್ಯಾ ಸೀತಾ' ಬಗ್ಗೆ ಪ್ರಾಸಂಗಿಕವಾಗಿ ಬರೆದಿದ್ದಾರೆ. ಇವಲ್ಲದೆ ಕೃಷ್ಣ, ದ್ರೌಪದಿಯೋ ಸಾವಿತ್ರಿಯೋ, ಸೌಂದರ್ಯ ಮತ್ತು ಮೈಬಣ್ಣ, ರಾಮ, ಕೃಷ್ಣ, ಶಿವ ಹೀಗೆ ನಾಲ್ಕು ಲೇಖನಗಳಲ್ಲಿ ಅಲ್ಲಲ್ಲಿ ಪ್ರಾಸಂಗಿಕವಾಗಿ ರಾಮಾಯಣದ ಕುರಿತು ಕೆಲವು ಮಾತುಗಳನ್ನು ಬರೆದಿದ್ದಾರೆ. ಮಿಕ್ಕಂತೆ ನಿರ್ದಿಷ್ಟವಾಗಿ ರಾಮಾಯಣದ ಬಗ್ಗೆ ಇವರ ಬರಹಗಳು ಇಲ್ಲ. ಇದಿಷ್ಟೆ ಬರಹಗಳಲ್ಲಿ ನಮ್ಮ ಪುರಾಣ ಪ್ರಸಂಗಗಳ ಕುರಿತಾಗಿ ಮತ್ತು ಪುರಾಣ ಪಾತ್ರಗಳ ವರ್ತನೆಗಳ ಕುರಿತಾಗಿ, ಪುರಾಣಗಳ ರಾಚನಿಕತೆಯ ಕುರಿತಾಗಿ ಮತ್ತು ಅವನ್ನು ಓದಬಹುದಾದ ಓದಿನ ಬಗೆಗಳ ಕುರಿತಾಗಿ ತಮ್ಮದೇ ಆದ ಹಲವು ಒಳನೋಟಗಳನ್ನು, ವ್ಯಾಖ್ಯಾನಗಳನ್ನು, ದೃಷ್ಟಿಕೋನಗಳನ್ನು ಮತ್ತು ನಿಲುವುಗಳನ್ನು ಲೋಹಿಯಾ ಮಂಡಿಸಿದ್ದಾರೆ.

ಇತರ ಕೆಲವು ಸಂಶೋಧನೆ ಕುರಿತ, ಭಾಷೆ ಮತ್ತು ಇತಿಹಾಸಗಳನ್ನು ಕುರಿತ ಲೇಖನಗಳಲ್ಲಿ ಅಲ್ಲಲ್ಲಿ ಚದುರಿದಂತೆ ಪುರಾಣಗಳನ್ನು ಕುರಿತ ಇವರ ಚಿಂತನೆಗಳಿವೆ. ಒಬ್ಬ ಸಂಸದೀಯ ಪಟುವಾಗಿ, ಸಮಾಜ ಸುಧಾರಕರಾಗಿ,

ಡಾ॥ ರಾಮಲಿಂಗಪ್ಪ ಟಿ. ಬೇಗೂರು

ಸಮಾಜವಾದಿ ಐಡಿಯಾಲಜಿ ಉಳ್ಳ ರಾಜಕೀಯ ಚಿಂತಕರಾಗಿ ಇವರು ಎಲ್ಲ ತಮ್ಮ ಮಾತು ಮತ್ತು ಬರಹಗಳಲ್ಲಿ ತಮ್ಮ ಪಾಂಥಿಕತೆಗೆ ಅನುಗುಣವಾಗಿಯೆ, ಅದರ ಚೌಕಟ್ಟಿಗೆ ಒಳಗಾಗಿಯೆ ತಮ್ಮ ಒಲವು ನಿಲುವುಗಳನ್ನು ವ್ಯಕ್ತಪಡಿಸಿದ್ದಾರೆ. ವೈಜ್ಞಾನಿಕ ಮನೋಭಾವದಿಂದ, ಸಬಾಲ್ಟ್ರನ್ ನೆಲೆಯಿಂದ, ಸ್ತ್ರೀವಾದಿ ನೆಲೆಯಿಂದ, ವರ್ತನಾ ವಿಜ್ಞಾನದ ಮತ್ತು ಸರ್ವೋದಯ ದೃಷ್ಟಿಯಿಂದಲೂ ರಾಮಾಯಣ ಕುರಿತ ಅವರ ಮಾತುಗಳನ್ನು ಗ್ರಹಿಸಬಹುದಾಗಿದೆ. ಯಾವುದೇ ಒಬ್ಬ ನುರಿತ ವಿಮರ್ಶಕನಿಗೆ ಕಡಿಮೆ ಇಲ್ಲದಂತೆ ತಮ್ಮ ಬರಹಗಳಲ್ಲಿ ಲೋಹಿಯಾ ತೌಲನಿಕ ವಿಧಾನ, ಇಡಿ, ಬಿಡಿ ವಿಶ್ಲೇಷಣಾ ವಿಧಾನಗಳನ್ನು ಬಳಸಿ ಪುರಾಣ ಪಠ್ಯ, ಪ್ರಸಂಗ, ಪಾತ್ರ ಪ್ರತೀಕಗಳನ್ನು ತಾತ್ವೀಕರಣ, ತತ್ವಜ್ಞಾನೀಕರಣ ಮಾಡುವ ಕೆಲಸವನ್ನು ಮಾಡಿದ್ದಾರೆ. ಪ್ರತಿಯೊಂದನ್ನೂ ವಾಸ್ತವವಾದಿ ಮತ್ತು ವೈಜ್ಞಾನಿಕ ಪ್ರಜ್ಞೆಯಿಂದ ಪರಿಶೀಲಿಸಿ ನೋಡುವ ಕ್ರಮ ಇವರ ರಾಮಾಯಣ ಕುರಿತ ಚಿಂತನೆಗಳಲ್ಲಿ ಕಾಣುತ್ತದೆ.

ಧರ್ಮ ದೀರ್ಘಕಾಲದ ರಾಜಕಾರಣವಾದರೆ ರಾಜಕಾರಣ ಅಲ್ಪಕಾಲದ ಧರ್ಮ... ತುಳಸೀ ರಾಮಾಯಣದಲ್ಲಿ ಆನಂದದ ಜೊತೆಜೊತೆಗೇ ಧರ್ಮವೂ ಸೇರಿಕೊಂಡು ಬಂದಿದೆ. ಶಾಶ್ವತವಾದ ಮತ್ತು ಕಾಲಕ್ಕೆ ತಕ್ಕಂತೆ ಬದಲುಗೊಳ್ಳುವ ಎರಡೂ ಅರ್ಥಗಳಲ್ಲಿ ಜೊತೆಗೂಡಿಕೊಂಡು ಬಂದಿದೆ... ತುಳಸೀ ರಾಮಾಯಣ ಎಂಥ ಧಾರ್ಮಿಕವಾದ ಕಾವ್ಯವೆಂದರೆ ಪ್ರಾಯಶಃ ಅದರಷ್ಟು ಕಾವ್ಯಮಯವಾಗಿರುವುದು ಪ್ರಪಂಚದಲ್ಲಿ ಬೇರೊಂದಿಲ್ಲವೆನಿಸುತ್ತದೆ. ಆದರೆ ಅದು ವಿವೇಕವನ್ನು ಹತ್ತಿಕ್ಕುವ ಕಡೆಗೆ ಪ್ರವೃತ್ತವಾಗಿದೆ ಎಂಬ ಅಂಶವನ್ನು ಮಾತ್ರ ಕಡೆಗಣಿಸಲಾಗದು... ಇಲ್ಲಿ ಖಂಡಿತವಾಗಿ ಚಿನ್ನ, ವಜ್ರ, ಮುತ್ತು, ಮಾಣಿಕ್ಯಗಳು ಹೇರಳವಾಗಿವೆ. ಆದರೆ ಅದರಲ್ಲಿ ಕಸಕಡ್ಡಿ ಮತ್ತು ಅಪ್ರಯೋಜಕವಾದ ಅಂಶಗಳೂ ಸಾಕಷ್ಟು ಪ್ರಮಾಣದಲ್ಲಿವೆ. ಇವೆರಡನ್ನೂ ಧರ್ಮದ ತಳಾದಿಯ ಮೇಲಿಟ್ಟು ಎಷ್ಟು ಪವಿತ್ರ ಎನಿಸುವಂತೆ ಮಾಡಿಬಿಟ್ಟಿದ್ದಾರೆಂದರೆ, ಇದರಿಂದಾಗಿ ಭಾರತದ ಜನತೆ ತನ್ನ ವಿವೇಚನಾ ದೃಷ್ಟಿಯನ್ನು ಕಳೆದುಕೊಂಡುಬಿಟ್ಟಿದ್ದಾರೆ... ಶೂದ್ರನನ್ನು ಹಾಗೂ ಹೆಣ್ಣನ್ನು ನಿಂದೆ ಮಾಡುವ ಹಾಗೂ ಗೋವನ್ನು ಪೂಜಿಸಿ ಎನ್ನುವ, ಬ್ರಾಹ್ಮಣನ ಪಾದಗಳನ್ನು ತೊಳೆಯಬೇಕೆನ್ನುವ ಪದ್ಯಗಳು ಕೂಡ ಇಲ್ಲಿ ಸಿಗುತ್ತವೆ. ಮುತ್ತನ್ನು ಆರಿಸಬೇಕಾದರೆ ಕಸಕಡ್ಡಿಗಳನ್ನು ನುಂಗಬೇಕಾಗಿಲ್ಲ. ಕೊಳಚೆಯನ್ನು ತೆಗೆದು ಶುಚಿಗೊಳಿಸುವ ಆತುರದಲ್ಲಿ ಮುತ್ತನ್ನು ತಿಪ್ಪೆಗೆಸೆಯುವ ಅಗತ್ಯವೂ ಇಲ್ಲ. (ಉತ್ತರ ದಕ್ಷಿಣ ೮೮–೮೯).

ಪುರಾಣಗಳ ಸರಿಯಾದ ಓದು ಲೋಹಿಯಾ ಪ್ರಕಾರ ಕಸಕಡ್ಡಿಗಳನ್ನು ನುಂಗದೆ ಮುತ್ತುಗಳನ್ನು ಆರಿಸುವ ಕೆಲಸ. ಹಾಗೆಯೇ ಯಾವ ರಚನೆಗಳನ್ನೂ ಪವಿತ್ರ ಎಂದಾಗಲೀ, ಅಪೌರುಷೇಯ ಎಂದಾಗಲೀ ಭಾವಿಸಬೇಕಾಗಿಲ್ಲ. ನಮ್ಮ ವಿವೇಕವೇ ಓದಿನ ಅಂತಿಮ ಮಾನದಂಡ ಎಂಬುದು

**ಸುದ್ದಿ : ಮುಂದಿನ ಲೋಕಸಭೆಗೆ ಗೌಡರ ಸ್ಪರ್ಧೆ ಇಂಗಿತ**




ತಮ್ಮ ಮಗನಿಗೆ ಸುಲಭವಾಗಿ ಮುಖ್ಯಮಂತ್ರಿ ಪದವಿ ದೊರೆತಂತೆ ತಮಗೂ ಪ್ರಧಾನಮಂತ್ರಿ ಪದವಿ ಸುಲಭವಾಗಿ ದೊರೆಯುವ ಕನಸು ಕಾಣ್ತಿರಬೇಕು, ಅಲ್ಲವೇ?

ಲೋಹಿಯಾ ಅವರ ಅಭಿಪ್ರಾಯ. ಕೆಲವು ನಂಬಿಕೆಗಳನ್ನು ಮತ್ತು ನಡಾವಳಿಗಳನ್ನು ಆಚರಣೆಗಳನ್ನಾಗಿ ಮಾಡುವ ಆಚರಣೀಕರಣ ಮತ್ತು ಅವುಗಳನ್ನು ಸಹಜವೆಂಬಂತೆ ಸಮಾಜದಲ್ಲಿ ಜಾರಿಗೊಳಿಸಿ ಸಮಾಜವನ್ನು ಜಡಗೊಳಿಸುವ ಸಹಜೀಕರಣ, ಯಾವುದೇ ವರ್ತನೆಗಳನ್ನು ಅಥವಾ ಕಥನಗಳನ್ನು ಪವಿತ್ರೀಕರಿಸಿ ಪ್ರಶ್ನಾತೀತಗೊಳಿಸುವ ಪವಿತ್ರೀಕರಣ ಮತ್ತು ಕೆಲವು ಮಾನವಸಹಜ ಪಾತ್ರಗಳನ್ನು ದೈವಿಕ ನೆಲೆಗೆ ಏರಿಸುವ ಮೂಲಕ ಅವನ್ನು ದೈವೀಕರಿಸುವ ದೈವೀಕರಣ ಈ ನಾಲ್ಕೂ ಪ್ರಕ್ರಿಯೆಗಳನ್ನು ಲೋಹಿಯಾ ತೀವ್ರವಾಗಿ ವಿರೋಧಿಸುತ್ತಾರೆ ಮತ್ತು ಖಂಡಿಸುತ್ತಾರೆ. ಯಾವುದೇ ಪುರಾಣದ ಅನುಸಂಧಾನ ನಮ್ಮ ನಿತ್ಯದ ನಡವಳಿಕೆಗಳನ್ನು ಜಡಗೊಳಿಸುವುದಾದರೆ, ಸ್ತ್ರೀಯರ ಕುರಿತಂತೆ, ಹಿಂದುಳಿದ ವರ್ಗ-ಜಾತಿಗಳ ಕುರಿತಂತೆ ಅಪಾಯಕಾರಿ ಮತ್ತು ತರತಮಕಾರಿ ಆಚಾರಗಳನ್ನು ಪವಿತ್ರ ಮತ್ತು ಮೀರಬಾರದ ಮೌಲ್ಯವೆಂಬಂತೆ ಹೇರುವುದಾದರೆ ಅವನ್ನು ನಾವು ನುಂಗಿಕೊಳ್ಳಬೇಕಿಲ್ಲ, ತಿರಸ್ಕರಿಸಬೇಕು ಎಂಬುದು ಲೋಹಿಯಾ ಅವರ ಸ್ಪಷ್ಟ ನಿಲುವು.

ರಾಮಾಯಣವನ್ನು ಲೋಹಿಯಾ ಖಚಿತವಾಗಿ ಒಂದು ರಚಿತ ಪಠ್ಯ ಎಂದು ಭಾವಿಸುತ್ತಾರೆ. ಯಾವ ಪಠ್ಯವೂ ಪರಿಪೂರ್ಣ ಅಲ್ಲ, ಅರೆಕೊರೆಗಳು ಇರುವಂಥದ್ದೆ. ಯಾವ ಕಾಲದ ಯಾವ ಬರವಣಿಗೆಯನ್ನೂ ಇಡಿಯಾಗಿ ತಿರಸ್ಕರಿಸುವುದಾಗಲೀ ಅಥವಾ ಇಡಿಯಾಗಿ

# ದೇಶವೆಂಬ ವೇಷ

**ಭಾ**ರತ ಎಂಬುದೊಂದು ದೇಶ
ಆ ದೇಶದೊಳಗಿದೆ ಹಲವಾರು ವೇಷ
ಜಾತಿಗೊಂದು ವೇಷ, ಧರ್ಮಕ್ಕೊಂದು ವೇಷ
ಹಗಲಿಗೊಂದು ವೇಷ, ರಾತ್ರಿಗೊಂದು ವೇಷ
ಹೆಸರಿಗದು ಬಹುತ್ವದ ದೇಶ
ಆದರೆ ನಡೆಯುವುದೆಲ್ಲವೂ ಏಕತ್ವದ ಮೋಸ

ದೇಶಕ್ಕಾಯಿತು ಆರ್ಯರ ಪ್ರವೇಶ
ಜನ ತೊಟ್ಟರು ಕ್ಷತ್ರಿಯ ವೇಷ
ದ್ರಾವಿಡರಿಗಾಯಿತು ಅರಣ್ಯ ಪ್ರವೇಶ
ತೊಟ್ಟರವರು ಶೂದ್ರ ವೇಷ
ವೈಶ್ಯರಿಗಿತ್ತು ಹೊಂದಾಣಿಕೆಯ ಅವಕಾಶ
ಪಂಚಮನದು ಅರೆಬೆತ್ತಲೆ ವೇಷ
ಕರಗಿಸಿತು ಇವರನ್ನು ವೈದಿಕ ಅಂಕುಶ
ಇದು ಮಾನವ ಕುಲದ ವಿಪರ್ಯಾಸ

ರಾಮನಾದನು ಜಗದ ಈಶ
ಅಪರಾಧಿ ಎನಿಸಿಕೊಂಡನು ಲಂಕೇಶ
ರಾಮಾಯಣವಾಯಿತು ಭಾರತದ ಜ್ಞಾನಕೋಶ
ಕೋಶದೊಳಗಿತ್ತು ಅಸಮಾನತೆಯ ದೋಷ
ರಾಮಾಯಣಕ್ಕೆ ತೊಡಿಸಿದರು ವೈಷ್ಣವ ವೇಷ
ಕೃಷ್ಣಾಯಣದೊಳಗಿತ್ತು ಕೌಟುಂಬಿಕ ದ್ವೇಷ
ದ್ವೇಷಕ್ಕೆ ನೀತಿಬೋಧೆಯ ನೀಡಿತು ಕೃಷ್ಣನ ಭಗವದ್ಗೀತೋಪದೇಶ
ಕುರುಕ್ಷೇತ್ರದಲ್ಲಾಯಿತು ಕುಟುಂಬದ ನಾಶ
ನಡೆಯಿತು ಮಹಾಭಾರತದೊಳಗೆ ಜಾತಿಗಳ ಅಪಹಾಸ್ಯ
ಕಿತ್ತೊಗೆಯಿತು ಅಂಗರಾಜನ ಅಂಗಾಂಗಗಳನ್ನು ಬ್ರಾಹ್ಮಣ್ಯದ ವೇಷ

ಪುರಾಣಾದಿ ಶಾಸ್ತ್ರಗಳು ಸಾರಿದವು ಸಂದೇಶ
ಯಜ್ಞ-ಯಾಗಾದಿಗಳಲ್ಲಿತ್ತು ಅಲೌಕಿಕತೆಯ ಮೋಸ
ವಂಚಿಸಿತು ಜನರನ್ನು ಮೋಕ್ಷವೆಂಬ ಅದೃಶ್ಯ
ಮೋಕ್ಷಕ್ಕಾಗಿ ಜನ ತೊಟ್ಟರು ಗುಲಾಮ ವೇಷ
ಚಾರ್ವಾಕಾದಿಗಳಲ್ಲಿ ಹುಟ್ಟಿಸಿತು ರೋಷ
ಸಮಸಮಾಜಕ್ಕಾಗಿ ತೊಟ್ಟರು ಪ್ರತಿಜ್ಞಾ ಘೋಷ
ವರ್ಣ-ಜಾತಿಗಳಲ್ಲಿ ಇರಲಿಲ್ಲ ಅದರ ಲವಲೇಶ

ಭಾರತವಾಯಿತು ಪ್ರಭುತ್ವದ ಕೈವಶ
ಪ್ರಭುತ್ವದ್ದು ರಂಗುರಂಗಿನ ವೇಷ
ಅದರೊಳಗಿತ್ತು ಯಜಮಾನಿಕೆಯ ಆದೇಶ
ಯಜಮಾನನ ಧೋರಣೆಯೇ ನಿರಂಕುಶ
ಆದರೆ ಅರಸೊತ್ತಿಗೆಗಿತ್ತು ದೈವ-ದೇವರುಗಳ ಅಂಕುಶ
ಬದಲಾಯಿತು ಭಾರತದ ರಾಜಕೀಯ ಸನ್ನಿವೇಶ
ಭಾರತಕ್ಕಾಯಿತು ಮುಸ್ಲಿಂ-ಕ್ರಿಶ್ಚಿಯನ್ನರ ಪ್ರವೇಶ
ಭಾಷೆ, ಸಾಹಿತ್ಯ, ಕಲೆಯಲ್ಲಾಯಿತು ಸಂಮಿಶ್ರತೆಯ ವೇಷ
ಆದರೂ ಬದಲಾಗಲಿಲ್ಲ ಜನಸಾಮಾನ್ಯರ ಹರುಕು-ಮುರುಕು ವೇಷ

ಕೇಳತೊಡಗಿತು ಸ್ವಾತಂತ್ರ್ಯದ ಘೋಷ
ಕೊನೆಗೊಂಡಿತು ಫರಂಗಿ ಪ್ರಭುತ್ವದ ಸಹವಾಸ
ಕೊನೆಗೊಳ್ಳಲಿಲ್ಲ ಎಲೀಟ್ ನೆಲೆಗಳ ಅಟ್ಟಹಾಸ
ಆದರೂ ಭಾರತವಾಯಿತು ಪ್ರಜಾಪ್ರಭುತ್ವವೆನ್ನುವ ಸ್ವದೇಶ
ಸಂವಿಧಾನದಲ್ಲಿತ್ತು ಸ್ವಾತಂತ್ರ್ಯದ ಲಿಖಿತ ಆದೇಶ
ಆದರೆ ರೂಢಿಯಲ್ಲಿತ್ತು ಅಲಿಖಿತ ದಾಸ್ಯ
ಅದಕ್ಕಿರಲಿಲ್ಲ ಮಾನವೀಯತೆಯ ಲವಲೇಶ
ಹುಟ್ಟಿಕೊಂಡಿತು ಪಕ್ಷವೆಂಬ ಮುಖವಾಡದ ವೇಷ
ಅಧಿಕಾರದ ಚುಕ್ಕಾಣಿಯೇ ಅದರ ಮೂಲೋದ್ದೇಶ
ಪರ್ಯಾಯವೆನ್ನುವುದು ಕಳೆದುಕೊಂಡಿತು ತನ್ನ ರಭಸ

ಸರ್ಕಾರಗಳಾಗುತ್ತಿವೆ ಇಂದು ಸಮ್ಮಿಶ್ರ
ದೋಸ್ತಿ ಸರ್ಕಾರದೊಳಗಿದೆ ದ್ವೇಷ
ಅಧಿಕಾರ ಹಂಚಿಕೆಯಲ್ಲಿಯೇ ಕಳೆಯುತ್ತಿದೆ ಅದರ ಆಯುಷ್ಯ
ತತ್ವಸಿದ್ಧಾಂತಗಳಾಗಿವೆ ಬುರುಡೆ ಉಪದೇಶ
ಅಭಿವೃದ್ಧಿಗೆ ಎಣಿಸಲಾಗುತ್ತಿದೆ ಮೀನಮೇಷ
ಪ್ರಜೆಯ ಧ್ವನಿಯಾಗಿದೆ ದೊರೆಗೆ ಕರ್ಕಶ
ಬರೆಯಬೇಕಿದೆ ರಾಜಕಾರಣಕ್ಕೆ ಹೊಸ ಭಾಷ್ಯ
ಅದರೊಳಗೇ ಕಂಡುಕೊಳ್ಳಬೇಕಿದೆ ಮುಂದಿನ ಭವಿಷ್ಯ

**ಡಾ|| ಕೆ. ಮೋಹನ್‌ಕೃಷ್ಣ ರೈ**
ಪ್ರಾಧ್ಯಾಪಕರು, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

ಸ್ವೀಕರಿಸುವುದಾಗಲೀ ಮಾಡಕೂಡದು. ಅದನ್ನು ನಮ್ಮದೇ ವಿವೇಕದ ಮೂಲಕ ಸೂಕ್ಷ್ಮವಾದ ಓದಿಗೆ ಗುರಿಮಾಡಿ ಅದರಿಂದ ನಮ್ಮ ವರ್ತಮಾನವನ್ನು ಇನ್ನಷ್ಟು ಅರ್ಥಮಾಡಿಕೊಳ್ಳಲು ಮತ್ತು ಉತ್ತಮಪಡಿಸಿಕೊಳ್ಳಲು ಬಳಸಬೇಕು; ಹಾಗೆ ಮಾಡುವಾಗ ನಾವು ನಮ್ಮ ವರ್ತಮಾನವನ್ನು ಮಾತ್ರವಲ್ಲ, ನಮ್ಮ ಚರಿತ್ರೆ ಮತ್ತು ಪುರಾಣಗಳನ್ನೂ ಶುಚಿಗೊಳಿಸಬೇಕು ಎಂಬುದು ಲೋಹಿಯಾ ಅವರ ದೃಷ್ಟಿ. ಅಲ್ಲದೆ, ಇವರು ರಾಜಕಾರಣ ಮತ್ತು ಧರ್ಮಗಳನ್ನು ಬೇರ್ಪಡಿಸುವುದಿಲ್ಲ. ಎರಡರಲ್ಲೂ ಒಂದು ಇನ್ನೊಂದರ ಜೊತೆಗೇ ಇರುತ್ತವೆ ಎನ್ನುವ ಇವರು ರಾಜಕಾರಣವನ್ನು ಅಲ್ಪಕಾಲದ ಧರ್ಮವೆಂದೂ, ಧರ್ಮವನ್ನು ದೀರ್ಘಕಾಲದ ರಾಜಕಾರಣ ಎಂದೂ ಕರೆಯುತ್ತಾರೆ. ಹೀಗಾಗಿ ರಾಮಾಯಣ ಇವರ ದೃಷ್ಟಿಯಲ್ಲಿ ಧಾರ್ಮಿಕವಾಗಿಯೂ ಮತ್ತು ರಾಜಕೀಯವಾಗಿಯೂ ಬಳಕೆ ಆಗುತ್ತಿರುವ ಕಾವ್ಯ.

ಕೆಲವೆಡೆ ಲೋಹಿಯಾ ರಾಮಾಯಣದ ಬಿಡಿ ಬಿಡಿ ಪ್ರಸಂಗಗಳ ಆಶಯ, ತಾತ್ವಿಕತೆಗಳನ್ನು ತೀಕ್ಷ್ಣವಾಗಿ ವಿಮರ್ಶೆ ಮಾಡುತ್ತ ಚರ್ಚಿಸುತ್ತಾರೆ. ಕೆಲವೆಡೆ ಪುರಾಣ ಪಾತ್ರ, ಪ್ರಸಂಗಗಳ ವರ್ತಮಾನದ ಪ್ರಸ್ತುತತೆಯನ್ನು ಚರ್ಚಿಸುತ್ತಲೇ ಅವುಗಳ ಭಿನ್ನ ಭಿನ್ನ ವ್ಯಾಖ್ಯಾನಗಳನ್ನೂ ಮಂಡಿಸುತ್ತಾರೆ. ಹಾಗೆಯೇ ಅವುಗಳ ಮೂಲಕ ನಮ್ಮ ಇಂದಿನ ಜೀವನದ ವಿಮರ್ಶೆಯನ್ನೂ ಮಾಡುತ್ತ ಇಡೀ ರಾಮಕಥೆಯ ಬಗೆಗೂ ಮಾತಾಡುತ್ತಾರೆ.

ಪುರಾಣವು ಪ್ರಾಸಂಗಿಕವಾಗಿ ಉಪದೇಶವನ್ನೂ ಮಾಡಬಹುದು, ಉಪಾಂಗವಾಗಿ ರಂಜನೆಯನ್ನೂ ಕೊಡಬಹುದು; ಆದರೆ ಅದರ ಮುಖ್ಯ ಉದ್ದೇಶ ನೀತಿಯೂ ಅಲ್ಲ; ರಂಜನೆಯೂ ಅಲ್ಲ. ಪುರಾಣ ಯಾವುದೇ ಜನಾಂಗದ ದೇಹಧಾತುವಿನ ಭಾಗ. ರಕ್ತಗತ, ಮಾಂಸಗತವಾದುದು. ಇವು ಸದಾ ನಮ್ಮ ಜೀವಧಾತುಗಳೇ ಆಗಿ ನಮ್ಮ ಜೀವನವನ್ನೂ ನಿರ್ದೇಶಿಸಬಹುದು. ಪುರಾಣವು ಮಹಾಕಾವ್ಯ, ನೀತಿಕತೆ, ಕತೆ, ಕಾದಂಬರಿ, ನಾಟಕ, ಕವಿತೆ ಇವೆಲ್ಲ ಸಾಹಿತ್ಯ ಪ್ರಕಾರಗಳೂ ಸೇರಿ ಸೃಷ್ಟಿ ಆಗುವಂಥದ್ದು. ಇದು ನಮ್ಮ ಬದುಕನ್ನು ನಿಂತ ನೀರಾಗುವಂತೆಯೂ ಮಾಡಬಲ್ಲುದು. ಸ್ಥಳದ ಬಣ್ಣವನ್ನು ಸದಾ ಬಳಿದು ಕೊಂಡು ಚಲನೆಯನ್ನೂ ಉಂಟುಮಾಡಬಹುದು. (ಸ್ವಾ. ಅಂ. ೯೬–೯೭). ಹೀಗೆ ಹೇಳುತ್ತಲೇ ಲೋಹಿಯಾ ಮುಂದುವರಿದು ಪುರಾಣಗಳನ್ನು ವಿವಿಧ ಲೇಖಕರ ಮತ್ತು ಕಾಲಘಟ್ಟಗಳ ಸೃಷ್ಟಿ ಹಾಗೂ ಜನತೆಯ ಸಂಗೋಪನೆ ಇವೆರಡರ ಮೊತ್ತ ಎನ್ನುತ್ತಾರೆ.

'ಇಂಡಿಯಾದ ವಿಶ್ವವಿದ್ಯಾಲಯಗಳಲ್ಲಿ ಸಂಶೋಧನೆ' ಎಂಬ ಲೇಖನದಲ್ಲಿ ಇವರ ಪುರಾಣಗಳ ಕುರಿತ ದೃಷ್ಟಿಕೋನ ಇನ್ನಷ್ಟು ಸ್ಪಷ್ಟವಾಗಿಯೂ ಖಚಿತವಾಗಿಯೂ ವ್ಯಕ್ತವಾಗಿದೆ.

ವಿವರಣಾತ್ಮಕ ವಿಶ್ಲೇಷಣೆ ಹಾಗೂ ತಾತ್ವಿಕ ವಿಶ್ಲೇಷಣೆಗಳ ಜೊತೆಜೊತೆಯಲ್ಲೇ ಪ್ರಾಚೀನದ ತೀವ್ರ ಹಾಗೂ ಆತ್ಮೀಯ ಅಭ್ಯಾಸ ಕೂಡ ಅತ್ಯಗತ್ಯ. ಈ ಇಡೀ ಜಗತ್ತು ಯಾವುದೇ ಕ್ಷಣದಲ್ಲೂ ಅದಕ್ಕೆ ಹಿಂದೆ ಏನಾಗಿತ್ತೋ ಅದರ ಪರಿಣಾಮವೇ ಆಗಿದೆ. ಇನ್ನಾವುದೇ ದೇಶವೂ ಇಂಡಿಯಾದ ಹಾಗೆ ಪ್ರಾಚೀನ ಭಾವಸಮುದಾಯಗಳಲ್ಲಿ ಸ್ಮೃತಿಗಳಲ್ಲಿ ಹಾಗೂ ಐತಿಹ್ಯಗಳಲ್ಲಿ ಬದುಕುತ್ತಿಲ್ಲ. ಇಲ್ಲಿ ಇವೊತ್ತಿನ ಘಟನೆಗಳಿಗಿಂತ ಹೆಚ್ಚಾಗಿ ಪ್ರಾಚೀನ ಘಟನೆಗಳ ದೆಸೆಯಿಂದಾಗಿಯೇ, ಸ್ಮೃತಿಯಿಂದಾಗಿಯೇ ಜನ ಕಣ್ಣೀರುಗರೆಯುತ್ತಾರೆ. ಹರ್ಷಪುಲಕಿತರಾಗುತ್ತಾರೆ. ದೊಂಬಿಯೇಳುತ್ತಾರೆ. ಹೀಗಿದ್ದೂ ಈ ಬಗ್ಗೆ ಮೌಲಿಕವೂ ಪ್ರತಿಭಾಪೂರ್ಣವೂ ಆದ ಅಭ್ಯಾಸ ಮಾತ್ರ ನಡೆದಿಲ್ಲ (ಉತ್ತರ ದಕ್ಷಿಣ ೨೦೦).

ಹೀಗೆ ಹೇಳುವ ಲೋಹಿಯಾ ರಾಮ ಉತ್ತರ ದಕ್ಷಿಣ ಮಾರ್ಗದಲ್ಲಿ ಸಾಗಿ ಬಂದ ಮತ್ತು ಸಾಗಿ ಹೋದ. ಅಂತೆಯೇ ಪೂರ್ವ ಪಶ್ಚಿಮ ರಾಜಮಾರ್ಗವೂ ಇರಬಹುದು. ಇವು ಸಂಶೋಧಿತವಾಗಬೇಕು. ವಾಲ್ಮೀಕಿಯ ಸೀತೆ, ತುಲಸೀದಾಸರ ಸೀತೆ, ಜನಪದರ ಸೀತೆ ಕಾಲಕಾಲಕ್ಕೆ ಹೇಗೆಲ್ಲ ಬದಲಾಗುತ್ತ ಬಂದಿದ್ದಾಳೆ ಎಂಬುದೂ ಸಂಶೋಧಿತವಾಗಬೇಕು ಎನ್ನುತ್ತಾರೆ. ಅಂದರೆ ಲೋಹಿಯಾ ಪ್ರಕಾರ ರಾಮಾಯಣ, ಕೃಷ್ಣಾಯಣ, ಸೀತಾಯಣ ಎಲ್ಲವೂ ಇವತ್ತಿಗೂ ಬಾಳಿಗೆ ಗುರಿಯಾಗುತ್ತಿರುವ, ಯಾವತ್ತಿಗೂ ಗುರಿಯಾಗುತ್ತ ಬಂದಿರುವ ಜೀವಂತ ಪರಂಪರೆಗಳು. ಇದನ್ನು ನೇರವಾಗಿ ಲೋಹಿಯಾ ಹೇಳದಿದ್ದರೂ ಹಾಗೆ ಸೂಚಿಸುತ್ತಾರೆ. ಅವುಗಳಲ್ಲಿ ನಮಗೆ ತಿಳಿಯದ ಮತ್ತು ಅಮೂರ್ತವಾದ ಸಂಗತಿಗಳು ಇರಬಹುದು ಹಾಗೆಯೇ ನಾವು ತಪ್ಪಾಗಿ ತಿಳಿದಿರಬಹುದಾದ ಮತ್ತು ಅಪವ್ಯಾಖ್ಯಾನಕ್ಕೆ ಗುರಿ ಮಾಡಿರಬಹುದಾದ ಅಸಂಖ್ಯಾತ ಸಂಗತಿಗಳು ಇರಬಹುದು. ಅವನ್ನೆಲ್ಲ ನಿರಂತರ ಸೋಸಿಕೊಳ್ಳುತ್ತ ಇರಬೇಕು ಎಂಬುದು ಲೋಹಿಯಾ ಅಭಿಮತ.

'ದ್ರೌಪದಿಯೋ ಸಾವಿತ್ರಿಯೋ' ಲೇಖನದಲ್ಲಿ ಲೋಹಿಯಾ ಅವರು ಸೀತೆ, ಊರ್ಮಿಳೆ, ರಾಮ – ಇವರ ಪ್ರಸ್ತಾಪವನ್ನು ಪ್ರಾಸಂಗಿಕವಾಗಿ ಮಾಡುತ್ತಾರೆ. ಇಲ್ಲೆಲ್ಲ ಇವರು ಇಡೀ ಜಗತ್ತಿನ ವರ್ತಮಾನದ ಲಿಂಗ ತಾರತಮ್ಯ, ವರ್ಗ ತಾರತಮ್ಯ, ಸಾಮಾಜಿಕ ಅಸಮಾನತೆಗಳನ್ನು, ಹಾಗೆಯೇ ಗಂಡಸರ ಬೌದ್ಧಿಕ ದಿವಾಳಿತನಗಳನ್ನು ಚರ್ಚಿಸುವ ಸ್ಪ್ರಿಂಗ್‌ಬೋರ್ಡ್‌ಗಳಂತೆ ಐತಿಹ್ಯ, ದಂತಕತೆ, ಪುರಾಣಗಳನ್ನು ಬಳಸುತ್ತಾರೆ. ಶ್ರೀಕೃಷ್ಣ, ಶ್ರೀರಾಮ, ಸೀತಾ, ದ್ರೌಪದಿ ಮೊದಲಾದವರ ಸಾವಿನ ಬಗೆಗೆ ಚರ್ಚಿಸುತ್ತಾ ಅವನ್ನು ಚಿತ್ರಿಸಿರುವವರ ದೃಷ್ಟಿ ಧೋರಣೆಗಳನ್ನು ಲೋಹಿಯಾ ಚರ್ಚಿಸುತ್ತಾರೆ. ಆ ಮೂಲಕ ಸಾಹಿತ್ಯ ವಿಮರ್ಶೆಗೆ ಇರಬೇಕಾದ ಸಾಮಾಜಿಕ

## ಶ್ರೀ ಆರ್. ಎಸ್. ರಾಜಾರಾಮ್ ಅವರಿಗೆ ಅಭಿನಂದನೆ...



೧೯೬೦ರಿಂದ ಸುಮಾರು ಆರು ದಶಕಗಳ ಕಾಲ ವೈಚಾರಿಕ ಮತ್ತು ವೈಜ್ಞಾನಿಕ ಕನ್ನಡ ಪುಸ್ತಕಗಳ ಪ್ರಕಟಣೆಯಲ್ಲಿ ಮುಂಚೂಣಿಯಲ್ಲಿರುವ ನವಕರ್ನಾಟಕ ಪ್ರಕಾಶನದ ರೂವಾರಿ ಶ್ರೀ ಆರ್. ಎಸ್. ರಾಜಾರಾಮ್ ಅವರು ೨೦೧೮ನೇ ಸಾಲಿನ ರಾಜ್ಯೋತ್ಸವ ಪ್ರಶಸ್ತಿಗೆ ಪಾತ್ರರಾಗಿದ್ದಾರೆ. ಈಗ ವಿಶ್ರಾಂತ ಜೀವನ ನಡೆಸುತ್ತಿರುವ ಶ್ರೀ ರಾಜಾರಾಮ್ ಅವರಿಗೆ 'ನವಕರ್ನಾಟಕ ಪ್ರಕಾಶನ' ಹಾಗೂ 'ಹೊಸತು' ಬಳಗದ ಹೃತ್ಪೂರ್ವಕ ಅಭಿನಂದನೆಗಳು.

ಆಯಾಮಗಳನ್ನೂ ನಿರೂಪಿಸಿದ್ದಾರೆ. ಈ ಸಾಮಾಜಿಕತೆ ಚಾರಿತ್ರಿಕವೂ ಮತ್ತು ವರ್ತಮಾನೀಯವೂ ಎರಡೂ ಆದ ಓದುಗಳಿಂದ ಕೂಡಿದ್ದಾಗಿದೆ.

'ಅಪಹರಣವಿಲ್ಲದೆ ವಿಸ್ತರಣೆ; ಸಾಮ್ರಾಜ್ಯದಾಹವಿಲ್ಲದೆ ಏಕೀಕರಣ ಸಾಧನೆ – ಇದು ರಾಮಕಥೆ. ಸೀಮಿತ ವ್ಯಕ್ತಿತ್ವವು ಕ್ರಿಯೋತ್ಸಾಹದ ರಾಜಕೀಯದಲ್ಲಿ ಮತ್ತು ರಾಷ್ಟ್ರಾಂತರ ಸಂಬಂಧಗಳಲ್ಲಿ ತನ್ನನ್ನು ತೊಡಗಿಸಿಕೊಂಡ ಕಥೆ. ಕಥಾನಾಯಕ ರಾಮ ಉದ್ದಕ್ಕೂ ಶತ್ರುಪಕ್ಷದಲ್ಲಿರುವ ಧಾರ್ಮಿಕರ ಸ್ನೇಹವನ್ನು ಹುಡುಕಿ ಎತ್ತಿಕೊಳ್ಳುವುದಕ್ಕೆ ಮುಂದಾಗುತ್ತಿದ್ದ. ಕಿಷ್ಕಿಂಧೆಯಲ್ಲಿ ಇದನ್ನೇ ಮಾಡಿದ. ಲಂಕೆಯಲ್ಲೂ ಇದನ್ನೇ ಮಾಡಿದ. ಆದರೆ ಲಂಕೆ ಕಿಷ್ಕಿಂಧೆಗಿಂತ ಬಲಶಾಲಿಯಾಗಿತ್ತು, ಪ್ರೌಢವಾಗಿತ್ತು. ಘೋರ ಯುದ್ಧವೇ ನಡೆದು ಅಲ್ಲಿ ಅಸಂಖ್ಯ ಜನರ ಕೊಲೆಯಾಗಬೇಕಾಯಿತು' (ಸ್ವಾತಂತ್ರ್ಯದ ಅಂತರ್ಜಾಲ ೧೧೬).

ಹೀಗೆ ರಾಮನದು ಸೀಮಿತ ವ್ಯಕ್ತಿತ್ವ ಎನ್ನುವ ಲೋಹಿಯಾ ರಾಮಕಥೆಯನ್ನು ನೇರವಾಗಿ ಅಲ್ಲದಿದ್ದರೂ ಪರೋಕ್ಷವಾಗಿ ಸೋದರ ಸಂಬಂಧದಲ್ಲಿನ ಅಧಿಕಾರ ರಾಜಕಾರಣಗಳ ಕಥನ ಎನ್ನುತ್ತಾರೆ. ರಾಮನ ಪಿತೃ ಕುಟುಂಬದಲ್ಲಿ ಕೌಟುಂಬಿಕ ಸಾಮರಸ್ಯ ಇಲ್ಲದಿದ್ದರೂ ಸೋದರರಲ್ಲಿ ಸಮರಸ ಇದೆ. ಹಾಗಾಗಿ ಇವರಲ್ಲಿ ಕಲಹವಿಲ್ಲ. ಆದರೆ ಅದೇ ವಾಲಿ–ಸುಗ್ರೀವ, ರಾವಣ–ವಿಭೀಷಣ ಇವರಲ್ಲಿ ಎರಡೂ ಕಡೆ ಸೋದರ ಕಲಹ ಇದೆ. ಇದು ಅಧಿಕಾರ ರಾಜಕಾರಣದ ಕಾರಣಕ್ಕೆ ಹುಟ್ಟಿರುವ ಕಲಹ. ಇಂತಹ ಕಡೆ ರಾಮ ತಾನೇ ಆ ರಾಜ್ಯಗಳನ್ನು ಅಪಹರಿಸಬಹುದಿತ್ತು. ಆದರೆ ಅವನು ಹಾಗೆ ಮಾಡದೆ ಸೋದರರಲ್ಲಿ ಒಬ್ಬರಿಂದ ಇನ್ನೊಬ್ಬರಿಗೆ ರಾಜ್ಯದ ಅಧಿಕಾರ ದಾಟಿಸುತ್ತಾನೆ. ಅದು ರಾಮಕಥೆಯಲ್ಲಿ ಧರ್ಮಕಾರ್ಯ ಎಂಬಂತೆ ಬಿಂಬಿತವಾಗಿದೆ. ಹಾಗಾಗಿಯೆ ಲೋಹಿಯಾ ಇದನ್ನು ರಾಜ್ಯದ ಅಪಹರಣವಿಲ್ಲದ ಸಾಮ್ರಾಜ್ಯ ವಿಸ್ತರಣೆ, ಸಾಮ್ರಾಜ್ಯ ದಾಹವಿಲ್ಲದ ಏಕೀಕರಣ ಸಾಧನೆ ಎಂದು ಕರೆಯುತ್ತಾರೆ. ಉತ್ತರ ದಕ್ಷಿಣ ರಾಜ್ಯಗಳನ್ನು ತನ್ನ ಅಧೀನಕ್ಕೆ ತರುವ ಕೆಲಸ ಇದಾದರೂ ತಾನೇ ರಾಜನಾಗಿ ಪ್ರತಿಷ್ಠಾಪಿತ ಆಗುವ ಕೆಲಸವಲ್ಲ. ಆದಾಗ್ಗ್ಯೂ ಇದನ್ನು ಲೋಹಿಯಾ ಉತ್ತರ ದಕ್ಷಿಣಗಳ ಏಕೀಕರಣ ಸಾಧನೆ ಎನ್ನುತ್ತಾರೆ!

ರಾಮಾಯಣ ಉತ್ತರ ಮತ್ತು ದಕ್ಷಿಣಗಳನ್ನು ಒಂದಾಗಿ ಬೆಸೆಯುವ ಗ್ರಂಥ. ಆದರೆ ದುರದೃಷ್ಟದ ಸಂಗತಿ ಎಂದರೆ ಅದೇ ಗ್ರಂಥ ಕೆಲವು ಕಡೆಗಳಲ್ಲಿ ಮನಸ್ಸುಗಳು ಕಲುಷಿತ ಗೊಳ್ಳಲು ಕಾರಣವಾಗುತ್ತಿದೆ. ಉತ್ತರ ಹಾಗೂ ದಕ್ಷಿಣ ಎರಡೂ ಬದಿಯ ಜನಗಳಿಗೆ ಸರಿಯಾದ ತಿಳುವಳಿಕೆ ಇಲ್ಲದಿರುವುದೇ ಇದಕ್ಕೆಲ್ಲ ಕಾರಣ (ಉ. ದ. ೯೭). ರಾಮಾಯಣದ ಬಗ್ಗೆ ಹೀಗೆ ವ್ಯಾಖ್ಯಾನ ಮಾಡುವ ಲೋಹಿಯಾ ರಾಮ, ಭರತ ಇಬ್ಬರೂ ಕೃಷ್ಣ ವರ್ಣೀಯರು; ಆದ್ದರಿಂದ ಅವರು ದಕ್ಷಿಣದ ಕಡೆಯವರೇ ಎನ್ನುತ್ತಾರೆ. ರಾವಣ ಶಿವನಿಂದ ವರವನ್ನು ಪಡೆದ ನಂತರ ತನ್ನ ಹಳೆಯ ನೆಲೆಯನ್ನು ತೊರೆದು ಲಂಕೆಗೆ ಹೊರಟುಹೋದ. ಲಂಕೆಯಲ್ಲಿ ಅಭೇದ್ಯ ರಾಜ್ಯ ಕಟ್ಟುವ ನಂಬಿಕೆ ಅವನಿಗಿತ್ತು. ಅವನು ಉತ್ತರದವನು ಎನ್ನುತ್ತಾರೆ. ರಾಮಲೀಲಾ ಆಚರಣೆಯಲ್ಲಿ ಈಗಿನ ಉತ್ತರದವರು ರಾಕ್ಷಸರನ್ನು ದಾಕ್ಷಿಣಾತ್ಯರನ್ನಾಗಿ ಭಾವಿಸುತ್ತಾರೆ. ಹಾಗೇ ದಾಕ್ಷಿಣಾತ್ಯರೂ ರಾಮನನ್ನು ಉತ್ತರದವನೆಂದು ಭಾವಿಸುತ್ತಾರೆ. ರಾವಣನನ್ನು ನಮ್ಮವನು ಮತ್ತು ದಕ್ಷಿಣದವನು, ದ್ರಾವಿಡರವನು ಎಂದೆಲ್ಲ ಭಾವಿಸುತ್ತಾರೆ. ಹಾಗೆಯೇ ರಾಮಾಯಣ ಉತ್ತರ–ದಕ್ಷಿಣದ ನಡುವಣ ಕಲಹವೆಂದೂ ವ್ಯಾಖ್ಯಾನಿಸುತ್ತಾರೆ. ನಮ್ಮ ಮತ್ತು ಅನ್ಯ ಎಂಬ ನೆಲೆಯಲ್ಲಿ ದಕ್ಷಿಣಾತ್ಯರು ಉತ್ತರ–ದಕ್ಷಿಣಗಳನ್ನು ಹೀಗೆ ಭಾವಿಸಬಾರದು. ರಾಮಾಯಣ ಉತ್ತರ – ದಕ್ಷಿಣಗಳನ್ನು ಒಂದಾಗಿ ಬೆಸೆಯುವ ಕಥೆ (ಮಹಾಭಾರತ ಪೂರ್ವ ಪಶ್ಚಿಮಗಳನ್ನು ಒಂದಾಗಿ ಬೆಸೆಯುವ ಕಥೆ). ಈ ಒಟ್ಟುಗೂಡಿಸುವ ಗುಣಕ್ಕಿಂತ ಮಿಗಿಲಾದ ಹಿರಿಮೆ ಯುಳ್ಳದ್ದು ಬೇರಾವುದೂ ಇಲ್ಲ ಎಂದೂ ಹೇಳುತ್ತಾರೆ. ಹಾಗೆ ನೋಡಿದರೆ ಈ ನಿಲುವನ್ನು ರಾಮಾಯಣದ ಮೃದುವಾದ ಉದಾರವಾದಿ ಓದು ಎಂದೇ ಕರೆಯಬೇಕು. (ರಾಮಲೀಲಾದಂತಹ ಆಚರಣೆಗಳಲ್ಲಿ ಕೇಡಿನ ಪ್ರತೀಕವಾಗಿ ರಾವಣನನ್ನು ಜನ ಭಾವಿಸುತ್ತಾರೆ. ಅವನು ಒಂದು ಪ್ರದೇಶದ, ಜನಾಂಗದ ಪ್ರತಿನಿಧಿ ಆದಾಗ ಆ ಪ್ರದೇಶ ಮತ್ತು ಜನಾಂಗಗಳೂ ಕೇಡಿನ ಪ್ರತೀಕವೇ ಆಗಬೇಕಾಗುತ್ತದೆ. ಇದು ಅಪಾಯಕಾರಿಯಾದುದು.)

ವಿಭೀಷಣನ ಬಗ್ಗೆ ಮಾತಾಡುತ್ತಾ ಲೋಹಿಯಾ 'ಅತ್ಯಾಶ್ಚರ್ಯವೂ ಸೂಚಕಸ್ತಂಭವೂ ಆಗಿ ಸದಾ ಉಳಿಯುವ ಸಂಗತಿ ಎಂದರೆ ಯಾವ ಕವಿಗಾಯಕನಿಗೂ ವಿಭೀಷಣನ ಪಾಪವನ್ನು ತೊಳೆಯುವುದಾಗಿಲ್ಲ' ಎನ್ನುತ್ತಾರೆ. ಏಕೆಂದರೆ ಆತ ರಾವಣ ಸತ್ತ ನಂತರ ವಿಧವೆಯಾದ ಮಂಡೋದರಿಯನ್ನು ಪತ್ನಿಯಾಗಿ ಸ್ವೀಕರಿಸಿದ. ಆತ ಗೂಢಚಾರತನಕ್ಕೆ, ಹಿಂದಿನಿಂದ ಬಂದು ಇರಿಯುವುದಕ್ಕೆ ಹೆಸರಾದ ಎನ್ನುತ್ತಾರೆ. ಇಲ್ಲಿ ದೋಷ ವಿಭೀಷಣನದ್ದೋ ರಾಮನದ್ದೋ ಎಂಬ ಸೂಕ್ಷ್ಮ ಪ್ರಶ್ನೆಯನ್ನು ಲೋಹಿಯಾ ಎತ್ತುವುದಿಲ್ಲ. ನಮ್ಮ ನೈತಿಕ ಚೌಕಟ್ಟಿನ ಮೂಲಕ ಕಥನವನ್ನು ನೋಡಹೊರಟಾಗ ಕೆಲವೊಮ್ಮೆ ಇಂತಹ ಲೋಪಗಳು ಆಗುವುದುಂಟು. ಸತ್ತ ಅಣ್ಣನ ವಿಧವೆ ಪತ್ನಿಯನ್ನು ತಮ್ಮನು ವಿವಾಹವಾಗುವುದು ಕೆಲವು ಪಂಥಾಚಾರಗಳಲ್ಲಿ ಅನೈತಿಕ ಮೌಲ್ಯವೇನೂ ಆಗಿರಲಿಲ್ಲ. ನಿಷೇಧಿತ ಪದ್ಧತಿಯೂ ಆಗಿರಲಿಲ್ಲ. ಹಾಗಿರುವಾಗ ವಿಭೀಷಣ ತಪ್ಪೆಸಗಿಲ್ಲ. ಆದರೆ ಇಲ್ಲಿ ಅಧಿಕಾರ ರಾಜಕಾರಣ ಮತ್ತು ಅದರ ಭಾಗವಾದ ಯುದ್ಧ ತಂತ್ರಗಳಿಗೆ ವಿಭೀಷಣ ಬಲಿಯಾಗಿದ್ದಾನೆ. ಒಡೆದು ಗೆಲ್ಲುವ ಮತ್ತು ಒಡೆದು ಆಳುವ ನೀತಿಯನ್ನು ರಾಮ ಅನುಸರಿಸಿದ್ದರಿಂದ ವಿಭೀಷಣನನ್ನು ತನ್ನ ಕಡೆ ಸೆಳೆದುಕೊಂಡು ಲಂಕೆಯನ್ನು ಗೆಲ್ಲಲು ಸಾಧ್ಯವಾಯಿತು. ಆ ಮೂಲಕ ಅಪಹರಣಕ್ಕೆ ಒಳಗಾದ ತನ್ನ ಹೆಂಡತಿಯನ್ನೂ ಬಿಡಿಸಿಕೊಳ್ಳಲು ಸಾಧ್ಯವಾಯಿತು. ರಾಮನನ್ನು ದೈವಾಂಶ ಪುರುಷ, ಮರ್ಯಾದಾ ಪುರುಷೋತ್ತಮ ಎಂದು ಭಾವಿಸಿದಾಗ ರಾಮನಲ್ಲಿ ನಮಗೆ ದೋಷ ಕಾಣುವುದಿಲ್ಲವಷ್ಟೆ.



*ವಾಲಿವಧೆ ಪ್ರಸಂಗ*

ಲೋಹಿಯಾ ತಮ್ಮ ಬರಹಗಳಲ್ಲಿ ಅಲ್ಲಲ್ಲಿ ಮೂರ್‍ನಾಲ್ಕು ಬಾರಿ ರಾಮನನ್ನು ಅಂಶಾವತಾರಿ ಎಂದೂ ಕೃಷ್ಣನನ್ನು ಪೂರ್ಣಾವತಾರಿ ಎಂದೂ ಉಲ್ಲೇಖಿಸುತ್ತಾರೆ. ಲೋಹಿಯಾ ನಿರೀಶ್ವರವಾದಿ; ಈ ರೀತಿ ನಮ್ಮಲ್ಲಿ ನಂಬಲಾಗಿದೆ ಎಂಬುದು ಅವರ ಉಲ್ಲೇಖ. ವಾಲಿಯ ಪ್ರಸಂಗದಲ್ಲಿ ಲೋಹಿಯಾ ಅವರಿಗಿಂತ ಅಂಬೇಡ್ಕರ್ ಚಿಂತನೆ ಹೆಚ್ಚು ಪ್ರಸ್ತುತ ಎನ್ನಿಸುತ್ತದೆ. ಸುಗ್ರೀವನನ್ನು ಮೋಸಗಾರ ಎಂದು ಕರೆಯುವ ಅಂಬೇಡ್ಕರ್ ವಾಲಿ ನಿಜಕ್ಕೂ ಧರ್ಮಿ ಎನ್ನುತ್ತಾರೆ. ಆದರೆ ವಾಲಿವಧೆ ಪ್ರಸಂಗವನ್ನು ರಾಮನ ಕೆಲವೇ ಅಪಕೃತಿಗಳಲ್ಲಿ ಒಂದು ಎನ್ನುವ ಲೋಹಿಯಾ ಅದನ್ನು ವ್ಯಕ್ತಿಯ ನೈತಿಕತೆಗಿಂತ ರಾಜ್ಯದ ನೈತಿಕತೆಯ ದೃಷ್ಟಿಯಿಂದ ನೋಡಬೇಕು

ಔತಣ ಕೊಟ್ಟು ಮೆಚ್ಚಿಸಲಾರಿರಿ.
ವಡವೆ ವಸ್ತ್ರ ಇಟ್ಟು ಮೆಚ್ಚಿಸಲಾರಿರಿ.
ಉಡುಗೊರೆ ಇತ್ತು ಗೆಲ್ಲಲಾರಿರಿ.
ಸವಿಮಾತು – ವರ್ತನೆಯಿಂದ
ಗೆಲ್ಲುವಿರಿ ಮೆಚ್ಚಿಸುವಿರಿ.

ಡಾ॥ ಸಿ. ಆರ್. ಚಂದ್ರಶೇಖರ್
ಬೆಂಗಳೂರು

ಎನ್ನುತ್ತಾರೆ. ಸಾಮೂಹಿಕ ಹಿತಕ್ಕಾಗಿ ಒಂದು ಸುಳ್ಳು ಹೇಳುವುದನ್ನೊ ಮಾತು ತಪ್ಪುವುದನ್ನೋ ಮಾಡಬಹುದು ಎನ್ನುವ ಇವರು ಆದರೂ ಮಾದರಿ ವ್ಯಕ್ತಿಯೊಬ್ಬ ಹೀಗೆ ನಡಕೊಂಡದ್ದು ಅನಪೇಕ್ಷಣೀಯ ಎಂದೇ ಹೇಳುತ್ತಾರೆ. ಹಾಗೆ ನೋಡಿದರೆ ಬಹಳಷ್ಟು ಕಡೆ ಲೋಹಿಯಾ, ಅಂಬೇಡ್ಕರ್, ಪೆರಿಯಾರ್ ಇವರ ರಾಮಾಯಣದ ಚಿಂತನೆಗಳಲ್ಲಿ ಸಾಮ್ಯತೆ ಇದ್ದರೆ ಗಾಂಧಿ ಸ್ವತಃ ಅವರೇ ಒಪ್ಪಿಕೊಂಡಿರುವಂತೆ ಸನಾತನಿ ಮತ್ತು ಹಿಂದೂ ಆಗಿಯೇ ಕಾಣುತ್ತಾರೆ.

ಚಿಕ್ಕ ಚಿಕ್ಕ ಪ್ರಸಂಗಗಳನ್ನು ಕಥನ ಧಾಟಿಯಲ್ಲಿ ನಿರೂಪಿಸುತ್ತ ಚರ್ಚಿಸುವ ಲೋಹಿಯಾ ಅವನ್ನು ನಮ್ಮ ವರ್ತಮಾನದ ಮಾನವ ನಡಾವಳಿಗಳ ವ್ಯಾಖ್ಯಾನಕ್ಕೆ ಬಳಸುತ್ತಾರೆ. ರಾವಣನು ಯುದ್ಧದಲ್ಲಿ ಸೋತು ಸಾಯುತ್ತ ಬಿದ್ದಿರುವಾಗ ರಾಮನು ಲಕ್ಷ್ಮಣನನ್ನು ರಾವಣನ ಕಾಲ ಬಳಿ ನಿಂತು ಆತನಿಂದ ರಾಜನೀತಿ ಹೇಳಿಸಿಕೊಂಡು ಬಾ ಎಂದು ಕಳಿಸುವ ಪ್ರಸಂಗ ಅಂತಹ ಪ್ರಸಂಗಗಳಲ್ಲಿ ಒಂದು. ಮಾನವ ಸದಾಚಾರಕ್ಕೆ ಒಂದು ದಿಕ್ಸೂಚಿಯಾಗಿ ಲೋಹಿಯಾ ಈ ಪ್ರಸಂಗವನ್ನು ಬಳಸುತ್ತಾರೆ. ರಾವಣ ಮಹಾವಿದ್ವಾಂಸ. ಅವನ ವಿದ್ಯೆ ಮನುಕುಲದ ಸತತ ಬಳಕೆಗಾಗಿ ಸಂಗೋಪಿತ ಆಗಬೇಕು. ಹಾಗಾಗಿ ರಾಮ ಹೀಗೆ ಮಾಡಿದ ಎಂಬುದು ಇಲ್ಲಿನ ಲೋಹಿಯಾ ವ್ಯಾಖ್ಯಾನ. ಸಾಯಲು ಬಿದ್ದಿರುವ ವೈರಿಯ, ಮಹಾವಿದ್ವಾಂಸನ ವಿಷಯದಲ್ಲಿ ನಡೆದುಕೊಂಡ ರೀತಿಯಂಥ ಉದಾಹರಣೆಗಳಿಂದ ರಾಮ ಸದಾಚಾರದ ಉನ್ನತ ನಡೆಯನ್ನು ಕಟ್ಟಿಕೊಟ್ಟಿದ್ದಾನೆ ಎಂದು (ಸ್ವಾ. ಅಂ. ೧೦೪) ಲೋಹಿಯಾ ಈ ಪ್ರಸಂಗ ಕುರಿತು ಹೇಳುತ್ತಾರೆ. ನಮ್ಮ ವೈರಿಗಳಿಂದಲೂ ನಾವು ದುಷ್ಟರು ಎಂದು ಭಾವಿಸಿರುವವರಿಂದಲೂ ಈ ಸಮಾಜಕ್ಕೆ ಉಪಯುಕ್ತವಾದದ್ದು ಇದ್ದರೆ ಅದನ್ನು ಸಂಗೋಪಿಸಬೇಕು ಎಂಬ ತತ್ವವನ್ನು ಲೋಹಿಯಾ ಇಲ್ಲಿ ಮಂಡಿಸುತ್ತಾರೆ. ಹೀಗಾಗಿ ಇವರ ಓದು ಒಂದು ರೀತಿಯಲ್ಲಿ ಪಾತ್ರ ಮತ್ತು ಪ್ರಸಂಗಗಳ ತಾತ್ವೀಕರಣ ಕೂಡ ಹೌದು. (ಈ ಪ್ರಸಂಗವನ್ನು ಮತ್ತೊಂದು ದೃಷ್ಟಿಯಿಂದ ನೋಡಿದರೆ ಬಲಶಾಲಿ ಮತ್ತು ಒಡೆದು ಆಳುವ ಯುದ್ಧತಂತ್ರ ನಿಪುಣನಾದವನು ಪ್ರಾಣವನ್ನು ವಶಮಾಡಿಕೊಳ್ಳುವ ಜೊತೆಗೆ ಜ್ಞಾನವನ್ನೂ ವಶಮಾಡಿಕೊಳ್ಳುವ 'ಸದಾಚಾರ' ಆಗಿಯೂ ಇದನ್ನು ಅರ್ಥೈಸಬಹುದು)

ರಾಮನ ವರ್ತನೆ ಮತ್ತು ಸ್ವಭಾವವನ್ನು ಹೇಳುವಾಗ ಲೋಹಿಯಾ ಆತ ವಕ್ತಾರ ಆಗಿದ್ದಕ್ಕಿಂತ ಶ್ರೋತಾರನಾಗಿ ಇದ್ದದ್ದೆ ಹೆಚ್ಚು ಎಂದು ಹೇಳುತ್ತಾರೆ. ಅಂದರೆ ದೊಡ್ಡವನಾದವನು ಶಕ್ತಿಶಾಲಿ ಮತ್ತು ಅಧಿಕಾರ ಕೇಂದ್ರ ಆಗಿದ್ದಾಗ್ಯೂ ನನ್ನ ಮಾತನ್ನೇ ಎಲ್ಲರೂ ಕೇಳುತ್ತಿರಬೇಕು ಎಂದು ಯಾವಾಗಲೂ ವಟವಟ ಮೆರೆಯದೆ ಎದುರಿನವರಿಗೆ ತಾಳ್ಮೆಯಿಂದ ಕಿವಿಗೊಡುವುದನ್ನೂ ಕಲಿಯಬೇಕು ಎಂದು ಹೇಳುತ್ತಾರೆ. ಪರಶುರಾಮ ನಿಂದಿಸುವಾಗ ರಾಮ ಮೌನಿಯಾಗಿದ್ದ ಮತ್ತು ಲಕ್ಷ್ಮಣ – ಶೂರ್ಪಣಖಿ ಸಂವಾದದಲ್ಲಿ ರಾಮ ಮೌನಿಯಾಗಿದ್ದ. ಇವೆಲ್ಲ ದೊಡ್ಡವರು ಶ್ರವಣಕುತೂಹಲಿಗಳೂ ಆಗಬೇಕಾದದ್ದರ ಪ್ರತೀಕ ಎನ್ನುತ್ತಾರೆ. ಹೀಗೆ ಲೋಹಿಯಾ ಎಲ್ಲ ಚಿಕ್ಕ ಚಿಕ್ಕ ಪ್ರಸಂಗಗಳನ್ನೂ ನಮ್ಮ ಇಂದಿನ ಸದಾಚಾರಗಳ (ಅನುಕರಣೀಯ ಮತ್ತು ನಿರಾಕರಣೀಯ ನಡಾವಳಿಗಳ) ಪ್ರತೀಕವಾಗಿ ವ್ಯಾಖ್ಯಾನಿಸುತ್ತಾರೆ.

ಗಾಂಧೀಜಿ ತಮ್ಮ ವೈಯಕ್ತಿಕ ಬದುಕನ್ನು ನಿರ್ದಿಷ್ಟವಾಗಿ ನೀತಿ ನಿಯಮಗಳ ಚೌಕಟ್ಟಿನಲ್ಲಿ ಇಟ್ಟು ನೋಡಬೇಕಾದ ಪ್ರತೀಕವಾಗಿ ರಾಮನನ್ನು ಭಾವಿಸುತ್ತಾರೆ. ರಾಮನಾಮ ಜಪ ನನಗೆ ಶಕ್ತಿದಾಯಕ ಎಂದು ನಂಬುತ್ತಾರೆ! ಹಾಗಾಗಿಯೆ ಅವರು ಕೃಷ್ಣನನ್ನಾಗಲೀ ಶಿವನನ್ನಾಗಲೀ ನೆನೆಯುತ್ತಿರಲಿಲ್ಲ. ಸದಾ ರಾಮನ ಹೆಸರನ್ನೆ ನೆನೆಯುತ್ತಿದ್ದರು. ಗಾಂಧೀಜಿಗೆ ರಾಮನ ಬದುಕು ಅನುಕರಣೀಯ ಮಾದರಿ. ಆದರೆ ಅವರು ಕೃಷ್ಣನ ಧಾಟಿಯ ಕೆಲಸವನ್ನೆ ಸಾಕಷ್ಟು ಮಾಡಿದರು ಎಂದು ಲೋಹಿಯಾ ಹೇಳುತ್ತಾರೆ. ಪ್ರಸಂಗಗಳ ಅರ್ಥವನ್ನು ಹುಡುಕಿಕೊಂಡು ಹೋಗುವ ಕೆಲಸವನ್ನು ಕೆಲವೊಮ್ಮೆ ಮಾಡುವ ಲೋಹಿಯಾ ಪ್ರಸಂಗಗಳು ಸುಳ್ಳೋ ನಿಜವೋ ಎಂದು ಚರ್ಚೆಗೆ ಹೋಗುವುದಿಲ್ಲ. ಅದು ಅವರಿಗೆ ನಿರರ್ಥಕವಾದುದು. ಯಾವುದೇ ಪ್ರಸಂಗ

ಕಾವ್ಯದಲ್ಲಿ ನಿರೂಪಿತ ಆಗಿದ್ದರೆ, ಅದು ನಿರೂಪಿತ ಆಗಿದೆ ಮತ್ತು ಓದುಗನ, ಕೇಳುಗನ ಮೇಲೆ ಅದು ಮಾಡುವ ಪರಿಣಾಮವನ್ನು ಮಾಡಿಯೇ ಮಾಡುತ್ತದೆ. ಹಾಗಾಗಿ ಪ್ರಸಂಗಗಳ ಪರಿಣಾಮ ಮತ್ತು ಪ್ರಭಾವ ಏನು, ಎಷ್ಟು ಎಂಬುದನ್ನೇ ನಾವು ನೋಡಬೇಕು ಅದು ನಿಜವಾಗಿ ನಡೆಯಿತಾ ಇಲ್ಲವಾ ಅದು ಸತ್ಯವಾ ಸುಳ್ಳಾ ಎಂದಲ್ಲ ಎನ್ನುತ್ತಾರೆ. (ಉ.ದ. ೪೨೫). ಅಂದರೆ ಲೋಹಿಯಾ ಭಾರತೀಯ ಸಂದರ್ಭಗಳಲ್ಲಿ ಪುರಾಣಗಳನ್ನು ಗ್ರಹಿಸಬೇಕಾದ, ನೋಡಬೇಕಾದ ನೋಟಕ್ರಮಗಳ ಬಗೆಗೆ ಇಂಥಲ್ಲಿ ಒತ್ತು ಕೊಡುತ್ತಾರೆ. ಚರಿತ್ರೆ ಮತ್ತು ಪುರಾಣಗಳ ನಡುವೆ ಗುದ್ದಾಡುವ ಹಿಂದುತ್ವವಾದಿ ಮತ್ತು ಅನ್ಯರೆಂಬ ವೈರಿ ಓದುಗಳ ಜಗ್ಗಾಟದಲ್ಲಿ ಇಂತಹ ನೋಟಕ್ರಮಗಳು ಇಂದು ತುಂಬ ಉಪಯುಕ್ತವಾದ ನೋಟಕ್ರಮ ಗಳಾಗಿವೆ. ಸಾಹಿತ್ಯವು ಚಾರಿತ್ರಿಕವೋ ಪೌರಾಣಿಕವೋ ಎಂಬುದಕ್ಕಿಂತ ಅದು ಏನನ್ನು ನಮಗೆ ನೀಡುತ್ತಿದೆ ಮತ್ತು ಯಾವ ಪರಿಣಾಮಗಳನ್ನು ಮಾಡುತ್ತಿದೆ ಎಂಬುದೇ ಅಂತಿಮ. ಅಲ್ಲವೇ?




ಈ ಹಿನ್ನೆಲೆಯಲ್ಲೆ ಕೋಟ್ಯಂತರ ಮಂದಿ ಭಾರತೀಯರು ಯುಗ ಯುಗಾಂತರಗಳ ಅವಧಿಯಲ್ಲಿ ಸಾವಿರಾರು ವರ್ಷಗಳ ಕಾಲ ರಾಮ, ಕೃಷ್ಣ, ಶಿವರನ್ನು ಮಾಡಿಕೊಂಡಿದ್ದಾರೆ. ಇವರೆಲ್ಲ ನಿಜಕ್ಕೂ ಎಂದಾದರೂ ಈ ಪ್ರಪಂಚದಲ್ಲಿ ಜನ್ಮ ತಳೆದಿದ್ದರೇ ಇಲ್ಲವೇ ಎಂಬುದು ಕೇವಲ ಒಂದು ಸಣ್ಣ ಪ್ರಶ್ನೆ. ಆದರೆ ಬುದ್ಧ, ಅಶೋಕರಂತಹ ವ್ಯಕ್ತಿಗಳಿಗಿಂತ ಹೆಚ್ಚಾಗಿ ರಾಮ, ಕೃಷ್ಣ, ಶಿವ, ಇವರು ಜನಮಾನಸದಲ್ಲಿ ನೆಲೆಸಿದ್ದಾರೆ. ಇವರು ಜನರ ಬದುಕಿನ ಎಲ್ಲ ಪ್ರಸಂಗಗಳಲ್ಲಿ ಕಣ್ಣಮುಂದೆ ಅಥವಾ ಮನಸ್ಸಿನ ಮುಂದೆ ಮಾದರಿಯಾಗಿ ಕಾಣಿಸಿಕೊಳ್ಳುತ್ತಾರೆ. ಮನುಷ್ಯ ಪ್ರಯತ್ನ ಪೂರ್ವಕವಾಗಿ ಅಥವಾ ತನಗೆ ಅರಿವಿಲ್ಲದಂತೆ ಆ ಮಾದರಿಗೆ ಅನುಗುಣವಾಗಿ ತಾನೂ ಹೆಜ್ಜೆ ಇಡತೊಡಗುತ್ತಾನೆ ಎಂದು ಲೋಹಿಯಾ ಹೇಳುತ್ತಾರೆ. (ಉ.ದ. ೪೨೦-೨೨).

(ರಾಮ ಜನನ ಮತ್ತು ರಾಮನ ಏಕಪತ್ನಿವ್ರತದ ಬಗ್ಗೆ ಅಂಬೇಡ್ಕರ್ ಇನ್ನೂ ಹೆಚ್ಚಿನ ವಾಸ್ತವವಾದಿ ನೆಲೆಗಟ್ಟಿನಿಂದ ಮಾತಾಡುತ್ತಾರೆ. ರಾಮ ಒಬ್ಬ ಋಷಿಪುತ್ರ, ಅವನು ಏಕಪತ್ನಿವ್ರತಸ್ಥ ಅಲ್ಲ ಎನ್ನುವುದು ಅವರ ವಾದ. ಪುಷ್ಪಕ ವಿಮಾನ ನಿಜವೇ? ಕುಂಭಕರ್ಣನ ನಿದ್ರೆ ನಿಜವೇ? ಸಂಜೀವಿನಿ ಪರ್ವತವನ್ನು ಹನುಮಂತ ಹೊತ್ತು ತಂದದ್ದು ನಿಜವೇ? ಸಾಗರವನ್ನು ಆತ ಜಿಗಿದದ್ದು ನಿಜವೇ? ರಾವಣನಿಗೆ ನಿಜವಾಗಿಯೂ ಹತ್ತು ತಲೆ ಇದ್ದವೇ? – ಇವುಗಳಲ್ಲಿ ಕಲ್ಪನೆ ಎಷ್ಟು, ವಾಸ್ತವ ಎಷ್ಟು? ಕವಿಯಾಗಿ ವಾಲ್ಮೀಕಿಯೇ ಹುತ್ತದಿಂದ ಜನಿಸಿದ ಎನ್ನುವುದು ಎಷ್ಟರಮಟ್ಟಿಗೆ ಕಥೆ, ಎಷ್ಟರಮಟ್ಟಿಗೆ ವಾಸ್ತವ? ಇಂತಹ ಕಡೆ ಸಾಹಿತ್ಯವನ್ನು ರೂಪಕ ಮಾದರಿಯಲ್ಲಿ ಓದುವುದಕ್ಕಿಂತ ವಾಸ್ತವವಾದಿ ಮಾದರಿಯಲ್ಲಿ ಓದಿದರೆ ಅದರಿಂದ ನಾವು ಏನನ್ನೂ ಗ್ರಹಿಸಲಾಗುವುದಿಲ್ಲ. ಇದನ್ನೆ ಲೋಹಿಯಾ ಪರಿಣಾಮ ದೃಷ್ಟಿಯ ಓದು ಎನ್ನುತ್ತಾರೆ).

ಕೆಲವರ ಸಂದರ್ಭದಲ್ಲಿ ಬರವಣಿಗೆ ಹಾಗೂ ಮಾತುಗಳು ಮುಖ್ಯವಾಗಿಬಿಟ್ಟು ಅವರ ಜೀವನವು ಅದಕ್ಕೆ ಒಂದು ಬಗೆಯ ಉಪವಿವರಣೆ ಮಾತ್ರವಾಗಿರುತ್ತದೆ. ಮಹಾತ್ಮ ಗಾಂಧಿಯವರು ಬರೆದದ್ದೂ ಅಪಾರವಾಗಿ. ಮಾತನಾಡಿದ್ದೂ ಅಪಾರವಾಗಿ. ಅವರ ಬರವಣಿಗೆ ಹಾಗೂ ಮಾತುಕತೆಗಳು ಅವರ ಬದುಕು ಮತ್ತು ನಡವಳಿಕೆಗಳ ವಿವರಣೆ ಮಾತ್ರವಾಗಿವೆ. ಆದುದರಿಂದ ಗಾಂಧೀಜಿಯವರ ಬದುಕಿನ ಅರ್ಥವನ್ನು ತಿಳಿಯಲು ಅವರ ಜೀವನ ಹಾಗೂ ಕಾರ್ಯಕ್ರಮಗಳಿಗೆ ಹೋಗಬೇಕೇ ಹೊರತು ಅವರ ಮಾತು ಹಾಗೂ ಬರವಣಿಗೆಗಲ್ಲ. (ಗಾಂಧಿವಾದ ಹಾಗೂ ಸಮಾಜವಾದ ಲೇಖನದಲ್ಲಿ : ಮಹಾತ್ಮ ಗಾಂಧಿ ಮತ್ತು ಸಮಾಜವಾದ ೨೦೩).

ಲೋಹಿಯಾ ಅವರು ಪುರಾಣ ಪಾತ್ರಗಳನ್ನು ಮತ್ತು ಪ್ರಸಂಗಗಳನ್ನು ಮುಖಾಮುಖಿ ಆಗುವ ಕ್ರಮಕ್ಕೆ ಈ ಮಾತುಗಳನ್ನು ನಾವು ಅನ್ವಯಿಸಿಕೊಂಡು ನೋಡಬೇಕು. ರಾಮಾಯಣ ರಾಮನ ಕಥೆ. ಅವನ ನಡವಳಿಕೆ ಮತ್ತು ಬದುಕಿನ ಕಥೆ. ಕಾಲಾನುಕ್ರಮದಲ್ಲಿ ಗಾಯಕರು ಮತ್ತು ಕವಿಗಳು ಕಟ್ಟಿದ ಈ ನಾಡಿನ ಮತ್ತು ಮಾದರಿ ಪುರುಷನೊಬ್ಬನ ಮಾದರಿ ನಡವಳಿಕೆಗಳ ಕಥೆ. ಈ ದೃಷ್ಟಿಯಲ್ಲೇ ಇವರು ಎಲ್ಲ ಪುರಾಣಗಳನ್ನೂ ಪುರಾಣ ಪಾತ್ರ ಪ್ರತೀಕಗಳನ್ನೂ ನೋಡುತ್ತಾರೆ. ರಾಮಾಯಣವನ್ನೂ ನೋಡುತ್ತಾರೆ. ಇವರ ರಾಮಾಯಣ ವಿವೇಚನೆ ಬಹುಪಾಲು ರಾಮನ ವರ್ತನೆಯ ವಿವೇಚನೆಯೇ.

ರಾಮ ಮತ್ತು ಕೃಷ್ಣ ಇವರ ಜೀವನದಲ್ಲಿ ನಡೆದವು ಎಂದು ಕಥೆಯಲ್ಲಿ ಹೇಳಲಾಗಿರುವ ಎರಡು ಪ್ರಸಂಗಗಳನ್ನು ಮುಖಾಮುಖಿ ಮಾಡುವ ಲೋಹಿಯಾ ತೌಲನಿಕ ವಿಧಾನವನ್ನೂ ತಮ್ಮ ಓದಿನಲ್ಲಿ ಬಳಸಿದ್ದಾರೆ. ಈ ಎರಡು ಪ್ರಸಂಗಗಳು ಯಾವುವೆಂದರೆ, ಒಂದು : ರಾಮನು ಸೀತೆಯ ಅಪಹರಣ ಆದ ನಂತರ ದುಃಖಿತನಾಗಿ ಅಳುತ್ತ ಗಿಡಮರಗಳನ್ನೂ ಕಲ್ಲುಗಳನ್ನೂ ಯಾಚಿಸುತ್ತ, 'ನನ್ನ ಸೀತೆಯನ್ನು ನೀವು ಕಂಡಿರಾ ನೀವು ಕಂಡಿರಾ?' ಎಂದು ಕೇಳುವ ದೃಶ್ಯ. ಆಗ ಚಂದ್ರ ರಾಮನನ್ನು ನೋಡಿ ನಗುತ್ತಾನೆ. ಇನ್ನೊಂದು : ಕೃಷ್ಣ ತನ್ನ ಹದಿನಾರು ಸಾವಿರ ಪ್ರೇಯಸಿಯರಲ್ಲಿ ನಡುರಾತ್ರಿಯಲ್ಲಿ ರಾಸಕ್ರೀಡೆ ಆಡುವ ದೃಶ್ಯ. ಇಲ್ಲಿ ಕೃಷ್ಣ ಅನೇಕನಾಗಿದ್ದ. ಒಬ್ಬೊಬ್ಬಳೂ ಗೋಪಿಕೆ ತನ್ನವನೇ ಆದ ಕೃಷ್ಣನೊಡನೆ ಕುಣಿಯುತ್ತಿದ್ದಳು. ಆಗ ನಗು ಎಂದು ಕೃಷ್ಣ ಚಂದ್ರನನ್ನು ಆಹ್ವಾನಿಸಿದ. ಚಂದ್ರ ಗಂಭೀರನಾಗಿದ್ದ.

ಈ ಎರಡೂ ಪ್ರಸಂಗಗಳನ್ನು ಹೋಲಿಸುವ ಲೋಹಿಯಾ ನಮ್ಮ ಜನ ರಾಮಾಯಣ ಮತ್ತು ಭಾರತ ಎರಡನ್ನೂ ಒಬ್ಬನದೇ ಎರಡು ಜೀವನಗಳ ಕಥನ ಎಂಬಂತೆ ನೋಡಿದ್ದಾರೆ ಎಂದು ಹೇಳುತ್ತಾರೆ. ಹಾಗಾಗಿ ಇಲ್ಲಿ ರಾಮನಾಗಲೀ ಕೃಷ್ಣನಾಗಲೀ ನಮ್ಮೊಳಗೇ ಇರಬಹುದಾದ, ಒಬ್ಬನೊಳಗೇ ಇರಬಹುದಾದ ಭಿನ್ನ ವ್ಯಕ್ತಿತ್ವಗಳ ಪ್ರತೀಕಗಳು. (ಕೃಷ್ಣನ ಪ್ರಸಂಗವನ್ನೂ ನೋಡಿದರೆ; ಹೆಣ್ಣು ಒಬ್ಬೊಬ್ಬಳೂ ವಿಭಿನ್ನ ಆದರೆ ಆಕೆಯನ್ನು ಲೈಂಗಿಕವಾಗಿ ಬಳಸಿಕೊಳ್ಳುವ ಗಂಡಸರು ಎಲ್ಲಿದ್ದರೂ ಎಷ್ಟಿದ್ದರೂ ಅವರೆಲ್ಲ ಒಂದೇ ಮಾದರಿ ಎನ್ನಿಸುತ್ತದೆ).

ಅನೇಕ ಸಂಗತಿಗಳು ರಾಮಾಯಣದಲ್ಲಿ ಭಿನ್ನ ಕಾಲದ ಚಾರಿತ್ರಿಕ ಸಂಗತಿಗಳಾಗಿ ಕಾಣುತ್ತವೆ. ಅವುಗಳೆಲ್ಲವನ್ನೂ ನಾವು ಅನುಕರಣೀಯ ಎಂದೇನೂ ತೆಗೆದುಕೊಳ್ಳಬೇಕಾಗಿಲ್ಲ. ಉದಾಹರಣೆಗೆ, ಸೀತೆ ತೊಡುತ್ತಿದ್ದ ಮುತ್ತು ರತ್ನದ ಆಭರಣಗಳು, ರಾಮ ಬಾಲಕನಾಗಿದ್ದಾಗ ತೊಡುತ್ತಿದ್ದ ಕಾಲ್ಗೆಜ್ಜೆಗಳು ಇವನ್ನೆಲ್ಲ ಕಳೆದುಹೋದ ಕಾಲದ ಅಳಿದುಹೋದ ಸಂಗತಿಗಳ ಪ್ರತೀಕವಾಗಿ ಮಾತ್ರ ತೆಗೆದುಕೊಳ್ಳಬೇಕು ಎಂಬುದು ಲೋಹಿಯಾ ಅಭಿಮತ.

ಭಾರತದ ಚುನಾವಣಾ ರಾಜಕಾರಣದ ಹಿನ್ನೆಲೆಯಲ್ಲಿ ಮಾತನಾಡುತ್ತಾ ಲೋಹಿಯಾ ಅವರು 'ರಾಮ ಎಂತಹ ಮರ್ಯಾದಾ ಪುರುಷೋತ್ತಮನೇ ಆಗಿರಲಿ, ಅವನ ಕತೆಗಳ ಅಂಶವು ಕೇವಲ ಎತ್ತಿನ ಗಾಡಿಯ ಹಳೆಯ ಲೋಕಕ್ಕೇ ಸೀಮಿತವಾಗಿ ನಿಂತುಬಿಟ್ಟರೆ ಅವನ ಉಪಾಸಕರು ಮುಂದುವರಿಯಲು ಎಂದಿಗೂ ಸಾಧ್ಯವಾಗದು. ಅವರಿಗೇ ಅಡ್ಡಗೆರೆ ಎಳೆದು ತಡೆದಂತೆ ಆಗುತ್ತದೆ' ಎಂದು ಹೇಳುತ್ತಾರೆ. (ಉ.ದ. ೪೩೭). ಇದನ್ನು ಮುಂದುವರಿಸುತ್ತ ಶಿವಕ್ಷೇತ್ರಗಳಲ್ಲಿ ಕಮ್ಯುನಿಸ್ಟರು ಗೆಲ್ಲಬಹುದು ಎಂತಲೂ ರಾಮಕ್ಷೇತ್ರದಲ್ಲಿ ಸಮಾಜವಾದಿಗಳು ಗೆಲ್ಲಬಹುದು ಎಂತಲೂ ಕೃಷ್ಣಕ್ಷೇತ್ರಗಳಲ್ಲಿ ಜನಸಂಘದವರು ಮತ್ತು ರಾಮರಾಜ್ಯ ಪರಿಷತ್ತಿನವರು ಗೆಲ್ಲಬಹುದು ಎಂದೂ

ಹೇಳುತ್ತಾರೆ. ೧೯೫೨ರ ಮಹಾಚುನಾವಣೆಗಳನ್ನು ಗಮನದಲ್ಲಿ ಇರಿಸಿಕೊಂಡು ತುಂಬ ಸಡಿಲವಾಗಿ ಈ ವಾದವನ್ನು ಮಂಡಿಸುವ ಲೋಹಿಯಾ ಪುರಾಣ ಸಂವೇದನೆಗಳು ಇಂದಿಗೂ ನಮ್ಮ ರಾಜಕಾರಣವನ್ನು ನಿರ್ಧರಿಸುವ ಸಂಗತಿಗಳೆ ಆಗಿವೆ ಎನ್ನುತ್ತಾರೆ.

(ಹಾಗೆ ನೋಡಿದರೆ ೧೯೫೨ರ ನಂತರ ಎಷ್ಟೋ ವರ್ಷಗಳು ಗತಿಸಿದ್ದರೂ ಇಂದಿಗೂ ರಾಮಮಂದಿರ ಮತ್ತು ಹಿಂದುತ್ವಗಳೇ ರಾಜಕಾರಣದ ದೊಡ್ಡ ದಾಳಗಳಾಗಿ ಬಳಕೆ ಆಗುತ್ತಿರುವುದು ಇಂದು ನಮಗೆಲ್ಲ ಕಣ್ಣಿಗೆ ರಾಚುವಂತೆ ಕಾಣುತ್ತಿದೆ. ಯಾರು ಏನೇ ಹೇಳಿದರೂ ಇಂದಿಗೂ ತ್ರಿಮೂರ್ತಿಗಳಾದ ರಾಮ, ಕೃಷ್ಣ, ಶಿವ ನಮ್ಮ ಧರ್ಮ, ರಾಜಕಾರಣ, ಬದುಕುಗಳನ್ನು ನಿರ್ಧರಿಸುತ್ತಿದ್ದಾರೆ ಎಂಬುದು ಮಾತ್ರ ನಿಜ. ೧೪-೧೧-೨೦೧೮ರಿಂದ ರಾಮದರ್ಶನಕ್ಕೆ ರಾಮರಥ ಹೆಸರಿನಲ್ಲಿ ರೈಲ್ವೆ ಸೇವೆಯನ್ನೂ ಆರಂಭಿಸಲಾಗಿದೆ! ಅಲ್ಲದೆ, ಇಂದು ಅಯೋಧ್ಯೆ ಒಂದು ಧಾರ್ಮಿಕ ಕ್ಷೇತ್ರ ಎಂಬುದಕ್ಕಿಂತ ಅದೊಂದು ಆರ್ಥಿಕ ಆದಾಯದ ಮೂಲ ಮತ್ತು ಆಸ್ತಿ ಎಂದೇ ಪರಿಗಣಿಸಲ್ಪಟ್ಟಿದೆ. ಅದರ ಕುರಿತ ತೀರ್ಮಾನವು ಧರ್ಮ, ಅಧ್ಯಾತ್ಮಗಳನ್ನೂ ದಾಟಿ ಸುಪ್ರೀಂ ಕೋರ್ಟಿನ ಕದ ತಟ್ಟುತ್ತಿದೆ!)

ರಾಷ್ಟ್ರವೊಂದು ತನ್ನೆಲ್ಲ ಪ್ರಜೆಗಳನ್ನು ಅವರು ಬಹುಮತದ ಕಡೆ ಸಮರ್ಥನೆ ಇರುವವರಾಗಲೀ, ಸಹಮತ ಇರುವವರಾಗಲೀ ಅಥವಾ ಇಲ್ಲದ ಬಂಡಾಯಗಾರರಾಗಲೀ ಎಲ್ಲರನ್ನೂ ತಾಯಿಯಾಗಿ ಮಕ್ಕಳಂತೆ ಕಾಣಬೇಕು ಎಂದು ಲೋಹಿಯಾ ಹೇಳುತ್ತಾರೆ. ಯಾರನ್ನೇ ಆಗಲೀ ಜೈಲಿಗೆ ಹಾಕುವುದು, ಶಿರಚ್ಛೇದ ಮಾಡುವುದು, ಗಡೀಪಾರು ಮಾಡುವುದು ಯುಕ್ತವಲ್ಲ ಎಂಬ ಮಾತುಗಳನ್ನು ಶಂಬೂಕ ವಧೆ ಪ್ರಸಂಗದ ಹಿನ್ನೆಲೆಯಲ್ಲಿ ಹೇಳುವ ಲೋಹಿಯಾ ಇಂತಹ ವರ್ತನೆ ವಸಿಷ್ಠ ಮಾರ್ಗ ಎಂತಲೂ ತಾಯಿ ವರ್ತನೆ ವಾಲ್ಮೀಕಿ ಮಾರ್ಗ ಎಂತಲೂ ಹೇಳುತ್ತಾರೆ. ಹಣವಂತರ ಮತ್ತು ಅಧ್ಯಾತ್ಮವಾದಿಗಳ, ವ್ಯಾಪಾರಿಗಳ ಮತ್ತು ಮಠಗಳ, ಬಿರ್ಲಾ ಮತ್ತು ನೆಹರೂಗಳ ಪರಸ್ಪರ ಹಿತ ಸದಾ ಜೊತೆಗೂಡಿಯೆ ಇರುತ್ತದೆ. (ಸ್ವಾ. ಅಂ. ೧೪೦). ಈ ಇಬ್ಬರ ಸಂಯೋಜನೆಯು ಬಡವರ ಹೊಟ್ಟೆಯನ್ನೂ (ಆರ್ಥಿಕವಾಗಿ) ಮತ್ತು ಮನಸ್ಸನ್ನೂ (ಬೌದ್ಧಿಕವಾಗಿ) ಆಳುತ್ತವೆ ಎಂದು ಲೋಹಿಯಾ ಹೇಳುತ್ತಾರೆ. ಮುಸಲ್ಮಾನ ಕೂಡ ವಸಿಷ್ಠನಿಗೆ ಒಂದು ಬಗೆಯ ಸರಕಿದ್ದಂತೆ. ಅವನಿಗೆ ವಸಿಷ್ಠರು ಏನಾದರೂ ಪ್ರೀತಿ ತೋರಿದರೆ ಅದು ಅವನಿಂದ ಪಡೆಯುವ ಪ್ರಯೋಜನದ ಗಾಳವೇ ಆಗಿರುತ್ತದೆ. ಮಹಿಳೆ, ಅಸ್ಪೃಶ್ಯ, ಶೂದ್ರ, ಮುಸಲ್ಮಾನರು ಮಾತ್ರ ಭಾರತವನ್ನು ಬೆಳಗಬಲ್ಲರು; ಸೀತೆ ಹಾಗೂ ಶಂಬೂಕರ ಕೇಂದ್ರ ಬಿಂದುವನ್ನು ಇನ್ನಷ್ಟು ಮತ್ತಷ್ಟು ಬಲಯುತ ಮಾಡಬೇಕು (ಸ್ವಾ. ಅಂ. ೧೫೪). – ಹೀಗೆ ಹೇಳುವ ಲೋಹಿಯಾ ರಾಮಾಯಣವನ್ನು ಸಬಾಲ್ಟ್ರನ್ ನೆಲೆಯಿಂದ ಕೂಡ ನೋಡಬೇಕು ಎಂದು ಸೂಚಿಸುತ್ತಾರೆ. ಹಾಗೆಯೇ ಅದು ನಮ್ಮ ಸಮಾಜವನ್ನು ನಾವು ನೋಡಬೇಕಾಗಿರುವ ಮತ್ತು ನಡೆಸಿಕೊಳ್ಳ ಬೇಕಾಗಿರುವ ಸೂಚನೆ ಕೂಡ. ಲೋಹಿಯಾ ಪ್ರಕಾರ ಪುರಾಣವನ್ನು ಓದುವುದು ಅಥವಾ ಕೇಳುವುದು ಎಂದರೆ ಸಬಾಲ್ಟ್ರನ್ ನೆಲೆಯಲ್ಲಿ ಸಮಾಜವನ್ನು ಬಾಳಿಸುವುದು ಮತ್ತು ವ್ಯಕ್ತಿಗತ ನೆಲೆಯಲ್ಲಿ ಸದಾಚಾರವನ್ನು ಬಾಳುವುದೆ ಆಗಿದೆ.

ಕರ್ಮಫಲ, ಮೋಕ್ಷ ಸಿದ್ಧಾಂತಗಳು ಹೇಗೆ ನಮ್ಮನ್ನೆಲ್ಲ ಪ್ರಭಾವಿಸುತ್ತ ಬಂದಿವೆ ಎಂದು ವಿವರಿಸುವ ಲೋಹಿಯಾ ಅಕರ್ಮಣ್ಯತೆಗೂ ನಮ್ಮ ದಾರ್ಶನಿಕತೆಗಳಲ್ಲಿ ಅವಕಾಶವುಂಟು ಎಂದು ಹೇಳುತ್ತಾರೆ (ಉ. ದ. ೪೩೮). ನಮ್ಮಲ್ಲಿ ವಿಗ್ರಹಗಳನ್ನು ನಿರ್ಮಿಸುವ ಮತ್ತು ಒಡೆಯುವ ಕೆಲಸ ಸಾವಿರಾರು ವರ್ಷಗಳಿಂದ ನಡೆಯುತ್ತಲೇ ಬಂದಿದೆ; ಒಂದೊಂದು ಪಂಥಗಳೂ ತಮ್ಮ ಸುತ್ತ ತಮ್ಮದೇ ಭದ್ರಕೋಟೆಗಳನ್ನು ಕಟ್ಟಿಕೊಳ್ಳಲು ಯತ್ನಿಸಿವೆ. ಆದಾಗ್ಯೂ ಇಲ್ಲಿ ವೈರಿಗಳ ಉತ್ಪಾದನೆ ಉತ್ತರ, ಮುಸಲ್ಮಾನ, ವಿದೇಶಿ ಹೀಗೂ ನಡೆಯುತ್ತ ಬಂದಿದೆ. ಆದರೆ ವೈರಿ ನಮ್ಮ ಬಗಲಲ್ಲೂ ಇರಬಹುದು, ಅದೇ ನಮ್ಮ ಪುರಾಣಗಳು ನಡೆಸುವ ರಾಜಕಾರಣ ಎನ್ನುತ್ತಾರೆ.

ಕೆಲವೊಮ್ಮೆ ರಾಮ, ಕೃಷ್ಣ, ಶಿವ ಮೂವರನ್ನೂ ಬೆರೆಸಿ ಮಾತಾಡುವ ಲೋಹಿಯಾ ಸದಾ ಸಾಮರಸ್ಯದ ಕಡೆಗೇ ನಮ್ಮ ನಡೆ ಇರಬೇಕು ಎಂದು ಸೂಚ್ಯವಾಗಿ ಹೇಳುತ್ತಾರೆ. ಭಿನ್ನ ಕಾಲದ ಲೇಖಕರಾದವರು ರಾಮ ಮತ್ತು ಕೃಷ್ಣನ ಅವತಾರದಲ್ಲಿ ಒಬ್ಬ ವಿಷ್ಣುವನ್ನೇ ತಂದು ಯಮುನಾ ಮತ್ತು ಸರಯೂ ನದಿಗಳನ್ನು ಒಂದು ಮಾಡಿದ್ದಾರೆ. ತಲೆ ಮೇಲೆ ನವಿಲು ಗರಿ, ಕೈಯಲ್ಲಿ ಕೊಳಲು ಹಿಡಿಸುವ ಜೊತೆಗೆ ಬಿಲ್ಲು ಬಾಣ ಚಕ್ರಗಳನ್ನೂ ಹಿಡಿಸಿದ್ದಾರೆ. ಜೊತೆಗೆ, ಶಿವನನ್ನು ಸೃಷ್ಟಿಸಿ ತಲೆಯ ಮೇಲೆ ಗಂಗೆಯನ್ನೂ ಚಂದ್ರನನ್ನೂ ಕೂಡಿಸಿದ್ದಾರೆ. ಇವರು ಮುಂದೆ ಶಿವನ ಜಟೆಯಲ್ಲಿ ಕೊಳಲನ್ನೂ ಇಡುವ ಕಾಲ ದೂರವಿಲ್ಲ. ಅದೂ ಒಂದು ಕಾಲಕ್ಕೆ ಆಗಬಹುದು ಎನ್ನುತ್ತಾರೆ. ಶೈವ, ವೈಷ್ಣವರ ನಡುವೆ ಇರುವ ವೈರತ್ವವನ್ನು ನಾವು ಮತ್ತು ನಮ್ಮ ಲೇಖಕರು ತೊಡೆಯಬೇಕು ಎಂದು ಈ ಮೂಲಕ ಪರೋಕ್ಷವಾಗಿ ಹೇಳುವ ಲೋಹಿಯಾ ನಮ್ಮ ನಮ್ಮ ಆಂತರಿಕ ವಿಸಂಗತಿ, ಬೈನರಿ ವೈರತ್ವಗಳನ್ನೂ ಕಳೆದುಕೊಳ್ಳಬೇಕು ಎಂದು ಹೇಳುತ್ತಾರೆ. ನುಡಿ ರಚನೆಯೇ ಆಗಿರಲಿ, ಅದರ ಓದೇ ಆಗಿರಲಿ, ಅದರ ವ್ಯಾಖ್ಯಾನ ಅಥವಾ ಬಾಳ್ವೆಯೆ ಆಗಿರಲಿ ಎಲ್ಲವೂ ಸಾಮರಸ್ಯ ಮತ್ತು ಸೌಖ್ಯದ ಕಡೆಗೇ ಮುಖ ಮಾಡಬೇಕು, ಆನಂದ ಮತ್ತು ಕನಸುಗಳ ಕಡೆಗೇ ಮುಖ ಮಾಡಬೇಕು ಎಂಬುದು ಲೋಹಿಯಾ ಅವರ ನಿಲುವು.

ರಂಜನೆ, ಆನಂದ ಹಾಗೂ ನೀತಿಬೋಧನೆ ಇವು ಸಾಹಿತ್ಯದ ಇಲ್ಲವೆ ಪುರಾಣದ ಕೆಲಸ ಅಲ್ಲ ಎನ್ನುವ ಲೋಹಿಯಾ ಸಾಮರಸ್ಯ ಮತ್ತು ಕನಸು ಈ ಶಬ್ದಗಳನ್ನು ಮತ್ತೆ ಮತ್ತೆ ಬಳಸುತ್ತಾರೆ. ನಾವು ಕನಸುಗಳನ್ನು ಕಟ್ಟಿಕೊಳ್ಳಲು ಮತ್ತು ಬಿತ್ತಿಕೊಳ್ಳಲು ಇರುವ ನೆಲಗಳು ನಮ್ಮ ಪುರಾಣಗಳು; ಅವು ನಮ್ಮ ನಡುವೆ ಸಾಮರಸ್ಯ ಉಂಟುಮಾಡಬೇಕು ಎನ್ನುತ್ತಾರೆ. ಐದು ಸಾವಿರ ವರ್ಷಗಳಿಂದ ಹರಿದು ಬಂದಿರುವ ಕಥೆಗಳ ನದಿ ರಾಮಾಯಣ. ಇದನ್ನು ಧರ್ಮವೆಂದು ನೋಡುವ ಅಗತ್ಯವಿಲ್ಲ, ಯಾವುದೋ ಒಂದು ಪಂಗಡದ ಖಾಸಗಿ ಆಸ್ತಿಯಾಗಿಯೂ ನೋಡುವ ಅಗತ್ಯವಿಲ್ಲ. ಪುರಾಣವನ್ನು ಜನರ ತಲೆಯ ಮೇಲೆ ಹೇರಿ ರಾಜಕಾರಣ ಮಾಡುವ ಅಗತ್ಯವೂ ಇಲ್ಲ. ಕೋಟ್ಯಂತರ ಜನರ ಪಾಲಿನ ಈ ಕಥೆಗಳು ಇನ್ನೆಷ್ಟು ಕಾಲ ಹೀಗೇ ಮುಂದುವರಿದುಕೊಂಡು ಹೋಗುತ್ತವೋ ಬಲ್ಲವರಾರು! (ಉ. ದ. ೪೪೨). – ಹೀಗೆ ಹೇಳುವ ಲೋಹಿಯಾ ಕಡೆಗೂ ಇವುಗಳನ್ನು ಸದಾಚಾರಕ್ಕೆ, ಸಮಾನತೆಗೆ, ಸಾಮರಸ್ಯಕ್ಕೆ, ಪೂರ್ಣತೆಗೆ ಬಳಸಬೇಕೇ ಹೊರತು ದುರಾಚಾರ, ಅಸಮಾನತೆ, ವೈರತ್ವ , ಅಪೂರ್ಣತೆಗಳಿಗೆ ಅಲ್ಲ ಎನ್ನುತ್ತಾರೆ. ಓದು, ಕೇಳಿಕೆ, ಹೇಳಿಕೆ, ವಿಮರ್ಶೆ ಎಲ್ಲವೂ ಕಡೆಗೆ ಬಾಳ್ವೆಯೊಂದಿಗೇ ತಳಕು ಹಾಕಿಕೊಳ್ಳಬೇಕು ಎಂಬುದೇ ಲೋಹಿಯಾ ಅವರ ಖಚಿತ ನಿಲುವು.

**ಡಾ॥ ರಾಮಲಿಂಗಪ್ಪ ಟಿ. ಬೇಗೂರು**
'ಗುಣ', ನಂ. ೩೯, ೨ನೇ ಅಡ್ಡರಸ್ತೆ, ೧೦ನೇ ಮುಖ್ಯರಸ್ತೆ
ಉಲ್ಲಾಳ ಮುಖ್ಯರಸ್ತೆ, ಮುನೇಶ್ವರ ನಗರ
ಬೆಂಗಳೂರು – ೫೬೦ ೦೫೬



## ಬದುಕು

ಹಲ್ಲಿಯು ಹಿಂದೆ ಇದೆ ಎಂಬುದ ಅರಿಯದೆ
ಚಿಟ್ಟೆಯೇನೋ ಹಾರುತಿದೆ ಬೆಳಕಿನೆಡೆಗೆ
ಅರೆಕ್ಷಣದೊಳಗೆ ಬದುಕು ಕತ್ತಲೆಡೆಗೆ !

**ಶ್ರೀನಿವಾಸ ಕುಂಡಂತಾಯ**
ಬೆಂಗಳೂರು – ೫೬೦ ೦೯೪



ಲೇಖಕರು : ಟಿ. ಎಸ್. ಗೋಪಾಲ್

# ನವಕರ್ನಾಟಕ ಕನ್ನಡ ಕಲಿಕೆ ಮಾಲೆ

## (20 ಶೀರ್ಷಿಕೆಗಳು)




ಸಮಾನಾರ್ಥ ಪದಕೋಶ ₹35

ವಿರುದ್ಧಾರ್ಥ ಪದಕೋಶ ₹35

ನಾನಾರ್ಥ ಪದಕೋಶ ₹50

ತತ್ಸಮ-ತದ್ಭವ ಪದಕೋಶ ₹40

ಕನ್ನಡ ನುಡಿಗಟ್ಟುಗಳು ₹40

ಪತ್ರಲೇಖನ ₹35

ಕನ್ನಡ ವ್ಯಾಕರಣ ಪದಕೋಶ ₹55

ಕನ್ನಡವನ್ನು ತಪ್ಪಿಲ್ಲದೆ ಓದಿ ಬರೆಯುವುದು ಹೇಗೆ? ₹30

ಪ್ರಬಂಧ ಬರೆಯುವುದು ಹೇಗೆ ? ₹45

ಲೇಖನ ಚಿಹ್ನೆಗಳು ₹35

ಕನ್ನಡ ಛಂದಸ್ಸು ₹40

ಕನ್ನಡ ಪದಸಂಪತ್ತು ₹35

ಹಳಗನ್ನಡವನ್ನು ಓದಿ ತಿಳಿಯುವ ಬಗೆ ಹೇಗೆ? ₹45

ಗಾದೆಮಾತು ಅರ್ಥ-ವಿಸ್ತರಣೆ ₹50

ಸಂಧಿ-ಸಮಾಸ ₹40

ಹೊಸಗನ್ನಡ ಕವಿಸೂಕ್ತಿಗಳು ₹55

ಹಳಗನ್ನಡ ಸುಭಾಷಿತಗಳು ₹45

ಕನ್ನಡ ಕವಿಪರಿಚಯ ಕೋಶ ₹55

ಮೂರು ವರ್ಷದ 'ಹೊಸತು' ಚಂದಾದಾರರಿಗೆ 20% ಸೋಡಿ. ಇತರರಿಗೆ 10% ಸೋಡಿ. ನಿವ್ವಳ ₹ 250ಕ್ಕಿಂತ ಕಡಿಮೆ ಮೊಬಲಗಿನ ಬೇಡಿಕೆಗಳಿಗೆ ಅಂಚೆವೆಚ್ಚ ₹ 40 ಪ್ರತ್ಯೇಕ

ಹಣವನ್ನು ಡಿ.ಡಿ., ಎಂ.ಓ. ಮೂಲಕ ಕಳಿಸಿ ಅಥವಾ ನಮ್ಮ ಪುಸ್ತಕ ಮಳಿಗೆಗೆ ಭೇಟಿ ನೀಡಿ

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**

11, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ 5159, ಕುಮಾರ ಪಾರ್ಕ್ ಪೂರ್ವ ಬೆಂಗಳೂರು - 560 001. ಫೋನ್ : 080-22161900/14 ಮೊಬೈಲ್ : 9480686858
e-mail : navakarnataka@gmail.com http://navakarnataka.blogspot.in

ಆನ್‌ಲೈನ್ ಮೂಲಕವೂ ಲಭ್ಯ  Shop Online www.navakarnataka.com

ಶಾಖೆಗಳು : ಬೆಂಗಳೂರು ✆ 22203106 :: ಮಂಗಳೂರು ✆ 2441016 ✆ 2425161 :: ಮೈಸೂರು ✆ 2424094 :: ಕಲಬುರಗಿ ✆ 224302




# ವ್ಯಸ್ತ

■ ಡಾ॥ ವಿನಯಾ ಒಕ್ಕುಂದ

ಶಾಂತೇರಿ ಸರಕಾರಿ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಗಣಿತ ಕಲಿಸುವ ಮಾಸ್ತರನೂ ಸ್ವ ಆಸಕ್ತಿಯಿಂದ ಕ್ರೀಡಾ ಮಾಸ್ತರನೂ ಆಗಿರುವ ಬಾಲಚಂದ್ರ ಆವತ್ತು ಬೆಳಬೆಳಗೇ ಚೂರು ಹರಿಬರಿಯಲ್ಲಿದ್ದ. ಏಳುವಾಗಲೇ ಮೊಣಕಾಲು ಅಳುಕಿದಂತಾಗಿತ್ತು. ನಿನ್ನೆ ಮಕ್ಕಳೊಂದಿಗೆ ವ್ಹಾಲಿಬಾಲ್ ಆಡುವಾಗಲೂ ತನ್ನ ದೇಹ, 'ಮಳ್ಳ, ಹಸೀ ಮಳ್ಳ ಈಗಲೂ ಆಗಿನ ಹಾಂಗ ಜಿಗಿಯಾಕಾದೀತ' ಅಂತ ಕಿಸಕ್ಕನೆ ನಕ್ಕಹಾಂಗಿತ್ತು. ಆದರೆ ೫ನೇ ಕ್ಲಾಸಿನ ಸರೋಜಾ ಟೀಚರು ಕ್ಲಾಸಿನೊಳಗಿಂದಲೇ ತನ್ನನ್ನು ನೋಡುತ್ತಿದ್ದಾರೆಂದು ಸುಪ್ತೇಂದ್ರಿಯಕ್ಕೆ ಅನ್ನಿಸಿದ್ದೇ ತಡ, ಇನ್ನೂ ಪರಾಯದ ರಖಮು ಶೇಖರಣೆಯೇ – ಎಂಬಂತೆ ಆಡಿಯಾಗಿತ್ತು. ಎಳೆಯಂದಿನಲ್ಲಿ ಆಯಿ, "ಗನಾದ ತಿಂಬೂಕಾಗದರೆ, ಮೂವತ್ತಕ್ಕೇ ಮುಪ್ಪು ಕೂಡಕಂತಿದ ಕಾಂಬೆ. ಆಗೆ ಅಯ್ಯೋ ಅಂದ್ರೂ ಆಯಿ ಇರೂದಲಾ ನೋಡ್" ಎಂದು ಹೆದರಿಸುತ್ತಿದ್ದುದು ನೆನಪಾಯಿತು. ಆಯಿ ತಿಳಿದು ಹೇಳಿತ್ತೋ ತಿಳಿಯದೇ ಹೇಳಿತ್ತೋ. ಅಂತೂ ತನಗೆ ಮೂವತ್ತು ಮುಟ್ಟುವುದರಲ್ಲೇ ಗಟ್ಟಿಯಿದ್ದ ಆಯಿ ಹೋಗಿಯಾಗಿತ್ತು. ಆಯಿ ನೆನಪಾಗಿದ್ದಕ್ಕೋ ಮನಸ್ಸಿಗೆ ಮಂಜುಗಡ್ಡೆಯ ಬಿಗಿತ. ನಿನ್ನೆ ರಾತ್ರಿ ಗೆಳೆಯನ ಜೊತೆ ಹೋಗಿ ಬಂದಿದ್ದಕ್ಕೆ ಬೆಳಗಿಗೆ ಇನ್ನೂ ಹ್ಯಾಂಗೋವರ್ ಇದ್ದಂತಿತ್ತು. "ಆದಿತ್ಯವಾರ ಪಾರ್ಟಿ ಪಂಗಡ ಮಾಡಿದ್ರೆ, ಸೋಮ್ವಾರದ ಬೆಳಗಿಗೆ ಇದೇ ಕಥೆ. ಹೇಳ್ರಿ. ಕೇಳುವವರ್‍ಯಾರ್ ನನ್ನ ಮಾತ?" – ಬಾಲಚಂದ್ರನ ರಾಮಿಯ ಉತಾವಳಿ ಸುರುವಾಗಿತ್ತು. ನಸುಕಿನಲ್ಲೆದ್ದು ಅಡಿಗೆ ಮುಗಿಸಿ, ಅಂಗಳದ ಕಸ ಹೊಡೆದು ರಂಗೋಲಿಯಿಡಲು ಲುಟುಪುಟು ಓಡಿಯಾಡುತ್ತಿದ್ದ ಹೆಂಡತಿಯನ್ನು ತಪ್ಪಿತಸ್ಥನಂತೆ ಹುಳ್ಳಹುಳ್ಳಗೆ ನೋಡಿದ. 'ಏನು ಮಾರಾಯಳ ನಿನ್ನ ಪಿರಿಪಿರಿ? ಟೈಮ್ ಇದೆ ರೆಡಿ ಆಗುವಾ ಅಂ' ಅಂತೇನೋ ಸಂತನ ಹಾಗೆ ಸಮಾಧಾನ ಮಾಡಲು ಹೊರಟನಾದರೂ, ಚಪಾತಿ ಹೊರಳಿಸುತ್ತಿದ್ದವಳು ದುರುಕ್ಕನೇ ನೋಡಿದಳೆನಿಸಿ, ಗಪ್ಪಾಗಿ ಮುಂದಿನ ಗೇಟಿನಲ್ಲಿ ಸಿಕ್ಕಿನಿಂತಿದ್ದ ಪೇಪರನ್ನಾದರೂ ಒಳಗೆ ತರುವಾ ಅಂತ ಆ ಕಡೆ ನಡೆದ.

ರಮ್ಯ ಅಂತ ಚೆಂದದ ಹೆಸರು ಇವನ ಬಾಯಲ್ಲಿ ರಾಮಿಯಾಗಿ, ರಮಿಯಾಗಿ ಕೆಲವೊಮ್ಮೆ ಕೆಲವೊಮ್ಮೆ ಆ ಆ ಪಿಸುಮಾತಿನಲ್ಲಿ ರಮ್ಮಿಯಾಗಿ ಬದಲಾಗುವುದೆಲ್ಲ ಇಷ್ಟವೇ ಆದರೂ... ಹೀಗೆ, ಬೆಳಗ್ಗೆದ್ದು... ಬ್ರಹ್ಮರಾಕ್ಷಸ ಬಾಯ್ತೆಗೆದು ನುಂಗಲು ನಿಂತಾನೆಂಬಷ್ಟು ಬುಗಿಲು ಹೊಕ್ಕಾಡುವಾಗ, ನುಲಿಯುವುದು ಕೆಟ್ಟ ಸಿಟ್ಟು ತರಿಸಿಬಿಡುತ್ತಿತ್ತು. ಇಷ್ಟಕ್ಕೂ ರಮ್ಯ ಇವತ್ತು ಸಿಡಿಮಿಡಿ ಅನ್ನುತ್ತಲೇ ಇದ್ದಳು. ಅದಕ್ಕೆ ಕಾರಣ ಬಾಲಚಂದ್ರನಾಗಲಿ ಮಗ ಪ್ರಮಥನಾಗಲಿ ಆಗಿರಲಿಲ್ಲ. 'ಇಷ್ಟೊರ್ಸಕ್ಕಂತೂ ದೇವರ ಪುಣ್ಯದಲಿ ಅವಂದೇನೂ ತಾಪತ್ರಯ ಇಲ್ಲ' – ಇದು ಮಗನ ಬಗ್ಗೆ ಅವಳು ಮನಸ್ಸಿನಲ್ಲಿ ಅಚ್ಚು ಹಾಕಿಟ್ಟುಕೊಂಡ ಸರ್ಟಿಫಿಕೇಟು. ಹಾಗಂತ ಅವಳು ಅದನ್ನು ಯಾರ ಮುಂದೂ ಹೇಳಿಕೊಳ್ಳುವುದಿಲ್ಲ. ಹೋಗಲಿ, ತನಗೆ ತಾನು ಹೇಳಿಕೊಳ್ಳಲೂ ಹೆದರುತ್ತಾಳೆ. ಶಾಲೆಯ ಮಕ್ಕಳಿಗೆ ಸಾಯನ್ಸ್ ಕಲಿಸುವ ಟೀಚರಾದ್ರೂ, ಕಲ್ಲು–ಹಳ್ಳು ಭವಿಷ್ಯ ಬದಲಿಸ್ತವೆ ಅನ್ನುವುದು ಕೇಳಿದಾಗೆಲ್ಲ ಮೈ ಉರಿ ಎದ್ದಂತೆ ಮುನಿಸಿಕೊಂಡರೂ, ಸಾಯನ್ಸ್ ಕಲ್ಸೋದಂದ್ರೆ ಮಕ್ಕಳ್ನ ವಿಚಾರವಂತರನ್ನಾಗಿ ಮಾಡೋದು – ಅಂತ ಮೇದಾರ್ ಸರ್ ಯಾವತ್ತೂ ಹೇಳ್ತಿರುತ್ತಿದ್ದ – ಆ ದಿನಗಳನ್ನವಳು ಮರೆತಿಲ್ಲವಾದರೂ; ಮನಸ್ಸಿನ ಮೂಲೇಲಿ ಜಪ್ಪು ಹಾಕಿ ಕೂತಿದೆ ಅಜ್ಜಿ ಹೇಳ್ತಿದ್ದ 'ಮನಸರ ಕಣ್ಣಿಗೆ ಕಲ್ಲಂತ ಕಲ್ಲ ಉಡೀತಿದ' ಅನ್ನೋ ಮಾತು. ಪ್ರಮಥ ಕೂಸಿದ್ದಾಗಿನಿಂದ ಇಲ್ಲೀತನಕ, ಹೈಸ್ಕೂಲಿನ ಹಾದಿ ಹತ್ತಿದ ಮೇಲೂ ಅದೇ ಮುಚ್ಚಟೆಯಲ್ಲೇ ಬೆಳೆಸಿದ್ದಾಳೆ. ಅವನು ತಕರಾರುಗಳಿಲ್ಲದೆ ಟ್ಯೂಶನ್ನು, ಹೋಂವರ್ಕು, ಊಟ, ಆಟ ಅಂತೆಲ್ಲ ತಣ್ಣಗೆ ತೊಡಗಿಕೊಂಡು ದಿನ ಕಳೆವಾಗ 'ತಾಯಿ ಕಣ್ ನಾಯಿ ಕಣ್, ಥೂ ಹಾಳಾಗ್ಲಿ' ಅಂತ ತನ್ನೊಳಗಿನ ಧನ್ಯತೆಯ ಭಾವವನ್ನು ತಾನೇ ಅದುಮಿಟ್ಟು ಗಲ್ಲಗಲ್ಲ ಬಡಿದುಕೊಳ್ಳುತ್ತಾಳೆ.

ಈಗೀತಿ ಬಾಲಚಂದ್ರನಿಗೆ ತಲಿಬ್ಯಾನಿ ಅನ್ನಿಸುತ್ತಿದ್ದುದು ರಮ್ಯಳ ಪಿರಿಪಿರಿ ಸ್ವಭಾವ. ಸಣ್ಣಪುಟ್ಟ ಸುಳ್ಳಾಡಲೂ ಹಕ್ಕು ಕೊಡದವಳ ಹಾಗೆ, ನನ್ನ ದೇಹದೊಳಗೆಲ್ಲೋ ಆ್ಯಪ್ ಕನೆಕ್ಟ್ ಮಾಡಿಬಿಟ್ಟಿದ್ದಾಳೋ ಅನ್ನುವ ಹಾಗೆ ಈ ಭೂಮಂಡಲದ ಯಾವುದೇ ಭಾಗದಲ್ಲಿ ತಾನಿದ್ದರೂ "ಇಷ್ಟು ಹೊತ್ತಿಗೆ ಇದೇ ಮಾಡುತ್ತಿದ್ದೆ ಇದೇ ಯೋಚನೆಯಲ್ಲಿದ್ದೆ, ಇದೇ ತಿಂತಿದ್ದೆ" ಅಂತೆಲ್ಲ ಹೇಳುವಷ್ಟು ಪರಿಣಿತಳಾಗಿದ್ದಳು. ಬಾಲಚಂದ್ರನಿಗೆ ಸತತ, ಹೆವಿ ವೋಲ್ಟೇಜ್ ಲೈಟಿನ ಫೋಕಸ್ಸಿನಲ್ಲೇ ಗಾಡಿ ಓಡಿಸಬೇಕಾದವನ ಕಿರಿಕಿರಿ. 'ಎಂತ ಮಾರಾಯ್ತಿ, ಮಾಸ್ತರಿಕಿ ಬಿಡು, ಶಾಸ್ತ್ರ ಹೇಳೋ ಅಂಗಡಿನಾರೂ ತೆಗಿ' ಎಂದೋ, "ಥೊ ಥೊ ಅಸಾಧ್ಯ ಹೆಣ್ಣು ಮಾರಾಯ್ತಿ ನೀನು" ಎಂದೋ ನಗಿಸಿದಂತೆ – ಹೊಗಳಿದಂತೆ ನಟಿಸಿ ಸದ್ಯ ಬೀಸುವ ಕಲ್ಲೊಡೆತ ದಾಟುತ್ತಿದ್ದ. ಇಷ್ಟೇ ಆಗಿದ್ದರೆ ಪರವಾಗಿರಲಿಲ್ಲ. ಈಗೀಗ ಅವಳಿಗೆ ಸದಾ ವಟಗುಡುವ ಕಾಯಿಲೆಯೊಂದು ಜೋಡಾಗಿತ್ತು. ೨೪x೭ ಎಂದೋ, ಒಡಕು ರೇಡಿಯೋ ಎಂದೋ, ವಿವಿಧಭಾರತಿ ಎಂದೋ – ಅಣಕಿಸಿದರೂ, 'ಒಂದೀಟ ಸುಮ್ನ ದೇವರ ಹಾಂಗ ಬಾಯ್ಮುಚ್ಚಕಂಡ ಕೆಲ್ಸ ಮಾಡು ನೋಡುವಾ' ಎಂದು ಹಂಗಿಸಿದರೂ; ಸ್ವತಃ ರಮ್ಯ ತನ್ನ ನಾಲಿಗೆಯನ್ನು ಒಳಗಿಟ್ಟುಕೊಂಡಿರಬೇಕೆಂದು ಧೇನಿಸಿದರೂ ಏನೋ ಹದ್ದು ಮೀರಿದಂತೆ ಆಗುತ್ತಿತ್ತು. ಪುಣ್ಯಕ್ಕೆ ಶಾಲೇಲಿ ಮಂದೀಲಿ ಹಾಗೇನೂ ಆಗದೇ ತಾನೊಬ್ಬಳೇ ತನ್ನ ಮನೆಯಲ್ಲಿದ್ದಾಗ ಮಾತ್ರ ನಿಯಂತ್ರಣ ಮೀರುತ್ತಿದೆ ಅಂತ ಅವಳು ಸ್ವತಃ ಕಂಡುಕೊಂಡೂ ಇದ್ದಳು.

ಮಗನ ಸ್ಕೂಲಿನ ಅನುಕೂಲಕ್ಕೆಂದು ಸಿಟಿಯಲ್ಲಿ ಬಾಡಿಗೆ ಮನೆ ಮಾಡಿಯಾಗಿತ್ತು. ಈ ಬಾಡಿಗೆ ಮನೆಗಳಿಗೋ ಮಾರುದ್ದದ ಗಾಜಿನ ಕಿಡಕಿಗಳು. ಒಳಗೆ ಕೆಲಸ ಮಾಡುತ್ತ ಹೊರಜಗುಲಿಯ ಆಗುಹೋಗುಗಳಿಗೂ ಕಣ್ಣಾಗುವ ಆಸ್ಪದ ಕೊಡುವ ಕಿಡಕಿಗಳು ಅವಳಿಗೆ ಪ್ರೀತಿಯ ಜಾಗೆಗಳು. ಪುರುಸೊತ್ತು ಇದ್ದಾಗೆಲ್ಲ ಅವಳು ಕಿಡಕಿಗೆ ಕಣ್ಣು ಕೀಲಿಸಿ ಬಿಡುತ್ತಾಳೆ. "ಮಾರಾಯ, ನಿನ್ನ ಟ್ಯಾಪು ಅತ್ತಗಿಡು. ಒಂದು ಹತ್ತು ಮಿನೀಟು ನೋಡ್ತಾ ಕೂತ್ಗ. ಎಂತೆಂಥ ಸಿನಿಮಾ... ನಾಟಕ... ವಾಹ್" ಅಂತ ಮಗ ಮನೇಲಿಲ್ಲದ ಹೊತ್ತಲ್ಲಿ ಗಂಡನಿಗೆ ಟಿಪ್ಸ್ ಕೊಟ್ಟಿದ್ದಾಳೆ. ಮುಂಗುಲಿ, ಹೆಗ್ಗಣ, ನಾಯಿ–ಬೆಕ್ಕು, ಹಳದಿ ಗುಬ್ಬಿ ನೋಡೋದು ಮುಂದಿನ ಮನೆ ಕಿಡಕಿ ಬೆಳಕಲ್ಲಿ ಅವರೀಗ ಏನ್ಮಾಡ್ತಿದಾರೆ ಅಂತ ಊಹಿಸೋದು... ಮನೆಕೆಲ್ಸ್ ಮಾಡ್ತಾನೇ ಈ ಉಸ್ತುವಾರಿ ಮಾಡುವ ಹೆಂಡತಿಯ ಉಮೇದಿಯೇನೂ ಬಾಲಚಂದ್ರನಿಗಿರಲಿಲ್ಲ. ಅಷ್ಟೇ ಅಲ್ಲ, ರಮ್ಯಳಿಗೆ ಈ ಕಿಡಕಿಗೆ ಕಣ್ಣು ಕೂಡಿಸೋ ಚಾಳಿ ಕಮ್ಮಿಯಾದರೆ ಮೂರ್ಹೊತ್ತೂ ವಟವಟ ಅಂದುಕೊಳ್ಳುತ್ತಲೇ ಇರುವ 'ವಟಸಾವಿತ್ರಿ ಮಂತ್ರ'ವೂ ಕಮ್ಮಿಯಾದೀತು ಎಂಬ ಅಂಬೋಣ ಅವನದು. ಆದರದನ್ನು ಚಾಲ್ತಿಗೆ ತರುವ ಯಾವ ಬೆಳಕಿಂಡಿಯೂ ಕಾಣದೇ ಸುಮ್ಮನಿದ್ದ.

ಬಾಲಚಂದ್ರನ ನಿರೀಕ್ಷೆಯನ್ನೂ ಮೀರಿ ಅವನು ಹಾಗೆ ಬುದ್ಧಿ ಹೇಳುವ ಗಂಭೀರ ಸದವಕಾಶವೊಂದು ಒದಗಿಬಿಟ್ಟಿತ್ತು. ಮೊನ್ನೆ, ಮೊಕ ಉಬ್ಬಿಸಿಕೊಂಡೇ ಇದ್ದವಳನ್ನ ಮಗ ಮಲಗಿದ ಮೇಲೆ ಕೇಳಿದರೆ, ಮೊದಮೊದಲು ತೇಲಿಸಿ ಹಾಕಲು ಪ್ರಯತ್ನಪಟ್ಟಳಾದರೂ, ಸುಳ್ಳು ಅಭ್ಯಾಸವಿಲ್ಲದ ಅಪರೂಪದ ಪ್ರಾಣಿ ಬಾಯ್ಬಿಡುತ್ತಾಳೆಂಬ ಅವನ ಲೆಕ್ಕ ತಪ್ಪಲಿಲ್ಲ. ಅದೇ ಆ ಮುಂದಿನ ಮನೆ ಮುದುಕ, ಮೈತುಂಬ ಗಂಧ ಕೆಂಪಿನ ಪಟ್ಟೆ ಹೊಡಕೊಂಡು ಎಳೆಬಿಸಿಲಿನ ಹದದಲ್ಲಿ ಜನಿವಾರದಲ್ಲಿ ಬೆನ್ನು ತುರಿಸಿಕೊಳ್ಳುತ್ತ ನಿಲ್ಲುವವನು, ರೇಲ್ವೇ ಡಿಪಾರ್ಟಮೆಂಟಿನಲ್ಲಿ ನೌಕರಿ ಮಾಡಿ ರಿಟೈರ್ಡ್ ಆದದ್ದಕ್ಕೋ ಏನೋ ಹಗಲು ಹನ್ನೆರಡು ತಾಸೂ ಮನೆ ಮುಂದಿನ ಬೀದಿಯಲ್ಲಿ ಉದ್ದಕ್ಕೆ ನಡೆದಾಡುವವನು ಹೊಸ ಉಸಾಬರಿ ಶುರು ಮಾಡಿದ್ದನಂತೆ. ಅವನು ಮನೆ ಬಾಗಿಲಿಗೆ ಪ್ರಧಾನಿ ಮೋದಿಯ ಚಿತ್ರ ಬಡಿದುಕೊಂಡಿದ್ದಾಗಲಿ, ಈಗೀಗ ಶಾಸ್ತ್ರ ಹೇಳಾಕೂ ಶುರು ಮಾಡಿದ್ದಾನೆ ಎನ್ನುವುದಾಗಲಿ ರಮ್ಯಳಿಗೆ ಸಂಬಂಧಿಸಿದ ಸಂಗತಿಯಾಗಿರಲಿಲ್ಲ. ಅವನು, ಅವಳ ಪ್ರೀತಿಯ ಹಳದಿ ಗುಲ್‌ಮೊಹರ್ ಗಿಡದ ಬುಡಕ್ಕೆ ನಿಂತು ಉಟ್ಟಿದ್ದ ಪಂಚೆ ಎತ್ತಿ ತನ್ನ 'ಅದನ್ನು' ಹಿಡಿದು ಗಲಗಲಿಸಿಕೊಳ್ಳುತ್ತಿದ್ದ. ವಾಯಕ್ ಅನ್ನಿಸಿತ್ತು ಅವಳಿಗೆ. ಹಾಳಾಗಲಿ, ಎಂಥದೋ ಆಕಸ್ಮಿಕ ಇರಬಹುದು ಅಂತ, ಆ ಕಡೆ ನೋಡದಿದ್ದರಾಯಿತು ಅಂತ ಸಮಾಧಾನಿಸಿಕೊಂಡಿದ್ದೇ ಬಂತು. ಅದನ್ನು ಬಾಲಚಂದ್ರನಿಗೆ ಹೇಳದೇ ಇರಲಾಗಲೀ, ಪಾಪದ ಮುದುಕ ಬಿಡು ಅಂತ

ನಿರ್ಲಕ್ಷಿಸಲಾಗಲಿ ಅವಳಿಗೆ ಸಾಧ್ಯವಾಗಲಿಲ್ಲ. ಮಣ್ಣು ಮಣ್ಣು ಬಿಳಿ ಮುಂಡ ಬನೀನು ಹಾಕಿಕೊಂಡು ಈ ಜಾಗೀರೇ ತನ್ನದು ಅನ್ನೋ ಹಾಗೆ ಎಲ್ಲರ ಮನೆ ಮುಚ್ಚಿದ ಬಾಗಿಲುಗಳನ್ನು ತೆರಗಣ್ಣಿನಲ್ಲಿ ನೋಡ್ತಾ, ಯೋಗಾಸನದ ಯಾವುದೋ ಭಂಗಿಯಲ್ಲಿ ಕೈ ಎತ್ತುತ್ತಲೋ ಅಗಲಿಸುತ್ತಲೋ ಓಡಾಡುವವನನ್ನು ಬಿಟ್ಟಾಕುವು ದಾದರೂ ಹೇಗೆ? ಅದರಲ್ಲೂ ಈಗೊಂದು ಮೂರು ತಿಂಗಳ ಹಿಂದೆ ನಡೆದ ತವರೂರಿನ ಘಟನೆ ಅವಳನ್ನು ಬದಲಿಸಿ ಬಿಸಾಕಿದೆ. ಅವ್ವ ಇಲ್ಲದ ಮನೇಲಿ ಅಪ್ಪನೊಂದಿಗೆ ಮನೆ–ತೋಟದ ಜವಾಬುದಾರಿ ಹೊತ್ತು ಕಾಲೇಜು ಕಲೀತಿರೋ ತಂಗಿ ರಂಜನಾ, ತನ್ನ ಸಹಪಾಠಿ ಸಯ್ಯದ್ ಜೊತೇಲಿ ದಣಪೇಲಿ ನಿಂತು ಮಾತಾಡ್ತಿದ್ದಳಂತೆ. ಅಷ್ಟಕ್ಕೆ ಗುಂಪುಗೂಡಿಕೊಂಡು ಬಂದ ಮಂದಿ, ಮನೆಯಂಗಳಕ್ಕೆ ನುಗ್ಗಿ ರಿಟೈರ್ಡ್ ಮಾಸ್ತರ ಅಪ್ಪನಿಗೆ ಬಾಯಿಗೆ ಬಂದ ಹಾಗೆ ಆಡಿದರಂತೆ. ಸುದ್ದಿ ಕೇಳಿ ಊರಿಗೋಡಿದ ರಮ್ಯಳಿಗೆ ಬಾಯಿಸತ್ತ ಹಾಗಾಗಿತ್ತು. ಅವಳು ರಂಜನಾಳನ್ನು ಪುಸಲಾಯಿಸಿಯೂ ಕೇಳಿದ್ದಳು. 'ಅಮ್ಮನಾಣೆ, ಎಂಥದೂ ಇಲ್ಲಕ್ಕ. ಸಯ್ಯದ್ ಅವನ ಮಾವನ ಮಗಳು ರೋಶನಿಯನ್ನು ಪ್ರೀತಿಸ್ತಾನೆ. ಯಾಕೋ ಊರಲ್ಲಿರೋಕೆ ಕಾಲೇಜಿಗೆ ಹೋಗಾಕೆ ಮನಸ್ಸೇ ಬರ್ತಿಲ್ಲೇ...' ಅಂತ ಅತ್ತುಬಿಟ್ಟಿದ್ದಳು. ಹಿರೀಕರ ನೆಲ ಬಿಟ್ಟು ಬರಲಾರದೆ, ಅಲ್ಲೂ ನೆಮ್ಮದಿಯಿಂದ ಇರಲಾರದೆ ಅಪ್ಪ, ತಂಗಿ ಒದ್ದಾಡುತ್ತಿದ್ದುದು ರಮ್ಯಳಿಗೆ ಗಳಿಗೆ ಗಳಿಗೆಗೂ ಬಾಧಿಸುತ್ತಿತ್ತು. ಏನೂ ಇಲ್ಲದೆ ಹುಡುಗಿಯನ್ನು ಹಾಂಗೆ ದಬಾಯಿಸಿದರಂತಲ್ಲ, ಅದೂ ಗುರ್ತು ಪರಿಚಯದವರೇ. ಅರೆಬೆಂದ ಪಾರಿವಾಳದ ಹಾಗೆ ಪತರು ಗುಟ್ಟುತ್ತಿದ್ದ ತಂಗಿಯ ಮೈ ಈಗಲೂ ತನ್ನ ಒಡಲಿಗೆ ಹತ್ತಿಕೊಂಡಂತೆ ಕಲಮಲ ಕಾಡುತ್ತಿತ್ತು. ಬಾಲಚಂದ್ರನ ಪ್ರಕಾರ, ಆಗಿಂದ ಇವಳ ಈ ತನಗೆ ತಾನೇ ಗೊಣಗಿ ಕೊಳ್ಳುವ ವರಾತ ಹೆಚ್ಚಿದೆ. ತನ್ನ ಕಡೆ ಹೋಗಲಿ, ಮಗನ ಕಡೆಗೂ ಗಮನ ಕಮ್ಮಿಯಾಗಿದೆ. 'ಅಮ್ಮಾ, ಊಟಕ್ಕೆ ಹಾಕ್ತೀಯಾ?' ಎಂದ ಮಗನಿಗೆ 'ಹಾಕ್ಕೊಂಡು ಉಣ್ಣು ಮಗಾ' ಅಂತ ಜಪ್ಪಿಸಿ ಕೂತುಬಿಟ್ಟಿದ್ದು ಅವರ ಜೀವಮಾನದಲ್ಲೇ ಮೊದಲು. ಆಗಾಗ, 'ರಂಜೂ ರಂಜೂ' ಅಂತಾನೋ; 'ನಾ ಇಂವೆ ಅಮ್ಮ ಇಂವೆ ಹಿದ್ರಬ್ಯಾಡ' ಅಂತಾನೋ ರಾತ್ರಿಯ ನಿದ್ದೆಯಲ್ಲಿ ಬಡಬಡಿಸುವುದಂತೂ ನಡೆದೇಬಿಟ್ಟಿತ್ತು. 'ನೀ ಏನ ಮಳ್ಳಿಯೇನೇ, ಏನ ಆಗ್ಬಾರ್ದ ಆಯ್ತು ಅಂತ ಹೀಂಗ ಮಾಡ್ತೀ ನೀ?' ಅರ್ಧ ಬೇಸರ–ಅರ್ಧ ಕೋಪದಿಂದ ಬಾಲಚಂದ್ರ ಹೆಂಡತಿಯನ್ನು ಗದರಿದ್ದೂ ಇದೆ. 'ನೀ ಹಿಂಗೆ, ಊರಂದೆಲ್ಲ ತಲಿಮೇಲೆ ಹುತ್ಕಾ. ನಾ ಸನ್ನೇಸಿಯಾಗ ದೇಸಾಂತ್ರ ಹೋಗೂದೇ' – ಅನ್ನುವ ಅವನ ಯಾವ ಬೇಡಿಕೆಯನ್ನೂ ಅವಳು ಮನಸಾರೆ ಪೂರೈಸಿಲ್ಲ.

ಇಂತಹ ದಿನಗಳಲ್ಲೇ – 'ಬೆಳಗಾದ್ರೆ ಹಾಳ್ ಮುದ್ಕನ ಮೊಕ ನೋಡ್ಬೇಕ ಥೊ' ಎಂಬ ಅವಳ ಗೊಣಗಾಟ ಬಾಲಚಂದ್ರನಿಗೆ ಅಕ್ಷರಶಃ ಸಿಟ್ಟು ಬರುವಷ್ಟು ಜಾಸ್ತಿ ಯಾದದ್ದು. 'ನಿಮ್ಮ ಕಾಲ ಸಮಾ ತೊಳೀರಿ. ಸೋಫಾ ಹಂಗ್ಯಾಕ ಹರವೀರಿ?' ಇಂತಹ ನಿರಂತರ ಉಪದ್ರ ಸಹಿಸಿಕೊಂಡಿದ್ದವನಿಗೆ ತನ್ನ ಆ ಸಿಟ್ಟು ಹೊರ ಹಾಕಲೂ ಇದೊಂದು ಅವಕಾಶ ಸಿಕ್ಕಂತಾಗಿತ್ತು. ಆದರೆ ಮೊನ್ನೆಯಷ್ಟೇ ನಡೆದ ಒಂದು ಘಟನೆಗೆ ಬಾಲಚಂದ್ರನೂ ಮೆಟ್ಟಿಬಿದ್ದಿದ್ದ. ಅದು ರಾತ್ರಿ ೮ರ ಹೊತ್ತು. ಪಕ್ಕದ ಮನೆಯವರು ಮನೆ ರಿಪೇರಿಗೆ ಅಂತ ತಂದು ರಸ್ತೆಯ ದಂಡೆಗೆ ಹಾಕಿದ್ದ ಚೀಪುಗಲ್ಲು ಉಸುಕುಗಳನ್ನು ಮುದುಕ ಮತ್ತು ಅವನ ಮಜಬೂತ್ ಮಗ ಚೀಲ ತುಂಬಿ ಒಯ್ದಿದ್ದರಂತೆ. ಅದರಲ್ಲೂ ಪಾಟಿಕಲ್ಲುಗಳನ್ನು ಮುದುಕ ಪೇಪರಿನ ತುಂಡೇನೋ ಎನ್ನುವಷ್ಟು ಸಲೀಸಾಗಿ ಭುಜಕ್ಕೇರಿಸಿಕೊಂಡು ದಪದಪ ಹೆಜ್ಜೆ ಇಟ್ಟುಕೊಂಡು ನಡೆದಿದ್ದು ರಮ್ಯ ಹೇಳುವ ಹಾಗೆ – 'ಜೈ ಬಾಹುಬಲಿ' – ಅಂತ ಶಿಳ್ಳು ಹಾಕುವಷ್ಟು ರೋಚಕವಾಗಿತ್ತಂತೆ. ಮಾರನೆ ಬೆಳಗು ಬಾಗಿಲ ಕಸ ಹೊಡೀವಾಗ 'ನಂ ಕಲ್ಲು, ನಂ ಉಸುಕು...' ಅಂತ ಉದೀರಾಗ ಹಾಡ್ತಾ ತನ್ನನ್ನೇ ಮುಕ್ಕುವಂತೆ ನೋಡುತ್ತಿದ್ದ ಮುದುಕಿಗೆ ರಮ್ಯಾ ಮಾಸ್ತರಣಿಯ ಗತ್ತಿನಲ್ಲೇ ಹೇಳಿಬಿಟ್ಟಿದ್ದಳು. 'ಹಿಂಗಿಂಗ, ನೋಡ್ರಿ ಹೋಗ್ರಿ'. ಅವರವರಿಗೆ ರಂಪಾಟ ಹತ್ತಿ ಕಡೆಗೂ ಕಲ್ಲು–ಉಸುಕು ಸಾಬೀತು ಬಂದು ಸೇರಿದ್ದವು. 'ಮುದುಕಗೆ ತನ್ನ ಮೇಲೆ ಅನುಮಾನವೋ ಏನೋ, ತೆರಗಣ್ಣಲಿ ನೋಡೂದ ಬಗಿಲೆ ಹಿಚ್ಚಾಗಿದ' ಅನ್ನೋ ಗೊಣಗು ರಮ್ಯಳ ನಾಲಿಗೆಯಲ್ಲಿ ಅದೆಷ್ಟನೆಯ ಬಾರಿಯೋ ಬಂದುಹೋಗಿದೆ. ಆದರೆ... ನಿನ್ನೆ ಸಂಜೆ, 'ಕೆಟ್ಟದ್ದ ಕಾಂಬೂದೂ ಒಂದ ಕರ್ಮವೇ. ತೊ, ಜೀಂವಾ ಜುಮ್ಮರಸತಿದ ನಂಗೆ. ಕೆಟ್ಟ ಮಂದಿ ಕೂಡೆ ಬದುಕೂದೂ ಉಂದ ಶಿಕ್ಷೆ. ಅವರ ಹೊಟ್ಟಿಗ್ಹೋಗ ಹೊರಬಂದ ಗಾಳೀನೇ ನಾವೂ ತಕಾಬೇಕಲ್ಲ ಥೊ...' ಅಂತೇನೋ ರಮ್ಯ ದೀರ್ಘ ಪೀಠಿಕೆಯನ್ನೇ ಹಾಕಿದ್ದರೂ ನಾಳೆಯ ಟೆಸ್ಟ ತಲೆಬಿಸಿಯಲ್ಲಿದ್ದ ಮಗನಾಗಲಿ, ಭಾsಳ ದಿನದ ಮೇಲೆ ಹೊರಗ ಹೋಗ್ಬರ್ಬೇಕಾಗೇದ ಅನ್ನೋ ಪಾರ್ಟಿಯ ಹುಕಿಯಲ್ಲಿದ್ದ ಗಂಡನಾಗಲಿ, 'ಯಾಕ, ಯಾನ' ಅಂತ ಮುಟ್ಟುವ ಸಾಹಸ ಮಾಡಿರಲಿಲ್ಲ. ಅವತ್ತು ಅಶೋಕಾ ಗಾರ್ಡನ್ನಿನಲ್ಲಿ ದೋಸ್ತನೊಂದಿಗೆ ಬೀರು ಹೀರುತ್ತಿದ್ದ ಬಾಲಚಂದ್ರನಿಗೆ ತುಂಬಿದ ಬೀರ ಗ್ಲಾಸಿನಲ್ಲಿ ತನ್ನ ರಮ್ಮಿಯ ಹೊಳಪು ಮೈಯೇ ತೇಲಿಬಂದ ಹಾಗಿತ್ತು. ಆದರೆ ಅವಳೊಂದಿಗೇ ಬರುವ ಆ ವಟಗು ಮಾರಿಯನ್ನು ಓಡಿಸಲು ಏನಾದರೂ ದಾರಿ ಕಾಣಿಸು ದೇವರೇ ಎಂಬಷ್ಟು ಕಂಗೆಟ್ಟುಬಿಟ್ಟಿದ್ದ. 'ಈ ಹೆಂಗಸರ ತುಟಿ ಲಿಪ್‌ಸ್ಟಿಕ್ ಹಚ್ಚು ಹಾಂಗೆ ಬಾಯ್ಗುಂದ ಚೆಂದದ ಟೇಪ್ ಹಚ್ಚೂ ಹಾಂಗಿದ್ರೆ ಇಟ್ಟ ಲಾಯ್ಕಾತತಲ್ವೇನೋ...' ಅಂತ ಹೆಹೆಹೆ ನಕ್ಕೂ ಬಿಟ್ಟ. 'ಎಲ್ಲಿಂವೆ ನೀ ಮಾರಾಯ, ವಟಗುಟಕ್ಕಂಡ್ರೂ ನಮ್ಮ ನೆಚ್ಚಕ್ಕಂಡ ಇದ್ರ ಸಾಕಾಗೀsದ. ಈ ಕಾಲ್ದಾಗೆ ಸುಮ್ನಿರ ಮಾರಯ'– ಅನ್ನೋ ದೋಸ್ತನ ಮಾತಿಗೆ ಹೂಂಗುಡದೆ, ತನ್ನ ಸಮಸ್ಯೆಯನ್ನೇ ಹೇಳಿಕೊಳ್ಳುವುದು ಸಾಧ್ಯವಾಗಿರಲಿಲ್ಲ.

ನಿನ್ನೆ ರಾತ್ರಿಯೂ ಸೊಂಪು ಮಲಗಿ ಗೊರಗುಡುತ್ತಿದ್ದ ಗಂಡನನ್ನು ಎಬ್ಬಿಸಿ ತನ್ನ ಶೋಧನೆಯನ್ನು ಹೇಳಿಕೊಳ್ಳುವುದಾಗಲಿ ಹೇಳದೇ ಇರುವುದಾಗಲಿ ರಮ್ಯಳಿಗೆ ಸಾಧ್ಯವಾಗಿರಲಿಲ್ಲ. ಹೆಚ್ಚು–ಕಡಿಮೆ ಅವಳು ಹೊರಳಾಡುತ್ತಲೇ ಬೆಳಗು ಮಾಡಿದ್ದಳು. ಈಗಂತೂ ತನ್ನ ದುರುನೋಟಕ್ಕೆ ತರಕಿನೊಳಗಿನ ಓತಿಕ್ಯಾತದ ಹಾಗೆ ಪುಸಕ್ಕನೇ ಮರೆಯಾದವನನ್ನ ಬಿಟ್ಟುಬಿಟ್ಟರೆ, ನಿನ್ನೆ ಹೊತಾರೆಯಿಂದ ಎದಿಗೆ ಹತ್ತಿದ ಹಾಗಿದ್ದ ಕೆಸರನ್ನು ತೊಳಕೊಳ್ಳುವ ಹಾದಿ ಕಾಣಲಿಲ್ಲ. ಅದಕ್ಕೇ, 'ಏನೇ' ಅಂದು ಕರೆದಳು – ಚಪಾತಿ ಲಟ್ಟಿಸುತ್ತ. ಇನ್ನು ಬಯ್ಯಿಸಿಕೊಳ್ಳಬಾರದೆಂದು ಸುಭಗನ ಹಾಗೆ ಮಿಂದು ಪ್ಯಾಂಟೇರಿಸಿಕೊಳ್ಳುತ್ತಿದ್ದ ಬಾಲಚಂದ್ರ, ಹೊಡೆಸಿಕೊಂಡ ಹುಡುಗ ಕಟ್ಟೆ ತುದಿಗೆ ಕುಂಡಿಯೂರಿ ಒಳಗೇ ನೋಡುತ್ತಿದ್ದವನ ಹಾಗಿದ್ದವ ಧಕ್ಕನೆ ಒಳಹೋದ. 'ಏನೆ, ಆ ಮುದ್ಕ ದಿನಾ ಬೆಳಗೆ ತಂಬ್ಗಿ ತಕಾಂಡೋತಿನಲ್ಲೇ, ಎಲ್ಲಿಗ್ಹೋತ್ಯಾ ಹೇಳಿ' ಪಿಚ್ ಅನ್ನಿಸಿತ್ತು ಬಾಲಚಂದ್ರಗೆ. ಬಯ್ಯಲು ಬಾಯ್ತೆಗೆದು ಕೊಂಡವ, ಸಂಭಾಳಿಸಿಕೊಂಡು, 'ಅಲ್ವೇ, ತಂಬ್ಗಿ ತುಂಬ್ಕಂಡ ಇಲ್ಲೀಗ್ಹೋತರ, ಹೇಲೂಕ್ಹೋಗ್ದೇ' ಅಂತ ನಕ್ಕ. "ಹಾಂಗಲ್ರೆ, ಅಂವಾ ಶಿವಾಲಯದ ಆಚೆಗೆ ಮುಸ್ಲಿಂರ ಸುಡಗಾಡೀದಲ್ರೆ. ಅಲ್ಲೀಗ ಹೋತಿನಲ್ರೇ ಥೊ. ಏನ ನೀಚ ಬುದ್ಧೀ ಥೊ."

"ನೀ ಇಲ್ಲೀಗ ಹೋಗದ್ಯೆ, ಆ ಮುದ್ಕನ ಹಿಂದೆ"

"ಹೋಗ್ರಿ, ನಾಲಾಯ್ಕ ಮಾತಾಡ್ಬೇಡ್ರಿ. ನಿನ್ನಗೆ ನಾ ನಸಕನಲ್ಲಿ ಬಸ್ಸೀಗ ನಿಂತದನಲ್ರೇ ಆಗ ನೋಡ್ದೆ."

ಬಾಲಚಂದ್ರನಿಗೆ ಹೆಂಡತಿಯ ಮಾತಿನೊಳಗಿನ ಸುಡು ಸಂಕಟ ತಾಕಿದಂತಾಗಿ ಚುರಕ್ ಅನ್ನಿಸಿತು. ಸಾಕಷ್ಟು ಶ್ರೀಮಂತಿಕೆಯ ಎಲ್ಲ ಅನುಕೂಲಗಳೂ ಇರುವ ದೊಡ್ಡ ಮನೆಯ ಯಜಮಾನ, ತಂಬಿಗೆ ತಗೊಂಡು ಹೋಗೋದು ಯಾವುದೋ ಈರ್ಷೆಗಾಗಿ. ಅವನೊಳಗೆ ಧಿಮಿಗುಡುವ ದ್ವೇಷಕ್ಕೆ ಇದೊಂದು ನೆಪ ಅಷ್ಟೇ. ಗಂಡ ಹೆಂಡತಿ ಮುಖ ಮುಖ ನೋಡಿಕೊಂಡರು. 'ಹಿಂಗೇ ಆದ್ರೆ ಉದ್ಧಾರಾದಾಂಗೇ...' ಅಂದೇನೋ ಅಂದ. ಇಡೀ ದಿನ ಅದೇ ಸೀದ ಕಮಟಿನಂತಹ ಯಾತನೆ. ಸರೋಜಾ ಟೀಚರು ಎರಡನೆತ್ತೆ ಮಕ್ಕಳಿಗೆ 'ನಾವು ಎಳೆಯರು' ಪದ ಹಾಡಿಸು ತ್ತಿದ್ದರು. 'ಹಿಂದು ಮುಸ್ಲಿಂ ಕ್ರೈಸ್ತರೆಲ್ಲರಿಗೊಂದೆ ಭಾರತ ಮಂದಿರ – ಅಂತ ಮಕ್ಕಳು ಕಿರುಚುತ್ತಿದ್ದವು. ಕ್ಲಾಸ್ ರೂಮಿನೊಳಗಿನ ಹಾಡಿಗೂ ಒಳಗೆ ಸೀದು ಹೋಗಿರುವ ಬದುಕಿಗೂ ಸಂಬಂಧವೇ ಇಲ್ಲದೇ ತಾವೆಲ್ಲ ಯಾವುದೋ ಅಸಂಗತ ನಾಟಕದ ಪಾತ್ರಧಾರಿಗಳು ಅನ್ನಿಸಿತು. ಕಂಬ ಹಿಡಿದು ನಿಂತಿದ್ದ ಬಾಲಚಂದ್ರ ಏನೋ ಗೊಣಗಿಕೊಂಡ. ಮನೆಗೆ ಹೊರಡುವ ಸಿದ್ಧತೆಯಲ್ಲಿ ಬಂದ ರಮ್ಯ 'ಏನಂದ್ರಿ?' ಎಂದು ಕೇಳಿದಾಗಲೇ, ತಾನೇನೋ ಗೊಣಗಿಕೊಂಡೆ ಅಂತ ಅವನಿಗೆ ಗೊತ್ತಾದದ್ದು. ಯಾಕೋ ಎದೆ ಬಿಗಿದು ಜೀವ ದಣಿದಂತಾಯ್ತು. 'ಏನೆ, ಏನರೂ ಮಾಡ್ಬೇಕೆ, ಮಾಡುವಾ ಏನೆ' ಎಂದ ಬಾಲಚಂದ್ರ ಯಾವ ವಿಷಯಕ್ಕಾಡಿದನೋ ತಿಳಿಯದೆಯೂ ತಿಳಿದಂಥ ಭಾವದಲ್ಲಿ ಬೈಕ್ ಹತ್ತಿದ ರಮ್ಯ ಬದಲಿಸುವ ಯಾವುದೋ ಎಳೆಸೆಳಕ ಧೇನಿಸುತ್ತ ಬಾಲಚಂದ್ರನ ಬೆನ್ನಿಗೆ ಗಲ್ಲ ಊರಿದಳು.

ಡಾ॥ ವಿನಯಾ ಒಕ್ಕುಂದ
'ನೆಮ್ಮದಿ', ನಂ. ೧೨೪, ಸಿ.ಐ.ಟಿ.ಬಿ. ಕಾಲೋನಿ, ಶ್ರೀನಗರ, ಧಾರವಾಡ – ೫೮೦ ೦೦೩.



# ಮಾಯೆ ಮತ್ತು ಅಲ್ಲಮ

ಕಾವ್ಯಲೋಕ



**ಧ್ಯಾ**ನಸ್ಥಳಂತೆ ಒಂದೆಡೆ
ಕಣ್ಣು ಕೀಲಿಸಿ
ಸುಮ್ಮನೆ ಕುಳಿತವಳ ಕಂಡು
ಆತ ಬಾಯ್ತುಂಬಾ ನಕ್ಕ
ನಗೆಯ ತುಂಬಾ ತುಳುಕುವ ವ್ಯಂಗ್ಯ
ಮೈ ಮನದ ಪ್ರತಿ ಸುಳಿಯಲ್ಲೂ
ಆಸೆ ಹೊತ್ತವಳಿಗೆ
ಸಿದ್ಧಿಸೀತು ಅದು ಹೇಗೆ ಧ್ಯಾನ ?
ಇಣುಕಿದೆ ಅಪಹಾಸ್ಯ ಧ್ವನಿಯಲ್ಲೂ

ತೋರಲಿಲ್ಲ ಅವಳು
ಮಾತನಾಡುವ ಯಾವ ಉತ್ಸಾಹವನ್ನೂ
ಅವಳ ತಣ್ಣನೆಯ ಮೌನ
ಸೂಜಿ ಚುಚ್ಚಿತು ಇವನ ಅಹಂಕಾರಕ್ಕೆ
ಕನವರಿಸಿದಾಕೆ ತನಗಾಗಿ ಹಗಲಿರುಳೂ
ತಾನೆದುರು ಬಂದು ನಿಂತರೂ
ತೋರುತ್ತಿಲ್ಲ ಪ್ರತಿಕ್ರಿಯೆ ಯಾವುದೂ
ಕಂಡ ಖುಷಿಯಿಲ್ಲ
ತಾನಾಗಿಯೇ ಮಾತನಾಡಿಸಿದ್ದಕ್ಕೆ ಸಂಭ್ರಮವಿಲ್ಲ
ಮನಸ್ಸು ಅರಳಿದಂತೆಯೂ ಕಾಣುತ್ತಿಲ್ಲ
ಸಿಡಿದೆದ್ದಿತು ಮನಸು ಒಳಗೊಳಗೆ ಚಡಪಡಿಸಿ
ಇಷ್ಟೊಂದು ನಿರ್ಲಿಪ್ತತೆಯೇ ಕಾಮರೂಪಿ ಹೆಣ್ಣಲ್ಲೂ

“ಸಾಂಗತ್ಯವೆಂದರೇನು ನಿರಾಕಾರಿಯೇ?”
ಒಮ್ಮೆಲೆ ಪ್ರಶ್ನಿಸಿದಳು
ಮಾಡಿದ ಶಿವಸಾಂಗತ್ಯದ ಕುರಿತು
ದೊಡ್ಡ ಉಪನ್ಯಾಸವೊಂದನ್ನು
ತುಟಿ ಎರಡು ಮಾಡದೆ
ಕೇಳಿಸಿಕೊಂಡಳು ಮಗುಮ್ಮಾಗಿ
ತಾಸರ್ಧದ ನಂತರ
ಅವನು ಮಾತು ಮುಗಿಸಿ ಏದುಸಿರಿಡುವಾಗ
ಮತ್ತದೇ ಪ್ರಶ್ನೆ
“ಸಾಂಗತ್ಯವೆಂದರೇನು?
ಹೆಣ್ಣು ಗಂಡಿನ ನಡುವೆ”
ಅವಳು ಕೇಳಿ ಮುಗಿಸುವ ಮುನ್ನವೇ
ಕೇಕೇ ಹಾಕಿ, ಚಪ್ಪಾಳೆ ತಟ್ಟಿ
ತೋರು ಬೆರಳ ತೋರಿಸಿ
ನಗತೊಡಗಿದ ಹೊಟ್ಟೆ ಹುಣ್ಣಾಗುವಂತೆ

ದೇಹದ ಕಣಕಣದಲ್ಲೂ
ಕಾಮವೇ ತುಂಬಿಕೊಂಡ ಹೆಣ್ಣು
ಕೇಳಿಯಾಳು ಮತ್ತೇನು ?
ಕಣ್ಣಲ್ಲಿ ಕಂಡೂ ಕಾಣದಂತೆ ತಿರಸ್ಕಾರ
ತುಟಿಯಂಚಿನಲ್ಲಿ ತುಳುಕುವ ಉಪೇಕ್ಷೆ
ಈ ನರ್ತಿಸುವ ಮೋಹನಾಂಗಿಗೆ
ಮತ್ತಾವ ಭವದ ಯೋಚನೆ ಇರಲು ಸಾಧ್ಯ?
ಅದೇ ಧ್ಯಾನ
ದಿನದ ಮೂರು ಹೊತ್ತೂ ಮನಸ್ಸು ಹೇಸುತ್ತಿತ್ತೋ
ಅವಳ ಸ್ಥಿತಿಗೆ ಕನಿಕರಿಸುತ್ತಿತ್ತೋ
ಶಿವಧ್ಯಾನದ ಕಡೆಗೆ ಮನಸ್ಸು ತಿರುಗಿಸುವುದನು
ಹೇಳಿಕೊಡಬೇಕೆನಿಸುತ್ತಿತ್ತೋ

ಆತ ಮಾತನಾಡಲು ಉಪಕ್ರಮಿಸುವ ಮೊದಲೇ
ಮತ್ತೊಂದು ಪ್ರಶ್ನೆ ತೂರಿ ಬಂತು
ಕತ್ತಲಾಗಸದಲ್ಲಿ ಮಿಂಚಿನ ಕೋಲದ ಹಾಗೆ
“ಗಂಡು ಹೆಣ್ಣಿನ ಸಾಂಗತ್ಯಕ್ಕೆ
ಬರಿದೇ ಕಾಮವನು ಲೇಪಿಸಿ
ಆತ್ಮಸಂಗಾತವನ್ನೇ ಮರೆಯುವ
ನೀನೆಂತಹ ನಿರಾಕಾರಿಯೋ
ಒಲವಿನ ಅರ್ಥವನ್ನೇ ಅರಿಯದ ಮೂಢ
ತುಂಬಿರಬಹುದು ನನ್ನ ಮೈಯ್ಯಲ್ಲಿ
ವಿಷಯ ವಾಸನೆಯ ಸುಳಿ
ಮನಸು ಮಾತ್ರ ಶಿವನ ಸಾನಿಧ್ಯದಲಿ
ತುಂಬಿರುವಾಗ ನಿನ್ನ ಮನದ ತುಂಬೆಲ್ಲ
ಕಾಮ
ಹೇಗೆ ಸಾಧ್ಯ ಶಿವಧ್ಯಾನವಾದರೂ?”
ಮಾತಲ್ಲಿ ಉದ್ವೇಗವಿಲ್ಲ
ಅಪಹಾಸ್ಯ ಕೊಂಕಿನ ಸೋಂಕಿಲ್ಲ
“ತಿಳಿದುಕೋ ನಿಸ್ಸಂಗಿ
ಸಾಂಗತ್ಯವೆಂದರೆ ಬರಿದೇ ಕಾಮವಲ್ಲ”
ಹೊರಟೇ ಬಿಟ್ಟಳು ತಣ್ಣಗೆ ಉಸುರಿ

ಶಿವಧ್ಯಾನದ ಸೋಗಿನಲ್ಲಿ
ಬೂದಿ ಬಳಿದು
ಕಣ್ಣು ಮುಚ್ಚಿ, ರುದ್ರಾಕ್ಷಿ ಜಪಿಸುತ್ತಿರುವವನ
ಮನದೊಳಗೀಗ ಅದೇ ಪ್ರಶ್ನೆ
“ಸಾಂಗತ್ಯವೆಂದರೆ ಬರಿದೇ ಕಾಮವೇ?
ಮನಸ್ಸು ತುಂಬುವ ಪ್ರೇಮವೇ?”

**ಶ್ರೀದೇವಿ ಕೆರೆಮನೆ**
ಸರ್ಕಾರಿ ಪ್ರೌಢಶಾಲೆ, ಚಿಟ್ಟಕುಳ, ಕಾರವಾರ – ೫೮೧೩೫೨



ಮಗುವನ್ನು ಮನುಷ್ಯನ ತಂದೆ ಎಂದು ಹೇಳಲಾಗುತ್ತದೆ. ವ್ಯಕ್ತಿಯೊಬ್ಬನ ಬಾಲ್ಯವು ಅವನ ಜೀವನವನ್ನು ಪ್ರಭಾವಿಸುತ್ತದೆ. ಆದ್ದರಿಂದಲೇ ಮನೋವಿಜ್ಞಾನಿಗಳು ಚಿಕಿತ್ಸಾ ಕ್ರಮದಲ್ಲಿ ವ್ಯಕ್ತಿಯ ಜೀವನಶೈಲಿಯನ್ನು ಅರ್ಥ ಮಾಡಿಕೊಳ್ಳಲು ಹಾಗೂ ವ್ಯಕ್ತಿಯ ಮನೋರೋಗಗಳಿಗೆ ಕಾರಣ ತಿಳಿಯಲು ಅವನ ಬಾಲ್ಯದ ನೆನಪುಗಳನ್ನು ಬಳಸುತ್ತಾರೆ. ಬಾಲ್ಯದಲ್ಲಿ ತನ್ನ ಪರಿಸರದೊಂದಿಗೆ ಮಗುವಿಗೆ ಉಂಟಾಗುವ ಸಾಮೀಪ್ಯ ಹಾಗೂ ಸಹಚರ್ಯ ವಯಸ್ಕ ಜೀವನದಲ್ಲಿ ಅದು ಬೆಳೆಸಿಕೊಳ್ಳುವ ಸಂಬಂಧಗಳನ್ನು ನಿರ್ಧರಿಸುತ್ತದೆ.

ಇಂದು ಪ್ರಗತಿಪರ ಚಿಂತನೆ ಹಾಗೂ ಮೌಲ್ಯಾಧಾರಿತ ಸಮಾಜದ ಸೃಷ್ಟಿಯಲ್ಲಿ ನಮ್ಮ ಸಾಮಾಜಿಕ ಚಿಂತಕರು ಅವಶ್ಯ ಸೇರಿಸಿಕೊಳ್ಳಲೇಬೇಕಾದ ವಿಷಯವೆಂದರೆ

# ಮಕ್ಕಳ ಮನೋವಿಜ್ಞಾನ ಮತ್ತು ಸಮಾಜ

## – ಒಂದು ಚಿಕಿತ್ಸಾ ಒಳನೋಟ

ಮಕ್ಕಳ ಮನೋವಿಜ್ಞಾನ. ಹಲವಾರು ಕಾರಣಗಳಿಂದಾಗಿ ಇಂದು ಯಾವುದೇ ಸ್ತರದ ಮಕ್ಕಳಾಗಿರಲಿ, ಅವರು ಒಂದಲ್ಲ ಒಂದು ಬಗೆಯ ಒತ್ತಡದಲ್ಲಿ ಸಿಲುಕಿದ್ದಾರೆ. ಇದು ಮುಂದೆ ಸಮಾಜದ ಆರೋಗ್ಯದ ಮೇಲೆ ಪರಿಣಾಮ ಬೀರುತ್ತದೆ. ಹಾಗಾಗಿ ಇದೊಂದು ಗಂಭೀರವಾದ ವಿಷಯವಾಗಿದೆ.

ಮಗುವಿನ ಬೌದ್ಧಿಕ ವಿಕಾಸ ಕುಟುಂಬದಿಂದ ಪ್ರಾರಂಭವಾಗುವುದು ನಮಗೆ ತಿಳಿದಿರುವ ವಿಷಯ. ಇಂದು ಜಾಗತೀಕರಣ, ನಗರೀಕರಣ, ಕೊಳ್ಳುಬಾಕ ಸಂಸ್ಕೃತಿ ಮತ್ತು ತೀರಾ ಇತ್ತೀಚೆಗೆ ತಂತ್ರಜ್ಞಾನದ ಫಲವಾಗಿ ನಮ್ಮ ಕೌಟುಂಬಿಕ ವ್ಯವಸ್ಥೆಯಲ್ಲಿ ಬಹುದೊಡ್ಡ ಬದಲಾವಣೆಯನ್ನು ಅತಿಕಡಿಮೆ ಸಮಯದಲ್ಲಿ ಉಂಟುಮಾಡುತ್ತಿದೆ. ನಾವು ಈ ಸ್ಥಿತ್ಯಂತರದ ಕಾಲದಲ್ಲಿ ಜೀವಿಸುತ್ತಿದ್ದೇವೆ. ಇಂದು ಅವಿಭಕ್ತ ಕುಟುಂಬಗಳು ಕಾಣಸಿಗುವುದಿಲ್ಲ. ಶಿಥಿಲಗೊಳ್ಳುತ್ತಿರುವ ಸಂಬಂಧಗಳು, ಏಕಪೋಷಕ ವ್ಯವಸ್ಥೆ, ಸಾಮಾಜಿಕ ಬೆಂಬಲ ಮತ್ತು ಪ್ರೋತ್ಸಾಹಗಳ ಕೊರತೆ, ಜೀವನಶೈಲಿಯಲ್ಲಿನ ಬದಲಾವಣೆಗಳು ಮಕ್ಕಳ ವರ್ತನೆಯ ಮೇಲೆ ನೇತ್ಯಾತ್ಮಕ ಪರಿಣಾಮ ಬೀರುತ್ತಿವೆ. ಮಗುವಿನ ಮೊದಲ ಪಾಠಶಾಲೆ ಎನಿಸಿಕೊಂಡಿರುವ ಕುಟುಂಬವು ಇಂದು ಕೇವಲ ಮಕ್ಕಳ ಆಸರೆ ಕೇಂದ್ರವಾಗಿದೆ. ಇದು ಮನೋವಿಜ್ಞಾನಿಗಳು ಮಾತ್ರವಲ್ಲದೆ ಪ್ರಗತಿಪರ ಹಾಗೂ ಸಾಮಾಜಿಕ ಚಿಂತಕರೂ ಗಮನಿಸಬೇಕಾದ ವಿಷಯ.

**ಆನುವಂಶೀಯತೆ ಹಾಗೂ ಪರಿಸರ**

ಆನುವಂಶೀಯತೆ ಹಾಗೂ ಪರಿಸರ ಈ ಎರಡೂ ಮಗುವಿನ ಮಾನಸಿಕ ಬೆಳವಣಿಗೆಯಲ್ಲಿ ಮಹತ್ತರ ಪಾತ್ರವಹಿಸುತ್ತವೆ ಎಂಬುದನ್ನು ಪಾಲಕರ ಹಾಗೂ ಶಿಕ್ಷಕರ ಗಮನಕ್ಕೆ ತರಬೇಕಾಗಿದೆ. ಮಗುವಿನ ಸರ್ವತೋಮುಖ ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರ ವಹಿಸುವ ಕುಟುಂಬ ಮತ್ತು ಶಾಲೆ ಮಕ್ಕಳಲ್ಲಿ ಒತ್ತಡವನ್ನು ಹೆಚ್ಚಿಸುತ್ತಿದೆ. ತಂದೆ-ತಾಯಿಯನ್ನು ಮಾತ್ರ ಒಳಗೊಂಡ ಇಂದಿನ ಕುಟುಂಬದ ಸ್ವರೂಪ ಮಕ್ಕಳು ತಂತ್ರಜ್ಞಾನದ ಉಪಕರಣಗಳ ಮೊರೆಹೋಗುವಂತೆ ಮಾಡಿದೆ. ಸ್ವಯಂ ಅಭಿವ್ಯಕ್ತಿ, ಸೃಜನಶೀಲತೆಯನ್ನು ಕಡೆಗಣಿಸಿ ಅಂಕಗಳನ್ನೇ ಮಾನದಂಡವನ್ನಾಗಿ ಮಾಡಿಕೊಂಡಿರುವ ಶಾಲಾ – ಕಾಲೇಜುಗಳು ಮಕ್ಕಳನ್ನು ಒತ್ತಡಕ್ಕೆ ಗುರಿಮಾಡುತ್ತಿವೆ. ಮಕ್ಕಳನ್ನು ಪೋಷಿಸುವ ರೀತಿಯಲ್ಲಿ ಸಮುದಾಯದಿಂದ ಸಮುದಾಯಕ್ಕೆ, ಒಂದು ಸಂಸ್ಕೃತಿಯಿಂದ ಮತ್ತೊಂದು ಸಂಸ್ಕೃತಿಗೆ ಬೇರೆ

ಮಗುವಿನ ಕಲಿಕೆ ಎರಡು ರೀತಿಯಲ್ಲಿ ಸಾಗುತ್ತದೆ. ಒಂದು, ಅನುಕರಣೆಯಿಂದ ಆದರೆ ಮತ್ತೊಂದು, ತನಗಾಗುವ ಅನುಭವಗಳಿಂದ. ಮಕ್ಕಳು ಪ್ರತಿಯೊಂದನ್ನೂ ಅನುಕರಿಸುತ್ತವೆ. ಪಾಲಕರನ್ನು, ಶಿಕ್ಷಕರನ್ನು, ನೆರೆಹೊರೆ ಹಾಗೂ ಸಮವಯಸ್ಕರನ್ನು ಅನುಕರಣೆ ಮಾಡುತ್ತಲೇ ಕೆಲವೊಂದು ವರ್ತನೆಗಳನ್ನು ರೂಢಿಸಿಕೊಳ್ಳುತ್ತವೆ. ಆದರೆ ಇಂದಿನ ತಾಂತ್ರಿಕ ಯುಗ ಮಕ್ಕಳ ಮೇಲೆ ಇತರರೆಲ್ಲರಿಗಿಂತ ಹೆಚ್ಚಿನ ಪ್ರಭಾವ ಬೀರಿರುವುದರಿಂದ ಮಕ್ಕಳು ಮೊಬೈಲ್, ಇಂಟರ್‌ನೆಟ್‌ನಲ್ಲಿ ನೋಡಿದ್ದನ್ನು ಅನುಕರಿಸುತ್ತವೆ ಮತ್ತು ಅವನ್ನೇ ವಾಸ್ತವ ಜೀವನಕ್ಕೆ ಅನ್ವಯಿಸುತ್ತಿವೆ. ಅಜ್ಜ – ಅಜ್ಜಿಯರ ಕಥೆಗಳ ಜಾಗವನ್ನು ತಾಂತ್ರಿಕ ಉಪಕರಣಗಳು ಆವರಿಸಿಬಿಟ್ಟಿವೆ.

**ಸುನೀತಾ ಮಲ್ಲಿಕಾರ್ಜುನಸ್ವಾಮಿ**



ಅಜ್ಜಿ ಮೊಮ್ಮಕ್ಕಳಿಗೆ ಕಥೆ ಹೇಳುತ್ತಿರುವುದು



ಮಕ್ಕಳು ಮೊಬೈಲ್‌ನಲ್ಲಿ ಆಡುತ್ತಿರುವುದು

ಬೇರೆಯಾಗಿರುತ್ತದೆ. ಪಾಲಕರ ವಿದ್ಯಾಭ್ಯಾಸದ ಮಟ್ಟ, ಆರ್ಥಿಕ ಸ್ಥಿತಿ, ಪಾಲಕರ ಮಾನಸಿಕ ಸ್ವಾಸ್ಥ್ಯ ಇವು ಮಕ್ಕಳನ್ನು ಬೆಳೆಸುವ ವಿಧಾನದ ಮೇಲೆ ಪ್ರಭಾವ ಬೀರುತ್ತವೆ. ಅಲ್ಲದೆ, ಪ್ರತಿಯೋರ್ವ ಪಾಲಕರು ತಮ್ಮ ಪಾಲಕರು ತಮ್ಮನ್ನು ಪ್ರೀತಿಸಿದ, ಶಿಕ್ಷಿಸಿದ, ಪೋಷಿಸಿದ ಶೈಲಿಯನ್ನೇ ತಮ್ಮ ಮಕ್ಕಳ ಮೇಲೆ ಪ್ರಯೋಗಿಸುತ್ತಾರೆ. ಉಪೇಕ್ಷೆಗೊಳಗಾದ ಮಕ್ಕಳ ವರ್ತನೆಗಳು ಪ್ರೀತಿವಾತ್ಸಲ್ಯಗಳಿಂದ ಬೆಳೆಸಿದ ಮಕ್ಕಳಿಗಿಂತ ಭಿನ್ನವಾಗಿರುತ್ತವೆ. ನಿರ್ಬಂಧಿತ ಪರಿಸರದಲ್ಲಿ ಬೆಳೆದ ಮಕ್ಕಳು ಪಾಲಕರ ಎದುರು ವಿಧೇಯರಾಗಿದ್ದು, ಇತರರೊಡನೆ ಆಕ್ರಮಣಶೀಲರಾಗಿ ವರ್ತಿಸುತ್ತಾರೆ. ಕೆಟ್ಟ ಪರಿಸರದಲ್ಲಿ ಬೆಳೆಯುತ್ತಿರುವ ಮಗು ಸಹಜವಾಗಿಯೇ ಕೆಟ್ಟ ಅನುಭವಗಳಿಗೆ ಒಳಗಾಗುವುದರಿಂದ ಆ ಮಗುವಿನಲ್ಲಿ ನಡತೆಯ ವಿಕಾರಗಳು, ಆತ್ಮಾಭಿಮಾನದ ಕೊರತೆ ಹಾಗೂ ಋಣಾತ್ಮಕ ದೃಷ್ಟಿಕೋನಗಳನ್ನು ರೂಢಿಸಿಕೊಂಡಿರುತ್ತವೆ. ಈ ಉದಾಹರಣೆಗಳು ಆನುವಂಶೀಯ ಗುಣಗಳಿಂದ ಜನಿಸಿದ ಮಗುವು ಪರಿಸರದಿಂದ ಪ್ರಭಾವಿಸಲ್ಪಡುವುದನ್ನು ಸ್ಪಷ್ಟೀಕರಿಸುತ್ತವೆ. ಈ ಹಿನ್ನೆಲೆಯಲ್ಲಿ ನಾವು ಸಮಸ್ಯೆಯನ್ನು ಅರಿತುಕೊಂಡು ಪರಿಹಾರಗಳನ್ನು ಕಂಡುಕೊಳ್ಳಬೇಕಾಗಿದೆ.

ಆನುವಂಶೀಯತೆಯು ಮಕ್ಕಳ ವಿಕಾಸಕ್ಕೆ ಬೇಕಾದ ದೈಹಿಕ ಮತ್ತು ಮಾನಸಿಕ ಸಾಮರ್ಥ್ಯಗಳನ್ನು ನೀಡುತ್ತದೆ. ಅದರಂತೆ ಈ ಸಾಮರ್ಥ್ಯಗಳನ್ನು ಆಲೋಚನೆಯಲ್ಲಿ ಮತ್ತು ವರ್ತನೆಯಲ್ಲಿ ಬಿಂಬಿಸುವುದು ನಮ್ಮ ಸಾಮಾಜಿಕ ಪರಿಸರವನ್ನು ಅವಲಂಬಿಸಿದೆ. ಪರಿಸರವು ಭಾವನಾತ್ಮಕ ವಿಕಾಸವನ್ನು ಪ್ರಭಾವಿಸುತ್ತದೆ. ಮಕ್ಕಳ ಕಲಿಕೆ ಶುರುವಾಗುವುದೇ ಆಟಗಳಿಂದ. ಮೂರ್‍ನಾಲ್ಕು ವರ್ಷಗಳ ನಂತರ ಇತರರೊಂದಿಗೆ ಆಟದಲ್ಲಿ ತೊಡಗುವ ಮಗುವಿಗೆ ಸಾಮಾಜಿಕ ಪ್ರಜ್ಞೆಯು ವಿಕಾಸವಾಗತೊಡಗುತ್ತದೆ. ಮಗುವಿನ ಕಲಿಕೆ ಎರಡು ರೀತಿಯಲ್ಲಿ ಸಾಗುತ್ತದೆ. ಒಂದು, ಅನುಕರಣೆಯಿಂದ ಆದರೆ ಮತ್ತೊಂದು,

ತನಗಾಗುವ ಅನುಭವಗಳಿಂದ. ಮಕ್ಕಳು ಪ್ರತಿಯೊಂದನ್ನೂ ಅನುಕರಿಸುತ್ತವೆ. ಪಾಲಕರನ್ನು, ಶಿಕ್ಷಕರನ್ನು, ನೆರೆಹೊರೆ ಹಾಗೂ ಸಮವಯಸ್ಕರನ್ನು ಅನುಕರಣೆ ಮಾಡುತ್ತಲೇ ಕೆಲವೊಂದು ವರ್ತನೆಗಳನ್ನು ರೂಢಿಸಿಕೊಳ್ಳುತ್ತವೆ. ಆದರೆ ಇಂದಿನ ತಾಂತ್ರಿಕ ಯುಗ ಮಕ್ಕಳ ಮೇಲೆ ಇತರರೆಲ್ಲರಿಗಿಂತ ಹೆಚ್ಚಿನ ಪ್ರಭಾವ ಬೀರಿರುವುದರಿಂದ ಮಕ್ಕಳು ಮೊಬೈಲ್, ಇಂಟರ್‌ನೆಟ್‌ನಲ್ಲಿ ನೋಡಿದ್ದನ್ನು ಅನುಕರಿಸುತ್ತವೆ ಮತ್ತು ಅವನ್ನೇ ವಾಸ್ತವ ಜೀವನಕ್ಕೆ ಅನ್ವಯಿಸುತ್ತಿವೆ. ಅಜ್ಜ ಅಜ್ಜಿಯರ ಕಥೆಗಳ ಜಾಗವನ್ನು ತಾಂತ್ರಿಕ ಉಪಕರಣಗಳು ಆವರಿಸಿಬಿಟ್ಟಿವೆ. ಮಕ್ಕಳಲ್ಲಿ ಹೆಚ್ಚುತ್ತಿರುವ ಆಕ್ರಮಣಶೀಲ ವರ್ತನೆಗಳಿಗೆ ಕಾರಣ ಹೆಚ್ಚು ಮೊಬೈಲ್ ಗೇಮ್‌ಗಳು ಮತ್ತು ಅಂತರಜಾಲದ ಬಳಕೆಯೇ ಎಂದು ಇತ್ತೀಚಿನ ಅಧ್ಯಯನಗಳು ದೃಢಪಡಿಸಿವೆ. ಇತ್ತೀಚೆಗೆ ನಮ್ಮ ಸುತ್ತಮುತ್ತ ನಡೆದ ಘಟನೆಗಳಲ್ಲಿ ವಿದ್ಯಾರ್ಥಿನಿಯೊಬ್ಬಳು ಶಾಲೆಯಲ್ಲಿ ರಜೆ ಸಿಗುವುದೆಂಬ ಸಲುವಾಗಿ ಒಂದನೇ ತರಗತಿಯ ಹುಡುಗನ ಮೇಲೆ ಆಕ್ರಮಣ ನಡೆಸಿದ್ದಳು; ಹದಿನಾರು ವರ್ಷದ ವಿದ್ಯಾರ್ಥಿಯೊಬ್ಬ ಪೇರೆಂಟ್ಸ್ ಮೀಟ್ ಹಾಗೂ ಪರೀಕ್ಷೆಯನ್ನು ಮುಂದೂಡುವ ಸಲುವಾಗಿ ಎರಡನೇ ತರಗತಿ ವಿದ್ಯಾರ್ಥಿಯನ್ನು ಕೊಲೆ ಮಾಡಿದ್ದ. ಶಿಕ್ಷಕಿಯರ ಮೇಲೆ ಹಲ್ಲೆ, ಅವಾಚ್ಯ ಶಬ್ದಗಳ ಬಳಕೆ, ಸಹೋದರ ಸಹೋದರಿಯರ ಮೇಲೆ ಹಲ್ಲೆ... ಇತ್ಯಾದಿ ವಿಧ್ವಂಸಕಾರಿ ವರ್ತನೆಯಲ್ಲಿ ಮಕ್ಕಳು ತೊಡಗಲು ತಾಂತ್ರಿಕ ಉಪಕರಣಗಳ ಅತಿಯಾದ ಬಳಕೆಯೂ ಕಾರಣ. ಮಕ್ಕಳು ಆಂತರಿಕ ಹತೋಟಿಯಿಲ್ಲದೆ ಉದ್ವೇಗಕ್ಕೆ ಬಲಿಯಾಗಿ ಇಂತಹ ಅಪರಾಧಿ ಕೃತ್ಯಗಳನ್ನು ಎಸಗುತ್ತಾರೆ. ಆದ್ದರಿಂದ ಮಕ್ಕಳ ಮಾನಸಿಕ ಸಮಸ್ಯೆಗಳಿಗೆ ಆನುವಂಶೀಯ ಮತ್ತು ಪರಿಸರದ ಕಾರಕಗಳಂತೆ ತಂತ್ರಜ್ಞಾನದ ಬಳಕೆಯು ಕಾರಣವಾಗಿದೆ ಎಂದು ಹೇಳಬಹುದು. ಮಾತ್ರವಲ್ಲದೆ, ತಂತ್ರಜ್ಞಾನ ಪರಿಸರದ ಒಂದು ಭಾಗವಾಗುತ್ತಿದೆ. ಇದನ್ನು ತಜ್ಞರು ಹಾಗೂ ಸಾಮಾಜಿಕ ಚಿಂತಕರು ಗಂಭೀರವಾಗಿ ಪರಿಗಣಿಸಬೇಕಿದೆ. ಈ ಎಲ್ಲವನ್ನು ಪರಿಗಣಿಸಿ ಯುಕ್ತವಾದ ಪರಿಹಾರವನ್ನು ಕಂಡುಕೊಳ್ಳಬೇಕಾಗಿರುವುದು ಇಂದಿನ ಅಗತ್ಯ. ಹಾಗಾಗಿ, ವಿಷಯವನ್ನು ಸೂಕ್ಷ್ಮ ಅವಲೋಕನಕ್ಕೆ ಒಳಪಡಿಸಬೇಕಿದೆ.

ಮನೋರೋಗಗಳ ವಿಷಯಗಳಲ್ಲಿ ಆನುವಂಶೀಯತೆಯನ್ನು ನಿರ್ಧರಿಸುವುದು ಸುಲಭವಲ್ಲ. ನಮ್ಮ ವರ್ತನೆಯಲ್ಲಿ ಎಷ್ಟು ಭಾಗ ನಮ್ಮ ವಂಶವಾಹಿಗಳಿಂದ ಮತ್ತು ಎಷ್ಟು ಭಾಗ ಪರಿಸರದಿಂದ ನಿರ್ಣಯಿಸಲ್ಪಡುತ್ತದೆ ಎಂದು ಹೇಳುವುದು ಸುಲಭವಲ್ಲ. ಅದೇ ರೀತಿ ಪ್ರಸವಪೂರ್ವ ಹಾಗೂ ಪ್ರಸವ ನಂತರದ ತೊಂದರೆಗಳು ಸಹ ಮಕ್ಕಳ ಮಾನಸಿಕ ಸಮಸ್ಯೆಗಳಿಗೆ ಕಾರಣವಾಗುತ್ತವೆ.

ಇಂದಿನ ಯಾಂತ್ರೀಕೃತ ಬದುಕಿನಲ್ಲಿ ಮಕ್ಕಳ ಮನೋವಿಜ್ಞಾನದ ಅವಶ್ಯಕತೆ ಹೆಚ್ಚಿನದಾಗಿದೆ. ಮಕ್ಕಳ ಮನೋವಿಜ್ಞಾನವು ಮಕ್ಕಳ ಬೆಳವಣಿಗೆ ಮತ್ತು ವಿಕಾಸ,



ಮಕ್ಕಳ ದೈಹಿಕ ಮತ್ತು ಮಾನಸಿಕ ಸಮಸ್ಯೆಗಳ ಆಳವಾದ ಅಧ್ಯಯನ, ವಸ್ತುನಿಷ್ಠ ವಿಶ್ಲೇಷಣೆಯನ್ನು ಮತ್ತು ಪರಿಹಾರೋಪಾಯಗಳನ್ನು ಪೂರೈಸುತ್ತದೆ. ಇತ್ತೀಚೆಗೆ ಮಕ್ಕಳಲ್ಲಿ ಕಂಡುಬರುತ್ತಿರುವ ಸಮಸ್ಯೆಗಳೆಂದರೆ ಸ್ವಲೀನತೆ (ಆಟಿಸಂ), ಅವಧಾನ ಕೊರತೆಯ ಅತಿಶಯ ಚಟುವಟಿಕೆ (ಎಡಿಎಚ್‌ಡಿ), ಆತಂಕ, ಖಿನ್ನತೆ, ಕಲಿಕಾ ನ್ಯೂನತೆಗಳು, ಬುದ್ಧಿಮಾಂದ್ಯತೆ, ಸೆರೆಬ್ರಲ್ ಪ್ಯಾಲ್ಸಿ, ನಡತೆಯ ವಿಕಾರಗಳು ಇತ್ಯಾದಿ. ಇವುಗಳಲ್ಲಿ ಕೆಲವು ತಜ್ಞರ ಮಾರ್ಗದರ್ಶನದಲ್ಲಿ ಗುಣಪಡಿಸಲು ಸಾಧ್ಯವಾದರೆ, ಇನ್ನು ಕೆಲವು ಆ ಹಾದಿಯಲ್ಲಿ ಒಳ್ಳೆಯ ಫಲಿತಾಂಶಗಳನ್ನಷ್ಟೇ ಪಡೆಯಬಹುದು. ಇದನ್ನು ನಮ್ಮ ಪೋಷಕ ಮತ್ತು ಶಿಕ್ಷಕ ವಲಯ ತಿಳಿಯಬೇಕು. ಇಂತಹ ಮಕ್ಕಳನ್ನು ಕುರಿತ ಜಾಗೃತಿಯನ್ನು ನಮ್ಮ ಸಾಮಾಜಿಕ ಚಿಂತಕರು ಮೂಡಿಸಬೇಕು.

ನಮ್ಮ ಬಹುದೊಡ್ಡ ಸಮಸ್ಯೆ ಎಂದರೆ ಮಗುವಿನ ಮಾನಸಿಕ ಸಮಸ್ಯೆಗಳನ್ನು ಕುರಿತ ಪಾಲಕರ ಅಜ್ಞಾನ ಮತ್ತು ಮೂಢನಂಬಿಕೆ. ಎಷ್ಟೋ ಬಾರಿ ಪಾಲಕರ ಅರಿವಿಗೆ ಸಮಸ್ಯೆ ಬರುವುದೇ ಇಲ್ಲ. ಈ ವಿಷಯದಲ್ಲಿ ವಿದ್ಯಾವಂತ ಪೋಷಕರು ಅನೇಕ ಮಿಥ್ಯಾಭಾವನೆಗಳನ್ನು ಹೊಂದಿರುತ್ತಾರೆ. ಪಾರಿವಾಳದ ರಕ್ತ, ಬಾವಲಿಯ ಬಲಿ ಹಾಕಿಸುವ ವಿದ್ಯಾವಂತ ಪೋಷಕರ ಕೊರತೆಯಿಲ್ಲ! ಹಾಗಾಗಿ, ಜಾಗೃತಿ ಮೂಡಿಸುವ ಅವಶ್ಯಕತೆ ಇಂದು ಎಂದಿಗಿಂತ ಹೆಚ್ಚಾಗಿದೆ.

ತಮ್ಮ ಮಕ್ಕಳಲ್ಲಿ ಯಾವುದಾದರೂ ತೀವ್ರತರವಾದ ಮಾನಸಿಕ ಸಮಸ್ಯೆಗಳು ಕಂಡುಬಂದಲ್ಲಿ ಪೋಷಕರು ಅದನ್ನು ಗಂಭೀರವಾಗಿ ಪರಿಗಣಿಸದೆ ಮಕ್ಕಳು ಬೆಳೆದು ದೊಡ್ಡವರಾದಂತೆ ಈ ಸಮಸ್ಯೆಗಳು ಇಲ್ಲವಾಗುತ್ತವೆ ಎಂಬ ತಪ್ಪು ಕಲ್ಪನೆಯನ್ನು ಹೊಂದಿರುತ್ತಾರೆ. ಮಗುವಿನ ಸಮಸ್ಯೆಯನ್ನು ಕುರಿತ ಸಾಮಾಜಿಕ ಹಣೆಪಟ್ಟಿಯ ಬಗ್ಗೆ ಹಿಂಜರಿಕೆ ಇನ್ನೊಂದು ದೊಡ್ಡ ಅಡಚಣೆಯೇ ಸರಿ. ಮಗುವಿನ ಬೆಳವಣಿಗೆಯ ಪ್ರತಿ ಹಂತದಲ್ಲಿಯೂ ಅದರದೇ ಆದ ಹೊಂದಾಣಿಕೆಯ ಸಮಸ್ಯೆಗಳಿರುತ್ತವೆ. ಇವುಗಳನ್ನು ಗುರುತಿಸಿ ಸರಿಯಾದ ನೆರವು ನೀಡದಿದ್ದಲ್ಲಿ ಅದು ಮಗುವಿನ ಮುಂದಿನ ಜೀವನದಲ್ಲಿ ತೀವ್ರ ಸಮಸ್ಯೆಗಳನ್ನು ಉಂಟುಮಾಡಬಹುದು. ಆದ್ದರಿಂದ ಮನೋವೈದ್ಯರು, ಮನೋವಿಜ್ಞಾನಿಗಳು, ಯುಕ್ತವಾದ ತರಬೇತಿ ಪಡೆದ ಆಪ್ತಸಮಾಲೋಚಕರು ಸೇರಿ ಈ ಸಮಸ್ಯೆಯನ್ನು ಎದುರಿಸಬೇಕಾಗಿದೆ.

ಇಲ್ಲಿ ಪಾಲಕರ ಹಾಗೂ ಶಿಕ್ಷಕರ ಪಾತ್ರ ಬಹುದೊಡ್ಡದು. ಈಗ ಅಗತ್ಯವಾಗಿ ಆಗಬೇಕಾಗಿರುವುವು ಇವು :

✴ ಪಾಲಕರು ತಮ್ಮ ಮಗು ಸಮಸ್ಯೆಯುಳ್ಳ ಮಗುವೆಂದು ಅರಿವಾದಾಗ ಮಗುವನ್ನು ಉದಾಸೀನ ಅಥವಾ ಅತಿಸಂರಕ್ಷಣೆ ಮಾಡದೆ ತಜ್ಞರ ಸಹಾಯ ಪಡೆಯಬೇಕು. ಉದಾಸೀನಕ್ಕೆ ಒಳಗಾದ ಮಗುವಿನ ಭವಿಷ್ಯ ಡೋಲಾಯಮಾನ ವಾದರೆ, ಅತಿಸಂರಕ್ಷಣೆಗೆ ಒಳಗಾಗುವ ಮಗುವು ವಯೋಮಿತಿಗೆ ಅನುಗುಣವಾಗಿ ತಲುಪಬೇಕಾದ ವಿಕಾಸದ ಮೈಲಿಗಲ್ಲನ್ನು ತಲುಪುವುದಿಲ್ಲ. ಆದ್ದರಿಂದ ಮಗುವಿನ ಸಮಸ್ಯೆಯನ್ನು ಅರಿತ ಪಾಲಕರು ಮಾಡಬೇಕಾದ ಮೊಟ್ಟಮೊದಲ ಕೆಲಸ ಮಗುವಿಗೆ ತನ್ನ ಕೆಲಸಗಳನ್ನು ತಾನೇ ಮಾಡಿಕೊಳ್ಳು ವುದನ್ನು ಕಲಿಸಿ ನೆರವಾಗುವುದು. ಮಗು ತನ್ನ ಕೆಲಸಗಳನ್ನು ತಾನೇ ಮಾಡಿಕೊಳ್ಳುವ ನೈಪುಣ್ಯವನ್ನು ಸಾಧಿಸಿದಂತಾದಲ್ಲಿ ಮಗು ಶೇಕಡ ೫೦ರಷ್ಟು ಪ್ರಗತಿಯನ್ನು ಸಾಧಿಸಿದೆಯೆಂದು ತಿಳಿಯಬಹುದು.

✴ ಗರ್ಭಾವಧಿಯಲ್ಲಿ ಸೋಂಕು ಅಥವಾ ಪ್ರಸವ ಅವಧಿಗೆ ಮುನ್ನ ಜನಿಸುವ ಮಕ್ಕಳು ಸಾಮಾನ್ಯವಾಗಿ ಬೆಳವಣಿಗೆಯ ನಿಧಾನಗತಿಗೆ ಒಳಗಾಗುತ್ತಾರೆ. ಇಂತಹ ಮಕ್ಕಳು ತಮ್ಮ ಮಾನಸಿಕ ಹಾಗೂ ಶಾರೀರಿಕ ವಿಕಾಸದ ಮೈಲಿಗಲ್ಲನ್ನು ವಯೋಮಿತಿಗನುಗುಣವಾಗಿ ತಲುಪಲಾಗುವುದಿಲ್ಲ. ಸ್ನಾಯು ಕೌಶಲಗಳು ಮತ್ತು ಮಾತಿನ ಬೆಳವಣಿಗೆ ತಡವಾಗಬಹುದು. ಮಗುವಿನ ಜೈವಿಕ ವಯಸ್ಸಿಗಿಂತ ಮಾನಸಿಕ ವಯಸ್ಸು ಕಡಿಮೆಯಾಗಿರುತ್ತದೆ. ಉದಾಹರಣೆ: ೮ ವರ್ಷದ ಮಗುವಿನ ಮಾನಸಿಕ ವಯಸ್ಸು ೬ ವರ್ಷ ಕಂಡುಬಂದು, ೬ ವರ್ಷದ ಮಕ್ಕಳಷ್ಟು ನೈಪುಣ್ಯತೆಯನ್ನು ಮಾತ್ರ ಸಾಧಿಸಿರುತ್ತದೆ. ಇಂತಹ ಮಕ್ಕಳಿಗೆ ಪೋಷಕರು ತಾಳ್ಮೆಯಿಂದ ವಯೋಸಹಜವಾದ ಕೌಶಲಗಳನ್ನು ಕಲಿಸ ಬೇಕಾಗುತ್ತದೆ (ವಿದ್ಯಾವಂತ ಪೋಷಕರು 'ಪೊರ್ಟಾಜ್ ಗೈಡ್ ಟು ಅರ್ಲಿ ಚೈಲ್ಡ್‌ಹುಡ್ ಎಜುಕೇಷನ್ ಮ್ಯಾನುಯೆಲ್'ನ ಸಹಾಯ ಪಡೆಯಬಹುದು).

✳ ಇನ್ನು ಸಮಸ್ಯೆಯ ಬಗ್ಗೆ ಗಾಬರಿಗೊಂಡ ಪೋಷಕರು ಸಿಕ್ಕ ಸಿಕ್ಕ ಥೆರಪಿ ಸೆಂಟರುಗಳಿಗೆ ಮುಗಿಬೀಳುವುದು ಸಾಮಾನ್ಯವಾಗುತ್ತಿದೆ. ತ್ವರಿತ ಸಫಲತೆ ಕಾಣದಿದ್ದಲ್ಲಿ ಪದೇ ಪದೇ ಥೆರಪಿಸ್ಟರನ್ನು ಬದಲಾಯಿಸುತ್ತಾರೆ. ಹೀಗೆ ಮಾಡಬಾರದು. ಮನಸ್ಸಿಗೆ ಸಂಬಂಧಿಸಿದ ಸಮಸ್ಯೆಗಳಿಗೆ ಶೀಘ್ರ ಪರಿಹಾರವಿರುವುದಿಲ್ಲ ಎಂಬುದನ್ನು ಪೋಷಕರು ಅರಿಯಬೇಕು. ಸಮಸ್ಯೆಯನ್ನು ಸಮಭಾವದಿಂದ ಸ್ವೀಕರಿಸಿ, ಯುಕ್ತ ವೈಜ್ಞಾನಿಕ ಮಾರ್ಗವನ್ನು ಹಿಡಿಯಬೇಕು. ಇಲ್ಲಿ ನಡೆಯುವ ತಪ್ಪುಗಳು ಖುದ್ದು ತಮ್ಮ ಮಕ್ಕಳ ಭವಿಷ್ಯಕ್ಕೆ ಮಾರಕವಾಗುತ್ತವೆ ಎಂಬುದನ್ನು ಪೋಷಕರು ಅರಿತುಕೊಳ್ಳಬೇಕು. ತಜ್ಞರಿಂದ ಸಮಸ್ಯೆಯ ಬಗ್ಗೆ ತಿಳಿದ ನಂತರ ಅವರ ಮಾರ್ಗದರ್ಶನದೊಂದಿಗೆ ಥೆರಪಿ ಸೆಂಟರ್‌ಅನ್ನು ಆಯ್ಕೆಮಾಡಿಕೊಳ್ಳಬೇಕು. ಇತ್ತೀಚೆಗೆ ಬೆಂಗಳೂರಿನಂತಹ ನಗರಗಳಲ್ಲಿಯೂ ಮಕ್ಕಳ ನಕಲಿ ಮನೋವೈಜ್ಞಾನಿಕ ಥೆರಪಿ ಸೆಂಟರ್‌ಗಳು ಅಣಬೆಗಳಂತೆ ಹುಟ್ಟಿಕೊಂಡಿವೆ. ಎಂಜಿನಿಯರಿಂಗ್ ಮತ್ತು ಇತರ ಹಿನ್ನೆಲೆ ಹೊಂದಿರುವ ಪದವೀಧರರು ವಿದೇಶಗಳಲ್ಲಿ ಆರು ತಿಂಗಳ ಅಥವಾ ಒಂದೆರಡು ವರ್ಷಗಳ ಮಕ್ಕಳ ಮನೋವಿಜ್ಞಾನಕ್ಕೆ ಸಂಬಂಧಿಸಿದ ವಿಭಿನ್ನ ಕೋರ್ಸ್‌ಗಳ ಸರ್ಟಿಫಿಕೇಟ್ ಪಡೆದು, ಅದರ ಆಧಾರದ ಮೇಲೆ ಬೆಂಗಳೂರಿನಲ್ಲಿ ಥೆರಪಿ ಸೆಂಟರ್ ತೆರೆದಿರುತ್ತಾರೆ. ಅಥವಾ ಯಾರದ್ದೋ ಹೆಸರಿನಲ್ಲಿ ಥೆರಪಿ ಸೆಂಟರ್ ನೋಂದಣಿ ಮಾಡಿಸಿ ಮತ್ಯಾರೋ ನಡೆಸುತ್ತಿರುತ್ತಾರೆ ಅಥವಾ ಮನೋವಿಜ್ಞಾನ ಹಿನ್ನೆಲೆಯುಳ್ಳ ವ್ಯಕ್ತಿ ಥೆರಪಿ ಸೆಂಟರ್ ನಡೆಸುತ್ತಿದ್ದು, ಇನ್ಯಾವುದೋ ಪದವೀಧರರನ್ನು ವಿಶೇಷ ತರಬೇತುದಾರರನ್ನಾಗಿ ನೇಮಿಸಿಕೊಂಡಿರುತ್ತಾರೆ. ಇಂತಹ ದೋಷಗಳನ್ನುಳ್ಳ, ಬರೀ ದುಡ್ಡು ಪೀಕುವುದನ್ನೇ ಗುರಿಯನ್ನಾಗಿಸಿಕೊಂಡಿರುವ ಥೆರಪಿ ಸೆಂಟರ್‌ಗಳಿಗೇನೂ ಕಡಿಮೆಯಿಲ್ಲ. ಇನ್ನು ಕೆಲವು ಥೆರಪಿ ಸೆಂಟರ್‌ಗಳು ನೋಂದಾಯಿಸಿಯೇ ಇರುವುದಿಲ್ಲ. ನೋಂದಾಯಿಸಿದರೆ ವಾಣಿಜ್ಯದ ಉದ್ದೇಶ ಹೊಂದಿರುವುದರಿಂದ ತೆರಿಗೆ ನೀಡಬೇಕಾಗುತ್ತದೆ, ಆದ್ದರಿಂದ ನಾಮಫಲಕವನ್ನು ಹಾಕುವುದಿಲ್ಲ ಎಂದು ಪಾಲಕರನ್ನು ನಂಬಿಸಿ ಗೌಪ್ಯವಾಗಿ ನಡೆಸುತ್ತಿರುವ ಥೆರಪಿ ಸೆಂಟರ್‌ಗಳು ಹೆಚ್ಚಿದ್ದು, ಪಾಲಕರು ಇಂತಹ ಥೆರಪಿ ಸೆಂಟರ್‌ಗಳ ಬಗ್ಗೆ ಜಾಗೃತರಾಗಿರುವುದು ಒಳಿತು.

✳ ವಿಶ್ವ ಆರೋಗ್ಯ ಸಂಸ್ಥೆ ಪ್ರತಿಪಾದಿಸಿದ ಹತ್ತು ಜೀವನ ಕೌಶಲಗಳನ್ನು ಕರಗತ ಮಾಡಿಕೊಳ್ಳಲು ಮಕ್ಕಳನ್ನು ಪ್ರೋತ್ಸಾಹಿಸಬೇಕು.

✳ ತಜ್ಞರ ನಿಗದಿತ ಭೇಟಿಗಳ ಪಾಲನೆ, ಔಷಧಿ ಚಿಕಿತ್ಸೆಯೊಂದಿಗೆ ಅಗತ್ಯವಿರುವ ಥೆರಪಿಗಳು (ಸಂಜ್ಞಾನಾತ್ಮಕ ವರ್ತನಾ ಚಿಕಿತ್ಸೆ, ಸ್ಪೀಚ್ ಥೆರಪಿ... ಇತ್ಯಾದಿ) ಆಕ್ಯುಪೇಷನಲ್ ಥೆರಪಿ ಇತ್ಯಾದಿಗಳೊಂದಿಗೆ ಸಮಸ್ಯೆಯ ಗಂಭೀರ ಸ್ವರೂಪವನ್ನು ಕಡಿಮೆ ಮಾಡಬಹುದು.

✳ ಮಕ್ಕಳ ಎಲ್ಲ ಸಮಸ್ಯೆಗಳಿಗೂ ದೋಷಪೂರ್ಣ ಪಾಲನೆ ಮತ್ತು ಪರಿಸರವೇ ಕಾರಣವಲ್ಲದಿದ್ದಾಗ್ಯೂ ಮಕ್ಕಳ ಮನಃಸ್ಥಿತಿಯನ್ನರಿತ ಮತ್ತು ಪರಿಣಾಮಕಾರಿಯಾದ ಪಾಲನೆಯು ಅನೇಕ ಸಮಸ್ಯೆಗಳನ್ನು ನಿವಾರಿಸುತ್ತದೆ ಎಂಬುದು ಸತ್ಯ.



**ಶಿಕ್ಷಕರನ್ನು ತರಬೇತಿಗೊಳಿಸುವಿಕೆ**

ಮಕ್ಕಳ ಮಾನಸಿಕ ಸಮಸ್ಯೆಗಳನ್ನು ಗುರುತಿಸುವಲ್ಲಿ ಹಾಗೂ ತಡೆಗಟ್ಟುವಲ್ಲಿ ಶಿಕ್ಷಕರ ಪಾತ್ರ ಬಹುಮುಖ್ಯ. ಶಿಕ್ಷಕರಿಗೆ ಉತ್ತಮ ತರಬೇತಿ ನೀಡಿ ಅದನ್ನು ಪರಿಣಾಮಕಾರಿಯಾಗಿ ಬಳಸಿಕೊಂಡಲ್ಲಿ ಮಾತ್ರ ಪರಿಹಾರ ಸಾಧ್ಯ. ಪ್ರಸ್ತುತ ಸಿ.ಡಬ್ಲ್ಯೂ.ಎಸ್.ಎನ್. (ವಿಶೇಷ ಅಗತ್ಯವುಳ್ಳ ಮಕ್ಕಳು) ಮಕ್ಕಳ ಸಮಸ್ಯೆಗಳು ಮತ್ತು ಶೈಕ್ಷಣಿಕ ಅಗತ್ಯಗಳ ಬಗ್ಗೆ ಶಿಕ್ಷಕರಿಗೆ ತರಬೇತಿ ನೀಡಲಾಗುತ್ತಿದ್ದು, ಇನ್ನೂ ಹೆಚ್ಚಿನ ಉತ್ತಮ ಮಟ್ಟದ ತರಬೇತಿ ನೀಡುವ ಅವಶ್ಯಕತೆಯಿದೆ. ಪ್ರತಿಯೊಬ್ಬ ಶಿಕ್ಷಕನು ಮಾನಸಿಕ ಆರೋಗ್ಯದ ಸ್ಪಷ್ಟ ಪರಿಕಲ್ಪನೆಯನ್ನು ಹೊಂದಿರಬೇಕು. ಸಮಸ್ಯೆಯುಳ್ಳ ಮಕ್ಕಳನ್ನು ಗುರುತಿಸುವುದು ಹೇಗೆ, ಸಮಸ್ಯೆಗೆ ಸಂಬಂಧಿಸಿದ ಸಂಪೂರ್ಣ ಮಾಹಿತಿಯನ್ನು ಕಲೆಹಾಕುವುದು ಹೇಗೆ, ಯಾವ ರೀತಿಯ ತರಗತಿವಾರು ಚಟುವಟಿಕೆಗಳನ್ನು ಯೋಜಿಸಬೇಕು, ಸಮಸ್ಯೆಯ ಸ್ವರೂಪಗಳ ಭಿನ್ನತೆ ಮತ್ತು ಸೂಕ್ಷ್ಮಗಳನ್ನು ಅರಿಯುವ ವಿಧಾನ, ಸಮಸ್ಯೆಯುಳ್ಳ ಮಕ್ಕಳ ಪೋಷಕರಿಗೆ ಆಪ್ತ ಸಮಾಲೋಚನೆ ಮಾಡುವುದು ಹೇಗೆ, ತಜ್ಞರನ್ನು ಸಂಪರ್ಕಿಸಲು ನೀಡಬಹುದಾದ ನೆರವುಗಳು ಮತ್ತು ಅನುಸರಣೆ ಮಾಡುವುದು ಹೇಗೆ, ಎಂಬಿತ್ಯಾದಿ ವಿಷಯಗಳಿಗೆ ಸಂಬಂಧಿಸಿದಂತೆ ಶಿಕ್ಷಕರಿಗೆ ತಜ್ಞರ ಮೂಲಕ ತರಬೇತಿ ಕೊಡಿಸುವುದು. ಶಾಲೆಗಳಲ್ಲಿ ಮಕ್ಕಳ ಮನೋವಿಜ್ಞಾನಕ್ಕೆ ಸಂಬಂಧಿಸಿದ ಪುಸ್ತಕಗಳ ಉಚಿತ ವಿತರಣೆ ಮತ್ತು ಸಂಗ್ರಹಕ್ಕೆ ಅನುಕೂಲ ಮಾಡಿಕೊಡುವುದು. ಶಾಲಾ ಶಿಕ್ಷಕರು ವಿಶೇಷ ಶಾಲೆಗಳೊಂದಿಗೆ ಸಂಪರ್ಕವನ್ನು ಇಟ್ಟುಕೊಳ್ಳುವುದು.

ಮಕ್ಕಳು ಬೆಳೆದಂತೆ ಇತರ ವಸ್ತುಗಳನ್ನು ಮತ್ತು ಜನರನ್ನು ತನ್ನಿಂದ ಪ್ರತ್ಯೇಕಿಸಿ ನೋಡುವುದನ್ನು ಕಲಿಯುತ್ತವೆ. ಕ್ರಮೇಣ ಸ್ವಯಂ ಅಥವಾ ನಾನು ಎಂಬ ಕಲ್ಪನೆ ರೂಪುಗೊಳ್ಳುತ್ತದೆ. ಸ್ವಯಂ ಅಥವಾ ಸ್ವ ಪರಿಕಲ್ಪನೆಯಲ್ಲಿ ಮಗು ತನ್ನ ಬಗ್ಗೆ ಮತ್ತು ತನ್ನ ಪ್ರಪಂಚದ ಬಗ್ಗೆ ಮಾಡಿಕೊಳ್ಳುವ ಪರಿಕಲ್ಪನೆಗಳೇ ಮೂಲಾಧಾರವಾಗಿವೆ. ಮಗುವಿನ ಸ್ವಯಂ ಪರಿಕಲ್ಪನೆಯು ಅದಕ್ಕೆ ಮಾರ್ಗದರ್ಶಕವಾಗುವುದರ ಜೊತೆಗೆ ಆಂತರಿಕ ನಿಯಂತ್ರಕವಾಗಿಯೂ ಕೆಲಸ ಮಾಡುತ್ತದೆ. ಹಾಗಾಗಿ, ಸಾಮಾಜಿಕ ಹಾಗೂ ಕೌಟುಂಬಿಕ ಸ್ಥಿತ್ಯಂತರದ ಪರ್ವಕಾಲವಾದ ಇಂದಿನ ವರ್ತಮಾನವನ್ನು ಮಕ್ಕಳ ಮಾನಸಿಕ ಬೆಳವಣಿಗೆಗೆ ಪೂರಕವಾಗುವಂತೆ ನಾವು ಹೇಗೆ ನಿರ್ವಹಿಸುತ್ತೇವೆಂಬುದು ನಮ್ಮ ಸಮಾಜದ ಭವಿಷ್ಯವನ್ನು ನಿರ್ಣಯಿಸುತ್ತದೆ. ಇದು ನಾವು ನಿರ್ವಹಿಸಬೇಕಾಗಿರುವ ಒಂದು ಗುರುತರ ಜವಾಬ್ದಾರಿ.

**ಮಾಹಿತಿಯ ಕೊರತೆ**

ಮಕ್ಕಳ ಮಾನಸಿಕ ಸಮಸ್ಯೆಗಳನ್ನು ಗುರುತಿಸುವಲ್ಲಿ ಪ್ರಾರಂಭಿಕ ಸಹಾಯದ ಕೇಂದ್ರಗಳು ಮತ್ತು ಆಪ್ತಸಮಾಲೋಚನೆಯ ಸೇವೆಗಳ ಕೊರತೆ ಬಹುದೊಡ್ಡ ಸಮಸ್ಯೆಯಾಗಿದೆ. ಕೆಲವು ಮಹಾನಗರಗಳನ್ನು ಹೊರತುಪಡಿಸಿದಂತೆ ಪಟ್ಟಣಗಳು, ಅರೆಪಟ್ಟಣಗಳು, ಗ್ರಾಮಗಳಲ್ಲಿ ಈ ಸೇವೆಗಳ ಕೊರತೆ ಇದೆ. ಈ ನಿಟ್ಟಿನಲ್ಲಿ ಕೆಲವು ಸರ್ಕಾರೇತರ ಸಂಸ್ಥೆಗಳು, ಪ್ರಾಥಮಿಕ ಆರೋಗ್ಯ ಕೇಂದ್ರಗಳು, ಕೆಲವು ಚಾರಿಟೇಬಲ್ ಟ್ರಸ್ಟ್‌ಗಳು ಮತ್ತು ಶಾಲೆಗಳು ಸ್ವಯಂ ಸೇವಾ ಸಂಸ್ಥೆಗಳು ಕಾರ್ಯೋನ್ಮುಖವಾಗಿದ್ದರೂ ಅವುಗಳಿಗೆ ತರಬೇತಿಯ ಕೊರತೆ ಎದ್ದು ಕಾಣುತ್ತದೆ. ಮಕ್ಕಳ ಮಾನಸಿಕ ಸಮಸ್ಯೆಗಳ ಬಗ್ಗೆ ಸಮಾಜದ ನೇತ್ಯಾತ್ಮಕ ಧೋರಣೆಗಳು ಹಾಗೂ ಪೂರ್ವಗ್ರಹಗಳು ಸಮಸ್ಯೆಯನ್ನು ಮತ್ತಷ್ಟು ಜಟಿಲಗೊಳಿಸುತ್ತಿವೆ. ಪಾಲಕರು, ಶಿಕ್ಷಕರು, ಮಾನಸಿಕ ಆರೋಗ್ಯ ತಜ್ಞರು, ಚಿಕಿತ್ಸಕರು ಮತ್ತು ಸರ್ಕಾರದ ಸಂಘಟಿತ ಪ್ರಯತ್ನದಿಂದ ಈ ಕೊರತೆಯನ್ನು ನಿವಾರಿಸಬಹುದು.

**ಸುನೀತಾ ಮಲ್ಲಿಕಾರ್ಜುನಸ್ವಾಮಿ**
ನಂ. ೨೧೮, ಬ್ರಹ್ಮೇಶ್ವರ ನಿಲಯ, ಮೊದಲನೇ ಮಹಡಿ, ೬ನೇ ಅಡ್ಡರಸ್ತೆ
೩ನೇ ಮುಖ್ಯರಸ್ತೆ, ಬೋಗಾದಿ ೨ನೇ ಹಂತ, ಉತ್ತರ ಬೋಗಾದಿ
ಮೈಸೂರು – ೫೭೦ ೦೨೬

# ಬೇಟೆಗಾರ ಬುಡಕಟ್ಟಿನ ಕವಿ ವಾಲ್ಮೀಕಿಯವರು ಬರೆದ ರಾಮಾಯಣ ಯಾವುದು? – ಒಂದು ಶೋಧ

— ಜಿ. ಎನ್. ನಾಗರಾಜ್ —

ಮಹರ್ಷಿ ವಾಲ್ಮೀಕಿಯವರಿಂದ ರಚಿತವಾದ ಮಹತ್ಕೃತಿಯೆಂದು ನಮಗೆಲ್ಲಾ ಪರಿಚಿತವಾದ ರಾಮಾಯಣದ ಬಗ್ಗೆ ಹಲವರಿಂದ ಹಲವು ಪ್ರಶ್ನೆಗಳನ್ನು ಸಾವಿರಾರು ವರ್ಷಗಳಿಂದಲೇ ನಿರಂತರವಾಗಿ ಎತ್ತುತ್ತಾ ಬರಲಾಗಿದೆ. ಆಧುನಿಕ ಕಾಲಘಟ್ಟಕ್ಕೆ ಮೊದಲು ಈ ಪ್ರಶ್ನೆಗಳು ವಿವಿಧ ಕಾಲಘಟ್ಟದ ಕವಿಗಳು ತಮ್ಮ ಕಾವ್ಯದಲ್ಲಿ ರಾಮಾಯಣದ ಮೂಲ ಕಥಾನಕಕ್ಕೆ ಮಾಡಿಕೊಳ್ಳುತ್ತಿದ್ದ ಹಲವು ಮಾರ್ಪಾಡುಗಳ ರೂಪದಲ್ಲಿ ಕೃತಿಯ ಒಳಗಿನಿಂದ ಅಪ್ರತ್ಯಕ್ಷವಾಗಿ ಎತ್ತಲಾಗುತ್ತಿದ್ದವು. ಆಧುನಿಕ ಕಾಲದಲ್ಲಿ ಕೂಡಾ ಕುವೆಂಪುರವರಂತೆ ತಾವು ರಚಿಸಿದ ಕಾವ್ಯದ ಮೂಲಕವೇ ಈ ಪ್ರಶ್ನೆಗಳನ್ನು ಎತ್ತುವ ವಿಧಾನ ಮುಂದುವರೆಯಿತು. ಆದರೆ ಪ್ರಧಾನವಾಗಿ ರಾಮಾಯಣ ಕಾವ್ಯವನ್ನು ಹಲವು ಆಯಾಮಗಳಿಂದ ವಿಮರ್ಶೆಗೊಡ್ಡುವ ಮೂಲಕ, ಹಲವೊಮ್ಮೆ ಕಟುವಾದ ಟೀಕೆಗಳ ಮೂಲಕ ನೇರವಾಗಿ ಪ್ರಶ್ನೆಗಳನ್ನು ಎತ್ತಲಾಗಿದೆ. ಹಲ ಕೆಲವು ಚರ್ಚೆಗಳು ನಡೆದಿವೆ.

ಐದು ದಶಕಗಳ ಹಿಂದೆ ನಾನು ಪಿಯುಸಿ ಓದುತ್ತಿರುವಾಗಲೇ ಮೂಡಿದ ಕೆಲವು ಪ್ರಶ್ನೆಗಳು ಹೀಗಿದ್ದವು:

ವಾಲ್ಮೀಕಿಯ ಬಗೆಗಿನ ಐತಿಹ್ಯಗಳ ಪ್ರಕಾರ ಅವರು ಒಬ್ಬ ಬೇಟೆಗಾರ ಬುಡಕಟ್ಟಿನವರು, ಮುಂದೆ ನಾರದರ ಸಂಪರ್ಕಕ್ಕೆ ಒಳಗಾಗಿ ಅವರ ಬದುಕಿನಲ್ಲಿ ಮಹತ್ತರ ಬದಲಾವಣೆಯಾಯಿತು, ಅವರೊಬ್ಬ ಮಹರ್ಷಿಯಾಗಿ, ಕವಿಯಾಗಿ ರಾಮಾಯಣವನ್ನು ರಚಿಸಿದರು ಎಂದು.

ಈ ಹಿನ್ನೆಲೆಯಿಂದ ನನ್ನಲ್ಲಿ ಮೂಡಿದ ಪ್ರಶ್ನೆಗಳೆಂದರೆ ಒಬ್ಬ ಬೇಟೆಗಾರ ಬುಡಕಟ್ಟು ಮೂಲದ ವ್ಯಕ್ತಿ, ತನ್ನಂತಹದೇ ಬುಡಕಟ್ಟಿನ ವಾಲಿ, ಸುಗ್ರೀವರನ್ನು ಕಪಿಗಳೆಂದು, ವಾನರರೆಂದು, ಅವರ ವರ್ತನೆಯ ವೈಪರೀತ್ಯದ ವರ್ಣನೆ ಸಹಿತವಾಗಿ ಚಿತ್ರಿಸಲು ಸಾಧ್ಯವೇ ? ಇದೇ ದಿಸೆಯಲ್ಲಿ ಹಲವು ಪ್ರಶ್ನೆಗಳನ್ನು ಉದಾಹರಿಸಬಹುದಾದರೂ ಬಹಳ ಮುಖ್ಯವಾಗಿ ಶ್ರೀರಾಮ ವಾಲಿಯನ್ನು ಬೆನ್ನ ಹಿಂದಿನಿಂದ ಬಾಣ ಹೂಡಿ ಕೊಂದಾಗ ವಾಲಿ, ಪರಮ ವೀರನ ಈ ಕೃತ್ಯವನ್ನು ಹೀಗಳೆಯುತ್ತಾನೆ. ಅದಕ್ಕೆ ಉತ್ತರವಾಗಿ ಶ್ರೀರಾಮ, "ನೀನೊಬ್ಬ ಶಾಖಾಮೃಗ. ನಿನ್ನನ್ನು ಕೊಲ್ಲುವುದಕ್ಕೆ ಮನುಷ್ಯರ ನಡುವಣ ಯುದ್ಧದ ನೀತಿಗಳ ಪಾಲನೆ ಅವಶ್ಯವಿಲ್ಲ. ಒಂದು ಬೇಟೆಯ ಮೃಗದಂತೆ ನಿನ್ನನ್ನು ಕೊಂದಿದ್ದೇನೆ" ಎಂದು ಉತ್ತರ ನೀಡುತ್ತಾನೆ. ತನ್ನಂತಹ ಬುಡಕಟ್ಟಿನ ವ್ಯಕ್ತಿಯ ಬಗ್ಗೆ ವಾಲ್ಮೀಕಿ ಇಂತಹ ಕ್ರೂರ, ಕೀಳು ಮಾತುಗಳನ್ನು ರಾಮನಿಂದ ಹೇಳಿಸಲು ಮತ್ತು ಇಂತಹ ವ್ಯಕ್ತಿ ಆದರ್ಶ ಪುರುಷನೆಂದು ಚಿತ್ರಿಸಲು ಸಾಧ್ಯವೇ ?

ಈ ಪ್ರಶ್ನೆಗಳು ನನಗೆ ದಶಕಗಟ್ಟಲೆ ಕಾಡಿದವು. ಅದಕ್ಕೆ ಉತ್ತರ ಕಂಡುಕೊಳ್ಳಲು ಹಲವಾರು ರಾಮಾಯಣಗಳನ್ನು ಅಧ್ಯಯನ ಮಾಡಬೇಕಾಯಿತು. ಸಂಶೋಧಕರು ಬಹು ಶ್ರಮದ ಅಧ್ಯಯನದಿಂದ ಕಂಡುಕೊಂಡಂತೆ ರಾಮಾಯಣ ಒಬ್ಬ ಕವಿ ಒಮ್ಮೆ ರಚಿಸಿದ ಕಾವ್ಯವಲ್ಲ. ಸುಮಾರು ಎಂಟು ಶತಮಾನಗಳ ದೀರ್ಘ ಕಾಲದಲ್ಲಿ ಹಲವು ಬದಲಾವಣೆಗಳು, ಹೊಸ ಸೇರ್ಪಡೆಗಳನ್ನು ಕಂಡು ಈ ರೂಪದಲ್ಲಿ ನಮ್ಮ ಮುಂದಿದೆ. ರಾಮಾಯಣ ರಚನೆಯ ಪೂರ್ವದಲ್ಲಿ ಪ್ರಚಲಿತವಾಗಿದ್ದ ಈ ಕತೆಯ ರೂಪಗಳಿಂದ ಬೌದ್ಧ ಜಾತಕ ಕತೆಗಳಲ್ಲಿ, ಜೈನ ಪರಂಪರೆಯಲ್ಲಿ ಬಹಳ ಭಿನ್ನವಾದ ರೀತಿಯಲ್ಲಿ ರಾಮ ಕಥಾನಕಗಳು ಮೂಡಿವೆ ಎಂಬ ವಿಷಯ ತಿಳಿಯಬಂದಿರುವ ಸಂಗತಿ ನನಗೆ ರಾಮಾಯಣದ ಮೂಲ ರೂಪ ಹೇಗಿದ್ದಿರಬಹುದು, ವಾಲ್ಮೀಕಿಯಂತಹ ಬೇಟೆಗಾರ ಬುಡಕಟ್ಟಿನ ಕವಿ ರಚಿಸಿದ್ದಿರಬಹುದಾದ ರೂಪವೊಂದರ ಸುಳಿವು ಸಿಗುತ್ತದೆಯೇ ಎಂಬ ಶೋಧಕ್ಕೆ ಹಚ್ಚಿತು. ಅದರ ಫಲ ಸಾರಾಂಶ ರೂಪದಲ್ಲಿ ನಿಮ್ಮ ಮುಂದಿದೆ.

ವೇದಗಳ ಕಾಲದಲ್ಲಿ, ಮುಖ್ಯವಾಗಿ ಋಗ್ವೇದಾನಂತರದಲ್ಲಿ ಯಜ್ಞ ಯಾಗಾದಿಗಳು ರಾಜ ಮಹಾರಾಜರ ಸಿರಿಯ ಸೂಚಕವಾಗಿ ಬಹಳ ವೈಭವದಿಂದ ಆಚರಿಸಲ್ಪಡತೊಡಗಿದವು. ಈ ಯಜ್ಞ-ಯಾಗಾದಿಗಳ ಸಮಯದಲ್ಲಿ ಸಂಜೆ ಮತ್ತು ರಾತ್ರಿ ವಿವಿಧ ಲಾವಣಿಕಾರರು ವಿವಿಧ ಕಥಾನಕಗಳನ್ನು ಹಾಡುವ ಪದ್ಧತಿ ಇತ್ತೆಂದು ಬ್ರಾಹ್ಮಣಗಳು ತಿಳಿಸುತ್ತವೆ. ಈ ಸಂದರ್ಭದಲ್ಲಿ ಸಂಜೆಯ ವೇಳೆ ಬ್ರಾಹ್ಮಣ ಲಾವಣಿಕಾರರೂ, ರಾತ್ರಿ ವೇಳೆ ಕ್ಷತ್ರಿಯ ಲಾವಣಿಕಾರರೂ ಹಾಡುತ್ತಿದ್ದರೆಂದೂ ತಿಳಿಯಬರುತ್ತದೆ. ಈ ಹಾಡುವಿಕೆ ರಾಜಸೂಯದಂತಹ ಯಾಗಗಳಲ್ಲಿ



ತಿಂಗಳುಗಟ್ಟಲೆ ಕಾಲದ್ದಾದರೆ, ಅಶ್ವಮೇಧದಂತಹ ಯಾಗಗಳಲ್ಲಿ ಕುದುರೆಯನ್ನು ಪೂಜಿಸಿ ಪಯಣಕ್ಕೆ ಅಟ್ಟುವಾಗಿನಿಂದ ಅದು ದೇಶ ದೇಶಗಳನ್ನು ಸುತ್ತಿ ಹಿಂದಿರುಗಿ ಬರುವಾಗಿನವರೆಗೆ ವರ್ಷಗಟ್ಟಳೇ ಕಾಲವನ್ನು ತೆಗೆದುಕೊಳ್ಳುತ್ತಿದ್ದವು. ಇಂತಹ ದೀರ್ಘಕಾಲದಲ್ಲಿ ಯಾಗದಲ್ಲಿ ನೆರೆದ ಜನರನ್ನು ರಂಜಿಸುವಂತಹ ಕಥಾನಕಗಳು ಹಾಗೂ ಹಾಡುಗಾರಿಕೆ ಎಂತೆಂತಹ ಆಖ್ಯಾನಗಳನ್ನು ಕಥೆ, ಉಪಕಥೆಗಳನ್ನು ಬಯಸುತ್ತವೆ ಎಂದು ಊಹೆ ಮಾಡಿಕೊಳ್ಳಬಹುದು.

ಈ ಲಾವಣಿಕಾರರು ಜನಪದರಲ್ಲಿ ಪ್ರಚಲಿತ ವಾಗಿದ್ದ ಹಲವು ಕಥಾನಕಗಳಿಗೆ ತಮ್ಮ ಕಲ್ಪನೆಯನ್ನು ಸೇರಿಸಿ ಆ ಯಾಗಗಳಲ್ಲಿ ಸೇರಿದ್ದ ಪುರೋಹಿತರ ಹಾಗೂ ಕ್ಷತ್ರಿಯರ ಮನ ಮೆಚ್ಚುವಂತೆ ಹಾಡು ತ್ತಿದ್ದರು. ಬ್ರಾಹ್ಮಣರು ಹಾಡುವ ಲಾವಣಿಗಳಲ್ಲಿ ಯಾಗ–ಯಜ್ಞಗಳ ಮಹಿಮೆ, ವಿವಿಧ ಅಗ್ನಿಕಾರ್ಯಗಳ ಪ್ರಾಮುಖ್ಯತೆಗಳ ಜೊತೆಗೆ ರಾಜರುಗಳು ಕೊಟ್ಟ ದಾನಗಳು ಮಹಿಮೆಗಳು ಪ್ರಾಧಾನ್ಯತೆ ಪಡೆದರೆ, ಕ್ಷತ್ರಿಯ ಲಾವಣಿಕಾರರು ಯಜ್ಞದ ಯಜಮಾನರಾದ ರಾಜರ ವಂಶದ ವೀರ ಕಥಾನಕ ಗಳನ್ನು ಮೆರೆಸುತ್ತಿದ್ದರು. ನಂತರ ಅವುಗಳನ್ನು ಸಂಕಲಿಸಿ ಹಲವು ಪುರಾಣಗಳನ್ನಾಗಿ ವಿಂಗಡಿಸ ಲಾಯಿತು. ಇಂತಹ ಕಥಾನಕಗಳಲ್ಲಿ ಹಲವು ಕಥಾನಕಗಳನ್ನು ಒಂದು ಸೂತ್ರದಲ್ಲಿ ಪೋಣಿಸಿ ಮಹಾಕಾವ್ಯಗಳಾಗಿ ರೂಪಿಸಲಾಯಿತು ಅಥವಾ ಬರೆಯಲಾಯಿತು.

ನಮ್ಮ ದೇಶದ ಎರಡೂ ಮಹಾಕಾವ್ಯಗಳು ಈಗ ದೊರಕಿರುವ ರೂಪದಲ್ಲಿ ಏಕವ್ಯಕ್ತಿ ರಚನೆಗಳಲ್ಲ. ಕಾಲಾನುಕಾಲಕ್ಕೆ ಪ್ರಕ್ಷಿಪ್ತ ಎಂದು ಕರೆಯಲ್ಪಡುವ ದೊಡ್ಡ ಪ್ರಮಾಣದ ಸೇರ್ಪಡೆಗಳಾಗಿವೆ ಎಂಬುದಂತೂ ನಿರೂಪಿತವಾಗಿದೆ.

**'ರಾಮಕಥಾ'ದ ಬೆಳವಣಿಗೆ**

ರಾಮಾಯಣದ ಬಗ್ಗೆ ಸಂಶೋಧನೆ ಮಾಡಿರುವ ಹತ್ತಾರು ವಿದ್ವಾಂಸರು ಅದರ ಮೂಲವನ್ನು ಹುಡುಕಲು ಋಗ್ವೇದದಿಂದ ಹಿಡಿದು ಎಲ್ಲಾ ವೈದಿಕ, ಬೌದ್ಧ, ಜೈನ ಪ್ರಾಚೀನ ಸಾಹಿತ್ಯವನ್ನು ಅಧ್ಯಯನ ಮಾಡಿದ್ದಾರೆ. ಭಾರತದ ವಿವಿಧ ಪ್ರದೇಶಗಳಲ್ಲಿ ದೊರಕಿದ ಹಸ್ತಪ್ರತಿಗಳನ್ನು ಅಧ್ಯಯನ ಮಾಡಿದ್ದಾರೆ. ಈ ಹಸ್ತಪ್ರತಿಗಳಲ್ಲಿ ಮೂರು ರೀತಿಯ ಕಥಾ ವೈವಿಧ್ಯವಿದೆ. ಒಂದು ದಕ್ಷಿಣ ಭಾರತದ್ದು, ಇನ್ನೊಂದು ಗೌಡೀಯ ಅಥವಾ ಬಂಗಾಲೀ – ಈಶಾನ್ಯ ಭಾರತದ್ದು. ಮತ್ತೊಂದು ವೈದರ್ಭೀಯ ಅಥವಾ ವಾಯುವ್ಯ ಭಾರತದ್ದು. ಅವುಗಳಲ್ಲಿ ಬಂಗಾಲೀ ರೂಪ ಹೆಚ್ಚು ಕಾವ್ಯಾತ್ಮಕ ಸಂಸ್ಕಾರಕ್ಕೆ ಒಳಗಾಗಿರುವ ಇತ್ತೀಚಿನ ರೂಪ. ಇಂದು ಸಿಕ್ಕಿರುವ ರೀತಿಯಲ್ಲಿ ದಕ್ಷಿಣದ ರೂಪವೇ ಪ್ರಾಚೀನ ರೂಪಕ್ಕೆ ಹತ್ತಿರವಾದದ್ದು ಎಂದು ತೀರ್ಮಾನಿಸಿದ್ದಾರೆ. ಈಗ ಲಭ್ಯವಿರುವ ರಾಮಾಯಣದ ವಿವಿಧ ಹಸ್ತಪ್ರತಿ ಗಳಲ್ಲಿ ೨೪,೦೦೦ಕ್ಕೂ ಹೆಚ್ಚು ಶ್ಲೋಕಗಳಿವೆ. ಆದರೆ ಈ ಎಲ್ಲಾ ಹಸ್ತಪ್ರತಿಗಳಲ್ಲಿರುವ ಸಾಮಾನ್ಯ ರೂಪ ಮತ್ತು ಶ್ಲೋಕ ರಚನೆಯ ಸ್ವರೂಪವನ್ನು ನೋಡಿದರೆ ಮೂಲ ಕೃತಿ ಕೇವಲ ೧೨,೦೦೦ ಶ್ಲೋಕಗಳನ್ನು ಮೀರಿಲ್ಲವೆಂದು ಶೋಧಿಸಿದ್ದಾರೆ. ಈ ಎಲ್ಲಾ ಸಂಶೋಧನೆಯ ಆಧಾರದ ಮೇಲೆ ರಾಮಾಯಣದ ರಚನೆ ಐದು ಮುಖ್ಯ ಹಂತಗಳಲ್ಲಿ ನಡೆದಿದೆಯೆಂದು ತೀರ್ಮಾನಿಸಿದ್ದಾರೆ:

ಒಂದು – ಮೂಲ ಜನಪದ ಕಥಾನಕವನ್ನು ಆಧರಿಸಿ ಯಜ್ಞ–ಯಾಗಾದಿಗಳಲ್ಲಿ ಹಾಡುತ್ತಿದ್ದ ಸ್ವರೂಪ. ಇದು ತೈತ್ತಿರೀಯ ಬ್ರಾಹ್ಮಣದಲ್ಲಿ ಬರುವ ಸೀತೆಯೆಂಬ ನೇಗಿಲ ಗೆರೆಯ ದೇವತೆ ಮತ್ತು ಅವಳ ಹೆಸರಿನ ಹಬ್ಬದ ಮೂಲಕ ತಿಳಿಯುತ್ತದೆ. ಕಾಲ ಸುಮಾರು ಕ್ರಿ. ಪೂ. ೪೦೦.

ಎರಡು – ರಾಮಾಯಣದ ಕತೆ ಪ್ರತ್ಯೇಕ ಪ್ರತ್ಯೇಕವಾಗಿ ಮೂರು ಸುತ್ತುಗಳಾಗಿ ರೂಪು ಗೊಂಡಿದೆ. ಅಯೋಧ್ಯೆ ಸಾಲು, ಕಿಷ್ಕಿಂಧಾ ಸಾಲು, ಮತ್ತು ಲಂಕಾ ಸಾಲುಗಳಾಗಿ. ಈ ಮೂರೂ ಸ್ವತಂತ್ರ ಕಥಾನಕಗಳಾಗಿ ಬೆಳೆದದ್ದು ಕ್ರಿ. ಪೂ. ೪೦೦ರಿಂದ ೨೦೦ರವರೆಗೆ.

ಮೂರು – ಈ ಕಥಾನಕಗಳನ್ನು ಮೂಲ ವಾಗಿಟ್ಟುಕೊಂಡ ವಾಲ್ಮೀಕಿ ರಚಿಸಿದ್ದೆಂದು ಹೇಳಲಾದ ರಾಮಾಯಣ ರೂಪುಗೊಂಡಿತು. ಇದೇ ೧೨,೦೦೦ ಶ್ಲೋಕಗಳ ಕಾವ್ಯ. ಏಕ ವ್ಯಕ್ತೀಕೃತ. ಇದು

ಸುಮಾರು ಕ್ರಿ.ಪೂ. ೨೦೦ರ ಕಾಲದ್ದು.

ನಾಲ್ಕು–ಮೂರನೇ ಹಂತದಲ್ಲಿನ ರಾಮಾಯಣ ಪೂರ್ವದ ಮೂಲ ಜಾನಪದ ಕಥಾನಕವನ್ನು ಆಧಾರವಾಗಿಟ್ಟುಕೊಂಡು ಬೌದ್ಧ ಜಾತಕ ಕಥೆಗಳಲ್ಲಿ ಬರುವ ದಶರಥ ಜಾತಕ. ಜೈನ ರಾಮಾಯಣದ ವಿಭಿನ್ನ ರೂಪಗಳು.

ಐದು – ವಾಲ್ಮೀಕಿಯ ರಾಮಾಯಣ ವಿವಿಧ ಪ್ರದೇಶಗಳಿಗೆ ಹರಡಿ ಅಲ್ಲಲ್ಲಿಯ ಪ್ರಾದೇಶಿಕ ಪುರಾಣಗಳೂ ಸೇರಿ ವಿಭಿನ್ನ ಪಾಠಾಂತರಗಳಾಗಿ ೨೪,೦೦೦ ಶ್ಲೋಕಗಳಾಗಿ ಬೆಳೆದದ್ದು. ಈ ಹಂತದಲ್ಲಿಯೇ ರಾಮ ವಿಷ್ಣುವಿನ ಅವತಾರವೆಂದು ನಿರೂಪಿಸುವ ರಾಮಾಯಣದ ಉತ್ತರಕಾಂಡ ಮತ್ತು ಬಾಲಕಾಂಡದ ಹಲವು ಭಾಗಗಳು ಸೇರಿಸಲ್ಪಟ್ಟದ್ದು, ಇವೇ ಕೊನೆಯ ಪ್ರಕ್ಷಿಪ್ತಗಳು.

ಹೀಗೆ ರಾಮಾಯಣದ ಬೆಳವಣಿಗೆಯ ಇತಿಹಾಸದ ಬಗೆಗಿನ ಈ ಅರಿವು, ನನಗೆ ರಾಮಾಯಣ ರೂಪುಗೊಳ್ಳುವ ಮುನ್ನ ಅದರಲ್ಲಿನ ವಿವಿಧ ಸಂಗತಿಗಳು ತಳೆದಿದ್ದ ರೂಪಗಳ ಬಗ್ಗೆ ಶೋಧಿಸಲು ಹುರುಪು ನೀಡಿತು. ವೇದಗಳು, ಇತರ ವೈದಿಕ ಸಾಹಿತ್ಯದಲ್ಲಿ ಈ ಕತೆಗಳ ಮೂಲವನ್ನು ಹುಡುಕುತ್ತಾ ಹೊರಟೆ. ಆಗ ನಮಗೆಲ್ಲಾ ತಿಳಿದಿರುವ ರಾಮಾಯಣದ ಒಡಲೊಳಗೇ, ಅದರ ಅಡಿಪಾಯದಲ್ಲಿ ಮೂಲ ರಾಮಾಯಣದ ಸುಳುಹುಗಳು ಅಡಗಿವೆಯೆಂಬುದು ಕಂಡುಂದಿತು.

**ಋಗ್ವೇದ ಕಾಲದಿಂದಲೇ ಸೀತೆಯೆಂಬ ದೇವತೆ**

ಸೀತೆ ಎಂಬ ಪಾತ್ರ ಭಾರತದ ಜನತೆಗೆ ರಾಮಾಯಣದಿಂದಲೇ ಪರಿಚಿತವಾದದ್ದು ಮತ್ತು ಜನಜನಿತವಾದದ್ದು ಎಂಬುದು ಮಾತ್ರ ನಿಜ. ಆದರೆ ರಾಮಾಯಣದ ಕವಿಗೆ ಮತ್ತು ಆ ಕಾಲದ ಜನಸಮುದಾಯಗಳಿಗೆ ಸಾವಿರಾರು ವರ್ಷಗಳ ಹಿಂದಿನಿಂದಲೇ ತಿಳಿದು ಬಂದಿರುವ ಒಬ್ಬ ದೇವತೆ.

ಈ ದೇವತೆಯ ಕಥೆ ಋಗ್ವೇದದಷ್ಟು ಹಿಂದಕ್ಕೆ ಹೋಗುತ್ತದೆ. ಅದರಲ್ಲಿ ಕ್ಷೇತ್ರಪತಿಯನ್ನು ಪ್ರಾರ್ಥಿಸುವ ಒಂದು ಶ್ಲೋಕದಲ್ಲಿ ಸೀತೆ ಎಂಬ ದೇವತೆಯನ್ನೂ ಕೂಡ ಈ ರೀತಿ ಆಹ್ವಾನಿಸಲಾಗುತ್ತದೆ :

*ಪವಿತ್ರಳಾದ ಸೀತೆಯೇ ಹತ್ತಿರ ಬಾ*
*ನಿನ್ನನ್ನು ಗೌರವಿಸುತ್ತೇವೆ ಮತ್ತು ಪೂಜಿಸುತ್ತೇವೆ*
*ನಮ್ಮನ್ನು ಆಶೀರ್ವದಿಸು,*
*ನಮ್ಮನ್ನು ಸಮೃದ್ಧಿಗೊಳಿಸು*
*ನಮಗೆ ಅಪರಿಮಿತವಾಗಿ ಫಲಗಳನ್ನು ತಾ*
*ಇಂದ್ರನು ನೇಗಿಲ ಗೆರೆಯನ್ನು ಒತ್ತಿ ಹಿಡಿಯಲಿ*
*ಪೂಷನ್ ದೇವತೆ ಅದು ನೇರವಾಗಿರುವಂತೆ*
*ಮಾರ್ಗದರ್ಶನ ಮಾಡಲಿ*

– ಹೀಗೆ ಋಗ್ವೇದದಲ್ಲಿ ಪ್ರಸ್ತಾಪಿತವಾಗಿರುವ ಈ ದೇವತೆಯನ್ನು ವಾಜಸನೇಯಿ ಸಂಹಿತೆಯೆಂದು ಹೆಸರಾದ ಶುಕ್ಲ ಯಜುರ್ವೇದದಲ್ಲಿ ಯಜ್ಞಶಾಲೆಯನ್ನು ನಿರ್ಮಾಣ ಮಾಡುವ ಸ್ಥಳದಲ್ಲಿ ನಾಲ್ಕು ನೇಗಿಲ ಗೆರೆಯನ್ನು ಎಳೆಯಬೇಕೆಂದಾಗಲೂ ಸೀತೆಯನ್ನು ಪ್ರಾರ್ಥಿಸುವ ಶ್ಲೋಕಗಳನ್ನು ವಿಧಿಸಿದೆ. (೧೨, ೬೯–೭೨) ಬ್ರಾಹ್ಮಣಗಳೆಂಬ ಮಹತ್ವದ ವೈದಿಕ ಗ್ರಂಥಗಳಲ್ಲೊಂದಾದ ತೈತ್ತಿರೀಯ ಬ್ರಾಹ್ಮಣದಲ್ಲಿ ಮೊದಲ ಮಳೆಯ ನಂತರ ಬೇಸಾಯ ಕೈಗೊಳ್ಳುವಾಗ ಪೂಜೆ ಮಾಡಿ ನೇಗಿಲಲ್ಲಿ ಉತ್ತು ನೇಗಿಲ ಗೆರೆ ಮೂಡಿದ ನಂತರ ಆ ಗೆರೆಗೆ ಸೀತೆಯನ್ನು ಆಹ್ವಾನಿಸಿ ಮಂತ್ರಪೂರ್ವಕ ಪೂಜೆ ಮಾಡುವ ಕ್ರಿಯೆಯೊಂದನ್ನು ವಿವರಿಸುತ್ತದೆ. ಅದರಲ್ಲಿ ಈ ಪೂಜೆ ಕೈಗೊಳ್ಳುವಾಗ ಒಬ್ಬ ಬಿಲ್ಲು ಧರಿಸಿದ ಯುವಕ ಆ ಹೊಲದ ದಕ್ಷಿಣ ದಿಕ್ಕಿಗೆ ಮುಖ ಮಾಡಿ ಕಾಡು ಪ್ರಾಣಿಗಳನ್ನು ಎದುರಿಸಲು ಸನ್ನದ್ಧವಾಗಿ ಕುಳಿತುಕೊಳ್ಳುವ ಪದ್ಧತಿಯಿದೆಯೆಂದು ಹೇಳುತ್ತದೆ. ಸೀತೆಯೆಂಬ ನೇಗಿಲ ಗೆರೆ ಮತ್ತು ಬಿಲ್ಲುಧಾರಿ ಯುವಕ – ಇದು ಯಾರಿಗಾದರೂ ಸೀತೆ ಮತ್ತು ರಾಮರ ಚಿತ್ರವನ್ನು ಮನಸ್ಸಿಗೆ ತರುತ್ತದೆ. ಆದರೆ ಸೀತೆ ಎಂಬ ಕೃಷಿಯ ದೇವತೆಗೆ, ಕೃಷಿಗೆ ರಕ್ಷಕನಾಗಿ ಮಾತ್ರ ಹೆಸರಿಸದ ಯುವಕ ಕಾಣಿಸಿಕೊಳ್ಳುತ್ತಾನೆ.

ಸೀತೆಯ ಪ್ರಸ್ತಾಪ ಇನ್ನೂ ಕೆಲ ವೈದಿಕ ಗ್ರಂಥಗಳಲ್ಲಿ ಬರುತ್ತದೆ. ಹರಿವಂಶವೆಂಬ ಗ್ರಂಥದಲ್ಲಿ ಆರ್ಯ ಎಂಬ ದೇವತೆಯನ್ನು ಪ್ರಾರ್ಥಿಸುವಾಗಲೂ ಕೂಡ ಸೀತೆಯನ್ನು ಆಹ್ವಾನ ಮಾಡಲಾಗಿದೆ.

*ನೇಗಿಲನ್ನು ಹಿಡಿಯುವವರಿಗೆ ನೀನೆ ಸೀತೆ*
*ಎಲ್ಲಾ ಜೀವಿಗಳಿಗೆ ನೀನೆ ಭೂದೇವಿ*

*– ಹರಿವಂಶ (೨.೩–೧೪)*

ಹೀಗೆ ಸೀತೆಯೆಂದರೆ ನೇಗಿಲ ಗೆರೆ, ನೇಗಿಲನ್ನು ಹಿಡಿದವರಿಗೆಲ್ಲಾ ಅವಳೇ ದೇವತೆ. ಅದು ಬೇಸಾಯದ ವಿಷಯದಲ್ಲಾಗಲೀ, ಯಜ್ಞ ಯಾಗಗಳ ಸಂದರ್ಭದಲ್ಲಾಗಲೀ ಯಾವಾಗಲೂ ಒಂದೇ.

ಇಂತಹ ದೇವತೆಗೆ ಕೌಶಿಕ ಸೂತ್ರವೆಂಬ ಶಾಸ್ತ್ರ ಗ್ರಂಥದಲ್ಲಿ ಸೀತೆ ಪರ್ಜನ್ಯವೆಂಬ ಮಳೆಯ ದೇವತೆಯ ಹೆಂಡತಿಯೆಂದು ಬಿಂಬಿಸಲಾಗಿದೆ. ನೀನೇ ಎಲ್ಲಾ ದೇವರುಗಳ, ಮನುಷ್ಯರ ಮತ್ತು ಜೀವಿಗಳ ತಾಯಿಯೆಂದೂ ವರ್ಣಿಸಲಾಗಿದೆ. ನೀನೇ ಸಮೃದ್ಧಿಯ ಮತ್ತು ಬೆಳವಣಿಗೆಯ ದಾತೆ ಎಂದು ಪ್ರಾರ್ಥಿಸಲಾಗಿದೆ. ಬೆಳೆ ಬೆಳೆಯುವ ನೇಗಿಲ ಗೆರೆಯ ದೇವತೆಗೆ ಮಳೆಯ ದೇವ ಗಂಡನೆಂದು ಭಾವಿಸುವುದು ಸಹಜವಾಗಿಯೇ ಇದೆ. ಆದರೆ ಪರಾಸ್ಕರ ಸೂತ್ರವೆಂಬ ಮತ್ತೊಂದು ಗ್ರಂಥದಲ್ಲಿ ಸೀತೆ ಇಂದ್ರನ ಹೆಂಡತಿಯೆಂದು ಹೇಳಲಾಗಿದೆ ಹಾಗೂ ಆ ದೇವತೆಗೆ ಯಜ್ಞ ಕುಂಡದ ಅಗ್ನಿಯಲ್ಲಿ ಬೇಯಿಸಿದ ಬಾರ್ಲಿ ಮತ್ತು ಅಕ್ಕಿಯನ್ನು ಅರ್ಪಿಸಬೇಕು ಎಂದು ಹೇಳಲಾಗಿದೆ. (ಪರಾಸ್ಕರ ಸೂತ್ರ ೨.೧೭.೧–೧೯)

ಇಂದ್ರ ಕೂಡ ಮಳೆಯ ಮತ್ತು ಮೋಡಗಳ ದೇವ. ಪರ್ಜನ್ಯನೆಂದಾದರೂ ಕರೆಯಲಿ ಅಥವಾ ಇಂದ್ರನೆಂದಾದರೂ ಕರೆಯಲಿ, ಮಳೆಯ ದೇವ ಗಂಡನೆಂದು ಮತ್ತು ಅವನು ಸುರಿಸುವ ಮಳೆಯ ಹನಿಗಳು ವೀರ್ಯದ ಹನಿಗಳೆಂದೂ ನೇಗಿಲ ಗೆರೆಯಾದ ಸೀತೆಯೆಂಬ ಹೆಣ್ಣಿನ ಗರ್ಭದಲ್ಲಿ ಪ್ರವೇಶಿಸಿ ಬೆಳೆಯೆಂಬ ಫಲ ನೀಡುತ್ತದೆಂದು ಈ ಭಾವನೆಗಳ ಹಿಂದಿರುವ ನಂಬಿಕೆ. ಈ ಎಲ್ಲಾ ವಿವರಣೆಗಳೂ ಸೀತೆಯೆಂದರೆ ನೇಗಿಲ ಗೆರೆ ಎಂಬುದನ್ನು ಸ್ಪಷ್ಟಪಡಿಸುತ್ತವೆ.

ವೈದಿಕ ಗ್ರಂಥಗಳು ಮಾತ್ರವಲ್ಲ, ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಕೂಡಾ ಸೀತೆಯೆಂದರೆ ಕೃಷಿ, ಕೃಷಿ ಭೂಮಿ. ಅದರಂತೆ ರಾಜನ ಆಸ್ಥಾನದಲ್ಲಿ ಕೃಷಿಯ ನಿರ್ವಹಣೆ ಮಾಡುವ ಮುಖ್ಯ ಅಧಿಕಾರಿ ಅಥವಾ ಕೃಷಿ ಮಂತ್ರಿಗೆ ಸೀತಾಧ್ಯಕ್ಷನೆಂದು ಹೆಸರು. ಕೃಷಿಯಿಂದ ಬರುವ ಆದಾಯಕ್ಕೆ ಕೂಡ ಸೀತಾ ಎಂದು ಹೆಸರು. ಗೇಣಿದಾರ ರೈತರಿಗೆ ಕೂಡಾ ಅರ್ಧ ಸೀತಿಕ ಎಂದು ಹೆಸರು. ಹೀಗೆ ಸೀತೆ ಎಂದರೆ ಕೃಷಿ ಭೂಮಿಗೆ ಪರ್ಯಾಯ ಪದವಾಗಿ ಬಳಕೆಯಾಗಿರುವುದು ಕಂಡುಬರುತ್ತದೆ.

ರಾಮಾಯಣದ ನಿಜ ಕಥೆಯನ್ನು ಶೋಧಿಸುವಲ್ಲಿ ಈ ಅಂಶ ಬಹಳ ಮುಖ್ಯವಾಗುತ್ತದೆ.

**ವೈದಿಕ ಗ್ರಂಥಗಳು, ಪುರಾಣಗಳಲ್ಲಿ ಅಹಲ್ಯೆ**

ರಾಮಾಯಣ ಪೂರ್ವದ ಬ್ರಾಹ್ಮಣ ಗ್ರಂಥಗಳಲ್ಲಿ ಅಹಲ್ಯೆಯ ಪ್ರಸ್ತಾಪವೂ ಕೂಡ ಬರುತ್ತದೆ. ಸಾಮವೇದಕ್ಕೆ ಸೇರಿದ ಸದ್ವಿಂಶ ಬ್ರಾಹ್ಮಣ, ಜೈಮಿನೀಯ ಬ್ರಾಹ್ಮಣ, ಯಜುರ್ವೇದದ ಪರಂಪರೆಗೆ ಸೇರಿದ ಶಥಪಥ ಬ್ರಾಹ್ಮಣ, ತೈತ್ತಿರೀಯ ಬ್ರಾಹ್ಮಣಗಳು, ಎರಡು ಶ್ರೌತ ಸೂತ್ರಗಳಲ್ಲಿವೆ. ಸುಬ್ರಹ್ಮಣ್ಯ ಮಂತ್ರವೆಂಬುದರ ಭಾಗವಾಗಿ ಇಂದ್ರನನ್ನು ಯಾಗಶಾಲೆಗೆ ಆಹ್ವಾನಿಸುವಾಗ "ಓ ಅಹಲ್ಯೆಯ ಪ್ರಿಯನೇ, ಕೌಶಿಕನೆಂಬ ಗೌತಮನೇ" ಎಂದು ಪ್ರಾರ್ಥಿಸುತ್ತಾರೆ. ಇದು ರಾಮಾಯಣದ ಅಹಲ್ಯೆ ಮತ್ತು ಇಂದ್ರನ ಸಂಬಂಧ ಮತ್ತು ಗೌತಮನ ವೇಷಧಾರಿಯಾಗಿ ಬಂದ ಇಂದ್ರನ ಬಗ್ಗೆಯೂ ಹೊಳಹುಗಳನ್ನು ನೀಡುತ್ತದೆ.

ಅದೇ ಸಮಯದಲ್ಲಿ ಅಹಲ್ಯೆಯ ಶಾಪದ ಸ್ವರೂಪದ ಬಗ್ಗೆ ಅನೇಕ ಪುರಾಣಗಳು – ಬ್ರಹ್ಮ ವೈವರ್ತ ಪುರಾಣ, ಸ್ಕಂದ ಪುರಾಣಗಳು – ಆಕೆ ಬಂಡೆಯಾಗುವಂತೆ ಶಾಪ ನೀಡಿದರೆಂದು ಹೇಳಿವೆ. ಪ್ರಸಿದ್ಧ ಕಥಾ ಸರಿತ್ಸಾಗರ, ಕಾಳಿದಾಸನ ರಘುವಂಶಗಳು ಕೂಡ ಆಕೆ ಕಲ್ಲಾದ ಬಗ್ಗೆ ಹೇಳುತ್ತವೆ. ವಿವಿಧ ಭಾಷೆಗಳ ರಾಮಾಯಣಗಳೂ ಕೂಡ–ತಮಿಳಿನ ಕಂಬ ರಾಮಾಯಣ, ತುಳಸೀದಾಸನ ರಾಮ ಚರಿತ, ಅಧ್ಯಾತ್ಮ ರಾಮಾಯಣಗಳು ಅಹಲ್ಯೆಗೆ ಕಲ್ಲಾಗುವಂತೆ ಶಾಪ ನೀಡಲಾಯಿತೆಂದು ಹೇಳುತ್ತವೆ. ಆದರೆ ಬ್ರಹ್ಮ ಪುರಾಣ ಮಣ್ಣೆಲ್ಲಾ ಕೊಚ್ಚಿ ಹೋದ ಬತ್ತಿದ ನದಿಯಾಗುವಂತೆ ಶಾಪ ನೀಡಲಾಯಿತೆಂದು ವಿವರಿಸಿದರೆ, ಪದ್ಮ ಪುರಾಣ ಕೇವಲ ಅಸ್ಥಿಪಂಜರವಾಗುವಂತೆ ಶಾಪ ನೀಡಲಾಯಿತೆಂದು ಹೇಳಿದೆ.

ಇಂದ್ರ ಅಹಲ್ಯೆಯ ಪ್ರಿಯನೆಂದು ಪರಿಗಣಿಸುವ, ಯಜ್ಞದ ವೇದಿಕೆಗೆ ಈ ಹೆಸರಿನಿಂದಲೇ ಆಹ್ವಾನಿಸುವ ರಾಮಾಯಣ ಪೂರ್ವದ ವೈದಿಕ ಗ್ರಂಥಗಳಲ್ಲಿ ಇಂದ್ರನಾಗಲೀ, ಅಹಲ್ಯೆಯಾಗಲೀ ಹಾದರದಂತಹ ಘೋರ ತಪ್ಪು ಮಾಡಿದರೆಂಬ ಮತ್ತು ಅದಕ್ಕಾಗಿ ಶಾಪಕ್ಕೊಳಗಾದವರೆಂಬ ಭಾವ

ಇಲ್ಲ. ಅದೇ ಸಮಯದಲ್ಲಿ ಪುರಾಣಗಳು ಮತ್ತು ರಾಮಾಯಣಗಳು ಶಾಪದ ಬಗ್ಗೆ ಮತ್ತು ಬಂಡೆಯಾದ ಬಗ್ಗೆ ಮತ್ತೆ ಮತ್ತೆ ಹೇಳಿವೆ. ಇದರ ಅರ್ಥವೇನು? ಈ ಒಗಟನ್ನು ಬಿಡಿಸಿಕೊಳ್ಳುವುದು ರಾಮಾಯಣದ ಮೂಲ ಸ್ವರೂಪವನ್ನು ಅರಿಯುವುದರಲ್ಲಿ ಒಂದು ಮುಖ್ಯ ಪಾತ್ರ ವಹಿಸುತ್ತದೆ.

**ಇಂದ್ರನೆಂಬ ಮಳೆಯ ದೇವತೆ**

ಎ. ಕೆ. ಯಜ್ಞನಾರಾಯಣ ಐಯ್ಯರ್‌ರವರು ತಮ್ಮ "ವೇದಕಾಲೀನ ಭಾರತದಲ್ಲಿ ಕೃಷಿ ಮತ್ತು ಅದರ ಜೊತೆಗಾರ ಕಲೆಗಳು" ಕೃತಿಯಲ್ಲಿ ಹೀಗೆ ಹೇಳುತ್ತಾರೆ:

ವೇದಗಳ ಹಲವು ಶ್ಲೋಕಗಳಲ್ಲಿ ಸಮೃದ್ಧವಾಗಿ ಮಳೆಯನ್ನು ಸುರಿಸು ಎಂದು ಪ್ರಾರ್ಥಿಸಲಾಗಿದೆ. ಹೇಳುವುದಾದರೆ ಇದೇ ಅವರ ಬಹಳ ಮುಖ್ಯ ಮತ್ತು ಮೂಲಭೂತವಾದ ಪ್ರಾರ್ಥನೆ. ಈ ಎಲ್ಲ ಪ್ರಾರ್ಥನೆಗಳಲ್ಲಿ ಮಳೆಯನ್ನು ಸುರಿಸುವ ಹೊಣೆಯನ್ನು ಇಂದ್ರನಿಗೆ ಮೀಸಲಿರಿಸಲಾಗಿದೆ. ಇತರ ದೇವತೆಗಳನ್ನೂ ಇದಕ್ಕೆ ಸಹಾಯ ಮಾಡುವಂತೆ ಬಿನ್ನವಿಸಲಾಗಿದೆ."

**ಋಗ್ವೇದದಲ್ಲಿ ಹೀಗೆ ಪ್ರಾರ್ಥಿಸಲಾಗಿದೆ :**

'ಮೇಘಗಳ ಕೇಂದ್ರದಲ್ಲಿರುವ ಅಚ್ಚರಿಯೆನಿಸುವಷ್ಟು ಅಪಾರ ಪ್ರಮಾಣದ ನೀರನ್ನು ನಮ್ಮ ಸಮೃದ್ಧ ಜೀವನಕ್ಕಾಗಿ, ನಮ್ಮ ಪೋಷಣೆಗಾಗಿ ಕಳುಹಿಸು. ನಮಗೆ ಒಳ್ಳೆಯದನ್ನು ಮಾಡು.' (ಋಗ್ವೇದ : ೨೧.೩.೧೦)

**ಇಂದ್ರ ಹೇಳುತ್ತಾನೆ :**

'ಸಿಡಿಲನ್ನೇ ಆಯುಧ ಮಾಡಿಕೊಂಡ ನಾನು ಮಾನವರ ಕ್ಷೇಮಕ್ಕಾಗಿ ಈ ನೀರನ್ನು ಬಿಡುಗಡೆ ಮಾಡಿ ಹರಿಯುವಂತೆ ಮಾಡಿದೆ.' (ಋಗ್ವೇದ ೨೩.೧.೮)

**ಯಜುರ್ವೇದದಲ್ಲಿ ಹೀಗೆ ಹೇಳಿದೆ :**

'ಮೇಘಗಳನ್ನು ಭೇದಿಸು, ನೀರನ್ನು ಅವುಗಳ ಬಂಧನದಿಂದ ಮುಕ್ತಗೊಳಿಸು. ನೆಲದಲ್ಲಿ ಪ್ರವಾಹವೇ ಹರಿಯುವಂತೆ ಮಾಡು. ನಮಗೆ ಉಪಕಾರಿಯಾದ ನೀರನ್ನು ಹರಿಸು.' (ಯಜು. ೧೩.೨.೬)

'ಜಲದ ಸುತ್ತಾ ಸುತ್ತಿಕೊಂಡಿರುವ ಬಂಧನವನ್ನು ಕತ್ತರಿಸು. ಅದನ್ನು ಮುಕ್ತಗೊಳಿಸು. ಧಾರೆ ಧಾರೆಯಾಗಿ ನೀರನ್ನು ನಮಗೆ ದಯಪಾಲಿಸು.' (ಯಜು.೧೩.೨.೧,೨)

ಹೀಗೆ ಇಂದ್ರ ಜನಜನಿತವಾದಂತೆ ದೇವತೆಗಳ ರಾಜ, ಕಾಮಿ, ಅಪ್ಸರೆಯರ ನೆರವಿನಿಂದ ತಪಸ್ಸನ್ನು ಕೆಡಿಸುವವ ಇತ್ಯಾದಿ ಅಲ್ಲ. ಅವನು ಪ್ರಧಾನವಾಗಿ ಮಳೆಯ ದೇವ. ಅಹಲ್ಯೆಯ ಜೊತೆ ಅವನ ಸಂಬಂಧ ಮಳೆ ಮತ್ತು ಭೂಮಿಯ ಜೊತೆಗಿನ ಸಂಬಂಧದ ಒಂದು ಆಯಾಮ. ಇಂದ್ರನೆಂಬ ಮಳೆಯ ದೇವನೊಂದಿಗೆ ಕೂಡಿದ ಮೇಲೆ ಅವಳು ಮಣ್ಣು ಕೊಚ್ಚಿಹೋದ ನೀರಿಲ್ಲದ ನದಿಯಂತಾದಳು ಎಂಬ ವಿವರಣೆ ಆರ್ಭಟಿಸಿ ಸುರಿದ ಮಳೆಯಿಂದಾಗಿ ನೀರು ಸೊಕ್ಕಿ ಹರಿದು ಭೂಮಿಯ ಮೇಲಿದ್ದ ಮಣ್ಣನ್ನೆಲ್ಲಾ ಕೊಚ್ಚಿಕೊಂಡು ಹೋದ, ಅದರಿಂದಾಗಿ ಕಲ್ಲು ಬಂಡೆಗಳೆಲ್ಲಾ ಮೇಲೆದ್ದು ಭೂಮಿಯನ್ನು ಉಳುಮೆ ಮಾಡುವುದಕ್ಕೆ ಅನರ್ಹವಾದ ಅ–ಹಲ್ಯೆಯನ್ನಾಗಿ ಮಾಡಿರುವ ಚಿತ್ರ ಕಣ್ಣ ಮುಂದೆ ಮೂಡುತ್ತದೆ.

### ನಮನ...

ಖ್ಯಾತ ವೈದ್ಯರೂ, ಪ್ರಾಧ್ಯಾಪಕಿಯೂ, ಲೇಖಕಿಯೂ, ಆರೋಗ್ಯ ಇಲಾಖೆಯ ಜಂಟಿ ನಿರ್ದೇಶಕರೂ ಆಗಿದ್ದ ಡಾ॥ ಲೀಲಾವತಿ ದೇವದಾಸ್ ಅವರು ಹೃದಯಾಘಾತದಿಂದ ನಿಧನ ಹೊಂದಿದ್ದಾರೆ. ಇವರ ಹಲವಾರು ಪುಸ್ತಕಗಳು, ವಿವಿಧ ಪತ್ರಿಕೆಗಳಲ್ಲಿ ಲೇಖನಗಳು ಮತ್ತು ಅಂಕಣ ಬರಹಗಳು ಪ್ರಕಟವಾಗಿವೆ. ಇವರಿಗೆ 'ವೈದ್ಯ ಸಾಹಿತ್ಯ ರತ್ನ', 'ಕನ್ನಡ ರಾಜ್ಯೋತ್ಸವ ಪ್ರಶಸ್ತಿ'ಯೂ ಸೇರಿದಂತೆ ಹಲವು ಪ್ರತಿಷ್ಠಿತ ಪ್ರಶಸ್ತಿಗಳು ಲಭಿಸಿವೆ. ಇವರ 'ಆಸ್ಪತ್ರೆಯಲ್ಲಿ ಹಾಸ್ಯ' ಕೃತಿ ನವಕರ್ನಾಟಕದಿಂದ ಪ್ರಕಟವಾಗಿದೆ. ಇವರ ನಿಧನಕ್ಕೆ 'ನವಕರ್ನಾಟಕ' ಹಾಗೂ 'ಹೊಸತು' ಬಳಗ ಸಂತಾಪ ಸೂಚಿಸುತ್ತದೆ.

ಹೀಗೆ ಸೀತೆ ಎಂದರೆ ವ್ಯಕ್ತಿಯಲ್ಲ. ಉಳುಮೆ ಮಾಡಿದ ಕೃಷಿ ಭೂಮಿ. ಅಹಲ್ಯೆ ಎಂದರೆ ಮಳೆ ಸುರಿದು ಮಣ್ಣು ಕೊಚ್ಚಿಹೋದ ಬಂಡೆಗಳೆಲ್ಲ ಮೇಲೆದ್ದ ಉಳುಮೆ ಸಾಧ್ಯವಾಗದಂತಹ ಭೂಮಿ, ಇವರಾರೂ ವ್ಯಕ್ತಿಗಳಲ್ಲ ಎಂಬುದು ಇವುಗಳಿಂದ ಸಾಬೀತಾಗುತ್ತದೆ. ಇದು ರಾಮಾಯಣದ ಸ್ವರೂಪವನ್ನೇ ಬದಲಾಯಿಸಿಬಿಡುತ್ತದೆ. ಇಡೀ ರಾಮಾಯಣವನ್ನು ಕೃಷಿಗೆ ಸಂಬಂಧಿಸಿದ ಕ್ರಿಯೆಗಳ, ಆಚರಣೆಗಳ ಕಥಾನಕವಾಗಿಸುತ್ತದೆ.

ಈ ಹೊಸ ಬೆಳಕಿನಲ್ಲಿ ಜಿಂಕೆಯ ಬೇಟೆ, ಸೀತೆಯ ಅಪಹರಣ, ಲಕ್ಷ್ಮಣ ರೇಖೆ, ಸೀತೆಯ ಅಗ್ನಿ ಪ್ರವೇಶ ಎಲ್ಲವೂ ಕೃಷಿಯ ವಿವಿಧ ಪ್ರಕ್ರಿಯೆಗಳ ವಿವರಣೆಯಾಗಿ ಕಾಣತೊಡಗುತ್ತವೆ. ಏಕೆಂದರೆ ಸೀತೆ ಎಂಬ ಕೃಷಿ ಭೂಮಿಯ ಅಗ್ನಿ ಪ್ರವೇಶವೆಂದರೇನು? ಕೃಷಿ ಭೂಮಿಯ ರಕ್ಷಣೆಗಾಗಿ ಎಳೆದ ಲಕ್ಷ್ಮಣ ರೇಖೆ, ಎಲ್ಲವೂ ಹೊಸ ಅರ್ಥ ಪಡೆದುಕೊಳ್ಳುತ್ತವೆ. ಆದರೆ ಇಂದಿನ ಆಧುನಿಕ ಕೃಷಿಯ ಪ್ರಕ್ರಿಯೆಗಳಲ್ಲ. ಮಾನವ ಸಮುದಾಯ ಕೃಷಿಯನ್ನು ಮೊತ್ತ ಮೊದಲು ಕಂಡುಕೊಂಡ ಆದಿಮ ಸ್ವರೂಪದಲ್ಲಿ.

ಇದನ್ನು ನಾವು ಇಂದೂ ಕೂಡ ಭಾರತದಲ್ಲಿ ಮಾತ್ರವಲ್ಲ, ಜಗತ್ತಿನಾದ್ಯಂತ ಬುಡಕಟ್ಟುಗಳು ಅನುಸರಿಸುವ ಝೂಮ್ ಕೃಷಿ, ಕುಮ್ರಿ ಬೇಸಾಯ ಅಥವಾ ಶಿಫ್ಟಿಂಗ್ ಕಲ್ಟಿವೇಷನ್ ಪದ್ಧತಿಯಲ್ಲಿ ಮಾತ್ರವೇ ಹುಡುಕಬೇಕಾಗುತ್ತದೆ.

ಕಾಡು ಕಡಿದು ಭೂಮಿಯನ್ನು ತಕ್ಕಮಟ್ಟಿಗೆ ಸಮನಾಗಿಸಿಕೊಂಡು ಬದುಗಳನ್ನು ಹಾಕಿ ಬೆಳೆ ತೆಗೆಯುವುದು ಈ ಪದ್ಧತಿಯ ಮೊದಲ ಹಂತ. ಕಾಡು ಕಡಿದು ಬೇಸಾಯ ಮಾಡುವಾಗಲೂ ಒಂದೇ ಕಡೆ ಹಲವು ವರ್ಷಗಳ ಕಾಲ ಬೆಳೆ ತೆಗೆದರೆ ವರುಷದಿಂದ ವರುಷಕ್ಕೆ ಫಸಲು ಕಡಿಮೆಯಾಗುತ್ತ

ಬರುವುದು ಅಂದಿನ ಮಾನವ ಸಮುದಾಯಗಳ ಅನುಭವಕ್ಕೆ ಬಂದಿತು. ಆದ್ದರಿಂದ ಎರಡು ಮೂರು ವರ್ಷಗಳ ನಂತರ ಕೃಷಿಯನ್ನು ಬೇರೆಡೆಗೆ ಸ್ಥಳಾಂತರ ಮಾಡಲಾರಂಭಿಸಿದರು. ಹೀಗೆ ಬೇರೆ ಬೇರೆಡೆಗಳಲ್ಲಿ ಕಾಡು ಕಡಿದು ಬೆಳೆ ಮಾಡಿ ಹಲವು ವರ್ಷಗಳ ನಂತರ ಮತ್ತೆ ಮೊದಲು ಕೃಷಿ ಮಾಡಿದ ಕಡೆಗೆ ಬಂದರೆ ಅಲ್ಲಿ ಮತ್ತೆ ಕಾಡು ಬೆಳೆದು ಭೂಮಿ ಫಲವತ್ತಾಗಿರುವುದೆಂದು ಅನುಭವ ಅವರಿಗೆ ಕಲಿಸಿತು. ಹೀಗೆ ಪ್ರದೇಶಗಳನ್ನೇ ಆವರ್ತನೆ ಮಾಡುವ ಅಥವಾ ಬದಲಾಯಿಸುವ ವಿಧಾನವನ್ನು ಕಂಡುಕೊಂಡರು. ಈ ವಲಸೆಯ ಆವರ್ತನೆಯ ಅವಧಿ ೧೫ರಿಂದ ೨೦ ವರ್ಷಗಳಿಗೊಮ್ಮೆ ಆದರೆ, ಆ ವೇಳೆಗೆ ಭೂಮಿ ಫಲವಂತಿಕೆಯನ್ನು ಮರಳಿ ಪಡೆದುಕೊಂಡಿರುತ್ತದೆ ಎಂದು ಈ ಮೊದಲ ಕೃಷಿಕರು ಕಂಡುಕೊಂಡರು. ಹೀಗೆ ವಲಸೆ ಕೃಷಿ (ಶಿಫ್ಟಿಂಗ್ ಕಲ್ಟಿವೇಷನ್) ಎಂದು ಕರೆಯಬಹುದಾದ ಝೂಮ್ ಕೃಷಿಯ ಆವಿಷ್ಕಾರವಾಯಿತು.

ಈಗ ನಮ್ಮ ಸೀತೆಯ ಕತೆ ಆರಂಭವಾಗುತ್ತದೆ. ಕೃಷಿಯನ್ನು, ಅದರಿಂದ ತಮ್ಮ ಆಹಾರದ ಹುಡುಕಾಟಕ್ಕೆ ಹೆಚ್ಚು ಸ್ಥಿರತೆ ಬರುವುದನ್ನು ಕಂಡುಕೊಂಡ ಬೇಟೆಗಾರ ಬುಡಕಟ್ಟಿನ ಜನರು ಭೂಮಿಯನ್ನು ಉಳುಮೆ ಮಾಡಿ ಬೆಳೆ ತೆಗೆದರು. ಮೂರು ನಾಲ್ಕು ವರ್ಷಗಳ ನಂತರ ಮೊದಲು ಉಳುಮೆ ಮಾಡಿದ ಭೂಮಿಯನ್ನು ಬಿಟ್ಟು ಬೇರೆಡೆಗೆ ಬೇಸಾಯ ಮಾಡಲು ವಲಸೆ ಹೋದರು. ಆಗ ನಮ್ಮ ಸೀತೆ ಎಂಬ ಕೃಷಿ ಭೂಮಿ ಏನಾಯಿತು? ಸುತ್ತಲೂ ಆವರಿಸಿದ ಕಾಡಿನ ನಡುವೆ ಇದ್ದ ಸೀತೆಯ ಮೇಲೆ ಲಕ್ಷ್ಮಣರೇಖೆ ಎಂಬ ಬದುವನ್ನು ಮೀರಿ ಕಾಡಿನ ಮರ, ಗಿಡ, ಲತೆಗಳ ಬೀಜಗಳು ಉದುರಿದವು. ಸೀತೆಯ ಮೇಲೆ ವನ ಬೆಳೆಯಲಾರಂಭಿಸಿತು. ಈ ಬುಡಕಟ್ಟು ಕೃಷಿಕರು ನಾಲ್ಕಾರು ಕಡೆ ವಸತಿ ಹೂಡಿ, ಬೇಸಾಯ ಮಾಡಿ ಮರಳಿ ಬಂದರು. ಹಿಂದೆ ಬೇಸಾಯ ಮಾಡಿದ್ದ ಸೀತೆಯನ್ನು ಹುಡುಕಾಡಿದರು. ಆದರೆ ಆಕೆಯನ್ನು ವನ ಅಪಹರಿಸಿತ್ತು ಎಂಬುದನ್ನು ಕಂಡುಕೊಂಡರು. (ಸೀತಾಪಹರಣ) ಸೀತೆಗಾಗಿ ಹುಡುಕಾಡಿದರು. ಅದನ್ನು ಹನುಮಂತನೂ ಇದ್ದ ತಂಡ ಕಂಡುಕೊಂಡಿತು. ನಂತರ ಸೀತೆಯನ್ನು ಅಪಹರಿಸಿದ್ದ ವನದ ಮೇಲೆ ಯುದ್ಧ ಹೂಡಿದರು. ನಂತರ ಆ ಮರ ಗಿಡಗಳಿಗೆಲ್ಲಾ ಬೆಂಕಿ ಹಚ್ಚಿದರು. (ಅಗ್ನಿ ಪರೀಕ್ಷೆ). ಹೀಗೆ ಸೀತೆ ಎಂದರೆ ಉಳುಮೆ ಮಾಡಿದ ಭೂಮಿ ಎಂದ ಕೂಡಲೇ ರಾಮಾಯಣದ ಮುಖ್ಯ ಘಟನೆಗಳಿಗೆಲ್ಲಾ ಬೇರೆಯೇ ಅರ್ಥ ಒದಗುತ್ತದೆ. ಈ ಸೀತೆಯನ್ನು ಅಪಹರಿಸಿದ ರಾವಣ ಕೂಡಾ ರಾ–ವನ ಎಂಬುದು ತಂತಾನೆ ತಿಳಿಯುತ್ತದೆ.

**ಹಲ ರಾಮಾಯಣವೋ, ಕೋದಂಡ ರಾಮಾಯಣವೋ**

ನಮ್ಮ ದೇಶದ ಪುರಾಣ, ಕಾವ್ಯಲೋಕದಲ್ಲಿ ಮೂವರು ರಾಮರುಗಳಿದ್ದಾರೆ. ಪರಶುರಾಮ, ಕೋದಂಡರಾಮರ ಹೆಸರುಗಳು ಎಲ್ಲರಿಗೂ ಥಟ್ಟನೆ ನೆನಪಿಗೆ ಬರುತ್ತವೆ. ನೆನಪಿನಿಂದ ಮರೆಯಾಗಿರುವ ಮತ್ತೊಬ್ಬ ರಾಮನೆಂದರೆ ಬಲರಾಮ.

ಈ ಮೂವರು ರಾಮರಲ್ಲಿಯೂ ಒಂದು ಸಾಮಾನ್ಯವಾದ ಲಕ್ಷಣವಿದೆ. ಇದು ನಮ್ಮ ಕಾವ್ಯ, ಪುರಾಣಗಳನ್ನು, ಅನೇಕ ಐತಿಹ್ಯಗಳನ್ನು ಅರ್ಥೈಸುವುದಕ್ಕೂ ಬಹಳ ಮುಖ್ಯವಾದ ಲಕ್ಷಣ ಅದು. ಅಷ್ಟೇ ಅಲ್ಲ, ಅದು ದೇಶದ ಇತಿಹಾಸವನ್ನು ಕಟ್ಟುವುದಕ್ಕೂ ಬಹಳ ಮುಖ್ಯವಾದ ಸಂಗತಿ. ಈ ಮೂವರು ರಾಮರೂ ಕೂಡ ಮೂರು ಭಿನ್ನ ಭಿನ್ನ ಆಯುಧಧಾರಿಗಳು. ಮತ್ತು ಆ ಆಯುಧವೇ ಅವರನ್ನು ಗುರುತಿಸುವ ಹೆಗ್ಗುರುತಾಗಿದೆ. ಅವರ ಹೆಸರಿನ ಮುಖ್ಯ ಭಾಗವಾಗಿದೆ. ಪರಶುರಾಮನ ಆಯುಧವಂತೂ ಎಲ್ಲರಿಗೂ ಗೊತ್ತಿರುವ ಆಯುಧ – ಕೊಡಲಿ. ಇನ್ನು ಶ್ರೀರಾಮನು ಕೋದಂಡರಾಮನೂ ಹೌದು. ಬಿಲ್ಲು ಅವನ ಏಕಮಾತ್ರ ಮತ್ತು ಪ್ರಸಿದ್ಧ ಆಯುಧ. ಇನ್ನು ಬಲರಾಮನಂತೆಯೇ ಅವನ ಆಯುಧವೂ ಕೂಡ ಅಪ್ರಸಿದ್ಧವೇ! ಹಿಂದೆಯೆ ಈ ಲೇಖನಮಾಲೆಯಲ್ಲಿ ಬರೆದಂತೆ ಅವನನ್ನು ಹಲಾಯುಧ ಎಂದು ಕರೆಯುತ್ತಾರೆ. ನೇಗಿಲೇ ಅವನ ಆಯುಧ. ಈ ಆಯುಧವನ್ನು ಯಾವ ಕಾಳಗ, ಯುದ್ಧದಲ್ಲಿಯೂ ಬಳಸಿದ್ದರ ವರದಿಯಿಲ್ಲ. ಅವನ ಯುದ್ಧಾಯುಧ ಗದೆ. ಅದನ್ನೇ ಅವನು ಬಳಸಿರುವುದು. ಆದರೂ ಅವನನ್ನು ಹಲಾಯುಧ ಎಂದೇ ಕರೆಯಲಾಗುತ್ತದೆ. ಅದು ಅವನ ಹೆಸರಿನೊಡನೆಯೂ ಅದು ಸೇರಿದೆ. ಬಲ ಎಂಬುದು ಹಲ ಎಂಬುದರ ರೂಪ. ಹಾಗೆ ಅವನು ಹಲರಾಮ. ಲ ಅಥವಾ ಬಲರಾಮ ತನ್ನ ನೇಗಿಲಿನಿಂದ ಯಮುನೆಯನ್ನೇ ಎಳೆದು ತಂದನೆಂದೂ,



ಯಮುನೆ ಅವನು ಎಳೆದಾಡಿದಲ್ಲೆಲ್ಲಾ ಹರಿದು ಬಂದಳೆಂದೂ ಪುರಾಣಗಳು ಹೇಳುತ್ತವೆ. ಇದೂ ಕೂಡ ನೀರಾವರಿ ಕೃಷಿಯ ಸ್ಪಷ್ಟ ಸೂಚನೆಯಲ್ಲವೇ !

ಈ ಮೂರು ಆಯುಧಗಳೂ ಕೂಡ ಮಾನವರ ನಾಗರಿಕತೆಯಲ್ಲಿ ಅಂದಂದಿನ ಕಾಲಕ್ಕೆ ದೊಡ್ಡ ನೆಗೆತಗಳು. ಮನುಷ್ಯ ಸಮಾಜದ ಬೆಳವಣಿಗೆಯ ಮೂರು ಮುಖ್ಯ ಹಂತಗಳನ್ನು ಪ್ರತಿನಿಧಿಸುತ್ತವೆ. ಆದ್ದರಿಂದ ಈ ಮೂರೂ ಆಯುಧಗಳನ್ನು ಹಿಡಿದ ಮಾನವ ಒಂದು ಮಹತ್ತರ ಅವತಾರವಾಗಿ ಕಂಡದ್ದರಲ್ಲಿ ಆಶ್ಚರ್ಯವಿಲ್ಲ. ಈ ಮೂವರು ರಾಮರಲ್ಲಿ ನಮ್ಮ ಸೀತೆಯೆಂಬ ಉತ್ತ ಭೂಮಿಯ ಕೃಷಿಯ ಕತೆಯಲ್ಲಿ ಸ್ವಾಭಾವಿಕವಾಗಿ ನೇಗಿಲನ್ನು ಹಿಡಿದ ರಾಮನೇ ನಾಯಕನಲ್ಲವೇ. ಎಲ್ಲೆಲ್ಲಿ ನೇಗಿಲನ್ನು ಹಿಡಿದ ರಾಮ ಕ್ರಿಯಾಶೀಲವಾಗಿರುವನೋ ಅಲ್ಲೆಲ್ಲಾ ಸೀತೆ ಹುಟ್ಟು ಪಡೆಯುತ್ತಾಳೆ. ಅಂದರೆ ರಾಮನಿದ್ದೆಡೆಯಲ್ಲೆಲ್ಲಾ ಸೀತೆ ಹುಟ್ಟುತ್ತಾಳೆ ಅಥವಾ ರಾಮನನ್ನು ನೆರಳಿನಂತೆ ಅನುಸರಿಸುತ್ತಾಳೆ.

ಬೇಟೆಗಾರರಾಗಿ ತಮ್ಮ ಆಹಾರದ ಅಗತ್ಯಗಳಿಗೆ ತಕ್ಕಂತೆ ಬೇಟೆ ದೊರೆಯದೆ ಅನಿಶ್ಚಿತತೆ, ಹಸಿವು, ಸಾವುಗಳನ್ನು ಎದುರಿಸುತ್ತಿದ್ದ ಬುಡಕಟ್ಟಿನ ಜನರಿಗೆ ಕೃಷಿ ಹಸಿವಿನಿಂದ ಬಿಡುಗಡೆಯ ಮಾರ್ಗವಾಗಿ ಬಹಳ ಸಂತೋಷವನ್ನು ತಂದಿತು.

ಬೇಟೆಗಾರರಾಗಿದ್ದು ಕೃಷಿಯನ್ನು ಹೊಸದಾಗಿ ಕಂಡುಕೊಂಡ ಬುಡಕಟ್ಟು ಜನರ ಹಾಡುಗಾರ ಮತ್ತು ಜಾನಪದ ಕವಿಯಾಗಿದ್ದ ವಾಲ್ಮೀಕಿ ಆ ಹೊಸ ಅನುಭವವನ್ನು – ಭೂಮಿಯ ಉಳುಮೆ, ಭೂಮಿಯ ಮಗಳಾದ ಸೀತೆಯ ಹುಟ್ಟು, ನೇಗಿಲ ರಾಮನನ್ನು ವರಿಸಿ ಅವನ ನೆರಳಾಗಿ ಅವನು ಹೋದಲ್ಲೆಲ್ಲ ಅನುಸರಿಸಿದ್ದು, ಸೀತೆಯನ್ನು ರಕ್ಷಿಸಲು ಬದು ಎಂಬ ಲಕ್ಷ್ಮಣ ರೇಖೆ, ವನದಿಂದ ಸೀತೆಯ ಅಪಹರಣ, ವನದೊಂದಿಗೆ ಯುದ್ಧ, ಸೀತೆಯ ಬಿಡುಗಡೆ, ಸೀತೆಯ ಅಗ್ನಿ ಪರೀಕ್ಷೆ, ಇವುಗಳ ಬಗೆಗೆ ತಮ್ಮ ಅಪೂರ್ವ ರೂಪಕ ಭಾಷೆಯಲ್ಲಿ ಹಾಡು ಕಟ್ಟಿ ಹಾಡಿದರು. ಅವರ ಜೀವನವನ್ನೇ ಮಾರ್ಪಡಿಸುವ ಸಂಗತಿಯಾಗಿ ಮತ್ತು ಈ ಕಾಡು ಕೃಷಿ ಪದ್ಧತಿಯನ್ನು ಮುಂದಿನ ತಲೆಮಾರುಗಳಿಗೆ ಕಲಿಸುವ ಸಾಧನವಾಗಿ ಈ ಕಾವ್ಯ ಬಹಳ ಜನಪ್ರಿಯವಾಗಿತ್ತು. ಈ ಜನಪ್ರಿಯತೆ ಮತ್ತು ಅದರ ರೂಪಕ ಸೌಂದರ್ಯ ಗಂಗಾ ನದಿ ಬಯಲಿನಲ್ಲಿ ಪಶು ಸಂಗೋಪನೆಯಲ್ಲಿ ತೊಡಗಿದ್ದ ಆರ್ಯ ಜನರನ್ನೂ ಆಕರ್ಷಿಸಿತು. ಯಾಗಗಳಲ್ಲಿ ಹಾಡುತ್ತಿದ್ದ ಕ್ಷತ್ರಿಯ ಹಾಡುಗಾರರೂ ಇದನ್ನು ಹಾಡಿದರು. ಹೀಗೆ ರಾಮಾಯಣ ಇನ್ನೂ ಜಾನಪದದ ಹಂತದಲ್ಲಿಯೇ ಬೆಳೆಯುತ್ತಿರುವಾಗ ಹಲವು ಬೆಳವಣಿಗೆಗಳು ಸಂಭವಿಸಿದುವು.

ನಮ್ಮ ನಡುವೆ ಜನಜನಿತವಾದ ರಾಮಾಯಣದ ಅಡಿಪಾಯದಲ್ಲಿಯೇ ಅಡಗಿರುವ ವಾಲ್ಮೀಕಿಕೃತ ನಿಜ ರಾಮಾಯಣವನ್ನು ಕಂಡುಕೊಂಡರೆ ಮಾತ್ರ ಈ ಅಡಿಪಾಯದ ಮೇಲೆ ರಚಿತವಾದ ರಾಮಾಯಣದ ಗುರಿ ಉದ್ದೇಶಗಳ ನಿಜವನ್ನು ಅರಿಯಲು ಸಾಧ್ಯ. ಈ ತೀರ್ಮಾನಗಳು ಸಾಕಷ್ಟು ಆಕರಗಳನ್ನು ಅಧ್ಯಯನ ಮಾಡಿ ಕಂಡುಕೊಂಡಂತಹವು. ಇದನ್ನು ಸಾವಧಾನವಾಗಿ ತಾಳ್ಮೆಯಿಂದ ಓದಿ. ಆಧಾರ ಸಹಿತ ಸಂವಾದಕ್ಕೆ ತೆರೆದುಕೊಳ್ಳಿ. ನಿಮ್ಮದೇ ಶೋಧಗಳ ಮೂಲಕ ಅಧ್ಯಯನವನ್ನು ಬೆಳೆಸಿ. ಒಟ್ಟಿಗೆ ಸೇರಿ ಸತ್ಯವನ್ನು ಅರಸೋಣ.

ಜಿ. ಎನ್. ನಾಗರಾಜ್
'ಸಂಕ್ರಾಂತಿ', ನಂ.೨೩೫, ೧೭ನೇ ಮುಖ್ಯರಸ್ತೆ, ೪ನೇ ಬ್ಲಾಕ್
ನಂದಿನಿ ಲೇಔಟ್, ಬೆಂಗಳೂರು – ೫೬೦ ೦೯೬

# ಉಗುಳುವುದೆಂದರೆ ?






ಉಗುಳುವುದೆಂದರೆ
ಎಲ್ಲರಿಗೂ ಇಷ್ಟ
ಹಾಗೆ ಮಾಡಿದಾಗ ಎದೆಯೊಳಗೆ
ಕೊಚ್ಚುತ್ತಿದ್ದ ಹೊಲಸು ಛಾಯೆಗಳು
ಎಂಜಲ ರೂಪದಲ್ಲಿ ಆಚೆ ಬರುತ್ತವೆ.

ಉಗುಳುವುದದೆಂದರೆ ಅಲ್ಲವಳು
ಎಂಜಲಾಗುವುದು ಸಾಮಾನ್ಯ,
ಕೆಡುಕುಗಳನ್ನ ಆಸಿಡ್‌ಗಳಾಗಿ
ಪರಿವರ್ತಿಸಿ ಚೆಲ್ಲುತ್ತಾ
ಬೀಭತ್ಸಗೊಂಡು
ಭೀಕರಗೊಳಿಸುತ್ತಿರುತ್ತಾರೆ.

ಅರೆನಗ್ನವಾಗಿದ್ದಾಗ
ಮೆಳ್ಳಗಣ್ಣಲ್ಲಾದರೂ ನೋಡಿ ತೃಪ್ತಿ
ಪಟ್ಟುಕೊಳ್ಳುತ್ತಿದ್ದ ಆಸೆಗಣ್ಣುಗಳು
ಇದೀಗ ಬಾಯಿಯ ಮೂಲಕ ಚಪಲವನ್ನು
ಚೆಲ್ಲಿಬಿಡುತ್ತಾ ಅವಳ ಕಣ್ಣುಗಳಲ್ಲಿ
ಉಗುಳಾಗುತ್ತಿದ್ದಾರೆ.

ಅವರು ಉಗುಳುವಾಗ
ಬಲಿಯಾದವರಿಗೆ ಲೆಕ್ಕವಿಲ್ಲ
ಲೆಕ್ಕ ಸಿಗಲೂ ಇಲ್ಲ,
ಉಗುಳುತ್ತಿರುವ ಪ್ರತಿಯೊಬ್ಬರನೆತ್ತು
ಇಂಥವರ ಹೆತ್ತಿದಕ್ಕೆ

ಅವರೆದೆಯೊಳಗೆ ಇರಲಾದೆ ಆಚೆ ಬಂದು
ಸ್ವತಂತ್ರವಾಗುತ್ತಿದ್ದಳು.

ಉಗುಳುವುದೆಂದರೇನು
ಸಾಮಾನ್ಯವಲ್ಲ ಬಿಡಿ
ಬಾಯಲ್ಲಿಟ್ಟುಕೊಂಡರೆ ತಾವೆಲ್ಲಿ
ಗಬ್ಬೇರುತ್ತೀವೋ ಎಂಬ ಭಯದಲ್ಲಿ
ಎಲ್ಲರೂ
ಉಗಿವ ಧಾಂಗುಡಿಯಲ್ಲೇ ಇದ್ದಾರೆ.

ಉಗಿಯುವಾಗಿನ ಅವರ ಮುಖ
ನಾಲಿಗೆ ಕಣ್ಣು ಹೃದಯವೆಲ್ಲವೂ
ನಿತ್ರಾಣ ಸ್ಥಿತಿಯಲ್ಲಿದ್ದವು.
ಕಣ್ಣ ಪ್ರತಿಬಿಂಬಗಳು
ತಮ್ಮನ್ನ ತಾವೇ
ಕುರುಡುಗೊಳಿಸಿಕೊಳ್ಳುತ್ತಿದ್ದವು.

ಕಿರೀಟಗಳುದುರುವ ಸಮಯದಿ
ಉಗುಳುವ ಮೂಲಕ
ಧೈರ್ಯ ಪ್ರದರ್ಶನ ಮಾಡುತ್ತಾ,
ಅವರಿಗೇ ತಿಳಿಯದೇ
ಅವರ ಉಂಗುರದ ಛಿದ್ರತೆಗಳನ್ನು
ತಮ್ಮ ಕಣ್ಣ ಚೂರುಗಳನ್ನು
ಸಾಕ್ಷಿಯಾಗಿ ಉಳಿಸಿದ್ದರು.

ನನಗಿಷ್ಟೇ ಸಾಕಿತ್ತು
ಒಬ್ಬಳು ಥೂಕರಿಸಿದರೆ
ಇಷ್ಟೆಲ್ಲಾ ಜನರ ಮನದೊಳಗಿನ
ಹೊಲಸು ಎಂಜಲಾಗಿ
ಹೊರಬಂದು ನಿರ್ವಾಣವಾಗಿ
ಯೋಗ್ಯಸ್ಥರ ಎದೆ ಬಗೆವುದೆಂದು,
ಅದಕ್ಕೆಂದೇ ಉಗುಳುವುದನ್ನ ನಾನೂ
ಅಭ್ಯಾಸ ಮಾಡಿಕೊಂಡಿದ್ದೇನೆ.

**ಭವ್ಯ ಪಿ.**
ನಂ. ೨೮೩, ೧ನೇ ಮುಖ್ಯರಸ್ತೆ, ೧ನೇ ಅಡ್ಡರಸ್ತೆ
ಕಮಲಾನಗರ, ಬೆಂಗಳೂರು – ೫೬೦ ೦೭೯



# ರಾಹು ಎಂಬ “ಗ್ರಹ”!

ಹೊಸ ವರ್ಷದ ಶುಭಾಶಯಗಳು.

ಈಗ್ಗೆ ೯ ವರ್ಷಗಳ ಹಿಂದೆ ಜನವರಿಯಲ್ಲಿ ಖಗೋಳ ವೀಕ್ಷಕರಿಗೆಲ್ಲಾ ಸಂಭ್ರಮಕ್ಕೊಂದು ಒಳ್ಳೆಯ ಅವಕಾಶವಿತ್ತು. ಅನೇಕರು ತಂಡತಂಡವಾಗಿ ಕನ್ಯಾಕುಮಾರಿ, ರಾಮೇಶ್ವರ ಯಾತ್ರೆ ಮಾಡಿದರು. ಸೂರ್ಯ ಬಳೆಯಂತೆ ಆಕಾಶದಲ್ಲಿ ಹೊಳೆಯುತ್ತಿದ್ದುದನ್ನು ಕಂಡು ಸಂತಸ ಪಟ್ಟರು. ಬೆಂಗಳೂರಲ್ಲೇ ಉಳಿದವರಿಗೆ ಪಾರ್ಶ್ವಗ್ರಹಣ ನೋಡಲು ಸಿಕ್ಕಿತ್ತು. ಮಧ್ಯಾಹ್ನದ ಸುಡುಬಿಸಿಲು ಇದ್ದಕ್ಕಿದ್ದ ಹಾಗೆ ತಣ್ಣಗಾದ ಅನುಭವ ದೊರೆಯಿತು. ಇದು ನಡೆದದ್ದು ೨೦೦೯, ಜನವರಿ ೧೫ರಂದು (ಮಕರ ಸಂಕ್ರಮಣದ ಸಂಭ್ರಮದಲ್ಲಿ) ಎಂದು ಹಲವರಿಗೆ ನೆನಪಿರ ಬಹುದು. ಇಲ್ಲದಿದ್ದರೂ ಚಿಂತೆಯಿಲ್ಲ; ಆ ತಾರೀಖನ್ನು ನೆನಪಿ ಸುವ ಘಟನೆ ಈ ತಿಂಗಳಲ್ಲಿ ನಡೆಯ ಲಿದೆ. ಸರಿಯಾಗಿ ೯ ವರ್ಷ ೫ ದಿನಗಳ ನಂತರ ಪುನಃ ಗ್ರಹಣ ನಡೆಯುತ್ತಿದೆ. ಆದರೆ ಇದು ಚಂದ್ರ ಗ್ರಹಣ. ಗ್ರಹಣಗಳನ್ನು ಸೃಷ್ಟಿಸುವ ಮೂಲ ಕಾರಣ ನಮಗೆ ಗೊತ್ತಿದೆ. ಈ ನೆರಳಿನ ಆಟವನ್ನು ನಿಯಂತ್ರಿ ಸುವುದು ಚಂದ್ರಕಕ್ಷೆ ಭೂ ಕಕ್ಷೆಯ ಸಮತಲ ವನ್ನು ದಾಟುವ ಕಾಲ್ಪನಿಕ ಬಿಂದು. ಈ ಬಿಂದುವನ್ನೇ ಒಂದು ಗ್ರಹ ಎಂದು ಕಲ್ಪಿಸಿಕೊಂಡರೆ ಅದಕ್ಕೊಂದು ಪರಿಭ್ರಮಣಾವಧಿಯನ್ನು ಲೆಕ್ಕ ಹಾಕಬಹುದು. ಇದಕ್ಕೆ ರಾಹು ಎಂದು ಹೆಸರಿಟ್ಟು ೧೮ ವರ್ಷ ೧೦ ದಿನಗಳ ಅವಧಿ ಯನ್ನೂ ಕಂಡು ಹಿಡಿಯಲು ಈ ತಿಂಗಳ ಗ್ರಹಣವೇ ಸುಲಭ ಉಪಾಯ. ಸೂರ್ಯನಿಗೂ ಭೂಮಿಗೂ ಮಧ್ಯದಲ್ಲಿದ್ದ ರಾಹು ೯ ವರ್ಷಗಳ ಹಿಂದೆ ಸೂರ್ಯಗ್ರಹಣಕ್ಕೆ ಕಾರಣವಾಯಿತು. ಈಗ ಅದು ಭೂಮಿಯ ಇನ್ನೊಂದು ದಿಕ್ಕಿಗೆ ಬಂದು ಚಂದ್ರ ಗ್ರಹಣವನ್ನು ಸೃಷ್ಟಿಸಿದೆ. ಹೀಗೆ ಕಣ್ಣಿಗೇ ಕಾಣದ “ಗ್ರಹ”ದ ಪರಿಭ್ರಮಣೆಯನ್ನು ನಾವು ಕಂಡುಹಿಡಿದಿದ್ದೇವೆ. ಇದನ್ನು “ಗ್ರಹ” ಎಂದು ಕರೆಯಬಹುದೇ? ತಾತ್ವಿಕವಾಗಿ “ಹೌದು” ಎನ್ನಬೇಕು. ಏಕೆಂದರೆ ಅದಕ್ಕೊಂದು ಪರಿ ಭ್ರಮಣಾವಧಿ ಇದೆಯಲ್ಲಾ!

ರಾಹುವಿಗೊಂದು ಅವಳಿ ಇದೆ. ಎರಡರ ನಡುವೆ ಸರಿಯಾಗಿ ೧೮೦ ಡಿಗ್ರಿಗಳ ಅಂತರವಿದೆ. ಹಾಗಾಗಿ ರಾಹು ಸೂರ್ಯ ಗ್ರಹಣವನ್ನು ಉಂಟು ಮಾಡಿದರೆ, ೧೫ ದಿನಗಳ ಅಂತರದಲ್ಲಿ ಈ ಅವಳಿ ಚಂದ್ರ ಗ್ರಹಣವನ್ನು ಉಂಟು ಮಾಡುತ್ತದೆ. ಈ ಕ್ರಮ ಅದಲು ಬದಲೂ ಆಗಬಹುದು. ಈ ಬಿಂದುವಿಗೆ ಕೇತು ಎಂಬ ಹೆಸರಿದೆ. ಅದು ಜನವರಿ ೬ರ ಸೂರ್ಯಗ್ರಹಣಕ್ಕೆ ಕಾರಣೀಭೂತವಾಗುತ್ತದೆ. ಈ ಗ್ರಹಣ ನಮಗೆ ಕಾಣುವುದಿಲ್ಲ. ೨೧ರ ಚಂದ್ರ ಗ್ರಹಣವೂ ಕಾಣುವುದಿಲ್ಲ. ಆದರೆ ಅಂದಿನ ಉಬ್ಬರ ಇಳಿತಗಳ ಭರಾಟೆ ಹೆಚ್ಚು; ಏಕೆಂದರೆ ಚಂದ್ರ ಗರಿಷ್ಠ ದೂರದಲ್ಲಿರುತ್ತದೆ. ಇದೇ ರೀತಿ ನಿಯಮಿತವಾಗಿ ಆಕಾಶವನ್ನು ನೋಡುತ್ತಾ ಬಂದರೆ ಉಳಿದ ಗ್ರಹಗಳ “ಚಿಲ್ಲರೆ” ಗ್ರಹಣಗಳನ್ನೂ ಲೆಕ್ಕ ಮಾಡಬಹುದು. ಅಷ್ಟೇ ಅಲ್ಲ; ಈ ಲೆಕ್ಕವನ್ನು ಮುಂದುವರೆಸಿ ಇನ್ನು ೯ ವರ್ಷಗಳ ನಂತರದ ಗ್ರಹಣದ ದಿನಾಂಕಗಳನ್ನು ಈಗಲೇ ಹೇಳಬಹುದಲ್ಲವೇ? ೨೦೨೮ರ ಜನವರಿ ೨೬ಕ್ಕೆ ಸೂರ್ಯ ಗ್ರಹಣವಿದೆ. ಆದರೆ ಅದು ಭಾರತಕ್ಕೆ ಕಾಣುವುದಿಲ್ಲ.




ಶುಭ್ರ ಆಕಾಶ ನಮಗೀಗ ದೊರಕಿದೆ. ಅತಿ ಪ್ರಕಾಶಮಾನವಾದ ನಕ್ಷತ್ರ ಲುಬ್ಧಕ (ಸಿರಿಯಸ್). ಇದರ ಉತ್ತರಕ್ಕೆ ಪೂರ್ವದ ಅಂಚಿನಲ್ಲಿ ಮಹಾವ್ಯಾಧ (ಒರೆಯನ್). ನೆತ್ತಿಯಲ್ಲಿ ಕಾಣುವ ತ್ರಿಕೋಣವೇ ಮೇಷ; ಅದರ ಪಶ್ಚಿಮಕ್ಕೆ ಇರುವ ಚೌಕ ಪೆಗಸಸ್ – ನಕುಲ. ಇದರ ಸಮೀಪದ ಕೆಂಪು ಚುಕ್ಕೆ ಮಂಗಳ ಗ್ರಹ. ಪೂರ್ವಕ್ಕೆ ರೋಹಿಣಿಯ ಸುತ್ತಲಿನ ಹೈಯಡೆಸ್ ಗುಚ್ಛ. ಏಳುನಕ್ಷತ್ರಗಳ ನಕ್ಷತ್ರಗುಚ್ಛ ಕೃತ್ತಿಕಾ ಅಥವಾ ಪ್ಲೆಯಡಿಸ್. ಇದರ ಉತ್ತರಕ್ಕಿರುವ ಪಂಚಕೋಣಾಕೃತಿಯೇ ಆರಿಗಾ ಅಥವಾ ವಿಜಯ ಸಾರಥಿ. ಅದರ ಪಕ್ಕದ ಪಾರ್ಥ (ಪರ್ಸಿಯಸ್) ಇನ್ನೂ ಉತ್ತರಕ್ಕೆ ಕುಂತಿ (ಕೆಸಿಯೋಪಿಯಾ)



೧ ಫೆಬ್ರವರಿ ಮುಂಜಾವು ಗುರು – ಶನಿ – ಶುಕ್ರ – ಚಂದ್ರ

**ಡಾ॥ ಬಿ. ಎಸ್. ಶೈಲಜಾ**

ಇವುಗಳನ್ನು ಗುರುತಿಸಬಹುದು. ನೈಋತ್ಯ ದಿಕ್ಕಿನಲ್ಲಿ ಬಕ ಪುಂಜದ ಎರಡು ನಕ್ಷತ್ರಗಳು ಮಾತ್ರ ಕಾಣಬಹುದು. ನೈಋತ್ಯದ ಅಂಚಿನಲ್ಲಿ ವೈತರಣೀಮುಖ; ಆಗ್ನೇಯದಲ್ಲಿ ಅಗಸ್ತ್ಯ – ಇವು ಪ್ರಕಾಶಮಾನವಾದ ನಕ್ಷತ್ರಗಳು.

ಮಂಗಳ ಗ್ರಹ ಸಂಜೆ ಕಾಣುವುದು. ಉಳಿದೆಲ್ಲವೂ ಮುಂಜಾವಿನಲ್ಲಿ ಕಾಣುವುವು. ಶುಕ್ರ ಗರಿಷ್ಠ ಎತ್ತರವನ್ನು ತಲುಪುವುದನ್ನು ಸುಲಭವಾಗಿ ಗುರುತಿಸಬಹುದು. ಬುಧ ಗ್ರಹ ಶನಿಗ್ರಹದ ಪಕ್ಕದಲ್ಲಿಯೇ ಹಾದು ಹೋಗುವ ಸಂದರ್ಭವೂ ಇದೆ.

ಜನವರಿ ೧ರಂದು ಚಂದ್ರ ಮತ್ತು ಶುಕ್ರ ಜೊತೆಗೂಡಿದ್ದವಲ್ಲವೇ? ೩೧ರಂದು ಪುನಃ ಒಂದು ಗೂಡುತ್ತವೆ. ಆ ದಿನ ಆಚ್ಛಾದನೆಯೂ ಇದೆ. ಆದ್ದರಿಂದ ಫೆಬ್ರವರಿ ೧ರ ಮುಂಜಾವು ಪೂರ್ವದಲ್ಲಿ ಚಂದ್ರನ ಮರೆಯಿಂದ ಹೊರಬಂದ ಶುಕ್ರ ನೋಡಲು ಸಿಗುತ್ತದೆ. ಅಮೆರಿಕದವರು ಈ ಪುಟ್ಟ ಗ್ರಹಣವನ್ನು ನೋಡಿರುತ್ತಾರೆ. ಸಮೀಪದಲ್ಲಿಯೇ ಗುರು ಹಾಗೂ ಶನಿ ಗ್ರಹಗಳನ್ನೂ ನೋಡಿ ಗುರುತು ಮಾಡಿಕೊಂಡು, ಮರುದಿನ ಅಂದರೆ ಫೆಬ್ರುವರಿ ೨ರ ಮುಂಜಾವಿನಲ್ಲಿ ಶನಿಯನ್ನು ಮರೆ ಮಾಡಲು ಹೊರಟಿರುವ ಚಂದ್ರನನ್ನು ಕಾಣಬಹುದು.

ತನ್ನ ಕಕ್ಷೆಯಲ್ಲಿ ಮುಖ್ಯ ಹಂತವೊಂದನ್ನು ಭೂಮಿ ದಾಟುವ ಘಟನೆ ೩ ರಂದು ನಡೆಯಲಿದೆ. ಅಂದು ಅದು ಪುರರವಿ ಬಿಂದುವನ್ನು ಹಾದು ಹೋಗುತ್ತದೆ. ಅಂದರೆ ಭೂಮಿ – ಸೂರ್ಯರ ನಡುವಿನ ಅಂತರ ಕನಿಷ್ಠ – ೧,೪೭,೦೦೦,೦೦೦ ಕಿ.ಮೀ ಮಾತ್ರ!

**ಖಗೋಳ ದಿನಚರಿ**

೧ ಚಂದ್ರ – ಶುಕ್ರ ೨ ಡಿಗ್ರಿ ಅಂತರದಲ್ಲಿ*
೨ ಶನಿಗ್ರಹದ ಯುತಿ (ಸೂರ್ಯನೊಡನೆ ಉದಯ ಮತ್ತು ಅಸ್ತಮಾನ)
೩ ಪುರರವಿಯಲ್ಲಿ ಭೂಮಿ; ಭೂಮಿ – ಸೂರ್ಯರ ಅಂತರ ಕನಿಷ್ಠ
೪ ಗುರುಗ್ರಹ ಚಂದ್ರ ಜೋಡಿ
೬ ಬುಧ – ಶನಿ – ಚಂದ್ರ ಪುಟ್ಟ ಗುಂಪು
ಅಮಾವಾಸ್ಯೆ ೦೬:೫೭ ಕ್ಕೆ; (ಸೂರ್ಯಗ್ರಹಣ)
ಶುಕ್ರ ಗ್ರಹದ ಗರಿಷ್ಠ ಕೋನೋನ್ನತಿ*
೯ ಚಂದ್ರ ಅಪಭೂ ಬಿಂದುವಿನಲ್ಲಿ
೧೨ ಮಂಗಳ – ಚಂದ್ರ ಜೋಡಿ*
೧೩ ಬುಧ ಶನಿ ಜೋಡಿ
೧೪ ಚಾಂದ್ರಮಾಸದ ಮೊದಲ ಪಾದ
೧೫ ಶುಕ್ರಗ್ರಹ ಜ್ಯೇಷ್ಠಾ ಜೋಡಿ*
೨೧ ಹುಣ್ಣಿಮೆ ೧೧:೪೬ಕ್ಕೆ (ಚಂದ್ರಗ್ರಹಣ)
೨೨ ಚಂದ್ರ ಪುರಭೂ ಬಿಂದುವಿನಲ್ಲಿ ೦೧:೩೦ಕ್ಕೆ
ಶುಕ್ರ – ಗುರು ಜೋಡಿ*
೨೭ ಚಾಂದ್ರಮಾಸದ ಕೊನೆಯ ಪಾದ
೩೦ ಬುಧ ಗ್ರಹದ ಯುತಿ (ಸೂರ್ಯನೊಡನೆ ಉದಯ ಮತ್ತು ಅಸ್ತಮಾನ)
೩೧ ಗುರು– ಚಂದ್ರ ಜೋಡಿ
೧ ಫೆಬ್ರುವರಿ ಮುಂಜಾವು ಶುಕ್ರ – ಚಂದ್ರ ಜೋಡಿ (ಆಚ್ಛಾದನೆ)
೨ ಫೆಬ್ರುವರಿ ಮುಂಜಾವು ಶನಿ – ಚಂದ್ರ ಜೋಡಿ (ಆಚ್ಛಾದನೆ)
(*ಛಾಯಾಗ್ರಹಣಕ್ಕೆ ಸದವಕಾಶ)

ಡಾ॥ ಬಿ. ಎಸ್. ಶೈಲಜಾ
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು – ೫೬೦ ೦೦೧

# ಭಾರತದ ಸಾಂಸ್ಕೃತಿಕ ಚಳವಳಿಗಳ ಸಮಾಜವಾದಿ ಯಾನ ಪಿಡಬ್ಲ್ಯುಎ/ಇಪ್ಟಾದ ಕೊಡುಗೆಗಳು

**ಮ. ಶ್ರೀ. ಮುರಳಿ ಕೃಷ್ಣ**

ಪಿಡಬ್ಲ್ಯುಎಯ ಮುಂದುವರೆದ ಭಾಗವಾಗಿ 'ಭಾರತ ಜನಕಲಾ ಸಮಿತಿ' (ಇಂಡಿಯನ್ ಪೀಪಲ್ಸ್ ಥಿಯೇಟರ್ ಅಸೋಸಿಯೇಷನ್ – ಇಪ್ಟಾ) ೧೯೪೩ರಲ್ಲಿ ಪ್ರಾರಂಭವಾಯಿತು. ಆದರೆ ಇದಕ್ಕೆ ಮುನ್ನವೇ ೧೯೪೦ರಲ್ಲಿ ಕೋಲ್ಕತ್ತಾದಲ್ಲಿ 'ಯುವಜನರ ಸಾಂಸ್ಕೃತಿಕ ಸಂಸ್ಥೆ', ಬೆಂಗಳೂರಿನಲ್ಲಿ ೧೯೪೧ರಲ್ಲಿ 'ಜನತಾ ರಂಗ ಸಂಸ್ಥೆ' ಮತ್ತು ೧೯೪೨ರಲ್ಲಿ ಮುಂಬೈನಲ್ಲಿ 'ಇಪ್ಟಾ' ಎಂದೇ ಕರೆಯಲ್ಪಡುತ್ತಿದ್ದ ಒಂದು ಸಂಸ್ಥೆ ಕೆಲಸವನ್ನು ಮಾಡಲು ಶುರುಮಾಡಿದ್ದವು. ಬೆಂಗಳೂರು ಮತ್ತು ಮುಂಬೈನ ಸಂಸ್ಥೆಗಳ ಹುಟ್ಟಿಗೆ ಸಿಲೋನ್ ಮೂಲದ ಅನಿಲ್ ಡಿಸಿಲ್ವಾ ಎಂಬ ಮಹಿಳೆ ಕಾರಣರಾಗಿದ್ದರು. ಅಂದಹಾಗೆ, ಇಪ್ಟಾ ಎಂಬ ಹೆಸರನ್ನು ಸೂಚಿಸಿದವರು ಹೆಸರಾಂತ ವಿಜ್ಞಾನಿಯಾಗಿದ್ದ ಹೋಮಿ ಜಹಂಗೀರ್ ಭಾಭಾ.

**ಭಾ**ರತದ ಸ್ವಾತಂತ್ರ್ಯ ಚಳವಳಿಗೆ ೧೯೧೭ರಲ್ಲಿ ರಷ್ಯಾದಲ್ಲಿ ಜರುಗಿದ ಸಮಾಜವಾದಿ ಮಹಾಕ್ರಾಂತಿ ಒಂದು ಸ್ಫೂರ್ತಿದಾಯಕ ಬೆಳವಣಿಗೆಯಾಗಿತ್ತು. ತದನಂತರದ ದಶಕಗಳಲ್ಲಿ ನಮ್ಮಲ್ಲೂ ಸಾಮ್ಯವಾದದ ಚಳವಳಿ ರೆಕ್ಕೆಪುಕ್ಕಗಳನ್ನು ಪಡೆದುಕೊಂಡಿತು. ಮುಖ್ಯವಾಗಿ ಎಡಪಂಥೀಯರು ಮತ್ತು ಪುರೋಗಾಮಿ ವ್ಯಕ್ತಿ–ಗುಂಪುಗಳಿಂದ ೧೯೨೦ರಲ್ಲಿ ಅಖಿಲ ಭಾರತ ಟ್ರೇಡ್ ಯೂನಿಯನ್ ಕಾಂಗ್ರೆಸ್ (ಎಐಟಿಯುಸಿ) ಸ್ಥಾಪನೆಗೊಂಡಿತು. ಇದಕ್ಕೆ ನಮ್ಮ ರಾಷ್ಟ್ರದ ಪ್ರಥಮ ಕಾರ್ಮಿಕ ಸಂಘ ಎಂಬ ಹೆಗ್ಗಳಿಕೆ ಇದೆ. ಇದಾದ ಐದು ವರ್ಷಗಳಲ್ಲೇ ಭಾರತ ಕಮ್ಯುನಿಸ್ಟ್ ಪಕ್ಷ (ಸಿಪಿಐ) ಅಸ್ತಿತ್ವಕ್ಕೆ ಬಂದಿತು. ನಮ್ಮ ರಾಷ್ಟ್ರದಲ್ಲೂ ಸಮಾಜವಾದಿ ವ್ಯವಸ್ಥೆ ಸ್ಥಾಪಿಸಬೇಕೆಂಬ ಧ್ಯೇಯೋದ್ದೇಶವಿದ್ದ ಅನೇಕರು ಇದರಡಿ ಕ್ರಿಯಾಶೀಲರಾದರು.

೧೯೩೫ರಿಂದ ೧೯೪೭ರವರೆಗೆ ಸಿಪಿಐನ ಪ್ರಧಾನ ಕಾರ್ಯದರ್ಶಿಯಾಗಿದ್ದ ಪಿ. ಸಿ. ಜೋಷಿ ಅವರದ್ದು ಬಹುಮುಖಿ ವ್ಯಕ್ತಿತ್ವ. ಅವರು ನಮ್ಮ ರಾಷ್ಟ್ರದ ಸಾಂಸ್ಕೃತಿಕ ಇತಿಹಾಸದ ಮೇಲೆ ಗುರುತಾರ್ಹವಾದ ಚಹರೆಯನ್ನು ಮೂಡಿಸಿದರು. ಸ್ವತಃ ಭಾರತದ ಕಲೆ, ಸಾಹಿತ್ಯ ಮತ್ತು ಸಂಸ್ಕೃತಿಯನ್ನು ಆಳವಾಗಿ ಅರಿತಿದ್ದ ಜೋಷಿ ಸಮಸಮಾಜದ ನಿರ್ಮಾಣಕ್ಕಾಗಿ ಕಾರ್ಮಿಕರು, ರೈತರು ಹಾಗೂ ದುಡಿಯುವ ವರ್ಗದ ಇತರ ಜನವಿಭಾಗಗಳ ಮಂದಿಯನ್ನು ಸಂಘಟಿಸುವುದರ ಜೊತೆಜೊತೆಗೆ ಸಾಂಸ್ಕೃತಿಕವಾಗಿಯೂ ಸ್ಪಂದಿಸಬೇಕೆಂಬ ಮನೋನೆಲೆಯನ್ನು ಹೊಂದಿದ್ದರು. ಇದನ್ನು ಸಾಕಾರಗೊಳಿಸಲು ಅವರು ಕಾರ್ಯಪ್ರವೃತ್ತರಾದರು. ಹೀಗೆ ಅವರು ಒಬ್ಬ ಸಾವಯವ ಬುದ್ಧಿಜೀವಿಯಾಗಿ ಅನುಪಮ ಕೊಡುಗೆಗಳನ್ನು ನೀಡಿ, ಒಂದರ್ಥದಲ್ಲಿ ಭಾರತದ ಸಾಂಸ್ಕೃತಿಕ ಪುನರುತ್ಥಾನಕ್ಕೆ ನಾಂದಿ ಹಾಡಿದರು.

೧೯೩೦ರ ದಶಕದಲ್ಲಿ ಇಡೀ ವಿಶ್ವ ನಾಝಿ ಮತ್ತು ಫ್ಯಾಸಿವಾದಗಳ ಕಪಿಮುಷ್ಟಿಗೆ ಸಿಲುಕಿ ನಲುಗಿತ್ತು. ಮಾನವತೆಯ ಮಾರಣಹೋಮ ಅಟ್ಟಹಾಸದಿಂದ ಸಾಗಿತ್ತು. ೧೯೩೫ರ ಜೂನ್ ೨೧ರಂದು ಪ್ಯಾರಿಸ್‌ನಲ್ಲಿ ವಿಶ್ವ ಬರಹಗಾರರ ಸಮ್ಮೇಳನವೊಂದು ಜರುಗಿತು. ಅದನ್ನು ಆಂದ್ರೆ ಗೈಡ್, ಮ್ಯಾಕ್ಸಿಂ ಗಾರ್ಕಿ, ಆಂದ್ರೆ ಮಾಲ್ರೊ, ಇ. ಎಮ್. ಫಾಸ್ಟರ್ ಮತ್ತು ಇತರರು ಸಂಘಟಿಸಿದ್ದರು. ಇದರ ಫಲಶ್ರುತಿಯಾಗಿ ಫ್ಯಾಸಿವಾದದ ವಿರುದ್ಧದ ಸಾಂಸ್ಕೃತಿಕ ರಕ್ಷಣೆಯ ಅಂತರರಾಷ್ಟ್ರೀಯ ಬರಹಗಾರರ ಸಂಘ ಸ್ಥಾಪಿಸಲ್ಪಟ್ಟಿತು.

ಆ ಕಾಲದಲ್ಲಿ ಹಿಟ್ಲರ್‌ನ ಅಮಾನವೀಯ ಮುನ್ನಡೆಯ ಉಗಮವಾಗಿತ್ತು. ಜರ್ಮನಿ ಮತ್ತು ಇತರ ಕೆಲವು ದೇಶಗಳ ಬುದ್ಧಿಜೀವಿಗಳು ಹಾಗೂ ಇತರ ವಿಭಾಗಗಳ ಜನರು ಫ್ಯಾಸಿವಾದದ ವಿರುದ್ಧ ದನಿಯೆತ್ತಿದ ಸಮಯವದು. ಜರ್ಮನಿಯಿಂದ ಅನೇಕ ಖ್ಯಾತ ಬರಹಗಾರರು, ವಿಜ್ಞಾನಿಗಳು ಹಾಗೂ

ಇತರರು ನಿರ್ಗಮಿಸಿದ್ದರು. ಆಲ್ಬರ್ಟ್ ಐನ್‌ಸ್ಟೈನ್ ಕೂಡ ಜರ್ಮನಿ ತೊರೆಯಬೇಕಾಯಿತು. ಪ್ರತಿರೋಧವನ್ನು ಚಿವುಟಿಹಾಕಲಾಗುತ್ತಿತ್ತು. ಇಂತಹ ಸಂದರ್ಭದಲ್ಲಿ ಅಂತರರಾಷ್ಟ್ರೀಯ ಬರಹಗಾರರ ವೇದಿಕೆ ಫ್ಯಾಸಿವಾದ ವಿರುದ್ಧದ ಸಂಘಟನೆಗೆ ಪುಷ್ಟಿಯನ್ನು ನೀಡಿತು. ಪ್ರಪಂಚದಾದ್ಯಂತ ಇದಕ್ಕೆ ಸಹಾಯಹಸ್ತಗಳ ಸ್ಪಂದನ ದೊರಕಿತು. ಮಹಾತ್ಮ ಗಾಂಧೀಜಿ, ರವೀಂದ್ರನಾಥ್ ಟ್ಯಾಗೂರ್, ಮ್ಯಾಕ್ಸಿಂ ಗಾರ್ಕಿ, ಕ್ರಿಸ್ಟೋಫರ್ ಕಾಡ್‌ವೆಲ್, ರೋಮೈನ್ ರೋಲ್ಯಾಂಡ್, ರಾಲ್ಫ್ ಫಾಕ್ಸ್‌ರಂತಹವರು ಇದಕ್ಕೆ ಸ್ಫೂರ್ತಿಯ ಸೆಲೆಯಾಗಿದ್ದರು.

ಜೋಷಿ ೧೯೩೦ರ ದಶಕದ ಆದಿ ವರ್ಷಗಳಲ್ಲಿ ಭಾರತದಲ್ಲೂ ಬೆಳೆಯುತ್ತಿದ್ದ ವಸಾಹತುಶಾಹಿ ಮತ್ತು ಫ್ಯಾಸಿವಾದದ ಪ್ರತಿರೋಧಕ್ಕೆ ಒಂದು ಸ್ಪಷ್ಟ ಸಾಂಸ್ಕೃತಿಕ ರೂಪವನ್ನು ಕೊಡಲು ತುಡಿಯುತ್ತಿದ್ದರು. ಆಗ ಭಾರತದಾದ್ಯಂತ 'ಕಲೆ ಜೀವನಕ್ಕಾಗಿ' ಎಂಬ ತತ್ವದಲ್ಲಿ ನಂಬಿಕೆಯಿದ್ದ ಅನೇಕ ಬರಹಗಾರರು ಸೀಮಿತ ಬರಹಗಳ ಚೌಕಟ್ಟಿನಿಂದಾಚೆ ಬರಲು ಹಪಹಪಿಸುತ್ತಿದ್ದರು; ಸಾಮಾಜಿಕ ಕಳಕಳಿಯನ್ನು ಸೃಜನಶೀಲವಾಗಿ ವ್ಯಕ್ತಪಡಿಸಲು ಹಾತೊರೆಯುತ್ತಿದ್ದರು. ಈ ನಿಟ್ಟಿನಲ್ಲಿ ಒಂದು ಸಂಘವನ್ನು ಸ್ಥಾಪಿಸಬೇಕೆಂಬ ಉದ್ದೇಶ ಮೊಳಕೆಯೊಡೆಯತೊಡಗಿತು. ಜೋಷಿ ಅದರ ಚಾಲಕಶಕ್ತಿಯಾದರು. ಫೆಬ್ರವರಿ ೧೯೩೬ರಲ್ಲಿ ಒಂದು ಪ್ರಣಾಳಿಕೆಯನ್ನು ಬಿಡುಗಡೆಗೊಳಿಸಲಾಯಿತು. ಅದಕ್ಕೆ ಪ್ರೇಮ್‌ಚಂದ್, ಅಬಿದ್ ಹುಸೈನ್, ದಯಾನರೈನ್ ನಿಗಮ್, ಅಬ್ದುಲ್ ಹಖ್ ಮುಂತಾದ ಪ್ರತಿಭಾನ್ವಿತರು ಸಹಿ ಹಾಕಿದ್ದರು. ಹೀಗೆ




ಉದಯವಾಯಿತು ಪುರೋಗಾಮಿ ಲೇಖಕರ ಸಂಘ (ಪ್ರೊಗ್ರೆಸ್ಸಿವ್ ರೈಟರ್ಸ್ ಅಸೋಸಿಯೇಷನ್–ಪಿಡಬ್ಲ್ಯುಎ). ದೆಹಲಿ, ಅಲಹಾಬಾದ್, ಲಾಹೋರ್, ಆಲಿಗಢ ಮತ್ತು ಇತರ ಕೆಲವು ಪ್ರಮುಖ ಕೇಂದ್ರಗಳಲ್ಲಿ ಇದರ ಶಾಖೆಗಳು ಪ್ರಾರಂಭವಾದವು. ಇದಕ್ಕೆ ಒಂದು ವರ್ಷದ ಮುನ್ನವೇ ಲಂಡನ್‌ನಲ್ಲಿ ಒಂದು ಶಾಖೆಯನ್ನು ಶುರುಮಾಡಲಾಗಿತ್ತು.

ಪಿಡಬ್ಲ್ಯುಎನ ಅಖಿಲ ಭಾರತ ಮಟ್ಟದ ಪ್ರಥಮ ಸಮ್ಮೇಳನ ಲಕ್ನೋದಲ್ಲಿ ಏಪ್ರಿಲ್ ೧೦, ೧೯೩೬ರಂದು ಜರುಗಿತು. ಇದು ಭಾರತದ ಸಾಹಿತ್ಯಕ ಇತಿಹಾಸದ ಒಂದು ಮೈಲಿಗಲ್ಲಾಯಿತು. ಆ ಸಂದರ್ಭದಲ್ಲಿ ಒಂದು ವೇದಿಕೆಯಡಿ ಮುಖಾಮುಖಿಯಾದ ಲೇಖಕರಿಗೆ ಬರೀ ಸಾಹಿತ್ಯಕ ವಿಷಯಗಳ ವಿನಿಮಯ ಮಾಡಿಕೊಳ್ಳುವ ಇರಾದೆ ಮಾತ್ರ ಇರಲಿಲ್ಲ. ಅದರ ಜೊತೆಗೆ ಅವರಿಗೆ ರಾಷ್ಟ್ರೀಯ, ಸಾಂಸ್ಕೃತಿಕ, ಸಾಮಾಜಿಕ, ಸ್ವಾತಂತ್ರ್ಯಕ್ಕೆ ಸಂಬಂಧಿಸಿದ ವಿಚಾರಗಳಿಗೆ ಸ್ಪಂದಿಸುವ ತಹತಹವಿತ್ತು. ಅವರಿಗೆ ಎಲ್ಲ ಬಗೆಯ ಅಸಮಾನತೆಗಳಿಂದ ದೂರಾಗಿರುವ ಸಮಾಜವನ್ನು ಭಾರತದಲ್ಲಿ ನೆಲೆಗೊಳಿಸುವ ಕನಸುಗಳಿದ್ದವು; ಮುಂಗಾಣ್ಕೆಗಳಿದ್ದವು. ಹೀಗೆ ಬರಹಗಾರರ ಚಳವಳಿಗೆ ಒಂದು ಸ್ಪಷ್ಟ ಪ್ರಗತಿಗಾಮಿ ಆಯಾಮ ದೊರಕಿತು.

ಕಲ್ಕತ್ತಾದಲ್ಲಿ ೧೯೩೮ರ ಡಿಸೆಂಬರ್‌ನಲ್ಲಿ ಪಿಡಬ್ಲ್ಯುಎನ ಎರಡನೇ ಸಮ್ಮೇಳನ ಯಶಸ್ವಿಯಾಗಿ ನಡೆಯಿತು. ಅದರಲ್ಲಿ ಮಾತನಾಡುತ್ತ ಖ್ಯಾತ ಬರಹಗಾರ ಮುಲ್ಕ್‌ರಾಜ್ ಆನಂದ್ ಭಾರತದಲ್ಲಿ ಆಧುನಿಕ ಸಾಹಿತ್ಯದ ಬೆಳವಣಿಗೆಗೆ ವಿದೇಶಿ ವಸಾಹತುಶಾಹಿ, ಸಾಮ್ರಾಜ್ಯಶಾಹಿ, ಫ್ಯಾಸಿ, ನಾಝಿ ಶಕ್ತಿಗಳ ಜೊತೆಗೆ ಇಂತಹ ಸ್ಥಳೀಯ ತಳಿಗಳು ಕಂಟಕಪ್ರಾಯವಾಗಿರುವುದನ್ನು ಬರಹಗಾರರು ಅರಿಯುತ್ತಿದ್ದಾರೆ ಎಂದು ತಿಳಿಸಿದರು. ಇಂತಹ ಪ್ರಗತಿಪರ ಚಟುವಟಿಕೆಗಳು ಜರಗುತ್ತಿದ್ದ ಸಮಯದಲ್ಲೇ ಮತ್ತೊಂದೆಡೆ ಬಲಪಂಥೀಯರ ಗುಂಪು ಯೂರೋಪಿನ ಫ್ಯಾಸಿವಾದಿಗಳ ಜೊತೆ ಸಂಪರ್ಕವನ್ನು ಬೆಳೆಸಿತ್ತು. ಅದರಲ್ಲಿ ಹಿಂದೂ ಮಹಾಸಭಾದ ಬಿ. ಎಸ್. ಮೂಂಜೆಯಂತಹವರು ಇದ್ದರು. ಅವರಂತಹವರಿಗೆ ಭಾರತ ಒಂದು ಹಿಂದೂ ರಾಷ್ಟ್ರವಾಗಬೇಕೆಂಬ ಧ್ಯೇಯೋದ್ದೇಶವಿತ್ತು. 'ಅನೇಕತೆ'ಯ ಸ್ಥಾನದಲ್ಲಿ 'ಏಕತೆ'ಯ ರಾಷ್ಟ್ರವನ್ನು ಸ್ಥಾಪಿಸುವ ಮಹಾಭಿಲಾಷೆ ಅವರಿಗಿತ್ತು.

ಬ್ರಿಟಿಷರ ಸರ್ವಾಧಿಕಾರದ ಪ್ರಹಾರಗಳಿದ್ದರೂ, ಅನೇಕ ಬರಹಗಳನ್ನು ಸರ್ಕಾರ ಕಾನೂನುಬಾಹಿರ ಎಂದು ಘೋಷಿಸಿದ್ದರೂ, ಇಪ್ಪತ್ತನೆಯ ಶತಮಾನದ ಮೊದಲ ದಶಕಗಳಲ್ಲಿ ಸಾಹಿತ್ಯಕ ಚಟುವಟಿಕೆಗಳು ಕಳಾಹೀನವಾಗಿರಲಿಲ್ಲ. ಕೆ. ಎ. ಅಬ್ಬಾಸ್‌ರ 'ಸ್ಪಾರೋಸ್', ಹಯತುಲ್ಲ ಅನ್ಸಾರಿಯವರ 'ಅನೊಖಿ ಮೂಸಿಬತ್', ಬೆನಿಪುರಿಯವರ 'ಲಾಲ್ ತಾರಾ' ಪುಸ್ತಕ, ಅಲಿ ಸರ್ದಾರ್ ಜಾಫ್ರಿಯವರ 'ಮಂಝಿಲ್', ಸಜ್ಜದ್ ಜಾಹೀರ್‌ರ ನಾಟಕ 'ಭಿಮಾರ್', ಪ್ರೇಮ್‌ಚಂದ್, ಕಿಶನ್ ಚಂದರ್ ಮುಂತಾದವರ ಕೃತಿಗಳು ಒಂದು ಸಂಚಲನವನ್ನು ಉಂಟುಮಾಡಿದವು. ಅಲ್ಲದೆ, ಏಪ್ರಿಲ್ ೧೯೩೮ರಲ್ಲಿ ಜರುಗಿದ ರೈತ–ಕವಿಗಳ ಸಮ್ಮೇಳನ, ಮುಂಬೈ ಮತ್ತು ಕಾನ್ಪುರದಲ್ಲಿ ನಡೆದ ಮಝ್ದೂರ್–ಕವಿಗಳ ಮುಷೈರಾಗಳು ಒಂದು ಹೊಸ ಪರ್ವವನ್ನೇ ಹುಟ್ಟುಹಾಕಿದವು.

ಪಿಡಬ್ಲ್ಯುಎನ ಮುಂದುವರೆದ ಭಾಗವಾಗಿ 'ಭಾರತಜನಕಲಾ ಸಮಿತಿ' (ಇಂಡಿಯನ್ ಪೀಪಲ್ಸ್ ಥಿಯೇಟರ್ ಅಸೋಸಿಯೇಷನ್–ಇಪ್ಟಾ) ೧೯೪೩ರಲ್ಲಿ ಪ್ರಾರಂಭವಾಯಿತು. ಆ ವರ್ಷ ಬಂಗಾಳ ಕರಾಳಸ್ವರೂಪದ ಬರಗಾಲಕ್ಕೆ ಈಡಾಗಿ ನಜ್ಜುಗುಜ್ಜಾಯಿತು. ಭಾರತದಾದ್ಯಂತ ಸಮಾಜಮುಖಿ, ಕ್ರಿಯಾಶೀಲ ಶಕ್ತಿಗಳು, ಸಾಂಸ್ಕೃತಿಕ ರಂಗದವರೂ ಒಳಗೊಂಡಂತೆ, ತಮ್ಮ ಕೈಲಾದ ಸಹಾಯ ಹಾಗೂ ಬೆಂಬಲವನ್ನು ನೀಡಿದರು. ಆದರೆ ಇದಕ್ಕೆ ಮುನ್ನವೇ ೧೯೪೦ರಲ್ಲಿ ಕಲ್ಕತ್ತಾದಲ್ಲಿ 'ಯುವಜನರ ಸಾಂಸ್ಕೃತಿಕ ಸಂಸ್ಥೆ', ಬೆಂಗಳೂರಿನಲ್ಲಿ ೧೯೪೧ರಲ್ಲಿ



ಸಾಂಸ್ಕೃತಿಕ ರಂಗದಲ್ಲಿ ತಮ್ಮದೇ ಆದ ಛಾಪನ್ನು ಮೂಡಿಸಿದ್ದ ಶಂಭು ಮಿತ್ರ, ರಾಜೇಂದ್ರ ರಘುವಂಶಿ, ಎಸ್. ಎ. ಡಾಂಗೆ, ಮಖ್ದೂಮ್ ಮೊಯ್ಯುದ್ದೀನ್, ಬಿಷ್ಣು ದೇ, ಕೆ. ಎ. ಅಬ್ಬಾಸ್, ಮಾಮ ವರೇರ್‌ಕರ್, ಕೆ. ಟಿ. ಚಾಂದಿ, ಬಿನಯ್ ರಾಯ್, ಡಾ॥ ರಶೀದ್ ಜೆಹಾನ್ ಹಾಗೂ ಇನ್ನು ಕೆಲವರು ಇಪ್ಟಾದ ಕಾರ್ಯಕಾರಿ ಸಮಿತಿಯ ಸದಸ್ಯರು/ಪದಾಧಿಕಾರಿಗಳಾದರು.

ಹಂತ ಹಂತವಾಗಿ ಬೆಳೆಯುತ್ತ ಇಪ್ಟಾ ದುಡಿಯುವ ವರ್ಗದ ಮುಂಚೂಣಿ ಸಂಸ್ಥೆಗಳ ಜೊತೆ ನಿಕಟಸಂಪರ್ಕವನ್ನು ಹೊಂದಿತು. ಶ್ರಮಿಕರ ಆಶೋತ್ತರಗಳನ್ನು ಬಿಂಬಿಸುವಲ್ಲಿ ವಿವಿಧ ಕಲಾಮಾಧ್ಯಮಗಳನ್ನು ಸಮರ್ಥವಾಗಿ ಬಳಸಿಕೊಂಡಿತು. ಅಲ್ಲದೆ, ಅನೇಕ ದುಡಿಯುವ ವರ್ಗದ ಸಾಮೂಹಿಕ ಸಂಘಗಳಲ್ಲಿ ಸಾಂಸ್ಕೃತಿಕ ವಿಭಾಗಗಳನ್ನು ಸ್ಥಾಪಿಸುವುದರಲ್ಲಿ ಯಶಸ್ವಿಯಾಯಿತು.

ಇಪ್ಟಾ ಹೆಸರಿನಲ್ಲಿ 'ಥಿಯೇಟರ್' ಇದ್ದರೂ ಅದು ರಂಗಭೂಮಿಗೆ ಮಾತ್ರ ಸೀಮಿತಗೊಂಡಿರಲಿಲ್ಲ. ಅದು ಎಲ್ಲ ಕಲಾಪ್ರಕಾರಗಳನ್ನು ಒಳಗೊಳ್ಳುವ ವೇದಿಕೆಯಾಗಿ ರೂಪುಗೊಂಡಿತು. ಚಲನಚಿತ್ರರಂಗದ ಅನೇಕ ಧೀಮಂತರು ಇದರ ಜೊತೆ ನಿಕಟಸಂಪರ್ಕವನ್ನು ಹೊಂದಿದ್ದರು. ಇಪ್ಟಾ ವತಿಯಿಂದ 'ಧರ್ತಿ ಕಿ ಲಾಲ್' (೧೯೪೬) ಎಂಬ ಉರ್ದು–ಹಿಂದಿ ಚಲನಚಿತ್ರ ನಿರ್ಮಾಣಗೊಂಡಿತು. ಇದು ಕ್ವಾಜಾ ಅಹಮ್ಮದ್ ಅಬ್ಬಾಸ್‌ರ ನಿರ್ದೇಶನದ ಪ್ರಥಮ ಚಲನಚಿತ್ರವಾಗಿತ್ತು. ೧೯೪೩ರ ಬಂಗಾಳದ ಬರಗಾಲದಲ್ಲಿ ಲಕ್ಷಗಟ್ಟಲೆ ಮಂದಿ ಸಾವಿಗೀಡಾದರು. ಈ ಭೀಷಣ ವೃತ್ತಾಂತವನ್ನು ಮೂಲವನ್ನಾಗಿರಿಸಿಕೊಂಡು ಒಂದು ಕುಟುಂಬದ ದಾರುಣ ಪರಿಸ್ಥಿತಿಯನ್ನು ಈ ಚಲನಚಿತ್ರ ಪರಿಣಾಮಕಾರಿಯಾಗಿ ಬಿಂಬಿಸಿತು. ಇದರ ಚಿತ್ರಕಥೆ ಇಪ್ಟಾದ ಎರಡು ನಾಟಕಗಳು–'ನಬನ್ನ' (ಸುಗ್ಗಿ) ಮತ್ತು 'ಜಬನ್‌ಬಂದಿ' (ರಚನೆ: ಬೀಜೋನ್ ಭಟ್ಟಾಚಾರ್ಯ) ಹಾಗೂ 'ಅನ್ನದಾತ', ಕಿಶನ್ ಚಂದರ್‌ರ ಕಥೆಯನ್ನು ಆಧರಿಸಿತ್ತು. ಒಂದು ರಾಜಕೀಯ ಹಾಗೂ ಸಾಮಾಜಿಕ ವಾಸ್ತವತೆಯನ್ನು ಕಟ್ಟಿಕೊಟ್ಟ ಈ ಚಲನಚಿತ್ರ ಭಾರತ ಚಲನಚಿತ್ರರಂಗಕ್ಕೆ ಒಂದು ಹೊಸ ಆಯಾಮವನ್ನು ನೀಡಿತು. ಮುಲ್ಕ್‌ರಾಜ್ ಆನಂದ್‌ರು ಈ ಚಲನಚಿತ್ರವನ್ನು ಜಾನ್ ಫೋರ್ಡ್ ನಿರ್ದೇಶಿಸಿದ 'ಗ್ರೇಪ್ಸ್ ಆಫ್ ರಾಥ್' (Grapes of Wrath–೧೯೪೦) ಮತ್ತು ಸಿಡ್ನಿ ಫ್ರಾಂಕ್ಲಿನ್‌ನ 'ದಿ ಗುಡ್ ಅರ್ಥ್' (೧೯೩೭) ಚಲನಚಿತ್ರಗಳ ಗುಣಮಟ್ಟಕ್ಕೆ

'ಜನತಾ ರಂಗ ಸಂಸ್ಥೆ' ಮತ್ತು ೧೯೪೨ರಲ್ಲಿ ಮುಂಬೈನಲ್ಲಿ 'ಇಪ್ಟಾ' ಎಂದೇ ಕರೆಯಲ್ಪಡುತ್ತಿದ್ದ ಒಂದು ಸಂಸ್ಥೆ ಕೆಲಸವನ್ನು ಮಾಡಲು ಶುರುಮಾಡಿದ್ದವು. ಬೆಂಗಳೂರು ಮತ್ತು ಮುಂಬೈನ ಸಂಸ್ಥೆಗಳ ಹುಟ್ಟಿಗೆ ಸಿಲೋನ್ ಮೂಲದ ಅನಿಲ್ ಡಿಸಿಲ್ವಾ ಎಂಬ ಮಹಿಳೆ ಕಾರಣರಾಗಿದ್ದರು. ಅಂದಹಾಗೆ, ಇಪ್ಟಾ ಎಂಬ ಹೆಸರನ್ನು ಸೂಚಿಸಿದವರು ಹೆಸರಾಂತ ವಿಜ್ಞಾನಿ ಹೋಮಿ ಜಹಂಗೀರ್ ಭಾಭಾ. ಆದರೆ ಈ ಪರಿಕಲ್ಪನೆ ರೋಮೈನ್ ರೋಲ್ಯಾಂಡ್‌ರ ಪುಸ್ತಕವೊಂದರಲ್ಲಿ ಪ್ರಸ್ತಾಪಿಸಲ್ಪಟ್ಟಿತ್ತು.

ಇಪ್ಟಾದ ಸ್ಥಾಪನಾ ಸಮ್ಮೇಳನ ಮುಂಬೈನ ಮಾರ್ವಾರಿ ವಿದ್ಯಾಲಯದಲ್ಲಿ ಮೇ ೨೫, ೧೯೪೩ರಂದು ಜರುಗಿತು. ಇದರ ಅಧ್ಯಕ್ಷತೆಯನ್ನು ಪ್ರೊ॥ ಹಿರೇನ್ ಮುಖರ್ಜಿ ವಹಿಸಿದ್ದರು. ಜವಾಹರ್‌ಲಾಲ್ ನೆಹರು, ಡಾ॥ ರಾಜೇಂದ್ರ ಪ್ರಸಾದ್, ಸರೋಜಿನಿ ನಾಯ್ಡು ಮುಂತಾದ ಗಣ್ಯರು ಶುಭಾಶಯಗಳನ್ನು ಕಳುಹಿಸಿದ್ದರು. ಮುಂದೆ ಹಲವು ವರ್ಷಗಳವರೆಗೆ ಸರೋಜಿನಿ ನಾಯ್ಡು ಇಪ್ಟಾದ ಚಟುವಟಿಕೆಗಳಲ್ಲಿ ಅತೀವ ಆಸಕ್ತಿಯನ್ನು ವಹಿಸಿದ್ದರು. ಇಪ್ಟಾದ ಪ್ರಥಮ ಪ್ರಧಾನ ಕಾರ್ಯದರ್ಶಿಯಾಗಿ ಅನಿಲ್ ಡಿಸಿಲ್ವಾ ಮತ್ತು ಅಧ್ಯಕ್ಷರಾಗಿ ಎಐಟಿಯುಸಿಯ ಪ್ರಧಾನ ಕಾರ್ಯದರ್ಶಿಯಾಗಿದ್ದ ಎನ್. ಎಮ್. ಜೋಷಿ ಚುನಾಯಿತರಾದರು. ಅಲ್ಲದೆ




ಕರ್ನಾಟಕ ವೈಜ್ಞಾನಿಕ ಮನೋವೃತ್ತಿ ಆಂದೋಲನದಲ್ಲಿ ತಮ್ಮನ್ನು ಸಕ್ರಿಯವಾಗಿ ತೊಡಗಿಸಿಕೊಂಡು ವೈಜ್ಞಾನಿಕ ಮನೋವೃತ್ತಿಯ ಜಾಗೃತಿಯ ನಿಟ್ಟಿನಲ್ಲಿ ನಲವತ್ತಕ್ಕೂ ಹೆಚ್ಚು ಶಿಬಿರಗಳನ್ನು ನಡೆಸಿದ ಹೊಸತು ಬಳಗದ ಎಂ. ಅಬ್ದುಲ್ ರೆಹಮಾನ್ ಪಾಷಾರವರು ಈಗ **'ಭಾರತ ಸಂವಿಧಾನ ಸಾಕ್ಷರತಾ ಆಂದೋಲನ'**ಕ್ಕೆ ಚಾಲನೆ ನೀಡಿದ್ದಾರೆ. ಪಿಪಿಟಿ, ವಿಡಿಯೋ ಇತ್ಯಾದಿ ಸಾಮಗ್ರಿಗಳನ್ನು ಬಳಸಿ, ಕಾಲೇಜು ವಿದ್ಯಾರ್ಥಿಗಳು, ಶಿಕ್ಷಕರು, ಯುವಜನರು ಸಮೂಹಗಳಾಗಿ ಸಂಪೂರ್ಣ ಸಹಭಾಗಿಯಾಗಿರುವ ಹಲವು ಶಿಬಿರಗಳನ್ನು ಈಗಾಗಲೇ ನಡೆಸಿದ್ದಾರೆ. ಇದನ್ನು ಇನ್ನಷ್ಟು ಸಂಸ್ಥೆಗಳಿಗೆ ವಿಸ್ತರಿಸುವ ಯೋಜನೆಯನ್ನು ಹೊಂದಿದ್ದಾರೆ. ಶಿಬಿರಗಳ ಅನುಭವದ ಸಾರಸಂಗ್ರಹವಾಗಿ **"ಭಾರತ ಸಂವಿಧಾನ: ಅರ್ಥ ಅರಿವು ಜಾಗೃತಿ"** ಎಂಬ ಸಂವಿಧಾನ ಸಾಕ್ಷರತಾ ಕೈಪಿಡಿ ರಚಿಸಿದ್ದಾರೆ, ನವಕರ್ನಾಟಕ ಪ್ರಕಾಶನ ಇದನ್ನು ಪ್ರಕಟಿಸಿದೆ. ಸಾಮಾನ್ಯ ಜನರಿಗೂ ಸಲ್ಲುವಂತೆ ಸಂವಿಧಾನದ ಅಗತ್ಯ, ಹಿನ್ನೆಲೆ, ಉಗಮ ಮತ್ತು ವಿಕಾಸ, ತತ್ವಗಳು, ನಾಗರಿಕರ ಹಕ್ಕುಗಳು, ಕರ್ತವ್ಯಗಳು ಇತ್ಯಾದಿಗಳ ಬಗ್ಗೆ ಬಹಳ ಸರಳವಾದ ಭಾಷೆಯಲ್ಲಿರುವ ಈ ಕೃತಿ ಎಲ್ಲ ಬಗೆಯ ಓದುಗರಿಗೆ ಹಿಡಿಸುತ್ತದೆ.

ಹೋಲಿಸಿದರು! (ಇವೆರಡೂ ಚಲನಚಿತ್ರಗಳಲ್ಲಿ ರೈತರ ದಾರುಣ ಬವಣೆಗಳ ಕಥನಗಳಿದ್ದವು)

ಬಂಗಾಳಿ ಚಲನಚಿತ್ರಗಳ ಹೆಸರುವಾಸಿ ನಿರ್ದೇಶಕರಾಗಿದ್ದ ರಿತ್ವಿಕ್ ಘಟಕ್ ಕೂಡ ಇಪ್ಟಾ ಮೂಲಕ ಬಂಗಾಳಿ ಸಾಂಸ್ಕೃತಿಕ ಲೋಕಕ್ಕೆ ಪಾದಾರ್ಪಣೆ ಮಾಡಿದರು. ೧೯೪೬ರಲ್ಲಿ ಇಪ್ಟಾಗೆ ಸೇರಿದ ಅವರು ನಂತರದ ಅವಧಿಯಲ್ಲಿ 'ಮೇಘೆ ಧಾಕಾ ತಾರಾ' (೧೯೬೦), 'ಕೋಮಲ್ ಗಾಂಧಾರ್' (೧೯೬೧), 'ಸುಬರ್ಣರೇಖಾ' (೧೯೬೨), 'ನಾಗರಿಕ್' (೧೯೭೭), 'ಅಜಿಂತ್ರಿಕ್' (೧೯೫೮) ಮುಂತಾದ ಗಮನೀಯ ಚಲನಚಿತ್ರಗಳನ್ನು ನಿರ್ದೇಶಿಸಿದರು. ಇವರಲ್ಲದೆ, ಎ. ಕೆ. ಹಂಗಾಲ್, ಕೈಫಿ ಆಜ್ಮಿ, ಇಸ್ಮತ್ ಚುಗ್ತಾಯ್, ಸಾಹಿರ್ ಲೂಧಿಯಾನ್ವಿ, ಪಂಡಿತ್ ರವಿಶಂಕರ್, ಅನಿಲ್ ಬಿಸ್ವಾಸ್, ಉತ್ಪಲ್ ದತ್, ದಿನಾ ಪಾಥಕ್, ಮಜ್ರೂ ಸುಲ್ತಾನ್‌ಪುರಿಯಂತಹ ಚಲನಚಿತ್ರ ಕ್ಷೇತ್ರದ ದಿಗ್ಗಜರು ಇಪ್ಟಾದ ಜೊತೆ ಕೈಜೋಡಿಸಿದ್ದರು.

ಇಪ್ಟಾ ಜೊತೆಗಿನ ಕರ್ನಾಟಕದ ನಂಟು ಏಳು ದಶಕಗಳಿಗೂ ಮೀರಿದ್ದಾಗಿದೆ. ೧೯೪೪ರಲ್ಲಿ ಖ್ಯಾತ ಕಾದಂಬರಿಕಾರರಾಗಿದ್ದ ನಿರಂಜನರು 'ಭಾರತೀಯ ಜನತಾ ರಂಗಭೂಮಿ' ಎಂಬ ಹೆಸರಿನಲ್ಲಿ ಇಪ್ಟಾದಡಿ ಒಂದು ಘಟಕವನ್ನು ನಮ್ಮ ರಾಜ್ಯದಲ್ಲಿ (ಮಂಗಳೂರಿನಲ್ಲಿ) ಸ್ಥಾಪಿಸಿದರು. ಶಿವರಾಮ ಕಾರಂತರು ಅದರ ಉದ್ಘಾಟನೆಯನ್ನು ಮಾಡಿದರು. ಚಿಂತನಾಶೀಲ ಚಲನಚಿತ್ರಗಳನ್ನು ನಿರ್ದೇಶಿಸಿರುವ ಎಂ. ಎಸ್. ಸತ್ಯು ತಮ್ಮ ವೃತ್ತಿಜೀವನದ ಪ್ರಾರಂಭದಲ್ಲಿಯೇ ಇಪ್ಟಾದ ಜೊತೆ ಗುರುತಿಸಿಕೊಂಡಿದ್ದರು. ೧೯೮೧ರಲ್ಲಿ ಇಪ್ಟಾದ ಧಾರವಾಡ ಕೇಂದ್ರ ಚಾಲನೆಗೊಂಡಿತು. ಆ ಕಾಲಘಟ್ಟದಲ್ಲಿ ಕರ್ನಾಟಕ ರಾಜ್ಯ ಇಪ್ಟಾ ಘಟಕವನ್ನು 'ಭಾರತೀಯ ಜನಕಲಾ ಸಮಿತಿ' ಎಂದು ಪುನರ್ನಾಮಕರಣಗೊಳಿಸಲಾಯಿತು. ಆ ದಶಕದಲ್ಲಿ ನಮ್ಮ ರಾಜ್ಯದ ೧೩ ಜಿಲ್ಲೆಗಳಲ್ಲಿ ಇಪ್ಟಾ ಸಂಘಟನೆ ಕ್ರಿಯಾಶೀಲವಾಗಿತ್ತು. ರಾಜ್ಯ ಸಂಚಾಲಕರಾಗಿ ಡಾ|| ಸಿದ್ದನಗೌಡ ಪಾಟೀಲ್ ಮತ್ತು ಕೆಲವು ಸಂಗಾತಿಗಳು ಇದರ ಬೆಳವಣಿಗೆಗೆ ಶ್ರಮಿಸಿದರು. ಇಪ್ಟಾದ ೫೦ನೇ ವಾರ್ಷಿಕೋತ್ಸವದ ಅಂಗವಾಗಿ ಧಾರವಾಡದಲ್ಲಿ ಒಂದು ದೊಡ್ಡ ಕಾರ್ಯಕ್ರಮವನ್ನು ಏರ್ಪಡಿಸಲಾಗಿತ್ತು. ಅದರಲ್ಲಿ ಎ. ಕೆ. ಹಂಗಾಲ್, ಹಡಪದ್, ಗಿರೀಶ್ ಕಾರ್ನಾಡ್, ಎ. ಎಸ್. ಮೂರ್ತಿ ಹಾಗೂ ಸಾಂಸ್ಕೃತಿಕ ರಂಗದ ಇನ್ನು ಕೆಲವು ಖ್ಯಾತನಾಮರು ಭಾಗವಹಿಸಿದ್ದರು. ೨೦೧೫ರಲ್ಲಿ ಬೆಂಗಳೂರಿನ ಚಿತ್ರಕಲಾ ಪರಿಷತ್‌ನಲ್ಲಿ ಸ್ವಾತಂತ್ರ್ಯ ದಿನದಂದು ಒಂದು ಯಶಸ್ವಿ ಕಾರ್ಯಕ್ರಮವನ್ನು ಕರ್ನಾಟಕ ಇಪ್ಟಾ ವತಿಯಿಂದ ಆಯೋಜಿಸಲಾಗಿತ್ತು. ಹಾಗೆಯೇ ಅದೇ ವರ್ಷ 'ರೈಲು ಗಾಲಿಯ ಮೇಲೆ ಸ್ವಾತಂತ್ರ್ಯ ಯಾನ' ಎಂಬ ವಿಶಿಷ್ಟ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು. ಅನೇಕ ಯುವ ಸಂಗಾತಿಗಳು ಬೆಂಗಳೂರು – ಮೈಸೂರು – ಹಾಸನ –ಮಂಗಳೂರು – ಧಾರವಾಡ – ಬೆಳಗಾವಿ ಮೂಲಕ ಗೋವಾಗೆ ಪ್ರಯಾಣ ಬೆಳೆಸಿ ಸಮಾಜವಾದಿ – ಸಮಾಜಮುಖಿ ಚಿಂತನೆಗಳನ್ನು ಸಾಂಸ್ಕೃತಿಕ ಕಾರ್ಯಕ್ರಮಗಳ ಮೂಲಕ ದಾಟಿಸಿದರು. ಇದೊಂದು ವಿಶಿಷ್ಟ ಪ್ರಯತ್ನವಾಗಿತ್ತು. ಜನರಿಂದ ಸ್ಪಂದನ ದೊರಕಿತು; ಪ್ರಶಂಸೆ ಕೂಡ. ಇಂದಿಗೂ ಕರ್ನಾಟಕ ಇಪ್ಟಾದ ಹಾಡಿನ ತಂಡ ರಾಜ್ಯಾದ್ಯಂತ ಅನೇಕ ಸಭೆ –ಸಮಾರಂಭಗಳಲ್ಲಿ ಭಾಗವಹಿಸುತ್ತ ಸಕ್ರಿಯವಾಗಿದೆ.

ಇತ್ತೀಚೆಗೆ ಬಿಹಾರದ ರಾಜಧಾನಿ ಪಾಟ್ನದಲ್ಲಿ ಇಪ್ಟಾದ ೭೫ನೇ ವಾರ್ಷಿಕೋತ್ಸವ ಜನಮಾನಸವನ್ನು ಸೆಳೆಯುವುದರಲ್ಲಿ ಸಫಲವಾಯಿತು. ಪ್ರಸ್ತುತ ಕರ್ನಾಟಕ ಇಪ್ಟಾ ಘಟಕವನ್ನು ಬಲಪಡಿಸಬೇಕು. ಸಮ ಸಮಾಜಕ್ಕಾಗಿ ತುಡಿಯುವ ಚೇತನಗಳನ್ನು ಒಳಗೊಳ್ಳುವ ಒಂದು ವಿಶಾಲ ವೇದಿಕೆಯಾಗಿ ಇಪ್ಟಾ ಸದೃಢವಾಗಿ ಮುನ್ನಡೆಯಲಿ ಎಂದು ಆಶಿಸೋಣ.

*(ಆಧಾರ : ಅನೇಕ ಮೂಲಗಳು)*


**ಮ. ಶ್ರೀ. ಮುರಳಿ ಕೃಷ್ಣ**
ನಂ. ೩೮, ೩ನೇ ಅಡ್ಡರಸ್ತೆ, ರಾಜಾ ಗಾರ್ಡನಿಯಾ ಬಡಾವಣೆ ತುರಹಳ್ಳಿ,
ಸುಬ್ರಹ್ಮಣ್ಯಪುರ ಅಂಚೆ ಬೆಂಗಳೂರು – ೫೬೦ ೦೬೧

# ಅಣ್ಣಯ್ಯನ ಕತೆ ಹೇಳತೀನಿ...

ಸಮೇತನಹಳ್ಳಿ ರಾಮರಾಯ!

ಇದು ನನ್ನ ತಂದೆಯ ಹೆಸರು.

ಸಂಕ್ಷಿಪ್ತವಾಗಿ ಸ. ರಾ.

ಕವಿಹೃದಯದ ನನ್ನ ತಂದೆ ಅದನ್ನೇ ಹಿಂದೆ–ಮುಂದೆ ತಿರುಗಿಸಿ 'ರಾಸ' ಮಾಡಿಕೊಂಡರು. ಅದನ್ನೇ ತಮ್ಮ ಕಾವ್ಯನಾಮವನ್ನಾಗಿಸಿಕೊಂಡರು.

ಈ ಕುರಿತು ನಮ್ಮ ಧಾರವಾಡದ ಹೃದಯವಂತ ಸಾಹಿತಿ ಎನ್ಕೆ ಅವರು ಹೇಳಿದ್ದು –

"ನಮ್ಮ ರಾಸರ ಬರವಣಿಗೆ ಅಂದರೆ, ಅದು ರಸದಿಂದ ಉದ್ಭವಿಸುವಂಥದ್ದು. ಹಾಗಾಗಿ 'ರಾಸ' ಎಂಬ ಕಾವ್ಯನಾಮ ಅತ್ಯಂತ ಸಮಂಜಸವಾಗಿದೆ."

'ರಾಸಲೀಲೆ' ಅನ್ನುವ ಸುಂದರ ಗೀತನಾಟಕವನ್ನೂ ಅವರು ರಚಿಸಿದ್ದಾರೆ. ಈ ಕೃತಿಯಲ್ಲಿ ಮುಖ್ಯವಾಗಿ ಪ್ರಸ್ತಾಪವಾಗುವುದು ಅಧ್ಯಾತ್ಮ ತತ್ವ; ಜೀವಾತ್ಮ (ಗೋಪಿಕೆ) – ಪರಮಾತ್ಮನ (ಶ್ರೀಕೃಷ್ಣ) ಆತ್ಮಸಮ್ಮಿಲನ.

'ರಾಸ' ಅನ್ನುವ ಅರ್ಥಪೂರ್ಣ ಹೆಸರಿನಲ್ಲಿ ನನ್ನ ತಂದೆ ಮೂವತ್ತು ಪ್ರಬುದ್ಧ ಕೃತಿಗಳನ್ನು ರಚಿಸಿದರು. ಕನ್ನಡದ ಸಹೃದಯರಿಗೆ ಆಪ್ತರಾದರು.

**ಬಾಲ್ಯ ಮತ್ತು ವಿದ್ಯಾಭ್ಯಾಸ**

ನನ್ನ ತಂದೆ ಹುಟ್ಟಿದ್ದು ಮತ್ತು ಬೆಳೆದದ್ದು ಹೊಸಕೋಟೆ ತಾಲೂಕಿನ ಸಮೇತನಹಳ್ಳಿಯಲ್ಲಿ. ಬಹಳ ಹಿಂದೆ ಅವರದು ಪಾಳೆಯಗಾರರ ಮನೆತನ. ಹಾಗಾಗಿ ಅದು 'ಕೋಟೆಮನೆ'. ಊರ ಮಧ್ಯದ ದಿಬ್ಬದಲ್ಲಿ ಕಲ್ಲು–ಗುಂಡುಗಳಿಂದ ನಿರ್ಮಿತವಾಗಿದ್ದ ಆ ಹಳೆಯ ಮನೆಯನ್ನು ನಾನೂ ನೋಡಿದ್ದೆ. ಹಲವಾರು ದೊಡ್ಡ ದೊಡ್ಡ ಕತ್ತಿಗಳೂ ಇದ್ದವು.

ಆದರೆ ನನ್ನ ತಂದೆ ಹುಟ್ಟುವ ವೇಳೆಗೆ ಮನೆಯಲ್ಲಿ ಶ್ರೀಮಂತಿಕೆಯ ಯಾವುದೇ ಕುರುಹು ಉಳಿದಿರಲಿಲ್ಲ. ಜಮೀನು ಸಾಕಷ್ಟು ಇತ್ತು. ಆದರೆ ನನ್ನ ತಂದೆಯ ತಂದೆಗೆ ಜೀವನೋತ್ಸಾಹ ಇರಲಿಲ್ಲ. ವಂಶಪಾರಂಪರ್ಯವಾಗಿ ಬಂದ ಶಾನುಭೋಗಿಕೆಯನ್ನೂ ಉಡಾಫೆಯಿಂದ ಬಿಟ್ಟವರು ಅವರು. ನನ್ನ ತಂದೆಯ ಎಸ್ಸೆಸ್ಸೆಲ್ಸಿ ಪರೀಕ್ಷೆ ಮುಗಿದ ಕೂಡಲೇ ತಮ್ಮ ಮಾಸ್ತರಿಕೆಗೂ ರಾಜೀನಾಮೆ ಒಗೆದು, "ಇನ್ನು ತಾಯಿ–ತಂದೆಯರನ್ನು ಹಾಗೂ ನಾಲ್ವರು ತಂಗಿ–ತಮ್ಮಂದಿರನ್ನೂ ನೀನು ಸಾಕತಕ್ಕದ್ದು," ಎಂದು ಅಪ್ಪಣೆ ಮಾಡಿ, ಮನೆಯಲ್ಲಿ ಕೂತವರು!

ಅವರ ಪ್ರಾಥಮಿಕ ವಿದ್ಯಾಭ್ಯಾಸ ಸಮೇತನಹಳ್ಳಿಯ ಪಕ್ಕದ ಬೋಧನ ಹೊಸಹಳ್ಳಿಯಲ್ಲಿ ನಡೆಯಿತು. ಲೋಯರ್ ಸೆಕೆಂಡರಿ ಶಿಕ್ಷಣ ಇನ್ನೊಂದು ಕರುಣ ಕತೆ. ನರಸಾಪುರದ ಸಂಬಂಧಿಕರೊಬ್ಬರ ಮನೆಯಲ್ಲಿ ಇದ್ದುಕೊಂಡು ನನ್ನ ತಂದೆ ಅದನ್ನು ಪೂರೈಸಿದರು. ಕಾಡನೂರಿನ ನೆಂಟರೊಬ್ಬರ ಮನೆಯಲ್ಲಿ ಅವರನ್ನು ಬಿಟ್ಟಿದ್ದರು. ನನ್ನ ತಂದೆಗೆ ಹೈಸ್ಕೂಲಿಗೆ ಬರೋವರೆಗೆ ಸೊಂಟದ ತನಕ ಉದ್ದವಾದ ಜಡೆ ಇತ್ತಂತೆ. ನನ್ನ ಅಜ್ಜಿ ಅದನ್ನು ನೀಟಾಗಿ ಬಾಚಿ, ಜಡೆ ಹೆಣೆದು, ದಪ್ಪನಾದ ಸೇವಂತಿಗೆ ದಂಡೆಗಳನ್ನು ಮುಡಿಸಿ ಶಾಲೆಗೆ ಕಳಿಸುತ್ತಿದ್ದರಂತೆ.

ಇನ್ನು, ಹೈಸ್ಕೂಲ್ ವಿದ್ಯಾಭ್ಯಾಸ ನಡೆದದ್ದು ಬೆಂಗಳೂರಿನ ಲಂಡನ್ ಮಿಶನ್ ಹೈಸ್ಕೂಲಿನಲ್ಲಿ. ವಸತಿ ಬಂಡಿ ಶೇಷಮ್ಮ ಛತ್ರದಲ್ಲಿ... ಉಚಿತವಾಗಿ! ವಾರಾಂತ್ಯದ ಸಮೇತನಹಳ್ಳಿ ಪ್ರವಾಸ – ಮೂವತ್ತೆರಡು ಕಿ.ಮೀ. – ಕಾಲ್ನಡಿಗೆಯಲ್ಲಿ! ಅಂತೂ ಕಾಡುವ ಬಡತನದ ಬವಣೆ ಬೇಗುದಿಗಳ ನಡುವೆಯೂ ಎಲ್ಲಿಯೂ ಕುಂಟದೆ ಎಸ್ಸೆಸ್ಸೆಲ್ಸಿ ಪರೀಕ್ಷೆಯಲ್ಲಿ ತೇರ್ಗಡೆಯಾದರು.

ಫಲಿತಾಂಶವನ್ನು ತಿಳಿಸುವ ತವಕದಲ್ಲಿ ಊರಿಗೆ ಓಡಿದರು. ದಾರಿಯುದ್ದಕ್ಕೂ ಕಾಲೇಜು ಸೇರುವ, ಕನ್ನಡ ಎಂ.ಎ. ಮಾಡುವ ಹೊಂಗನಸುಗಳು! ಈ ಆನಂದದಲ್ಲಿ ಹೆಜ್ಜೆ ಹಾಕಿದ್ದೇ ತಿಳಿಯಲಿಲ್ಲ.

ಆದರೆ ಮನೆಯಲ್ಲಿ ಈ ಉತ್ಸಾಹಕ್ಕೆ ಸಿಕ್ಕಿದ್ದು ತಣ್ಣೀರು. ಮಗ ಇನ್ನು ದುಡಿದು ತಮ್ಮ ದೊಡ್ಡ ಸಂಸಾರವನ್ನು ಸಾಕತಕ್ಕದ್ದೆಂದು ತಂದೆ ತೀರ್ಮಾನಿಸಿ ಆಗಿತ್ತು. ಜತೆಗೆ ಹರಕಲು ಸೀರೆಯ ತಾಯಿಯ ಕಣ್ಣೀರು!

ಸಣ್ಣ ಹುಡುಗ ನನ್ನ ತಂದೆ ಕೂಡಲೇ ತಮ್ಮ ಜವಾಬ್ದಾರಿಯನ್ನು ಒಪ್ಪಿಕೊಂಡುಬಿಟ್ಟರು. ಈ ಬಗ್ಗೆ ಒಂದು ಕಡೆ ಬರೆದುಕೊಂಡಿದ್ದಾರೆ –

"ಊಟದ ಕೊನೆಯಲ್ಲೂ ಅರೆ ಹೊಟ್ಟೆಯಲ್ಲಿರುತ್ತಿದ್ದ ತಮ್ಮ – ತಂಗಿಯರು ಎಲೆಯ ಮೇಲಿನ ಸಾರಿನ ಹನಿಗಳನ್ನು ನೆಕ್ಕುತ್ತಾ ಕೂತಿರುತ್ತಿದ್ದರು. ಅದನ್ನು ಕಂಡು ಸಂಕಟವಾಗುತ್ತಿತ್ತು. ಅವರಿಗೆ ಬಾಯಿತುಂಬ ತುತ್ತನ್ನು ಕೊಡಬೇಕಾದ್ದು ನನ್ನ ಕರ್ತವ್ಯ ಎಂದು ತೀರ್ಮಾನಿಸಿಬಿಟ್ಟೆ. ಓದಿನ ಆಸೆಯನ್ನು ಗಾಳಿಗೆ ತೂರಿ, ಮನೆ ವಾರ್ತೆಯನ್ನು ಹೆಗಲಿಗೇರಿಸಿಕೊಂಡೆ."

ಅವರಿಗೆ ದೊರೆತದ್ದು ಆರೋಗ್ಯ ಇಲಾಖೆಯಲ್ಲಿ ಹೆಲ್ತ್ ಇನ್ಸ್‌ಪೆಕ್ಟರ್ ಉದ್ಯೋಗ. ನಿಷ್ಠೆಯಿಂದ ದುಡಿದು ೧೯೭೭ರಲ್ಲಿ ನಿವೃತ್ತರಾದರು.

**ಸಾಹಿತಿಯಾಗಿ**

ನಾನು ಗಮನಿಸಿದ ಹಾಗೆ, ನನ್ನ ತಂದೆ ತೀರಾ ಭಾವಜೀವಿ. ಯಾವುದೋ ಕಲ್ಪನಾಲೋಕದಲ್ಲಿ ವಿಹರಿಸುವವರ ಹಾಗೆ ಅವರ ಮುಖಮುದ್ರೆ. ಎಷ್ಟೋ ಬಾರಿ ಕಣ್ಣುಬಿಟ್ಟು ಕೂತಿದ್ದರೂ, ನಾವು ಕರೆದದ್ದೇ ಅವರಿಗೆ ಕೇಳಿಸುತ್ತಿರಲಿಲ್ಲ. ಮುಖದ ತುಂಬ ಬಗೆಬಗೆಯ ಭಾವ ಬಣ್ಣಗಳು ಬಂದು ಬಂದು ಹೋಗುವುವು. ಇದ್ದಕ್ಕಿದ್ದಂತೆ ಬದ್ಧ ಭ್ರುಕುಟಿಗಳಾಗುವರು. ಮರುಕ್ಷಣ ಪಕಪಕ ನಗುವರು... ಹುಬ್ಬು ಹಾರಿಸುವರು! ಅಷ್ಟೇ ಅಲ್ಲ ನಡೆಯುತ್ತಿದ್ದವರು ಒಮ್ಮಿಂದೊಮ್ಮೆಲೆ ನಿಂತು ಕೈ ತಿರುಗಿಸುವರು. ಒಟ್ಟಾರೆ, ನಮ್ಮ ಅಣ್ಣಯ್ಯ ದೊಡ್ಡ ಕನಸುಗಾರ. ರಸ ಹೃದಯಿ. ಅವರ ಈ ಸ್ವಭಾವವೇ ಅವರನ್ನು ಸಾಹಿತಿಯನ್ನಾಗಿಸಿರುವುದು.

ಹದಿನೈದು – ಹದಿನಾರರ ಸಣ್ಣ ಬಾಲಕ, ಅಣ್ಣಯ್ಯ ಸಮೇತನಹಳ್ಳಿಯ ಪಕ್ಕದಲ್ಲಿ ಹರಿಯುವ ಪಿನಾಕಿನಿ ದಂಡೆಗೆ ಆಗಾಗ ಓಡಿ ಹೋಗುತ್ತಿದ್ದರಂತೆ. ಅಲ್ಲಿ ಹೊಂಗೆ ನೆರಳಲ್ಲಿ ಕೂತು, ಹಕ್ಕಿಹಾಡನ್ನು ಕೇಳುತ್ತಾ, ನೀಲಾಗಸವನ್ನು ನಿಟ್ಟಿಸುತ್ತಾ ಕವನಗಳನ್ನು ಬರೆಯುತ್ತಿದ್ದರಂತೆ. ಹೀಗೆ ಸೃಷ್ಟಿಯಾದದ್ದು ಕಂತೆ



ಅಣ್ಣಯ್ಯನವರ ಆದರ್ಶ ಪುರುಷ ಗಾಂಧೀಜಿ. ಅವರ ಸತ್ಯನಿಷ್ಠೆ, ಪ್ರಾಮಾಣಿಕತೆ, ದಿಟ್ಟತನ ಇವೆಲ್ಲ ಅಣ್ಣಯ್ಯನಿಗೂ ಪರಮ ಮೌಲ್ಯಗಳು. ಗಾಂಧಿತಾತ ನಿಧನರಾದ ಸುದ್ದಿ ಬಂದಾಗ, ಅಣ್ಣಯ್ಯ ಆಫೀಸಿನಲ್ಲಿ ಕೂತು ಕಡತಗಳನ್ನು ಪರಿಶೀಲಿಸುತ್ತಿದ್ದರು. ವಿಷಯ ತಿಳಿದದ್ದೇ, ಮೇಲಧಿಕಾರಿಗಳಿಗೆ ಹೇಳಿ, ರಜೆ ಪಡೆದು ಒಂದು ಪಾರ್ಕಿಗೆ ಹೋದರಂತೆ. ಅಲ್ಲಿ, ಮೂಲೆಯೊಂದರಲ್ಲಿ ಕೂತು ಬಹಳ ಹೊತ್ತು ಬಿಕ್ಕಿ ಬಿಕ್ಕಿ ಅತ್ತರಂತೆ! ಪ್ರಿಯಬಂಧು ಒಬ್ಬರನ್ನು ಕಳಕೊಂಡಷ್ಟು ಸಂಕಟವಾಯ್ತಂತೆ. ಅಳುವುದರಲ್ಲಂತು ಅವರು ಧೀರರು. ಬಹುಶಃ ಅವರ ಅಂತಃಕರಣ ಬಹು ಮೃದುವೆಂದು ಕಾಣುತ್ತದೆ.

ಕಂತೆ ಕವನಗಳು! ಬರೆಯುವ ಆಸೆ ಅವರಿಗೆ! ಬರೆದರು... ಬರೆದರು... ಫೈಲುಗಳಲ್ಲಿ ತುಂಬಿಟ್ಟರು. ಆದರೆ, ಮುಂದೊಂದು ದಿನ ಅವರ ಕೆಲವು ಪುಸ್ತಕಗಳು ಪ್ರಕಟವಾದ ಮೇಲೆ, ಈ ಕವನ ರಾಶಿ ಅವರಿಗೆ ಬಾಲಿಶ ಅನ್ನಿಸಿ, ನಾಚಿಕೆ ಆಯಿತಂತೆ. ಒಂದು ಇಡೀ ದಿನ ಕೂತು, ಆ ಎಲ್ಲ ರಾಶಿಯನ್ನು, ಬರೆದಷ್ಟೇ ಶ್ರದ್ಧೆಯಿಂದ ಅಗ್ನಿಗೆ ಅರ್ಪಿಸಿಬಿಟ್ಟರಂತೆ!

ನನ್ನ ತಂದೆಯ ಬಾಲ್ಯಕಾಲದ ಸಂದರ್ಭದಲ್ಲಿ ಸಮೇತನಹಳ್ಳಿ ತೀರಾ ಕುಗ್ರಾಮ. ಹಳ್ಳಿ ರಾಜಕೀಯ, ವೈಷಮ್ಯಗಳು, ಭರ್ತ್ಸನೆಗಳು ತುಂಬಿಕೊಂಡಿದ್ದ ಊರು. ಕಲಾಪೋಷಣೆಗೆ, ಸಾಹಿತ್ಯಾಸಕ್ತಿಗೆ, ಸುತರಾಂ ವಾತಾವರಣ ಇರಲಿಲ್ಲ. ಇಂಥ ಅನುತ್ತೇಜಕ ಮತ್ತು ನಿರಾಶಾದಾಯಕ ಪರಿಸ್ಥಿತಿಯಲ್ಲೂ ಪುಟ್ಟ ಹುಡುಗ ರಾಮುವಿನ ಹೃದಯದಲ್ಲಿ ಸಾಹಿತ್ಯ ಪ್ರೀತಿ ಅರಳಿದ್ದು, ಸ್ವಂತ ಅಧ್ಯಯನದಿಂದ ಅವರದನ್ನು ಪೋಷಿಸಿಕೊಂಡು ಬಂದಿದ್ದು, ವಿದ್ವಜ್ಜನರು ಮೆಚ್ಚುವಂಥ ಕಾವ್ಯಗಳನ್ನು ರಚಿಸಿದ್ದು, ಸೋಜಿಗದ ಸಂಗತಿ.


ಯುವಕವಿ ರಾಸ

ಅಣ್ಣಯ್ಯನ ಕಾವ್ಯಕೃಷಿಗೆ ಒಂದು ಸರಿಯಾದ ರೂಪ ಬಂದದ್ದು ಉದ್ಯೋಗ ನಿಮಿತ್ತ ಅವರು ಹಾಸನಕ್ಕೆ ಬಂದಾಗ. ಬೇಲೂರು, ಹಳೇಬೀಡು, ಶ್ರವಣಬೆಳಗೊಳ, ದೊಡ್ಡಗದ್ದುವಳ್ಳಿ ಮುಂತಾದ ಕಡೆ ಪದೇ ಪದೇ ಹೋಗುತ್ತಿದ್ದರು. ಹೊಯ್ಸಳರ ಶಿಲ್ಪಕಲೆ, ಆ ಸಾಂಸ್ಕೃತಿಕ ವೈಭವ, ಇವೆಲ್ಲದರಿಂದ ಅವರ ಎದೆಯೊಳಗಿದ್ದ ಸಾಹಿತ್ಯ ಚೇತನ ನವಿರಾಗಿ ಅರಳಿಕೊಂಡಿತು. ಶಾಂತಲೆ ಅವರ ನಾಯಕಿಯಾದಳು. ಬೆರಗುಗಣ್ಣುಗಳಿಂದ ಆ ಕಲೆಯನ್ನು ವೀಕ್ಷಿಸುವುದು ಮಾತ್ರವಲ್ಲ... ಸಂಬಂಧಪಟ್ಟ ಶಾಸನಗಳನ್ನೂ ಶ್ರದ್ಧೆಯಿಂದ ಓದಿಕೊಂಡರು. ಹೊಯ್ಸಳರ ಬಗೆಗೆ, ವಿಶೇಷವಾಗಿ ಶಾಂತಲೆಯ ಬಗೆಗೆ ಅನೇಕ ನಾಟಕಗಳನ್ನೂ ಕಾದಂಬರಿಗಳನ್ನೂ ರಚಿಸಿದರು.



ಬರವಣಿಗೆಯ ಮಟ್ಟಿಗೆ ಹೇಳುವುದಾದರೆ ಅವರು ತೀರಾ ಶಿಸ್ತಿನ ಸಾಹಿತಿ. ಮೇಜು, ಹಸ್ತಪ್ರತಿ, ಲೇಖನಿ ಎಲ್ಲದರಲ್ಲೂ ಒಪ್ಪ–ಓರಣ. ಮಕ್ಕಳು ಪೆಪ್ಪರಮೆಂಟು – ಬಿಸ್ಕತ್ತುಗಳಿಗೆ ಆಸೆಪಡುವಂತೆ, ಪುಸ್ತಕಗಳಿಗೆ ಅವರು ಹಂಬಲಿಸುತ್ತಿದ್ದರು. ಅವುಗಳನ್ನು ಜೋಡಿಸಿಡುವುದೂ ಒಂದು ಚಂದದ ಕೆಲಸ ಅವರಿಗೆ. ಇನ್ನು ಬರೆಯುವ ಲಹರಿ ಅಮರಿಬಿಟ್ಟರೆ, ಬೆಳಗಿನ ಜಾವ – ಮಧ್ಯರಾತ್ರಿ ಅನ್ನದೆ ಎದ್ದು ಬರೆಯತೊಡಗುತ್ತಿದ್ದರು. ಚಳಿ, ಸೆಕೆ ಯಾವುದೂ ಅಡ್ಡ ಬರುತ್ತಿರಲಿಲ್ಲ.

**ಕೃತಿಗಳು**

ಸಣ್ಣಕತೆ, ಕವನ, ಕಾದಂಬರಿ, ನಾಟಕ, ಅನುವಾದ, ಜೀವನ ಚರಿತ್ರೆ, ಆತ್ಮಚರಿತ್ರೆ, ಮಹಾಕಾವ್ಯ – ಮುಂತಾದ ಸಾಹಿತ್ಯ ಪ್ರಕಾರಗಳಲ್ಲಿ ಅಣ್ಣಯ್ಯ ರಚಿಸಿರುವ ಒಟ್ಟು ಕೃತಿಗಳು ಮೂವತ್ತು. ಅಪ್ರಕಟಿತ ಹಸ್ತಪ್ರತಿಗಳು ಹನ್ನೆರಡು. ಇವುಗಳಲ್ಲಿ ಮುದ್ದಣನ 'ಶ್ರೀ ರಾಮಾಶ್ವಮೇಧ' ಕಾವ್ಯದ ಹೊಸಗನ್ನಡ ರೂಪವೂ ಸೇರಿದೆ.

ಅವರಿಗೆ ಎಂಭತ್ತು ವರ್ಷ ತುಂಬಿದಾಗ ಸ್ನೇಹಿತರೂ ಅಭಿಮಾನಿಗಳೂ ಸೇರಿ "ರಾಸದರ್ಶನ" ಎಂಬ ಅಭಿನಂದನ ಗ್ರಂಥವನ್ನು ಅರ್ಪಿಸಿದ್ದರು. ಅವರು ರಚಿಸಿರುವ ಶಾಂತಲೆಯ ಬಗೆಗಿನ ಕೃತಿಗಳನ್ನಾಧರಿಸಿ ಜಿ. ವಿ. ಅಯ್ಯರ್ ಅವರು "ನಾಟ್ಯರಾಣಿ ಶಾಂತಲಾ" ಎಂಬ ದೂರದರ್ಶನ ಧಾರಾವಾಹಿಯನ್ನು ನಿರ್ಮಿಸಿದ್ದಾರೆ. "ರಾಮರಾಯರ ಬದುಕು–ಬರಹ" ಅನ್ನುವ ವಿಷಯದ ಬಗ್ಗೆ ಪಿಎಚ್‌ಡಿ ಪ್ರಬಂಧವೂ ಪ್ರಕಟವಾಗಿದೆ.

ಹತ್ತು ನಾಟಕಗಳು, ಒಂಭತ್ತು ಕಾದಂಬರಿಗಳು, ನಾಲ್ಕು ಕಥಾಸಂಕಲನ, 'ಶಾಕುಂತಲಾ' ಮಹಾಕಾವ್ಯ, ತಗಡೂರು ರಾಮಚಂದ್ರರಾಯರ ಜೀವನ ಚಿತ್ರಣ, ಷೇಕ್ಸ್‌ಪಿಯರನ 'ಜೂಲಿಯಸ್ ಸೀಸರ್' ನಾಟಕದ ಅನುವಾದ, 'ಟಿಪ್ಪೂ ಸುಲ್ತಾನ್ ಇತಿಹಾಸ' ಅನುವಾದ, 'ಕೋಟೆಮನೆ' ಆತ್ಮಚರಿತ್ರೆ, ಒಂದು ಕವನ ಸಂಕಲನ, – ಇವು ರಾಸರಚಿತ ಒಟ್ಟಾರೆ ಸಾಹಿತ್ಯ.

ಇವುಗಳಲ್ಲಿ ಅನೇಕ ಪುಸ್ತಕಗಳು ಬೇರೆ ಬೇರೆ ವಿಶ್ವವಿದ್ಯಾನಿಲಯಗಳಲ್ಲಿ ಪಠ್ಯ ಪುಸ್ತಕಗಳೂ ಆಗಿವೆ. ಕೆಲವೊಂದು ಪುಸ್ತಕಗಳಿಗೆ ಬಹುಮಾನಗಳೂ ಬಂದಿವೆ.

**ನಾಗರಿಕ ಪ್ರಜ್ಞೆಯ ಒಬ್ಬ ಮನುಷ್ಯರಾಗಿ...**

ಸಮಾಜದ ಹಿತಾಸಕ್ತಿಗಾಗಿ ಮನುಷ್ಯ ಕಟ್ಟಿಕೊಂಡಿರುವ ಎಲ್ಲ ಮೌಲ್ಯಗಳನ್ನು ನಮ್ಮ ಅಣ್ಣಯ್ಯ ಹೃತ್ಪೂರ್ವಕವಾಗಿ ಗೌರವಿಸುತ್ತಿದ್ದರು; ಪಾಲಿಸುತ್ತಿದ್ದರು ಕೂಡ. ಬರೆದದ್ದನ್ನೇ ಬದುಕುವ, ಬದುಕಿದ್ದನ್ನೇ ಬರೆಯುವ, ಅಪರೂಪದ ಸಾಹಿತಿಗಳಲ್ಲಿ ಅವರು ಒಬ್ಬರಾಗಿದ್ದರು. ಬಸವಣ್ಣನವರು ಅವರ ಅತ್ಯಂತ ನೆಚ್ಚಿನ ದಾರ್ಶನಿಕರು. ಅವರ ಬಹುತೇಕ ವಚನಗಳು ಅವರಿಗೆ ಹೃದ್ಗತ. "ಇದೇ ಅಂತರಂಗಶುದ್ಧಿ... ಇದೇ ಬಹಿರಂಗಶುದ್ಧಿ..." ಅನ್ನುವ ಮಾತುಗಳಂತೂ ತುಂಬ ಇಷ್ಟ. ಆಗಾಗ ಹಜಾರದಲ್ಲಿ ನಡು ಮಧ್ಯದಲ್ಲಿ ನಿಂತು ಗಟ್ಟಿಯಾಗಿ, ಸ್ಫುಟವಾಗಿ ಈ ಇಡೀ ವಚನವನ್ನು ಹೇಳುವರು. "ಮಕ್ಕಳೇ... ಮನುಷ್ಯನಾದವನು ತನ್ನ ಮಾತು, ಮನಸ್ಸು, ನಡವಳಿಕೆ... ಹೀಗೆ ತ್ರಿಕರಣಪೂರ್ವಕವಾಗಿ ಪರಿಶುದ್ಧವಾಗಿ ಬಾಳಬೇಕು... ಆಗಲೇ ಅವನ ಬದುಕಿಗೆ ಸಾರ್ಥಕ್ಯ..." ಎಂದು ಪ್ರವಚನ ನೀಡುವರು! ಅವರ ಮಾತುಗಳ ಚಂದ ಈಗಲೂ ನನ್ನ ಹೃದಯದಲ್ಲಿ ಅಚ್ಚೊತ್ತಿದಂತೆ ಕೂತಿವೆ.

ಇನ್ನು ಅವರ ಆದರ್ಶ ಪುರುಷ ಗಾಂಧೀಜಿ. ಅವರ ಸತ್ಯನಿಷ್ಠೆ, ಪ್ರಾಮಾಣಿಕತೆ, ದಿಟ್ಟತನ ಇವೆಲ್ಲ ಅಣ್ಣಯ್ಯನಿಗೂ ಪರಮ ಮೌಲ್ಯಗಳು. ಗಾಂಧಿತಾತ ನಿಧನರಾದ ಸುದ್ದಿ ಬಂದಾಗ ಅಣ್ಣಯ್ಯ ಆಫೀಸಿನಲ್ಲಿ ಕೂತು ಕಡತಗಳನ್ನು ಪರಿಶೀಲಿಸುತ್ತಿದ್ದರು. ವಿಷಯ ತಿಳಿದದ್ದೇ, ಮೇಲಧಿಕಾರಿಗಳಿಗೆ ಹೇಳಿ, ರಜೆ ಪಡೆದು ಒಂದು ಪಾರ್ಕಿಗೆ ಹೋದರಂತೆ. ಅಲ್ಲಿ, ಮೂಲೆಯೊಂದರಲ್ಲಿ ಕೂತು ಬಹಳ ಹೊತ್ತು ಬಿಕ್ಕಿ ಬಿಕ್ಕಿ ಅತ್ತರಂತೆ! ಪ್ರಿಯಬಂಧು ಒಬ್ಬರನ್ನು ಕಳಕೊಂಡಷ್ಟು ಸಂಕಟವಾಯ್ತಂತೆ. ಅಳುವುದರಲ್ಲಂತೂ ಅವರು ಧೀರರು. ಬಹುಶಃ ಅವರ ಅಂತಃಕರಣ ಬಹು ಮೃದುವೆಂದು ಕಾಣುತ್ತದೆ. ರಕ್ತದಲ್ಲೇ ಹರಿದುಬಂದ ಪಾಳೆಗಾರಿಕೆ ದರ್ಪವನ್ನು ಸರ್ವಕಾಲವೂ ಮನೆಯವರ ಮೇಲೆ, ಅತ್ತ ಆಫೀಸಿನಲ್ಲಿ

ಸೋಮಾರಿಗಳಾದ ಕೈ ಕೆಳಗಿನ ನೌಕರರ ಮೇಲೆ ಚಲಾಯಿಸುತ್ತಾ ಸುಳಿಯುವ ಅಣ್ಣಯ್ಯ, ಅಂತಃಕರಣವನ್ನು ಸ್ಪರ್ಶಿಸುವ ಯಾವುದೇ ಸಣ್ಣ ವಿಷಯಕ್ಕೂ ಬಿಕ್ಕಿ ಬಿಕ್ಕಿ ಅತ್ತುಬಿಡುತ್ತಿದ್ದರು.

ದೇವರ ಬಗ್ಗೆ ಭಕ್ತಿ–ಪ್ರೀತಿ ಇತ್ತು. ಆದರೆ ಹೆದರಿಕೆ ಇರಲಿಲ್ಲ. ದೇವಸ್ಥಾನಗಳಿಗೆ ಅವರು ಹೋದವರೇ ಅಲ್ಲ. "ನನ್ನ ಕೆಲಸವೇ ನನಗೆ ದೇವರು... ಯಾರಿಗೂ ಕೇಡು ಮಾಡದೆ ಬದುಕುವುದೇ ದೈವಭಕ್ತಿ" ಎಂದವರು ನಂಬಿದ್ದರು. ಹಾಗೊಮ್ಮೆ ಅಪರೂಪಕ್ಕೆ ದೇವಸ್ಥಾನಕ್ಕೆ ಹೋಗಿದ್ದಾಗ... "ಅಲ್ಲಿ ಇಷ್ಟು ದುಡ್ಡುಕಟ್ಟಿ... ಇಂಥಲ್ಲಿ ರಸೀತಿ ತೆಗೆದುಕೊಂಡು ಬನ್ನಿ..." ಎಂಬಂಥ ಆದೇಶಗಳು ಸಾಕಾಗಿಹೋಯ್ತು ಅವರಿಗೆ. "ನೀವೇನ್ರೀ ನನಗೂ ದೇವರಿಗೂ ಮಧ್ಯೆ ಏಜಂಟರ ಕೆಲ್ಸ ಮಾಡೋದು? ನನ್ನ ದೇವರನ್ನ ನಾನು ಒಲಿಸಿಕೊಳ್ತೀನಿ ಬಿಡಿ..." ಅಂತ ರೇಗಿ ಮನೆಗೆ ಬಂದುಬಿಟ್ಟರು.

ಇನ್ನೊಮ್ಮೆ ಸ್ವಾಮಿಗಳೊಬ್ಬರು ತಮ್ಮ ಸ್ನೇಹಿತರಿಗೆ ಬಹಿಷ್ಕಾರ ಹಾಕಿದ ಸಮಾಚಾರ ಆ ಸ್ನೇಹಿತರಿಂದಲೇ ಅಣ್ಣಯ್ಯನಿಗೆ ತಿಳಿಯಿತು. ಆದರೆ ಶಾಪ ವಿಮೋಚನೆಗೆ ದಾರಿಯೂ ಇತ್ತು. ತಾವು ಪೂಜಿಸುವ ದೇವರ ಮೂರ್ತಿಗೆ ವಜ್ರದ ಕಿರೀಟ ಮಾಡಿಸಿ ಕೊಟ್ಟರೆ, ಸ್ವಾಮಿಗಳು ಬಹಿಷ್ಕಾರವನ್ನು ಹಿಂದಕ್ಕೆ ತೆಗೆದುಕೊಳ್ಳುತ್ತಾರಂತೆ! ಇದೆಲ್ಲ ಕೇಳಿ ಅಣ್ಣಯ್ಯನಿಗೆ ವಿಪರೀತ ಸಿಟ್ಟು ಬಂತು. "ಕ್ರೋಧ–ಮೋಹಗಳನ್ನೇ ಗೆಲ್ಲದ ಇವರು ಯಾವ ಸೀಮೆ ಸ್ವಾಮಿರೀ? ನ್ಯಾಯವಾಗಿ ನಾವೇ ಇಂಥವರಿಗೆ ಬಹಿಷ್ಕಾರ ಹಾಕಬೇಕು! ನಾನು ಹೀಗೆ ಹೇಳಿದೆ ಅಂತ ಹೋಗಿ ಹೇಳಿ ಅವರಿಗೆ!" ಎಂದು ಗುಡುಗಿದರು ನಮ್ಮ ಅಣ್ಣಯ್ಯಪ್ಪ!

ಯಾವುದೇ ಕ್ಷೇತ್ರದಲ್ಲಿ ಅನ್ಯಾಯ ಕಂಡರೆ, ಬರವಣಿಗೆಯಲ್ಲೂ, ಭಾಷಣದಲ್ಲೂ ಖಂಡಿಸಿಬಿಡುತ್ತಿದ್ದರು. ಸಹಜವಾಗಿಯೇ ಸಮಾಜದ ಬಹುಮಂದಿಯ ಆಕ್ರೋಶಕ್ಕೂ ಗುರಿಯಾದರು. ಪರಿಣಾಮ: ಸಾಹಿತ್ಯ ವ್ಯವಸಾಯವನ್ನು ತಪಸ್ಸಿನಂತೆ ಮಾಡಿಯೂ, ಕಡೆಯವರೆಗೂ ಎಲೆಮರೆಯ ಹೂವಿನಂತೆಯೇ ಉಳಿದರು.



ಪತ್ನಿ ಪಂಕಜಾಕ್ಷಿ ಅವರೊಂದಿಗೆ ರಾಸ

ಕೆಲಸ ಮಾಡುವುದೆಂದರೆ ಅವರಿಗೆ ತುಂಬ ಪ್ರೀತಿ. "ಕೆಲಸದ ಬದಲಾವಣೆಯೇ ವಿಶ್ರಾಂತಿ" ಎಂದು ಉಲ್ಲಸಿತರಾಗಿ ಹೇಳಿಕೊಳ್ಳುತ್ತಾ ಬಗೆ ಬಗೆಯ ಕೆಲಸಗಳನ್ನು ಮಾಡಿಕೊಳ್ಳುತ್ತಿದ್ದರು. ದಿನದ ಬಹುಪಾಲು ಬರವಣಿಗೆಗೆ ಮೀಸಲು. ಉಳಿದಂತೆ ತೋಟಗಾರಿಕೆ, ನಡಿಗೆ, ವ್ಯಾಯಾಮ, ಆಗಿಂದಾಗ ಮನೆಯ ಒಪ್ಪ–ಓರಣ, ಪುಸ್ತಕದ ಬೀರುಗಳ ಶುಚಿ... ಹೀಗೆ ಸಂಕೀರ್ಣ ದಿನಚರಿ. ಯಾರಾದರೂ "ಯಾಕೋ ಬೇಜಾರು!" ಅಂದರೆ, "ಸೋಮಾರಿಗಳಿಗೆ ಹಾಗೇ... ಎದ್ದು ಏನಾದ್ರೂ ಕೆಲಸ ಮಾಡು... ಉತ್ಸಾಹ ಬರುತ್ತೆ !" ಎಂದು ಬೋಧಿಸುತ್ತಿದ್ದರು.

**ದಾಂಪತ್ಯ ಸರಸ**

ಅಣ್ಣಯ್ಯನದು ಹಿಂದಿನ ಕಾಲದ ಮದುವೆ. ಅವರಿಗೆ ಮದುವೆ ಆದಾಗ ಇಪ್ಪತ್ತೊಂದು ವರ್ಷ... ಬಹಳ ಚೆಲುವಾದ ಸ್ವರೂಪ... ಕವಿಮನಸ್ಸು! ಯಾವ ಯಾವ ಕನಸಿನ ಲೋಕಗಳಲ್ಲಿ ವಿಹರಿಸುತ್ತಿದ್ದರೋ! ಅಮ್ಮನಾದರೋ ಗೋಧಿಬಣ್ಣದ ಸಾಧಾರಣ ರೂಪಿನ ಹನ್ನೊಂದು ವರ್ಷದ ಬಾಲಕಿ. ನನ್ನ ತಾತನ ಒತ್ತಾಯಕ್ಕೆ ಮದುವೆ ಆದದ್ದು. ಆದರೂ, ನನ್ನ ತಂದೆಯನ್ನು ನಾನು ತುಂಬ ಗೌರವಿಸುವುದಕ್ಕೆ ಕಾರಣ ಅಂದರೆ, ದಾಂಪತ್ಯದ ಬಗ್ಗೆ ಅವರಿಗಿದ್ದ ಜವಾಬ್ದಾರಿ. "ಈ ಹುಡುಗಿ ನನ್ನ ನಂಬಿ ಬಂದಿದ್ದಾಳೆ... ಅವಳನ್ನು ನಾನೇ ನೋಡಿಕೊಳ್ಳಬೇಕು" ಅನ್ನುವ ಅಚಲ ಹೊಣೆಗಾರಿಕೆ.

ನಾವುಗಳು ದೊಡ್ಡವರಾಗುವವರೆಗೂ ಅಣ್ಣಯ್ಯನೇ ಪೇಟೆಗೆ ಹೋಗಿ, ಅಮ್ಮನಿಗೆ ಸೀರೆ ತರುತ್ತಾ ಇದ್ದದ್ದು. ಅವರ ಸೌಂದರ್ಯ ಪ್ರಜ್ಞೆ ಉನ್ನತ ಮಟ್ಟದ್ದು. ಚಂದ ಚಂದದ ಸೀರೆಗಳನ್ನೇ ತರುವರು. ಆಫೀಸಿನಿಂದ ಮನೆಗೆ ಬರುವಾಗ ದಾರಿಯಲ್ಲಿ ಸೀಬೆಹಣ್ಣು ಕಂಡರೆ, ನಾಲ್ಕಾರು ಹಣ್ಣು ಕೊಂಡು, ತಮ್ಮ ವಿಸ್ತಾರವಾದ ಕರವಸ್ತ್ರದಲ್ಲಿ ಅಚ್ಚುಕಟ್ಟಾಗಿ ಕಟ್ಟಿ, ಆ ಕಟ್ಟನ್ನು ಸೈಕಲ್ಲಿನ ಹ್ಯಾಂಡಲಿಗೆ ನೇತುಹಾಕಿ ತರುವರು. ಮನೆಗೆ ಬಂದೊಡನೆ "ಇಗೊಳ್ಳೆ.. ಸೀಬೆಹಣ್ಣು ಅಂದ್ರೆ ಪ್ರಾಣ ಅಲ್ವ ನಿಂಗೆ?... ತಂದಿದೀನಿ ತಿನ್ನು" ಎನ್ನುತ್ತ ಅಮ್ಮನ ಕೈಗಿಡುವರು.

ಅಣ್ಣಯ್ಯ ಕೆಲಸದಿಂದ ನಿವೃತ್ತರಾದ ನಂತರ, ಅವರಿಗೆ ಅಮ್ಮನೊಂದಿಗೆ ಸರಸದ ಮಾತುಗಳನ್ನಾಡಲು ಒಂದಷ್ಟು ಬಿಡುವು ದೊರೆಯಿತು. ಅಷ್ಟುಹೊತ್ತಿಗೆ ಇಬ್ಬರ ಮನಸ್ಸುಗಳೂ ಪಕ್ವವೂ ಆಗಿತ್ತಲ್ಲ! ಮಧ್ಯಾಹ್ನ ಊಟಮುಗಿಸಿ ಅಣ್ಣಯ್ಯ ಹಜಾರದಲ್ಲಿ ಬೆತ್ತದ ಕುರ್ಚಿಯ ಮೇಲೆ ಆಸೀನರಾಗುವರು. ತನ್ನ ಊಟ ಮುಗಿಸಿ ಅಮ್ಮ ಉಲ್ಲಾಸದಿಂದ ಎಲೆಯಡಿಕೆ ತಟ್ಟೆ ತಂದು ಅವರೆದುರಿಗೆ ಕೂರುವಳು. ಅಡಿಕೆಪುಡಿ ತಾನೇ ಮಾಡಿದ್ದು ಎಂಬ ಹೆಮ್ಮೆ ಬೇರೆ! ಜತೆಗೆ ಅಣ್ಣಯ್ಯನೂ ಮುಕ್ತವಾಗಿ ಹೊಗಳುವರು! ಆಗ ಅವರಿಬ್ಬರ ಮಾತುಕತೆ ಬಹಳ ಹೊತ್ತು ನಡೆಯುವುದು ಬಣ್ಣಬಣ್ಣವಾಗಿ! ಹಾಸ್ಯ, ಸರಸ, ವಿಚಾರ ವಿನಿಮಯಗಳು ಯಥೇಚ್ಛ!

ಒಮ್ಮೆ ಹೀಗಾಯ್ತು. ಸೆಕೆಗಾಲ ಆದ್ದರಿಂದ ಅಣ್ಣಯ್ಯ ಬನೀನು ತೆಗೆದು ಹಾಕಿದ್ದರು. ಅವರ ಬಿಳೀ ಹೊಟ್ಟೆ–ಬೆನ್ನು ಮಿಂಚುತ್ತಿದ್ದವು. ಹೊಟ್ಟೆ ಮೇಲೆ ಅವರಿಗೆ ದಪ್ಪ ದಪ್ಪ ಮೆಣಸುಕಾಳು ಗಾತ್ರದ ಕೆಂಪು ಗುಳ್ಳೆಗಳು! ಅಮ್ಮ ಅರ್ತಿಯಿಂದ ಅವುಗಳನ್ನು ಸವರುತ್ತಾ... "ಇಗೊಳ್ಳೇ ಭಾರ್ತಿ... ನಿಮ್ಮಪ್ಪ ಹೋದ ಜನ್ಮದಲ್ಲಿ ಧಾರಾಳವಾಗಿ ಹವಳಗಳನ್ನ ದಾನ ಮಾಡಿದಾರೆ... ಅದಿಕ್ಕೇ ಹೀಗೆ ಮೈತುಂಬ ಕೆಂಪುಗುಳ್ಳೆ!" ಅಂದಳು. ಕೂಡಲೇ ನನ್ನ ಗಮನ ಅಮ್ಮನ ಗಲ್ಲ–ಕತ್ತುಗಳ ಮೇಲಿದ್ದ ಕರಿಮಣಿಯಂತಹ ಕಪ್ಪುಗುಳ್ಳೆಗಳತ್ತ ಹೋಯ್ತು. ನಾನಂದೆ... "ಅಮ್ಮ, ನಿಂಗೆ ಕಪ್ಪುಗುಳ್ಳೆ ಇದ್ಯಲ್ಲ... ನೀನೇನು ದಾನ ಮಾಡಿದ್ದೆ?"... "ನಾನಾ? ನಾನು ಬುಟ್ಟಿಗಟ್ಟಲೆ ಇದ್ದಿಲು ದಾನ ಮಾಡಿದ್ದೆ!" ತಕ್ಷಣ ಹೇಳಿದಳು ಆ ಪ್ರತ್ಯುತ್ಪನ್ನಮತಿ. ಅಣ್ಣಯ್ಯ 'ಹೋ!' ಅಂತ ನಕ್ಕರು.

ನನ್ನ ಅಣ್ಣಯ್ಯನ ವ್ಯಕ್ತಿತ್ವದ ಒಟ್ಟಂದ ಅಂದರೆ, ತಮ್ಮ ಎಲ್ಲ ಕರ್ತವ್ಯಗಳನ್ನು ಮನಸಾರೆ ಗೌರವಿಸುತ್ತಿದ್ದರು ಮತ್ತು ಪಾಲಿಸುತ್ತಿದ್ದರು. "ಎಲ್ಲ ಒಳ್ಳೆಯ ಚಿಂತನೆಗಳು ಎಲ್ಲ ದಿಕ್ಕುಗಳಿಂದ ಬರಲಿ" ಎಂದು ಮನಸ್ಸನ್ನು ಮುಕ್ತವಾಗಿ ತೆರೆದಿಟ್ಟು ಬಾಳಿದ್ದರು.

**ಭಾರತೀ ಕಾಸರಗೋಡು**
ಪ್ಲಾಟ್ ನಂ. ಕೆ–೧೦೦೩, ಪೂರ್ವ ಹೈ ಲ್ಯಾಂಡ್ಸ್, ೯ನೇ ಮೈಲಿ ರಸ್ತೆ, ಮಲ್ಲಸಂದ್ರ
ಕನಕಪುರ ರಸ್ತೆ, ಬೆಂಗಳೂರು – ೫೬೦ ೦೬೨

# ಎಸ್.ಎಂ.ವಿ. ಪ್ರಕಾಶನದ ಇತ್ತೀಚಿನ ಪುಸ್ತಕಗಳು




₹ 460




₹ 530




₹ 465




₹ 320




₹ 560




₹ 430




₹ 160




₹ 315




₹ 315




₹ 150




₹ 140




₹ 460




₹ 480




₹ 398




₹ 398

## ಎಲ್ಲಾ ರೀತಿಯ ಸ್ಪರ್ಧಾತ್ಮಕ ಪರೀಕ್ಷೆಗಳ ಪುಸ್ತಕಗಳಿಗಾಗಿ

ಪ್ರತಿಗಳಿಗಾಗಿ ಸಂಪರ್ಕಿಸಿ

**ಪುಸ್ತಕ ಮಂಟಪ**
ಮೊದಲನೇ ಮಹಡಿ
ಶ್ರೀರಾಮ ಗುಡಿರಸ್ತೆ
ಕೋಲಾರ – 563 101
ದೂರವಾಣಿ : 08152-220471




**ಎಸ್.ಎಂ.ವಿ. ಪ್ರಕಾಶನ**
ನಂ. 151, 3ನೇ ಮುಖ್ಯರಸ್ತೆ
ಚಾಮರಾಜಪೇಟೆ, ಬೆಂಗಳೂರು-18
ದೂರವಾಣಿ : 080-2660 0628
email. : smvpublications@gmail.com
website : www.smvpublicatons&pustakamantapa

# ಕರ್ನಾಟಕದಲ್ಲಿ ಬ್ಯಾಂಕ್ ಖಾತೆ ಹೊಂದಿರುವ ಕುಟುಂಬಗಳ ಒಂದು ನೋಟ

**ಎಂ. ಎಸ್. ಕಂಪ್ಲಿ**

ಬ್ಯಾಂಕ್‌ಗಳು ನಮ್ಮ ಹಣಕಾಸಿನ ಉಳಿತಾಯ ಖಾತೆಗಳು ಇದ್ದ ಹಾಗೆ. ಇವು ಗ್ರಾಹಕರ ಪರವಾಗಿ ಹಣವನ್ನು ಸುಭದ್ರವಾಗಿಡುತ್ತವೆ. ಆದುದರಿಂದ ಬ್ಯಾಂಕ್ ಖಾತೆ ಹೊಂದಲು ಅನೇಕ ಕಾರಣಗಳೂ ಇವೆ. ಜನರು ತಾವು ದುಡಿದ ಹಣವನ್ನು ಸಂಗ್ರಹಿಸಿಡುವುದಕ್ಕೆ ಭದ್ರತೆಯೂ ಒಂದು ಕಾರಣ. ಹಣವನ್ನು ಮನೆಯಲ್ಲಿ ಇಟ್ಟಾಗ ಮನೆಯಲ್ಲಿ ಕಳ್ಳತನವಾಗಬಹುದು, ಆಕಸ್ಮಿಕ ಬೆಂಕಿಗೆ ಆಹುತಿಯಾಗಬಹುದು ಅಥವಾ ನೈಸರ್ಗಿಕ ವಿಕೋಪಕ್ಕೆ ತುತ್ತಾಗುವುದರೆಲ್ಲದರಿಂದ ಬ್ಯಾಂಕುಗಳು ರಕ್ಷಿಸುತ್ತವೆ. ಬ್ಯಾಂಕ್ ಖಾತೆಯಿಂದ ಆಗುವ ಮತ್ತೊಂದು ಅನುಕೂಲವೆಂದರೆ ಹಣವನ್ನು ಎಲ್ಲೆಂದರಲ್ಲಿ ವರ್ಗಾವಣೆ ಮಾಡಬಹುದು. ಡೆಬಿಟ್ ಹಾಗೂ ಕ್ರೆಡಿಟ್ ಕಾರ್ಡ್‌ಗಳ ಸಹಾಯದಿಂದ ಸೇವಾ ಸರಕುಗಳನ್ನು ಪಡೆಯಬಹುದು. ಇತ್ತೀಚಿನ ದಿನಗಳಲ್ಲಿ ಜೀವನಕ್ಕೆ ಅವಶ್ಯವಿರುವ ವಸ್ತುಗಳ ಬೆಲೆ ಹೆಚ್ಚುತ್ತಿದೆ. ಇದರಿಂದ ಹಣದುಬ್ಬರ ಏರುತ್ತಿದೆ. ಬ್ಯಾಂಕ್ ಖಾತೆಯಲ್ಲಿ ಹಣವನ್ನು ಇಡುವುದರಿಂದ ಸ್ವಲ್ಪ ಬಡ್ಡಿಯೂ ಸಿಗುತ್ತದೆ, ಇದು ಸ್ವಲ್ಪ ಪ್ರಮಾಣದವರೆಗೆ ಹಣದುಬ್ಬರದಿಂದ ನಮ್ಮನ್ನು ರಕ್ಷಿಸುತ್ತದೆ. ಈ ಕಾರಣಗಳಿಗಾಗಿ ಬ್ಯಾಂಕ್ ಖಾತೆ ಅವಶ್ಯವಾಗಿದೆ. ಈ ಮುಂದುವರಿದ ಕಾಲದಲ್ಲಿ ಅನೇಕರು ಬೆರಳು ತುದಿಯಲ್ಲಿ ಬ್ಯಾಂಕಿಂಗ್ ವ್ಯವಹಾರವನ್ನು ಮಾಡುತ್ತಿದ್ದಾರೆ. ಒಟ್ಟಾರೆಯಾಗಿ, ಇದು ನಮ್ಮ ಉಳಿತಾಯ ಹಾಗೂ ಖರ್ಚುಗಳನ್ನು ಉತ್ತಮವಾಗಿ ನಿರ್ವಹಿಸಲೂ ಕೂಡ ಸಹಕಾರಿಯಾಗುತ್ತದೆ. ಇನ್ನು ಕರ್ನಾಟಕದಲ್ಲಿ ೨೦೧೧ರ ಜನಗಣತಿ ಪ್ರಕಾರ ಬ್ಯಾಂಕುಗಳ ಸೇವೆ ಪಡೆದಿರುವ ಮನೆಗಳ ಒಂದು ಸಂಕ್ಷಿಪ್ತ ನೋಟ ಇಲ್ಲಿದೆ:

- ೨೦೧೧ರ ಜನಗಣತಿ ಪ್ರಕಾರ ಕರ್ನಾಟಕದಲ್ಲಿ ಬ್ಯಾಂಕ್ ಸೇವೆ ಪಡೆದಿರುವ ಒಟ್ಟು ಕುಟುಂಬಗಳು
- ಜಿಲ್ಲಾವಾರು ಬ್ಯಾಂಕ್ ಸೌಲಭ್ಯ ಪಡೆದಿರುವ ಕುಟುಂಬಗಳು ಹಾಗೂ ನಗರ ಮತ್ತು ಗ್ರಾಮೀಣ ಪ್ರದೇಶಗಳ ವಿಶ್ಲೇಷಣೆ
- ಪ್ರಾದೇಶಿಕವಾರು ಬ್ಯಾಂಕ್ ಖಾತೆ ಹೊಂದಿರುವ ಕುಟುಂಬಗಳು
- ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದ ಶೇಕಡಾವಾರು ವಿಶ್ಲೇಷಣೆ

**ಬ್ಯಾಂಕ್ ಖಾತೆ ಹೊಂದಿರುವ ಒಟ್ಟು ಕುಟುಂಬಗಳು**

೨೦೧೧ರ ಜನಗಣತಿ ಪ್ರಕಾರ ದೇಶದಲ್ಲಿ ೨೪.೬೭ ಕೋಟಿ ಕುಟುಂಬಗಳಲ್ಲಿ ಅಂದಾಜು ಮಾಡಿದಂತೆ ೧೪.೪೮ ಕೋಟಿ (೫೮.೭%) ಕುಟುಂಬಗಳಿಗೆ ಬ್ಯಾಂಕಿಂಗ್ ಸೇವೆಗಳು ಲಭ್ಯವಾಗಿವೆ. ಒಟ್ಟು ೧೬.೭೮ ಕೋಟಿ ಗ್ರಾಮೀಣ ಕುಟುಂಬಗಳಲ್ಲಿ ೯.೧೪ ಕೋಟಿ (೫೪.೪೬%) ಕುಟುಂಬಗಳು ಬ್ಯಾಂಕ್ ಸೇವೆಯನ್ನು ಪಡೆದಿವೆ. ೭.೮೯ ಕೋಟಿ ನಗರ ಪ್ರದೇಶದ ಕುಟುಂಬಗಳಲ್ಲಿ ಒಟ್ಟು ೫.೩೪ ಕೋಟಿ (೬೭.೬೮%) ಕುಟುಂಬಗಳಿಗೆ ಬ್ಯಾಂಕಿಂಗ್ ಸೇವೆಗಳು ಲಭಿಸಿವೆ. ೨೦೧೬–೧೭ರಲ್ಲಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ರಾಷ್ಟ್ರೀಯ ಬ್ಯಾಂಕ್ (ನಬಾರ್ಡ್) ನಡೆಸಿದ ಸಮೀಕ್ಷೆ ಪ್ರಕಾರ ದೇಶದಲ್ಲಿ ಶೇ. ೮೮.೧ರಷ್ಟು ಗ್ರಾಮೀಣ ಕುಟುಂಬಗಳು ಬ್ಯಾಂಕ್ ಸೌಲಭ್ಯ ಹೊಂದಿವೆ. ಅದೇ ರೀತಿ ೨೦೧೧ರ ಜನಗಣತಿ ಪ್ರಕಾರ ಕರ್ನಾಟಕದಲ್ಲಿ ಒಟ್ಟು ೧೩,೧೭೯,೯೧೧ ಕುಟುಂಬಗಳಲ್ಲಿ ೮,೦೫೪,೬೭೭ ಕುಟುಂಬಗಳು ಬ್ಯಾಂಕ್ ಸೌಲಭ್ಯ ಪಡೆದಿದ್ದಾರೆ. ಅಂದರೆ ಒಟ್ಟು ರಾಜ್ಯದ ಕುಟುಂಬಗಳಲ್ಲಿ ಪ್ರತಿಶತ ೬೧.೧೧ರಷ್ಟು ಕುಟುಂಬಗಳು ಬ್ಯಾಂಕಿಂಗ್ ಸೌಲಭ್ಯ ಪಡೆದಿವೆ. ಕರ್ನಾಟಕದ ಒಟ್ಟು ಗ್ರಾಮೀಣ ಪ್ರದೇಶದ ಕುಟುಂಬಗಳಲ್ಲಿ ೪,೬೬೬,೭೬೨ (ಪ್ರ.ಶ. ೫೯)ರಷ್ಟು ಕುಟುಂಬಗಳು ಬ್ಯಾಂಕ್ ಸೌಲಭ್ಯ ಹೊಂದಿದ್ದರೆ, ಒಟ್ಟು ನಗರ ಪ್ರದೇಶದ ೩,೪೨೦,೯೧೫ ಕುಟುಂಬಗಳು (ಪ್ರ.ಶ. ೬೪)ರಷ್ಟು ಕುಟುಂಬಗಳು ಈ ಸೌಲಭ್ಯ ಪಡೆದಿವೆ. ಈ ಸಮೀಕ್ಷೆಯಿಂದ ತಿಳಿಯುವುದೇನೆಂದರೆ, ನಗರ ಪ್ರದೇಶಗಳಿಗಿಂತ ಗ್ರಾಮೀಣ ಪ್ರದೇಶದ ಕುಟುಂಬಗಳಲ್ಲಿ ಪ್ರತಿಶತ ೫ರಷ್ಟು ಕಡಿಮೆ ಕುಟುಂಬಗಳಲ್ಲಿ ಬ್ಯಾಂಕ್ ಸೌಲಭ್ಯ ಹೊಂದಿಲ್ಲ ಹಾಗೂ ರಾಜ್ಯದ ಒಟ್ಟು ಪ್ರ.ಶ.ಕ್ಕಿಂತ ನಗರ ಪ್ರದೇಶದ ಒಟ್ಟು ಕುಟುಂಬಗಳಲ್ಲಿ ಹೆಚ್ಚಿನವು ಬ್ಯಾಂಕಿಂಗ್ ಸೌಲಭ್ಯ ಹೊಂದಿವೆ.

ಜಿಲ್ಲಾವಾರು ಬ್ಯಾಂಕಿಂಗ್ ಸೌಲಭ್ಯ ಪಡೆದಿರುವ ಕುಟುಂಬಗಳು ಹಾಗೂ ನಗರ ಮತ್ತು ಗ್ರಾಮೀಣ ಪ್ರದೇಶಗಳ ವಿಶ್ಲೇಷಣೆ ರಾಜ್ಯದ ಎಲ್ಲ ಜಿಲ್ಲೆಗಳನ್ನು ಅವಲೋಕಿಸಿದಾಗ ಹೆಚ್ಚು ಕುಟುಂಬಗಳಲ್ಲಿ ಬ್ಯಾಂಕ್ ಖಾತೆ ಹೊಂದಿರುವ ಜಿಲ್ಲೆಗಳ ಪಟ್ಟಿಯಲ್ಲಿ ಮೊದಲ ಸ್ಥಾನ ಉಡುಪಿ, ಎರಡನೆ ಸ್ಥಾನ ದಕ್ಷಿಣ ಕನ್ನಡ ಹಾಗೂ ನಂತರದ ಸ್ಥಾನ ಉತ್ತರ ಕನ್ನಡಕ್ಕೆ ಸಲ್ಲುತ್ತದೆ. ಮೊದಲ ಸ್ಥಾನದಲ್ಲಿರುವ ಉಡುಪಿ ಜಿಲ್ಲೆಯು ಒಟ್ಟು ಕುಟುಂಬಗಳಲ್ಲಿ ಶೇ. ೯೪ರಷ್ಟು ಕುಟುಂಬಗಳು ಬ್ಯಾಂಕಿಂಗ್ ಸೌಲಭ್ಯ ಹೊಂದಿವೆ. ಇಲ್ಲಿ ಗ್ರಾಮೀಣ ಪ್ರದೇಶಗಳಿಗಿಂತ ಹೆಚ್ಚಾಗಿ ನಗರ ಪ್ರದೇಶಗಳಲ್ಲಿ ಈ ಸೌಲಭ್ಯ ಹೊಂದಿದ್ದಾರೆ. ಗ್ರಾಮೀಣ ಪ್ರದೇಶದ ಒಟ್ಟು ಕುಟುಂಬಗಳಲ್ಲಿ ಶೇ. ೯೩ರಷ್ಟು ಹಾಗೂ ನಗರ ಪ್ರದೇಶದ ಒಟ್ಟು ಕುಟುಂಬಗಳಲ್ಲಿ ಶೇ. ೯೫ರಷ್ಟು ಕುಟುಂಬಗಳು ಬ್ಯಾಂಕಿಂಗ್ ಸೌಲಭ್ಯ




ಬ್ಯಾಂಕ್ ಖಾತೆಯಿಂದ ಮತ್ತೊಂದು ಅನುಕೂಲವೆಂದರೆ ಹಣವನ್ನು ಎಲ್ಲೆಂದರಲ್ಲಿ ವರ್ಗಾವಣೆ ಮಾಡಬಹುದು. ಡೆಬಿಟ್ ಹಾಗೂ ಕ್ರೆಡಿಟ್ ಕಾರ್ಡ್‌ಗಳ ಸಹಾಯದಿಂದ ಸೇವಾ ಸರಕುಗಳನ್ನು ಪಡೆಯಬಹುದು. ಇತ್ತೀಚಿನ ದಿನಗಳಲ್ಲಿ ಜೀವನಕ್ಕೆ ಅವಶ್ಯವಿರುವ ವಸ್ತುಗಳ ಬೆಲೆ ಹೆಚ್ಚುತ್ತಿದೆ. ಇದರಿಂದ ಹಣದುಬ್ಬರ ಏರುತ್ತಿದೆ. ಬ್ಯಾಂಕ್ ಖಾತೆಯಲ್ಲಿ ಹಣವನ್ನು ಇಡುವುದರಿಂದ ಸ್ವಲ್ಪ ಬಡ್ಡಿಯೂ ಸಿಗುತ್ತದೆ, ಇದರಿಂದ ಸ್ವಲ್ಪ ಪ್ರಮಾಣವರೆಗೆ ಹಣದುಬ್ಬರದಿಂದ ನಮ್ಮನ್ನು ರಕ್ಷಿಸುತ್ತದೆ. ಈ ಕಾರಣಗಳಿಗಾಗಿ ಬ್ಯಾಂಕ್ ಖಾತೆ ಅವಶ್ಯವಾಗಿದೆ. ಈ ಮುಂದುವರಿದ ಕಾಲದಲ್ಲಿ ಅನೇಕರು ಬೆರಳು ತುದಿಯಲ್ಲಿ ಬ್ಯಾಂಕಿಂಗ್ ವ್ಯವಹಾರವನ್ನು ಮಾಡುತ್ತಿದ್ದಾರೆ.

ಹೊಂದಿವೆ. ಎರಡನೆ ಸ್ಥಾನದಲ್ಲಿರುವುದು ದಕ್ಷಿಣ ಕನ್ನಡ. ಇದು ಒಟ್ಟು ಕುಟುಂಬಗಳ, ಶೇ. ೮೭ರಷ್ಟು ಕುಟುಂಬಗಳಲ್ಲಿ ಬ್ಯಾಂಕ್ ಸೌಲಭ್ಯ ಹೊಂದಿರುವ ಜಿಲ್ಲೆಯಾಗಿದೆ. ಜಿಲ್ಲೆಯ ಒಟ್ಟು ಗ್ರಾಮೀಣ ಹಾಗೂ ನಗರ ಪ್ರದೇಶದ ಕುಟುಂಬಗಳಲ್ಲಿ ಪ್ರ.ಶ. ೮೪ ಮತ್ತು ಪ್ರ.ಶ. ೮೯ರಷ್ಟು ಬ್ಯಾಂಕಿಂಗ್ ಸೌಲಭ್ಯ ಹೊಂದಿವೆ. ಉತ್ತರ ಕನ್ನಡ ಮೂರನೆಯ ಸ್ಥಾನದಲ್ಲಿರುವ ಜಿಲ್ಲೆ. ಇದು ಕೂಡ ಒಟ್ಟು ಕುಟುಂಬಗಳಲ್ಲಿನ ಶೇ. ೭೯ರಷ್ಟು ಬ್ಯಾಂಕಿಂಗ್ ಸೌಲಭ್ಯ ಹೊಂದಿವೆ, ಅದೇ ರೀತಿ ಒಟ್ಟು ಗ್ರಾಮೀಣ ಭಾಗದಲ್ಲಿ ಶೇ. ೭೮ರಷ್ಟು ಹಾಗೂ ನಗರ ಪ್ರದೇಶಗಳಲ್ಲಿ ಶೇ. ೮೦ರಷ್ಟು ಮನೆಗಳು ಈ ಸೌಲಭ್ಯವನ್ನು ಹೊಂದಿವೆ ಎಂದು ಕೋಷ್ಟಕದಿಂದ ತಿಳಿಯುತ್ತದೆ. ಇನ್ನು ಅತೀ ಕಡಿಮೆ ಕುಟುಂಬಗಳಲ್ಲಿ ಬ್ಯಾಂಕ್ ಖಾತೆಗಳನ್ನು ಹೊಂದಿರುವ ಜಿಲ್ಲೆಗಳ ಮುಂಚೂಣಿಯಲ್ಲಿರುವ ಜಿಲ್ಲೆ ಚಾಮರಾಜನಗರ. ಈ ಜಿಲ್ಲೆಯ ಒಟ್ಟು ಕುಟುಂಬಗಳಲ್ಲಿ ಶೇ. ೬೫ರಷ್ಟು ಕುಟುಂಬಗಳು ಬ್ಯಾಂಕಿಂಗ್ ಸೌಲಭ್ಯ ಹೊಂದಬೇಕಾಗಿದೆ. ಈ ಭಾಗದಲ್ಲಿ ಒಟ್ಟು ಜಿಲ್ಲೆಯ ಗ್ರಾಮೀಣ ಹಾಗೂ ನಗರ ಪ್ರದೇಶದ ಕುಟುಂಬಗಳಲ್ಲಿ ಕೇವಲ ಶೇ. ೩೪ ಹಾಗೂ ಶೇ. ೩೮ರಷ್ಟು ಕುಟುಂಬಗಳು ಬ್ಯಾಂಕ್ ಖಾತೆಗಳನ್ನು ಹೊಂದಿವೆ. ಇನ್ನು ಕೊನೆಯಿಂದ ಎರಡನೇ ಸ್ಥಾನದಲ್ಲಿ ರಾಮನಗರ ಜಿಲ್ಲೆ, ಈ ಜಿಲ್ಲೆಯಲ್ಲಿ ಶೇ. ೩೯ರಷ್ಟು ಮನೆಗಳಲ್ಲಿ ಹಾಗೂ ಜಿಲ್ಲೆಯ ಒಟ್ಟು ಗ್ರಾಮೀಣ ಮತ್ತು ನಗರ ಪ್ರದೇಶದ ಕುಟುಂಬಗಳಲ್ಲಿ ಕ್ರಮವಾಗಿ ಶೇ. ೩೭ ಮತ್ತು ಶೇ. ೪೪ರಷ್ಟು ಕುಟುಂಬಗಳು ಬ್ಯಾಂಕ್ ಸೌಲಭ್ಯ ಹೊಂದಿವೆ. ಅದೇ ರೀತಿ ಯಾದಗಿರಿ ಜಿಲ್ಲೆ ಶೇ. ೩೯ರಷ್ಟು ಬ್ಯಾಂಕಿಂಗ್ ಸೌಲಭ್ಯ ಹೊಂದಿದ್ದು, ಇಲ್ಲಿಯೂ ಸಹ ನಗರದಲ್ಲಿ ಶೇ. ೪೫ ಮತ್ತು ಗ್ರಾಮೀಣದಲ್ಲಿ ಶೇ. ೩೮ರಷ್ಟು ಕುಟುಂಬಗಳು ಈ ಸೌಲಭ್ಯ ಹೊಂದಿವೆ ಎಂದು ಸಮೀಕ್ಷೆಯಿಂದ ತಿಳಿದುಬರುತ್ತದೆ. ಒಟ್ಟಾರೆಯಾಗಿ, ಕರ್ನಾಟಕದಲ್ಲಿ ನಗರ ಪ್ರದೇಶಗಳಿಗಿಂತ ಗ್ರಾಮೀಣ ಪ್ರದೇಶದಲ್ಲಿರುವ ಕುಟುಂಬಗಳು ಕೇವಲ ಶೇ. ೫ರಷ್ಟು ಮಾತ್ರ ಹಿಂದುಳಿದಿವೆ ಎಂದು ಸಮೀಕ್ಷೆಯಿಂದ ತಿಳಿಯುತ್ತದೆ. ಇಲ್ಲಿ ವಿಶೇಷವೆಂದರೆ ಉತ್ತರ ಕರ್ನಾಟಕದ ಹೆಚ್ಚು ಜಿಲ್ಲೆಗಳಾದ ಬೆಳಗಾವಿ (ಶೇ. ೭೨), ಬಾಗಲಕೋಟ ಹಾಗೂ ಬಿಜಾಪುರ (ಶೇ. ೬೬), ಗದಗ (ಶೇ. ೭೯), ಧಾರವಾಡ (ಶೇ. ೮೦) ಮತ್ತು ಹಾವೇರಿ (ಶೇ. ೬೭) ಜಿಲ್ಲೆಗಳಲ್ಲಿ ನಗರ ಪ್ರದೇಶಕ್ಕಿಂತ ಗ್ರಾಮೀಣ ಭಾಗದ ಹೆಚ್ಚು ಕುಟುಂಬಗಳಲ್ಲಿ ಬ್ಯಾಂಕ್ ಖಾತೆ ಹೊಂದಿರುವ ಜಿಲ್ಲೆಗಳಾಗಿವೆ. ಇನ್ನು ಪ್ರತಿ ಜಿಲ್ಲೆಯ ಗ್ರಾಮೀಣ ಕುಟುಂಬಗಳಲ್ಲಿ ನೋಡುವುದಾದರೆ, ಉಡುಪಿ (ಶೇ. ೯೩) ಮುಂಚೂಣಿಯಲ್ಲಿದೆ. ನಂತರ ದಕ್ಷಿಣ ಕನ್ನಡ (ಶೇ. ೮೪) ಹಾಗೂ ಮೂರನೆ ಸ್ಥಾನದಲ್ಲಿ ಧಾರವಾಡ (ಶೇ. ೮೦)ಯ ಜಿಲ್ಲೆಗೆ ಸಲ್ಲುತ್ತದೆ. ಅದೇರೀತಿ ಎಲ್ಲ ಜಿಲ್ಲೆಗಳ, ನಗರದ ಕುಟುಂಬಗಳಲ್ಲಿನ ಮೊದಲೆರಡು ಸ್ಥಾನ ಉಡುಪಿ (ಶೇ. ೯೫) ಹಾಗೂ ದಕ್ಷಿಣ ಕನ್ನಡ (ಶೇ. ೮೯)ಕ್ಕೆ ಸಲ್ಲುತ್ತದೆ, ನಂತರದ ಸ್ಥಾನ ಕೊಡಗು (ಶೇ. ೮೧) ಹೊಂದಿದೆ.






ಇತ್ತೀಚಿನ ಬೆಳವಣಿಗೆಯಲ್ಲಿ ಗ್ರಾಮೀಣ ಭಾಗಗಳಲ್ಲಿ ಎಲ್ಲಾ ಬ್ಯಾಂಕುಗಳ ಶಾಖೆಗಳು ಪ್ರಾರಂಭವಾಗುತ್ತಿವೆ. ಇದರಿಂದ ಆ ಭಾಗದ ಜನರಿಗೆ ಬಹಳಷ್ಟು ಅನುಕೂಲಗಳಾಗಿವೆ. ಅನೇಕ ಬ್ಯಾಂಕ್‌ಗಳು ಗ್ರಾಮೀಣ ಭಾಗದ ಜನರಲ್ಲಿ ಬ್ಯಾಂಕ್‌ಗಳ ಮಹತ್ವವನ್ನು ತಿಳಿಸಲು ಯತ್ನಿಸುತ್ತಿವೆ. ಉದಾಹರಣೆಗೆ, ರೈತರಿಗೆ ಕೃಷಿ ಸಾಲ, ಗೃಹ ಸಾಲ, ಬೆಳೆ ವಿಮೆ ಮುಂತಾದವುಗಳಿಂದ ಆ ಭಾಗದ ಜನರಲ್ಲಿ ಅರಿವು ಹೆಚ್ಚಾಗಿದೆ. ನಗರ ಪ್ರದೇಶಗಳಿಗೆ ಹೋಲಿಸಿದರೆ ಗ್ರಾಮೀಣ ಭಾಗದಲ್ಲಿ ಹೆಚ್ಚು ವ್ಯತ್ಯಾಸವೇನೂ ಇಲ್ಲ. ಮತ್ತೊಂದು ಮಹತ್ವದ ವಿಷಯವೆಂದರೆ, ಭಾರತ ಸರ್ಕಾರದ 'ಮಹಾತ್ಮಾ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ : ಕಾಯಿದೆ–೨೦೦೫ (ನರೇಗಾ)' ಅಡಿಯಲ್ಲಿ ಬರುವ ಕಾರ್ಮಿಕರ ಸಂಖ್ಯೆ ಹೆಚ್ಚು ಹಾಗೂ ಇವರಿಗೆ ಮೊದಲು ವೇತನ ನಗದು ರೂಪದಲ್ಲಿ ಸಂದಾಯವಾಗುತ್ತಿತ್ತು. ಇದರಿಂದ ಕಾರ್ಮಿಕರಿಗೆ ಸರಿಯಾಗಿ ವೇತನ ಸಂದಾಯವಾಗುತ್ತಿರಲಿಲ್ಲ ಎಂಬ ಆರೋಪಗಳು ಕೂಡ ಕೇಳಿಬಂದಿದ್ದವು. ಇದನ್ನು ತಡೆಗಟ್ಟಲು ಅವರ ವೇತನವನ್ನು ನೇರವಾಗಿ ಅವರ ಬ್ಯಾಂಕ್ ಖಾತೆಗೆ ವರ್ಗಾವಣೆ ಮಾಡಲು ಪ್ರಾರಂಭಿಸಲಾಯಿತು. ಈ ಯೋಜನೆ ಗ್ರಾಮೀಣ ಬ್ಯಾಂಕ್ ಖಾತೆಗಳು ಹೆಚ್ಚಾಗಿರುವುದಕ್ಕೆ ಮುಖ್ಯ ಕಾರಣ ಎಂದು ವಿಶ್ಲೇಷಿಸಬಹುದು.

**ಪ್ರಾದೇಶಿಕವಾರು ಬ್ಯಾಂಕ್ ಖಾತೆ ಹೊಂದಿರುವ ಕುಟುಂಬಗಳು**

ಕರ್ನಾಟಕದಲ್ಲಿನ ಒಟ್ಟು ಮನೆಗಳಲ್ಲಿ ಪ್ರ.ಶ. ೬೧.೧೧ರಷ್ಟು ಕುಟುಂಬಗಳು ಬ್ಯಾಂಕಿಂಗ್ ಸೌಲಭ್ಯ ಹೊಂದಿವೆ. ಕರ್ನಾಟಕದಲ್ಲಿ ನಾಲ್ಕು ಪ್ರಾದೇಶಿಕ ವಿಭಾಗಗಳಾಗಿ ವಿಭಜಿಸಲಾಗಿದೆ. ಅವುಗಳೆಂದರೆ ಬೆಳಗಾವಿ, ಗುಲ್ಬರ್ಗ, ಬೆಂಗಳೂರು ಹಾಗೂ ಮೈಸೂರು. ಇವುಗಳನ್ನು ಪ್ರಾದೇಶಿಕವಾಗಿ ನೋಡುವುದಾದರೆ, ಸರಾಸರಿ ಮೊದಲ ಸ್ಥಾನದಲ್ಲಿ ಬೆಳಗಾವಿ ವಿಭಾಗ (ಶೇ. ೬೮), ಎರಡನೆಯ ಸ್ಥಾನದಲ್ಲಿ ಮೈಸೂರು (ಶೇ. ೬೬), ನಂತರದ ಸ್ಥಾನದಲ್ಲಿ ಬೆಂಗಳೂರು (ಶೇ. ೫೩) ಹಾಗೂ ಗುಲ್ಬರ್ಗ (ಶೇ. ೫೦) ವಿಭಾಗಗಳು ಸ್ಥಾನ ಪಡೆದುಕೊಂಡಿವೆ. ಇಲ್ಲಿ ಪ್ರಾದೇಶಿಕವಾಗಿ ಅವಲೋಕಿಸಿದಾಗ ಬೆಂಗಳೂರು ಹಾಗೂ ಗುಲ್ಬರ್ಗ ವಿಭಾಗಕ್ಕೆ ಹೆಚ್ಚು ವ್ಯತ್ಯಾಸವಿಲ್ಲ. ವಿಭಾಗವಾರು ಗ್ರಾಮೀಣ ಭಾಗದಲ್ಲಿ ನೋಡುವುದಾದರೆ, ಬೆಳಗಾವಿ ವಿಭಾಗ ಒಟ್ಟು ಗ್ರಾಮೀಣ ಕುಟುಂಬಗಳಲ್ಲಿ ಹೆಚ್ಚು ಬ್ಯಾಂಕ್ ಖಾತೆ

ಹೊಂದಿ (ಶೇ. ೭೧) ಗ್ರಾಮೀಣ ಭಾಗ. ಅದೇ ರೀತಿ ಎರಡನೆ ಸ್ಥಾನದಲ್ಲಿ ಮೈಸೂರು ವಿಭಾಗದ ಗ್ರಾಮೀಣ ಪ್ರದೇಶ (ಶೇ. ೬೪) ಹೊಂದಿದೆ. ಗುಲ್ಬರ್ಗ ಹಾಗೂ ಬೆಂಗಳೂರಿನ ಗ್ರಾಮೀಣ ವಿಭಾಗಗಳಲ್ಲಿ ಹೆಚ್ಚು ಬ್ಯಾಂಕ್ ಸೌಲಭ್ಯ ಹೊಂದಬೇಕಾಗಿದೆ. ಎಲ್ಲ ವಿಭಾಗಗಳು ನೋಡಿದಾಗ, ಬೆಳಗಾವಿಯ ಒಟ್ಟು ಗ್ರಾಮೀಣ ಭಾಗ (ಶೇ. ೭೧) ಮತ್ತು ಬೆಳಗಾವಿ ಹಾಗೂ ಇತರೆ ಎಲ್ಲ ವಿಭಾಗದ ನಗರ ಪ್ರದೇಶಗಳಿಗಿಂತಲೂ ಹೆಚ್ಚು ಕುಟುಂಬಗಳಲ್ಲಿ ಬ್ಯಾಂಕ್ ಖಾತೆ ಹೊಂದಿವೆ. ವಿಭಾಗಾವಾರು ನಗರ ಪ್ರದೇಶದ ಕುಟುಂಬಗಳಲ್ಲಿ ಮೈಸೂರು ಅತೀ ಹೆಚ್ಚು ಎಂದರೆ ಶೇ. ೭೦ರಷ್ಟು ಕುಟುಂಬಗಳು ಬ್ಯಾಂಕ್ ಖಾತೆಗಳನ್ನು ಹೊಂದಿವೆ ಎಂದು ನಕ್ಷೆಯಿಂದ ತಿಳಿದುಬರುತ್ತದೆ.

**ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡ ಕುಟುಂಬಗಳ ವಿಶ್ಲೇಷಣೆ**

೨೦೧೧ರ ಜನಗಣತಿ ಪ್ರಕಾರ ದೇಶದ ಒಟ್ಟು ಪ.ಜಾತಿ ಹಾಗೂ ಪ.ಪಂಗಡದ ಕುಟುಂಬಗಳಲ್ಲಿ ಕ್ರಮವಾಗಿ ಶೇ. ೫೧ ಹಾಗೂ ಶೇ. ೪೫ರಷ್ಟು ಕುಟುಂಬಗಳು ಬ್ಯಾಂಕಿಂಗ್ ಸೌಲಭ್ಯ ಹೊಂದಿವೆ. ಕರ್ನಾಟಕ ರಾಜ್ಯದ ಒಟ್ಟು ಪ.ಜಾತಿ ಹಾಗೂ ಪ.ಪಂಗಡದ ಕುಟುಂಬಗಳಲ್ಲಿ ಕ್ರಮವಾಗಿ ಶೇ. ೪೭ರಷ್ಟು ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದ ಕುಟುಂಬಗಳು ಬ್ಯಾಂಕಿಂಗ್ ಸೌಲಭ್ಯ ಹೊಂದಿವೆ. ರಾಜ್ಯದ ಒಟ್ಟು ಗ್ರಾಮೀಣ ಭಾಗದ ಕುಟುಂಬಗಳಲ್ಲಿ ಪ.ಜಾತಿ ಹಾಗೂ ಪ.ಪಂಗಡದ ಕುಟುಂಬಗಳನ್ನು ಅವಲೋಕಿಸಿದಾಗ ಕ್ರಮವಾಗಿ ಶೇ. ೪೭ರಷ್ಟು ಕುಟುಂಬಗಳು ಹೊಂದಿವೆ. ನಗರ ಪ್ರದೇಶದಲ್ಲಿ ಪ.ಜಾತಿ ಶೇ. ೪೭ ಹಾಗೂ ಪ.ಪಂಗಡ ಶೇ. ೪೯ರಷ್ಟು ಬ್ಯಾಂಕ್ ಖಾತೆ ಸೌಲಭ್ಯವನ್ನು ಪಡೆದಿವೆ. ಹೆಚ್ಚು ಪರಿಶಿಷ್ಟ ಜಾತಿ ಕುಟುಂಬಗಳಲ್ಲಿ ಬ್ಯಾಂಕ್ ಸೌಲಭ್ಯ ಹೊಂದಿರುವ ಜಿಲ್ಲೆ ಉಡುಪಿ (೮೬.೭%) ಹಾಗೂ ಅತೀ ಕಡಿಮೆಯ ಜಿಲ್ಲೆ ಚಾಮರಾಜನಗರ (೩೨.೪%). ರಾಜ್ಯದ ಶೇ. ೫೦ರಷ್ಟು ಜಿಲ್ಲೆಗಳು, ರಾಜ್ಯದ ಪರಿಶಿಷ್ಟ ಜಾತಿಯ ಶೇಕಡಾವಾರುಗಿಂತ ಕಡಿಮೆ ಬ್ಯಾಂಕ್ ಸೌಲಭ್ಯ ಹೊಂದಿವೆ. ಹೆಚ್ಚು ಪರಿಶಿಷ್ಟ ಪಂಗಡ ಕುಟುಂಬಗಳಲ್ಲಿ ಬ್ಯಾಂಕಿಂಗ್ ಸೌಲಭ್ಯ ಹೊಂದಿರುವ ಜಿಲ್ಲೆಯೂ ಉಡುಪಿ (೮೯.೪%) ಹಾಗೂ ಅತೀ ಕಡಿಮೆ ಹೊಂದಿರುವ ಜಿಲ್ಲೆ ಕೊಡಗು (೩೦.೬%). ರಾಜ್ಯದಲ್ಲಿ ಶೇ. ೪೩ರಷ್ಟು ಜಿಲ್ಲೆಗಳು ಹೊಂದಿರುವ ರಾಜ್ಯದ ಪರಿಶಿಷ್ಟ ಪಂಗಡದ ಶೇಕಡಾವಾರುಗಿಂತ ಕಡಿಮೆ ಹೊಂದಿವೆ.

ಒಟ್ಟಾರೆಯಾಗಿ ರಾಜ್ಯದಲ್ಲಿ ಪ್ರ.ಶ. ೩೯ರಷ್ಟು ಕುಟುಂಬಗಳು ಇನ್ನೂ ಬ್ಯಾಂಕಿಂಗ್ ಸೌಲಭ್ಯ ಹೊಂದಬೇಕಾಗಿದೆ, ಅದರಲ್ಲೂ ಗ್ರಾಮೀಣ ಭಾಗದಲ್ಲಿ ಹೆಚ್ಚು ಆದ್ಯತೆ ನೀಡಬೇಕಾಗಿದೆ. ದೇಶದ ಒಟ್ಟು ಪ್ರ.ಶ. (೫೮.೬೯%)ಕ್ಕಿಂತ ರಾಜ್ಯದ ಹೆಚ್ಚು ಪ್ರ.ಶ. (೬೧.೧೧%) ಕುಟುಂಬಗಳು ಬ್ಯಾಂಕಿಂಗ್ ಸೌಲಭ್ಯ ಹೊಂದಿವೆ. ಪ.ಜಾತಿ ಹಾಗೂ ಪ.ಪಂಗಡಗಳ ಕುಟುಂಬಗಳಲ್ಲಿ ಸರಾಸರಿ ಅರ್ಧದಷ್ಟು ಮಾತ್ರ ಬ್ಯಾಂಕಿಂಗ್ ಸೌಲಭ್ಯ ಹೊಂದಿವೆ. ಇನ್ನು ವಿಭಾಗೀಯವಾರು ನೋಡಿದಾಗ ಗುಲ್ಬರ್ಗ ಮತ್ತು ಬೆಂಗಳೂರು ವಿಭಾಗಗಳು ಹೆಚ್ಚಿನ ಸೌಲಭ್ಯ ಹೊಂದಬೇಕಾಗಿದೆ. ಆಗಸ್ಟ್ ೨೦೧೪ರಲ್ಲಿ ಪ್ರಧಾನ ಮಂತ್ರಿ ಜನಧನ ಯೋಜನೆ (ಪಿ.ಎಮ್.ಜೆ.ಡಿ.ವೈ.)ಯನ್ನು ಪ್ರಾರಂಭಿಸುವುದಕ್ಕಿಂತ ಮುಂಚೆ ಕೇವಲ ೫೮% ಜನರು ತಮ್ಮ ಬ್ಯಾಂಕ್ ಖಾತೆ ಹೊಂದಿದ್ದರು. ಪಿ.ಎಮ್.ಜೆ.ಡಿ.ವೈ. ಪ್ರಾರಂಭವಾದ ನಂತರ ಒಟ್ಟು ಬ್ಯಾಂಕ್ ಖಾತೆಗಳ ಸಂಖ್ಯೆ ದೇಶದಲ್ಲಿ ೩೦ ಕೋಟಿಗಿಂತ ಹೆಚ್ಚಾಗಿದೆ. ೨೨ ಕೋಟಿಗೂ ಅಧಿಕ ಖಾತೆದಾರರಿಗೆ ರುಪೇ ಕಾರ್ಡ್‌ಗಳ ಸೌಲಭ್ಯವನ್ನು ನೀಡಲಾಗಿದೆ ಎಂದು ದೇಶದ ಹಣಕಾಸಿನ ಮಂತ್ರಿ ಅರುಣ್ ಜೇಟ್ಲಿಯವರು ಸೆಪ್ಟೆಂಬರ್ ೨೦೧೭ರಲ್ಲಿ ದೆಹಲಿಯ 'ಯುನೈಟೆಡ್ ನೇಷನ್ಸ್' ಆಯೋಜಿಸಿರುವ ಹಣಕಾಸು ಸಮ್ಮೇಳನದಲ್ಲಿ ವಿವರಿಸಿದ್ದಾರೆ. ನವೆಂಬರ್ ೨೦೧೮ರವರೆಗೆ ಪ್ರಧಾನ ಮಂತ್ರಿ ಜನಧನ ಯೋಜನೆ ಅಡಿಯಲ್ಲಿ ಕರ್ನಾಟಕದ ಗ್ರಾಮೀಣ/ಅರೆನಗರ ಭಾಗದಲ್ಲಿ ೬,೪೪೬,೭೮೧ ಹಾಗೂ ನಗರ/ಮೆಟ್ರೊ ಪ್ರದೇಶದಲ್ಲಿ ೫,೨೮೫,೮೪೩ ಬ್ಯಾಂಕ್ ಖಾತೆಗಳು ತೆರೆದಿವೆ ಹಾಗೂ ೯,೪೨೬,೨೬೮ ರುಪೇ ಕಾರ್ಡ್‌ಗಳನ್ನು ವಿತರಿಸಲಾಗಿದೆ. ಪ್ರಧಾನ ಮಂತ್ರಿ ಜನಧನ ಯೋಜನೆ ಅಡಿಯಲ್ಲಿ ೧೧,೬೪೫ ವಾರ್ಡ್‌ಗಳಿಂದ ಪ್ರ.ಶ. ೯೯.೭ರಷ್ಟು ಮನೆಗಳಿಗೆ ಬ್ಯಾಂಕಿಂಗ್ ಸೌಲಭ್ಯವನ್ನು ನೀಡಲಾಗಿದೆ. ಕೇರಳ ಹಾಗೂ ಗೋವಾ ರಾಜ್ಯಗಳು ಪ್ರತೀ ಕುಟುಂಬಕ್ಕೆ ಕನಿಷ್ಠ ಒಂದು ಬ್ಯಾಂಕ್ ಖಾತೆಯನ್ನು ಹೊಂದಿರುವ ಮೊದಲ ರಾಜ್ಯಗಳಾಗಿ ಹೊರಹೊಮ್ಮಿವೆ.

ಬ್ಯಾಂಕುಗಳು, ಬ್ಯಾಂಕ್ ಖಾತೆಗಳನ್ನು ತೆರೆಯಲು ಪ್ರೋತ್ಸಾಹಿಸುವುದರ ಜೊತೆಗೆ ಸಾಕಷ್ಟು ಭದ್ರತೆಯನ್ನೂ ಒದಗಿಸುತ್ತಿವೆ ಹಾಗೂ ನಗದು ರಹಿತ ವ್ಯವಹಾರವನ್ನು ಪ್ರೋತ್ಸಾಹಿಸುತ್ತಿವೆ. ಇಂದು ದೇಶಾದ್ಯಂತ ಹೆಚ್ಚು ಬ್ಯಾಂಕ್‌ಗಳು ರಾಷ್ಟ್ರೀಕರಣಗೊಂಡಿರುವುದರಿಂದ ಅವರಲ್ಲಿಯೇ ಗ್ರಾಹಕರಿಗೆ ಸೇವೆಯನ್ನು ಒದಗಿಸಲು ಪೈಪೋಟಿ ಏರ್ಪಟ್ಟಿದೆ. ನಗದುರಹಿತ ವ್ಯವಹಾರದಿಂದ ಬಿಲ್‌ಗಳನ್ನು ಪಾವತಿಸಬಹುದು ಹಾಗೂ ಆನ್‌ಲೈನ್ ಬ್ಯಾಂಕಿಂಗ್ ಮುಖಾಂತರ ನಮ್ಮ ವಹಿವಾಟುಗಳನ್ನು ನಾವು ವೀಕ್ಷಿಸಬಹುದು, ನಮ್ಮ ಖಾತೆಯಿಂದ ಮತ್ತೊಬ್ಬರ ಖಾತೆಗೆ ಹಣ ವರ್ಗಾಯಿಸಬಹುದು ಹಾಗೂ ಮೊಬೈಲ್ ಮೂಲಕ ಬ್ಯಾಂಕಿಂಗ್ ವ್ಯವಹಾರಗಳನ್ನು ಮಾಡಬಹುದು. ಇಷ್ಟೆಲ್ಲಾ ಅನುಕೂಲ ಇರುವುದರಿಂದ ಇಂದು ಪ್ರತಿಯೊಬ್ಬರೂ ಬ್ಯಾಂಕ್ ಖಾತೆಗಳನ್ನು ತೆರೆದು ನಗದುರಹಿತ ವ್ಯವಹಾರದತ್ತ ಹೆಚ್ಚು ಗಮನಹರಿಸಬೇಕಾಗಿದೆ. ನಗದುರಹಿತ ವ್ಯವಹಾರಕ್ಕೆ ಹೆಚ್ಚು ಒತ್ತು ನೀಡಬೇಕಾಗಿದೆ. ಶೂನ್ಯ ಹಣದಿಂದ ಖಾತೆಯನ್ನು ತೆರೆಯಲು ಬ್ಯಾಂಕ್‌ಗಳು ಅವಕಾಶ ಕಲ್ಪಿಸುತ್ತಿವೆ. ಇವೆಲ್ಲವುದರಿಂದ ಮುಂದೆ ನಡೆಯುವ ಜನಗಣತಿಯಲ್ಲಿ ಪ್ರತಿ ಕುಟುಂಬಗಳಲ್ಲಿ ಬ್ಯಾಂಕ್ ಖಾತೆ ಹೊಂದಿರುವವರ ಸಂಖ್ಯೆ ಪ್ರ.ಶ. ನೂರು ತಲುಪುವ ಸಂಶಯವೇ ಇಲ್ಲ.

**ಎಂ. ಎಸ್. ಕಂಪ್ಲಿ**
ಮನೆ ನಂ. ೨೪೨೬/ಎ೨೩
ಎಲ್‌ಐಸಿ ಆಫೀಸ್ ಹತ್ತಿರ, ಸೌಗಂಧಿಪುರ
ಸವದತ್ತಿ – ೫೯೧ ೨೨೬ ಬೆಳಗಾವಿ ಜಿಲ್ಲೆ

**ಕೋಷ್ಟಕ : ರಾಜ್ಯ ಹಾಗೂ ಜಿಲ್ಲೆಗಳ ಶೇಕಡಾವಾರು ಬ್ಯಾಂಕ್ ಖಾತೆಯ ವಿವರ**

| ಕ್ರ. ಸ. | ಜಿಲ್ಲೆ | ಗ್ರಾಮೀಣ | ನಗರ | ಒಟ್ಟು | ಕ್ರ. ಸ. | ಜಿಲ್ಲೆ | ಗ್ರಾಮೀಣ | ನಗರ | ಒಟ್ಟು |
|---|---|---|---|---|---|---|---|---|---|
| ೧. | ಕರ್ನಾಟಕ | ೫೯ | ೬೪ | ೬೧ | ೧೭. | ಚಿಕ್ಕಮಗಳೂರು | ೬೬ | ೬೬ | ೬೬ |
| ೨. | ಬೆಳಗಾವಿ | ೭೨ | ೬೭ | ೭೧ | ೧೮. | ತುಮಕೂರು | ೪೭ | ೫೭ | ೪೯ |
| ೩. | ಬಾಗಲಕೋಟೆ | ೬೬ | ೫೮ | ೬೩ | ೧೯. | ಬೆಂಗಳೂರು | ೫೧ | ೬೮ | ೬೭ |
| ೪. | ಬಿಜಾಪುರ | ೬೬ | ೬೧ | ೬೪ | ೨೦. | ಮಂಡ್ಯ | ೫೫ | ೫೭ | ೫೫ |
| ೫. | ಬೀದರ | ೪೭ | ೫೨ | ೪೯ | ೨೧. | ಹಾಸನ | ೭೪ | ೭೪ | ೭೪ |
| ೬. | ರಾಯಚೂರು | ೪೯ | ೫೬ | ೫೧ | ೨೨. | ದಕ್ಷಿಣ ಕನ್ನಡ | ೮೪ | ೮೯ | ೮೭ |
| ೭. | ಕೊಪ್ಪಳ | ೬೧ | ೬೨ | ೬೧ | ೨೩. | ಕೊಡಗು | ೬೭ | ೮೧ | ೬೯ |
| ೮. | ಗದಗ | ೭೯ | ೬೧ | ೭೩ | ೨೪. | ಮೈಸೂರು | ೪೧ | ೬೧ | ೫೦ |
| ೯. | ಧಾರವಾಡ | ೮೦ | ೬೬ | ೭೨ | ೨೫. | ಚಾಮರಾಜನಗರ | ೩೪ | ೩೮ | ೩೫ |
| ೧೦. | ಉತ್ತರ ಕನ್ನಡ | ೭೮ | ೮೦ | ೭೯ | ೨೬. | ಗುಲ್ಬರ್ಗ | ೫೦ | ೫೧ | ೫೧ |
| ೧೧. | ಹಾವೇರಿ | ೬೭ | ೫೭ | ೬೫ | ೨೭. | ಯಾದಗಿರಿ | ೩೮ | ೪೫ | ೩೯ |
| ೧೨. | ಬಳ್ಳಾರಿ | ೪೯ | ೫೧ | ೫೦ | ೨೮. | ಕೋಲಾರ | ೫೨ | ೪೨ | ೪೯ |
| ೧೩. | ಚಿತ್ರದುರ್ಗ | ೫೪ | ೫೪ | ೫೪ | ೨೯. | ಚಿಕ್ಕಬಳ್ಳಾಪುರ | ೫೫ | ೪೬ | ೫೩ |
| ೧೪. | ದಾವಣಗೆರೆ | ೪೯ | ೫೩ | ೫೧ | ೩೦. | ಬೆಂಗಳೂರು ಗ್ರಾಮೀಣ | ೪೮ | ೫೨ | ೪೯ |
| ೧೫. | ಶಿವಮೊಗ್ಗ | ೭೧ | ೬೫ | ೬೯ | | | | | |
| ೧೬. | ಉಡುಪಿ | ೯೩ | ೯೫ | ೯೪ | ೩೧. | ರಾಮನಗರ | ೩೭ | ೪೪ | ೩೯ |

# ಕರ್ನಾಟಕದ ಕಬ್ಬು ಬೆಳೆಗಾರರ ಹಾಗೂ ಸಕ್ಕರೆ ಕಾರ್ಖಾನೆ ಮಾಲೀಕರ ಸಂಘರ್ಷ- ವಿಶ್ಲೇಷಣೆ

**ಭಾ**ರತದ ದಕ್ಷಿಣ ಭಾಗದ ರಾಜ್ಯಗಳಲ್ಲಿ ಕರ್ನಾಟಕವು ಪ್ರಮುಖವಾಗಿದೆ. ಭಾರತದ ದೊಡ್ಡದಾದ ರಾಜ್ಯಗಳಲ್ಲಿ ಕರ್ನಾಟಕವು ಒಂದಾಗಿದೆ. ಕರ್ನಾಟಕ ರಾಜ್ಯವು ೧೯೧.೭೯ ಚ.ಕಿ.ಮೀ. ಭೂ ವಿಸ್ತೀರ್ಣ ಹೊಂದಿದ್ದು ಇದರಲ್ಲಿ ೫೨% ಕೃಷಿ ಭೂಮಿ ಲಭ್ಯವಿದೆ.

ಕರ್ನಾಟಕದ ಕೃಷಿಯಲ್ಲಿ ಕಬ್ಬಿನ ಬೆಳೆಗೆ ಸಾಮಾಜಿಕ ಮತ್ತು ಆರ್ಥಿಕ ಮಹತ್ವವಿದೆ. ಅನಾದಿಕಾಲದಿಂದಲೂ ಕರ್ನಾಟಕದಲ್ಲಿ ಕಬ್ಬನ್ನು ಬೆಳೆಯಲಾಗುತ್ತಿದೆ. ಕಬ್ಬಿನ ಬೆಳೆಯಲ್ಲಿ ಕರ್ನಾಟಕವು ದೇಶದಲ್ಲಿ ೩ನೇ ಸ್ಥಾನ ಪಡೆದಿದೆ. ಉತ್ತರ ಪ್ರದೇಶ ಹಾಗೂ ಮಹಾರಾಷ್ಟ್ರ ಕ್ರಮವಾಗಿ ಪ್ರಥಮ ಹಾಗೂ ದ್ವಿತೀಯ ಸ್ಥಾನ ಪಡೆದಿವೆ. ಇಲ್ಲಿ ಕಬ್ಬು ಬೆಳೆಯಲು ಉತ್ತಮವಾದ ಹವಾಮಾನ, ಫಲವತ್ತಾದ ಮಣ್ಣು, ನದಿ, ಅಣೆಕಟ್ಟು, ಕೊಳವೆಬಾವಿ ಇತ್ಯಾದಿ ವಿಪುಲವಾಗಿ ಲಭ್ಯವಿವೆ. ಕರ್ನಾಟಕದ ೧೬ ಜಿಲ್ಲೆಗಳಲ್ಲಿ ಕಬ್ಬು ಬೆಳೆಯಲಾಗುತ್ತದೆ. ಬೆಳಗಾವಿ ಜಿಲ್ಲೆಯಲ್ಲಿ ಅತಿ ಹೆಚ್ಚು ಪ್ರಮಾಣದ ಕಬ್ಬನ್ನು ಬೆಳೆಯುವುದರಿಂದ ಬೆಳಗಾವಿಯನ್ನು ಕರ್ನಾಟಕದ ಕಬ್ಬಿನ ಬಟ್ಟಲು ಎಂದು ಕರೆಯಲಾಗುತ್ತದೆ. ಕರ್ನಾಟಕವು ಸಕ್ಕರೆ ಉತ್ಪಾದನೆಗೆ ಪ್ರಸಿದ್ಧಿ ಪಡೆದಿದೆ. ಕರ್ನಾಟಕದಲ್ಲಿ ೧೯೩೩-೩೪ರಲ್ಲಿ ಪ್ರಪ್ರಥಮವಾಗಿ ಮಂಡ್ಯದಲ್ಲಿ ಸರ್ಕಾರಿ ಒಡೆತನದ ಸಕ್ಕರೆ ಕಾರ್ಖಾನೆ ಸ್ಥಾಪಿಸಲ್ಪಟ್ಟಿತು. ೧೯೫೮ರಲ್ಲಿ ಪ್ರಥಮ ಸಹಕಾರಿ ಸಕ್ಕರೆ ಕಾರ್ಖಾನೆಯು ಬಳ್ಳಾರಿ ಜಿಲ್ಲೆಯ ಕಂಪ್ಲಿಯಲ್ಲಿ ಸ್ಥಾಪಿಸಲ್ಪಟ್ಟಿತು.

**ಅಂಕಿ ಅಂಶಗಳು :** ಈ ಲೇಖನವು ಕರ್ನಾಟಕದ ಕಬ್ಬಿನ ಮತ್ತು ಸಕ್ಕರೆ ಉತ್ಪಾದನೆ ಮತ್ತು ಬೆಳೆಯನ್ನು ಒಳಗೊಂಡಿದೆ. (೧೯೭೦-೨೦೧೮) ಅಂಕಿ ಅಂಶಗಳನ್ನು ಕರ್ನಾಟಕದ ಅರ್ಥಶಾಸ್ತ್ರ ಮತ್ತು ಸಂಖ್ಯಾ ಶಾಸ್ತ್ರದ ನಿರ್ದೇಶಕರ ಪ್ರಕಟಣೆಯಿಂದ ಸಂಗ್ರಹಿಸಲಾಗಿದೆ.

**ಕರ್ನಾಟಕದ ಸಕ್ಕರೆ ಕಾರ್ಖಾನೆಗಳ ಅಂಕಿ ಅಂಶ ೨೦೦೦ವರೆಗೆ**

| ಕ್ರ.ಸಂ. | ಕಾರ್ಖಾನೆಗಳ ಒಡೆತನ | ಕಾರ್ಖಾನೆಗಳ ಸಂಖ್ಯೆ |
|---|---|---|
| ೧. | ಸರ್ಕಾರಿ ಕಾರ್ಖಾನೆಗಳು | ೦೨ |
| ೨. | ಸಹಕಾರಿ ಕಾರ್ಖಾನೆಗಳು | ೧೩ |
| ೩. | ಸಹಕಾರಿ ಕಾರ್ಖಾನೆಗಳು (ಅಡಮಾನ) | ೦೬ |
| ೪. | ಖಾಸಗಿ ಕಾರ್ಖಾನೆಗಳು | ೫೦ |
| | **ಒಟ್ಟು** | **೭೧** |

*೨೦೦೦-೨೦೦೧ರ ಸರಕಾರಿ ದಾಖಲೆಗಳ ಮೂಲದಿಂದ.*

ಸರ್ಕಾರವು ಕಬ್ಬಿನ ಬೆಲೆಗೆ ಅವಶ್ಯಕವಾದ ಮೂಲ ಸೌಕರ್ಯಗಳಾದ ನೀರು, ವಿದ್ಯುಚ್ಛಕ್ತಿ, ಉತ್ತಮ ರಸ್ತೆ ಮತ್ತು ಸಾರಿಗೆ ಇತ್ಯಾದಿಗಳನ್ನು ಅಭಿವೃದ್ಧಿಪಡಿಸಿದರೆ ಕಬ್ಬಿನ ಬೆಳೆಗೆ ಉತ್ತಮ ಭವಿಷ್ಯ ರೂಪಿಸುವ ವಿಪುಲ ಅವಕಾಶಗಳಿವೆ. ಬೆಳೆಗಾರನಿಗೆ ಅವಶ್ಯಕವಾದ ರಾಸಾಯನಿಕ ಗೊಬ್ಬರ, ಕ್ರಿಮಿನಾಶಕಗಳು ಸುಲಭ ಬೆಲೆಗೆ ಮತ್ತು ಸಕಾಲದಲ್ಲಿ ರೈತನಿಗೆ ದೊರೆಯುವಂತಾಗಬೇಕು. ರೈತನಿಗೆ ಆಧುನಿಕ ತಂತ್ರಜ್ಞಾನ ಹಾಗೂ ಮಾಹಿತಿ ದೊರೆಯುವಂತಾಗಬೇಕು. ಸರ್ಕಾರ ರೈತನಿಗೆ ಸುಲಭ ಬಡ್ಡಿ ದರದಲ್ಲಿ ಸಾಲ ಒದಗಿಸಬೇಕು. ಸಕ್ಕರೆ ಕೈಗಾರಿಕೆಗಳು ದಕ್ಷತೆಯಿಂದ ಕಾರ್ಯ ನಿರ್ವಹಿಸಿ ಬೆಳೆಗಾರನಿಗೆ ಸೂಕ್ತ ಸಮಯದಲ್ಲಿ ಹಣ ಪಾವತಿಸಿ ಮತ್ತು ಬಾಕಿ ಪಾವತಿಗಳನ್ನು ನೀಡಿದರೆ ಮಾತ್ರ ರೈತ ನೆಮ್ಮದಿಯನ್ನು ಕಂಡುಕೊಳ್ಳುತ್ತಾನೆ.

ಎ. ಬಿ. ಚಕ್ರೇಶ್ವರಿ

ಕರ್ನಾಟಕದಲ್ಲಿ ಕಾರ್ಖಾನೆಗಳ ಸಂಖ್ಯೆ ಹೆಚ್ಚಾಗುತ್ತಿದ್ದು ಪ್ರಸ್ತುತ ೧೧೮ ಕಾರ್ಖಾನೆಗಳು ಕಾರ್ಯ ನಿರ್ವಹಿಸುತ್ತಿವೆ.

ಬಹುತೇಕ ಖಾಸಗಿ ಕಾರ್ಖಾನೆಗಳು ಪ್ರಭಾವಿ ರಾಜಕೀಯ ನಾಯಕರ ಸಂಬಂಧಿಗಳು ಹಾಗೂ ಸ್ನೇಹಿತರ ಒಡೆತನದಲ್ಲಿವೆ. ಸಹಕಾರಿ ಸಕ್ಕರೆ ಕಾರ್ಖಾನೆಗಳ ಅತ್ಯಧಿಕ ಶೇರುಗಳನ್ನು ರಾಜಕೀಯ ಪ್ರಭಾವಿ ವ್ಯಕ್ತಿಗಳೇ ಹೊಂದಿದ್ದಾರೆ. ಸರಿ ಸುಮಾರು ೭ ಲಕ್ಷಕ್ಕೂ ಅಧಿಕ ಕಾರ್ಮಿಕರು ಈ ಕಾರ್ಖಾನೆಗಳಲ್ಲಿ ದುಡಿಯುತ್ತಿದ್ದಾರೆ. ಈ ನಿಟ್ಟಿನಲ್ಲಿ ಕಬ್ಬು ಬೆಳೆಗಾರನ ಹಾಗೂ ಸಕ್ಕರೆ ಕಾರ್ಖಾನೆಗಳ ವಾಸ್ತವ ಸ್ಥಿತಿಯನ್ನು ಅರಿಯಲು ಅಂಕಿ ಅಂಶಗಳು ಈ ಕೆಳಗಿನಂತಿವೆ.

**ಕೋಷ್ಟಕ ೧.೧**

| ವರ್ಷ | ವಿಸ್ತೀರ್ಣ | ಉತ್ಪಾದನೆ (ಲಕ್ಷ ಹೆಕ್ಟೇರ್) | ಇಳುವರಿ (ಲಕ್ಷ ಟನ್) ಹೆಕ್ಟೇರಿಗೆ/ಟನ್‌ಗಳಲ್ಲಿ |
|---|---|---|---|
| ೧೯೭೦-೧೯೭೧ | ೧.೦೪ | ೮೧.೦೬ | ೮೧ |
| ೧೯೮೦-೧೯೮೧ | ೧.೫೪ | ೧೨೧.೨೭ | ೮೩ |
| ೧೯೯೦-೧೯೯೧ | ೨.೭೨ | ೨೦೭.೫೦ | ೮೦ |
| ೨೦೦೦-೧೯೦೧ | ೩.೧೪ | ೨೯೨.೩೩ | ೯೮ |
| ೨೦೦೨-೨೦೧೦ | ೩.೫೧ | ೩೬೪.೦೦ | ೧೦೯ |

*ಮೂಲ : ಆರ್ಥಿಕ, ಸಾಂಖ್ಯಿಕ, ನಿರ್ದೇಶನಾಲಯ*

ಮೇಲಿನ ಕೋಷ್ಟಕದ ಪ್ರಕಾರ ೧೯೭೦-೧೯೭೧ರಿಂದ ೨೦೦೨-೨೦೧೦ರವರೆಗೆ ಕಬ್ಬು ಬೆಳೆಯುವ ವಿಸ್ತೀರ್ಣದಲ್ಲಿ ಹಾಗೂ ಉತ್ಪಾದನೆಯಲ್ಲಿ ಏರಿಕೆಯ ಗತಿಯನ್ನು ಗಮನಿಸಬಹುದು. ಇಳುವರಿಯು ೧೯೭೦ರಿಂದ ೧೯೮೧ರವರೆಗೆ ಏರಿಕೆಯಾಗಿದ್ದು ೧೯೯೦-೯೧ರಲ್ಲಿ ಇಳಿಕೆಯನ್ನು ಕಂಡು ನಂತರ ೨೦೦೦ದಿಂದ ೨೦೧೦ರವರೆಗೆ ಏರಿಕೆಯ ಗತಿಯಲ್ಲಿದೆ. ಕಬ್ಬು ಉತ್ಪಾದನೆಯ ಮತ್ತಷ್ಟು ಅಂಕಿ ಅಂಶವನ್ನು ಅವಲೋಕಿಸಿದಾಗ ಕಬ್ಬಿನ ಬೆಳೆಯ ವಿಸ್ತೀರ್ಣ ಕಡಿಮೆ ಯಾಗುತ್ತಿರುವುದು ಕಂಡುಬರುತ್ತದೆ.

**ಕರ್ನಾಟಕದ ಕಬ್ಬು ಬೆಳೆಯುವ ವಿಸ್ತೀರ್ಣ ಕೋಷ್ಟಕ ೧.೨**

| ವರ್ಷ | ವಿಸ್ತೀರ್ಣ (ಲಕ್ಷ ಹೆಕ್ಟೇರ್) |
|---|---|
| ೨೦೧೩-೧೪ | ೪.೨೦ |
| ೨೦೧೪-೧೫ | ೪.೮೦ |
| ೨೦೧೫-೧೬ | ೪.೫೦ |
| ೨೦೧೬-೧೭ | ೩.೯೭ |
| ೨೦೧೭-೧೮ | ೩.೭೦ |

ಕರ್ನಾಟಕದಲ್ಲಿ ಕಬ್ಬು ಬೆಳೆಯುವ ವಿಸ್ತೀರ್ಣವು ೨೦೧೩-೧೪ರಲ್ಲಿ ೪.೨೦ ಲಕ್ಷ ಹೆಕ್ಟೇರ್‌ನಿಂದ ೨೦೧೪-೧೫ರಲ್ಲಿ ೪.೮೦ ಲಕ್ಷ ಹೆಕ್ಟೇರ್‌ಗೆ ಏರಿಕೆಯಾಗಿದೆ. ೨೦೧೭-೧೮ರಲ್ಲಿ ಕಬ್ಬು ಬೆಳೆಯುವ ವಿಸ್ತೀರ್ಣವು ಮತ್ತಷ್ಟು ಕುಸಿದು ೩.೭೦ ಲಕ್ಷ ಹೆಕ್ಟೇರ್‌ನ್ನಷ್ಟಿದೆ.

**ಕರ್ನಾಟಕದ ಕಬ್ಬು ಉತ್ಪಾದನಾ ಅಂಕಿ ಅಂಶ ಕೋಷ್ಟಕ ೧.೩**

| ವರ್ಷ | ಉತ್ಪಾದನೆ ಲಕ್ಷ ಟನ್‌ಗಳಲ್ಲಿ |
|---|---|
| ೨೦೧೩-೧೪ | ೩೭೯.೦೫ |
| ೨೦೧೪-೧೫ | ೪೩೭.೭೬ |
| ೨೦೧೫-೧೬ | ೩೭೮.೩೪ |
| ೨೦೧೬-೧೭ | ೨೭೩.೭೮ |
| ೨೦೧೭-೧೮ | ೨೯೯.೦೨ |

ಸರ್ಕಾರವು ನಿಗದಿಪಡಿಸುವ ಕಬ್ಬಿನ ಬೆಲೆಯು ರೈತನ ಆದಾಯದ ಮೇಲೆ ನೇರವಾದ ಪ್ರಭಾವ ಬೀರುತ್ತದೆ. ತಾನು ಕಷ್ಟಪಟ್ಟು ಬೆಳೆದ ಬೆಳೆಗೆ ರೈತನು ಉತ್ತಮ ಬೆಲೆಯನ್ನು ನಿರೀಕ್ಷಿಸುವುದು ಸಹಜ. ಕೆಳಗೆ ಕಾಣಿಸಿರುವ ಕೋಷ್ಟಕವು ಕಬ್ಬಿನ ಬೆಲೆಯ ಬಗ್ಗೆ ತಿಳಿಯಪಡಿಸುತ್ತದೆ:

**ಕೋಷ್ಟಕ ೧.೫**

| ವರ್ಷ | ಕಬ್ಬಿನ ಬೆಲೆ : ಕ್ವಿಂಟಾಲ್‌ಗೆ ರೂ.ಗಳಲ್ಲಿ |
|---|---|
| ೨೦೧೦-೧೧ | ೧೮೦ |
| ೨೦೧೧-೧೨ | ೨೦೦ |
| ೨೦೧೨-೧೩ | ೨೪೦ |
| ೨೦೧೩-೧೪ | ೨೫೦ |
| ೨೦೧೪-೧೫ | ೨೨೦ |
| ೨೦೧೫-೧೬ | ೨೩೦ |
| ೨೦೧೬-೧೭ | ೨೭೫ |
| ೨೦೧೭-೧೮ | ೨೫೦ |
| ೨೦೧೮-೧೯ | ೨೫೫ |

ಕಬ್ಬಿನ ಬೆಲೆಯನ್ನು ಕೇಂದ್ರ ಸರಕಾರ ನಿಗದಿಪಡಿಸುವ ಬೆಲೆಗೆ SMP-Stationary Minimum Price ಎಂದು ಕರೆಯಲಾಗುವುದು. ರಾಜ್ಯ ಸರಕಾರ ನಿಗದಿಪಡಿಸುವ ಬೆಲೆಗೆ SAP-Stationary Advisary Price ಎಂತಲೂ ಕರೆಯಲಾಗುವುದು. ಸಾಮಾನ್ಯವಾಗಿ ರಾಜ್ಯ ಸರ್ಕಾರ ನಿಗದಿಪಡಿಸುವ ಬೆಲೆಯು ಕೇಂದ್ರ ಸರ್ಕಾರದ ಬೆಲೆಗಿಂತ ಅಧಿಕವಾಗಿರುತ್ತದೆ. ಕೋಷ್ಟಕ ೧.೫ರ ಪ್ರಕಾರ ಕಬ್ಬಿನ ಬೆಲೆಯಲ್ಲಿ ಸ್ಥಿರತೆ ಕಂಡುಬರುವುದಿಲ್ಲ. ಕಬ್ಬಿನ ಬೆಲೆಯಲ್ಲಿ ಏರಿಕೆ ಮತ್ತು ಇಳಿಕೆಯಾಗುತ್ತಿರುವುದು ಕಂಡುಬರುತ್ತದೆ. ಕಬ್ಬಿನ ಬೆಲೆಯ ಅಸ್ಥಿರತೆ ರೈತನಲ್ಲಿ ಅನಿಶ್ಚಿತತೆ ತಂದಿದೆ. ಉತ್ತಮ ಬೆಲೆ ಪಡೆಯಲು ರೈತ ನಿರಂತರ ಹೋರಾಟ ಮಾಡುತ್ತಲೇ ಇರುತ್ತಾನೆ.

೨೦೧೮-೧೯ರ ಅವಧಿಯಲ್ಲಿ ಕರ್ನಾಟಕ ಸರ್ಕಾರ ಬೆಳಗಾವಿ ಪ್ರದೇಶದ ಕಬ್ಬಿಗೆ ೧ ಟನ್‌ಗೆ ೨೯೩೯ ರೂ.ಗಳನ್ನು ನಿಗದಿಪಡಿಸಿದೆ. ಬೆಳಗಾವಿ ಪ್ರದೇಶದ ಕಬ್ಬು ಉತ್ತಮ ಗುಣಮಟ್ಟದ್ದಾಗಿರುವುದೇ ಇದಕ್ಕೆ ಕಾರಣ ಎಂಬ ಅಂಶವನ್ನು ಸ್ಪಷ್ಟಪಡಿಸಲಾಗಿದೆ. ಇತರ ಭಾಗದ ಕಬ್ಬಿಗೆ ೧ ಟನ್‌ಗೆ ೨೫೫೦ ರೂ.ಗಳನ್ನು ನಿಗದಿಪಡಿಸಲಾಗಿದೆ. ಕಬ್ಬು ಬೆಳೆಗಾರರು ೧ ಟನ್‌ಗೆ ೩೦೦೦ ರೂ.ಗಳನ್ನು ನಿಗದಿಪಡಿಸಬೇಕೆಂದು ಸರ್ಕಾರವನ್ನು ಒತ್ತಾಯಿಸುತ್ತಿದ್ದಾರೆ. ಕಬ್ಬು ಬೆಳೆಗಾರನ ಸ್ಥಿತಿ ಸಂಕಷ್ಟಗಳಿಂದ ಕೂಡಿದೆ. ಕಬ್ಬಿನ ಕೃಷಿ ಬೆಳೆಗಾರನಿಗೆ ಸವಾಲಾಗಿದೆ. ಕಬ್ಬು ಬೆಳೆಗಾರನ ಸಮಸ್ಯೆಗಳು ಹತ್ತು ಹಲವು:

೧) ಉತ್ತಮ ತಳಿಗಳ ಕೊರತೆ
೨) ಕಡಿಮೆ ಇಳುವರಿ
೩) ನೀರಿನ ಕೊರತೆ
೪) ರಾಸಾಯನಿಕ ಗೊಬ್ಬರ ಮತ್ತು ಔಷಧಗಳ ಕೊರತೆ
೫) ಏರಿಕೆಯಾಗುತ್ತಿರುವ ಉತ್ಪಾದನಾ ವೆಚ್ಚ
೬) ನೈಸರ್ಗಿಕ ಪ್ರಕೋಪಗಳು
೭) ಸಾರಿಗೆ ಸೌಲಭ್ಯಗಳ ಕೊರತೆ
೮) ಕಾರ್ಮಿಕರ ಕೊರತೆ ಮತ್ತು ವೇತನ ಹೆಚ್ಚಳ
೯) ಭೂಮಿಯ ಫಲವತ್ತತೆ ಇಳಿಮುಖ
೧೦) ತಂತ್ರಜ್ಞಾನ ಮತ್ತು ಮಾಹಿತಿಯ ಕೊರತೆ
೧೧) ಬೆಳೆಗೆ ರೋಗಗಳ ಸಮಸ್ಯೆ ಇತ್ಯಾದಿ.

ಇಷ್ಟೆಲ್ಲಾ ಸವಾಲುಗಳನ್ನು ಎದುರಿಸಿ ಕಬ್ಬನ್ನು ಬೆಳೆದರೆ ತನಗೆ ಸೂಕ್ತ ದರ ಸರ್ಕಾರ ನಿಗದಿ ಮಾಡುತ್ತಿಲ್ಲ ಎಂಬುದು ಬೆಳೆಗಾರನ ಅಳಲು. ಸಕ್ಕರೆ ಕಾರ್ಖಾನೆಗಳು ಬೆಳೆಗಾರನಿಗೆ ಹಣ ಪಾವತಿಸಲು ಸತಾಯಿಸುತ್ತಿರುವುದು ಬೆಳೆಗಾರರನ್ನು ಸಂಕಷ್ಟಕ್ಕೆ ಸಿಲುಕಿಸಿದೆ.

ಸಕ್ಕರೆ ಉತ್ಪಾದನೆಯಲ್ಲಿ ದೊರೆಯುವ ಕಬ್ಬಿನ ಸಿಪ್ಪೆಯ ತ್ಯಾಜ್ಯವು ಅತಿ ಅಮೂಲ್ಯವಾದ ಕಚ್ಚಾ ಸಾಮಗ್ರಿಯಾಗಿದ್ದು, ಬೆಳೆಗಾರ ತನಗೆ ಅದರಲ್ಲೂ ಪಾಲು

ದೊರೆಯಬೇಕೆಂದು ವಾದಿಸುತ್ತಿದ್ದಾನೆ. ಸಕ್ಕರೆ ಉತ್ಪಾದನೆಯಲ್ಲಿ ೩೦% ತ್ಯಾಜ್ಯ ದೊರೆಯುತ್ತದೆ. ಕಬ್ಬಿನ ತ್ಯಾಜ್ಯವನ್ನು ಸೂಕ್ತ ರೀತಿಯಲ್ಲಿ ಬಳಸಿಕೊಳ್ಳುವುದು ಬೆಳೆಗಾರನಿಗೂ ಹಾಗೂ ಕಾರ್ಖಾನೆಗಳಿಗೂ ಲಾಭ. ತ್ಯಾಜ್ಯದ ಬಳಕೆಯ ಕೈಗಾರಿಕೆಗಳು:

೧) ಹೊಳಪಿನ ಕಾಗದ
೨) ಆಫ್‌ಸೆಟ್ ಪ್ರಿಂಟಿಂಗ್
೩) ಕಾಕಂಬಿ
೪) ಮದ್ಯ ತಯಾರಿಕೆ
೫) ಮಂಜುಗಡ್ಡೆ
೬) ಎಣ್ಣೆ ಕಾರ್ಖಾನೆಗಳು
೭) ರಾಸಾಯನಿಕ ಕಾರ್ಖಾನೆಗಳು
೮) ಇಟ್ಟಿಗೆ ಕಾರ್ಖಾನೆಗಳು
೯) ಬಂದಕ ಅಥವಾ ಅಂಟು ವಸ್ತು
೧೦) ಸಿಮೆಂಟ್ ತಯಾರಿಕೆ
೧೧) ವಿದ್ಯುಚ್ಛಕ್ತಿ ತಯಾರಿಕೆ
೧೨) ಅಡುಗೆ ಎಣ್ಣೆ ಶುದ್ಧೀಕರಿಸಲು
೧೩) ಪಶು ಆಹಾರ ಇತ್ಯಾದಿ.

ಕರ್ನಾಟಕವು ಸಕ್ಕರೆ ಉತ್ಪಾದನೆಯಲ್ಲಿ ಮುಂಚೂಣಿಯಲ್ಲಿದ್ದು ದೇಶದಲ್ಲಿ ೩ನೆಯ ಸ್ಥಾನ ಪಡೆದಿದೆ. ಸಕ್ಕರೆ ಉತ್ಪಾದನಾ ಪ್ರಮಾಣದ ಗತಿಯನ್ನು ಅರಿಯಲು ಅಂಕಿ ಅಂಶಗಳು ಲಭ್ಯವಿರುತ್ತದೆ. ಬೆಳೆಗಾರ ಪೂರೈಸುವ ಕಬ್ಬಿನಲ್ಲಿ ೮೫% ಸಕ್ಕರೆ ಉತ್ಪಾದಿಸಲು ಹಾಗೂ ೧೫% ಬೆಲ್ಲ ಉತ್ಪಾದಿಸಲು ಬಳಕೆಯಾಗುತ್ತಿದೆ. ಸಕ್ಕರೆ ಕಾರ್ಖಾನೆಗಳಿಗೆ ಬೆಲೆ ನಿರ್ಧರಿಸಲು ಸರ್ಕಾರ ಅವಕಾಶ ನೀಡಿದೆ. ಸಕ್ಕರೆ ಬೆಲೆಯು ಕಾರ್ಖಾನೆಗಳ ಮೇಲೂ ಹಾಗೂ ಬೆಳೆಗಾರನ ಮೇಲೂ ನೇರ ಪ್ರಭಾವ ಬೀರುತ್ತದೆ. ಮುಂದಿನ ಕೋಷ್ಟಕ ಸಕ್ಕರೆಯ ಬೆಲೆಯ ಬಗ್ಗೆ ತಿಳಿಸುತ್ತದೆ:

**ಕೋಷ್ಟಕ ೧.೬ ಕರ್ನಾಟಕದ ಸಕ್ಕರೆ ಸಗಟು ಬೆಲೆ**

| ವರ್ಷ | ಸಕ್ಕರೆಯ ಬೆಲೆ ಕ್ವಿಂಟಾಲಿಗೆ ರೂ.ಗಳಲ್ಲಿ |
|---|---|
| ೨೦೦೦ | ೧೪೯೯ |
| ೨೦೦೫ | ೧೭೧೬ |
| ೨೦೧೦ | ೩೦೮೮ |
| ೨೦೧೧ | ೨೮೨೦ |
| ೨೦೧೨ | ೩೨೬೦ |
| ೨೦೧೩ | ೩೯೪೪ |
| ೨೦೧೭ | ೩೫೩೬ |

ಕೋಷ್ಟಕ ೧.೬ ಪ್ರಕಾರ ಸಗಟು ಬೆಲೆ ೨೦೦೦–೨೦೧೦ರವರೆಗೆ ಏರಿಕೆ ನಂತರ ಕುಸಿತ, ೨೦೧೨–೨೦೧೩ ಹಾಗೂ ೨೦೧೮ರಲ್ಲಿ ಸಕ್ಕರೆಯ ಬೆಲೆ ಏರಿಕೆಯನ್ನು ದಾಖಲಿಸಿದೆ.

ಕರ್ನಾಟಕದಲ್ಲಿ ಸಕ್ಕರೆಯ ಚಿಲ್ಲರೆ ಬೆಲೆಯು ಸ್ಥಿರವಾಗಿಲ್ಲ. ೨೦೧೩–೧೮ರವರೆಗೆ ಕ್ವಿಂಟಾಲಿಗೆ ರೂ. ೩೫೫೦ ಎಂದು ನಿರ್ಧರಿಸಲಾಗಿದೆ.

ಸರ್ಕಾರವು ಸಕ್ಕರೆ ಬೆಲೆ ನಿರ್ಧರಿಸಲು ಸಕ್ಕರೆ ಕಾರ್ಖಾನೆಗಳಿಗೆ ಅವಕಾಶ ನೀಡಿದರೂ ಸಹ ಪ್ರತಿ ತಿಂಗಳು ಸರ್ಕಾರವೇ ಸಕ್ಕರೆಯ ಪೂರೈಕೆಯನ್ನು ನಿಯಂತ್ರಿಸುತ್ತದೆ. ಸಕ್ಕರೆ ಬೆಲೆಯಲ್ಲಿ ಸ್ಥಿರತೆ ತರಲು ಈ ಕ್ರಮ ಅನುಸರಿಸುತ್ತದೆ. ಉತ್ಪಾದನೆಯಾದ ಒಟ್ಟು ಸಕ್ಕರೆಯ ಪ್ರಮಾಣದಲ್ಲಿ ೪೦% ಸಕ್ಕರೆಯನ್ನು ಸರ್ಕಾರವು ಪಡಿತರ ವ್ಯವಸ್ಥೆಗಾಗಿ ಪಡೆಯುತ್ತದೆ ಮತ್ತು ಇದಕ್ಕೆ ಕಡಿಮೆ ಬೆಲೆಯನ್ನು ನಿಗದಿಪಡಿಸುತ್ತದೆ.

ಸರಕಾರ ೪೦% ಪಡಿತರ ವ್ಯವಸ್ಥೆಗಾಗಿ ಪಡೆಯುತ್ತಿರುವುದು ತಮಗೆ ಪ್ರತಿಕೂಲ ಪರಿಣಾಮ ಬೀರುತ್ತಿದೆ ಎಂದೂ ಈ ಪ್ರಮಾಣವನ್ನು ಸರ್ಕಾರ ಕಡಿಮೆ ಮಾಡಬೇಕೆಂದೂ ಸಕ್ಕರೆ ಕಾರ್ಖಾನೆಗಳು ವಾದಿಸುತ್ತಿವೆ.

ಬಹುತೇಕ ಸಮಸ್ಯೆಗಳಿಗೆ ಸಕ್ಕರೆ ಕಾರ್ಖಾನೆಗಳ ಕಾರ್ಯವೈಖರಿಯೇ ಕಾರಣವಾಗಿದೆ.

ಸಕ್ಕರೆ ಕಾರ್ಖಾನೆಗಳಿಗೂ ಮತ್ತು ಬೆಳೆಗಾರನಿಗೂ ಸಂಘರ್ಷಕ್ಕೆ ಸಕ್ಕರೆ ಕಾರ್ಖಾನೆಗಳು ಬೆಳೆಗಾರನಿಗೆ ನೀಡಬೇಕಾದ ಹಣವನ್ನು ಪಾವತಿಸುತ್ತಿಲ್ಲ. ಇದಕ್ಕೆ ಸರ್ಕಾರ ಅನುಸರಿಸುತ್ತಿರುವ ವಿಳಂಬ ನೀತಿಯೇ ಕಾರಣ. ಸರ್ಕಾರವು ಕಾರ್ಖಾನೆಗಳ ಮಾಲೀಕರ ಪರ ಎಂಬುದು ಕಬ್ಬು ಬೆಳೆಗಾರನ ಬಲವಾದ ನಂಬಿಕೆಯಾಗಿದೆ. ೨೦೧೩ರಿಂದ ೨೦೧೬ರವರೆಗೆ ಸಕ್ಕರೆ ಕಾರ್ಖಾನೆಗಳು ರೈತನಿಗೆ ನೀಡಬೇಕಾಗಿದ್ದ ೨೩೦೦ ಕೋಟಿ ಉಳಿಸಿಕೊಂಡಿದ್ದವು. ೨೦೧೭–೧೮ರಲ್ಲಿ ೨೯೯ ಕೋಟಿಯಷ್ಟು ಹಣವನ್ನು ಬೆಳೆಗಾರನಿಗೆ ಪಾವತಿಸದೆ ಉಳಿಸಿಕೊಂಡಿವೆ. ಸರ್ಕಾರ ಸಕ್ಕರೆ ಕೈಗಾರಿಕೆಗಳ ಪರವಿದೆ ಎಂಬುದಕ್ಕೆ ಸರ್ಕಾರದ ಧೋರಣೆ ಪುಷ್ಟಿ ನೀಡುತ್ತದೆ. ೨೦೧೩–೧೪ರಲ್ಲಿ ಕರ್ನಾಟಕದ ಸಕ್ಕರೆ ಕಾರ್ಖಾನೆಗಳು ಸರ್ಕಾರಕ್ಕೆ ೧೭೨೫ ಕೋಟಿ ತೆರಿಗೆ ಬಾಕಿ ಉಳಿಸಿಕೊಂಡಿದ್ದವು. ೨೦೧೫–೧೬ರಲ್ಲಿ ೫೭೬.೦೧ ಕೋಟಿ ಬಾಕಿ ಉಳಿಸಿಕೊಂಡಿದ್ದವು. ೨೦೧೫–೧೬ ಹಾಗೂ ೨೦೧೬–೧೭ರಲ್ಲಿ ೧೨೦೦ ಕೋಟಿ ಮೊತ್ತದ 'ಖರೀದಿ ತೆರಿಗೆ'ಯ ವಿನಾಯಿತಿ ನೀಡಿದೆ.

ಸರ್ಕಾರವು ೨೦೧೬–೧೭ರಲ್ಲಿ ಕಬ್ಬು ಬೆಳೆಗಾರನಿಗೆ ಬಾಕಿ ಪಾವತಿಸಿದ ಕೈಗಾರಿಕೆಗಳಿಗೆ 'ಖರೀದಿ ತೆರಿಗೆ' ಯನ್ನು ಮನ್ನಾ ಮಾಡಿದೆ. ೨೦೧೫–೧೬ರಲ್ಲಿ ೯೨ ಕೈಗಾರಿಕೆಗಳಿಗೆ (ಮಾರಾಟ ತೆರಿಗೆ + ಮೌಲ್ಯವರ್ಧಕ ತೆರಿಗೆ + ಪ್ರವೇಶ ತೆರಿಗೆ) ೫೭೬.೦೧ ಕೋಟಿ ಹಾಗೂ ೨೦೧೬–೧೭ರಲ್ಲಿ ೬೩೫.೬೧ ಕೋಟಿ ತೆರಿಗೆ ವಿನಾಯಿತಿ ನೀಡಿದೆ. ಸರ್ಕಾರದಿಂದ ಈ ಎಲ್ಲಾ ವಿನಾಯಿತಿಗಳನ್ನು ಪಡೆದೂ ಸಹ ಕೈಗಾರಿಕೆಗಳು ಕಬ್ಬು ಬೆಳೆಗಾರನಿಗೆ ಹಣ ಪಾವತಿಸದೆ ಬಾಕಿ ಉಳಿಸಿಕೊಂಡಿರುವುದು ರೈತನ ಆಕ್ರೋಶಕ್ಕೆ ಕಾರಣವಾಗಿದೆ. ತನ್ನ ಹಣವನ್ನು ಪಡೆಯಲು ಪ್ರತಿಭಟನೆಯ ಹಾದಿ ಹಿಡಿದಿದ್ದಾನೆ.

ಕಬ್ಬು ಬೆಳೆಗೆ ಉತ್ತಮ ಭವಿಷ್ಯ ರೂಪಿಸುವ ವಿಪುಲ ಅವಕಾಶಗಳಿವೆ. ಸರ್ಕಾರ ಕಬ್ಬಿಗೆ ಸೂಕ್ತ ಬೆಲೆ ನಿಗದಿಪಡಿಸಿ ರೈತನ ಭವಿಷ್ಯವನ್ನು ಉಜ್ವಲಗೊಳಿಸಬಹುದು. ಸಕ್ಕರೆ ಕಾರ್ಖಾನೆಗಳ ಆಡಳಿತ ಪ್ರಾಮಾಣಿಕ ಹಾಗೂ ಪರಿಣಾಮಕಾರಿಯಾಗಿ ನಡೆದು ಸದೃಢಗೊಳ್ಳಬೇಕು. ಸರ್ಕಾರ ರೈತರ ಅಳಲನ್ನು ಆಲಿಸಿ ತಕ್ಷಣಕ್ಕೆ ಪರಿಹಾರ ಸೂತ್ರಗಳನ್ನು ಪ್ರಕಟಿಸಬೇಕು. ಸರ್ಕಾರವು ಕಬ್ಬಿನ ಬೆಳೆಗೆ ಅವಶ್ಯಕವಾದ ಮೂಲ ಸೌಕರ್ಯಗಳಾದ ನೀರು, ವಿದ್ಯುಚ್ಛಕ್ತಿ, ಉತ್ತಮ ರಸ್ತೆ ಮತ್ತು ಸಾರಿಗೆ ಇತ್ಯಾದಿಗಳನ್ನು ಅಭಿವೃದ್ಧಿಪಡಿಸಿದರೆ ಕಬ್ಬಿನ ಬೆಳೆಗೆ ಉತ್ತಮ ಭವಿಷ್ಯ ರೂಪಿಸುವ ವಿಪುಲ ಅವಕಾಶಗಳಿವೆ. ಬೆಳೆಗಾರನಿಗೆ ಅವಶ್ಯಕವಾದ ರಾಸಾಯನಿಕ ಗೊಬ್ಬರ, ಕ್ರಿಮಿನಾಶಕಗಳು ಸುಲಭ ಬೆಲೆಗೆ ಮತ್ತು ಸಕಾಲದಲ್ಲಿ ರೈತನಿಗೆ ದೊರೆಯುವಂತಾಗಬೇಕು. ರೈತನಿಗೆ ಆಧುನಿಕ ತಂತ್ರಜ್ಞಾನ ಹಾಗೂ ಮಾಹಿತಿ ದೊರೆಯುವಂತಾಗಬೇಕು. ಸರ್ಕಾರ ರೈತನಿಗೆ ಸುಲಭ ಬಡ್ಡಿ ದರದಲ್ಲಿ ಸಾಲ ಒದಗಿಸಬೇಕು. ಸಕ್ಕರೆ ಕೈಗಾರಿಕೆಗಳು ದಕ್ಷತೆಯಿಂದ ಕಾರ್ಯ ನಿರ್ವಹಿಸಿ ಬೆಳೆಗಾರನಿಗೆ ಸೂಕ್ತ ಸಮಯದಲ್ಲಿ ಹಣ ಪಾವತಿಸಿ ಮತ್ತು ಬಾಕಿ ಪಾವತಿಗಳನ್ನು ನೀಡಿದರೆ ಮಾತ್ರ ರೈತ ನೆಮ್ಮದಿಯನ್ನು ಕಂಡುಕೊಳ್ಳುತ್ತಾನೆ. ಕಬ್ಬಿನ ಸಿಪ್ಪೆಯ ತ್ಯಾಜ್ಯವನ್ನು ಸ್ವಲ್ಪವೂ ವ್ಯರ್ಥಗೊಳಿಸದೆ ಕಚ್ಚಾ ವಸ್ತುವಾಗಿ ಪೂರ್ಣ ಪ್ರಮಾಣದಲ್ಲಿ ಬಳಸಿದರೆ ಕಬ್ಬಿನ ಸಿಪ್ಪೆಯಿಂದಲೂ ಸಾಕಷ್ಟು ಆದಾಯ ಗಳಿಸುವ ನಿಚ್ಚಳ ಸಾಧ್ಯತೆಗಳಿವೆ. ರೈತನ ಅಳಲು ಮುಂದುವರಿದರೆ ಕಬ್ಬಿನ ಬೆಳೆಗೂ ನಂತರ ಸಕ್ಕರೆ ಕಾರ್ಖಾನೆಗಳ ಅಸ್ತಿತ್ವಕ್ಕೂ ಧಕ್ಕೆ ಬರುತ್ತದೆ. ಪ್ರಸ್ತುತ ಸಂಘರ್ಷಕ್ಕೆ ಅಂತಿಮ ತೆರೆ ಎಳೆದು ರೈತನ ಜೀವನದಲ್ಲಿ ನವೋಲ್ಲಾಸ ತುಂಬಿ ಸಕ್ಕರೆ ಕಾರ್ಖಾನೆಗಳು ನಿಜಾರ್ಥದಲ್ಲಿ ಸಿಹಿಯನ್ನು ಉತ್ಪಾದಿಸಿ ಸರ್ಕಾರಕ್ಕೂ ಮತ್ತು ಕಬ್ಬು ಬೆಳೆಗಾರನಿಗೂ ಸಿಹಿಯನ್ನೇ ಉಣಬಡಿಸಬಹುದು.

ಎ. ಬಿ. ಚಕ್ರೇಶ್ವರಿ
ಸಹಾಯಕ ಪ್ರಾಧ್ಯಾಪಕರು, ಅರ್ಥಶಾಸ್ತ್ರ ವಿಭಾಗ
ಸರಕಾರಿ ಪ್ರಥಮ ದರ್ಜೆ ಕಾಲೇಜು,
ವಿಟ್ಲ – ೫೭೪೨೪೩ ದ. ಕ. ಜಿಲ್ಲೆ

## ಬ್ರಿಟನ್ನಿಗೆ ಬ್ರೆಕ್ಸಿಟ್ ಕಗ್ಗಂಟು

**ಯೂ**ರೋಪಿಯನ್ ಯೂನಿಯನ್ನಿನಿಂದ ಹೊರ ಬೀಳುವುದು ಬ್ರಿಟಿಷ್ ಸರಕಾರಕ್ಕೆ ನುಂಗಲಾರದ ತುತ್ತಾಗಿದೆ. 'ಬ್ರೆಕ್ಸಿಟ್' ಎಂದೇ ಹೆಸರಾಗಿರುವ ಒಕ್ಕೂಟದಿಂದ ಹೊರಗೆ ಬರುವ



ನಿರ್ಧಾರ ಕನ್ಸರ್‌ವೇಟಿವ್ ಪಕ್ಷದ ಪ್ರಧಾನಿ ಥೆರೆಸಾ ಮೇಗೆ ಅಳಿವು ಉಳಿವಿನ ಪ್ರಶ್ನೆಯಾಗಿದೆ. ಮೊದಲಿಗೆ ಯೂರೋಪಿಯನ್ ಒಕ್ಕೂಟದಿಂದ ಹೊರಗೆ ಬರುವ ನಿರ್ಧಾರಕ್ಕೆ ಜನಮತಗಣನೆಯಾದಾಗ ಅಂಥ ದೊಡ್ಡ ಬಹುಮತವೇನೂ ಇರಲಿಲ್ಲ. ಕೇವಲ ಶೇ. ೧೮ರಷ್ಟು ಮಾತ್ರ ಅಂತರವಿತ್ತು ಅಷ್ಟೆ – ಕನ್ಸರ್‌ವೇಟಿವ್ ಪಕ್ಷದ ಒಳಗೆ ಉದ್ಭವಿಸಿರುವ ಭಿನ್ನಾಭಿಪ್ರಾಯಗಳೇ ಬಿಕ್ಕಟ್ಟಿಗೆ ಕಾರಣ ಎನ್ನಲಾಗಿದೆ. ಪ್ರಧಾನಿ ಥೆರೆಸಾ ಮೇ ಪ್ರಯಾಸದಿಂದ ಯೂರೋಪಿಯನ್ ಯೂನಿಯನ್ನಿನೊಂದಿಗೆ ಬ್ರೆಕ್ಸಿಟ್‌ಗೆ ಅಗತ್ಯವಾದ ಷರತ್ತುಗಳನ್ನು ರಾಜಕೀಯ ಪ್ರಕಟಣೆಯನ್ನು ಕುರಿತು ಅಂಗೀಕಾರ ಪಡೆದಿದ್ದಾರೆ. ೨೦೧೯ರ ಮಾರ್ಚ್ ೨೯ರೊಳಗೆ ಬ್ರಿಟನ್ ಯೂರೋಪಿಯನ್ ಯೂನಿಯನ್ ತ್ಯಜಿಸಬೇಕು. ಆದರೆ ಗೊಂದಲ ಮಾತ್ರ ಬಗೆಹರಿಯದೆ ಮುಂದುವರಿಯುತ್ತಿದೆ.

ಕಳೆದ ಶತಮಾನದ ಶೀತಯುದ್ಧದ ಕಾಲದಲ್ಲಿ ಅಸ್ತಿತ್ವಕ್ಕೆ ಬಂದ ಯೂರೋಪಿಯನ್ ಒಕ್ಕೂಟ ಒಂದಲ್ಲ ಒಂದು ವಿವಾದಗಳ ಸುಳಿಯಲ್ಲಿಯೇ ಬೆಳೆದಿದೆ. ಬ್ರಿಟನ್ ಯೂರೋಪಿಯನ್ ಒಕ್ಕೂಟದಲ್ಲಿ ಎಂದೂ ಪೂರ್ಣವಾಗಿ ವಿಲೀನಗೊಂಡಿರಲಿಲ್ಲ. ತನ್ನ ಪ್ರತ್ಯೇಕತೆಯನ್ನು ಉಳಿಸಿಕೊಂಡಿತ್ತು. ಮುಖ್ಯವಾಗಿ ಒಕ್ಕೂಟದ ನಾಣ್ಯ 'ಯೂರೋ' ಅಂಗೀಕರಿಸದೆ ಪೌಂಡನ್ನು ಹಾಗೇ ಉಳಿಸಿಕೊಂಡಿತ್ತು ಹಾಗೂ ವಿಶೇಷ ಸವಲತ್ತುಗಳನ್ನು ಪಡೆದಿತ್ತು. ನವೆಂಬರ್ ೨೪ರಂದು ಎಲ್ಲ ೨೭ ಒಕ್ಕೂಟದ ನಾಯಕರ ಸಮ್ಮತಿ ಪಡೆದ ನಂತರ ಥೆರೆಸಾ ಮೇ ಬ್ರಿಟಿಷ್ ಸಾರ್ವಜನಿಕರ ಬೆಂಬಲವನ್ನು ಕೋರಿ ಮನವಿ ಮಾಡಿಕೊಂಡಿದ್ದರು. ಒಕ್ಕೂಟದೊಂದಿಗೆ ಮಾಡಿಕೊಂಡಿರುವ ಒಪ್ಪಂದಕ್ಕೆ ಬ್ರಿಟಿಷ್ ಪಾರ್ಲಿಮೆಂಟಿನ ಸಮ್ಮತಿ ಅಗತ್ಯ. ಅದೇ ಈಗ ಕಗ್ಗಂಟಾಗಿ ಕುಳಿತಿದೆ. ಲೇಬರ್ ಪಾರ್ಟಿ ಮೊದಲಿನಿಂದ ಬ್ರೆಕ್ಸಿಟ್ ವಿರೋಧಿ, ಇತರ ಸಣ್ಣ ಪಕ್ಷಗಳೂ ಅದರೊಂದಿಗೆ ಕೈಜೋಡಿಸಿವೆ. ಸಚಿವ ಸಂಪುಟದಲ್ಲಿ, ಕನ್ಸರ್‌ವೇಟಿವ್ ಪಕ್ಷದ ಸದಸ್ಯರಲ್ಲಿಯೇ ಒಮ್ಮತ ಇಲ್ಲವಾಗಿದೆ. ಪಾರ್ಲಿಮೆಂಟಿನಲ್ಲಿ ಬ್ರೆಕ್ಸಿಟ್ ಒಪ್ಪಂದಕ್ಕೆ ಅಗತ್ಯವಾದ ಬಹುಮತ ಇಲ್ಲವಾದ್ದರಿಂದ ಪ್ರಧಾನಿ ಥೆರೆಸಾ ಮೇ ಮತದಾನವನ್ನು ಮುಂದಕ್ಕೆ ಹಾಕಿದ್ದಾರೆ. ಪ್ರಧಾನಿಗೆ ಬ್ರೆಕ್ಸಿಟ್ ಕಗ್ಗಂಟಿನ ಪ್ರಶ್ನೆಯಾಗಿದೆ. ಪಾರ್ಲಿಮೆಂಟ್ ಸದಸ್ಯರ ಮನವೊಲಿಕೆಗಾಗಿ ಮತದಾನವನ್ನು ಮುಂದಕ್ಕೆ ಹಾಕಲಾಗಿದೆ. ಈ ಮಧ್ಯೆ ಬ್ರೆಕ್ಸಿಟ್ ವಿರೋಧಿ ಆಂದೋಲನ ಕೂಡ ಪ್ರಾರಂಭವಾಗಿದೆ. ಇದರಲ್ಲಿ ಅಧಿಕವಾಗಿ ಯುವಜನರೇ ಇದ್ದಾರೆ. ಈ ಮಧ್ಯೆ ಪ್ರಧಾನಿ ವಿರುದ್ಧ ಅವಿಶ್ವಾಸ ನಿರ್ಣಯಕ್ಕೂ ಕೆಲವು ಪಾರ್ಲಿಮೆಂಟ್ ಸದಸ್ಯರು ಲೆಕ್ಕಹಾಕುತ್ತಿದ್ದಾರೆ. ರಾಜಕೀಯವಾಗಿ ಬ್ರೆಕ್ಸಿಟ್ ಪ್ರಧಾನಿಗೆ ದೊಡ್ಡ ಸವಾಲಾಗಿದೆ.

* * *

## ಚೀಣಾದೊಂದಿಗೆ ಮೈತ್ರಿ ಬೆಸೆಯುತ್ತಿರುವ ಪಾಕಿಸ್ತಾನ

**ಪಾ**ಕಿಸ್ತಾನದ ಮಾಜಿ ಪ್ರಧಾನಿ ನವಾಜ್ ಷರೀಫ್ ಭ್ರಷ್ಟಾಚಾರದ ಆರೋಪದ ಮೇಲೆ ಕಾರಾಗೃಹವಾಸಿಯಾಗಿದ್ದಾರೆ ಈಗ. ಭಾರತ–ಪಾಕ್ ಸಂಬಂಧ ಹಳಸಿಕೊಂಡದ್ದು ಅವರು



ಪ್ರಧಾನಿಯಾಗಿದ್ದಾಗ. ಅವರ ನಂತರ ಪ್ರಧಾನಿಯಾಗಿರುವ ಇಮ್ರಾನ್ ಖಾನ್ ಆಡಳಿತದಲ್ಲೂ ಪರಿಸ್ಥಿತಿ ಹಾಗೆಯೇ ಮುಂದುವರಿಯುತ್ತಿದೆ. ೨೦೧೮ರ ಪ್ರಾರಂಭದಲ್ಲಿ ಅಮೆರಿಕದ ಅಧ್ಯಕ್ಷ ಡೊನಾಲ್ಡ್ ಟ್ರಂಪ್ ಪಾಕಿಸ್ತಾನದ ಭದ್ರತೆಗಾಗಿ ನೀಡುತ್ತ ಬಂದಿದ್ದ ಕೋಟ್ಯಂತರ ಡಾಲರುಗಳ ನೆರವನ್ನು ಸ್ಥಗಿತಗೊಳಿಸಿದರು. ಪಾಕಿಸ್ತಾನ ಸರಕಾರ




ಭಯೋತ್ಪಾದನೆಯನ್ನು ಹತ್ತಿಕ್ಕಲು ಸೂಕ್ತಕ್ರಮ ಕೈಗೊಳ್ಳುತ್ತಿಲ್ಲ ಎಂಬುದೇ ಆರೋಪ. ಪಾಕಿಸ್ತಾನ ಯಾವತ್ತೂ ಅಮೆರಿಕದ ನಂಬಿಕಾರ್ಹ ಮಿತ್ರ. ಅಮೆರಿಕದ ನೆರವಿನಿಂದ ಪಾಕಿಸ್ತಾನದ ಮಿಲಿಟರಿ ಪ್ರಾಬಲ್ಯ ಅಧಿಕಗೊಂಡಿತು. ನಾಗರಿಕ ಸರಕಾರ ಇರಲಿ, ಸರ್ವಾಧಿಕಾರವೇ ಇರಲಿ ಅಮೆರಿಕದ ನೆರವು ಮಾತ್ರ ಹರಿಯುತ್ತಲೇ ಇತ್ತು. ಆಯಕಟ್ಟಿನ ಪ್ರದೇಶದಲ್ಲಿರುವ ಪಾಕಿಸ್ತಾನ ಭಾರತದ ಸ್ವತಂತ್ರ ವಿದೇಶೀ ನೀತಿಯ ಮೇಲೆ ಒತ್ತಡ ಹೇರಲು, ಚೀಣ ಮತ್ತು ರಷ್ಯಗಳ ಮೇಲೆ ನಿಗಾ ಇರಿಸಲು ಉಪಯುಕ್ತವಾದ ದೇಶವಾಗಿತ್ತು. ಶೀತಯುದ್ಧದ ಕಾಲದಲ್ಲಿ ಪಾಕಿಸ್ತಾನ ಅಮೆರಿಕಾಗೆ ಬಹುಮುಖ್ಯ ಹಾರುಮಣೆಯಾಗಿತ್ತು.

ಈಗ ಅದೆಲ್ಲ ತಲೆಕೆಳಗಾಗಿದೆ. ಅಮೆರಿಕದ ನೆರವಿಗಿಂತ ಮೇಲೆ ಆ ಜಾಗವನ್ನು ಈಗ ಚೀಣಾ ತುಂಬುತ್ತಿದೆ. ಈಚೆಗೆ ಪಾಕಿಸ್ತಾನ ದೊಡ್ಡ ಪ್ರಮಾಣದಲ್ಲಿ ಚೀಣಾದಿಂದ ವಿಮಾನಗಳನ್ನು, ಶಸ್ತ್ರಾಸ್ತ್ರಗಳನ್ನು ಪಡೆಯುತ್ತಿದೆ. ಚೀಣಾದ ಮಹದಾಕಾಂಕ್ಷೆಯ ನಾನಾ ದೇಶಗಳನ್ನು ಸಂಪರ್ಕಿಸುವ ಹೆದ್ದಾರಿ ಯೋಜನೆಗೆ ಪಾಕಿಸ್ತಾನ ಸಮ್ಮತಿ ನೀಡಿದಾಗಿನಿಂದ ಬೀಜಿಂಗ್ – ಇಸ್ಲಾಮಾಬಾದ್ ಬಾಂಧವ್ಯ ಬೆಸೆಯತೊಡಗಿದೆ. ಚೀಣಿ ಯೋಜನೆಯಂತೆ ಹೆದ್ದಾರಿಯು ಪಾಕ್ ಆಕ್ರಮಿತ ಕಾಶ್ಮೀರದ ಭಾಗದಲ್ಲಿ ಹಾದುಹೋಗುತ್ತದೆ. ಭಾರತ ಇದೇ ಕಾರಣಕ್ಕೆ ಚೀಣೀ ಹೆದ್ದಾರಿ ಯೋಜನೆಗೆ ವಿರೋಧವಿದೆ. ಈ ಹೆದ್ದಾರಿ ಮುಖ್ಯವಾಗಿ ಆರ್ಥಿಕಾಭಿವೃದ್ಧಿಯ ಯೋಜನೆ ಎಂಬುದಾಗಿ ಚೀಣೀ ಅಧಿಕಾರಿಗಳು ಹೇಳುತ್ತ ಬಂದಿದ್ದರೂ ಮಿಲಿಟರಿಗೂ ಪ್ರಯೋಜನವಾಗಲಿದೆ. ಈ ಯೋಜನೆ ಪ್ರಾರಂಭವಾದಾಗಿನಿಂದ ಚೀಣಾದಿಂದ ವಿವಿಧ ಆರ್ಥಿಕ ಯೋಜನೆಗಳ ಪ್ರಯೋಜನ ಪಡೆದುಕೊಂಡಿದೆ ಪಾಕಿಸ್ತಾನ. ಚೀಣಾ – ಪಾಕಿಸ್ತಾನ ಕಾರಿಡಾರ್ ಯೋಜನೆಗೆ ಚೀಣಾ ೬೨ ಕೋಟಿ ಡಾಲರುಗಳನ್ನು ವಿನಿಯೋಗಿಸಲಿದೆ. ಕಳೆದ ನವೆಂಬರ್ ತಿಂಗಳಲ್ಲಿ ಪಾಕ್ ಪ್ರಧಾನಿ ಇಮ್ರಾನ್ ಖಾನ್ ಬೀಜಿಂಗ್‌ಗೆ ಭೇಟಿ ನೀಡಿ ಚೀಣೀ ಅಧ್ಯಕ್ಷ ಕ್ಸಿಜನ್ ಪಿಂಗ್ ಜೊತೆ ಮಾತುಕತೆ ನಡೆಸಿದ್ದಾರೆ. ಭಾರತ ಅಮೆರಿಕದ

**ಸೀಯಾರ್ಕೆ**

ಜೊತೆ ಸಂಬಂಧಗಳನ್ನು ವೃದ್ಧಿಸುತ್ತಿದ್ದಂತೆ, ಚೀನಾ ಕಡೆಗೆ ಪಾಕಿಸ್ತಾನ ತಿರುಗಿದೆ.

* * *

## ಸಿರಿಯದಲ್ಲಿ ವಿಫಲಗೊಂಡ ಅಮೆರಿಕ ಸೇನೆ

ಮಧ್ಯ ಪ್ರಾಚ್ಯದಲ್ಲಿ ಆಡಳಿತಗಳನ್ನು ಬದಲಿಸಿ ಅಮೆರಿಕದ ಪರವಾಗಿರುವವರನ್ನು ಅಧಿಕಾರಕ್ಕೆ ತರುವ ಹುನ್ನಾರ ಅಮೆರಿಕದ ಉದ್ದೇಶ. ಬಹುತೇಕ ಎಲ್ಲ ದೇಶಗಳಲ್ಲೂ ಇದು ಸಫಲವಾದರೂ ಸಿರಿಯ ಮತ್ತು ಇರಾನ್‌ಗಳಲ್ಲಿ ಅದು ವಿಫಲಗೊಂಡಿದೆ. ಸಿರಿಯದಲ್ಲಿ ಅಸ್ಸಾಂ ಆಳ್ವಿಕೆಯನ್ನು ಅಂತ್ಯಗೊಳಿಸಲು ಅಮೆರಿಕ ತನ್ನ ಸೇನೆಯನ್ನು ರವಾನಿಸಿತ್ತು. ಈಗ ಡೊನಾಲ್ಡ್ ಟ್ರಂಪ್ ಅಮೆರಿಕದ ೨೦೦೦ ಸೈನಿಕರನ್ನು ವಾಪಸ್ಸು ಕರೆಸಿಕೊಳ್ಳುತ್ತಿದ್ದಾರೆ. ಇಸ್ಲಾಮಿಕ್ ಕ್ಯಾಲಿಫೇಟ್ ವಿರುದ್ಧವಾಗಿ ನಡೆಸಿದ ಕಾರ್ಯಾಚರಣೆ ಯಶಸ್ವಿಯಾಗಿದೆ ಎನ್ನುವುದು ಸಬೂಬು. ಲಿಬಿಯಾದ ಗಡಾಫಿಯನ್ನು ಪದಚ್ಯುತಗೊಳಿಸಿದ ನಂತರ ಅಮೆರಿಕ ಕೈಗೆತ್ತಿಕೊಂಡದ್ದು ಸಿರಿಯಾದ ಆಡಳಿತದ ಬದಲಾವಣೆ. ಅಂತರ್ಯುದ್ಧದಲ್ಲಿ ರಷ್ಯ ಸಿರಿಯಾದ ಅಸ್ಸಾದ್ ಬೆಂಬಲಕ್ಕೆ ನಿಂತರೆ, ಅಮೆರಿಕ ವಿರೋಧಿ ಬಣಕ್ಕೆ ಒತ್ತಾಸೆಯಾಗಿ ನಿಂತಿತು. ಈ ಮಧ್ಯೆ ಇರಾಕ್–ಸಿರಿಯ ಗಡಿಯಲ್ಲಿ ತಲೆ ಎತ್ತಿದ್ದು ಇಸ್ಲಾಮಿಕ್ ಕ್ಯಾಲಿಫೇಟ್ ಎಂಬ ಧರ್ಮಾಂಧ ಭಯೋತ್ಪಾದಕ ಸಂಘಟನೆ. ಗಡಿಪ್ರದೇಶದ ಹಲವು ಭಾಗಗಳನ್ನು ಆಕ್ರಮಿಸಿಕೊಂಡಿದ್ದ ಈ ಭಯೋತ್ಪಾದಕರ ಯೋಜನೆ ತಮ್ಮದೇ ರಾಜ್ಯ ಸ್ಥಾಪಿಸುವುದು. ಅಮೆರಿಕ ಇದನ್ನು ಉಪಯೋಗಿಸಿ ಕೊಂಡು ಭಯೋತ್ಪಾದನೆಯ ವಿರುದ್ಧ ಸಮರದ ನೆಪದಲ್ಲಿ ಸಿರಿಯಾದ ಆಡಳಿತವನ್ನು ಪದಚ್ಯುತ ಗೊಳಿಸುವುದನ್ನು ಗುರಿಯಾಗಿಸಿಕೊಂಡಿತ್ತು. ನೇರವಾಗಿ ಸೈನಿಕರು ಅಂತರ್ಯುದ್ಧದಲ್ಲಿ ಭಾಗಿಯಾಗದೇ ಇದ್ದರೂ ಅಮೆರಿಕ ನಡೆಸಿದ ಡ್ರೋನ್ ದಾಳಿ, ಬಾಂಬಿನ ಮಳೆಯಿಂದ ಸಹಸ್ರಾರು ಮಂದಿ ಸಿರಿಯದ ನಾಗರಿಕರು, ಮಕ್ಕಳು, ಮಹಿಳೆಯರು ಬಲಿಯಾದರು. ಹಲವು ಬಾರಿ ಈ ಬಾಂಬು ದಾಳಿ ಆಸ್ಪತ್ರೆಗಳು, ಶಾಲೆಗಳ ಮೇಲೆ ನಡೆದಿದೆ. ಸಾಕಷ್ಟು ಹಾನಿ ಉಂಟುಮಾಡಿರುವ ಅಮೆರಿಕದ ಸೇನೆ ಈಗ



ವಾಪಸ್ಸಾಗುತ್ತಿದೆ. ಅಧ್ಯಕ್ಷ ಟ್ರಂಪ್ ಸೇನಾ ಹಿಂಪಡೆಗೆ ಏನೇ ಸಮರ್ಥನೆ ನೀಡಿದರೂ ನಿಜಸ್ಥಿತಿ ಬೇರೆಯೇ ಆಗಿದೆ.

**ಸೀಯಾರ್ಕೆ**
“ಸೂರ್ಯ ರೆಸಿಡೆನ್ಸಿ”, ಫ್ಲಾಟ್–೧, # ೩೧೩೩, ೩ನೇ ಅಡ್ಡರಸ್ತೆ, ಗಿರಿನಗರ ೪ನೇ ಹಂತ, ಬೆಂಗಳೂರು–೫೬೦ ೦೮೫

## ಸಾದರ ಸ್ವೀಕಾರ

**ಕೇಳುವ ಕೌತುಕ** (ಮಾಧ್ಯಮಲೋಕದ ರಸನಿಮಿಷಗಳು)
*ಸಿ. ಯು. ಬೆಳ್ಳಕ್ಕಿ*
***ಪುಟ : ೨೦೦ ಬೆಲೆ : ರೂ. ೧೭೫***

**ಕಂಗಳ ಮುಂದಣ ಕತ್ತಲು** (ವಿಶ್ವಗ್ರಾಮದಲ್ಲಿ ವಿಶ್ವಮಾನವನಿಲ್ಲ) *ಡಾ॥ ಮೂಡ್ನಾಕೂಡು ಚಿನ್ನಸ್ವಾಮಿ*
***ಪುಟ : ೧೬೪ ಬೆಲೆ : ರೂ. ೧೫೦***

**ಹೊಸದಿಕ್ಕು** (ರಂಗಭೂಮಿ ಕುರಿತ ಲೇಖನಗಳು)
*ಎಸ್. ಮಾಲತಿ*
***ಪುಟ : ೧೩೬ ಬೆಲೆ : ರೂ. ೧೨೫***

**ಭಾರತ ಸಂವಿಧಾನ** (ಅರ್ಥ–ಅರಿವು–ಜಾಗೃತಿ)
*ಎಂ. ಅಬ್ದುಲ್ ರೆಹಮಾನ್ ಪಾಷ*
***ಪುಟ : ೬೪ ಬೆಲೆ : ರೂ. ೫೦***

**ಇಂಡಿರಾನ್ ಮತ್ತು ಇತರ ಕಥೆಗಳು**
*ಎಚ್. ಎಸ್. ಮಂಜುನಾಥ*
***ಪುಟ : ೧೦೪ ಬೆಲೆ : ರೂ. ೮೦***

**ವಿಮರ್ಶಾತ್ಮಕ ಬೋಧನೆಯ ಪ್ರಪಂಚ**
*ಡಾ॥ ಮಹಾಬಲೇಶ್ವರ ರಾವ್*
***ಪುಟ : ೫೬ ಬೆಲೆ : ರೂ. ೪೫***

**ಕನ್ನಡ ಪದಸಂಪತ್ತು** (ನವಕರ್ನಾಟಕ ಕನ್ನಡ ಕಲಿಕೆ)
*ಟಿ. ಎಸ್. ಗೋಪಾಲ್*
***ಪುಟ : ೫೬ ಬೆಲೆ : ರೂ. ೩೫***

**ಮಹಾತ್ಮ ಗಾಂಧಿ ಕೊಲೆ – ಹಿನ್ನೆಲೆ**
*ಮರಾಠಿ ಮೂಲ : ಆನಂದ ಮೆಣಸೆ*
*ಕನ್ನಡಕ್ಕೆ : ಚಂದ್ರಕಾಂತ ಪೋಕಳೆ*
***ಪುಟ : ೪೦ ಬೆಲೆ : ರೂ. ೩೫***

**ಕೀಳರಿಮೆಯನ್ನು ಮೆಟ್ಟಿ ನಿಲ್ಲುವುದು ಹೇಗೆ?**
*ಡಾ॥ ಮಹಾಬಲೇಶ್ವರ ರಾವ್*
***ಪುಟ : ೪೮ ಬೆಲೆ : ರೂ. ೪೦***

*ಮೇಲಿನ ಒಂಬತ್ತು ಪುಸ್ತಕಗಳ ಪ್ರಕಾಶಕರು*
**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧.

**ಹಿಂದುತ್ವ ಮತ್ತು ದಲಿತರು** (ಕೋಮುವಾದಿ ರಾಜಕಾರಣ: ಒಂದು ತಾತ್ತ್ವಿಕ ಪರಾಮರ್ಶೆ)
*ಸಂಪಾದಕರು : ಆನಂದ್ ತೇಲ್‌ತುಂಬ್ಡೆ*
*ಅನುವಾದ : ಪ್ರೊ॥ ಬಿ. ಗಂಗಾಧರಮೂರ್ತಿ*
***ಪುಟ : xxviii+೨೨೦ ಬೆಲೆ : ರೂ. ೧೬೦***

**ಆಕಾಶದೇವರು** (ವಿಲೋಮಕತೆ)
*ತೆಲುಗು ಮೂಲ : ನಗ್ನಮುನಿ*
*ಕನ್ನಡಕ್ಕೆ : ಬಿ. ಸುಜ್ಞಾನಮೂರ್ತಿ*
***ಪುಟ : xvi+೭೪ ಬೆಲೆ : ರೂ. ೮೦***

**ಅಮೆರಿಕನಿಜಂ** (ರಾಜಕೀಯ ತತ್ವಶಾಸ್ತ್ರ)
*ತೆಲುಗು ಮೂಲ : ರಾಣಿ ಶಿವಶಂಕರಶರ್ಮ*
*ಕನ್ನಡಕ್ಕೆ : ಬಿ. ಸುಜ್ಞಾನಮೂರ್ತಿ*
***ಪುಟ : x+೧೩೮ ಬೆಲೆ : ರೂ. ೧೦೦***

*ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು*
**ಲಡಾಯಿ ಪ್ರಕಾಶನ,** ನಂ. ೨೧, ಪ್ರಸಾದ್ ಹಾಸ್ಟೆಲ್, ಗದಗ – ೫೮೨ ೧೦೧.

**ನಾಟಕ ಸಾಹಿತ್ಯದಲ್ಲಿ ಏಕಲವ್ಯ** (ವಿಮರ್ಶಾ ಸಂಚಯ)
*ಡಾ॥ ಅಶೋಕ ನರೋಡೆ*
***ಪುಟ : viii+೧೭೬ ಬೆಲೆ : ರೂ. ೧೫೦***
**ನಿವೇದಿತ ಪ್ರಕಾಶನ,** ನಂ.೩೪೩೭, ೧ನೇ ಮಹಡಿ, ೪ನೇ ಮುಖ್ಯರಸ್ತೆ, ಶಾಸ್ತ್ರೀನಗರ, ಬನಶಂಕರಿ, ೨ನೇ ಹಂತ, ಬೆಂಗಳೂರು – ೫೬೦ ೦೨೮

**ಕುರುಬ ಸಮುದಾಯ** (ಹೊಸ ನೋಟಗಳು)
*ಅನು: ಪ್ರೊ॥ ಮಹೇಶ ತಿಪ್ಪಶೆಟ್ಟಿ*
***ಪುಟ : ೧೬+೧೪೪ ಬೆಲೆ : ರೂ. ೧೪೦***
**ಹಾಲುಮತ ಸಂಸ್ಕೃತಿ ಸಂಶೋಧನ ಪ್ರತಿಷ್ಠಾನ**
ಶೋಧನ, ಶಿಕ್ಷಕರ ಬಡಾವಣೆ, ಎಂ.ಪಿ. ಪ್ರಕಾಶನಗರ, ಹೊಸಪೇಟೆ – ೫೮೩ ೨೦೧.

**ಪದಾರ್ಥ** (ಸಂಶೋಧನ ಪ್ರಬಂಧಗಳ ಸಂಗ್ರಹ)
*ಚಿದಾನಂದ ಮಾಸನಕಟ್ಟಿ*
***ಪುಟ : ೧೬+೧೩೨=೧೪೮ ಬೆಲೆ : ರೂ. ೧೦೦***
**ಚಿಲಿಪಿಲಿ ಪ್ರಕಾಶನ,** ಸಾಬಳೆ ಬಿಲ್ಡಿಂಗ್, ಧಾರವಾಡ – ೫೮೦ ೦೦೧.

**ಶ್ರೀನಿವಾಸ ಜೋಕಟ್ಟೆ** (ಕ್ರಿಯಾಶೀಲ ಪತ್ರಕರ್ತ, ಸಾಹಿತಿ)
*ಡಾ॥ ಜಿ. ಎನ್. ಉಪಾಧ್ಯ*
***ಪುಟ : ೧೫೨ ಬೆಲೆ : ರೂ. ೧೦೦***
**ಕನ್ನಡ ವಿಭಾಗ : ಮುಂಬಯಿ ವಿಶ್ವವಿದ್ಯಾಲಯ**
ವಿದ್ಯಾನಗರಿ, ಮುಂಬಯಿ – ೪೦೦ ೦೯೮.

**ಹೃದಯವಂತ ರಂಗರಾವ್ ಕಾಸರಗೋಡು**
*ಭಾರತೀ ಕಾಸರಗೋಡು*
***ಪುಟ : vi+೩೬ ಬೆಲೆ : ರೂ. ೩೦***
**ಸಿಂಧುಭೈರವಿ ಪ್ರಕಾಶನ,** ಜಿ–೫, ಶ್ರೀನಿಧಿ ಶೆಲ್ಟರ್ಸ್, ನಂ.೧, ರವಿಗುಡ್ಡ, ಇಟ್ಟಮಡು, ಬಿಎಸ್‌ಕೆ ೩ನೇ ಹಂತ, ಬೆಂಗಳೂರು – ೫೬೦ ೦೮೫

**ಪ್ರತಿಲೋಮ** (ವಿಮರ್ಶಾತ್ಮಕ ಲೇಖನಗಳ ಸಂಗ್ರಹ)
*ಪ್ರೊ॥ ಎನ್. ವಿ. ಅಂಬಾಮಣಿಮೂರ್ತಿ*
***ಪುಟ : xii+೧೮೦=೧೯೨ ಬೆಲೆ : ರೂ. ೧೪೦***
**ಪ್ರಿಯದರ್ಶಿನಿ ಪ್ರಕಾಶನ,** ನಂ.೧೩೮, ೭ನೇ 'ಸಿ' ಮುಖ್ಯರಸ್ತೆ, ಹಂಪಿನಗರ, ಬೆಂಗಳೂರು–೫೬೦ ೧೦೪

**ಒಂದು ಮುಷ್ಟಿ ನೀರು** (ಕವಿತೆಗಳು)*ಸಿದ್ಧಾರೂಢ ಕಟ್ಟಿಮನಿ*
***ಪುಟ : ೧೨೨ ಬೆಲೆ : ರೂ. ೧೦೦***
**ಗುರು ಪುಸ್ತಕ,** ಅನಿಲ್ ಫುಟ್ ವೇರ್, ಅರ್ಬನ್ ಬ್ಯಾಂಕ್ ಎದುರು, ಹಿಂದಗಿ – ೫೮೬೧೨೮, ವಿಜಯಪುರ

**ಸಿಪಿಕೆ ಸಾಹಿತ್ಯ ಸಾಧನೆ** *ದೇಜಗೌ*
***ಪುಟ : ೭೨ ಬೆಲೆ : ರೂ. ೫೦***
**ಶ್ರೀ ರಾಜೇಂದ್ರ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್,** ೧೨/೧, ಈವ್ನಿಂಗ್ ಬಜಾರ್ ಹಿಂಭಾಗ, ಶಿವರಾಂಪೇಟೆ, ಮೈಸೂರು – ೫೭೦ ೦೦೧.

ನೆಮ್ಮದಿಯ ನಾಳೆ ನಮ್ಮದು

# ಹೊಸತು

## ಹೊಸ ವರ್ಷದ ಹಾರ್ದಿಕ ಶುಭಾಶಯಗಳು

## ೨೦೧೯

### ಜನವರಿ

| | | | | | |
|---|---|---|---|---|---|
| ಭಾನುವಾರ | | ೬ | ೧೩ | ೨೦ | ೨೭ |
| ಸೋಮವಾರ | | ೭ | ೧೪ | ೨೧ | ೨೮ |
| ಮಂಗಳವಾರ | ೧ | ೮ | ೧೫ | ೨೨ | ೨೯ |
| ಬುಧವಾರ | ೨ | ೯ | ೧೬ | ೨೩ | ೩೦ |
| ಗುರುವಾರ | ೩ | ೧೦ | ೧೭ | ೨೪ | ೩೧ |
| ಶುಕ್ರವಾರ | ೪ | ೧೧ | ೧೮ | ೨೫ | |
| ಶನಿವಾರ | ೫ | ೧೨ | ೧೯ | ೨೬ | |

### ಫೆಬ್ರವರಿ

| | | | | | |
|---|---|---|---|---|---|
| ಭಾನುವಾರ | | ೩ | ೧೦ | ೧೭ | ೨೪ |
| ಸೋಮವಾರ | | ೪ | ೧೧ | ೧೮ | ೨೫ |
| ಮಂಗಳವಾರ | | ೫ | ೧೨ | ೧೯ | ೨೬ |
| ಬುಧವಾರ | | ೬ | ೧೩ | ೨೦ | ೨೭ |
| ಗುರುವಾರ | | ೭ | ೧೪ | ೨೧ | ೨೮ |
| ಶುಕ್ರವಾರ | ೧ | ೮ | ೧೫ | ೨೨ | |
| ಶನಿವಾರ | ೨ | ೯ | ೧೬ | ೨೩ | |

### ಮಾರ್ಚ್

| | | | | | |
|---|---|---|---|---|---|
| ಭಾನುವಾರ | ೩೧ | ೩ | ೧೦ | ೧೭ | ೨೪ |
| ಸೋಮವಾರ | | ೪ | ೧೧ | ೧೮ | ೨೫ |
| ಮಂಗಳವಾರ | | ೫ | ೧೨ | ೧೯ | ೨೬ |
| ಬುಧವಾರ | | ೬ | ೧೩ | ೨೦ | ೨೭ |
| ಗುರುವಾರ | | ೭ | ೧೪ | ೨೧ | ೨೮ |
| ಶುಕ್ರವಾರ | ೧ | ೮ | ೧೫ | ೨೨ | ೨೯ |
| ಶನಿವಾರ | ೨ | ೯ | ೧೬ | ೨೩ | ೩೦ |

### ಏಪ್ರಿಲ್

| | | | | | |
|---|---|---|---|---|---|
| ಭಾನುವಾರ | | ೭ | ೧೪ | ೨೧ | ೨೮ |
| ಸೋಮವಾರ | ೧ | ೮ | ೧೫ | ೨೨ | ೨೯ |
| ಮಂಗಳವಾರ | ೨ | ೯ | ೧೬ | ೨೩ | ೩೦ |
| ಬುಧವಾರ | ೩ | ೧೦ | ೧೭ | ೨೪ | |
| ಗುರುವಾರ | ೪ | ೧೧ | ೧೮ | ೨೫ | |
| ಶುಕ್ರವಾರ | ೫ | ೧೨ | ೧೯ | ೨೬ | |
| ಶನಿವಾರ | ೬ | ೧೩ | ೨೦ | ೨೭ | |

### ಮೇ

| | | | | | |
|---|---|---|---|---|---|
| ಭಾನುವಾರ | | ೫ | ೧೨ | ೧೯ | ೨೬ |
| ಸೋಮವಾರ | | ೬ | ೧೩ | ೨೦ | ೨೭ |
| ಮಂಗಳವಾರ | | ೭ | ೧೪ | ೨೧ | ೨೮ |
| ಬುಧವಾರ | ೧ | ೮ | ೧೫ | ೨೨ | ೨೯ |
| ಗುರುವಾರ | ೨ | ೯ | ೧೬ | ೨೩ | ೩೦ |
| ಶುಕ್ರವಾರ | ೩ | ೧೦ | ೧೭ | ೨೪ | ೩೧ |
| ಶನಿವಾರ | ೪ | ೧೧ | ೧೮ | ೨೫ | |

### ಜೂನ್

| | | | | | |
|---|---|---|---|---|---|
| ಭಾನುವಾರ | ೩೦ | ೨ | ೯ | ೧೬ | ೨೩ |
| ಸೋಮವಾರ | | ೩ | ೧೦ | ೧೭ | ೨೪ |
| ಮಂಗಳವಾರ | | ೪ | ೧೧ | ೧೮ | ೨೫ |
| ಬುಧವಾರ | | ೫ | ೧೨ | ೧೯ | ೨೬ |
| ಗುರುವಾರ | | ೬ | ೧೩ | ೨೦ | ೨೭ |
| ಶುಕ್ರವಾರ | | ೭ | ೧೪ | ೨೧ | ೨೮ |
| ಶನಿವಾರ | ೧ | ೮ | ೧೫ | ೨೨ | ೨೯ |

### ಜುಲೈ

| | | | | | |
|---|---|---|---|---|---|
| ಭಾನುವಾರ | | ೭ | ೧೪ | ೨೧ | ೨೮ |
| ಸೋಮವಾರ | ೧ | ೮ | ೧೫ | ೨೨ | ೨೯ |
| ಮಂಗಳವಾರ | ೨ | ೯ | ೧೬ | ೨೩ | ೩೦ |
| ಬುಧವಾರ | ೩ | ೧೦ | ೧೭ | ೨೪ | ೩೧ |
| ಗುರುವಾರ | ೪ | ೧೧ | ೧೮ | ೨೫ | |
| ಶುಕ್ರವಾರ | ೫ | ೧೨ | ೧೯ | ೨೬ | |
| ಶನಿವಾರ | ೬ | ೧೩ | ೨೦ | ೨೭ | |

### ಆಗಸ್ಟ್

| | | | | | |
|---|---|---|---|---|---|
| ಭಾನುವಾರ | | ೪ | ೧೧ | ೧೮ | ೨೫ |
| ಸೋಮವಾರ | | ೫ | ೧೨ | ೧೯ | ೨೬ |
| ಮಂಗಳವಾರ | | ೬ | ೧೩ | ೨೦ | ೨೭ |
| ಬುಧವಾರ | | ೭ | ೧೪ | ೨೧ | ೨೮ |
| ಗುರುವಾರ | ೧ | ೮ | ೧೫ | ೨೨ | ೨೯ |
| ಶುಕ್ರವಾರ | ೨ | ೯ | ೧೬ | ೨೩ | ೩೦ |
| ಶನಿವಾರ | ೩ | ೧೦ | ೧೭ | ೨೪ | ೩೧ |

### ಸೆಪ್ಟೆಂಬರ್

| | | | | | |
|---|---|---|---|---|---|
| ಭಾನುವಾರ | ೧ | ೮ | ೧೫ | ೨೨ | ೨೯ |
| ಸೋಮವಾರ | ೨ | ೯ | ೧೬ | ೨೩ | ೩೦ |
| ಮಂಗಳವಾರ | ೩ | ೧೦ | ೧೭ | ೨೪ | |
| ಬುಧವಾರ | ೪ | ೧೧ | ೧೮ | ೨೫ | |
| ಗುರುವಾರ | ೫ | ೧೨ | ೧೯ | ೨೬ | |
| ಶುಕ್ರವಾರ | ೬ | ೧೩ | ೨೦ | ೨೭ | |
| ಶನಿವಾರ | ೭ | ೧೪ | ೨೧ | ೨೮ | |

### ಅಕ್ಟೋಬರ್

| | | | | | |
|---|---|---|---|---|---|
| ಭಾನುವಾರ | | ೬ | ೧೩ | ೨೦ | ೨೭ |
| ಸೋಮವಾರ | | ೭ | ೧೪ | ೨೧ | ೨೮ |
| ಮಂಗಳವಾರ | ೧ | ೮ | ೧೫ | ೨೨ | ೨೯ |
| ಬುಧವಾರ | ೨ | ೯ | ೧೬ | ೨೩ | ೩೦ |
| ಗುರುವಾರ | ೩ | ೧೦ | ೧೭ | ೨೪ | ೩೧ |
| ಶುಕ್ರವಾರ | ೪ | ೧೧ | ೧೮ | ೨೫ | |
| ಶನಿವಾರ | ೫ | ೧೨ | ೧೯ | ೨೬ | |

### ನವೆಂಬರ್

| | | | | | |
|---|---|---|---|---|---|
| ಭಾನುವಾರ | | ೩ | ೧೦ | ೧೭ | ೨೪ |
| ಸೋಮವಾರ | | ೪ | ೧೧ | ೧೮ | ೨೫ |
| ಮಂಗಳವಾರ | | ೫ | ೧೨ | ೧೯ | ೨೬ |
| ಬುಧವಾರ | | ೬ | ೧೩ | ೨೦ | ೨೭ |
| ಗುರುವಾರ | | ೭ | ೧೪ | ೨೧ | ೨೮ |
| ಶುಕ್ರವಾರ | ೧ | ೮ | ೧೫ | ೨೨ | ೨೯ |
| ಶನಿವಾರ | ೨ | ೯ | ೧೬ | ೨೩ | ೩೦ |

### ಡಿಸೆಂಬರ್

| | | | | | |
|---|---|---|---|---|---|
| ಭಾನುವಾರ | ೧ | ೮ | ೧೫ | ೨೨ | ೨೯ |
| ಸೋಮವಾರ | ೨ | ೯ | ೧೬ | ೨೩ | ೩೦ |
| ಮಂಗಳವಾರ | ೩ | ೧೦ | ೧೭ | ೨೪ | ೩೧ |
| ಬುಧವಾರ | ೪ | ೧೧ | ೧೮ | ೨೫ | |
| ಗುರುವಾರ | ೫ | ೧೨ | ೧೯ | ೨೬ | |
| ಶುಕ್ರವಾರ | ೬ | ೧೩ | ೨೦ | ೨೭ | |
| ಶನಿವಾರ | ೭ | ೧೪ | ೨೧ | ೨೮ | |

# ಆಧುನಿಕ ಕನ್ನಡ ಸಾಹಿತ್ಯದಲ್ಲಿ ಅಲಕ್ಷಿತ ಲೋಕದ ಸಂಕಥನ

✍ ಪ್ರೊ॥ ಬರಗೂರು ರಾಮಚಂದ್ರಪ್ಪ




ಅಲಕ್ಷಿತ ಲೋಕದ ಸಂಕಥನವನ್ನು ಅರ್ಥೈಸುವ ಮತ್ತು ವಿಶ್ಲೇಷಣೆಗೊಡ್ಡುವ ಕೆಲಸವು ಸಾಂಸ್ಕೃತಿಕ ಚಲನಶೀಲತೆಗೆ ತೀವ್ರತೆಯನ್ನೂ ತಾತ್ವಿಕತೆಯನ್ನೂ ತಂದುಕೊಡಬೇಕಾಗುತ್ತದೆ. ಈ ನಿಟ್ಟಿನಲ್ಲಿ ಮೊದಲಿಗೆ 'ಅಲಕ್ಷಿತ ಲೋಕ'ದ ನಿರ್ವಚನ ಮುಖ್ಯವಾಗುತ್ತದೆ. ದಲಿತರು, ಮಹಿಳೆಯರು, ಅಲ್ಪಸಂಖ್ಯಾತರು, ತೃತೀಯ ಲಿಂಗಿಗಳು 'ಅಲಕ್ಷಿತ ಲೋಕ'ದ ವ್ಯಾಪ್ತಿಗೆ ಬರುತ್ತಾರೆ. ಈ 'ಅಲಕ್ಷಿತ'ರು ಈಗಾಗಲೇ ಸಾಕಷ್ಟು ಸಂಘಟಿತರಾಗಿದ್ದು ಅಥವಾ ಆಗುತ್ತಿದ್ದು, ಇವರಾಚೆಗೂ ಅಲಕ್ಷಿತರಿದ್ದಾರೆ ಎಂಬುದನ್ನೂ ಗಮನಿಸಬೇಕಾಗುತ್ತದೆ. ಶ್ರೇಣೀಕೃತ ಸಾಮಾಜಿಕ ಸಂರಚನೆಯಲ್ಲಿ ದಲಿತರು, ಮಹಿಳೆಯರು ಸದಾ ಅಲಕ್ಷಿತರಾಗಿದ್ದು ಈಗ ಜಾಗೃತರಾಗುತ್ತಿದ್ದಾರೆ. ಅಲ್ಪಸಂಖ್ಯಾತರನ್ನು – ವಿಶೇಷವಾಗಿ – ಧಾರ್ಮಿಕ ಅಲ್ಪಸಂಖ್ಯಾತರನ್ನು ಪ್ರತ್ಯೇಕ ಸಂಖ್ಯಾತರನ್ನಾಗಿ ಪರಿಗಣಿಸಿದ ಬಹುಸಂಖ್ಯಾತ ಅಪದೃಷ್ಟಿಯೊಂದು ಎಂದಿಗಿಂತ ಇಂದು ಬಲವಾಗುತ್ತಿದೆ. ತೃತೀಯ ಲಿಂಗಿಗಳ ಬಗೆಗೆ ಇದ್ದ ನಿರ್ಲಕ್ಷ್ಯ ಸಂಘಟನೆಗಳಿಂದ ಸ್ವಲ್ಪ ಕಡಿಮೆಯಾಗಿದ್ದರೂ ಅದು ಮುಖ್ಯವಾಹಿನಿಯ ಮಾತಾಗಿ ಬೆರೆತುಕೊಂಡಿಲ್ಲ. ಹೀಗಾಗಿ ಇವರೆಲ್ಲ ಒಂದಲ್ಲ ಒಂದು ರೀತಿಯಲ್ಲಿ ಸಾಂಪ್ರದಾಯಿಕ ಸಾಮಾಜಿಕ ವ್ಯವಸ್ಥೆಯ ವಾರೆಗಣ್ಣಿನ ಉರಿಗೆ ಸಿಕ್ಕಿದವರೇ ಆಗಿದ್ದಾರೆ. ಆದರೂ ಅಲಕ್ಷಿತಗೊಂಡದ್ದರಿಂದಾದ ಅವಮಾನವನ್ನೇ ಸ್ವಾಭಿಮಾನವನ್ನಾಗಿಸಿಕೊಂಡ ಸಂಘಟನಾತ್ಮಕ ಮುನ್ನಡೆಯನ್ನೂ ಸ್ವಯಂ ಸಾಧಿಸುತ್ತಿದ್ದಾರೆ. ಹೀಗೆ ಸಂಘಟನೆಗೊಳ್ಳದೆ, ಅಲಕ್ಷಿತವಲಯದಲ್ಲೇ ಅಂಚಿಗೆ ಸರಿದಿರುವ ಅತಿ ಅಲಕ್ಷಿತರಾದ ಅಲೆಮಾರಿ, ಅರೆ ಅಲೆಮಾರಿ, ಬುಡಕಟ್ಟು ಜನಾಂಗಗಳನ್ನು ಗಂಭೀರವಾಗಿ ಗಮನಿಸದೆ ಹೋದರೆ ಅಲಕ್ಷಿತ ಲೋಕದ ಸಂಕಥನವು ಅಪೂರ್ಣವಾಗುತ್ತದೆ. ಅಲಕ್ಷಿತರಲ್ಲೇ ಇರುವ ಸಂಘಟಿತ ವಲಯವು ಮುಖ್ಯವಾಹಿನಿಯೆಂದು ನೆಲೆಗೊಂಡಿರುವ ಸಾಮಾನ್ಯೀಕೃತ ಜೀವನವಿಧಾನಕ್ಕೆ ಒಗ್ಗಿಕೊಳ್ಳತೊಡಗಿದ್ದು, ಅಸಂಘಟಿತ ವಲಯವು ನಿಜವಾದ ಅರ್ಥದಲ್ಲಿ ಅಲಕ್ಷಿತವಾಗಿಯೇ ಇದೆ. ಈ ನಿಟ್ಟಿನಲ್ಲಿ ನೆಲೆಗೊಳ್ಳುತ್ತಿರುವ ಮತ್ತು ನೆಲೆಗೊಳ್ಳದಿರುವ ಅಲಕ್ಷಿತ ವಲಯಗಳ ಲೋಕದಲ್ಲೇ ಅಂತರಗಳು ನಿರ್ಮಾಣಗೊಳ್ಳುತ್ತಿವೆ. ಆದ್ದರಿಂದ, ಸಾಹಿತ್ಯ ಮತ್ತು ಸಂಸ್ಕೃತಿ ಲೋಕದಲ್ಲಿ ಅಲಕ್ಷಿತ ವಲಯವನ್ನು 'ಹುಡುಕುವಾಗ' ಸಾಮಾಜಿಕ ಸಂರಚನೆಯ 'ಒಟ್ಟಾರೆ ಶ್ರೇಣೀಕೃತ ವ್ಯವಸ್ಥೆ'ಯ ಜೊತೆಗೆ 'ಅಲಕ್ಷಿತ ವಲಯ'ದೊಳಗೇ ಹುಟ್ಟುತ್ತಿರುವ ಶ್ರೇಣೀಕೃತ ವಾಸ್ತವವನ್ನೂ ಅರ್ಥಮಾಡಿಕೊಳ್ಳಬೇಕಾಗುತ್ತದೆ. ಹೀಗೆ ಅರ್ಥೈಸಿಕೊಳ್ಳಲು ಸಾಹಿತ್ಯ ಸಾಧನೆಗಳಷ್ಟೇ ಸಾಕಾಗುವುದಿಲ್ಲ. ಹಾಗೆ ನೋಡಿದರೆ 'ಅಲಕ್ಷಿತ



ಲೋಕ'ವೆಂಬ ಗ್ರಹಿಕೆಯೇ ಸಾಹಿತ್ಯದ ಪರಿಭಾಷೆಯಲ್ಲ. ಇದು ಸಾಮಾಜಿಕ–ಆರ್ಥಿಕ ಪರಿಭಾಷೆ ಮತ್ತು ಪರಿಕಲ್ಪನೆ. ಆದ್ದರಿಂದ ಸಾಹಿತ್ಯದಲ್ಲಿ ಅಲಕ್ಷಿತ ಲೋಕದ ಸಂಕಥನಗಳನ್ನು ಶೋಧಿಸುವುದಕ್ಕೆ ಸಾಹಿತ್ಯ ಪ್ರಜ್ಞೆಯ ಜೊತೆಗೆ ಇನ್ನಿತರ ಮಾನವಿಕ ಶಿಸ್ತುಗಳ ತಿಳುವಳಿಕೆ ಅಗತ್ಯ. ಅಂದರೆ ಅಗತ್ಯವಿರುವಷ್ಟು ಸಮಾಜ ವಿಜ್ಞಾನ, ರಾಜಕೀಯ ವಿಜ್ಞಾನ, ಅರ್ಥಶಾಸ್ತ್ರಗಳ ಸಾಮಾನ್ಯ ಅರಿವಾದರೂ ಬೇಕಾಗುತ್ತದೆ. ಯಾಕೆಂದರೆ ಇದು ಸಾಹಿತ್ಯ ಸೌಂದರ್ಯವನ್ನು ಕಂಡುಕೊಳ್ಳುವ ಕೆಲಸವಲ್ಲ; ಸಾಹಿತ್ಯದೊಳಗಿನ ಸಾಮಾಜಿಕ ಫಲಿತಗಳನ್ನು ಕಂಡುಕೊಳ್ಳುವ ಕೆಲಸ. ಒಂದೇ ಮಾತಿನಲ್ಲಿ ಹೇಳುವುದಾದರೆ – ಅಲಕ್ಷಿತ ಲೋಕದ ಸಂಕಥನ ಶೋಧವು ಅಂತರ್‌ಶಿಸ್ತೀಯ ಅಧ್ಯಯನದ ಆಯಾಮವನ್ನು ಅಪೇಕ್ಷಿಸುವ ಒಂದು ಮಹತ್ವದ ಕೆಲಸ; ಸಾಮಾಜಿಕ ಪ್ರಜ್ಞೆಯ ಶೋಧ.

ಸಾಮಾಜಿಕ ಪ್ರಜ್ಞೆಯ ಶೋಧಕ್ಕೂ ಎರಡು ನೆಲೆಗಳಿವೆ. ಒಂದು : ಸಾಹಿತ್ಯಾಭಿವ್ಯಕ್ತಿಯಲ್ಲಿ ಸಾಮಾಜಿಕ ಪ್ರಜ್ಞೆ. ಎರಡು : ಹೀಗೆ ಅಭಿವ್ಯಕ್ತಗೊಂಡ ಸಾಹಿತ್ಯವನ್ನು ವಿಶ್ಲೇಷಿಸಲು ಬೇಕಾದ ಸಾಮಾಜಿಕ ಪ್ರಜ್ಞೆ. ಹೀಗಾಗಿ 'ಅಲಕ್ಷಿತಲೋಕದ ಸಂಕಥನ'ವು ಸಾಹಿತ್ಯದ ಒಳಗಿನ ಮತ್ತು ಹೊರಗಿನ ಸಾಮಾಜಿಕ ನೆಲೆಗಳ ಅರ್ಥಪೂರ್ಣ ಅನುಸಂಧಾನವಾಗುತ್ತದೆ. ಇದೇ ಸಂದರ್ಭದಲ್ಲಿ 'ಅಲಕ್ಷಿತಲೋಕ'ವು ಏಕಸಂಸ್ಕೃತಿ ಲೋಕವಲ್ಲವೆಂಬ ವಿವೇಕವೂ ಜಾಗೃತವಾಗಿರಬೇಕು. ಹಾಗೆ ನೋಡಿದರೆ ನಮ್ಮ ರಾಜ್ಯ, ದೇಶ, ಸಮಾಜ, ಯಾವುದೂ ಏಕಸಂಸ್ಕೃತಿ ಲೋಕವಲ್ಲ. ಅಧ್ಯಯನಕ್ಕಾಗಿ 'ಅಲಕ್ಷಿತ'ವೆಂಬ ಒಂದು ಲೋಕ ವಲಯವನ್ನು ಗುರುತಿಸಿಕೊಳ್ಳುವುದು ಸರಿ. ಅಲಕ್ಷಿತ ವಲಯವೆಂಬುದು ಬಹುಸಂಸ್ಕೃತಿ ವಲಯವೆಂಬುದು ಮತ್ತಷ್ಟು ಸರಿ. ಈ ವಲಯದ ಅಧ್ಯಯನದಿಂದ ಸಾಹಿತ್ಯಕ್ಷೇತ್ರ ವಿಸ್ತಾರಗೊಳ್ಳುತ್ತದೆ. ವಿಸ್ತಾರಗೊಳ್ಳುತ್ತ ಬಂದಿದೆ. ಯಾಕೆಂದರೆ – 'ಶುದ್ಧ ಸಾಹಿತ್ಯ'ವೆಂದು ಪ್ರಸಿದ್ಧಗೊಂಡ ಅಭಿವ್ಯಕ್ತಿ ನೋಟದ 'ಸುಂದರ' ಪರಿಭಾಷೆಯನ್ನು ಮೀರಿ ಸಾಹಿತ್ಯಕ್ಕೆ ಸಾಮಾಜಿಕ ಪರಿಭಾಷೆಯನ್ನು ಒದಗಿಸುತ್ತ ಬರಲಾಗಿದೆ. ಈ ಮಾತು ಹೇಳುವಾಗ ನನಗೆ ಪ್ಯಾಬ್ಲೊ ನೆರೂದ ಮಾಡಿದ್ದ 'ಅಶುದ್ಧ' ಕಾವ್ಯದ ಪ್ರತಿಪಾದನೆ ಮತ್ತು ಕುವೆಂಪು ಅವರ 'ಗೊಬ್ಬರ' ಮತ್ತು 'ಕ್ರಾಂತಿಕಾಳಿ' ಪದ್ಯಗಳ ನೆನಪಾಗುತ್ತವೆ. ನೆರೂದ ಮಾತು ಹೀಗಿದೆ : 'ಸಾರಿನ ಕಲೆ ಅಂಟಿದ ಬಟ್ಟೆ, ಕೊಳಕಾದ ಶರೀರ, ಚರ್ಮದ ಸುಕ್ಕು, ಪ್ರಜ್ಞೆ ಮತ್ತು ಕನಸು, ಕಾಣ್ಕೆ ಮತ್ತು ಮುನ್ನೋಟ, ಜನಪದ ಕಥನ, ಪ್ರಾಣಿ, ಪಕ್ಷಿ, ಆಘಾತ, ರಾಜಕೀಯ ನಿಷ್ಠೆ, ನಿರಾಕರಣೆ, ಸಮರ್ಥನೆ ಮತ್ತು ಆಪಾದನೆ – ಇಂಥ ಮಲಿನವಾದೊಂದು ಕಾವ್ಯ (ಅಶುದ್ಧ ಕಾವ್ಯ) ನಮ್ಮದಾಗಲಿ' – ನೆರೂದ ಅವರ ಈ ಪ್ರತಿಪಾದನೆಯು ಅವರ 'ಇಂಪ್ಯೂರ್ ಪೊಯಟ್ರಿ' ಎಂಬ ಬರಹದಲ್ಲಿದ್ದು ಒಟ್ಟಾರೆ ಲೇಖನವು ಶ್ರಮಜೀವಿಗಳ, ಮಹಿಳೆಯರ, ಅಲಕ್ಷಿತ ವಲಯಗಳ ಸಂವೇದನಾ ಪರವಾದ ತಾತ್ವಿಕ ಮುಖಾಮುಖಿಯಾಗಿದೆ. ತಾವೇ ನಿಸರ್ಗರಮ್ಯ ಕವನಗಳನ್ನು ಬರೆದಿದ್ದರೂ ನಿರ್ದಿಷ್ಟ ಸಂದರ್ಭದ, ಅಗತ್ಯಕ್ಕನುಗುಣವಾಗಿ ರಮ್ಯತೆಯಿಂದ ಕವಿಗಳು ಹೊರಬರಬೇಕೆಂದು ಬಯಸಿದ ಕುವೆಂಪು 'ಕ್ರಾಂತಿಕಾಳಿ', ಎಂಬ ಕವನದಲ್ಲಿ 'ಶುಕಪಿಕ, ವಸಂತ, ಲತೆ। ಮುಂಗುರುಳು, ತಂಗಾಳಿ, ದೊರೆಗಳಜ್ಜಿ ಕತೆ,। ಬೆಳ್ದಿಂಗಳೆಂಬುದಂ ನೂಕಾಚೆ ಹೆಂಬೇಡಿ।' ಎಂದು ಕರೆಕೊಡುತ್ತಾರೆ, 'ಬಡತನಂ, ಗೊಬ್ಬರಂ, ಕತ್ತಿ, ಗುದ್ದಲಿ, ಹಾರೆ। ಬೆವರು, ನೆತ್ತರ್ಗಳಂ ಗಾನಗೈವುದು ನಿನ್ನ। ಕರ್ತವ್ಯವಿಂದು' ಎಂದು ಪ್ರತಿಪಾದಿಸುತ್ತಾರೆ. 'ಗೊಬ್ಬರ' ಕವನವು ಅಲಕ್ಷಿತ ವಲಯದ = ವಿಶೇಷವಾಗಿ ಅಲಕ್ಷಿತ ರೈತ ಸಮುದಾಯದ ರೂಪಕವಾಗಿ ಕಾವ್ಯದ ವಸ್ತುಪಲ್ಲಟಕ್ಕೆ ಒತ್ತಾಯಿಸುತ್ತದೆ. ಬೇಂದ್ರೆಯವರ ಪುಟ್ಟ ವಿಧವೆ, ಅನ್ನಾವತಾರ – ಮುಂತಾದ ಕವಿತೆಗಳೂ ಇಲ್ಲಿ ಉಲ್ಲೇಖನೀಯ. ಆದರೆ ನಾನಿಲ್ಲಿ ಹೀಗೆ ಬಿಡಿಕವಿ–ಲೇಖಕರ ಅಭಿವ್ಯಕ್ತಿ ವಿಶ್ಲೇಷಣೆಗೆ ತೊಡಗುವುದಿಲ್ಲ. ತಾತ್ವಿಕ ವಿಷಯಕ್ಕೆ ನನ್ನ ಚಿಂತನೆಯನ್ನು ಸ್ವಯಂಸೀಮಿತಗೊಳಿಸಿಕೊಳ್ಳುತ್ತೇನೆ.

ಅಲಕ್ಷಿತ ಲೋಕದ ಸಂಕಥನವನ್ನು ಅರ್ಥಮಾಡಿಕೊಳ್ಳಲು ನಮಗೆ ಏಕಕಾಲಕ್ಕೆ ಸಾಮಾಜಿಕ ಪ್ರಜ್ಞೆ, ಸಾಮಾಜಿಕ ಪರಿಕಲ್ಪನೆ ಮತ್ತು ಸಾಮಾಜಿಕ ಪರಿಭಾಷೆಗಳು ಮುಪ್ಪುರಿಗೊಂಡ ಮನಸ್ಸು ಬೇಕು. ಅಭಿವ್ಯಕ್ತಿಸುವ ಲೇಖಕರು ಮತ್ತು ವಿಶ್ಲೇಷಿಸುವ ವಿಮರ್ಶಕರು ಸಾಮಾನ್ಯ ಮನುಷ್ಯ ಮನಸ್ಥಿತಿಗೆ ತಲುಪಿ ತಳಮಳಿಸಬೇಕು. ಈ ತಳಮಳವೇ ಸಾಮಾಜಿಕ ಕಳವಳವಾಗಿ, ಕಾಳಜಿಯಾಗಿ, ಅರಿವಾಗಿ, ಪ್ರಜ್ಞೆಯಾಗಿ ಹುರಿಗಟ್ಟಬೇಕು. ತಳಮಳ, ಕಳವಳ ಎಂಬ ಮಾತುಗಳನ್ನು ನಾನು ಪ್ರಜ್ಞಾಪೂರ್ವಕವಾಗಿಯೇ ಬಳಸಿದ್ದೇನೆ. ಅಲಕ್ಷಿತರ ಬದುಕನ್ನು ಕಂಡವರು ಮತ್ತು ಉಂಡವರು ತಳಮಳಿಸಿದಾಗಲೇ ಇದೆಂಥ ಸಮಾಜದಲ್ಲಿದ್ದೇವೆಂಬ ಕಳವಳ ಕಣ್ಣು ತೆರೆಯುತ್ತದೆ. ಕಳವಳದ ಕಣ್ಣಿನಲ್ಲಿ ಕಾಳಜಿಯ ನೋಟ ಹುಟ್ಟುತ್ತದೆ. ಹೀಗೆ ಹುಟ್ಟಿದ ನೋಟ, ಅರಿವಿನತ್ತ ಸಾಗುತ್ತದೆ. ಅರಿವು ಆಳಕ್ಕೆ ಹೋದಾಗ ಪ್ರಜ್ಞೆಯಾಗಿ ರೂಪುಗೊಳ್ಳುತ್ತದೆ. ಈ ಪ್ರಕ್ರಿಯೆಯ ಮೂಲಕ ಹೊಸ ಪರಿಕಲ್ಪನೆ, ಹೊಸ ಪರಿಭಾಷೆ ಆಕಾರ ಪಡೆಯುತ್ತದೆ. ಹೀಗೆ ಆಕಾರ ಪಡೆದ ರಚನೆಗಳು ಆಧುನಿಕ ಕನ್ನಡ ಸಾಹಿತ್ಯದಲ್ಲಿ ಆಯಾ ಸಂದರ್ಭಕ್ಕನುಗುಣವಾಗಿ ಮೂಡಿಬಂದಿವೆ. ವಿಶೇಷವಾಗಿ ಎಪ್ಪತ್ತು–ಎಂಬತ್ತರ ದಶಕದಲ್ಲಿ ದಲಿತ–ಬಂಡಾಯ ಸಾಹಿತ್ಯ ಚಳವಳಿಗಳ ಫಲವಾಗಿ ಅಲಕ್ಷಿತ ಲೋಕದಲ್ಲಿ ಎಚ್ಚರ ಮೂಡಿತು; ಸಾಹಿತ್ಯಾಭಿವ್ಯಕ್ತಿಯಲ್ಲಿ ಅಲಕ್ಷಿತ ಲೋಕ ಹೆಚ್ಚಾಗಿ ಅನಾವರಣಗೊಂಡಿತು. ಅಲಕ್ಷಿತ ವಲಯದ ದಲಿತರು, ಮಹಿಳೆಯರು, ಅಲ್ಪಸಂಖ್ಯಾತರು ಹೆಚ್ಚಾಗಿ ತಂತಮ್ಮ ಅನುಭವಗಳಿಗೆ ಅಕ್ಷರಾಭಿವ್ಯಕ್ತಿ ನೀಡಿದ್ದು ಸ್ವಯಂ ಅಲಕ್ಷಿತ ವಲಯಕ್ಕೆ ಸೇರದೆ ಇದ್ದವರೂ ಸಹ ಸಂವೇದಕರಾದದ್ದು ದಲಿತ–ಬಂಡಾಯ ಸಾಹಿತ್ಯ ಚಳುವಳಿಯ ಅಸಾಧಾರಣ ಕೊಡುಗೆ. ಈ ಹಿನ್ನೆಲೆಯಲ್ಲಿ ದಲಿತ ಸಂವೇದನೆ, ಸ್ತ್ರೀಸಂವೇದನೆ, ಮುಸ್ಲಿಂ ಸಂವೇದನೆಯೆಂಬ ಪರಿಕಲ್ಪನೆಗಳೇ ರೂಪುಗೊಂಡದ್ದು ಒಂದು ವಿಶೇಷ ಬೆಳವಣಿಗೆ. ಪ್ರಗತಿಶೀಲ ಸಾಹಿತ್ಯ ಚಳುವಳಿಯ ಪ್ರಭಾವವನ್ನೂ ಆಧುನಿಕ ಕನ್ನಡ ಸಾಹಿತ್ಯದಲ್ಲಿ ಗಮನಿಸಲೇಬೇಕು. ನವೋದಯ ಸಾಹಿತ್ಯ ಸಂದರ್ಭದಲ್ಲಿ

ಪ್ರಗತಿಶೀಲ ಚಳವಳಿಯ ಪ್ರಭಾವದಿಂದ ಹುಟ್ಟಿದ ರಚನೆಗಳು ಅಂದಿನ ಅರಿವಿನ ಮಿತಿಯಲ್ಲಿ 'ಅಲಕ್ಷಿತ' ಲೋಕವನ್ನು ಕಂಡುಕೊಂಡವು. ಎಪ್ಪತ್ತು, ಎಂಬತ್ತರ ದಶಕದ ದಲಿತ-ಬಂಡಾಯ ಸಾಹಿತ್ಯದಂತೆಯೇ ಇಡೀ ಆಧುನಿಕ ಕನ್ನಡ ಸಾಹಿತ್ಯ ಇರಬೇಕಿತ್ತೆಂದು ನಿರೀಕ್ಷಿಸಬಾರದು. ಅಂದಂದಿನ ಚಾರಿತ್ರಿಕ ಸಂದರ್ಭದಲ್ಲಿ ಆಯಾ ಸಾಹಿತ್ಯ ಘಟ್ಟವನ್ನಿಟ್ಟು ಪರಿಶೀಲಿಸುವುದು ವಿವೇಕದ ಮಾರ್ಗ. ನಿರ್ದಿಷ್ಟ ಚಾರಿತ್ರಿಕ ಸಂದರ್ಭವು ಸಾಮಾಜಿಕ-ಆರ್ಥಿಕ ಸಂಚಲನದ ಮೂಲಕ ರೂಪುಗೊಳ್ಳುತ್ತ ಸಾಹಿತ್ಯಾದಿ ಕಲೆಗಳನ್ನು ಪ್ರೇರೇಪಿಸುತ್ತದೆ. ಈ ಪ್ರೇರಣೆಗಳ ವ್ಯಾಪ್ತಿ ಮತ್ತು ಮಿತಿಯಲ್ಲಿ ಲೇಖಕರು ಸಮಾಜಕ್ಕೆ ಸ್ಪಂದಿಸುತ್ತಾರೆ; ಅಭಿವ್ಯಕ್ತಿಸುತ್ತಾರೆ. ಆದ್ದರಿಂದ, ಅಂದಂದಿನ ಸಾಮಾಜಿಕ ಮಿತಿಗಳನ್ನು ಲೇಖಕರು/ಕಲಾಕಾರರು ಚಲನಶೀಲರಾದರೆ ಅಥವಾ ಜಡತೆಯ ಯಜಮಾನರಾದರೆ ಎಂಬ ಪ್ರಶ್ನೆ ಮುಖ್ಯವಾಗುತ್ತದೆ. ಚಲನಶೀಲತೆಯಲ್ಲೂ ಅಂದಂದಿನ ಸಾಮಾಜಿಕ ವಿವೇಕದ ವ್ಯಾಪ್ತಿ ಕೆಲಸ ಮಾಡುತ್ತದೆ. ಈ ಅಂಶವನ್ನು ಹೀಗೆ ವಿಸ್ತರಿಸಬಹುದು. ಆಧುನಿಕ ಕನ್ನಡ ಸಾಹಿತ್ಯದ ಪೂರ್ವಾರ್ಧದ ಸಾಮಾಜಿಕ ವಿವೇಕವು ಬ್ರಾಹ್ಮಣ-ಶೂದ್ರ ಎಂಬ ಎರಡು ವಿಂಗಡನೆಗಳ ವ್ಯಾಪ್ತಿಯಲ್ಲಿತ್ತು. ಈ ವ್ಯಾಪ್ತಿಯು ವಿಸ್ತರಿಸಲು ಎಪ್ಪತ್ತರ ದಶಕ ಬರಬೇಕಾಯಿತು. ಆಗ, ದಲಿತರು, ಮಹಿಳೆಯರು, ಮುಸ್ಲಿಮರು, ಮಾತಾಡತೊಡಗಿದರು. ಇತರರೂ ಇವರ ಪರವಾದ ದನಿಯಾಗತೊಡಗಿದರು. ಬ್ರಾಹ್ಮಣರ ಎದುರು ಸಾಮಾಜಿಕವಾಗಿ ಶೂದ್ರರು ಅಲಕ್ಷಿತರಾದರೆ, ಈ ಇಬ್ಬರ ಎದುರು ದಲಿತರು, ಮಹಿಳೆಯರು ಅಲಕ್ಷಿತರಾದರು. ಮುಂದುವರಿದು ನೋಡಿದಾಗ ಅಲೆಮಾರಿ, ಅರೆ ಅಲೆಮಾರಿ, ಬುಡಕಟ್ಟು ಜನಾಂಗಗಳು ಮತ್ತಷ್ಟು ಅಲಕ್ಷಿತರಾದರು. ಸಾಮಾಜಿಕವಾಗಿ ಅಲಕ್ಷಿತ ಲೋಕದ ಗುರುತು ಹೀಗಿದ್ದರೆ, 'ಆರ್ಥಿಕ ಅಲಕ್ಷಿತ ಬಡವರು' ಎಲ್ಲ ಜಾತಿ, ವರ್ಣಗಳಲ್ಲೂ ಇದ್ದಾರೆ. ಆದ್ದರಿಂದ ಆಧುನಿಕ ಕನ್ನಡ ಸಾಹಿತ್ಯದಲ್ಲಿ ಅಲಕ್ಷಿತ ಲೋಕದ ಸಂಕಥನವನ್ನು ಶೋಧಿಸುವಾಗ ಸಾಮಾಜಿಕ ಅಲಕ್ಷಿತ ಲೋಕವೆ; ಆರ್ಥಿಕ ಅಲಕ್ಷಿತ ಲೋಕವೆ ಎಂಬ ಸ್ಪಷ್ಟತೆ ಇರಬೇಕಾಗುತ್ತದೆ. ನನಗೆ ಅನ್ನಿಸಿದಂತೆ ಇದು ಸಾಮಾಜಿಕ ಅಲಕ್ಷಿತ ಲೋಕದ ಸಂಕಥನದ ಶೋಧ. ಸಾಮಾಜಿಕವಾಗಿ ಅಲಕ್ಷಿತರಾದವರಲ್ಲಿ ಆರ್ಥಿಕ ಬಲಾಢ್ಯವರ್ಗವೂ ವಿವಿಧ ಪ್ರಮಾಣದಲ್ಲಿ ಹುಟ್ಟಿದ್ದರೂ ಮೂಲ ನೆಲೆಯ ಅಲಕ್ಷಿತ ವಲಯವನ್ನು ಪರಿಗಣಿಸಿ ಪರಿಶೀಲಿಸಬೇಕು; ಜೊತೆಗೆ ಅಲಕ್ಷಿತ ವಲಯದಿಂದ ಬಂದು ಬಲಾಢ್ಯರಾದವರ ವರ್ತನಾ ಕಥನವು ಸಾಹಿತ್ಯದಲ್ಲಿದ್ದರೆ ಅದನ್ನೂ ಗುರುತಿಸಬೇಕು. ಆದರೆ 'ಅಲಕ್ಷಿತ ಲೋಕದ ಸಂಕಥನ' ದ ಪರಿಶೀಲನೆಯು ಎಲ್ಲ ಜಾತಿ, ವರ್ಣಗಳ ಆರ್ಥಿಕ ಅಲಕ್ಷಿತ ಲೋಕದ ಪರಿಶೀಲನೆಯಲ್ಲ ಎನ್ನುವುದು ನನ್ನ ನಮ್ರ ಹಾಗೂ ನಿರ್ದಿಷ್ಟ ನಿಲುವು.

ನಾನು ಯಾಕೆ ಇಷ್ಟೆಲ್ಲ ಹೇಳಿದೆ ಎಂಬುದಕ್ಕೆ ಒಂದು ಪ್ರಸಂಗವನ್ನು ಗಮನಕ್ಕೆ ತರುತ್ತೇನೆ. ಸುಮಾರು ಮೂರು ದಶಕಗಳ ಹಿಂದಿನ ಮಾತು. ಕೇಂದ್ರ ಸಾಹಿತ್ಯ ಅಕಾಡೆಮಿಯು 'ಸಾಹಿತ್ಯ ಮತ್ತು ಸಾಮಾನ್ಯ ಮನುಷ್ಯ' ಎಂಬ ಚಿಂತನಾ ಗೋಷ್ಠಿಯೊಂದನ್ನು ಬೆಂಗಳೂರಿನಲ್ಲಿ ಆಯೋಜಿಸಿತ್ತು. ವಿವಿಧ ರಾಜ್ಯಗಳ ಪ್ರಸಿದ್ಧ ಸಾಹಿತಿಗಳು ಭಾಗವಹಿಸಿದ್ದರು. ಕನ್ನಡದ ಮಾಸ್ತಿಯವರು ಮತ್ತು ತೆಲುಗಿನ ಕ್ರಾಂತಿಕಾರಿ ಕವಿ 'ಶ್ರೀಶ್ರೀ'ಯವರೂ ಇದ್ದರು. ಹೇಗೆ ವಿಭಿನ್ನ ವ್ಯಕ್ತಿತ್ವ ಮತ್ತು ಅಭಿವ್ಯಕ್ತಿ ಮಾದರಿಯ ಬರಹಗಾರರು ಬಂದಿದ್ದರು ಎಂಬುದಕ್ಕೆ ಈ ಇಬ್ಬರ ಹೆಸರನ್ನು ಹೇಳಿದ್ದೇನಷ್ಟೆ. ಸರಿ; 'ಸಾಮಾನ್ಯ ಮನುಷ್ಯ' ಎಂದರೆ ಯಾರು ಎಂಬ ಚರ್ಚೆ ಆರಂಭವಾಯಿತು. ಆಯೋಜಕರಿಗೆ ಮತ್ತು ಶ್ರೀಶ್ರೀಯವರಾದಿಯಾಗಿ ಅನೇಕರಿಗೆ 'ಸಾಮಾನ್ಯ ಮನುಷ್ಯ' ಎಂದರೆ ಸಾಮಾಜಿಕವಾಗಿ ಆರ್ಥಿಕವಾಗಿ ಬಲಾಢ್ಯನಲ್ಲದ ಮನುಷ್ಯ ಎಂಬುದು ಸ್ಪಷ್ಟವಾಗಿದೆ. ಎಲ್ಲ ಜಾತಿ, ವರ್ಣ, ಧರ್ಮಗಳಲ್ಲಿರುವ ಬಡವರು ಒಟ್ಟಾರೆ ಈ ವ್ಯಾಪ್ತಿಗೆ ಬರುತ್ತಿದ್ದರು. ಸಾಮಾಜಿಕ ಶೋಷಿತರೂ ಹುಟ್ಟಿನಿಂದಲೇ ಸಾಮಾನ್ಯ ಮನುಷ್ಯರಾಗಿದ್ದರು. ಆದರೆ ಕೆಲವರು 'ಮಾನಸಿಕವಾಗಿ' ಮೇಲ್ವರ್ಗದವರೂ ಸಾಮಾನ್ಯ ಮನುಷ್ಯರಾಗುತ್ತಾರೆ ಎಂಬ ವಾದವನ್ನು ಮಂಡಿಸಿದರು. ಸಾಮಾಜಿಕವಾಗಿ ಮೇಲ್ಜಾತಿ ಆರ್ಥಿಕವಾಗಿ ಮೇಲ್ವರ್ಗ ಆದವರೂ ಸಾಮಾನ್ಯರ ಬಗ್ಗೆ ಸಹಾನುಭೂತಿ ಹೊಂದಿದ್ದರೆ, ಅವರೂ ಸಾಮಾನ್ಯ ಮನುಷ್ಯರೇ ಆಗುತ್ತಾರೆ ಎಂದು ಕೆಲವರು ಪ್ರಬಲವಾಗಿ ವಾದಿಸಿದರು. ಆದ್ದರಿಂದ 'ಸಾಮಾನ್ಯ ಮನುಷ್ಯ' ನಿರ್ವಚನದಲ್ಲಿ ಸಾಮಾಜಿಕ, ಆರ್ಥಿಕ ಎಂಬ ಪದಗಳ ಜೊತೆ ಮಾನಸಿಕ ಎಂಬುದನ್ನೂ ಸೇರಿಸಬೇಕು ಎಂದರು. ಇದಕ್ಕೆ ಎದುರಾಗಿ ಕೆಲವರು ಅಸಾಮಾನ್ಯರಿಗೆ ಸಾಮಾನ್ಯರಿಗೆ ಸಹಾನುಭೂತಿಯಿದ್ದರೆ, ಅಸಾಮಾನ್ಯ ಸಹಾನುಭೂತಿದಾರರು ಎನ್ನಬಹುದೇ ಹೊರತು ಅವರನ್ನೇ 'ಸಾಮಾನ್ಯ ಮನುಷ್ಯರು' ಎನ್ನಲಾಗದು ಎಂಬ ಪ್ರತಿವಾದದೊಂದಿಗೆ ಅಂಥವರ ಸಾಹಿತ್ಯದಲ್ಲೂ ಇರುವ ಸಾಮಾನ್ಯ ಮನುಷ್ಯರ ಬದುಕನ್ನು ಖಂಡಿತ ಗುರುತಿಸಬೇಕೆಂದರು. ಒಟ್ಟಾರೆ 'ಸಾಮಾನ್ಯ ಮನುಷ್ಯ' ಎಂದರೆ ಯಾರು ಎಂದು ನಿರ್ವಚಿಸಿಕೊಳ್ಳುವುದಕ್ಕೆ ಇಡೀ ದಿನವನ್ನು 'ಕಳೆಯಲಾಯಿತು'. 'ಅಲಕ್ಷಿತ ಲೋಕದ ಸಂಕಥನ'ವನ್ನು ನಿರ್ವಚಿಸಿಕೊಳ್ಳುವ ಮತ್ತು ಗುರುತಿಸುವ ಕ್ರಿಯೆಯಲ್ಲಿ ಅಂತಹ ಗೊಂದಲವಾಗಬಾರದು.

ಇಷ್ಟಾದರೂ ಒಂದು ಸ್ಪಷ್ಟನೆಯನ್ನು ಕೊಡಬಯಸುತ್ತೇನೆ. ಇದು ಸ್ಪಷ್ಟನೆಯೂ ಹೌದು, ಸಮರ್ಥನೆಯೂ ಹೌದು. ಮುಚ್ಚುಮರೆಯಿಲ್ಲ. ಇದು ಸಂಸ್ಕೃತಿಗಳ ಅಧ್ಯಯನದಲ್ಲಿ ಬಳಕೆಯಾದ ಪ್ರಧಾನ-ಅಧೀನ, ಮುಖ್ಯ-ಉಪ ಎಂಬ ಪರಿಕಲ್ಪನೆಗಳಿಗೆ ಸಂಬಂಧಿಸಿದ್ದು. ಈ ಪರಿಕಲ್ಪನೆಗಳ ಪ್ರಸ್ತಾಪವು ಮಾಹಿತಿ ಪತ್ರ (ಬ್ರೋಷರ್)ದಲ್ಲೂ ಹೀಗಿದೆ : 'ಕನ್ನಡದಲ್ಲಿ ೭೦ರ ದಶಕದಾಚೆ ಪ್ರಧಾನ-ಅಧೀನ, ಮುಖ್ಯ-ಉಪ ಎಂಬ ಪರಿಕಲ್ಪನೆಗಳಲ್ಲಿ ಸಂಸ್ಕೃತಿ ಅಧ್ಯಯನಗಳು ನಡೆದವು. ಇದುವರೆಗೂ ಅಂಚಿಗೆ ತಳ್ಳಲ್ಪಟ್ಟ ಲೋಕವೊಂದು ಮೈಮುರಿದು ಎದ್ದು ನಿಲ್ಲಲು ಸಾಮಾಜಿಕ ಚಳವಳಿಗಳು ಕಾರಣವಾದವು. ಆಧುನಿಕೋತ್ತರ ಚಿಂತನೆಗಳು ಕೇಂದ್ರ ಮತ್ತು ಅಂಚು ಎಂಬ ಪರಿಕಲ್ಪನೆಯನ್ನೇ ಬಯಲುಗೊಳಿಸಿ, ನಮ್ಮ ಅಧ್ಯಯನಗಳು ಭಿನ್ನ ಅರ್ಥೈಸುವಿಕೆಗೆ, ಪುನರ್‌ವ್ಯಾಖ್ಯಾನಕ್ಕೆ ಒಳಗಾಗಬೇಕೆಂಬ ಹೊಳಹು ನೀಡಿದವು. 'ಪ್ರಧಾನ' ಮತ್ತು 'ಮುಖ್ಯ'ವೆಂಬ ಮೊಹರು ಹೊತ್ತ ಕಲ್ಪಿತ ವಾಸ್ತವವನ್ನು ನಿರಾಕರಿಸದೆ ಹೊಸದನ್ನು ಕಾಣಲು ಸಾಧ್ಯವಿಲ್ಲ. ಸಮಗ್ರವಾದುದನ್ನು ಕಟ್ಟಲು ಸಾಧ್ಯವಿಲ್ಲ. ದಲಿತರು, ಅಲ್ಪಸಂಖ್ಯಾತರು, ಅಲೆಮಾರಿಗಳು, ಮಹಿಳೆಯರು, ಲೈಂಗಿಕ ಅಲ್ಪಸಂಖ್ಯಾತರು ಇವರೆಲ್ಲರ ಲೋಕದೃಷ್ಟಿಯನ್ನು ಅಲಕ್ಷಿಸಿದ ನಮ್ಮ ಗ್ರಹಿಕೆಗಳು ಅಪೂರ್ಣ. 'ಮುಖ್ಯ'ವೆಂಬುದೇ ಜ್ಞಾನವೆಂದು ಬಿಂಬಿಸುತ್ತ ಹೋದಾಗ, ಜ್ಞಾನವು ಅಧಿಕಾರವಾಗುತ್ತದೆ. ಹಿಂಸೆಯಾಗುತ್ತದೆ. ಆದ್ದರಿಂದ ಈ ಅಲಕ್ಷಿತ ಲೋಕಗಳ ಸಂಕಥನವನ್ನು ಕಟ್ಟುವುದು ಅಗತ್ಯ.'

ಆಶಯ ನುಡಿಯಂತಿರುವ ಈ ಮಾತುಗಳು ಗಂಭೀರವೂ ಗಹನವೂ ಆದ ವಿಚಾರವನ್ನು ಒಳಗೊಂಡಿದೆ. ಆದರೆ 'ಪ್ರಧಾನ ಮತ್ತು ಮುಖ್ಯವೆಂಬ ಮೊಹರು ಹೊತ್ತ ಕಲ್ಪಿತ ವಾಸ್ತವ' ಎಂದು ಯಾಕೆ ತಿಳಿಯಲಾಯಿತೆಂದು ನನಗೆ ತಿಳಿಯುತ್ತಿಲ್ಲ. ನನ್ನ ಅಭಿಪ್ರಾಯದಲ್ಲಿ ಅದು ಕಲ್ಪಿತ ವಾಸ್ತವ ಅಲ್ಲ; ಕಟುವಾಸ್ತವ. ಕಲ್ಪಿತ ಎಂದಾದರೆ ಅದು ಇಲ್ಲವೆಂದೂ ಹಾಗೆ ಭಾವಿಸಲಾಗಿದೆಯೆಂದೂ ಅರ್ಥವಾಗುತ್ತದೆ. ನನ್ನ ತಿಳುವಳಿಕೆಯಲ್ಲಿ ನಮ್ಮ ಸಾಮಾಜಿಕ ಸಂರಚನೆಯಲ್ಲಿ ಪ್ರಧಾನ ಮತ್ತು ಮುಖ್ಯವೆಂಬ ನೆಲೆಗಳು ಅಂತರ್ಗತವಾಗಿವೆ; ಕಟುವಾಸ್ತವವಾಗಿವೆ. ಈ ಕಟುವಾಸ್ತವಕ್ಕೆ ಎದುರಾಗಿ ಜ್ಞಾನದ ಅಹಂಕಾರವನ್ನು ಬೆತ್ತಲುಗೊಳಿಸುವುದು ಮುಖ್ಯ. ಈ ಮುಖ್ಯ ಕ್ರಿಯೆಯನ್ನು ನಮ್ಮ ಸಾಮಾಜಿಕ ಚಳುವಳಿಗಳು ಮಾಡುತ್ತ ಬಂದಿವೆ. ಚಳುವಳಿಗಳ ಕ್ರಿಯಾಶಕ್ತಿ ಮತ್ತು ಸ್ವರೂಪದಲ್ಲಿ ಆಗೀಗ ವ್ಯತ್ಯಾಸಗಳಾಗಿರುವುದು ಸತ್ಯವಾದರೂ ಅವುಗಳ ಪ್ರಭಾವ, ಪರಿಣಾಮಗಳನ್ನು ಕಡೆಗಣಿಸುವಂತಿಲ್ಲ (ಸಮ್ಮೇಳನದ ಮಾಹಿತಿ ಪತ್ರದ ನುಡಿಗಳಲ್ಲೂ ಚಳವಳಿಗಳ ಪ್ರಭಾವವನ್ನು ಸರಿಯಾಗಿ ಪ್ರಸ್ತಾಪಿಸಲಾಗಿದೆ). ಪ್ರಧಾನ, ಮುಖ್ಯ ಎಂಬ ಸಾಮಾಜಿಕ-ಸಾಂಸ್ಕೃತಿಕ ರೂಪಗಳು ಘನೀಕೃತವಾಗಿ ನಮ್ಮೆದುರಿಗೆ ಇರುವುದರಿಂದಲೇ ಅವುಗಳಲ್ಲಿರುವ ಅಸಮಾನತೆಯ ನೀತಿ-ನಿಲುವುಗಳನ್ನು ಧಿಕ್ಕರಿಸಿ ಹೊಸ ದೃಷ್ಟಿಗೆ ದಾರಿ ಮಾಡಲಾಗುತ್ತಿದೆ. ಹೀಗೆ ದಾರಿ ಮಾಡುತ್ತಿರುವ ಪ್ರತಿರೋಧ ಶಕ್ತಿಗಳು ಅಧೀನ ಹಾಗೂ ಉಪ ವಲಯಗಳಿಂದ ಹುಟ್ಟಿಬಂದಿವೆ. ಆದ್ದರಿಂದ ಪ್ರಧಾನ, ಮುಖ್ಯವೆಂಬ ಕಟುವಾಸ್ತವಗಳ ಜೊತೆಗೇ ಇರುವ 'ಅಧೀನ' ಮತ್ತು 'ಉಪ' ವಲಯಗಳನ್ನೂ ಕಟುವಾಸ್ತವಗಳೆಂದೇ ಪರಿಗಣಿಸಬೇಕು. ಅದೇ ಸಂದರ್ಭದಲ್ಲಿ ಅಧೀನ ಹಾಗೂ ಉಪ ಎಂಬ ನೆಲೆಗಳು ಕಡಿಮೆ, ಕೀಳು ಎಂಬ ನಿಲುವುಗಳಿಗೆ

ಬರಬಾರದು. ಅದು ತಪ್ಪು ಅರ್ಥೈಸುವಿಕೆ. ಶ್ರೇಣಿಗಳಿರುವ ಸಮಾಜದಲ್ಲಿ ಮೇಲುಸ್ತರ ಮತ್ತು ಕೆಳಸ್ತರಗಳ ಕಟುವಾಸ್ತವ ಇದ್ದೇ ಇರುತ್ತದೆ. ಆದರೆ ಕೆಳಸ್ತರಗಳು ಕೀಳುಸ್ತರಗಳಲ್ಲ. ಮೇಲುಸ್ತರದವರು 'ಕೀಳು' ಎಂದು ಕರೆದರೆ ಅದನ್ನು ವಿರೋಧಿಸಿ ಸಮಾನತೆಯನ್ನು ಸಾರುವ ಸ್ತರಗಳನ್ನಾಗಿ ಕೆಳಸ್ತರಗಳನ್ನು ಕಾಣಬೇಕಾಗುತ್ತದೆ.

ನಾನು ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷನಾಗಿದ್ದಾಗ (೧೯೯೧–೯೪) 'ಕನ್ನಡ ಸಾಹಿತ್ಯ ಪುನರ್‌ಮೌಲ್ಯೀಕರಣ ಮಾಲೆ'ಯಡಿಯಲ್ಲಿ ಬಂದ ೧೨ ಗ್ರಂಥಗಳಲ್ಲಿ 'ಕನ್ನಡ ಸಾಹಿತ್ಯದಲ್ಲಿ ಪ್ರಧಾನ ಮತ್ತು ಅಧೀನ ಸಂಸ್ಕೃತಿ' ಎಂಬ ಗ್ರಂಥವೂ ಒಂದು. ಜೊತೆಗೆ 'ಉಪಸಂಸ್ಕೃತಿ ಅಧ್ಯಯನ ಮಾಲೆ'ಯಲ್ಲಿ ವಿವಿಧ ಬುಡಕಟ್ಟು, ಅಲೆಮಾರಿ, ಅರೆ ಅಲೆಮಾರಿ ಜನಾಂಗಗಳ ಜೀವನ ವಿಧಾನ, ಕಲೆ, ಸಾಹಿತ್ಯಗಳನ್ನೊಳಗೊಂಡ ೩೮ ಸಂಶೋಧನಾ ಕೃತಿಗಳನ್ನು ಪ್ರಕಟಿಸಲಾಗಿತ್ತು. ಕರ್ನಾಟಕದ ಅನೇಕ ಹಿರಿಯ ಹಾಗೂ ಯುವ ಲೇಖಕ–ಲೇಖಕಿಯರನ್ನು ಈ ಯೋಜನೆಗಳು ಒಳಗೊಂಡಿದ್ದವು. ಈ ಯೋಜನೆಗಳಲ್ಲಿ ಬಳಸಿದ 'ಅಧೀನ ಸಂಸ್ಕೃತಿ' ಮತ್ತು 'ಉಪಸಂಸ್ಕೃತಿ' ಎಂಬ ಹೆಸರಿನ ಬಗ್ಗೆ ಕೆಲವರು ಅತೃಪ್ತಿ ವ್ಯಕ್ತಪಡಿಸಿದ್ದಾರೆ. ಆದರೆ ಅಂಥವರ ಪ್ರತಿವಾದದಲ್ಲಿ ಪರಿಹಾರ ಕಾಣಲಿಲ್ಲ. ಅತೃಪ್ತಿ ಕಂಡದ್ದು ನಿಜ. ಇರಲಿ, ಭಿನ್ನಾಭಿಪ್ರಾಯವನ್ನು ಗೌರವಿಸೋಣ. ಆದರೆ ಅಧೀನ ಮತ್ತು ಉಪ ಎಂದಕೂಡಲೇ ಕಡಿಮೆ ದರ್ಜೆ ಎಂದು ಭಾವಿಸಿದ್ದು ಮಾತ್ರ ಅತಾರ್ಕಿಕ ಮತ್ತು ಅತಾತ್ವಿಕ. ನಾನು ಮೊದಲೇ ಹೇಳಿದಂತೆ ನಮ್ಮ ವ್ಯವಸ್ಥೆಯಲ್ಲಿ ಶ್ರೇಣಿಗಳಿವೆ. ಶ್ರೇಣಿಗಳ ಗುರುತಾಗಿ ಕೆಲವು ಹೆಸರುಗಳಿವೆ. ಹೆಸರುಗಳೇ ಎಲ್ಲವೂ ಅಲ್ಲವಾದರೂ ನಿರ್ದಿಷ್ಟ. ವಾಸ್ತವದ ಕುರುಹುಗಳಂತೂ ಹೌದು.

ನಮ್ಮ ಸಾಮಾಜಿಕ–ಸಾಂಸ್ಕೃತಿಕ ವ್ಯವಸ್ಥೆಯಲ್ಲಿ ಪ್ರಧಾನಧಾರೆ ಮತ್ತು ಅಧೀನ ಧಾರೆಗಳಿರುವುದು ವಾಸ್ತವ. ಅಧೀನ ಧಾರೆಗಳು ಅವಮಾನ ಅನುಭವಿಸಿ, ಕಡೆಗೆ ಜಾಗೃತರಾಗುತ್ತಿರುವುದರಿಂದಲೇ ಸ್ವಾಭಿಮಾನಿ ಸಾಮಾಜಿಕ ಚಳವಳಿಗಳು ಹುಟ್ಟಿವೆ. ನಾವು ಅಧೀನರಾಗಿರುವುದಿಲ್ಲ ಎಂದು ಸೆಡ್ಡು ಹೊಡೆದಿವೆ. ಅಧೀನವಾಗಿಸಿಕೊಂಡ ಪ್ರಧಾನದ ವಿರುದ್ಧ ದನಿ ಎತ್ತಿವೆ. ಅಧೀನ ಎನ್ನುವುದು ವಸ್ತುಸ್ಥಿತಿಯನ್ನು ಸೂಚಿಸುತ್ತದೆಯೇ ಹೊರತು ಅಧೀನವಾಗಿಯೇ ಇರಬೇಕೆಂದು ಹೇಳುವುದಿಲ್ಲ. ಸಾಮಾಜಿಕ–ಸಾಂಸ್ಕೃತಿಕ ವ್ಯವಸ್ಥೆಯಲ್ಲಿ ಮಾತ್ರವಲ್ಲ ಆಡಳಿತ ವ್ಯವಸ್ಥೆಯಲ್ಲಿ ಪ್ರಧಾನ–ಅಧೀನ ವಾಸ್ತವ ಢಾಳಾಗಿ ಕಾಣುತ್ತದೆ. ಹಾಗೆಂದ ಕೂಡಲೇ ಅಧೀನರು ಅವಮಾನಿತರಾಗಿ ಇರಬೇಕೆಂದಲ್ಲ. ಮನುಷ್ಯ ಸಹಜ ಗೌರವ, ಘನತೆಯನ್ನು ಸಾಮಾಜಿಕ, ಸಾಂಸ್ಕೃತಿಕ, ಆಡಳಿತಾತ್ಮಕ ವ್ಯವಸ್ಥೆಯಲ್ಲಿ ಬಯಸುವುದು ಮತ್ತು ಸ್ಥಾಪಿಸುವುದು ಅಗತ್ಯ. ಈ ಅಗತ್ಯ ಪೂರೈಕೆಗಾಗಿ ಪ್ರಧಾನ ಮತ್ತು ಅಧೀನ ಗುರುತುಗಳ ಅರಿವು ಅಪೇಕ್ಷಣೀಯ. ಆದರೆ ಅಧೀನವೆನ್ನುವುದು ಸದಾ ಅಧೀನವಾಗಿರಬೇಕಿಲ್ಲ. ಜನಮುಖಿ ಪ್ರತಿರೋಧ ಪ್ರಕ್ರಿಯೆ ಇಲ್ಲಿ ಪ್ರಧಾನವಾಗಬೇಕು. 'ಉಪಸಂಸ್ಕೃತಿ'ಯೆಂಬ ಪರಿಕಲ್ಪನೆ ಮತ್ತು ಪರಿಭಾಷೆಗೂ ಇದೇ ತಾತ್ವಿಕತೆಯನ್ನು ಅನ್ವಯಿಸಬೇಕು. ನಮ್ಮದು ಶ್ರೇಣೀಕೃತ ಸಮಾಜ ಎಂಬುದನ್ನು ಒಪ್ಪಿಕೊಳ್ಳುವುದಾದರೆ ಶ್ರೇಣಿಗಳ ವಾಸ್ತವವನ್ನು ಒಪ್ಪಬೇಕು. ಆ ಮೂಲಕವೇ ಶ್ರೇಣೀಕೃತ ವ್ಯವಸ್ಥೆಯನ್ನು ಪ್ರಶ್ನಿಸಬೇಕು.

ನಾನು ಕರ್ನಾಟಕ ಸಾಹಿತ್ಯ ಅಕಾಡೆಮಿಯಲ್ಲಿ 'ಉಪಸಂಸ್ಕೃತಿ ಅಧ್ಯಯನ ಯೋಜನೆ ಮಾಲೆ'ಯನ್ನು ರೂಪಿಸಿದಾಗ ಯಾರೂ ಈ ಹೆಸರಿಗೆ ಆಕ್ಷೇಪ ವ್ಯಕ್ತಪಡಿಸಿರಲಿಲ್ಲ. ಯೋಜನೆ ಚಾಲ್ತಿಗೆ ಬಂದು ಬಹಿರಂಗವಾದ ಮೇಲೂ ನನಗೆ ಆಕ್ಷೇಪಗಳಾವುವೂ ತಲುಪಲಿಲ್ಲ. ಪುಸ್ತಕಗಳು ಪ್ರಕಟವಾದ ಮೇಲೆ ಕೆಲವರು ಆಕ್ಷೇಪಗಳನ್ನು, ಇನ್ನು ಕೆಲವರು ಸಲಹೆರೂಪದ ಮಾತುಗಳನ್ನೂ ಹೇಳಿದರು. ಉಪಸಂಸ್ಕೃತಿ ಎನ್ನುವ ಬದಲು ಸಹಸಂಸ್ಕೃತಿ, ಮೂಲಸಂಸ್ಕೃತಿ, ತಳಸಂಸ್ಕೃತಿ ಎಂದು ಕರೆಯಬಹುದಿತ್ತು ಎಂದವರೂ ಉಂಟು. ಬುಡಕಟ್ಟು, ಅಲೆಮಾರಿ, ಅರೆ ಅಲೆಮಾರಿ ಮುಂತಾದ ವಿರಳ ಜನಾಂಗಗಳ ಸಂಸ್ಕೃತಿಯು ಇಂದು ಬಹುಸಂಖ್ಯಾತ ನೆಲಸಿಗರ ಸಂಸ್ಕೃತಿಗೆ ಸಹವರ್ತಿಯಾಗಿರುವುದಿಲ್ಲ. ಆ ಜನಾಂಗಗಳ ಸಂಸ್ಕೃತಿಗಳೇ ವಿಭಿನ್ನ. ಆದ್ದರಿಂದ 'ಸಹಸಂಸ್ಕೃತಿ' ಎಂದು ಕರೆಯಲಾಗದು. ಇನ್ನು ಮೂಲ ಅಥವಾ ತಳ ಸಂಸ್ಕೃತಿಯೆನ್ನೋಣವೆಂದರೆ ಅತ್ಯಂತ ಮೂಲದಲ್ಲಿ/ತಳಮೂಲದಲ್ಲಿ ಮನುಷ್ಯರು ಮರದ ಪೊಟರೆ, ಗುಹೆ ಮುಂತಾದ ಊರೇ ಇಲ್ಲದ ಕಡೆ ವಾಸಿಸುತ್ತಿದ್ದರು. ಇಂದಿನ ಬುಡಕಟ್ಟುಗಳು, ಊರಂಚಿನಲ್ಲಿ,



# ಹೆಣ ಹೆಗಲು

ಅಖಂಡ ಭೂಮಿಯ ಮೇಲೆ
ಧರ್ಮಸಾಮ್ರಾಜ್ಯ ಕಟ್ಟಬೇಕೆಂದವನನ್ನು
ಆಕಾಶದಲ್ಲಿ ದಫನ್ ಮಾಡಲಾಯಿತು
ಜಹಾಂಪನರು ಮುತ್ತಿನ ಉಯ್ಯಾಲೆಯಲಿ
ತೂಗಿದರು
ಅವರ ಖಬರ್‌ಗಳ ಮೇಲೆ
ನಾಯಿಗಳು ಮಲಗಿದವು

ಧರ್ಮಯುದ್ಧಕ್ಕಾಗಿ ಶತ್ರುವನ್ನು ಸುಡಲು
ಮೈತುಂಬ ಮದ್ದು ಕಟ್ಟಿಕೊಂಡವರು
ಅವರ ಕಫನ್ನಿಗೂ ಹಿಡಿಮೈ ಸಿಗದೆ
ಶತ್ರುವಿನಿಂದ ಸುಟ್ಟುಹೋದರು
ಅಗೋ
ಆ ಮರುಭೂಮಿಯತ್ತ ನೋಡಿ
ಮರಳ ದಿನ್ನೆಗಳೋ, ಸಮಾಧಿಗಳೋ
ತಿಳಿಯದಂತೆ ರೇಗಿಸ್ತಾನ್ ಎಂಬುದು
ಖಬರಸ್ತಾನ್ ಆಗಿದೆ

ಇನ್ನು
ನನ್ನ ದಫನ್ನಿನ ಬಗ್ಗೆ ನಿಮಗೇಕಷ್ಟು ಕುತೂಹಲ
ಮಹಾನುಭಾವರೇ
ಈ ಉಸಿರೂ ಲೋಕದ ಋಣ
ಎಂದರಿತವನು ನಾನು
ಸಾವಿನ ಕುರಿತೇಕೆ ಖಾತ್ರಿ ನುಡಿಯಲಿ
ಹೆಣವಾದ ಬಳಿಕ 'ನಾನು' ಎಂಬುದು
ನಾನೆಂತು?
'ನೀನು' ಇರುವುದಾದರೆ ಅದು ನಿನ್ನ ಕರ್ಮ
ಕಫನ್ನಿನ ಬಟ್ಟೆ, ಜನಾಜಾದ ಅಲಂಕಾರ
ಖಬರಿನ ವಿನ್ಯಾಸ...ಗಳ ಬಗ್ಗೆ ನಾನೇಕೆ
ಇಚ್ಛಾಪತ್ರ ಬರೆಯಲಿ?
ಹೆಗಲು ಕೊಡುವ ಬಗ್ಗೆಯೂ
ತೀರ್ಮಾನಿಸುವವರು ನೀವೇ, ಯೋಚಿಸಿ
ಧರ್ಮಪಂಡಿತರೇ...
ಹೆಣಗಳ ಹೆಗಲ ಮೇಲೆ ಅಂತಿಮ ಪಯಣ
ಮಾಡಲಂತೂ ನನಗಿಷ್ಟವಿಲ್ಲ.

**ಪೀರ್‌ಬಾಷ ಬವಾಜಿ**
ಜೆ. ಪಿ. ನಗರ, ಕಾರಟಗಿ – ೫೮೩ ೨೨೯, ಗಂಗಾವತಿ ತಾಲ್ಲೂಕು, ಕೊಪ್ಪಳ ಜಿಲ್ಲೆ.

ಅರಣ್ಯ ಪ್ರದೇಶದ ಗುಡಿಸಲುಗಳಲ್ಲಿ, ಡೇರೆಗಳಲ್ಲಿ ವಾಸಿಸುತ್ತಿದ್ದಾರೆ. ಅಲೆಮಾರಿ, ಅರೆ ಅಲೆಮಾರಿಗಳು ಹೆಸರಿಗೆ ತಕ್ಕಂತೆ ಒಂದೇ ಕಡೆ ನೆಲೆಯೂರಲು ಸಾಧ್ಯವಾಗಿಲ್ಲ. ಸಾಧ್ಯವಾದ ಕಡೆ ಊರ ಹೊರಗೆ ವಾಸಿಸುತ್ತಿದ್ದಾರೆ. ಕಾಡುಮೇಡು, ಬೆಟ್ಟಗುಡ್ಡ, ಗುಹೆಗಳಲ್ಲಿದ್ದ ಮೂಲಜನರ ಸಂಸ್ಕೃತಿಯನ್ನು ಇವರೆಲ್ಲ ದಾಟಿ ಬಂದಿದ್ದಾರೆ. ಆದ್ದರಿಂದ ಮೂಲ ಅಥವಾ ತಳಸಂಸ್ಕೃತಿ ಎಂದು ಕರೆಯಲು ಹೇಗೆ ಸಾಧ್ಯ? ಇಷ್ಟಕ್ಕೂ 'ಉಪ' ಎಂದಕೂಡಲೇ ಕಡಿಮೆ, ಕೀಳು ಎಂದೇಕೆ ತಿಳಿಯಬೇಕು. ಹಾಗಾದರೆ ಕೆಳವರ್ಗ, ಹಿಂದುಳಿದ ವರ್ಗ ಎಂಬುದಕ್ಕೂ ಇದೇ ಮಾನದಂಡ ಅನ್ವಯಿಸಿ, ಮೇಲ್‌ವರ್ಗ ಮುಂದುವರಿದ ವರ್ಗ ಎಂದು ಕರೆಯುತ್ತಾರೆಯೆ? ತಳಸಮುದಾಯ ಎಂದರೆ ನಾವೇಕೆ ತಳದವರು ಎಂದು ಹೇಳಿ ಮೇಲ್ ಸಮುದಾಯ ಎನ್ನುತ್ತಾರೆಯೆ? ಅಲ್ಪಸಂಖ್ಯಾತರು ಎಂದಾಗ ನಾವೇಕೆ ಅಲ್ಪ ಎಂದು ಕೇಳಿ 'ಬಹುಸಂಖ್ಯಾತರು' ಎಂದು ಕರೆಯಲು ಒತ್ತಾಯಿಸುತ್ತಾರೆಯೆ? ಧಾರ್ಮಿಕ ಅಲ್ಪಸಂಖ್ಯಾತರು, ಭಾಷಾ ಅಲ್ಪಸಂಖ್ಯಾತರು ಎಂಬುದು ಸಂವಿಧಾನಾತ್ಮಕ ಪರಿಭಾಷೆಯಾಗಿಲ್ಲವೆ? 'ಉಪಕುಲಪತಿ' ಉಪರಾಷ್ಟ್ರಪತಿ, ಉಪನಗರ, ಉಪಭಾಷೆ – ಎಂದು ಗುರುತಿಸಿದಾಗ ಶ್ರೇಣಿಯನ್ನು ಹೇಳಿದಂತಾಗುತ್ತದೆಯೇ ಹೊರತು ಕೀಳು, ಕೆಳಮಟ್ಟ ಎಂಬ ಅರ್ಥಗಳನ್ನು ಫಲಿಸುವುದಿಲ್ಲ. ಆದ್ದರಿಂದ 'ಉಪಸಂಸ್ಕೃತಿ' ಎನ್ನುವುದು ಸಂಖ್ಯೆಯಲ್ಲಿ ಕಡಿಮೆಯಿರುವ ಅನೇಕ ಜನಾಂಗಗಳ ಪರಸ್ಪರ ಭಿನ್ನ ಜೀವನ ವಿಧಾನವನ್ನು ಗುರುತಿಸುವ ಒಂದು ಹೆಸರೇ ಹೊರತು ಅದು 'ಗುಣವಾಚಕ'ವಲ್ಲ. ಇಂತಹ ಅನೇಕ ಉಪಸಂಸ್ಕೃತಿಗಳು ಏಕಸಂಸ್ಕೃತಿ ಹೇರಿಕೆಗೆ ಎದುರಾಗುವ ಒಂದು ಒಕ್ಕೂಟವಾಗುತ್ತವೆ. ಭಾರತವು ಬಹುಸಂಸ್ಕೃತಿ ದೇಶ ಎನ್ನುವಾಗ ಹಿಂದೂ, ಮುಸ್ಲಿಂ, ಕ್ರೈಸ್ತ, ಜೈನ, ಸಿಖ್‌ನಂತಹ ಹೆಸರಾಂತ ಧರ್ಮ ಮತ್ತು ಸಂಸ್ಕೃತಿಗಳಲ್ಲದೆ ಉಪಸಂಸ್ಕೃತಿಗಳೂ ಪರಿಗಣನೆಗೆ ಒಳಪಡಬೇಕಾಗುತ್ತದೆ. ಉಪಸಂಸ್ಕೃತಿಗಳು ಒಟ್ಟಾರೆ ಭಾರತದ ಬಹುಸಂಸ್ಕೃತಿ ಪರಿಕಲ್ಪನೆಗೆ ಪ್ರಧಾನ ಕೊಡುಗೆಯಾಗುತ್ತವೆ.

ಅಲಕ್ಷಿತ ಲೋಕ ಸಂಕಥನಗಳು ಅನೇಕ ಉಪಸಂಸ್ಕೃತಿಗಳ ಧಾರೆಗಳ ಒಕ್ಕೂಟವಾಗಿದೆಯೆಂಬುದನ್ನೂ ಇಲ್ಲಿ ಗಮನಿಸಬೇಕು. ಈ ದೃಷ್ಟಿಯಲ್ಲಿ, ಅಲಕ್ಷಿತ ಲೋಕದ ಸಂಕಥನಗಳ ಅಧ್ಯಯನವು ಏಕ ಸಂಸ್ಕೃತಿ ಪ್ರತಿಪಾದನೆಗೆ ಒಡ್ಡಿದ ಪ್ರಬಲ ಪ್ರತಿರೋಧವೂ ಆಗುತ್ತದೆ. ಅಷ್ಟೇ ಅಲ್ಲ, ಸಂಘಟಿತ ಧರ್ಮಗಳ ಹುಸಿ ಶ್ರೇಷ್ಠತೆಗೆ ಉತ್ತರವೂ ಆಗುತ್ತದೆ. ಪ್ರತಿಭಟನೆಯ ಪರಿಭಾಷೆಯನ್ನು ಬಳಸದೆ ನಡೆಯುವ ಪರಿಶೋಧವು ತಂತಾನೆ ಬಹುತ್ವ ಭಾರತದ ಭಾಷೆಯಾಗಿ ಬಿಡುತ್ತದೆ. ಆಗ ಈ ಪರಿಶೋಧವು ಕೇವಲ ಸಾಹಿತ್ಯಕ ಆಯಾಮವನ್ನು ಒದಗಿಸುವುದಿಲ್ಲ. ಸಾಮಾಜಿಕ, ಸಾಂಸ್ಕೃತಿಕ ಆಯಾಮವನ್ನು ತಂತಾನೆ ಒದಗಿಸುತ್ತದೆ; ಸೈದ್ಧಾಂತಿಕ ರಾಜಕಾರಣಕ್ಕೂ ಕೊಡುಗೆ ನೀಡುತ್ತದೆ.

ಇನ್ನೊಂದು ಮಾತನ್ನೂ ಇಲ್ಲಿ ಹೇಳಬೇಕು. ಅಲಕ್ಷಿತ ಲೋಕದ ಸಂಕಥನಗಳನ್ನು ಶೋಧಿಸುವ, ನಿರೂಪಿಸುವ ಕೆಲಸದಲ್ಲಿ ನಿರ್ದಿಷ್ಟ ನಿರ್ಲಿಪ್ತತೆಯೂ ಬೇಕು. ಹಾಗೆಂದು ನಿರ್ಲಿಪ್ತತೆಯು ನಿಲುವಿಲ್ಲದ ನಪುಂಸಕತ್ವವಾಗಬಾರದು. ಅಧ್ಯಯನದ ಫಲಿತಗಳನ್ನು ಇರುವಂತೆಯೇ ತೆರೆದಿಡುವಲ್ಲಿ ನಿರ್ದಿಷ್ಟ ನಿರ್ಲಿಪ್ತತೆ ಮತ್ತು ಆ ಫಲಿತಗಳ ಸಾಮಾಜಿಕ ಬಳಕೆಯಲ್ಲಿ ನಿರ್ದಿಷ್ಟ ನಿಲುವು – ಎರಡೂ ಅಗತ್ಯ. ಅಲಕ್ಷಿತ ಲೋಕಕ್ಕೆ ಯಾವುದೇ ಪೂರ್ವಾಗ್ರಹವಿಲ್ಲದೆ ಪ್ರವೇಶ ಮಾಡಬೇಕು. ಆತ್ಮರತಿಯೂ ಇರಬಾರದು, ಆತ್ಮದ್ರೋಹವೂ ಇಣುಕಬಾರದು. ಇಷ್ಟಾನಿಷ್ಟಗಳನ್ನು ಮೊದಲೇ ರೂಪಿಸಿಕೊಂಡು ವೈಭವೀಕೃತಗೊಳಿಸುವುದು ಅಥವಾ ವಿರೋಧಿ ಒಳ ಸಂಭ್ರಮದಲ್ಲಿ ಸಣ್ಣವರಾಗುವುದು ಸಲ್ಲದು.

ಸಾಹಿತ್ಯದಲ್ಲಿ ಅಲಕ್ಷಿತ ಲೋಕದ ಚಹರೆಗಳು ಮೂಡಿರುವ ಪರಿಯನ್ನು ಪರಿಶೋಧಿಸುವುದು ಒಂದು ಮಹತ್ವದ ಕೆಲಸ. ಅಂತೆಯೇ ಪರಿಶೋಧದ ಫಲಿತಗಳನ್ನು ಪರ್ಯಾಯ ಸಂಸ್ಕೃತಿ ವಿನ್ಯಾಸಗಳೆಂದು ಪರಿಗಣಿಸುವುದೂ

ಮುಖ್ಯ. ಬಹುಮುಖ್ಯವಾಗಿ ಬದಲಾಗುತ್ತಿರುವ ಪ್ರಜಾಸತ್ತಾತ್ಮಕ ಸಂದರ್ಭದಲ್ಲಿ ನಮ್ಮ ಸಾಹಿತ್ಯವು ಅಲಕ್ಷಿತ ಲೋಕದೊಳಗಿನ ಸ್ಥಿತ್ಯಂತರಗಳನ್ನು ಹೇಗೆ ನಿರೂಪಿಸಿದೆಯೆಂಬುದನ್ನೂ ನೋಡಬೇಕು. ಸಂಭ್ರಮ ಮತ್ತು ಸಂಕಟಗಳ ಸತ್ಯವನ್ನು ಮನಗಾಣಬೇಕು, ಮನಗಾಣಿಸಬೇಕು. ಅದೇ ಸಂದರ್ಭದಲ್ಲಿ ಸಂಘಟಿತ ಮತ್ತು ಅಸಂಘಟಿತ ಅಲಕ್ಷಿತ ಲೋಕಗಳು ಸಾಹಿತ್ಯದಲ್ಲಿ ಎಷ್ಟರಮಟ್ಟಿಗೆ ಮತ್ತು ಹೇಗೆ ಅಭಿವ್ಯಕ್ತಗೊಂಡಿವೆಯೆಂಬ ವಾಸ್ತವವನ್ನು ಹೊರಗಾಣಿಸಬೇಕು. ಅಂದರೆ ಅಲಕ್ಷಿತ ಲೋಕದ ಸಂಕಥನಗಳ ಶೋಧವು ಏಕಕಾಲಕ್ಕೆ ಒಳಕಾಣ್ಕೆ ಮತ್ತು ಹೊರಕಾಣ್ಕೆಗಳನ್ನು ಒಳಗೊಂಡಿರಬೇಕಾಗುತ್ತದೆ. ಸಾಹಿತ್ಯದ ಒಳಗನ್ನು ಹುಡುಕುವ ಕಾಣ್ಕೆ ಮತ್ತು ಅದಕ್ಕೆ ಪೂರಕವಾಗಿ ಸಾಹಿತ್ಯೇತರ ಹೊರಶಿಸ್ತುಗಳಿಂದ ಪಡೆಯುವ ಕಾಣ್ಕೆ ಒಂದಾಗಿ ನಡೆಸುವ ಅಧ್ಯಯನ ಹೆಚ್ಚು ಉಪಯುಕ್ತ.



ಆಧುನಿಕ ಕನ್ನಡ ಸಾಹಿತ್ಯದಲ್ಲಿ ಅಲಕ್ಷಿತ ಲೋಕದ ಸಂಕಥನಗಳನ್ನು ಪರಿಶೀಲಿಸುವುದರ ಜೊತೆಗೆ ಅಲಕ್ಷಿತ ಲೋಕದ ಅಲಿಖಿತ ಸ್ವಯಂ ಸೃಷ್ಟಿಯಾದ ಜನಪದ ಸಾಹಿತ್ಯದೊಂದಿಗೆ ತೌಲನಿಕ ಅಧ್ಯಯನ ನಡೆಸುವುದು ಹೊಸದೊಂದು ನೆಲೆಗೆ ಕೊಂಡೊಯ್ಯುತ್ತದೆ. ಲಿಖಿತ ಮತ್ತು ಮೌಖಿಕ ಅಭಿವ್ಯಕ್ತಿಗಳ ಅನುಸಂಧಾನವು ಆಸಕ್ತಿದಾಯಕವಾದ ವಿಶಿಷ್ಟ ಅಧ್ಯಯನವಾಗುತ್ತದೆ. ಹೊಸ ಆಯಾಮಗಳ ಕಾಣಿಕೆಗೆ ಕಾರಣವಾಗುತ್ತದೆ. ಅಂತರ್‌ಶಿಸ್ತೀಯ ತೌಲನಿಕ ಮತ್ತು ಲಿಖಿತ–ಮೌಖಿಕ ತೌಲನಿಕ ಶೋಧವು ಹೊಸತುಗಳ ಉದ್ಘಾಟನೆಗೂ ಒತ್ತಾಸೆಯಾಗಬಹುದು. ಏನಿಲ್ಲದಿದ್ದರೂ ಇದೊಂದು ವಿಶಿಷ್ಟ, ವಿಭಿನ್ನ ಅಧ್ಯಯನ ಮಾದರಿಯಂತೂ ಆಗಬಹುದು.

ದೂರಾನ್ವಯವೆನ್ನಿಸಬಹುದಾದರೂ ಇನ್ನೊಂದು ವಿಷಯವನ್ನು ಇಲ್ಲಿ ಪ್ರಸ್ತಾಪಿಸಬಯಸುತ್ತೇನೆ. ಇದು ನೇರವಾಗಿ ಸಾಹಿತ್ಯ ಸಂಬಂಧಿ ವಿಷಯವಲ್ಲ. ರಾಜಕೀಯ ವಲಯದಲ್ಲಿ ವಿವಾದಾತ್ಮಕ ಚರ್ಚೆಯ ವಸ್ತುವಾಗಿರುವ ಏಕರೂಪ ನಾಗರಿಕ ಸಂಹಿತೆಯ ವಿಷಯ. ಈ ವಿಷಯ ಕುರಿತು ಚರ್ಚಿಸುವಾಗ ಅಥವಾ ವಾದ–ಪ್ರತಿವಾದ ಹೂಡುವಾಗ ಹಿಂದೂ–ಮುಸ್ಲಿಂ ಧರ್ಮಗಳೇ ಮುಖ್ಯ ಭೂಮಿಕೆಯಲ್ಲಿರುತ್ತವೆ. ಹೆಚ್ಚೆಂದರೆ ಇತರ ಅಲ್ಪಸಂಖ್ಯಾತ ಧರ್ಮಗಳೂ ಚರ್ಚೆಯ ವ್ಯಾಪ್ತಿಗೆ ಬಂದು ಹೋಗುತ್ತವೆ, ಯಾವುದೇ ಧರ್ಮದವರು ತಪ್ಪು ಮಾಡಿದಾಗ ಅಂದರೆ ಕಳ್ಳತನ, ಕೊಲೆ, ಸುಲಿಗೆ ಮುಂತಾದ ಅಪರಾಧಗಳನ್ನು ಮಾಡಿದಾಗ ನಮ್ಮ ದೇಶದ ಕಾನೂನು ಒಂದೇ ರೀತಿಯಲ್ಲಿ ಅನ್ವಯಿಸುತ್ತದೆ. ಆದರೆ ವಿವಾಹ, ವಿಚ್ಛೇದನ, ಆಸ್ತಿ ಹಂಚಿಕೆ, ಆಚರಣೆ ಮುಂತಾದ ನಾಗರಿಕ ಸಂಹಿತೆಗಳು ವಿಭಿನ್ನವಾಗಿಸುತ್ತವೆ. ಇಲ್ಲಿಯೂ ಯಾವುದೇ ಧರ್ಮದ ಅಮಾನವೀಯ ಆಚರಣೆ ಮತ್ತು ಸಂಹಿತೆಗಳನ್ನು ರದ್ದು ಮಾಡುವುದು, ಒಂದೇ ರೀತಿಯ ಕಾನೂನು ವ್ಯಾಪ್ತಿಗೆ ತರುವುದು ಸರಿಯಾದ ಕ್ರಮ. ಹೀಗೆ ಮಾಡುವಾಗ ಸಂಬಂಧಪಟ್ಟ ಸಂಹಿತೆ ಮತ್ತು ಆಚರಣೆಗಳು ಅಮಾನವೀಯವೆಂದು ಸಾಬೀತು ಮಾಡುವ ಸಾಕ್ಷ್ಯವಿರಬೇಕೆಂಬುದೂ ಸರಿ – ಆದರೆ ಅನೇಕ ವಿಭಿನ್ನ ಆಚರಣೆ, ಸಂಪ್ರದಾಯಗಳನ್ನುಳ್ಳ ಅಸಂಖ್ಯಾತ ಬುಡಕಟ್ಟು, ಅಲೆಮಾರಿ, ಅರೆ ಅಲೆಮಾರಿ, ಹಾಗೂ ದಲಿತ ಸಮುದಾಯಗಳ ಸಂಸ್ಕೃತಿಗಳನ್ನು ಏಕರೂಪ ನಾಗರಿಕ ಸಂಹಿತೆಗೆ ಒಳಪಡಿಸುವುದು ಹೇಗೆ ಸಾಧ್ಯ? ಮತ್ತು ಹೇಗೆ ಸಾಧು? ಹೀಗೆ ದೇಶಾದ್ಯಂತ ಇರುವ ಅಲಕ್ಷಿತರನ್ನು ಮತ್ತಷ್ಟು ಅಲಕ್ಷಿಸಿ ಏಕರೂಪ ನಾಗರಿಕ ಸಂಹಿತೆಯ ಪರವಾಗಿ ಪ್ರತಿಪಾದನೆ ಮಾಡುವುದು ಸೂಕ್ತ ದೃಷ್ಟಿಕೋನವಲ್ಲ. ಏಕರೂಪ ನಾಗರಿಕ ಸಂಹಿತೆಯ ಪ್ರಶ್ನೆ ಕೇವಲ ಬಹುಸಂಖ್ಯಾತ ಮತ್ತು ಅಲ್ಪಸಂಖ್ಯಾತ ಸಾಂಸ್ಥಿಕ ಧರ್ಮಗಳಿಗೆ ಸಂಬಂಧ ಪಟ್ಟಿದ್ದಲ್ಲಿ, ಸಾಂಸ್ಥಿಕ ಹಾಗೂ ಸಂಘಟನಾತ್ಮಕವಲ್ಲದ ನೂರಾರು ಜನಾಂಗಗಳು ನಮ್ಮ ದೇಶದಲ್ಲಿದ್ದು ಅವುಗಳ ಸಾಮಾಜಿಕ–ಸಾಂಸ್ಕೃತಿಕ ಸ್ವಾತಂತ್ರ್ಯವನ್ನೂ ಸಂರಕ್ಷಿಸ ಬೇಕಾಗಿದೆ. ಅವರಲ್ಲೂ ಅಮಾನವೀಯ ಆಚರಣೆಗಳಿದ್ದರೆ ವಿರೋಧಿಸೋಣ. ಆದರೆ ವಿವಾಹಾದಿ ವಿಶಿಷ್ಟ ನಂಬಿಕೆ ಮತ್ತು ನಿಯಮಗಳನ್ನು ಏಕರೂಪಕ್ಕೆ ತಂದರೆ ಸಾಂಸ್ಕೃತಿಕ ಅತಿಕ್ರಮಣವಾದೀತಲ್ಲವೆ ಎಂಬ ಪ್ರಶ್ನೆಯನ್ನೂ ಕೇಳಿಕೊಳ್ಳಬೇಕು. ಈ ಹಿನ್ನೆಲೆಯಲ್ಲಿ ಅಲಕ್ಷಿತ ಲೋಕದ ಸಂಕಥನಗಳ ಶೋಧದಿಂದ ಕಂಡುಬರುವ ಸಾಂಸ್ಕೃತಿಕ ವಿನ್ಯಾಸಗಳು ಮುಖ್ಯವಾಗುತ್ತವೆ. ನನ್ನ ಅನಿಸಿಕೆಯಲ್ಲಿ – ಅಲಕ್ಷಿತ ಲೋಕದ ಅಧ್ಯಯನದ ಫಲಿತಗಳು ಏಕರೂಪ ನಾಗರಿಕ ಸಂಹಿತೆಯ ಪ್ರತಿಪಾದನೆಯನ್ನು ಅಪ್ರಸ್ತುತಗೊಳಿಸುತ್ತವೆ. ಹೊಸ ಚರ್ಚೆ–ಚಿಂತನೆಗಳನ್ನು ಹುಟ್ಟುಹಾಕುತ್ತವೆ ಮತ್ತು ವಿಸ್ತರಿಸುತ್ತವೆ.

*(ಇದು ತುಮಕೂರು ವಿಶ್ವವಿದ್ಯಾಲಯದಲ್ಲಿ ನಡೆದ 'ಆಧುನಿಕ ಕನ್ನಡ ಸಾಹಿತ್ಯದಲ್ಲಿ ಅಲಕ್ಷಿತ ಲೋಕದ ಸಂಕಥನ' ಎಂಬ ಸಮಾವೇಶದ ಉದ್ಘಾಟನಾ ಭಾಷಣದ ಲಿಖಿತ ರೂಪ.)*

**ಪ್ರೊ॥ ಬರಗೂರು ರಾಮಚಂದ್ರಪ್ಪ**
೨೭೫, ೧೧ನೇ 'ಬಿ' ಅಡ್ಡರಸ್ತೆ, ಜೆ.ಪಿ. ನಗರ
೨ನೇ ಹಂತ, ಬೆಂಗಳೂರು – ೫೬೦ ೦೭೮






# ಒಂದು ಬದಲಾವಣೆ


ಸಿಂಧಿ ಮೂಲ :

**ವಾಸದೇವ್ ಮೋಹಿ ಸಿಧ್ವಾನಿ**

ಕನ್ನಡಕ್ಕೆ :

**ಡಾ॥ ಬಸವರಾಜ ಸಾದರ**


**ನಾ**ಳೆ ಬೆಳಿಗ್ಗೆ ನಾನು ಅವ್ವನನ್ನು ಕಣ್ಣನ್‌ನ ದರ್ಶನಕ್ಕೆ ಕರೆದೊಯ್ಯಬೇಕು. ಅಲ್ಲಿಗೆ ಹೋಗಲು ಮೂರು ತಾಸಾದರೂ ಬೇಕು. ಸಿಕ್ಕಾಪಟ್ಟೆ ಗದ್ದಲ ಬೇರೆ. ದರ್ಶನಂ ಪಡೆಯಲು ಉದ್ದನೆಯ ಸಾಲಿನಲ್ಲಿ ಬೇರೆ ನಿಲ್ಲಬೇಕು. ಅಲ್ಲಿಗೆ ಹೋಗುವ ಮೊದಲು ನಾನು ನನ್ನ ಎಲ್ಲ ಕೆಲಸಗಳನ್ನು ಮಾಡಿ ಮುಗಿಸಬೇಕು. ಅದೇನಾಗುತ್ತಿದೆಯೋ ಗೊತ್ತಿಲ್ಲ, ಮೊದಲಿನ ಹಾಗೆ ನನ್ನ ಕೆಲಸಗಳು ಸಮಯಕ್ಕೆ ಸರಿಯಾಗಿ ಮುಗಿಯುತ್ತಲೇ ಇಲ್ಲ. ಅದಕ್ಕಾಗಿ ಶಾಲೆಯಲ್ಲಿ ಹೆಚ್ಚು ಹೊತ್ತು ಕೆಲಸ ಮಾಡಬೇಕಾಗಿದೆ. ಇದರ ಜೊತೆಗೆ ಕಛೇರಿಯ ಕಾರಕೂನರು ಮಾಡುವ ಕೆಲಸದ ವಿಪರೀತ ಹೊರೆಯನ್ನು ಕೂಡ ನಾವೇ ನಿಭಾಯಿಸಬೇಕು. ಅದು ಪ್ರಿನ್ಸಿಪಾಲನ ಆಜ್ಞೆ. ಹಿಟ್ಲರ್‌ನಂಥ ಪ್ರಿನ್ಸಿಪಾಲನಿಗೆ ಎಲ್ಲರೂ ಹೆದರುವವರೆ. ಹೀಗಿರುವಾಗ ಬೆಕ್ಕಿಗೆ ಗಂಟೆ ಕಟ್ಟುವವರು ಯಾರು? ಆತನೋ ಪ್ರಿನ್ಸಿಪಾಲನಷ್ಟೇ ಅಲ್ಲ; ಟ್ರಸ್ಟಿನ ಕಾರ್ಯದರ್ಶಿ ಕೂಡ. ಇದೆಲ್ಲ, ಹಾಗಲಕಾಯಿಯೊಂದಿಗೆ ಬೇವಿನಕಾಯಿಯ ರಸವನ್ನು ಬೆರೆಸಿದ ಹಾಗಾಗಿದೆ. ಬ್ರಹ್ಮನು ಎಂತೆಂಥ ವಿಚಿತ್ರ ಪ್ರಾಣಿಗಳನ್ನು ನಿರ್ಮಿಸುತ್ತಾನಲ್ಲ!! ಆತನೋ, ಪ್ರತಿದಿನವೂ ದಿನಕ್ಕೊಂದು ಥರದ ವಿಚಿತ್ರ ಆದೇಶಗಳನ್ನು ಹೊರಡಿಸುತ್ತಲೇ ಇರುತ್ತಾನೆ. 'ಇನ್ನು ಮುಂದೆ ಕೈಯಿಂದ ಬರೆದ ಪ್ರಶ್ನೆಪತ್ರಿಕೆಗಳನ್ನು ಕೊಡುವಂತಿಲ್ಲ' ಎಂದು ಆ ಆಸಾಮಿ ಇತ್ತೀಚೆಗೆ ಹೊರಡಿಸಿದ ಆದೇಶವಂತೂ ಅಕ್ಷರಶಃ ನಮ್ಮ ನಿದ್ದೆಯನ್ನೇ ಹಾಳುಮಾಡಿದೆ. ಇನ್ನು ಮುಂದೆ ನಾವು ಪ್ರಶ್ನೆಪತ್ರಿಕೆಯನ್ನು ಸಿ.ಡಿ. ರೂಪದಲ್ಲಿ ಕೊಡಬೇಕಂತೆ, ಹಾಗೆ ಮಾಡುವುದರಿಂದ ಅದು ಬಹಿರಂಗವಾಗುವುದಿಲ್ಲವಂತೆ. ಅರೆ! ಹಲವಾರು ವರ್ಷಗಳಿಂದ ನಾವು ಕೈಬರಹದ ಪ್ರಶ್ನೆಪತ್ರಿಕೆಗಳನ್ನೇ ಕೊಡುತ್ತಿದ್ದೆವಲ್ಲ : ಅದರಿಂದ ಏನಾದರೂ ಸಮಸ್ಯೆಯಾಗಿತ್ತೆ? ಯಾರಾದರೂ ಆ ಮಹಾತ್ಮನಿಗೆ ಈ ಪ್ರಶ್ನೆಯನ್ನು ಕೇಳಬೇಕು. ಮತ್ತೆ ಅದೇ ಸಮಸ್ಯೆ; ಯಾರು ಕಟ್ಟಬೇಕು ಬೆಕ್ಕಿನ ಕೊರಳಿಗೆ ಗಂಟೆಯನ್ನು? ಕೂದಲು ಬೆಳ್ಳಗಾಗಲು ಆರಂಭಿಸಿದ ಈ ಹೊತ್ತಿನಲ್ಲಿ ಕಂಪ್ಯೂಟರನ್ನು ಕಲಿಯುವವರು ಯಾರು? ಅದು ಅಷ್ಟೇನೂ ಸರಳ ಕೆಲಸವಲ್ಲ. ದೇವರೆ, ಪುಣ್ಯಕ್ಕೆ ಪುರುಷೋತ್ತಮನ್‌ನ ಹತ್ತಿರ ಕಂಪ್ಯೂಟರ್ ಇದೆ. ಅವನಿಂದಲೇ ನಾನು ಅಷ್ಟಿಷ್ಟು ಟೈಪ್ ಮಾಡಲು ಕಲಿತಿದ್ದೇನೆ. ಆದರೆ ಎಲ್ಲ ಮಾಸ್ತರುಗಳ ಮಕ್ಕಳ ಹತ್ತಿರವೂ ಕಂಪ್ಯೂಟರ್‌ಗಳು ಇರಬೇಕಲ್ಲ? ಪಾಪದ ಜೀವಗಳು! ಅಂಥವರು ಹೊರಗಿನಿಂದ ಟೈಪ್ ಮಾಡಿಸಿ ತಂದರೆ ಪ್ರಶ್ನೆಪತ್ರಿಕೆಗಳು ಬಹಿರಂಗವಾಗದೆ ಇರುತ್ತವೆಯೆ? ಈ ಪ್ರಿನ್ಸಿಪಾಲನ ಮೆದುಳಿಗೆ ಅದೇನೋ ಅರೆಮರುಳಿರಬೇಕು.

ನಾನಿನ್ನೂ ಪ್ರಶ್ನೆಪತ್ರಿಕೆಯನ್ನು ಒಪ್ಪಿಸಬೇಕಿದೆ. ಆಶ್ಚರ್ಯವೆಂದರೆ, ಪ್ರಶ್ನೆಪತ್ರಿಕೆಯನ್ನು ಸಿದ್ಧಪಡಿಸುವ ಹೊತ್ತಿನಲ್ಲಿಯೇ ಕಂಪ್ಯೂಟರ್‌ನ ಕರ್ಸರ್ ಒಂದು ಕಡೆ ನಿಂತುಬಿಟ್ಟಿದೆ! ಗೊತ್ತಿಲ್ಲದ ನಾನು ಕಂಪ್ಯೂಟರ್‌ನ ಕೀಲಿಗಳನ್ನು ಎತ್ತಬೇಕತ್ತ ಒತ್ತಿದ ಕಾರಣಕ್ಕಾಗಿ ಒಂದು ಕಡೆ ನಿಂತ ಕರ್ಸರ್ ಎಷ್ಟೇ ಪ್ರಯತ್ನಿಸಿದರೂ ತನ್ನ ಜಾಗೆಯಿಂದ ಕದಲುತ್ತಲೇ ಇಲ್ಲ.

"ಪುರುಷೋತ್ತಮನ್..."

ಪುರುಷೋತ್ತಮನ್ ಒಳಗೆ ಬರುತ್ತಾನೆ. “ಹೇಳಿ ಅಪ್ಪಾ, ಏನು?”

ನಾನು ಅವನಿಗೆ ಕರ್ಸರ್ ಒಂದೇ ಕಡೆ ನಿಂತುದನ್ನು ಹೇಳುತ್ತೇನೆ. ಅವನು ಕಂಪ್ಯೂಟರ ಮೇಲೆ ಕೈಯಾಡಿಸುತ್ತ, ಕೆಲವು ಕೀಲಿಗಳನ್ನು ಒತ್ತುತ್ತಾನೆ. ತಕ್ಷಣ ಕರ್ಸರ್ ಓಡಾಡಲು ಆರಂಭಿಸುತ್ತದೆ.

“ನೀನು ಏನು ಮಾಡಿದೆ ಅನ್ನೋದನ್ನ ಹೇಳು ಮಗನೆ. ಅಂದರೆ, ಮತ್ತೊಮ್ಮೆ ಇದೇ ಸಮಸ್ಯೆ ಉಂಟಾದರೆ ತಕ್ಷಣ ನಾನು ಅದನ್ನು ಸರಿಪಡಿಸಿಕೊಳ್ಳಬಹುದು.”

“ಆಯ್ತು ಅಪ್ಪಾ, ಹೇಳ್ತೇನೆ. ಆದರೆ ಈಗಲ್ಲ: ನನಗೆ ತುಂಬ ನಿದ್ದೆ ಎಳೀತಿದೆ.”

ಗಡಿಯಾರದ ಕಡೆಗೆ ನೋಡುತ್ತೇನೆ. ಓ! ರಾತ್ರಿ ಹನ್ನೆರಡಾಗಿದೆ!! ಬೆಳಿಗ್ಗೆ ನಾನೂ ಬೇಗ ಬೇರೆ ಏಳಬೇಕು.

ಕಂಪ್ಯೂಟರನ್ನು ಬಂದ್ ಮಾಡುವುದು ಮಾತ್ರ ನನಗೆ ಗೊತ್ತಿದೆ. ಅದೂ ಪ್ರಾರಂಭದಲ್ಲಿ ಉಲ್ಟಾ-ಪಲ್ಟಾ ಆಗುತ್ತಿತ್ತು. ಒಂದು ದಿನ ನಾನು ಗೊತ್ತಿಲ್ಲದೆ, ನೇರವಾಗಿ ಬಂದ್ ಮಾಡಿಬಿಟ್ಟಿದ್ದೆ. ಅದನ್ನು ನೋಡಿದ ಪುರುಷೋತ್ತಮನ್ ಮಾತಿನಲ್ಲಿ ಏನೂ ಅನ್ನದಿದ್ದರೂ ಅವನ ಮುಖದ ಮೇಲೆ ಅತೃಪ್ತಿ ಹಾಗೂ ಸಿಟ್ಟಿನ ಲಕ್ಷಣಗಳು ಸ್ಪಷ್ಟವಾಗಿ ಎದ್ದು ಕಾಣುತ್ತಿದ್ದವು. ಆತ ತನ್ನ ಅಭ್ಯಾಸ ಮತ್ತು ಇತರ ಎಲ್ಲ ಕೆಲಸಗಳಿಗೂ ಕಂಪ್ಯೂಟರನ್ನೆ ಬಳಸುವುದು. ಹಾಗಿದ್ದರೂ ಅವನು ತಾಸುಗಟ್ಟಲೇ ಕಂಪ್ಯೂಟರ್ ಮುಂದೆ ಕುಳಿತು ಏನು ಮಾಡುತ್ತಾನೆಂಬುದು ನನಗೆ ಗೊತ್ತಿಲ್ಲ. ಅವನು ಹೆಚ್ಚು ಹೊತ್ತು ತನ್ನ ಗೆಳೆಯರೊಂದಿಗೆ ಚಾಟ್ ಮಾಡುವುದರಲ್ಲೇ ನಿರತನಾಗಿರುತ್ತಾನೆ. ಚಾಟ್ ಮಾಡುವುದರಿಂದ ನಮ್ಮ ಜ್ಞಾನವು ವೃದ್ಧಿಯಾಗುತ್ತದೆಯೆಂದು ಬೇರೆ ಆತ ಹೇಳುತ್ತಾನೆ. ಇಷ್ಟೆಲ್ಲ ಮಾಡುತ್ತಿದ್ದರೂ ಅವನ ಅಂಕಗಳಿಕೆಯಲ್ಲಿ ಏನೂ ಸುಧಾರಣೆ ಕಂಡಿಲ್ಲ. ಅವನು ಇಂಗ್ಲಿಷ್ ಮಾಧ್ಯಮದ ಮೂಲಕ ಕಲಿಯುತ್ತಿದ್ದಾನೆ. ನಾನೋ ಪಕ್ಕಾ ಮಲಯಾಳಿ. ಇಂಗ್ಲಿಷ್ ವಿಷಯವನ್ನು ಅದು ಹೇಗೋ ಪಾಸುಮಾಡಿಕೊಂಡೆ. ಮಲಯಾಳಂನ್ನು ಮುಖ್ಯ ವಿಷಯವಾಗಿ ತೆಗೆದುಕೊಂಡು ನಾನು ಬಿ.ಎ., ಎಸ್.ಟಿ.ಸಿ. ಮಾಡಿರುವೆ. ನನ್ನ ಸಲುವಾಗಿಯೇ ಪುರುಷೋತ್ತಮನ್‌ನು ಕಂಪ್ಯೂಟರ್‌ನಲ್ಲಿ ಮಲಯಾಳಂ ಲಿಪಿಯ ಅಕ್ಷರಗಳನ್ನು ಹಾಕಿಸಿದ್ದಾನೆ. ಕಂಪ್ಯೂಟರ್‌ನ ಕೆಲವೊಂದು ಮುಖ್ಯ ಅಂಶಗಳನ್ನು ಆತ ನನಗೆ ತುಂಬ ಆಸಕ್ತಿಯಿಂದಲೇ ಕಲಿಸಿದ್ದಾನೆ. ಅಯ್ಯೋ ಮರೆತೆ, ನಾನೀಗ ಮೊದಲು ಪ್ರಶ್ನೆಪತ್ರಿಕೆಯ ಕೆಲಸವನ್ನು ಮಾಡಿ ಮುಗಿಸಬೇಕಾಗಿದೆ.



* * *

ಅವ್ವ ಬೆಳಿಗ್ಗೆ ತನ್ನ ಸಮಯಕ್ಕೆ ತಾನೇ ಎದ್ದಳು. ನನ್ನನ್ನು ಅಲಾರ್ಮ ಎಬ್ಬಿಸಿತು. ನಾನು ಮುಂದಿನ ಕೆಲಸಕ್ಕೆ ಅಣಿಯಾಗತೊಡಗಿದೆನು.

“ಮಗನೆ ಶಂಕರನ್, ನೀನು ತಯ್ಯಾರಾದೆಯಾ? ಹಾಗಿದ್ದರೆ ಹೊರಡೋಣವೆ?”

“ಹಾಂ, ಅವ್ವಾ ಆಯ್ತು.... ಐದು ನಿಮಿಷಗಳಲ್ಲಿ ಹೊರಟುಬಿಡೋಣ.”

ರಿಕ್ಷಾದವನು ಮನೆಗೆ ಬಂದ. ಮುಂಜಾನೆ ಬರಲು ಅವನಿಗೆ ಹಿಂದಿನ ರಾತ್ರಿಯೇ ಹೇಳಿದ್ದೆವು. ಇಲ್ಲದಿದ್ದರೆ, ಮುಂಜಾನೆ ರಿಕ್ಷಾಗಳು ಸಿಗುವುದು ಬಹಳ ಕಷ್ಟ. ನಮ್ಮ ಮನೆಯಿಂದ ಗುರುವಾಯೂರು ಮಂದಿರಕ್ಕೆ ಹೋಗಿ ತಲುಪಲು ಅರ್ಧ ತಾಸಾದರೂ ಬೇಕು. ಅವ್ವನೊಂದಿಗೆ ನಾನು ರಿಕ್ಷಾ ಹತ್ತಿದೆ. ಅವಳಿಗೆ ತುಂಬ ಸಂತೋಷವಾಗಿತ್ತು. ಎಷ್ಟೋ ದಿನಗಳ ತರುವಾಯ ಅವಳಿಗೆ ಗುರುವಾಯೂರು ಕಣ್ಣನ್‌ನ ದರ್ಶನದ ಅವಕಾಶ ಪ್ರಾಪ್ತವಾಗಿತ್ತು. ನಡೆದಾಡಲು ಶಕ್ತಿಯಿದ್ದಾಗ ಅವಳು ತಾನೇ ದರ್ಶನಕ್ಕೆ ಹೋಗುತ್ತಿದ್ದಳು. ಈಗ ಮೊಳಕಾಲಿನ ಸಂದು ನೋವಿನ ಕಾರಣದಿಂದಾಗಿ ಅವಳಿಗೆ ನಡೆದಾಡಲು ಕಷ್ಟವಾಗುತ್ತಿದೆ. ನಡೆದಾಡುವಾಗ ಅವಳು ಬಿದ್ದುಬಿಡುವ ಅಪಾಯವೂ ಇದೆ. ಅದಕ್ಕಾಗಿ ಅವಳಿಗೆ ಮತ್ತೊಬ್ಬರ ನೆರವು ಬೇಕೇ ಬೇಕು. ಈ ವಯಸ್ಸಿನಲ್ಲೇನಾದರೂ ಎಲುಬು ಮುರಿದುಬಿಟ್ಟರೆ, ಅವಳು ತುಂಬ ಅಸಹಾಯಕಳಾಗಿಬಿಡುತ್ತಾಳೆ. ಹಾಗೇನಾದರೂ ಆದರೆ ತಾನು ಹಾಸಿಗೆಯಲ್ಲೇ ಬೀಳಬೇಕಾಗುತ್ತದೆಯೆಂದು ಅವಳಿಗೆ ಭಯ. ಆ ಕಾರಣಕ್ಕಾಗಿಯೇ ನಾನು ಅವಳ ಜೊತೆಗೆ ಬರಬೇಕೆಂದು ಕೇಳುತ್ತಾಳೆ. ನನಗೂ ಕಣ್ಣನ್‌ನ ದರ್ಶನವೆಂದರೆ ತುಂಬ ಸಂತೋಷವೆ. ಆದರೆ ಇತ್ತಿತ್ತಲಾಗಿ ನನಗೆ ಸಮಯವೇ ಸಿಗುತ್ತಲಿಲ್ಲ. ಮೂರು ಮೂರು ತಾಸು ಹೆಚ್ಚಿನ ಸಮಯ ನನಗೆ ಸಿಗುವುದಾದರೂ ಹೇಗೆ?

ಗುರುವಾಯೂರು ಮಂದಿರದ ಮುಖ್ಯ ದ್ವಾರದಿಂದ ಸ್ವಲ್ಪ ದೂರದಲ್ಲಿ ನಮ್ಮ ರಿಕ್ಷಾ ನಿಂತಿತು. ಹಿಂದೆ ಲಾರಿಗಳು ಕೂಡ ಮಂದಿರದ ಮುಖ್ಯದ್ವಾರದವರೆಗೂ ನೇರವಾಗಿ ಹೋಗುತ್ತಿದ್ದವು. ಆದರೆ ಈಗ ರಕ್ಷಣೆಯ ಕಾರ್ಯವನ್ನು ಹೆಚ್ಚು ಬಿಗಿಗೊಳಿಸಿದ್ದಾರೆ. ಅವ್ವನ ಕೈಹಿಡಿದು ರಿಕ್ಷಾದಿಂದ ಕೆಳಗಿಳಿಯಲು ನಾನು ಅವಳಿಗೆ ಸಹಾಯ ಮಾಡಿದೆ. ಆಗ ಅವಳು ಬೇರೊಂದೇ ಲೋಕದಲ್ಲಿ ಮುಳುಗಿಹೋಗಿದ್ದಳು. ಅವಳ ಕಣ್ಣುಗಳು ಮುಚ್ಚಿದ್ದವು. ಬಾಯಿ ಮಂತ್ರವನ್ನು ಜಪಿಸುತ್ತಿತ್ತು.

ಅವ್ವನ ಕೈಹಿಡಿದುಕೊಂಡು ನಾನು ನಿಧಾನವಾಗಿ ಮಂದಿರದ ದ್ವಾರದ ಕಡೆಗೆ ನಡೆದೆ. ಆಗ ಸಮಯ ಬೆಳಗಿನ ೫.೩೦. ಆದರೂ ಅದು ತಡವಾದಂತೇ ಅನಿಸುತ್ತಿತ್ತು. ಅದಾಗಲೇ ಎಲ್ಲ ಅಂಗಡಿಗಳು ತೆರೆದಿದ್ದವು. ಎಲ್ಲೆಡೆ ಬೆಳಕು ಹರಡಿತ್ತು.

ನಮ್ಮ ಮುಂದೆಯೂ ಸಾಕಷ್ಟು ಜನರ ಗುಂಪುಗಳು ಸಾಗುತ್ತಿದ್ದವು. ಗಂಡಸರು ಮತ್ತು ಹುಡುಗರು ತೆರೆದ ಎದೆ ಬಿಟ್ಟುಕೊಂಡು, ಮುಂಡಾ ಉಟ್ಟುಕೊಂಡಿದ್ದರು. ನಾನೂ ನನ್ನ ಮುಂಡಾ ಬಿಗಿಗೊಳಿಸಿಕೊಂಡೆ. ಎಷ್ಟು ಕಡಿಮೆ ತಿಂದರೂ ಅದೇಕೋ ನನ್ನ ತೂಕ ಹೆಚ್ಚಾಗಿದೆ. ಈಗ ನಾನು ನನ್ನ ಅಂಗಿಯನ್ನು ತೆಗೆಯಬೇಕು. ನನ್ನ ಬೆನ್ನು ಮತ್ತು ಎದೆ ಕಪ್ಪಾದ ಕೂದಲಿನಿಂದ ಕೂಡಿವೆ. ಎದೆ ತೆರೆದರೆ ನಾನು ಮನುಷ್ಯನಿಗಿಂತ ಹೆಚ್ಚಾಗಿ ಕರಡಿಯಂತೆಯೇ ಕಾಣುತ್ತೇನೆ. ನಮ್ಮ ಕೇರಳದಲ್ಲಿರುವ ಈ ಪದ್ಧತಿಯೊಂದು ಮಾತ್ರ ನನಗೆ ಇಷ್ಟವಾಗುವುದಿಲ್ಲ. ಕೇರಳದಲ್ಲಿ ಧಾರ್ಮಿಕವಾಗಿ ಅತ್ಯಂತ ಮಹತ್ವ ಪಡೆದಿರುವ ಬಹಳ ದೊಡ್ಡ ದೊಡ್ಡ ದೇವಾಲಯಗಳಿವೆ. ಶರ್ಟ್ ಮತ್ತು ಪ್ಯಾಂಟ್ ಹಾಕಿಕೊಂಡು ಈ ಯಾವ ದೇವಾಲಯವನ್ನೂ ನೀವು ಪ್ರವೇಶಿಸುವ ಹಾಗಿಲ್ಲ. ಶರ್ಟ್‌ನ್ನಂತೂ ತೆಗೆಯಲೇಬೇಕು. ಉತ್ತರದ ಕಡೆಯ ದೇವಾಲಯಗಳು ಎಷ್ಟೋ ವಾಸಿ. ಅಲ್ಲಿ ದರ್ಶನಂ ಸಮಯದಲ್ಲಿ ನೀವು ಯಾವ ಬಟ್ಟೆಯನ್ನಾದರೂ ಹಾಕಿಕೊಳ್ಳಬಹುದಾಗಿದೆ. ಅಲ್ಲಿ ದರ್ಶನಂನ ಸಮಯದಲ್ಲಿ, ಪೂಜೆ ಸಲ್ಲಿಸುವಾಗ ಹೆಣ್ಣುಮಕ್ಕಳು ತಮ್ಮ ತಲೆಯನ್ನು ಮುಚ್ಚಿಕೊಳ್ಳುತ್ತಾರೆ.

ದಕ್ಷಿಣದಲ್ಲಿ ಹಾಗಿಲ್ಲ. ಅವರು ತಲೆಯನ್ನು ತೆರೆದು ಕೊಂಡೇ ಹೋಗಬಹುದು. ಪೂಜೆಯ ಸಮಯದಲ್ಲೂ ಅವರು ತಲೆಯನ್ನು ಮುಚ್ಚಿಕೊಳ್ಳುವುದಿಲ್ಲ. ನಮ್ಮ ದೇವಾಲಯಗಳ ಹಿರಿಯ ಅರ್ಚಕರೂ ಸಹಿತ ಇದು ಪರಂಪರೆಯಿಂದ ನಡೆದುಬಂದುದೆಂದೂ, ಅದಕ್ಕೆ ಅದರದೇ ಆದ ಮಹತ್ವವಿದೆಯೆಂದೂ ನಂಬುತ್ತಾರೆ. ನಾನಂತೂ ಇದರ ವಿಶೇಷವೇನೆಂಬುದನ್ನು ತಿಳಿಯಲು ಪ್ರಯತ್ನಿಸಿಲ್ಲ. ಆದರೆ ಪರಂಪರೆಯನ್ನು ಗೌರವಿಸಲೆಂದು ನನ್ನ ಶರ್ಟ್‌ನ್ನು ಹೊರತೆಗೆದೆ. ಇಂಥ ಸಂದರ್ಭದಲ್ಲಿ ನಾನು ಕರಡಿಯಂಥ ನನ್ನ ಎದೆಯನ್ನು ಮುಚ್ಚಿಡಲು ಹೇಗೆ ಸಾಧ್ಯ? ಅವ್ವನ ಮತ್ತು ನನ್ನ ಚಪ್ಪಲ್ಲುಗಳನ್ನು ಬಿಚ್ಚಿ, ಪಾದರಕ್ಷೆಗಳನ್ನು ಇಡುವ ಸ್ಥಳದಲ್ಲಿ ಅವುಗಳನ್ನು ಇಟ್ಟು, ನಾವೀಗ ದೇವಾಲಯದ ಒಳ ಆವರಣವನ್ನು ತಲುಪಿದೆವು. ಅಲ್ಲಿ ದೊಡ್ಡ ಜನಸಂದಣಿಯೇ ಜಮಾಯಿಸಿದೆ. ಅವ್ವನ ಕೈ ಹಿಡಿದುಕೊಂಡೇ ಕಿರಿದಾದ ದಾರಿಯಲ್ಲಿ ನಡೆದುಬಂದು, ಕೊನೆಗೆ ನಾವೀಗ ಸರದಿಯ ಸಾಲಿನಲ್ಲಿ ನಿಂತೆವು. ಅಂದವಾಗಿ ಅಲಂಕರಿಸಿದ ಪೂಜಾತಟ್ಟೆಗಳನ್ನೂ, ಪೂಜಾರತಿಯನ್ನೂ ಹಿಡಿದಿದ್ದ ಕೆಲವು ಪಂಡಿತರು ಪೂಜೆಗಾರಂಭಿಸುವುದನ್ನೇ ಭಕ್ತರು ಕಾಯುತ್ತಿದ್ದರು.




ಅವ್ವ ಭಾವಾವೇಶಕ್ಕೆ ಒಳಗಾಗಿದ್ದಳು. ಅವಳು ತಡೆತಡೆದು ಶ್ಲೋಕಗಳನ್ನು ಹೇಳುತ್ತಿದ್ದಳು. "ಮಗಾ ಗೋಡೆಯ ಮೇಲಿಟ್ಟ ಸಾವಿರಾರು ಕಂಚಿನ ದೀಪಗಳನ್ನು ನೋಡು, ಹೇಗೆ ಬೆಳಗ್ತಿವೆ! ನೀನು ಸಣ್ಣ ಮಗುವಾಗಿದ್ದಾಗ ಏಕಾದಶಿಯ ದಿನ ಒಮ್ಮೆ ನಿನ್ನನ್ನಿಲ್ಲಿಗೆ ಕರೆದುಕೊಂಡು ಬಂದಿದ್ದೆ" ಎಂದು ಖುಷಿಯಿಂದ ಹೇಳತೊಡಗಿದಳು. "ಮಗಾ, ಆಗ ಒಂದೇ ಕಾಲಕ್ಕೆ ಸಾವಿರಾರು ದೀಪಗಳು ಬೆಳಗುತ್ತಿದ್ದುದು ನಿಜಕ್ಕೂ ನೋಡಲು ನಯನಮನೋಹರವಾಗಿತ್ತು. ಅಲ್ಲಿದ್ದ ಎಲ್ಲರೂ ಮೇರೆಮೀರಿದ ಭಕ್ತಿಯ ಉನ್ಮಾದದಲ್ಲಿ ಮಿಂದಿದ್ದರು. ಪ್ರಧಾನ ಅರ್ಚಕರು ಕಣ್ಣನ್‌ನ ಮೂರ್ತಿಗೆ ಎಳ್ಳೆಣ್ಣೆಯ ಲೇಪನ ಮಾಡಿ ಅದರ ಮೇಲೆ ವನಸ್ಪತಿಯ ಚೂರ್ಣವನ್ನು ಸೂಸಿದರು. ಅನಂತರ ಅವರು ಮೂರ್ತಿಗೆ ಅಭಿಷೇಕ ಮಾಡುತ್ತಾರೆಂದೂ, ಆ ಅಭಿಷೇಕ ಜಲವನ್ನು ಎಲ್ಲರಿಗೂ ಆಶೀರ್ವಾದಪೂರ್ವಕವಾಗಿ ಪ್ರೋಕ್ಷಣೆ ಮಾಡುತ್ತಾರೆಂದೂ ನಮಗೆ ಗೊತ್ತಿತ್ತು. ಆ ಹೊತ್ತಿಗೆ ಏನಾಯ್ತು ಗೊತ್ತೆ? ಅಬ್ಬಾ ಒಮ್ಮಿಂದೊಮ್ಮಲೇ ಜೋರಾದ ಚೀರಾಟ–ಅರಚಾಟ ಕೇಳತೊಡಗಿತು! ನೋಡಿದರೆ, ಗರ್ಭಗುಡಿಯ ಪವಿತ್ರಸ್ಥಾನದೊಳಗೆ ಭೀಕರವಾದ ಬೆಂಕಿ ಹತ್ತಿಕೊಂಡಿತ್ತು. ಅದು ಕೆಲವೇ ಕ್ಷಣಗಳಲ್ಲಿ ಇಡೀ ದೇವಸ್ಥಾನವನ್ನೇ ಆವರಿಸಿಕೊಂಡುಬಿಟ್ಟಿತ್ತು."

ಅಲ್ಲಿಂದ ಮುಂದೆ ಅವ್ವ ಏನು ಹೇಳಬಹುದೆಂಬುದು ನನಗೆ ಗೊತ್ತಿತ್ತು. 'ಅಲ್ಲಿ ಅಪಾರ ಸಂಖ್ಯೆಯಲ್ಲಿ ಸೇರಿದ್ದ ಹಿಂದೂ, ಮುಸ್ಲಿಂ ಮತ್ತು ಕ್ರೈಸ್ತ ಧರ್ಮೀಯರೆಲ್ಲರೂ ಒಂದಾಗಿ, ನೀರು ಮತ್ತು ಉಸುಕನ್ನು ಎರಚಿ ಆ ಬೆಂಕಿಯನ್ನಾರಿಸಲು ಹೇಗೆ ಪ್ರಯತ್ನಿಸಿದರೆಂದೂ, ಅಂಥ ಗದ್ದಲದಲ್ಲಿ ಅವಳು ನನ್ನನ್ನು ತನ್ನ ಎದೆಗೆ ಅವಚಿಕೊಂಡು ದೇವಸ್ಥಾನದ ಪ್ರಾಂಗಣದ ಒಂದು ಮೂಲೆಯಿಂದ ಮತ್ತೊಂದು ಮೂಲೆಗೆ ತಾನು ಹೇಗೆ ಓಡಾಡಿದೆನೆಂದೂ' ಅವಳು ಹೇಳುವವಳಿದ್ದಳು. ಈ ಕಥೆಯನ್ನು ಅವಳು ಈ ಮೊದಲೇ ನನಗೆ ಸಾಕಷ್ಟು ಸಾರಿ ಹೇಳಿದ್ದಳು ಕೂಡ. 'ಆ ಬೆಂಕಿಯ ಅವಘಡವನ್ನು ಕೇಳಿದ ನಿನ್ನ ತಂದೆ ಓಡಿಬಂದು, ದೇವಸ್ಥಾನದ ಒಳಗಡೆ ಪ್ರವೇಶಿಸಲು ಗಂಟೆಗಟ್ಟಲೆ ಹೋರಾಡಿದರೆಂದೂ, ಅಲ್ಲಿದ್ದ ಪೊಲೀಸರು ಮತ್ತು ಬೆಂಕಿ ನಂದಿಸುವ ಕೆಲಸಗಾರರು ಅವರನ್ನು ಒಳಗೆ ಬಿಡಲೇ ಇಲ್ಲ' ಎಂಬುದನ್ನೂ ಅವಳು ಮುಂದೆ ಹೇಳುವವಳಿದ್ದಳು. ಇದೆಲ್ಲದರ ಜೊತೆಗೆ ಅವಳು ಅತ್ಯಂತ ಭಕ್ತಿ, ಭಾವುಕತೆ, ಹೆಮ್ಮೆ ಮತ್ತು ಸಂತೋಷದಿಂದ ಮರೆಯದೇ ಹೇಳುತ್ತಿದ್ದ ಮತ್ತೊಂದು ಮಾತೆಂದರೆ, 'ಇಷ್ಟೆಲ್ಲಾ ಬೆಂಕಿಯ ಅವಘಡ ನಡೆದರೂ ಗರ್ಭಗುಡಿಯಲ್ಲಿದ್ದ ಕಣ್ಣನ್‌ನ ಮೂರ್ತಿಗೂ, ತುಳಸಿಯ ಜಪಮಾಲೆಗೂ ಏನೂ ಆಗಿರಲಿಲ್ಲ ನೋಡು ಮಗಾ!' ಎಂಬುದು.

ಅವ್ವ ಯಾವಾಗಲೂ ಹೇಳುತ್ತಿದ್ದ ಮತ್ತೊಂದು ಮಾತು ನನಗೆ ಮತ್ತೆ ಮತ್ತೆ ನೆನಪಾಗುತ್ತದೆ. ಸಣ್ಣವನಿದ್ದಾಗ ನನಗೆ ಬಾಳೆ ಹಣ್ಣೆಂದರೆ ತುಂಬ ಪ್ರೀತಿಯಿತ್ತಂತೆ. ಆದರೆ ಆಗ ಬಾಳೆ ಹಣ್ಣು ತುಂಬ ತುಟ್ಟಿಯಾಗಿದ್ದು, ತನ್ನ ಹಣದ ಚೀಲದಲ್ಲಿದ್ದ ನಾಣ್ಯದಿಂದ ಅದನ್ನು ಕೊಡಿಸಲು ಅವಳಿಗೆ ಆಗುತ್ತಿರಲಿಲ್ಲವಂತೆ. ನಮ್ಮ ಮನೆಯ ಎದುರಿನ ಸಣ್ಣ ಅಂಗಡಿಯೊಂದರಲ್ಲಿ ಬಾಳೆ ಹಣ್ಣಿನ ಗೊಂಚಲುಗಳನ್ನು ತೂಗುಬಿಡುತ್ತಿದ್ದರಂತೆ. ಬಹಳ ಪಕ್ವವಾದ ಹಣ್ಣು ಆ ಗೊಂಚಲಿನಿಂದ ತಾನಾಗೇ ಕೆಳಗೆ ಬಿದ್ದಾಗ, ಹಾಗೆ ಬಿದ್ದ ಹಣ್ಣನ್ನು ಆ ಅಂಗಡಿಯ ಮಾಲಕ ಉನ್ನಿಕೃಷ್ಣನ್‌ನು ಅರ್ಧಬೆಲೆಗೆ ಮಾರುತ್ತಿದ್ದನಂತೆ. ನನ್ನ ಮುಖದಲ್ಲಿ ಸಂತೋಷವನ್ನು ಉಕ್ಕಿಸುತ್ತಿದ್ದ ಅಂಥ ಬಾಳೆ ಹಣ್ಣು ಬೀಳುವುದನ್ನೇ ಅವ್ವ ಯಾವಾಗಲೂ ಕಾಯುತ್ತಿದ್ದಳಂತೆ. ಅಪ್ಪನ ನಿಧನದ ನಂತರ, ನನ್ನನ್ನು ಸಂತೋಷದಲ್ಲಿಡಲು ಅವ್ವ ಬಹಳ ಕಷ್ಟಪಟ್ಟಿದ್ದಾಳೆ.

ಸರದಿಯ ಸಾಲು ಉದ್ದವಾಗುತ್ತಲೇ ಇತ್ತು. ಹೊಟ್ಟೆ ಬಿಟ್ಟುಕೊಂಡು, ಬರಿಮೈಯಲ್ಲಿದ್ದ ಕೆಲವು ಭಕ್ತರು ಜೋಡಿಸಿದ ತಮ್ಮ ಕೈಗಳನ್ನು ಮೇಲಕ್ಕೆತ್ತಿ ಹಿಡಿದುಕೊಂಡು, ಏಳೆಂಟು ಅಡಿ ಉದ್ದದ ಬಟ್ಟೆಯ ಮೇಲೆ ದೇವಸ್ಥಾನದ ಸುತ್ತಲೂ ಉರುಳುಸೇವೆ ಮಾಡುತ್ತಿದ್ದರು. ಈ ರೀತಿಯಲ್ಲಿ ಅವರು ದೇವಾಲಯಕ್ಕೆ ಮೂರು ಸುತ್ತಿನ ಶಯನಪ್ರದಕ್ಷಿಣೆಯನ್ನು ಹಾಕುತ್ತಿದ್ದಾಗ ಅವರು ಸುತ್ತಿಕೊಂಡಿದ್ದ ಮುಂಡಾಗಳು ಮೇಲೆ ಸರಿದು ಹೋಗುತ್ತಿದ್ದವು. ಅವರ ಸಂಗಡ ಇರುವ ಭಕ್ತರು, ಮಂತ್ರಗಳನ್ನು ಉಚ್ಚರಿಸುತ್ತಲೇ ಮೇಲೇರಿದ ಲುಂಗಿಗಳನ್ನು ಮತ್ತೆ ಕೆಳಗಿಳಿಸಿ ಕಟ್ಟುತ್ತಿದ್ದರು. ಶಯನಪ್ರದಕ್ಷಿಣೆ ಹಾಕುತ್ತಿದ್ದ ಭಾರದೇಹದ ಕೆಲವು ಭಕ್ತರು ಏದುಸಿರು ಬಿಡುತ್ತಿದ್ದರು. ಒಂದಿಷ್ಟು ಹೆಣ್ಣುಮಕ್ಕಳು ಕೈಜೋಡಿಸಿ ಹಿಡಿದುಕೊಂಡು, ಮಂತ್ರ ಹೇಳುತ್ತಲೇ ಇಟ್ಟ ಒಂದು ಕಾಲಿನ ಹೆಜ್ಜೆಯ ಮೇಲೆಯೇ ಮತ್ತೊಂದು ಹೆಜ್ಜೆ ಇಡುತ್ತ ದೇವಾಲಯದ ಸುತ್ತಲೂ ದೀಡನಮಸ್ಕಾರದ ಪ್ರದಕ್ಷಿಣೆ ಹಾಕುತ್ತಿದ್ದರು. ಅವರ ಈ ಪ್ರದಕ್ಷಿಣೆಯೂ ಮೂರು ಸುತ್ತಿನದಾಗಿತ್ತು. ಮಹಿಳೆಯರಿಗೆ ಶಯನಪ್ರದಕ್ಷಿಣೆ ನಿಷಿದ್ಧವಾಗಿತ್ತು. ಪುರುಷರ ಮುಂಡಾಗಳು ಮೇಲೆ ಹಾರಿದರೆ ಸರಿ ಮಾಡಬಹುದು : ಆದರೆ ಮಹಿಳೆಯರ ಸೀರೆ ಹಾಗೆ ಹಾರಿದರೆ...! ನಾನೂ ಒಮ್ಮೆ ಆಸಕ್ತಿಯಿಂದ ಶಯನಪ್ರದಕ್ಷಿಣೆ ಹಾಕಲು ತೊಡಗಿದ್ದೆ. ಆದರೆ, ಅರ್ಧ ಹೋಗುವಷ್ಟರಲ್ಲೇ ಏದುಸಿರು ಬಿಡತೊಡಗಿ, ಅಷ್ಟಕ್ಕೆ ನಿಲ್ಲಿಸಿಬಿಟ್ಟಿದ್ದೆ. ಬಹುಶಃ ಕಣ್ಣನ್ ನನ್ನ ಮೇಲೆ ಸಿಟ್ಟಾಗಿರಬೇಕು. ಈಗಲೂ ಸಹ.

ಸರದಿಯಲ್ಲಿ ಈಗ ಸ್ವಲ್ಪ ಚಲನೆ ಉಂಟಾಯಿತು. ಪ್ರದಕ್ಷಿಣೆಗಾಗಿ ಆಯ್ಕೆಯಾಗಿ ಅಲಂಕೃತಗೊಂಡಿದ್ದ ಅಂದಿನ ಆನೆ ನಿಧಾನವಾಗಿ ಚಲಿಸಲಾರಂಭಿಸಿತು. ಪ್ರದಕ್ಷಿಣೆಯ ಮೂರು ಸುತ್ತುಗಳು ಮುಗಿದ ಮೇಲೆ ಶ್ರೀಕೋವಿಲ್‌ದ ದ್ವಾರಗಳು ತೆರೆಯಲ್ಪಡುತ್ತವೆ. ಪ್ರಧಾನ ಅರ್ಚಕರು ಆನೆಯ ಜೊತೆಗೆ ಸಾಗುತ್ತಾರೆ. ಅವರ ಮುಖದಲ್ಲಿ ವಿಶೇಷ ಕಾಂತಿ ಇದೆ. ಅವರು ಶ್ರೀಕೋವಿಲ್‌ನ್ನು ರಾತ್ರಿ ೨.೩೦ಕ್ಕೆ ಪ್ರವೇಶಿಸಿರುತ್ತಾರೆ. ಕಣ್ಣನ್‌ನ ಪೂಜೆ ಮತ್ತು ಅಭಿಷೇಕದಿಂದ ಆರಂಭಿಸಿ, ಆನೆಯ ಪ್ರದಕ್ಷಿಣೆಯನ್ನೂ ಒಳಗೊಂಡಂತೆ ಮಧ್ಯಾಹ್ನದ ಪೂಜೆ ಮುಗಿಯುವವರೆಗೂ ಅವರು ಒಂದು ಹನಿ ನೀರನ್ನೂ ಬಾಯಲ್ಲಿ ಹಾಕಿಕೊಳ್ಳುವುದಿಲ್ಲ.

ಈಗ ಕೊನೆಗೆ ದರ್ಶನಂ ಸಮಯ. ಅವ್ವನ ಕೈಯನ್ನು ಗಟ್ಟಿಯಾಗಿ ಹಿಡಿದುಕೊಂಡು ನಾನು ಸರದಿಯಲ್ಲಿ ಮುಂದೆ ಸಾಗತೊಡಗಿದೆನು. ಶ್ರೀಕೋವಿಲದ ಮುಂದೆ ಬಂದಾಗ ಅವ್ವನ ಇಡೀ ಶರೀರವೇ ಪ್ರಕಾಶಿಸತೊಡಗಿತು. ಕಣ್ಣನ್‌ನ ದರ್ಶನವು ಅವಳಲ್ಲಿ ಒಂದು ಬಗೆಯ ಅದಮ್ಯವಾದ ಶಕ್ತಿಯನ್ನು ತುಂಬಿತ್ತು. ಅವಳು ಸಂತೋಷದಿಂದ ತುಂಬಿ ಹೋಗಿದ್ದಳು. ಅವಳ ಗಲ್ಲಗಳಲ್ಲಿ ಹೊಸ ರಕ್ತಸಂಚಾರವಾದಂತಾಗಿ ಕೆಂಪಗೆ ಕಾಣತೊಡಗಿದವು. ಭಕ್ತಿಭಾವದಿಂದ ಕೂಡಿದ ಅವಳು ಮುಂದೆ ಚಲಿಸದೆ

ಒಂದು ಕಡೆ ಗಟ್ಟಿಯಾಗಿ ನಿಂತುಬಿಟ್ಟಳು. ಅವಳು ಹಾಗೆ ನಿಂತದ್ದನ್ನು ನೋಡಿದ ಸರದಿಯಲ್ಲಿದ್ದ ಜನರು, 'ಏ ಮುಂದೆ ನಡೆಯಿರಿ, ನೀವು ಅಲ್ಲೇ ನಿಂತರೆ ನಾವು ಮುಂದೆ ಹೋಗೋದು ಹೇಗೆ?' ಎಂದು ದೊಡ್ಡ ದನಿಯಲ್ಲಿ ಚೀರಾಡತೊಡಗಿದರು. "ಅವ್ವಾ ಮುಂದೆ ನಡೆ" ಎನ್ನುತ್ತ ನಾನು ನಿಧಾನವಾಗಿ ಅವಳ ಕೈಹಿಡಿದು ಎಳೆದೆ. ಕಣ್ಣನ್‌ನಲ್ಲಿ ಸಂಪೂರ್ಣವಾಗಿ ದೃಷ್ಟಿ ನೆಟ್ಟಿದ್ದ ಅವಳು ಒಲ್ಲದ ಮನಸ್ಸಲ್ಲಿ ಶ್ರೀಕೋವಿಲ್‌ದಿಂದ ನಿಧಾನವಾಗಿ ಚಲಿಸತೊಡಗಿದಳು. "ಕಣ್ಣನ್‌ನ ದರ್ಶನವೆಂದರೆ, ಸ್ವರ್ಗ ಸಂಪಾದನೆಗೆ ಸಮನಾದುದು ಮಗನೆ" ಎಂದು ಅವಳು ಯಾವಾಗಲೂ ಹೇಳುತ್ತಿದ್ದಳು. ಈಗಲೂ ಅದನ್ನವಳು ಪುನರುಚ್ಚರಿಸಿದಳು.

"ಮಗನೆ ಶಂಕರನ್, ಕಣ್ಣನ್‌ನ ಅಭಿಷೇಕದ ಪವಿತ್ರಜಲವನ್ನು ಪಡೆಯಬೇಕೆಂಬುದು ನನ್ನ ದೊಡ್ಡ ಆಸೆ. ದಯವಿಟ್ಟು ನಾಳೆ ಮುಂಜಾನೆ ನಾಲ್ಕು ಗಂಟೆಗೆ ನೀನು ನನ್ನನ್ನು ಇಲ್ಲಿಗೆ ಕರೆದುಕೊಂಡು ಬರುವೆಯಾ? ಕಣ್ಣನ್‌ನ ಅಭಿಷೇಕದ ಆ ಪವಿತ್ರಜಲಕ್ಕೆ ಪವಾಡಸದೃಶ ಶಕ್ತಿ ಇದೆ ಮಗನೆ. ಐದು ಸಾವಿರ ವರ್ಷಗಳಷ್ಟು ಹಳೆಯದಾದ ಈ ಪವಿತ್ರ ಮೂರ್ತಿಗೆ ಏನೆಲ್ಲ ಸಮಸ್ಯೆಗಳನ್ನು ಪರಿಹಾರ ಮಾಡುವ ಶಕ್ತಿಯಿದೆ, ಯಾರಿಗೆ ಗೊತ್ತು? ನನ್ನ ಮಂಡಿನೋವಿನ ಸಮಸ್ಯೆ ಕೂಡ ಇದರಿಂದ ಗುಣವಾಗಬಹುದಲ್ಲವೆ?" – ಅವ್ವ ಮಾತಾಡುತ್ತಲೇ ಇದ್ದಳು.

"ಆಯ್ತು, ಅವ್ವಾ. ನಾಳೆ ನಿನ್ನನ್ನು ಮತ್ತೆ ಕರೆದುಕೊಂಡು ಬರುತ್ತೇನೆ, ಆಯ್ತಾ?" ಎಂದೆ.

ನಾವು ಮನೆ ತಲುಪಿದಾಗ ತುಂಬ ತಡವಾಗಿತ್ತು. ತಕ್ಷಣ ನಾನು ನನ್ನ ಕೆಲಸದಲ್ಲಿ ತೊಡಗಿಬಿಟ್ಟೆ.

ಎರಡು ದಿನ ಕಳೆದಿರಬೇಕು, ಹಿಟ್ಲರ್‌ನಂಥ ನಮ್ಮ ಪ್ರಿನ್ಸಿಪಾಲನು ಮತ್ತೊಂದು ಹೊಸ ಆದೇಶವನ್ನು ಹೊರಡಿಸಿದ. ಪ್ರತಿಯೊಂದು ವಿಷಯದ, ಪ್ರತಿಯೊಂದು ಅಧ್ಯಾಯದ ಮೇಲೆ ಕನಿಷ್ಠವೆಂದರೂ ಇಪ್ಪತ್ತೈದು ಪ್ರಶ್ನೆಗಳುಳ್ಳ ಪ್ರಶ್ನೆಪತ್ರಿಕೆಯನ್ನು ಸಿದ್ಧಪಡಿಸಿ ಅದನ್ನು ಸಿ.ಡಿ. ರೂಪದಲ್ಲಿ ಒಪ್ಪಿಸಬೇಕೆಂಬುದು ಅವನ ಹೊಸ ಆದೇಶವಾಗಿತ್ತು. ಪ್ರಶ್ನೆಗಳಲ್ಲಿ ವೈವಿಧ್ಯತೆ ಇರಬೇಕೆಂದೂ, ಪ್ರತಿಯೊಂದು ಪ್ರಶ್ನೆಗೂ ಒಂದರಿಂದ ಹತ್ತರವರೆಗೆ ಅಂಕಗಳು ನಿಗದಿಯಾಗಿರಬೇಕೆಂದೂ ಆತನ ಆದೇಶದಲ್ಲಿತ್ತು. ಪಾಪ, ಪ್ರಾಥಮಿಕ ಶಾಲೆಯ ಮಕ್ಕಳಿಗೆ ಆತ ಅನಗತ್ಯವಾಗಿ ಅಷ್ಟೊಂದು ಹೊರಲಾರದ ಹಾಗೂ ವಿಚಿತ್ರವಾದ ಭಾರವನ್ನು ಹೊರಿಸಿದ್ದ. ಪ್ರಶ್ನೆಪತ್ರಿಕೆ ಸಿದ್ಧಪಡಿಸಲು ನಾನು ಮೂರು ತಾಸುಗಳಿಂದಲೂ ಕಂಪ್ಯೂಟರ್ ಮುಂದೆ ಕುಳಿತುಕೊಂಡು ಕಷ್ಟಪಡುತ್ತಿದ್ದೇನೆ. ಒಂದು ಸಲ ಪ್ರಶ್ನೆಪತ್ರಿಕೆಯ ವಿಭಾಗಗಳು, ಮತ್ತೊಂದು ಸಲ ಅವುಗಳ ಅನುಕ್ರಮ ಸಂಖ್ಯೆಗಳು ಹೊಂದಾಣಿಕೆಯಾಗದೆ ನನಗೆ ನಿರಾಶೆಯಾಗುತ್ತಿದೆ. ಈಗಾಗಲೇ ನಾನು ಎರಡು ಸಲ ಪುರುಷೋತ್ತಮನ್‌ನಿಂದ ಪ್ರಶ್ನೆಪತ್ರಿಕೆಯನ್ನು ಸೆಟ್ ಮಾಡಿಸಿಯಾಗಿದೆ. ಈ ಕಂಪ್ಯೂಟರ್‌ನಲ್ಲಿ ನಾನು ಅತ್ಯಂತ ನಿಧಾನ. ಥೂ ಇದು ನನಗೆ ತಲೆನೋವಿನ ಕೆಲಸ.

ಅವ್ವ ಒಳಗೆ ಬರುತ್ತಾಳೆ. "ಮಗನೆ, ಕಣ್ಣನ್‌ನ ಅಭಿಷೇಕಕ್ಕೆ ನನ್ನನ್ನು ಕರೆದೊಯ್ಯುತ್ತೀಯಾ? ನನ್ನ ಮೊಳಕಾಲಿನ ನೋವು ತುಂಬ ಹೆಚ್ಚಾಗಿದೆ. ಸಹಿಸಿಕೊಳ್ಳಲೂ ಆಗುತ್ತಿಲ್ಲ ಆ ನೋವನ್ನು."

"ಅವ್ವಾ ನಿನಗೂ ಗೊತ್ತು, ಕಣ್ಣನ್‌ನ ಅಭಿಷೇಕವು ಬೆಳಗಿನ ೩.೩೦ಕ್ಕೆ ನಡೆಯುತ್ತದೆ. ನಾವು ಆಗ ಅಲ್ಲಿಗೆ ಹೋಗುವುದಾದರೂ ಹೇಗೆ? ನನಗೋ ಮೈತುಂಬ ಕೆಲಸವಿದೆ. ನಾನು ವಿಶ್ರಾಂತಿಯನ್ನೇ ತೆಗೆದುಕೊಂಡಿಲ್ಲ. ನಾಳೆ ಶಾಲೆ ಬೇರೆ ಇದೆ."

"ಆದರೆ ಮಗನೆ, ನಾವು ಆದಷ್ಟು ಬೇಗನೇ ಮರಳಿ ಬಂದುಬಿಡೋಣ. ನನ್ನ ಮಂಡಿನೋವು ವಿಪರೀತ ಹೆಚ್ಚಾಗಿದೆ. ಮೊಳಕಾಲನ್ನು ಎರಡು ರುಬ್ಬುಗುಂಡಿನ ನಡುವೆ ಇಟ್ಟು ತಿರುವಿದಂತಾಗುತ್ತಿದೆ."

## ರೈತ



ಅಂಗೈಯೊಳಗೆ
ಜಗವ ತರಲು
ವಿಜ್ಞಾನಿಗಳಿಂದಾಯ್ತು ಸಾಧ್ಯ!
ಅಂಗೈಯೊಳಗೆ
ಅನ್ನ ತರಲು
ರೈತನಿಂದ ಮಾತ್ರ ಸಾಧ್ಯ!

**ಶ್ರೀನಿವಾಸಕುಂಡಂತಾಯ**
ಬೆಂಗಳೂರು – ೯೪

"ಆದರೆ ಅವ್ವಾ, ಕಣ್ಣನ್‌ನ ಅಭಿಷೇಕದ ಪವಿತ್ರಜಲದಿಂದ ನಿನ್ನ ಮಂಡಿನೋವು ವಾಸಿಯಾಗುತ್ತದೆಯೆಂದು ನಿನಗೆ ಯಾರು ಹೇಳಿದ್ದು? ಇದೆಲ್ಲ ಬೊಗಳೆ, ಆಗಲಾರದ್ದು." – ಈ ಮಾತನ್ನು ನಾನು ತುಸು ಗಟ್ಟಿಯಾದ ದನಿಯಲ್ಲೇ ಹೇಳಿದ್ದೆ.

"ಅಯ್ಯೋ ಮಗನೆ, ಹಾಗನ್ನಬೇಡ. ನಿನಗೆ ಗೊತ್ತಿಲ್ಲ. ನನ್ನ ಕಣ್ಣನ್ ಅಂದರೇನೆ ಒಂದು ದೊಡ್ಡ ಪವಾಡ. ಅಲ್ಲಿಗೆ ಹೋದರೆ ನನ್ನ ಮಂಡಿನೋವು ಖಂಡಿತ ಮಾಯವಾಗ್ತದೆ."

"ಅವ್ವಾ, ನಾನು ಈ ಮೂಢನಂಬಿಕೆಗಳನ್ನೆಲ್ಲ ನಂಬುವುದಿಲ್ಲ. ನನಗೋ ಮೈತುಂಬ ಕೆಲಸವಿದೆ. ನನಗೆ ದೇವಸ್ಥಾನಕ್ಕೆ ಬರಲು ಖಂಡಿತ ಆಗುವುದಿಲ್ಲ." – ನನ್ನ ದನಿ ಸ್ವಲ್ಪ ಗಡುಸಾಗಿತ್ತು. ಅದು ಸಕಾರಣವಾಗಿತ್ತು ಕೂಡ. ಆಗ ನನ್ನೊಳಗೆ ಅದೆಷ್ಟು ಒತ್ತಡ, ನೋವು ತುಂಬಿತ್ತೆಂಬುದು ನನಗೇ ಗೊತ್ತಾಗುತ್ತಿರಲಿಲ್ಲ. ಅವ್ವನ ಕಣ್ಣುಗಳಲ್ಲಿ ನೀರೂರಿದ್ದನ್ನು ನಾನು ಗುರುತಿಸಿದೆ. ಅವಳು ಹಿಂದೆ ತಿರುಗಿ ನಿಧಾನವಾಗಿ ಅಲ್ಲಿಂದ ಹೊರಟುಹೋಗಿಬಿಟ್ಟಳು. ಅವಳು ಹೋದ ಕಡೆಯಿಂದ ಮುಸುಮುಸು ಅಳುವ ಶಬ್ದ ಕೇಳಿದಂತಾಯ್ತು. ಅಥವಾ ಅದು ನನ್ನ ಕಲ್ಪನೆಯೂ ಇರಬಹುದು.

ನಾನು ಕಂಪ್ಯೂಟರ್ ಜೊತೆಗೆ ಯುದ್ಧಕ್ಕಿಳಿದಿದ್ದೆ. ಮತ್ತೆ ಮತ್ತೆ ನನಗೆ ಕರ್ಸರ್ ತೊಂದರೆ ಕೊಡತೊಡಗಿತ್ತು. ಸ್ವಲ್ಪ ಕೆಲಸ ಮಾಡುವುದು, ಮತ್ತೆ ನಿಲ್ಲುವುದು : ಇನ್ನಷ್ಟು ಮಾಡುವುದು ಮತ್ತೆ ನಿಲ್ಲುವುದು ನಡೆದೇ ಇತ್ತು. ಅರ್ಧ ತಾಸಿನ ನಂತರ ಆ ಕೆಟ್ಟ ಕರ್ಸರ್ ಸಂಪೂರ್ಣ ನಿಂತೇಹೋಯಿತು. ತಕ್ಷಣ ನಾನು ಪುರುಷೋತ್ತಮನ್‌ನನ್ನು ಕರೆದೆ. ಅದು ಅವನಿಗೆ ಕೇಳಿಸಿದಂತೆ ತೋರಲಿಲ್ಲ. ಮತ್ತೆ ದನಿ ಎತ್ತರಿಸಿ ಕರೆದೆ. ಯಾವಾಗ ಅವನಿಂದ ಪ್ರತಿಕ್ರಿಯೆಯೇ ಬರಲಿಲ್ಲವೋ ಆಗ ನಾನೇ ಎದ್ದು ಅವನ ಕೋಣೆಗೆ ಹೋದೆ. ಅವನು ಆಗಲೂ ತನ್ನ ಖುರ್ಚಿಯಲ್ಲಿ ಕುಳಿತಿದ್ದ...ಸುಮ್ಮನೇ ಕುಳಿತಿದ್ದ.

"ಪುರುಷೋತ್ತಮನ್..."

"ಹಾಂ, ಅಪ್ಪಾ ಕೇಳಿತು ನೀನು ಕೂಗಿದ್ದು. ನನಗೆ ಗೊತ್ತು, ನೀನು ನನ್ನ ಕಂಪ್ಯೂಟರ್‌ನೆಲ್ಲ ಹಾಳುಮಾಡಿಬಿಟ್ಟೆ. ಸಾಕು, ಅದನ್ನು ನೀನು ಬಂದ್ ಮಾಡಿಬಿಡು."

"ಆದರೆ ಮಗನೆ..."

"ಅಪ್ಪಾ, ಕಂಪ್ಯೂಟರನ್ನು ಬಂದ್ ಮಾಡಲು ನಾನು ಆಗಲೇ ಹೇಳಲಿಲ್ಲವೆ ನಿನಗೆ?"

ಮಗನ ಆ ದನಿ ನನ್ನ ಇಡೀ ಮಾತಿನ ಶಕ್ತಿಯನ್ನೇ ಕಿತ್ತುಕೊಂಡಿತ್ತು. ಮಾತಾಡಲು ನನ್ನಲ್ಲಿ ಯಾವ ಶಬ್ದಗಳೂ ಉಳಿದಿರಲಿಲ್ಲ. ಕಣ್ಣಲ್ಲಿ ತಂತಾನೇ ನೀರು ಉಕ್ಕಿ ಬಂತು. ಮರಳಿ ನನ್ನ ಕೋಣೆಗೆ ಬಂದು ಹಾಸಿಗೆಯ ಮೇಲೆ ಮಲಗಿಬಿಟ್ಟೆ. ಇನ್ನೇನು ಗಟ್ಟಿಯಾದ ದನಿತೆಗೆದು ಅಳಬೇಕು; ಆದರೆ ನನ್ನ ಉಸಿರು ಗಂಟಲಲ್ಲೇ ಸಿಕ್ಕಿಹಾಕಿಕೊಂಡಿತು. ಇದೇ ಥರದ ಅನುಭವ ನನಗೆ ಹಿಂದೆ ಆದದ್ದು, ಪುರುಷೋತ್ತಮನ್‌ನ ತಾಯಿ ತೀರಿಕೊಂಡ ಸಂದರ್ಭದಲ್ಲಿ.

✶ ✶ ✶

ನನ್ನನ್ನೇ ನಾನು ಸಂತೈಸಿಕೊಳ್ಳುತ್ತ ಕಣ್ಣೀರು ಒರೆಸಿಕೊಂಡೆ. ಅಲ್ಲಿಂದ ಎದ್ದು ಅವ್ವನ ಕೋಣೆಗೆ ಹೋದೆ. "ಅವ್ವಾ ನಾಳೆ ಬೆಳಿಗ್ಗೆ ನಾವು ಕಣ್ಣನ್‌ನ ಅಭಿಷೇಕಕ್ಕೆ ಹೋಗೋಣ."

ಸಿಂಧಿ ಮೂಲ : **ವಾಸದೇವ್ ಮೋಹಿ ಸಿಧ್ನಾನಿ**
ಕನ್ನಡಕ್ಕೆ : **ಡಾ॥ ಬಸವರಾಜ ಸಾದರ**
ನಂ. ೫, ಬಾಲಾಜಿ ಪ್ಯಾರಡೈಸ್, ಎಫ್–೪, ೪ನೇ ಅಡ್ಡರಸ್ತೆ
ಭುವನೇಶ್ವರಿ ನಗರ, (ಹೆಬ್ಬಾಳ–ಕೆಂಪಾಪುರ)
ಬೆಂಗಳೂರು – ೫೬೦ ೦೨೪

# ಡಾ॥ ಬಸವರಾಜ ಸಬರದ

# ಗಜಲ್ ಕಾವ್ಯದಲ್ಲಿ ನೋವು-ಯಾತನೆ

ಪ್ರೀತಿ-ಪ್ರಣಯದ ನೋವು-ಯಾತನೆಗಳ ಅಭಿವ್ಯಕ್ತಿ ಗಜಲ್ ಕಾವ್ಯದಲ್ಲಿ ಎದ್ದುಕಾಣಿಸುತ್ತದೆ. ಪ್ರಿಯಕರ-ಪ್ರೇಯಸಿ ಎಷ್ಟೇ ನೋವನ್ನುಂಟುಮಾಡಿದ್ದರೂ ಅವರು ಪರಸ್ಪರ ಅಂತಹ ನೋವಿನಲ್ಲಿಯೂ ಸಮಾಧಾನವಾಗಿರುತ್ತಾರೆ. ತನಗೆ ನೋವುಂಟುಮಾಡಿದ ಪ್ರಿಯಕರ ಚೆನ್ನಾಗಿ ಇರಲೆಂದು ಪ್ರೇಯಸಿ ಬಯಸಿದರೆ; ತನಗೆ ಕಷ್ಟಕೊಟ್ಟ ಪ್ರೇಯಸಿ ಸುಖದಿಂದ ಬದುಕಲೆಂದು ಪ್ರಿಯಕರ ಹಾರೈಸುತ್ತಾನೆ. ಇನ್ನೂ ಕೆಲವು ಗಜಲ್ ಕವಿಗಳು ಸಾಮಾಜಿಕ ಅಸಮಾನತೆಯಿಂದ, ಶೋಷಣೆಯಿಂದಾದ ನೋವು ಸಂಕಟಗಳನೂ ತಮ್ಮ ಗಜಲ್‌ಗಳಲ್ಲಿ ಹೇಳಿದ್ದಾರೆ.

ಪ್ರೀತಿ-ಪ್ರಣಯದಲ್ಲಿ ಸಂತೋಷ-ಸಂಭ್ರಮಗಳಿರುವಂತೆ, ನೋವು-ಯಾತನೆಗಳೂ ಇರುತ್ತವೆಂಬುದನ್ನೂ ಗಜಲ್ ಕವಿಗಳು ತುಂಬ ಪರಿಣಾಮಕಾರಿಯಾಗಿ ಹೇಳಿದ್ದಾರೆ. ಅಂತಹ ಕೆಲವು ಗಜಲ್‌ಗಳ ದ್ವಿಪದಿಗಳನ್ನಿಲ್ಲಿ ನೋಡಬಹುದಾಗಿದೆ.

೧. *"ಹೇಗೆ ಹೇಳಲಿ ನೋವು ತಾಪವ ಯಾರಿಗೆ*
*ವ್ಯಂಗ್ಯದಲುಗನು ಹಿಡಿದು ನೋಡುವ ನಾರಿಗೆ"*

– ಸಿದ್ಧಲಿಂಗ ಪಟ್ಟಣಶೆಟ್ಟಿ

೨. *"ಒಲಿದವಳೋ ಬೆಂಕಿಯನ್ನುರಿಸಿ ನಡೆದುಹೋದಳು*
*ಹೃದಯವಿನ್ನೂ ಬೆಂದು ಬೂದಿಯಾಗಿಲ್ಲ ದೂರವಿರು ಸಾವೇ"*

– ಸಿದ್ಧರಾಮ ಹಿರೇಮಠ

೩. *"ಅಂಚೆಯವನು ನನ್ನ ಪತ್ರ ಕೊಟ್ಟಾಗ ನೀನು ಓದಿ ಹರಿದುಹಾಕಿದೆ*
*ಅದರಲ್ಲಿ ನನ್ನ ಹೃದಯವೇ ಚಡಪಡಿಸುತ್ತಿದ್ದುದನ್ನು ನೀನೋಡದೆ ಹೋದೆ"*

– ಬಸವರಾಜ ಸಬರದ



೪. *"ನೀನೆಂದಿಗೂ ಕಣ್ತೆರೆದು ನನ್ನನು ನೋಡಲಿಲ್ಲ*
*ನೋಡಿದ್ದರೆ ಈ ಜೀವಕೆ ಯಾತನೆ ಇರುತ್ತಿರಲಿಲ್ಲ"*

– ಬಿ. ಜಗದೀಶ

ಈ ನಾಲ್ಕು ಗಜಲ್‌ಗಳ ದ್ವಿಪದಿಗಳಲ್ಲಿ ಪ್ರೀತಿ-ಪ್ರೇಮದಿಂದುಂಟಾಗುವ ಯಾತನೆಯ ಪರಿಚಯವಿದೆ. ಮೊದಲ ದ್ವಿಪದಿಯಲ್ಲಿ ಬರುವ ಪ್ರೇಯಸಿ ವ್ಯಂಗ್ಯದಲುಗನು ಹಿಡಿದು ನಿಂತಿದ್ದರೆ, ಎರಡನೇ ದ್ವಿಪದಿಯಲ್ಲಿ ಬರುವ ಪ್ರೇಯಸಿ, ಪ್ರಿಯಕರನಿಗೆ ಬೆಂಕಿಯಿಟ್ಟು ಹೋಗಿದ್ದಾಳೆ. ಪ್ರೇಮ ಪತ್ರದಲ್ಲಿ ಹೃದಯ ಚಡಪಡಿಸುತ್ತಿರುವ ತೀವ್ರ ಪರಿಣಾಮವನ್ನು ಮೂರನೇ ದ್ವಿಪದಿ ಹೇಳಿದರೆ, ನಿರ್ಲಕ್ಷ್ಯಕ್ಕೊಳಗಾದ ಪ್ರಿಯಕರನ ಯಾತನೆಯನ್ನು ನಾಲ್ಕನೇ ದ್ವಿಪದಿ ತಿಳಿಸುತ್ತದೆ. ಇಂತಹ ಯಾತನೆಯ ಸಂದರ್ಭದಲ್ಲಿ ಮಂಜುಹನಿ ಕಣ್ಣೀರಾಗಿ ಕಾಣಿಸುತ್ತದೆ, ತಂಪಾದ ಬೆಳದಿಂಗಳು ಸುಡುವ ಬಿಸಿಲಾಗುತ್ತದೆ. ಇಂತಹ ಅನೇಕ-ಯಾತನೆಯ ಅನುಭವಗಳು ಗಜಲ್‌ಗಳಲ್ಲಿವೆ.

೧. *"ಕಲ್ಲುಮುಳ್ಳುಗಳ ಹಾದಿಯಲಿ ನೋವಿನಿಂದ*
*ನೀನಡೆದಾಡುವುದನು ನೋಡಲಾಗದೆ*
*ಈ ಜೀವವನು ಚೈತ್ರವಾಗಿಸಿ ನಿನ್ನ ಕಾಲಡಿಗೆ ಹಾಸಲು ಬಯಸಿದೆ"*

– ತುರುವೀಹಾಳ ಚಂದ್ರು

೨. *"ನಕ್ಷತ್ರಗಳೆಲ್ಲ ಜಾರುತಿವೆ ಸಾಲಾಗಿ ದಾರಿಗೆ*
*ಕಂಬನಿಗಳು ಉದುರುತಿವೆ ಮುತ್ತಾಗಿ ದಾರಿಗೆ"*

– ರವಿ ಹಂಪಿ

೩. *"ಮಿಡಿದ ಕಣ್ಣಿನ ಭಾಷೆ ನಿನಗೆ ತಿಳಿಯಲೇ ಇಲ್ಲ*
*ಬಿದ್ದ ಕಂಬನಿಯ ಸದ್ದಾದರೂ ಒಮ್ಮೆ ನಿನಗೆ ಕೇಳಿಸಲಿ"*

– ಗಣೇಶ ಹೊಸ್ಮನೆ

೪. *"ಕೆಂಡವೀ ಪ್ರೇಮ ಇದನು ಬಚ್ಚಿಡುವ ತಾಕತ್ತು ಹುಡುಗರಿಗಿಲ್ಲ*
*ಸತ್ಯ ಹೇಳಲಾಗದೆ ಕಂಬನಿಗರೆವ ಹುಡುಗಿಯರು ಸಾಮಾನ್ಯರಲ್ಲ"*

– ಸಂಗು ಹುಂಡೇಕಾರ

ಈ ಗಜಲ್‌ಗಳ ದ್ವಿಪದಿಗಳಲ್ಲಿ ಅನೇಕ ಅನುಭವದ ನುಡಿಗಳಿವೆ. ಕಲ್ಲುಮುಳ್ಳುಗಳ ಹಾದಿಯಲಿ ಪ್ರೇಯಸಿ ನಡೆಯಬಾರದೆಂದು ಭಾವಿಸಿದ ಪ್ರಿಯಕರ ತನ್ನ ಜೀವವನ್ನೇ ಚೈತ್ರವನ್ನಾಗಿಸಿ ಅವಳ ಕಾಲಡಿಗೆ ಹಾಕುತ್ತಾನೆ. ಆದರೂ ಅವನ ನೋವು ಕಡಿಮೆಯಾಗುವುದಿಲ್ಲ. ಈ ಪ್ರಿಯಕರ-ಪ್ರೇಯಸಿಯರ ನೋವು-ಯಾತನೆಗಳನ್ನು ನೋಡಿ ನಕ್ಷತ್ರಗಳು ಜಾರತೊಡಗಿವೆ, ಕಂಬನಿಗಳು ಮುತ್ತಾಗಿ ದಾರಿಗೆ ಉದುರುತಿವೆಯೆಂಬ ನುಡಿ ಪರಿಣಾಮಕಾರಿಯಾಗಿದೆ. ಮಿಡಿದ ಕಣ್ಣಿನ ಭಾಷೆ ತಿಳಿಯದಿದ್ದರೂ ಬಿದ್ದ ಕಣ್ಣೀರ ಹನಿ ಕೂಡ ತನ್ನ ಪ್ರೇಯಸಿಗೆ ಕಾಣದಿರುವುದನ್ನು ಕಂಡು ಪ್ರಿಯಕರ ನೋವನ್ನು ವ್ಯಕ್ತಪಡಿಸಿದ್ದಾನೆ. ಪ್ರೇಮ ಕೆಂಡವಿದ್ದ ಹಾಗೆ ಅದನ್ನು ಬಚ್ಚಿಡುವ ಶಕ್ತಿ ಯಾರಿಗೂ ಇಲ್ಲ. ಈ ಪ್ರೇಮದಾಟದಲ್ಲಿ ಸತ್ಯ ಹೇಳದೆ ಹುಡುಗಿಯರು ಕಂಬನಿಗರೆಯುತ್ತಿರುವುದನ್ನು ಗಜಲ್ ಕವಿಗಳು ಪರಿಣಾಮಕಾರಿಯಾಗಿ ಹೇಳಿದ್ದಾರೆ. ಇನ್ನು ಈ ಪ್ರೇಮ ಯಾತನೆಯ ಪ್ರಸಂಗಗಳನ್ನು ಗಜಲ್ ಕವಯತ್ರಿಯರು ಹೀಗೆ ಹೇಳಿದ್ದಾರೆ.

೧. *"ಅರ್ಧ ರಾತ್ರಿಯಲ್ಲಿ ಯಾರ ನೆನಪಾಯಿತೆಂದು ತಂಗಾಳಿಯು ಕೇಳಿತು*
*ಇನ್ನುಳಿದ ರಾತ್ರಿಯನ್ನು ಕಳೆಯುವುದು ಹೇಗೆಂದು ಕಂಬನಿಯು ಕೇಳಿತು"*

– ಎಚ್. ಎಸ್. ಮುಕ್ತಾಯಕ್ಕ

೨. *"ಈ ಜಗತ್ತಿನಲ್ಲಿ ಯಾರಿಗಿಲ್ಲ ನೋವುಗಳು ಹೇಳಿ*
*ಕೈಗಳ ಮದರಂಗಿ ಬಣ್ಣ ಮಾಸಿಲ್ಲವೇ ಹೇಳಿ"*

– ಹೇಮಲತಾ ವಸ್ತ್ರದ

೩. *"ಜೊತೆಜೊತೆಯಲ್ಲಿ ಇದ್ದರೂ ಒಡೆದುಹೋಗಿವೆ ಮನಸ್ಸುಗಳು*
*ಇಂದು ಒಡೆದ ಮನಸುಗಳ ಕಟ್ಟಬೇಕಾದದ್ದು ಬಾಕಿ ಇದೆ ಸಾಕಿ"*

– ಜಯದೇವಿ ಗಾಯಕವಾಡ

೪. *"ಗಂಡ ಕುಡಿದು ತೂರಾಡಿದರೂ ಕೇಳುವಂತಿಲ್ಲ*
*ಹೀಗೇಕಾಯಿತೆಂದು ಕೇಳುವ ಧೈರ್ಯ ನನಗಿಲ್ಲ"*

– ವಿದ್ಯಾವತಿ ಅಂಕಲಗಿ

ಈ ಗಜಲ್‌ಗಳಲ್ಲಿ ಮಹಿಳೆಯ ನೋವಿನ ಎಳೆಗಳನ್ನು ಕವಯತ್ರಿಯರು ಹಿಡಿದಿಟ್ಟಿದ್ದಾರೆ. ಈ ಜಗತ್ತಿನಲ್ಲಿ ಎಲ್ಲರಿಗೂ ನೋವುಗಳಿವೆಯೆಂಬುದನ್ನು ತಿಳಿದುಕೊಂಡಿರುವ ಕವಯತ್ರಿಯರು ಮಹಿಳೆಯರಿಗೇಕೆ ಹೆಚ್ಚು ನೋವು–ಸಂಕಟಗಳು ಬರುತ್ತವೆ? ಎಂದು ಪ್ರಶ್ನಿಸಿದ್ದಾರೆ. ಗಂಡ ಕುಡಿದುಬಂದು ತೂರಾಡಿದರೂ ಕೇಳದ ಸ್ಥಿತಿ ಬಂದಿದೆಯೆಂದು ಮರುಗಿದ್ದಾರೆ. ಜೊತೆಯಲ್ಲಿ ಇದ್ದರೂ ಮನಸ್ಸು ಒಡೆದುಹೋಗಿವೆಯೆಂದು ಹತಾಶಭಾವನೆಯನ್ನು ವ್ಯಕ್ತಪಡಿಸಿದ್ದಾರೆ.

ಪ್ರೀತಿ–ಪ್ರೇಮದ ಪರಿಣಾಮದಿಂದ ಉಂಟಾಗುವ ನೋವು–ಯಾತನೆಗಳ ಜತೆಗೆ, ಕೆಲವು ಕವಿಗಳು ಸಾಮಾಜಿಕ ಅಸಮಾನತೆ–ಜಾತೀಯತೆಯಿಂದಾಗುವ ನೋವಿನ ಎಳೆಗಳನ್ನೂ ತಮ್ಮ ಗಜಲ್‌ಗಳಲ್ಲಿ ಬಿಡಿಸಿಟ್ಟಿದ್ದಾರೆ.

೧. *"ಸ್ವಾತಂತ್ರ್ಯ ಬಂತು ಸಮತೆ ಸಂಪತ್ತು ಬರಲಿಲ್ಲವೊ ಅರಸ*
*ಇವುಗಳಿಗೆಲ್ಲ ಸುಡುವ ಜಾತಿಯ ಕಾರಣವೇನೊ ತಿಳಿಯದು"*

– ಶಾಂತರಸ

೨. *"ನೋವುಗಳು ಎಲ್ಲಿಗೂ ವಲಸೆ ಹೋಗುವುದಿಲ್ಲ*
*ಎಷ್ಟು ತೊಳೆದರೂ ಮೈ ಹೊಲಸೇ ಹೋಗುವುದಿಲ್ಲ"*

– ಸಿದ್ಧಲಿಂಗ ಪಟ್ಟಣಶೆಟ್ಟಿ

೩. *"ಭಾಷಣ ಕೇಳಿ ಚಪ್ಪಾಳೆ ಹೊಡೆವ ಹತ್ತು ಕೈಗಳನು ಅಲ್ಲಿ ನೋಡಿದೆ*
*ಕಷ್ಟದಲಿ ಕಣ್ಣೀರೊರೆಸುವ ಒಂದೂ ಕೈಯನು ಇಲ್ಲಿ ಕಾಣದಾದೆ"*

– ಬಸವರಾಜ ಸಬರದ

೪. *"ಭೂಮಿ ಶವಪೆಟ್ಟಿಗೆ, ಆಕಾಶ ಮುಚ್ಚಳ, ತಾರೆಗಳೆ ತಿರುಪುಗಳು*
*ಭಯಾನಕ ಪ್ರೇತಗಳ ಕ್ರೂರ ಚೇಷ್ಟೆಯಾಗಿದೆ ಬಾಳು"*

– ಆನಂದ ಝುಂಜರವಾಡ

೫. *"ಮನೆಯಾಚೆ ಕಾದಿದ್ದಾರೆ ಕದನಕ್ಕೆ ನೆರೆಹೊರೆ ಮಲ್ಲರು*
*ಊರಾಚೆ ತಿಪ್ಪೆಗುಂಡಿ ಸ್ಮಶಾನಗಳನೂ ಖದೀಮರು ಬಿಡುತ್ತಿಲ್ಲ"*

– ಪ್ರಹ್ಲಾದ ಅಗಸನಕಟ್ಟೆ

೬. *"ಉರಿವ ಬೆಂಕಿಯದೇನು ಸುಖಬಿಡು*
*ಎದೆಯುರಿಯೊಂದಿಗೊಮ್ಮೆ ಸ್ಪರ್ಧೆಯಿಡು"*

– ಜಗದೀಶ ಪೂಜಾರ

ಈ ಗಜಲ್‌ಗಳಲ್ಲಿ ಅನೇಕ ನೋವಿನ ಎಳೆಗಳಿವೆ. ಇನ್ನೂ ಅನೇಕ ಗಜಲ್‌ಗಳಲ್ಲಿ ಅವು ಕಾಣಿಸಿಕೊಂಡಿವೆ. ಸ್ವಾತಂತ್ರ್ಯವೇನೊ ಬಂತು ಆದರೆ ಸಮಾನತೆ ಬರಲಿಲ್ಲವೆಂದು ಶಾಂತರಸರು ತಮ್ಮ ಗಜಲ್‌ದಲ್ಲಿ ಹೇಳಿದ್ದಾರೆ.

## ಅಭಿನಂದನೆ...

ಕೇಂದ್ರ ಸಾಹಿತ್ಯ ಅಕಾಡೆಮಿಯ ೨೦೧೭ನೇ ಸಾಲಿನ "ಭಾಷಾ ಸಮ್ಮಾನ್" ಪ್ರಶಸ್ತಿಯು ಕನ್ನಡದ ಖ್ಯಾತ ಸಂಶೋಧಕ, ಭಾಷಾತಜ್ಞ, ನಿಘಂಟುಕಾರ, ಶತಾಯುಷಿ ನಾಡೋಜ ಪ್ರೊ॥ ಜಿ. ವೆಂಕಟಸುಬ್ಬಯ್ಯ ಅವರಿಗೆ ಲಭಿಸಿದೆ. ಇವರಿಗೆ 'ನವಕರ್ನಾಟಕ' ಹಾಗೂ 'ಹೊಸತು' ಬಳಗದ ಅಭಿನಂದನೆಗಳು.

ಮೈಹೊಲಸು ಹೇಗೆ ಹೋಗುವುದಿಲ್ಲವೋ ಅದೇ ರೀತಿ ನೋವುಗಳು ಎಲ್ಲಿಗೂ ಹೋಗುವುದಿಲ್ಲವೆಂಬ ಸತ್ಯವನ್ನು ಪಟ್ಟಣಶೆಟ್ಟಿಯವರು ತಿಳಿಸಿದ್ದಾರೆ. ಭಾಷಣ ಕೇಳಿ ಚಪ್ಪಾಳೆ ಹೊಡೆವ ಜನ ಕಣ್ಣೀರೊರೆಸುವಾಗ ಇರುವುದಿಲ್ಲ, ಎದೆಯುರಿ ಯಾವ ಬೆಂಕಿಗೂ ಕಡಿಮೆಯಿಲ್ಲ, ಇಲ್ಲಿ ಖದೀಮರೆ ಹೆಚ್ಚಾಗಿದ್ದಾರೆ ಎಂಬಂತಹ ಅನೇಕ ಅನುಭವಗಳನ್ನು ಇಲ್ಲಿಯ ಗಜಲ್ ಕವಿಗಳು ಹಂಚಿಕೊಂಡಿದ್ದಾರೆ.

೧. *"ಯಾರ ನೋವುಗಳನರಿಯುವುದು ಯಾರಿಗೂ ಬೇಕಾಗಿಲ್ಲ*
*ಎಲ್ಲರೂ ನನ್ನವರಲ್ಲವೆನ್ನುವುದನು ತಿಳಿಯದೆ ಹೋದೆ"*

– ಎಚ್. ಎಸ್. ಮುಕ್ತಾಯಕ್ಕ

೨. *"ಹೂವುಗಳ ನಿರೀಕ್ಷೆಯಲ್ಲಿ ತುಳಿದೆ ಮುಳ್ಳುಗಳ ದಾರಿ*
*ಒಂಟಿತನದ ನೋವಿಗೆಲ್ಲಿದೆ ಹರುಷದಾ ಹಾದಿ"*

– ಹೇಮಲತಾ ವಸ್ತ್ರದ

೩. *"ಹೊಟ್ಟೆಯೊಳಗಿನ ಮಾತನ್ನು ಉಸಿರೊಡೆಯುವಂತಿಲ್ಲ*
*ಸೆರಗೊಳಗಿನ ಕಿಚ್ಚನ್ನು ಬಿಚ್ಚುವ ಧೈರ್ಯ ನನಗಿಲ್ಲ"*

– ವಿದ್ಯಾವತಿ ಅಂಕಲಗಿ

೪. *"ಸುರಿದ ಕಂಬನಿಯಲ್ಲಿ ಸೂತಕದ ನೆರಳ ಸರಿಸಬೇಕಾಗಿದೆ*
*ಅವಮಾನದಲ್ಲಿ ಬಿದ್ದ ಈ ನೆಲದ ಹಕ್ಕಿ ಬಿಡುಗಡೆಗೊಳ್ಳಬೇಕಾಗಿದೆ"*

– ಜಯದೇವಿ ಗಾಯಕವಾಡ

ಗಜಲ್ ಕವಯತ್ರಿಯರೂ ಕೂಡ ಸಾಮಾಜಿಕ ಅಸಮಾನತೆಯಿಂದಾಗುವ ನೋವನ್ನು ಕುರಿತು ಮಾತನಾಡಿದ್ದಾರೆ. ವಿಶೇಷವಾಗಿ ಲಿಂಗ–ರಾಜಕಾರಣ ದಿಂದಾಗುವ ನೋವು–ಯಾತನೆಗಳನ್ನು ವಿವರಿಸಿ ಹೇಳಿದ್ದಾರೆ. ಎಲ್ಲರನ್ನೂ ತನ್ನವರೆಂದು ನಂಬಿದ ಮಹಿಳೆಗೆ ಪುರುಷಪ್ರಧಾನ ವ್ಯವಸ್ಥೆ ಶೋಷಣೆಗೆ ಒಳಪಡಿಸಿದಾಗ ತನ್ನವರಾರಿಲ್ಲವೆಂಬ ನಿರಾಶಾಭಾವನೆ ಹುಟ್ಟುತ್ತದೆ. ಒಂಟಿ ಮಹಿಳೆಯರ ಬದುಕು ಮುಳ್ಳಿನ ದಾರಿಯಾಗಿದೆಯೆಂದು ಹೇಳುವ ಈ ಕವಯತ್ರಿಯರ ಗಜಲ್‌ಗಳು ತುಂಬ ಪರಿಣಾಮಕಾರಿಯಾಗಿವೆ. ಮನಸ್ಸು ಬಿಚ್ಚಿ ಹೆಣ್ಣು ಇಲ್ಲಿ ಮಾತನಾಡುವಂತಿಲ್ಲವೆಂಬ ಸತ್ಯವನ್ನವರು ತಿಳಿಸಿದ್ದಾರೆ. ಆದರೂ ಸುರಿದ ಕಂಬನಿಯಲ್ಲಿಯೂ ಸೂತಕದ ನೆರಳನ್ನು ಸರಿಸುವ ಭರವಸೆಯನ್ನವರು ಇಟ್ಟುಕೊಂಡಿದ್ದಾರೆ.

ಪ್ರೀತಿ–ಪ್ರಣಯದ ನೋವು ಯಾತನೆಗಳು ಗಜಲ್‌ಗಳಲ್ಲಿ ಎಷ್ಟು ಸಹಜವಾಗಿ ಪ್ರಕಟವಾಗಿವೆಯೋ ಹಾಗೆ ಸಾಮಾಜಿಕ ಅಸಮಾನತೆಯಿಂದಾಗುವ ನೋವು ಯಾತನೆಗಳು ಪರಿಣಾಮಕಾರಿಯಾಗಿಲ್ಲ. ಮೊದಲಿನಿಂದಲೂ ಗಜಲ್ ಕವಿಗಳು ಸಾಮಾಜಿಕ ಹೋರಾಟ ಮಾಡಿದವರಲ್ಲ. ಈ ಅಸಮಾನತೆಗೆ, ಬಡತನಕ್ಕೆ, ಮಹಿಳಾ ಶೋಷಣೆಗೆ ಕೇವಲ ಒಬ್ಬರು ಮಾತ್ರ ಕಾರಣರಾಗಿರುವುದಿಲ್ಲ. ಸೈದ್ಧಾಂತಿಕ ನಿಲುವನ್ನು ಹೊಂದಿರುವ ಕವಿಗಳು ಮಾತ್ರ ಇದರ ಕಾರಣವನ್ನು ಗುರುತಿಸಬಲ್ಲರು. ಆದರೂ ಕೂಡ ಗಜಲ್ ಕವಿಗಳು ಸಾಮಾಜಿಕ ಕ್ಷೇತ್ರದತ್ತ ಹೊರಳಿ ಬೆಳವಣಿಗೆಗಳಾದುದು ಸ್ವಾಗತಾರ್ಹವಾಗಿದೆ.

ಡಾ॥ ಬಸವರಾಜ ಸಬರದ
ನಂ. ೧, ೨ನೇ ಮುಖ್ಯರಸ್ತೆ, ೨ನೇ ಅಡ್ಡರಸ್ತೆ, ಅಮರಜ್ಯೋತಿ ಲೇಔಟ್
ಕುಪ್ಪಸಾಮಿ ಪಾರ್ಕ್, ಆರ್. ಟಿ. ನಗರ ಅಂಚೆ, ಹೆಬ್ಬಾಳ, ಬೆಂಗಳೂರು – ೫೬೦ ೦೩೨

# ಸೂಫಿ ಕಾವ್ಯಪರಂಪರೆಯ ಇತಿಹಾಸ

**ಡಾ॥ ಎನ್. ಜಗದೀಶ್ ಕೊಪ್ಪ**

**ಸೂ**ಫಿಸಂ ತತ್ವಗಳ ಬಗ್ಗೆ ಮಾತನಾಡುವಾಗ ಅಥವಾ ಬರೆಯುವಾಗ ಸದಾ ನಾವು ಎಚ್ಚರಿಕೆ ಯಿಂದರಬೇಕು. ಏಕೆಂದರೆ, ಸೂಫಿಸಂ ವಿಚಾರಧಾರೆಯನ್ನು ಪ್ರಸ್ತಾಪಿಸುವಾಗ ಅದು ಯಾವ್ಯಾವ ರೂಪದಲ್ಲಿ ನಮ್ಮನ್ನು ಆವರಿಸಿಕೊಂಡಿದೆ ಎಂಬುದನ್ನು ಅಕ್ಷರಗಳಲ್ಲಿ ಮತ್ತು ಮಾತುಗಳಲ್ಲಿ ಹಿಡಿದಿಡಲು ಅಸಾಧ್ಯ. ಈ ಕಾರಣಕ್ಕಾಗಿ ನನಗೆ ಸದಾ ಅಲ್ಲಮನ ವಚನದ ಸಾಲುಗಳು ನೆನಪಾಗುತ್ತವೆ.

ಹರಿವ ನದಿಗೆ ಮೈಯೆಲ್ಲಾ ಕಾಲು/ ಉರಿವ ಕಿಚ್ಚಿಗೆ ಮೈಯೆಲ್ಲಾ ನಾಲಿಗೆ / ಬೀಸುವ ಗಾಳಿಗೆ ಮೈಯೆಲ್ಲಾ ಕೈ –ಎಂದು ಅಲ್ಲಮನು ಹೇಳುವ ಹಾಗೆ ನಮ್ಮ ಮೈ–ಮನಸ್ಸುಗಳನ್ನು ಆವರಿಸಿಕೊಂಡಿರುವ ಸೂಫಿ ತತ್ವ ಕುರಿತು ಮಾತನಾಡುವಾಗ ಬೌದ್ಧಿಕ ಎಚ್ಚರ ಕೂಡ ಅಗತ್ಯ ಎಂದು ಭಾವಿಸಿದ್ದೇನೆ.

ಜಗತ್ತಿನಲ್ಲಿ ಸಾಂಸ್ಥಿಕ ರೂಪು ತಾಳಿ ಉದಯ ವಾದ ಧರ್ಮಗಳ ಜೊತೆ ಜೊತೆಯಲ್ಲಿಯೇ ಅವುಗಳ ವೈರುಧ್ಯ ಅಥವಾ ಅವುಗಳ ಒಳಗಿನ ವಿಕಾರಗಳ ವಿರುದ್ಧ ಪ್ರತಿಭಟಿಸುವ ವಿಚಾರಧಾರೆಗಳು ಕೂಡ ಜೊತೆ ಜೊತೆಯಲ್ಲೇ ಹುಟ್ಟಿಕೊಂಡಿವೆ. ಕ್ರಿಸ್ತಪೂರ್ವದ ಚಾರ್ವಾಕ ಮತ್ತು ಬುದ್ಧನ ವಿಚಾರಧಾರೆಗಳನ್ನೂ ಒಳಗೊಂಡಂತೆ, ನಮ್ಮ ಕನ್ನಡ ನೆಲದ ಶರಣರ ವಿಚಾರಧಾರೆ, ತತ್ವಪದಕಾರರ ಅನುಭಾವ ಇವೆಲ್ಲ ವನ್ನು ಉದಾಹರಣೆಯಾಗಿ ನೀಡಬಹುದಾಗಿದೆ.

ಜಗತ್ತಿನ ಪುರಾತನ ಧರ್ಮ ಎನಿಸಿಕೊಂಡ ಹಿಂದೂ ಧರ್ಮದ ವಿರುದ್ಧ ಮೂರು ಸಾವಿರ ವರ್ಷಗಳ ಹಿಂದೆಯೇ ಭಾರತದಲ್ಲಿ ಲೋಕಾಯತ ದರ್ಶನ ಜನ್ಮತಾಳಿತು. ಚಾರ್ವಾಕನನ್ನು ಜಗತ್ತಿನ ಪ್ರಥಮ ಬಂಡುಕೋರ ಎಂದರೂ ತಪ್ಪಿಲ್ಲ. ಚಾರ್ವಾಕ ದರ್ಶನ ಎಂದು ಕರೆಸಿಕೊಳ್ಳುವ ಲೋಕಾಯತ ದರ್ಶನದಲ್ಲಿ ವೇದಗಳನ್ನು ಕಟು ವಿಮರ್ಶೆಗೆ ಒಳಪಡಿಸಲಾಗಿದೆ. ಏಕೆಂದರೆ, ಚಾರ್ವಾಕನದು ಭೌತಿಕವಾದದ ಪ್ರಜ್ಞೆ. ಜೊತೆಗೆ ಪ್ರಕೃತಿಯನ್ನು ಪ್ರಕೃತಿಯಿಂದ ಅರಿಯುವ ಮನಸ್ಸು. ಹಾಗಾಗಿ ಆತನನ್ನು ಭಾರತದ ಪ್ರಥಮ ತತ್ವಜ್ಞಾನಿ ಎಂದೂ ಕರೆಯಬಹುದು.

ಇನ್ನೊಂದು ಕುತೂಹಲದ ಸಂಗತಿಯೆಂದರೆ, ಈ ನೆಲದ ಮೂಲನಿವಾಸಿಗಳು ಎನಿಸಿಕೊಂಡ ದ್ರಾವಿಡರು ಐದು ಸಾವಿರ ವರ್ಷಗಳ ಹಿಂದೆ ನಿಸರ್ಗದ ವಿಸ್ಮಯಗಳಿಗೆ ತಮ್ಮನ್ನು ತೆರೆದುಕೊಂಡು ಕುತೂಹಲಗೊಂಡು ಭೌತಿಕವಾದದ ಪ್ರಜ್ಞೆಯತ್ತ ಹೆಜ್ಜೆ ಇಟ್ಟರು. ದ್ರಾವಿಡರ ಭೌತಿಕವಾದ ಶುದ್ಧ ಪ್ರಾಕೃತಿಕ ವಿಜ್ಞಾನವಾಗಿತ್ತು. ಬುಡಕಟ್ಟು ಜನಾಂಗಗಳ ರೀತಿಯಲ್ಲಿ ಬದುಕಿದ ದ್ರಾವಿಡರ ಈ ಭೌತಿಕವಾದದ ಪ್ರಜ್ಞೆ ಆನಂತರದ ದಿನಗಳಲ್ಲಿ ಇಲ್ಲಿಗೆ ಕಾಲಿಟ್ಟ ಆರ್ಯರಿಂದ ನಾಶವಾಯಿತು. ಭಾರತದ ದರ್ಶನ ಗಳಲ್ಲಿ ಭೌತಿಕವಾದ ಮತ್ತು ಅಧ್ಯಾತ್ಮವಾದ ಈ ಎರಡೂ ಜ್ಞಾನಪರಂಪರೆಗಳು ಪ್ರತ್ಯೇಕ ಶಾಖೆಗಳಾಗಿ ಹಲವಾರು ಶತಮಾನಗಳ ಕಾಲ ನಮ್ಮ ಜನ ಮಾನಸದಲ್ಲಿ ಗುಪ್ತ ನದಿಗಳಂತೆ ಹರಿದು ಬಂದಿವೆ.

ಭಾರತದಲ್ಲಿ ಸೂಫಿಸಂ ವಿಚಾರಧಾರೆಯ ಅತಿ ಮುಖ್ಯ ಕೊಡುಗೆಯೆಂದರೆ, ಇಸ್ಲಾಂ ಧರ್ಮ. ಎಂದರೆ, ಖಡ್ಗ, ಹಿಂಸೆ ಮತ್ತು ಆಕ್ರಮಣ ಎಂಬ ನಂಬಿಕೆಯನ್ನು ಹೋಗಲಾಡಿಸಿ ಜನರ ಮಧ್ಯೆ ಭಾವೈಕ್ಯತೆಯ ಸೇತುವೆಯನ್ನು ನಿರ್ಮಾಣ ಮಾಡಿದ್ದು. ದೆಹಲಿಯಲ್ಲಿ ಮೊಗಲ್ ದೊರೆಗಳು ಮತ್ತು ಸಿಖ್ಖರ ನಡುವೆ ಯುದ್ಧಗಳು ನಡೆಯುತ್ತಿದ್ದಾಗ, ಪಂಜಾಬಿನಲ್ಲಿ ಅನೇಕ ಸೂಫಿ ಸಂತರು ಮಾನವೀಯತೆಯ ಬೀಜ ಬಿತ್ತಿದರು. ಈ ದಿಶೆಯಲ್ಲಿ ಪಂಜಾಬಿನ ಬುಲ್ಲೆಹ ಶಾ ಅತಿದೊಡ್ಡ ಸೂಫಿ ಸಂತ. ೧೬೮೦ರಲ್ಲಿ ಇಂದಿನ ಲಾಹೋರ್ ಪ್ರಾಂತ್ಯದ ಕೌಸೂರ್ ಜಿಲ್ಲೆಯ ಪಂಡಕಿ ಎಂಬಲ್ಲಿ ಜನಿಸಿದ ಈ ಸಂತನ ಕುರಿತಂತೆ ಹಾಡುವ ಖವಾಲಿಗಳಲ್ಲಿ ಈತನ ಜೀವನ ಸಾಧನೆಯ ಅಂಶಗಳಿವೆ, ಬುಲ್ಲೆಹ ಶಾ ಪಂಜಾಬಿ ಭಾಷೆಯಲ್ಲಿ ಬರೆದ ಅನೇಕ ಸೂಫಿ ಕಾವ್ಯಗಳು ಇವತ್ತಿಗೂ ಜನಪ್ರಿಯವಾಗಿವೆ.







ಇನ್ನೊಂದು ಸೋಜಿಗದ ಸಂಗತಿಯೆಂದರೆ, ಭಾರತದಲ್ಲಿ ಭೌತಿಕವಾದವು ಸಿದ್ಧಾಂತ ಅಥವಾ ದರ್ಶನದ ಸ್ಥಾನವನ್ನು ಅಲಂಕರಿಸುವ ಮೊದಲೇ ಅದು ಗ್ರೀಸ್ ಅಥವಾ ಅಂದಿನ ಗ್ರೀಕ್ ನಾಗರಿಕ ಸಮಾಜದಲ್ಲಿ ಅಸ್ತಿತ್ವದಲ್ಲಿ ಇತ್ತು. ಎಪಿಕ್ಯೂರಸ್, ಡಿಮಾಕ್ರಟಿಸ್, ಉಕ್ರೇಶಿಯಸ್, ಮೊದಲಾದವರು ಪ್ರಕೃತಿವಾದವನ್ನು ಪ್ರತಿಪಾದಿಸಿದ್ದರು. ಆನಂತರದ ದಿನಗಳಲ್ಲಿ ಸಾಂಸ್ಥಿಕ ರೂಪು ತಳೆದ ಕ್ರೈಸ್ತ ಧರ್ಮ ಚರ್ಚುಗಳ ಮೂಲಕ ಇಂತಹ ವಾದಗಳನ್ನು ತಳ್ಳಿಹಾಕಿತು. ಗೆಲಿಲಿಯೊ, ಕೊಪರ್ನಿಕಸ್ ಚರ್ಚುಗಳ ಅಬ್ಬರಕ್ಕೆ ಮತ್ತು ಕ್ರೌರ್ಯಕ್ಕೆ ಬಲಿಯಾದದ್ದು ಈಗ ಇತಿಹಾಸ. ಹೀಗೆ ಜಗತ್ತಿನಲ್ಲಿ ಜನ್ಮ ತಳೆದ ಪ್ರತಿಯೊಂದು ಧರ್ಮವೂ ತನ್ನ ಒಡಲೊಳಗಿನ ಕ್ರೌರ್ಯ ಮತ್ತು ವಿಕಾರಗಳನ್ನು ಪೋಷಿಸುತ್ತಿದ್ದ ವೇಳೆಯಲ್ಲಿ ಅವುಗಳಿಗೆ ಪ್ರತಿಯಾಗಿ ಪ್ರತಿಭಟನೆಯ ರೂಪಗಳು ಸಹ ಜನ್ಮತಾಳಿವೆ. ಇಸ್ಲಾಂ ಧರ್ಮ ಕೂಡ ಇದಕ್ಕೆ ಹೊರತಲ್ಲ.

ಸೂಫಿಸಂ ಎಂಬ ಅನುಭಾವಿಗಳ ವಿಚಾರಧಾರೆ ಹುಟ್ಟಿದ್ದು ಎಲ್ಲಿ, ಇವುಗಳ ಮೂಲ ಮಾತೃಕೆಗಳು ಎಲ್ಲಿವೆ ಎಂಬುದು ಬಹಳ ಮುಖ್ಯ ವಿಚಾರ. ಇವತ್ತಿಗೂ ಸೂಫಿಸಂ ಎನ್ನುವುದು ಇಸ್ಲಾಂ ಧರ್ಮದೊಳಗೆ ಟಿಸಿಲೊಡೆದ ಒಂದು ವಿಚಾರಧಾರೆ ಎಂಬ ಮಾತಿದೆ. ಇದನ್ನು ಸಂಪೂರ್ಣ ಸತ್ಯ ಎನ್ನುವ ಬದಲು ಅರ್ಧ ಸತ್ಯ ಎಂದೇ ನಾವು ವ್ಯಾಖ್ಯಾನಿಸಿಕೊಳ್ಳಬೇಕು. ಏಕೆಂದರೆ, ಅಂದಿನ ಕಾಲದಲ್ಲಿ ಪೂರ್ವ ಮತ್ತು ಪಶ್ಚಿಮ ದೇಶಗಳ ನಡುವೆ ಹೆಬ್ಬಾಗಿಲಿನಂತೆ ಇದ್ದ ಮಧ್ಯ ಏಷ್ಯಾದ ಪರ್ಷಿಯ ಅಂದರೆ, ಇಂದಿನ ಟರ್ಕಿ, ಇರಾನ್, ಇರಾಕ್ ಪ್ರದೇಶಗಳಲ್ಲಿ ಸೂಫಿ ವಿಚಾರಧಾರೆಯೊಂದು ಅಸ್ತಿತ್ವದಲ್ಲಿತ್ತು. ಆ ವಿಚಾರಧಾರೆ ಅತ್ತ ಗ್ರೀಕ್‌ನಿಂದ, ಇತ್ತ ಭಾರತದಿಂದ ಮತ್ತು ತನ್ನ ಪ್ರದೇಶದ ಜತುರಾಷ್ಟ್ರನ ಹಾಗೂ ಯಹೂದಿಗಳ ಅನೇಕ ಚಿಂತನಧಾರೆಗಳಿಂದ ಪ್ರಭಾವಗೊಂಡಿತ್ತು.

ಯಾವುದೇ ಗಡಿರೇಖೆಗಳಿಲ್ಲದೆ ಮುಕ್ತವಾಗಿದ್ದ ಅಂದಿನ ಕಾಲದಲ್ಲಿ ಭಾರತದ ಬೌದ್ಧ ಭಿಕ್ಕುಗಳು, ನಾಥ ಸಂಪ್ರದಾಯದ ಸಾಧಕರು ಮತ್ತು ಪರ್ಷಿಯಾದ ಸೂಫಿ ಸಂತರು ಇವರೆಲ್ಲಾ ಪೂರ್ವ ಮತ್ತು ಪಶ್ಚಿಮದ ನಡುವೆ ನೆಲದ ಮೇಲಿನ ರಹದಾರಿಯಾಗಿದ್ದ ಸಿಲ್ಕ್ ರೂಟ್ ಎಂಬ ದಾರಿಯಲ್ಲಿ ಮುಕ್ತವಾಗಿ ಓಡಾಡಿಕೊಂಡಿದ್ದರು. ಈ ಸಂದರ್ಭದಲ್ಲಿ ಅನೇಕ ದರ್ಶನ ಮತ್ತು ವಿಚಾರಧಾರೆಗಳ ನಡುವೆ ಕೊಳು ಕೊಡುಗಳು ನಡೆದು ಪರಸ್ಪರ ವಿನಿಮಯ ನಡೆದಿರುವುದನ್ನು ತಳ್ಳಿಹಾಕುವಂತಿಲ್ಲ.

ಅರಬ್ ರಾಷ್ಟ್ರಗಳಲ್ಲಿ ಪ್ರಬಲವಾಗಿ ತಲೆ ಎತ್ತಿದ ಇಸ್ಲಾಂ ಧರ್ಮವು ಆನಂತರದ ದಿನಗಳಲ್ಲಿ ಪರ್ಷಿಯ ಪ್ರದೇಶಕ್ಕೆ ವಿಸ್ತರಿಸಿತಾದರೂ ಅದರ ಅರ್ಧ ಸಂಪೂರ್ಣವಾಗಿ ಪರ್ಷಿಯಾದ ಸಂಸ್ಕೃತಿಯನ್ನು ಆಪೋಶನ ತೆಗೆದುಕೊಳ್ಳಲು ಸಾಧ್ಯವಾಗಲಿಲ್ಲ. ಪರ್ಷಿಯನ್ ಭಾಷೆಯ ಸಾಹಿತ್ಯ ಅರಬ್ಬಿ ಭಾಷೆಯ ನಡುವೆ ಹಲವು ಶತಮಾನಗಳ ಕಾಲ ಉಳಿಯಲು ಸಾಧ್ಯವಾಯಿತು. ಅದೇ ರೀತಿ ಇಸ್ಲಾಂ ಧರ್ಮದ ಹೆಸರಿನಲ್ಲಿ ಅನೇಕ ಧರ್ಮ ಪ್ರಚಾರಕರು, ಮೌಲ್ವಿಗಳು ಮತ್ತು ದೊರೆಗಳು ಹಿಂಸೆಯ ಖಡ್ಗವನ್ನು ಕೈಗೆತ್ತಿಕೊಂಡಾಗ ಧರ್ಮದ ಕಟ್ಟುಪಾಡುಗಳನ್ನು ನಿರಾಕರಿಸಿದ ಸೂಫಿಸಂ ವಿಚಾರಧಾರೆ ಅದಕ್ಕೆ ಪ್ರತಿಭಟನೆಯ ರೂಪದಲ್ಲಿ ಅಸ್ತಿತ್ವ ತಾಳಿತು.

ಹಾಗಾದರೆ ಸೂಫಿಸಂ ಎಂದರೆ ಏನು, ಸೂಫಿಸಂ ಶಬ್ದದ ಅರ್ಥ ಏನು ಎಂಬ ಪ್ರಶ್ನೆ ಕೂಡ ಸಹಜವಾದದ್ದು. ಒಂದು ಸರಳ ಮಾತಿನಲ್ಲಿ ಹೇಳಬಹುದಾದರೆ ಅದರ ಅರ್ಥ "ಈ ಜಗತ್ತಿನಲ್ಲಿರು. ಆದರೆ ಜಗತ್ತಿನಲ್ಲಿರದಂತೆ ಬಾಳಲು ಪ್ರಯತ್ನಿಸು" ಎಂದು ಹೇಳಬಹುದು. ನಮ್ಮ ಭಾರತದ ಅನುಭಾವ ಪರಂಪರೆಯ "ಲೌಕಿಕದಲ್ಲಿದ್ದುಕೊಂಡು ಅಲೌಕಿಕ ಬದುಕಿನತ್ತ ಪಯಣಿಸುವುದು ಅಥವಾ ಚಿಂತಿಸುವುದು" ಎಂಬುದರ ಸಮಾನ ಚಿಂತನೆ. ಸೂಫಿಸಂ ಎಂಬ ಶಬ್ದ ಗ್ರೀಸ್ ತತ್ವಶಾಸ್ತ್ರದ ಸೂಫಿಷ್ಟರಿಂದ 'ಸೋಫಿಯಾ' ಎಂಬ ಶಬ್ದದಿಂದ ಚಾಲ್ತಿಗೆ ಬಂದಿತು ಎನ್ನುವ ಮಾತಿದೆ. ಆದರೆ, ಅರಬ್ಬಿ ಭಾಷೆಯ ಸುಫ್ಹಾ ಅಂದರೆ, 'ಜಗುಲಿ' ಮತ್ತು 'ಸೂಫ್' ಅಂದರೆ 'ಉಣ್ಣೆ' ಎಂಬ ಶಬ್ದಗಳಿಂದ ಅಸ್ತಿತ್ವಕ್ಕೆ ಬಂದಿದೆ ಎನ್ನುವ ಮಾತು ಹೆಚ್ಚು ಸೂಕ್ತ.

ಸೂಫಿಸಂನ ಮೂಲ ಚಿಂತನೆಗಳು ಮತ್ತು ಇಸ್ಲಾಂ ಧರ್ಮದ ಪವಿತ್ರ ಗ್ರಂಥವಾದ ಕುರಾನ್‌ನಲ್ಲಿರುವ ಅನೇಕ ತತ್ವಗಳಲ್ಲಿ ಸಾಮ್ಯತೆಗಳಿವೆ. ಕುರಾನ್‌ನಲ್ಲಿ "ದೇವರಿಗಾಗಿ ಕಾರ್ಯ ನಿರ್ವಹಿಸುವುದು ಮತ್ತು ದೇವರ ಹೆಸರಿನಲ್ಲಿ ತ್ಯಾಗ ಮಾಡುವುದು" ಇವುಗಳಿಗೂ ಮತ್ತು ಸೂಫಿ ಪ್ರೇಮ ತತ್ವಗಳಿಗೂ ಅಂತಹ ವ್ಯತ್ಯಾಸವೇನಿಲ್ಲ. ಇಸ್ಲಾಂ ಧರ್ಮದಲ್ಲಿ ಮಹಮದ್ ಪೈಗಂಬರನನ್ನು ದೇವರ ಪ್ರವಾದಿ ಎಂಬುದನ್ನು ಸೂಫಿಗಳು ಒಪ್ಪುತ್ತಾರೆ, ಆದರೆ ಸೈತಾನ ಎಂಬ ಪರಿಕಲ್ಪನೆಯನ್ನು ಸೂಫಿಗಳು ಒಪ್ಪುವುದಿಲ್ಲ. ಇಸ್ಲಾಂ ಧರ್ಮದ ಪ್ರಕಾರ ಜನರ ಕಷ್ಟ ಮತ್ತು ದುಃಖಗಳಿಗೆ ಕಾರಣ ಸೈತಾನನ ಪ್ರಭಾವ. ಅಲ್ಲಾನ ಆಜ್ಞೆ ಮೀರಿದ ಫಲ ಮತ್ತು ಮಾಡಿದ ತಪ್ಪಿಗೆ ವಿಧಿಸಿದ ದಂಡವನ್ನು ತೆರಲು ಒಪ್ಪದೆ ಸೃಷ್ಟಿಯಾದವನು ಈ ಸೈತಾನ ಎಂಬ ನಂಬಿಕೆ ಆ ಧರ್ಮದಲ್ಲಿದೆ. ಈತನ ಕೆಲಸ ಸಜ್ಜನರನ್ನು ದಾರಿ ತಪ್ಪಿಸುವುದೇ ಆಗಿದೆ. ಈ ಮಾತುಗಳನ್ನು ಸೂಫಿ ವಿಚಾರಧಾರೆ ಮಾನ್ಯತೆ ಮಾಡಿಲ್ಲ. ಸೂಫಿ ಸಂತರ ದೃಷ್ಟಿಯಲ್ಲಿ ದೇವರು ಒಬ್ಬನೇ.

ಆತನೊಡನೆ ಮಿಲನವಾಗುವುದು ತಮ್ಮ ಏಕೈಕ ಗುರಿ ಎಂಬುದಾಗಿದೆ. ಸೂಫಿ ಸಂತರ ಚಿಂತನೆಗಳಲ್ಲಿ ದ್ವೈತಕ್ಕಿಂತ ಅದ್ವೈತಕ್ಕೆ ಪ್ರಾಧಾನ್ಯತೆ ನೀಡಿರುವುದನ್ನು ನಾವು ಗಮನಿಸಬಹುದು. ಹಾಗಾಗಿ ಇಸ್ಲಾಂ ಧರ್ಮದ ಯಾವುದೇ ಕಟ್ಟುಪಾಡುಗಳನ್ನು ತಮ್ಮ ಮೇಲೆ ಹೇರಿಕೊಳ್ಳಲು ಇಚ್ಛಿಸದ ಸೂಫಿಗಳು ನೈತಿಕ ಹಾದಿಯಲ್ಲಿ ದೇವರನ್ನು ಅರಸುತ್ತಾ, ಅವನಲ್ಲಿ ಲೀನವಾಗುವ ವ್ಯವಸ್ಥೆಯನ್ನು ನಾವು ಸೂಫಿಗಳ ಪ್ರೇಮ ತತ್ವ ಅಥವಾ ಪಥ ಎಂದೂ ಸಹ ಕರೆಯಬಹುದು.

ಸೂಫಿಯೊಬ್ಬ ದೇವರನ್ನು ಅರಸಿ, ಅವನಲ್ಲಿ ಲೀನವಾಗುವ ನಿಟ್ಟಿನಲ್ಲಿ ತನ್ನನ್ನು **'ಸಾಲೀಕ್'**, ಅಂದರೆ ಸಾಧಕ ಎಂದು ಕರೆದುಕೊಳ್ಳುತ್ತಾನೆ. ನಂತರ ಒಂದು ನಿರ್ದಿಷ್ಟ ಪಥದಲ್ಲಿ (ಇದನ್ನು ತರೀಕತ್ ಎಂದು ಕರೆಯಲಾಗುತ್ತದೆ.) ಸಾಗುತ್ತಾ ಅಂತಿಮವಾಗಿ ಒಂದೊಂದೇ ಸಾಧನೆಯ (ಮಕಾಮತ್ ಎಂದು ಈ ಹಂತವನ್ನು ಕರೆಯಲಾಗುತ್ತದೆ) ಮೆಟ್ಟಿಲೇರುತ್ತಾ ದೇವರಲ್ಲಿ ಲೀನವಾಗುವ ತನಕ ಮುಂದುವರಿಯುತ್ತಾನೆ. ಇದು ಒಂದು ರೀತಿಯಲ್ಲಿ ಖಾಲಿ ಹಾಥ್, ಖಾಲಿ ಗಾಥ್ ಎಂಬ ಸ್ಥಿತಿ. ಇದನ್ನು ನಮ್ಮ ಬೌದ್ಧ ಭಿಕ್ಕುಗಳ ಶೂನ್ಯದ ಪ್ರಜ್ಞೆಯ ಪರಿಕಲ್ಪನೆ ಅಥವಾ ನಮ್ಮ ಶರಣರ ಬಯಲು ತತ್ವದ ಪರಿಕಲ್ಪನೆಗೆ ಹೋಲಿಸಬಹುದು.

'ಕಿತಾಬ್? ಅಲ್ – ಲುಮಾ' ಎಂಬ ಸೂಫಿ ಪಂಥದ ಅತ್ಯಂತ ಪ್ರಾಚೀನ ಗ್ರಂಥದಲ್ಲಿ ಸೂಫಿಗಳ ಸತ್ಯಾನ್ವೇಷಣೆಗೆ ಏಳು ಮಾರ್ಗಗಳನ್ನು ಸೂಚಿಸಲಾಗಿದೆ. ಒಬ್ಬ ವ್ಯಕ್ತಿ ತಸ್ವುಫ್ ಎಂದು ಕರೆಯಲಾಗುವ ಅನುಭಾವ ಪರಂಪರೆಗೆ ತೆರೆದುಕೊಂಡು, ಸೂಫಿಯಾಗಲು ಈ ಏಳು ಹಂತಗಳನ್ನು ಸೋಪಾನಗಳು ಎಂದು ವ್ಯಾಖ್ಯಾನಿಸಲಾಗಿದೆ.

ಅವುಗಳೆಂದರೆ ಪಶ್ಚಾತ್ತಾಪ – ಸಂಯಮ – ವೈರಾಗ್ಯ – ದೈನ್ಯ – ಧೈರ್ಯ – ದೇವರಲ್ಲಿ ನಂಬಿಕೆ – ಸಂತೋಷ ಅಥವಾ ಆನಂದ – ಇವುಗಳು ಸೂಫಿಯಾಗುವ ವ್ಯಕ್ತಿಯೊಬ್ಬನಿಗೆ ಅನುಶಾಸನಗಳಾಗಿವೆ.

ಸೂಫಿ ಮತ್ತು ದೇವರ ನಡುವಿನ ಅನುಸಂಧಾನವನ್ನು ನಾವು ನಮ್ಮ ಭಾರತೀಯ ಪರಂಪರೆಯ ಅಲ್ಲಮ – ಗುಹೇಶ್ವರ, ಅಕ್ಕ ಮತ್ತು ಚನ್ನಮಲ್ಲಿಕಾರ್ಜುನ, ಕನಕದಾಸ ಮತ್ತು ಕೃಷ್ಣ, ಪುರಂದರ ದಾಸರು ಮತ್ತು ವಿಠಲ ಇವರುಗಳ ಸಂಬಂಧಕ್ಕೆ ಹೋಲಿಸಬಹುದು.

ಸೂಫಿಗಳ ಮನೋಭಾವವೂ ಕೂಡ ಅಕ್ಕಮಹಾದೇವಿ ಹೇಳುವಂತೆ: 'ಹಸಿವಾದೊಡೆ ಭಿಕ್ಷಾನ್ನಗಳುಂಟು / ತೃಷೆಯಾದೊಡೆ ಕೆರೆ ಬಾವಿ ನೀರುಗಳುಂಟು / ಶಯನಕ್ಕೆ ಪಾಳು ದೇಗುಲವುಂಟು / ಆತ್ಮ ಸಂಗಾತಕ್ಕೆ ಚನ್ನಮಲ್ಲಿಕಾರ್ಜುನಾ ನೀನುಂಟು' ಎಂಬ ಸ್ಥಿತಿಯದು.

ತಾವು ನಂಬಿದ ದೇವರನ್ನು ತಮ್ಮೊಳಗೆ ಕಾಣಲು ಸೂಫಿಗಳು ಬದುಕಿನುದ್ದಕ್ಕೂ ನಡೆಸಿದ ಹೋರಾಟ ನಿಜಕ್ಕೂ ಕುತೂಹಲಕಾರಿಯಾದುದು. ಭಾರತದ ಭಕ್ತಿಯ ಪರಂಪರೆ ಮತ್ತು ಅದರೊಂದಿಗೆ ಮಿಳಿತಗೊಂಡಿದ್ದ ಮೈ ಮರೆಯುವ ಪ್ರಜ್ಞೆ ಅಥವಾ ವಿರಕ್ತ ಮಠದ ಪರಿಕಲ್ಪನೆಯಷ್ಟು ಸುಲಭವಾಗಿರಲಿಲ್ಲ.

ಅಲ್ಲಮನ ಮಠವೇಕೊ? ಪರ್ವತವೇಕೊ? / ಜನರೇಕೊ? ನಿರ್ಜನವೇಕೋ / ಚಿತ್ತ ಸಮಾಧಾನವುಳ್ಳ ಶರಣಂಗೆ ಎಂಬ ಸ್ಥಿತಿಯನ್ನು ತಲುಪಲು ಸೂಫಿಗಳು ತಮ್ಮ ಕಾಯವನ್ನು ದಂಡಿಸುತ್ತಾ ಕಂಬಳಿ ಅಥವಾ ತೇಪೆ ಹಾಕಿದ ನಿಲುವಂಗಿ ಮತ್ತು ಭಿಕ್ಷಾ ಪಾತ್ರೆಗಳ ಮೂಲಕ ಜೀವನವನ್ನು ಸವೆಸಬೇಕಾಯಿತು. ಹಾಗಾಗಿ ಇಹಲೋಕದ ಗುಂಗನ್ನು ದಾಟಲು, ಮಾದಕ ವಸ್ತುಗಳು, ಪಾನೀಯ ಮತ್ತು ಮೈದಣಿಯುವ ನೃತ್ಯಕ್ಕೆ ಮೊರೆಹೋದರು.

ದೇವರಲ್ಲಿ ಮೊರೆಹೋಗುವ ಅಥವಾ ಲೀನವಾಗುವ ಹಂತದಲ್ಲಿ ಅವರು ನಡೆಸಿದ ಅನುಸಂಧಾನ ಮತ್ತು ಧರ್ಮದ ಕಂದಾಚಾರಗಳು ಹಾಗೂ ರಾಜಪ್ರಭುತ್ವದ ಹಿಂಸೆಯಿಂದ ಪಾರಾಗಲು ಅವರು ತಮ್ಮ ಕಾವ್ಯ ಅಥವಾ ಹಾಡುಗಳಲ್ಲಿ ಬಳಸಿದ ಪ್ರತಿಮಾ ರೂಪಗಳು ಹಾಗೂ ರೂಪಕ ಭಾಷೆಗಳು ಸೂಫಿಸಂ ಪ್ರೇಮ ತತ್ವದ ನಿಜವಾದ ಜೀವಾಳಗಳು. ಜೊತೆಗೆ, ಸೂಫಿಗಳ ಮೂಲ ತತ್ವಗಳಲ್ಲಿ ಒಂದಾದ ಗುರು–ಶಿಷ್ಯ ಪರಂಪರೆಯಲ್ಲಿ ಗುರುಗಳಿಗೆ ತಮ್ಮನ್ನು ಒಡ್ಡಿಕೊಂಡು, ಗುರುವಿನ ಮೂಲಕ ಲೋಕವಿದ್ಯೆ ಮತ್ತು ರಹಸ್ಯ ವಿದ್ಯೆ ಕಲಿಯುವ ಸೂಫಿಗಳು ಗುರುವನ್ನು ದೈವತ್ವಕ್ಕೆ ಏರಿಸಿದ್ದರು. ಅಲ್ಲಾನನ್ನು ಹೊರತುಪಡಿಸಿ ಬೇರೆಯವರಿಗೆ ಮಣಿಯಬಾರದು ಎಂಬ ಇಸ್ಲಾಂ ಮೂಲ ತತ್ವಕ್ಕೆ ಇವರು ಒಡ್ಡಿದ ವಿರೋಧ ಕಟ್ಟಾ ಮುಸ್ಲಿಂ ವಾದಿಗಳ ಪಾಲಿಗೆ ದೈವವಿರೋಧಿ ನೀತಿಯಾಯಿತು.

ತಾವು ಬದುಕಿದ ವರ್ತಮಾನದ ಬದುಕಿನ ವೈರುಧ್ಯಗಳನ್ನು ಮತ್ತು ಧರ್ಮ ಮತ್ತು ಸಮಾಜದ ಜೀವ ವಿರೋಧಿ ನಿಲುವುಗಳನ್ನು ಪ್ರತಿಭಟಿಸುವ ಸಲುವಾಗಿ ಇವರು ತುಳಿದ ಅನುಭಾವದ ಮಾರ್ಗ ನಿಜಕ್ಕೂ ಬೆರಗು ಮೂಡಿಸುವಂತಹದ್ದು. ಇದನ್ನು ಅರ್ಥೈಸಿಕೊಂಡಾಗ ಮಾತ್ರ ನಮಗೆ ಸೂಫಿ ಪಂಥದ ಪ್ರೇಮ ಭಾವನೆಗಳು ದಕ್ಕಲು ಸಾಧ್ಯ.

ಇದು ಸೂಫಿ ಸಂತರ ಅನುಭಾವದ ಮಾರ್ಗ

ಒಂದು : ವ್ಯಕ್ತಿಯೊಬ್ಬ ಲೌಕಿಕ ಬದುಕಿನಲ್ಲಿ ತಾನು ಮಾಡಿದ ಪಾಪಗಳ ಬಗ್ಗೆ ಪಶ್ಚಾತ್ತಾಪ ಪಡುವುದು ಅನುಭಾವದ ಮೊದಲ ಹೆಜ್ಜೆ.

ಎರಡು : ಅಲ್ಲಾನನ್ನು ಹೊರತುಪಡಿಸಿದಂತೆ ಉಳಿದೆಲ್ಲಾ ಜಗತ್ತನ್ನು ಮರೆತುಬಿಡುವುದು ನಿಜವಾದ ಪಶ್ಚಾತ್ತಾಪ.

ಹೀಗೆ ಸರ್ವಸಂಗ ಪರಿತ್ಯಾಗಿಯಾಗಿ ಸಮರ್ಪಣಾ ಭಾವದಿಂದ ಸನ್ಯಾಸತ್ವ ಅಥವಾ ವೈರಾಗ್ಯವನ್ನು ತಾಳುವ ಸಾಧಕನನ್ನು ಮೂರು ವರ್ಷಗಳ ಕಾಲ ಆಧ್ಯಾತ್ಮಿಕ ಅನುಶಾಸನಗಳ ಚೌಕಟ್ಟಿನಲ್ಲಿ ಇರಿಸಲಾಗುತ್ತದೆ.

ಈ ಅವಧಿಯಲ್ಲಿ ಮೊದಲನೆಯ ವರ್ಷದಲ್ಲಿ ಜನಸಾಮಾನ್ಯರ ಸೇವೆ, ಎರಡನೆಯ ವರ್ಷದಲ್ಲಿ ದೇವರ ಸೇವೆ ಮತ್ತು ಮೂರನೆಯ ವರ್ಷದಲ್ಲಿ ತನ್ನ ಹೃದಯವನ್ನು ಅಲ್ಲಾನಿಗಾಗಿ ಜಾಗೃತಗೊಳಿಸಬೇಕಾಗುತ್ತದೆ. ಈ ರೀತಿ ಮೂರು ವರ್ಷಗಳ ಕಾಲ ದೇವರ ಉಪಾಸನೆ ಮಾಡಿದ ಸಾಧಕನಿಗೆ ಮುರಾಕ್ಕಾತ್ ದೀಕ್ಷೆ. ಅಂದರೆ, ಅವನಿಗೆ ತೇಪೆ ಹಾಕಿದ ಬಟ್ಟೆಯನ್ನು ನೀಡಲಾಗುತ್ತದೆ.

ಆತ ಸಾಧನೆಯ ಹಾದಿಯನ್ನು ತುಳಿಯುತ್ತಾ, ತನ್ನ ಇಂದ್ರಿಯಗಳ ಆಕಾಂಕ್ಷೆಗಳನ್ನು ದಮನ ಮಾಡುತ್ತಾ, ತನ್ನ ವ್ಯಕ್ತಿತ್ವದಲ್ಲಿದ್ದ ಅವಗುಣಗಳಾದ ಕೋಪ, ತಾಪ, ಕಾಮ, ಆಸೆ, ದುಃಖ ಇವೆಲ್ಲವನ್ನು ಕಡಿಮೆಗೊಳಿಸುತ್ತಾ ನಡೆಯುತ್ತಿದ್ದಂತೆ, ದೇವರಲ್ಲಿ ಇರುವ ಅವನ ನಂಬಿಕೆ ಬಲಗೊಳ್ಳುತ್ತಾ ಹೋಗುತ್ತದೆ. ಕೇವಲ ದೇವರ ಧ್ಯಾನದಲ್ಲಿ ಮುಳುಗುವ ಸೂಫಿಯ ಹೃದಯದಲ್ಲಿ ಪ್ರೇಮ ಭಾಷೆಯಲ್ಲದೆ ಬೇರೇನೂ ಉದಯಿಸದು. ಹೀಗೆ ಅಲ್ಲಾನಲ್ಲಿ ಲೀನವಾಗುವ ನಿಟ್ಟಿನಲ್ಲಿ ಸೂಫಿಗಳು ಹಾಡಿದ ಕಾವ್ಯವೇ ಪ್ರೇಮ ಕಾವ್ಯ. ಅವರು ದೇವರನ್ನು ಮತ್ತು ತಮ್ಮ ಗುರುಗಳನ್ನು ಪ್ರಿಯತಮೆಗೆ ಹೋಲಿಸಿ ಕಟ್ಟಿದ ಹಾಡುಗಳು ಪ್ರೇಮ ಕಾವ್ಯ ಅಥವಾ ಪ್ರೇಮ ತತ್ವಗಳಾಗಿ ಪ್ರಸಿದ್ಧಿ ಪಡೆದಿವೆ.

ಸೂಫಿಗಳು ತಾವು ಬದುಕಿದ ವರ್ತಮಾನದ ಬದುಕಿನ ವೈರುಧ್ಯಗಳನ್ನು ಮತ್ತು ಧರ್ಮಶಾಸ್ತ್ರದ ಮಿತಿಗಳನ್ನು ಕಾವ್ಯದ ಮೂಲಕ ಪ್ರತಿಭಟಿಸಿದರಾದರೂ ಸೂಫಿ ಕಾವ್ಯಕ್ಕೆ ಅವರು ಬಳಸಿದ್ದು ರೂಪಕ ಭಾಷೆಯಾಗಿತ್ತು. ಸತ್ಯವನ್ನು ಪ್ರತಿಮೆಗಳ ಮೂಲಕ ಬೆಡಗಿನ ಭಾಷೆಯಲ್ಲಿ ವಿವರಿಸುತ್ತಾ, ಧರ್ಮದ ವಿರುದ್ಧ ತಮ್ಮ ತಾತ್ವಿಕ ವಿರೋಧವನ್ನು ವ್ಯಕ್ತಪಡಿಸುತ್ತಾ ಬಂದರು. ಜೊತೆಗೆ ತಮ್ಮ ಶಿಷ್ಯರಿಗೆ ಕೆಲವು ರಹಸ್ಯಗಳನ್ನು ಹೇಳುವ ವಿಧಾನವೂ



ಇದಾಗಿತ್ತು. ಭಾರತದಲ್ಲಿ ನಮ್ಮ ಶರಣರು ಬಳಸಿದ ಬೆಡಗಿನ ವಚನಗಳು, ಬೌದ್ಧ ಯತಿಗಳು ಬಳಸಿದ ಗಹನ ಗುಹರ ಭಾಷೆ ಅಥವಾ ನಾಥ ಪಂಥದಲ್ಲಿ ಅಸ್ತಿತ್ವದಲ್ಲಿದ್ದ ಸಂಧ್ಯಾ ಭಾಷೆ ಇವೆಲ್ಲವೂ ಹೊಸ ಸತ್ಯಗಳನ್ನು ಹೇಳಲು ಅನುಭಾವಿಗಳು ಕಂಡುಕೊಂಡ ಮಾರ್ಗವಾಗಿತ್ತು.

ಸೂಫಿಗಳು ರೂಪಕ ಭಾಷೆಗಿಂತ ಅಧಿಕವಾಗಿ ತಮ್ಮ ಕಾವ್ಯದಲ್ಲಿ ಪ್ರತಿಮೆಗಳನ್ನು ಬಳಸಿದ್ದಾರೆ. ಇಸ್ಲಾಂ ಧರ್ಮಕ್ಕೆ ವಿರೋಧವೆನಿಸುವ ಮದಿರೆ, ಮಧುಶಾಲೆ, ಮಧುಪಾತ್ರೆ, ಸಾಕಿ, ಪ್ರಿಯತಮೆ, ಉದ್ಯಾನವನ, ಬುಲ್ ಬುಲ್ ಹಕ್ಕಿ ಇವೆಲ್ಲವೂ ಸಾಕಷ್ಟು ಪ್ರತಿಮೆಗಳಾಗಿ ಅವರ ಪ್ರೇಮ ಕಾವ್ಯಗಳಲ್ಲಿ ಕಾಣಿಸಿಕೊಂಡಿವೆ. ಇಸ್ಲಾಂ ಜಗತ್ತಿನಲ್ಲಿ ಕುಡಿಯುವುದು ಧರ್ಮ ವಿರೋಧಿ ಚಟುವಟಿಕೆ ಎಂಬ ಕಾನೂನು ಜಾರಿಗೆ ಬಂದಾಗ, ಸೂಫಿಗಳೇ ಅಲ್ಲದೆ, ಅನೇಕ ಕವಿಗಳು, ಮದಿರೆ ಮತ್ತು ಮದಿರಾಲಯವನ್ನು ತಮ್ಮ ಕಾವ್ಯಗಳಲ್ಲಿ ಪ್ರತಿಮೆಯ ರೂಪದಲ್ಲಿ ಜೀವಂತವಾಗಿಟ್ಟರು. ಇವರಲ್ಲಿ ಹಫೀಜ್ ಮತ್ತು ಉಮರ ಖಯಾಮ್ ಅಗ್ರಗಣ್ಯರು.

ದೇವರನ್ನು ತಲುಪಲು ಗುಂಗು ಅಥವಾ ಉನ್ಮಾದ ಒಂದು ಮಾಧ್ಯಮವೆಂಬುದು ಸೂಫಿಗಳ ನಂಬಿಕೆಯಾಗಿತ್ತು. ಜೊತೆಗೆ, ದೇವರು ಮತ್ತು ಭಕ್ತನ ನಡುವಿನ ಅವಿನಾಭಾವ ಸಂಬಂಧಗಳನ್ನು ಪ್ರಿಯತಮೆಯ ಪ್ರೇಮದ ಪ್ರತಿಮೆಗಳಾಗಿ ಬಳಸಿಕೊಂಡರು. ಜಲಾಲುದ್ದೀನ್ ರೂಮಿಯಂತೂ ಹೆಣ್ಣೊಬ್ಬಳನ್ನು ಪ್ರೇಮಿಸದ, ಆರಾಧಿಸದ ದೇವರನ್ನು ನಾನು ನಂಬಲು ಸಾಧ್ಯವಿಲ್ಲ ಎಂದು ಹೇಳಿದ್ದಾನೆ. ಹಾಗಾಗಿ ಸೂಫಿಗಳ ಕಾವ್ಯದಲ್ಲಿ ಕಂಡುಬರುವ ಮದಿರೆ, ಮಾನಿನಿ, ಮದಿರಾಲಯ, ಸಾಕಿ ಅಥವಾ ಪ್ರಿಯತಮೆ ಅವಳ ಕುರಿತ ವಿರಹ ವೇದನೆ ಇವೆಲ್ಲವೂ ಸಾಂಕೇತಿಕ ಅರ್ಥದಲ್ಲಿ ಬಳಕೆಯಾಗಿವೆ. ಆದರೆ, ಪಾಶ್ಚಿಮಾತ್ಯ ವಿದ್ವಾಂಸರು ೧೯ ಮತ್ತು ೨೦ನೆಯ ಶತಮಾನದಲ್ಲಿ ಸೂಫಿ ಕಾವ್ಯದಲ್ಲಿ ಬೇರೊಂದು ಅರ್ಥವನ್ನು ಗ್ರಹಿಸಿ, ರೋಚಕತೆಯಿಂದ ಇಂಗ್ಲಿಷ್ ಭಾಷೆಗೆ ಅನುವಾದಿಸಿದರು. ಇವರಲ್ಲಿ ಉಮರ್ ಖಯಾಮ್‌ನನ್ನು ಅನುವಾದಿಸಿದ ಫಿಟ್ಸ್ ಜೆರಾಲ್ಡ್ ಪ್ರಮುಖನು.

ಸೂಫಿಗಳು ತಮ್ಮ ಕಾವ್ಯ ಭಾಷೆಯಲ್ಲಿ ಬಳಸಿದ ರೂಪಕದ ಭಾಷೆಯಾಗಲೀ ಅಥವಾ ಪ್ರತಿಮೆಗಳಾಗಲೀ ಇವೆಲ್ಲವೂ ತಾವು ಕಂಡ ಸತ್ಯವನ್ನು ಹೇಳುತ್ತಾ, ಧಾರ್ಮಿಕ ಆಚರಣೆಗಳ ಹುಸಿತತ್ವಗಳನ್ನು ಬಯಲು ಮಾಡುತ್ತಾ ಏಕಕಾಲಕ್ಕೆ ಪ್ರಭುತ್ವದಿಂದ ಮತ್ತು ಧಾರ್ಮಿಕ ನಾಯಕರಿಂದ ತಮ್ಮನ್ನು ತಾವು ರಕ್ಷಿಸಿಕೊಳ್ಳುವ ಮಾರ್ಗವಾಗಿತ್ತು.

ಇಂತಹ ಪರ್ಯಾಯ ಮಾರ್ಗಗಳ ನಡುವೆಯೂ ಅನೇಕ ಸೂಫಿಗಳು ಸತ್ಯ ನುಡಿದ ಫಲವಾಗಿ ತಮ್ಮ ಜೀವವನ್ನು ತೆತ್ತಿದ್ದಾರೆ. ಇವರುಗಳಲ್ಲಿ ಸೂಫಿ ಜಗತ್ತಿನಲ್ಲಿ ಮುಖ್ಯರಾದವರೆಂದರೆ, ಅಂದಿನ ಪರ್ಷಿಯಾದ ಭಾಗವಾಗಿದ್ದ ಇರಾನಿನ ಹಲ್ಲಾಜ್ ಮತ್ತು ನಮ್ಮ ದೆಹಲಿಯಲ್ಲಿ ಔರಂಗಜೇಬನಿಂದ ನಡುಬೀದಿಯಲ್ಲಿ ವಧಿಸಲ್ಪಟ್ಟ ದಾರಾಶಿಕೊವಿನ ಗುರು ಸಮರ್ದ್ ಎಂಬ ಸೂಫಿ ಸಂತರು ಪ್ರಮುಖರಾಗಿದ್ದಾರೆ.

ಅಲ್ ಹಲ್ಲಾಜ್ ತಾನೇ ಸತ್ಯ ಎಂದು ಘೋಷಿಸಿಕೊಂಡ ಪರಿಣಾಮವಾಗಿ ಅಲ್ಲಿನ ಧರ್ಮಾಂಧರಿಂದ ವಧಿಸಲ್ಪಟ್ಟ ದುರದೃಷ್ಟ ಸೂಫಿ ಸಂತ. ತಾನು ಸಾಯುವ ವೇಳೆಯಲ್ಲಿ ಆತ ನುಡಿದ ಈ ಕಾವ್ಯದ ಸಾಲುಗಳು ಸೂಫಿ ಕಾವ್ಯದಲ್ಲಿ ಇವೊತ್ತಿಗೂ ಜೀವಂತವಾಗಿವೆ:

ನನ್ನ ಮತ್ತು ಸತ್ಯದ ನಡುವಿನ
ತಿಳುವಳಿಕೆಯಲ್ಲಿ ಯಾವ
ವ್ಯತ್ಯಾಸವು ಇಲ್ಲ. ಇದನ್ನು
ಅಳಿಸುವ ಯಾವ ಸಾಕ್ಷಿಯೂ ಇಲ್ಲ.
ಸತ್ಯವೆಂಬುದು ಕಣ್ಣೆದುರಿಗಿನ ಬೆಳಕು
ಪ್ರತಿ ಬೆಳಕಿನ ಕಿಡಿಯಿಂದ
ಅದು ಪ್ರಜ್ವಲಿಸುತ್ತದೆ.

ಇದೇ ಸಂದರ್ಭದಲ್ಲಿ ರೋಮ್ ಸಾಮ್ರಾಜ್ಯದಲ್ಲಿ ಯುವಕರನ್ನು ಹಾದಿ ತಪ್ಪಿಸುತ್ತಿದ್ದಾನೆ ಎಂಬ ಆರೋಪಕ್ಕೆ ಗುರಿಯಾದ ತತ್ವಜ್ಞಾನಿ ಸಾಕ್ರೆಟೀಸ್‌ಗೆ ಅಲ್ಲಿನ ನ್ಯಾಯಾಲಯ ಮರಣದಂಡನೆ ವಿಧಿಸಿದಾಗ, ಆತನು ನುಡಿದ "ನಾನು ಸಾಯಲು ಹೊರಟಿದ್ದೇನೆ, ನೀವು ಬದುಕಲು ಹೋಗುತ್ತಿದ್ದೀರಿ, ಯಾವುದು ಶ್ರೇಷ್ಠ ಎಂಬುದನ್ನು ನೀವೇ ನಿರ್ಧರಿಸಿ" ಎಂಬ ಮಾತು ನೆನಪಾಗುತ್ತದೆ.

ಮೊಗಲ್ ಸಾಮ್ರಾಜ್ಯದ ಮನೆತನದ ದಾರಾಶಿಕೊ ಕೊಲೆಯಿಂದ ಗುರು ಸಮರ್ದ್ ತಲ್ಲಣಿಸಿಹೋದನು. ಅವನ ತಲ್ಲಣಗಳು ಸೂಫಿ ಸಂತ ಪರಂಪರೆಯಲ್ಲಿ ಗುರು–ಶಿಷ್ಯ ಸಂಬಂಧಕ್ಕೆ ಸಾಕ್ಷಿಯಾಗಿದೆ. ದಾರಾಶಿಕೊ ತನ್ನ ಸಹೋದರ ಔರಂಗಜೇಬನಿಂದ ಕೊಲ್ಲಲ್ಪಟ್ಟಾಗ ಕೊಲೆಯನ್ನು ಪ್ರತಿಭಟಿಸಿದ ಸಮರ್ದ್, ದೆಹಲಿ ಬೀದಿಗಳಲ್ಲಿ ಬೆತ್ತಲೆ ತಿರುಗಿ ಔರಂಗಜೇಬನ ಕ್ರಮವನ್ನು ಪ್ರತಿಭಟಿಸಿದನು.



ಆತನಿಗೆ ವಸ್ತ್ರ ತೊಡಿಸಲು ಬಂದ ಔರಂಗಜೇಬನಿಗೆ "ನೀನು ನನ್ನ ತೊತ್ತು. ನಿನ್ನಿಂದ ಯಾವ ಭಿಕ್ಷೆಯೂ ಬೇಡ ಎಂದು ಪ್ರತಿಭಟಿಸಿ, ಕೊನೆಗೆ ಶಿಷ್ಯನಂತೆ ತಾನೂ ಕೊಲ್ಲಲ್ಪಟ್ಟ ದುರದೃಷ್ಟ ಸೂಫಿ ಸಂತ.

ಹೀಗೆ ಅನೇಕ ಬಲಿದಾನ ಮತ್ತು ತ್ಯಾಗ ಪರಂಪರೆಯ ಸೂಫಿಗಳು ಜಗತ್ತಿನ ಯಾವುದೇ ಧರ್ಮ ಅಥವಾ ಪ್ರಭುತ್ವದ ಒತ್ತಡಗಳಿಗೂ ಮಣಿಯದೆ, ತಮ್ಮ ಪ್ರೇಮ ತತ್ವಗಳನ್ನು ಪ್ರತಿಪಾದಿಸುತ್ತಾ, ಸಾರುತ್ತಾ ಬಂದಿದ್ದಾರೆ. ಸೂಫಿಸಂ ಎಂಬುದು ಬದುಕಿನ ಒಂದು ಕ್ರಮ ಎಂಬುದನ್ನು ನಿರೂಪಿಸಿದ್ದಾರೆ.

ಸೂಫಿಸಂ ವಿಚಾರಧಾರೆ ಅಂದಿನ ಪರ್ಷಿಯ ದೇಶದಲ್ಲಿ ತಲೆ ಎತ್ತಿದ ಕಾಲಕ್ಕೆ ಸರಿಸಮನಾಗಿ ಇತ್ತ ನಮ್ಮ ಕನ್ನಡ ನಾಡಿನಲ್ಲಿ ಹನ್ನೊಂದನೆಯ ಮತ್ತು ಹನ್ನೆರಡನೆಯ ಶತಮಾನದಲ್ಲಿ ವಚನ ಚಳವಳಿ ಶರಣರ ಮೂಲಕ ಆರಂಭವಾದದ್ದು ಕಾಕತಾಳೀಯ ಎನಿಸಿದರೂ ಸಹ ಸೋಜಿಗದ ಸಂಗತಿ. ತಾವು ಬದುಕಿದ ವರ್ತಮಾನದ ಬದುಕಿನಲ್ಲಿ ಕಂಡ ತಲ್ಲಣಗಳನ್ನು, ವೈರುಧ್ಯಗಳನ್ನು ಸೂಫಿಗಳು ಕಾವ್ಯದ ಮೂಲಕ ದಾಖಲಿಸಿರುವುದು ವಿಶೇಷ ಮಾತ್ರವಲ್ಲ, ಇವತ್ತಿಗೂ ಆ ಕಾವ್ಯಗಳು, ಹಲವು ಶತಮಾನ ಕಳೆದರೂ, ತಲೆಮಾರಿನಿಂದ ತಲೆಮಾರಿಗೆ, ಎದೆಯಿಂದ ಎದೆಗೆ ಹರಿದು ಬಂದಿವೆ. ಜೊತೆಗೆ ಜಗತ್ತಿನೆಲ್ಲೆಡೆ ಎಲ್ಲರ ನಾಲಿಗೆಯ ಮೇಲೆ ಹರಿದಾಡುತ್ತಿವೆ. ಸೂಫಿ ಕಾವ್ಯ ಜಗತ್ತಿನಲ್ಲಿ ನೂರಾರು ಸೂಫಿಗಳು ಮತ್ತು ಸೂಫಿ ಕವಿಗಳು ಕಾವ್ಯ ರಚನೆ ಮಾಡಿದ್ದು, ಅವರಲ್ಲಿ ಪ್ರಮುಖರಾದ ಸನಾಯಿ, ಅತ್ತಾರ್, ಹಫೀಜ್, ಉಮರ್ ಖಯಾಂ, ಜಲಾಲುದ್ದೀನ್ ರೂಮಿ ಇವರುಗಳು ಮುಖ್ಯರಾಗಿದ್ದಾರೆ.

ಇನ್ನು ಭಾರತದ ಸೂಫಿ ಕಾವ್ಯ ಪರಂಪರೆಯ ವಿಷಯಕ್ಕೆ ಬಂದಾಗ, ಭಾರತಕ್ಕೆ ಸೂಫಿಗಳು ಆಗಮಿಸಿದ ಕುರಿತಂತೆ ಇತಿಹಾಸದಲ್ಲಿ ಹಲವು ಗೊಂದಲಗಳಿವೆ. ಸೂಫಿಗಳು ಎಂದರೆ ಯಾರು ಎಂಬ ವಿಷಯ ಕುರಿತ ವ್ಯಾಖ್ಯಾನಗಳಲ್ಲಿ ಹಲವಾರು ಜಿಜ್ಞಾಸೆಗಳಿವೆ. ಎಂಟನೆಯ ಶತಮಾನದಲ್ಲಿ ಕಡಲ ಮೇಲೆ ಭಾರತದ ಕರಾವಳಿ ಪ್ರದೇಶಕ್ಕೆ, ವಿಶೇಷವಾಗಿ ಕೇರಳಕ್ಕೆ (ಸುಲೇಮನ್ ಆಳ್ವಿಕೆ ಅವಧಿಯಲ್ಲಿ) ಬಂದ ಹಲವು ಸಂತರನ್ನು ಸೂಫಿಗಳು ಎಂದು ಭಾರತದ ಕಟ್ಟಾ ಸಂಪ್ರದಾಯ ಮನಸ್ಸಿನ ಮುಸ್ಲಿಂ ಇತಿಹಾಸಕಾರರು ವಾದಿಸುವುದು ಉಂಟು. ಆದರೆ ವಾಸ್ತವವಾಗಿ ಅರೇಬಿಯಾದಿಂದ ಹಡಗಿನ ಮೂಲಕ ಭಾರತಕ್ಕೆ ಬಂದ ಇಸ್ಲಾಂ ಧರ್ಮ ಪ್ರಚಾರಕರಲ್ಲಿ ಯಾವ ಸೂಫಿ ಲಕ್ಷಣಗಳೂ ಕಂಡುಬರುವುದಿಲ್ಲ.

ಸೂಫಿಸಂ ವಿಚಾರಧಾರೆಯ ಅಂತಃಸತ್ವ ಎಂದು ನಾವು ಕರೆಯಬಹುದಾದ 'ತಸ್ವುಫ್' ಅಂದರೆ ಅನುಭಾವ ಅಂಶವನ್ನು ಆಧಾರವಾಗಿಟ್ಟುಕೊಂಡು ಗಮನಿಸಿದರೆ ಇವರುಗಳನ್ನು ಸೂಫಿ ಸಂತರು ಎಂದು ಕರೆಯಲು ಮನಸ್ಸು ಒಪ್ಪುವುದಿಲ್ಲ. ಕಡಲ ಮೇಲೆ ಭಾರತಕ್ಕೆ ಬಂದ ಸೂಫಿಗಳು ಎಂದು ಕರೆಯು

ವವರೆಲ್ಲಾ ಕ್ರೈಸ್ತ ಮಿಷನರಿಗಳಂತೆ ಧರ್ಮ ಪ್ರಚಾರ ಮಾಡಿದವರು, ಪ್ರಾರ್ಥನಾ ಮಂದಿರಗಳನ್ನು ನಿರ್ಮಿಸಿದವರು ಮತ್ತು ಸ್ಥಳೀಯ ಜನರನ್ನು ಮತಾಂತರಗೊಳಿಸಿದವರು. ಇವತ್ತಿನ ಕೇರಳ, ಕಾಸರಗೋಡು ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ಬಹುತೇಕ ಮುಸ್ಲಿಮರು ಇವರಿಂದ ಮತಾಂತರಗೊಂಡವರು.

ಅಧಿಕೃತವಾಗಿ ಪರ್ಷಿಯಾದಿಂದ ಕಾಲ್ನಡಿಗೆಯಲ್ಲಿ ಮತ್ತು ಭಾರತಕ್ಕೆ ಲಗ್ಗೆ ಇಟ್ಟ ಇಸ್ಲಾಂ ದೊರೆಗಳ ಜೊತೆ ಬಂದ ಸೂಫಿಗಳು ನಿಜವಾದ ಸೂಫಿ ಸಂತರು. ಇವರ ಆಗಮನವನ್ನು ನಮ್ಮ ನಡುವಿನ ಸಾಂಸ್ಕೃತಿಕ ಚಿಂತಕ ಡಾ॥ ರಹಮತ್ ತರೀಕೆರೆ "ಭಾರತಕ್ಕೆ ಕುದುರೆ ಗೊರಸುಗಳ (ಹೆಜ್ಜೆ ಶಬ್ದ) ಜೊತೆಗೆ ಕಂಬಳಿ ಮತ್ತು ಭಿಕ್ಷಾಪಾತ್ರೆಗಳು ಸಹ ಬಂದವು" ಎಂದು ಅರ್ಥಪೂರ್ಣವಾಗಿ ವಿಶ್ಲೇಷಿಸಿದ್ದಾರೆ.

ಭಾರತಕ್ಕೆ ಆಗಮಿಸಿದ ಸೂಫಿಗಳಲ್ಲಿ ಹಲವರು ರಾಜಾಶ್ರಯದಲ್ಲಿ ಬದುಕಿದರು. ಮತ್ತೆ ಹಲವರು ದರ್ವೇಶಿಗಳಂತೆ, ಫಕೀರರಂತೆ ರಾಜಾಶ್ರಯ ಮತ್ತು ಪ್ರಭುತ್ವವನ್ನು ಧಿಕ್ಕರಿಸಿ ಜನರ ನಡುವೆ ಭಾವೈಕ್ಯತೆಯ ಸಂಗಮದಂತೆ ಬದುಕಿದರು. ಈ ಕಾರಣಕ್ಕಾಗಿ ಇವರೆಲ್ಲರೂ ಭಾರತದ ಜನಮಾನಸದಲ್ಲಿ ಧರ್ಮ ಮತ್ತು ಜಾತಿಯ ಗಡಿಗಳನ್ನೂ ಮೀರಿ ಜೀವಂತ ವಾಗಿದ್ದಾರೆ. ಜೊತೆಗೆ ಭಾರತದ ನಾಥರು, ಸಿದ್ಧರು, ಬೌದ್ಧರು ಇವರುಗಳ ಜೊತೆ ಅನುಸಂಧಾನ ನಡೆಸಿ, ಭಾರತದ ಸಂಸ್ಕೃತಿಯ ಬಹು ಮುಖ್ಯ ಕೊಡುಗೆಗಳಾದ ಧ್ಯಾನ, ಯೋಗ, ಭಕ್ತಿಯ ಪರಾಕಾಷ್ಠೆ, ಸಿದ್ಧ ಔಷಧ ಇವುಗಳನ್ನು ತಮ್ಮ ಸೂಫಿ ವಿಚಾರಧಾರೆಗೆ ಒಳಪಡಿಸಿಕೊಂಡರು.

ಭಾರತದಲ್ಲಿ ಸೂಫಿಸಂ ವಿಚಾರಧಾರೆಯ ಅತಿ ಮುಖ್ಯ ಕೊಡುಗೆಯೆಂದರೆ, ಇಸ್ಲಾಂ ಧರ್ಮ. ಎಂದರೆ, ಖಡ್ಗ, ಹಿಂಸೆ ಮತ್ತು ಆಕ್ರಮಣ ಎಂಬ ನಂಬಿಕೆಯನ್ನು ಹೋಗಲಾಡಿಸಿ ಜನರ ಮಧ್ಯೆ ಭಾವೈಕ್ಯತೆಯ ಸೇತುವೆಯನ್ನು ನಿರ್ಮಾಣ ಮಾಡಿದ್ದು. ದೆಹಲಿಯಲ್ಲಿ ಮೊಗಲ್ ದೊರೆಗಳು ಮತ್ತು ಸಿಖ್ಖರ ನಡುವೆ ಯುದ್ಧಗಳು ನಡೆಯುತ್ತಿದ್ದಾಗ, ಪಂಜಾಬಿನಲ್ಲಿ ಅನೇಕ ಸೂಫಿ ಸಂತರು ಮಾನವೀಯತೆಯ ಬೀಜ ಬಿತ್ತಿದರು. ಈ ದಿಶೆಯಲ್ಲಿ ಪಂಜಾಬಿನ ಬುಲ್ಲೆಹ ಶಾ ಅತಿದೊಡ್ಡ ಸೂಫಿ ಸಂತ. ೧೬೮೦ರಲ್ಲಿ ಇಂದಿನ ಲಾಹೋರ್ ಪ್ರಾಂತ್ಯದ ಕೌಸೂರ್ ಜಿಲ್ಲೆಯ ಪಂಡಕಿ ಎಂಬಲ್ಲಿ ಜನಿಸಿದ ಈ ಸಂತನ ಕುರಿತಂತೆ ಹಾಡುವ ಖವಾಲಿಗಳಲ್ಲಿ ಈತನ ಜೀವನ ಸಾಧನೆಯ ಅಂಶಗಳಿವೆ, ಬುಲ್ಲೆಹ ಶಾ ಪಂಜಾಬಿ ಭಾಷೆಯಲ್ಲಿ ಬರೆದ ಅನೇಕ ಸೂಫಿ ಕಾವ್ಯಗಳು ಇವತ್ತಿಗೂ ಜನಪ್ರಿಯವಾಗಿವೆ. ಸಿಖ್ಖರ ಪರಮಗುರು ಗುರುನಾನಕ್ ಕೂಡ ಸೂಫಿ ವಿಚಾರಧಾರೆಯಿಂದ ಪ್ರಭಾವಿತರಾಗಿ ಸೂಫಿ ಸಂತರಂತೆ ತನ್ನ ಉಡುಪು ಧರಿಸುತ್ತಿದ್ದರು. ಮೊಗಲ್ ದೊರೆ ಹಾಗೂ ಔರಂಗಜೇಬನ ಸಹೋದರ ದಾರಾಶಿಕೊ (೧೬೧೫–೧೬೫೯) ತನ್ನ ಸಹೋದರನಿಂದ

**ರೋದನ**

ಕೆಲವರದು

'ಅರಣ್ಯರೋದನ'

ಬಹುಮಂದಿಯದು

ಗೃಹರೋದನ!

(ಗೃಹದಾರಣ್ಯಕ)

■ ಸಿ.ಪಿ.ಕೆ. ಮೈಸೂರು

ಕೊಲೆಯಾಗುವ ಮುನ್ನ ಅಮೃತಸರದ ಸ್ವರ್ಣದೇಗುಲಕ್ಕೆ ಅಸ್ತಿಭಾರ ಹಾಕಿದ್ದನು. ಸಿಖ್ಖರ ಗುರುವಾಣಿಯಲ್ಲಿ ಸೂಫಿ ಕಾವ್ಯದ ಲಕ್ಷಣಗಳನ್ನು ಮತ್ತು ಚಹರೆಗಳನ್ನು ನಾವು ಕಾಣಬಹುದು, ಭಾರತದ ಸೂಫಿ ಗುರುಗಳು ಅಥವಾ ಸಂತರಲ್ಲಿ ಅತಿ ಮುಖ್ಯ ರಾದವರೆಂದರೆ, ಖ್ವಾಜಾ ಮೊಹಿದ್ದೀನ್ ಚಿಸ್ತಿ, ಕುತ್ಬುದ್ದೀನ್, ನಿಜಾಮುದ್ದೀನ್ ಹಾಗೂ ಫರೀದ್ದೀನ್ ಪ್ರಮುಖರು. ಇವರೆಲ್ಲರೂ ಆಫ್ಘಾನಿಸ್ಥಾನದ ಮೂಲದವರು. ಖ್ವಾಜಾ ಮೊಹಿದ್ದೀನ್, ೧೧೯೨ರಲ್ಲಿ ಶಹಿಬುದ್ದೀನ್ ಘೋರಿ ಎಂಬ ಮುಸ್ಲಿಂ ದೊರೆಯ ಜೊತೆ ಭಾರತಕ್ಕೆ ಬಂದು ಅಂತಿಮವಾಗಿ ೧೧೯೨ರಲ್ಲಿ ಅಜ್ಮೀರ್‌ನಲ್ಲಿ ನೆಲೆ ನಿಂತು ಅಲ್ಲಿಯೇ ಮರಣಹೊಂದಿದರು. ಮೊಗಲ್ ದೊರೆ ಅಕ್ಬರ್ ಈ ಸಂತನ ಪರಮ ಅನುಯಾಯಿ ಯಾಗಿದ್ದ. ಕುತ್ಬುದ್ದೀನ್ ೧೨೬೫ರಲ್ಲಿ ಭಾರತಕ್ಕೆ ಬಂದರೆ, ೧೩೩೫ರಲ್ಲಿ ನಿಜಾಮುದ್ದೀನ್ (ಹಜರತ್ ನಿಜಾಮುದ್ದೀನ್ ಔಲಿ) ಭಾರತಕ್ಕೆ ಬಂದರು. ಈ ಇಬ್ಬರು ಸಂತರೂ ಹಿಂದೂ–ಮುಸ್ಲಿಂ ಭಾವೈಕ್ಯತೆಗೆ ಶ್ರಮಿಸುತ್ತಾ ದೆಹಲಿಯಲ್ಲಿ ನೆಲೆ ನಿಂತರು.

ಫರೀದ್ದೀನ್ ಈಗಿನ ಪಾಕಿಸ್ತಾನಕ್ಕೆ ಸೇರಿದ ಪಠಾನ್‌ನಲ್ಲಿ ನೆಲೆ ನಿಂತರು. ಇವರೆಲ್ಲರೂ ಸೂಫಿ ವಿಚಾರಧಾರೆಯ ಶಾಖೆಗಳಾದ ಚಿಸ್ತಿಯಾ ಗುಂಪಿಗೆ ಸೇರಿರುವುದು ವಿಶೇಷ (ಇತರೆ ಗುಂಪುಗಳೆಂದರೆ, ನಶ್ಕ್ ಬಂದಿಯಾ, ಸುಹಾರ್ ವಾರ್ಡಿ ಮತ್ತು ಖ್ವಾದ್ರಿಯ). ಆದರೆ ಭಾರತದಲ್ಲಿ ಬಲವಾಗಿ ಬೇರುಬಿಟ್ಟಿದ್ದು ಚಿಸ್ತಿಯಾ ಗುಂಪಿನ ಸೂಫಿಗಳು ಮಾತ್ರ. ಭಾರತದ ಭಕ್ತಿ ಪರಂಪರೆಯನ್ನು ಅಳವಡಿಸಿಕೊಂಡು, ಎಲ್ಲೆಡೆ ಇವರು ಪ್ರಸಿದ್ಧರಾದರು. ದೆಹಲಿಯ ದೊರೆ ಮಹಮ್ಮದ್ ಬಿನ್ ತೊಘಲಕ್ ದೆಹಲಿಯಿಂದ ದೇವಗಿರಿಗೆ (ಇಂದಿನ ಮಹಾರಾಷ್ಟ್ರದ ಔರಂಗಾಬಾದ್) ರಾಜಧಾನಿಯನ್ನು ವರ್ಗಾಯಿಸಿದಾಗ ಅವನ ಜೊತೆ ದಕ್ಷಿಣ ಭಾರತಕ್ಕೆ ಆಗಮಿಸಿದ ಬಂದೇ ನವಾಜ್ ಎಂಬ ಸಂತ (ಈತ ದೆಹಲಿಯ ಹಜರತ್ ನಿಜಾಮುದ್ದೀನ್ ಅವರ ಶಿಷ್ಯ) ಕರ್ನಾಟಕದ ಗುಲ್ಬರ್ಗಾದಲ್ಲಿ ನೆಲೆಸಿದನು. ಹೀಗೆ ಭಾರತದ ಭಕ್ತಿ ಪರಂಪರೆ ಹಾಗೂ ಸ್ಥಳೀಯ ಸಂಸ್ಕೃತಿಯನ್ನು ಒಳಗೊಳ್ಳುತ್ತಾ ಬೇರೂರಿದ ಸೂಫಿ ಪರಂಪರೆ ಇಂದು ಇಡೀ ಭಾರತದ ನೆಲದಲ್ಲಿ ಇಲ್ಲಿನ ಜನರ ಬದುಕಿನಲ್ಲಿ ಧರ್ಮ, ಭಾಷೆ, ಜಾತಿಗಳನ್ನು ಮೀರಿ ಮಿಳಿತಗೊಂಡಿದೆ. ಇದಕ್ಕೆ ಉದಾಹರಣೆಯಾಗಿ ಅನೇಕ ಸೂಫಿ ಸಂತರ ಗೋರಿಗಳಿಗೆ (ದರ್ಗಾ) ಹಿಂದುಗಳು ಭಕ್ತಿಯಿಂದ ನಡೆದುಕೊಳ್ಳುವುದನ್ನು ನಾವು ಗಮನಿಸಬಹುದು.

ಭಾರತದ ಸೂಫಿ ಪರಂಪರೆಯ ನೆಲೆಯಲ್ಲಿ ಸುಂದರ ಸೂಫಿ ಕಾವ್ಯ ರಚಿಸಿದ ಕವಿಗಳಲ್ಲಿ ಅಮೀರ್ ಖುಸ್ರು ಮತ್ತು ಮಹಾತ್ಮ ಕಬೀರ್ ಅತಿ ಮುಖ್ಯರು. ಮಹಾತ್ಮ ಕಬೀರನದು, ಈತ ಸೃಷ್ಟಿಸಿದ ಭಕ್ತಿ ಮತ್ತು ಸೂಫಿ ಕಾವ್ಯಗಳು ಹಿಂದು–ಇಸ್ಲಾಂ ಧರ್ಮಗಳ ಭಾವೈಕ್ಯತೆ ಕೊಂಡಿಯ ಪ್ರತೀಕಗಳಾಗಿವೆ. ವಾರಾಣಾಸಿಯಲ್ಲಿ ಹಿಂದೂ ಬ್ರಾಹ್ಮಣ ವಿಧವೆಗೆ ಜನಿಸಿದ ಕಬೀರ್‌ನನ್ನು ಅವನ ತಾಯಿ ಗಂಗಾ ನದಿಯ ತಟದಲ್ಲಿ ಮಲಗಿಸಿ ಹೋದಾಗ ನೇಯ್ಗೆ ಕಸುಬಿನ ಮುಸ್ಲಿಂ ಕುಟುಂಬವೊಂದು ಈತನನ್ನು ಸಾಕಿ ಸಲುಹಿತು. ಹಾಗಾಗಿ ಕಬೀರ್ ಎರಡು ಧರ್ಮಗಳ ಸಂಗಮದಂತೆ ಬದುಕಿ ಬಾಳಿದ (೧೪೪೦–೧೫೧೮). ಅವನ ಭಕ್ತಿ ಪರವಶತೆಯ ಕಾವ್ಯ ಮತ್ತು ಪರಧರ್ಮ ಸಹಿಷ್ಣುತೆಯ ಕಾವ್ಯ ಇವುಗಳು ದೋಹಾ ಎಂಬ ಹೆಸರಿನಲ್ಲಿ ಉತ್ತರ ಭಾರತದಲ್ಲಿ ಇಂದಿಗೂ ಜನಪ್ರಿಯವಾಗಿವೆ. ಕಬೀರ್ ದಾರ್ಶನಿಕ ಒಳನೋಟಗಳುಳ್ಳ ಕವಿಯಾಗಿ ಎಲ್ಲ ಧರ್ಮಗಳ ಸಂಗಮ ಕ್ಷೇತ್ರದಂತಿದ್ದಾನೆ. ಕಬೀರನ ದೋಹೆಗಳಲ್ಲಿ ಧರ್ಮದ ಗಡಿಗಳಾಚೆಗಿನ ನಿಜ ಮನುಷ್ಯನ ಹುಡುಕಾಟದ ನೆಲೆಗಳಿವೆ. ಹಾಗಾಗಿ ಕಬೀರನ ದೋಹಾಗಳು ಸಾಧು, ಸಂತರ ನಾಲಿಗೆಯ ಮೇಲೆ, ಅನುಭಾವ ಪ್ರಜ್ಞೆಯ ಗಾಯಕರ ಕೊರಳಲ್ಲಿ ಇಂದಿಗೂ ಜೀವಂತವಾಗಿವೆ.

ಹೈದರಾಬಾದ್ ಕರ್ನಾಟಕಕ್ಕೆ ಸೇರಿದ ಬಿಜಾಪುರ ನಗರವೊಂದರಲ್ಲೇ ಮೂವತ್ತಕ್ಕೂ ಹೆಚ್ಚು ಸೂಫಿ ಸಂತರ ಗೋರಿಗಳಿವೆ. ಈ ಕಾರಣದಿಂದಾಗಿ ಬಿಜಾಪುರ ಮತ್ತು ಗುಲ್ಬರ್ಗಾದಲ್ಲಿ ತೀಕ್ಷ್ಣವಾಗಿ ಪ್ರಭಾವ ಬೀರಿದ ಸೂಫಿ ವಿಚಾರಧಾರೆ ಹೈದರಾಬಾದ್ ಕರ್ನಾಟಕ ಮತ್ತು ಮುಂಬೈ ಕರ್ನಾಟಕದಲ್ಲಿ ಹಲವು ತತ್ವಪದಕಾರರ ಮೇಲೆ ದಟ್ಟ ಪ್ರಭಾವವನ್ನು ಬೀರಿದೆ, ಇವರಲ್ಲಿ ಶಿಶುನಾಳ ಷರೀಫ, ಸಾವಳಗಿ ಶಿವಲಿಂಗ, ತಿಂತಿಣಿ ಮೋನಪ್ಪ, ಶಿರಹಟ್ಟಿ ಫಕೀರೇಶ್ವರ, ಕೊಡೇಕಲ್ ಬಸವಣ್ಣ ಮುಖ್ಯರಾದವರು. ನಾವು ಬದುಕುತ್ತಿರುವ ವರ್ತಮಾನದ ಬದುಕಿನಲ್ಲಿ ಹಲವು ರೂಪಗಳಲ್ಲಿ ನಮ್ಮನ್ನು ಆವರಿಸಿಕೊಂಡಿರುವ ಸೂಫಿ ತತ್ವ ಅಥವಾ ಸೂಫಿ ಕಾವ್ಯ ಪರಂಪರೆ ಇಂದಿನ ಸಮಾಜದ ಎಲ್ಲಾ ವಿಕಾರಗಳಿಗೆ ಮತ್ತು ಮನುಷ್ಯನ ವಿಕೃತಿಗಳಿಗೆ ಮದ್ದಾಗಬಲ್ಲದು.

**ಡಾ॥ ಎನ್. ಜಗದೀಶ್ ಕೊಪ್ಪ**
ನಂ. ೧೧೩, ಅಕ್ಷರ, ಆರೋಗ್ಯನಗರ ಬಡಾವಣೆ
ತೇಜಸ್ವಿ ನಗರ, ಧಾರವಾಡ – ೫೮೦ ೦೦೨




"...ಕ್ರಾಂತಿಯೆಂದರೆ ಸ್ಪಷ್ಟವಾಗಿ ಶೋಷಣೆ ಹಾಗೂ ಅನ್ಯಾಯದ ಬುನಾದಿಯ ಮೇಲೆ ಸ್ಥಾಪಿತವಾಗಿರುವ ಇಂದಿನ ವ್ಯವಸ್ಥೆಯ ಆಮೂಲಾಗ್ರ ಬದಲಾವಣೆ ಎಂದರ್ಥ. ...ಮಾನವ ಮಾನವನನ್ನು, ರಾಷ್ಟ್ರ ರಾಷ್ಟ್ರವನ್ನು ಶೋಷಿಸುವುದನ್ನು ಕೊನೆಗೊಳಿಸದ ಹೊರತು ಮಾನವ ಜನಾಂಗವನ್ನು ಇಂದು ಕಿತ್ತು ತಿನ್ನುತ್ತಿರುವ ಕ್ರೌರ್ಯಗಳನ್ನು, ಕಗ್ಗೊಲೆಗಳನ್ನು ತಡೆಯಲಾಗುವುದಿಲ್ಲ... ಕ್ರಾಂತಿಯೆಂದರೆ ನಮ್ಮ ಕಲ್ಪನೆಯಲ್ಲಿ ಅಂತಿಮವಾಗಿ ಇಂಥ ಆಘಾತಗಳಿಗೆ ಬಲಿಯಾಗದಂತಹ ಹಾಗೂ ಅಪಾಯಗಳಿಂದ ಕೊಲೆಯಾಗದಂತಹ ಶೋಷಣಾರಹಿತ ಸಮಾಜವೊಂದರ ನಿರ್ಮಾಣ... ಇದು ನಮ್ಮ ಆದರ್ಶ."

*– ಭಗತ್ ಸಿಂಗ್*

ಎತ್ತರದ ನಿಲುವು. ತಾರುಣ್ಯದ ಸಾತ್ವಿಕ ಚೆಲುವು. ಪ್ರಜ್ವಲಿಸುವ ಕಣ್ಣು. ಎದೆಯಲ್ಲಿ ಕೆಚ್ಚು. ಮನದಲ್ಲಿ ಆತ್ಮವಿಶ್ವಾಸ. ನಿಲ್ಲುವ ನಿಲುವಿನಲ್ಲಿ ಸ್ವಾಭಿಮಾನದ ಗೆಲುವು. ತಾಯ್ನಾಡಿನ ಸ್ವಾತಂತ್ರ್ಯಕ್ಕಾಗಿ ನರನಾಡಿಗಳಲ್ಲಿ ತುಡಿತ. ಶೋಷಿತ ಸಮೂಹದ ಬಂಧಮುಕ್ತತೆಗಾಗಿ ಹೃದಯ ಮಿಡಿತ. ಈ ಮಣ್ಣಲ್ಲಿ ಕುಡಿಯೊಡೆದ ಇಡೀ ಜನಾಂಗದ ಬದುಕಿನ ಸ್ತರಸ್ತರದಲ್ಲೂ ಸಮಾನತೆಯ ಶ್ರೇಯಸ್ಸು ತುಂಬುವ ಉತ್ಕಟತೆ. ಈ ಕಾರಣಕ್ಕಾಗಿ ಎಂಥ ತ್ಯಾಗ ಬಲಿದಾನಕ್ಕೂ ಅಂಜದ, ಅಳುಕದ ಆ ಯುವಕ ನೇಣುಗಂಬಕ್ಕೆ ನಡೆಯುವಾಗಲೂ ಆತನ ಮುಖದ ಮಂದಹಾಸ ಬತ್ತಿಲ್ಲ. ಎತ್ತರದ ಧ್ವನಿಯಲ್ಲಿ ಅದೇ ಗರ್ಜನೆ : "ಕ್ರಾಂತಿ ಚಿರಾಯುವಾಗಲಿ." ೧೯೩೧ರ ಮಾರ್ಚ್ ೨೩ರಂದು ಭಗತ್ ಸಿಂಗ್ ತನ್ನ ಸಂಗಾತಿಗಳಾದ ಸುಖದೇವ್ ಮತ್ತು ರಾಜಗುರು ಅವರೊಂದಿಗೆ ಹುತಾತ್ಮನಾದ. ಕ್ರಾಂತಿಯ ಪಂಜಿನ ಉರಿ ಆರಿತು. ಆದರೆ ಅದರ ಪ್ರಖರತೆ ಉಳಿಯಿತು.

ಈಗ ಪಾಕಿಸ್ತಾನಕ್ಕೆ ಸೇರಿರುವ ಲಾಯಲ್‌ಪುರ ಜಿಲ್ಲೆಯ ಜರಾನ್‌ವಾಲಾ ತಾಲೂಕಿನಲ್ಲಿರುವ ಬಂಗಾ ಎಂಬ ಹಳ್ಳಿಯಲ್ಲಿ ೧೯೦೭ರ ಸೆಪ್ಟೆಂಬರ್ ೨೭ರಂದು ಭಗತ್ ಸಿಂಗ್ ಹುಟ್ಟಿದ. ತಂದೆ ಕಿಶನ್ ಸಿಂಗ್. ತಾಯಿ ವಿದ್ಯಾವತಿ. ಅವರದು ಹೋರಾಟಗಾರರ ಮನೆತನ. ಕ್ರಾಂತಿವೀರರ ಕುಟುಂಬ. ಭಗತ್ ಸಿಂಗ್ ಹುಟ್ಟಿದಾಗ ಆತನ ತಂದೆ ರಾಜಕೀಯ ಕೈದಿಯಾಗಿ ಲಾಹೋರ್ ಜೇಲಿನಲ್ಲಿದ್ದ. ಬಾಲಕ ಭಗತ್ ಸಿಂಗನ ಮೇಲೆ ಪ್ರಭಾವ ಬೀರಿದ್ದ ಆತನ ಚಿಕ್ಕಪ್ಪ ಅಜಿತ್ ಸಿಂಗ್ ಬ್ರಿಟಿಷ್ ಸರಕಾರದ ವಿರುದ್ಧ ಬಂಡೇಳುವಂತೆ ಜನರನ್ನು, ರೈತರನ್ನು ಪ್ರೇರೇಪಿಸುತ್ತಿದ್ದುದಕ್ಕಾಗಿ ಎಷ್ಟೋ ಸಲ ಬಂಧಿಯಾಗಿದ್ದ. ಬ್ರಿಟಿಷ್ ಸರಕಾರದ ಕೆಂಗಣ್ಣಿಗೆ ಗುರಿಯಾಗಿದ್ದ. ಹುಟ್ಟುಹೋರಾಟಗಾರರನ್ನು ಹೊಂದಿದ್ದ ಕುಟುಂಬದ ಹೋರಾಟ ಮನೋಭಾವನೆಯ ದಟ್ಟ ಪರಿಸರದ ಮೂಲದ್ರವ್ಯವನ್ನು ಮೈಗೂಡಿಸಿಕೊಂಡು ಭಗತ್ ಸಿಂಗ್ ಬೆಳೆದ. ದೇವಾಲಯಗಳಿಗೆ ದಾನ ನೀಡಿದ ಅಪಾರ ಹಣದ ದುರುಪಯೋಗವನ್ನು ಪ್ರತಿಭಟಿಸಿ ಆ ಹಣ ರಾಷ್ಟ್ರ ನಿರ್ಮಾಣ ಕಾರ್ಯಗಳಿಗೆ ಸದುಪಯೋಗಗೊಳ್ಳಬೇಕೆಂದು ಪ್ರತಿಪಾದಿಸಿ ಸಿಖ್ಖರು ಹೊರಡಿಸಿದ ಜಾಥಾ ಭಗತ್ ಸಿಂಗನ ಹಳ್ಳಿಗೆ ಬಂದಾಗ ಆ ಜಾಥಾದಲ್ಲಿರುವವರಿಗೆ ಹನಿ ನೀರೂ ಸಿಗದಂತೆ ಮಾಡಲು ಹಲವು ಹಿತಾಸಕ್ತಿಗಳು ಹಾಗೂ ಬ್ರಿಟಿಷ್ ಸರಕಾರ ಶತಪ್ರಯತ್ನ ಮಾಡಿದರೂ ಭಗತ್ ಸಿಂಗ್ ಆ ಜಾಥಾ ಕಾರ್ಯಕ್ರಮವು ಬಂಗಾಳದ ಕ್ರಾಂತಿಕಾರಿ ಚಳುವಳಿಗೆ ಸಮಾನವಾದುದೆಂದು ಸಾರಿ ಅವರೆಲ್ಲರಿಗೂ ಮೂರು ದಿನಗಳ ಆತಿಥ್ಯವನ್ನು ಅತಿ ಅಚ್ಚುಕಟ್ಟಾಗಿ ವ್ಯವಸ್ಥೆಗೊಳಿಸಿ ಎಲ್ಲರ ಮೆಚ್ಚುಗೆಗೆ ಪಾತ್ರನಾದ. ಆಗ ಆತನ ವಯಸ್ಸು ಕೇವಲ ಹದಿನೆಂಟು.

ಭಗತ್ ಸಿಂಗ್ ತನ್ನ ಹಳ್ಳಿಯಲ್ಲಿದ್ದ ಶಾಲೆಯಲ್ಲಿ ಐದನೇ ತರಗತಿವರೆಗೆ ಅಭ್ಯಾಸ ಮಾಡಿದ. ನಂತರ ೧೯೧೬–೧೭ರಲ್ಲಿ ಲಾಹೋರಿನ ಡಿ.ಎ.ವಿ. ಶಾಲೆಯಲ್ಲಿ ಅಭ್ಯಾಸ ಮುಂದುವರಿಸಿದ. ಆತನಿನ್ನೂ ಆ ಶಾಲೆಯಲ್ಲಿ ಓದುತ್ತಿದ್ದಾಗಲೇ ಒಟ್ಟು ೧೬೫೦ ಸುತ್ತುಗಳ ಗುಂಡಿನ ಮಳೆ ಸುರಿಸಿ ಎರಡು ಸಾವಿರ ಮುಗ್ಧ ಭಾರತೀಯರನ್ನು ಬಲಿ ತೆಗೆದುಕೊಂಡ ಜಲಿಯನ್‌ವಾಲಾಬಾಗ್ ಭೀಕರ ಹತ್ಯಾಕಾಂಡ ನಡೆದದ್ದು. ಅಲ್ಲಿಗೆ ಹೋಗಿ ಅದನ್ನು ಕಣ್ಣಾರೆ ಕಂಡ ಬಾಲಕ ಭಗತ್ ಸಿಂಗ್‌ನ ಕರುಳು ಹಿಂಡಿದಂತಾಯಿತು. ಕಣ್ಣೀರು ಧಾರಾಕಾರಗೊಂಡಿತು. ಎಳೆಮನದ ಮೇಲೆ ಆದ ಆಘಾತ ಅಳಿಸಲಾಗದಂತಹದು. ಅಂಗಿಯ ಚುಂಗಿನಿಂದ ಕಣ್ಣೀರು ಒರೆಸಿಕೊಳ್ಳುವಾಗಲೇ ಬಾಲಕ ಭಗತ್ ಸಿಂಗ್‌ನ ಆ ಪುಟ್ಟ ಹೃದಯದ ಗೂಡಿನಲ್ಲಿ ಕ್ರಾಂತಿಯ ಮುಂಗೋಳಿ ಕೂಗಿದ್ದು. ಕ್ರಾಂತಿಯ ಸಿಂಹಮರಿ ಗರ್ಜಿಸಿದ್ದು. ಲಾಲಾ ಲಜಪತರಾಯ್ ಮತ್ತು ಭಾಯಿ ಪರಮಾನಂದರು ಸ್ಥಾಪಿಸಿದ್ದ ಲಾಹೋರಿನ ರಾಷ್ಟ್ರೀಯ ಮಹಾವಿದ್ಯಾಲಯದಲ್ಲಿ ಭಗತ್ ಸಿಂಗ್ ಪ್ರವೇಶ ಪಡೆದ. ಅಲ್ಲಿ ಇತಿಹಾಸ ಪ್ರಾಧ್ಯಾಪಕರಾಗಿದ್ದ ಜಯಚಂದ್ರ ವಿದ್ಯಾಲಂಕಾರರವರ ಪರಿಣಾಮಕಾರಿ ಬೋಧನೆಯಿಂದ ಪ್ರೋತ್ಸಾಹಿತನಾದ.

ವಿದ್ಯಾರ್ಥಿ ದಿಸೆಯಲ್ಲೇ ಭಗತ್ ಸಿಂಗ್ ೧೯೨೧ರ ಅಸಹಕಾರ ಚಳುವಳಿಯಲ್ಲಿ ಪಾಲ್ಗೊಂಡ. ೧೯೨೪ರಲ್ಲಿ ಬಿ.ಎ. ವರ್ಗದಲ್ಲಿ ಓದುತ್ತಿದ್ದ ಭಗತ್ ಸಿಂಗ್‌ಗೆ ಮದುವೆಯಾಗಲು ತನ್ನ ಕುಟುಂಬದವರಿಂದ ತೀವ್ರ ಒತ್ತಾಯ ಬಂದಾಗ ಅಷ್ಟೇ ಖಡಾಖಂಡಿತವಾಗಿ ವಿರೋಧಿಸುತ್ತ, "ಬ್ರಿಟಿಷರ ಸಂಕೋಲೆಗಳಿಂದ ಬಂಧಿತಗೊಂಡಿರುವ ಈ ಭಾರತದಲ್ಲಿ ನನ್ನದೇನಾದರೂ ಮದುವೆಯಾಗುವುದಿದ್ದರೆ ಅದು ಸಾವೆಂಬ ಸತಿಯೊಡನೆ ಮಾತ್ರ" ಎಂದು ಹೇಳಿ ಕಾನ್ಪುರಕ್ಕೆ ಹೊರಟ. ಕಾನ್ಪುರದಲ್ಲಿ ಕ್ರಾಂತಿಕಾರಿ ಮುತ್ಸದ್ದಿ ಗಣೇಶ ಶಂಕರ ಎಂಬ ವಿದ್ಯಾರ್ಥಿಯ ಪರಿಚಯವಾಯಿತು. ಅಲ್ಲದೆ ಚಂದ್ರಶೇಖರ ಆಜ಼ಾದ್, ಬಿ. ಕೆ. ದತ್ ಹಾಗೂ ಜೆ. ಸಿ. ಚಟರ್ಜಿಯವರ ಪರಿಚಯವಾಯಿತು.

**ಟಿ. ವಿ. ಮಾಗಳದ**



೧೯೨೬ರ ಮಾರ್ಚ್‌ನಲ್ಲಿ ಯುವಕರನ್ನು ಸಂಘಟಿಸಿ ಭಗತ್ ಸಿಂಗ್ "ನೌ ಜವಾನ್ ಭಾರತ್ ಸಭಾ" ಎಂಬ ಸಂಸ್ಥೆಯನ್ನು ಸ್ಥಾಪಿಸಿದ. ಧರ್ಮಕ್ಕಿಂತಲೂ ರಾಷ್ಟ್ರದ ಹಿತ ಮುಖ್ಯ ಎಂಬ ಕಾರಣಕ್ಕಾಗಿ ತಮ್ಮ ಧಾರ್ಮಿಕ ನಂಬಿಕೆಗಳನ್ನು ಗೌಣಗೊಳಿಸಿ ರಾಷ್ಟ್ರದ ಹಿತ ಹಾಗೂ ರಾಷ್ಟ್ರೀಯ ಕಾರಣಗಳಿಗೆ ಪ್ರಧಾನ ಮಹತ್ವ ನೀಡಲು ಹೋರಾಡುವುದಾಗಿ ಸಭಾದ ಸದಸ್ಯರಾಗುವವರು ಪ್ರಮಾಣ ವಚನ ಸ್ವೀಕರಿಸಬೇಕಾಗಿತ್ತು. ಕಾರ್ಮಿಕರು, ರೈತರು, ದಲಿತರು ಒಟ್ಟಾರೆ ದುಡಿವ ವರ್ಗಗಳನ್ನೊಳಗೊಂಡಂತೆ ಅಖಂಡ ಭಾರತವನ್ನು ರೂಪಿಸಿ ಸ್ವತಂತ್ರ ಗಣರಾಜ್ಯ ಸ್ಥಾಪಿಸುವುದು ಸಭಾದ ಉದ್ದೇಶವಾಗಿತ್ತು. ಯುವಕರಲ್ಲಿ ಐಕ್ಯತಾ ಭಾವನೆ ಹಾಗೂ ರಾಷ್ಟ್ರಪ್ರೇಮವನ್ನು ಬಲಪಡಿಸುವುದು ಅದರ ಫಲವಾಗಿತ್ತು.

ಕಾಕೋರಿ ಲೂಟಿಯ ಖಟ್ಲೆಯಲ್ಲಿ ಆಪಾದಿತರಿಗೆ ಬ್ರಿಟಿಷ್ ಸರಕಾರ ನೇಣು ಗಂಬದ ಶಿಕ್ಷೆ ನೀಡಿದಾಗ ಸಭಾದ ಆಶ್ರಯದಲ್ಲಿ ಭಗತ್ ಸಿಂಗ್‌ನ ನಾಯಕತ್ವದಲ್ಲಿ ಲಾಹೋರಿನಲ್ಲಿ "ಹುತಾತ್ಮರ ದಿನಾಚರಣೆ"ಯನ್ನು ಆಚರಿಸಲಾಯಿತು.

'ಹೋರಾಟದ ಮಾರ್ಗದಲ್ಲಿ ಸ್ವಾತಂತ್ರ್ಯವೇ ಅಂತಿಮ ಗುರಿಯಲ್ಲ, ಅದೊಂದು ಮೈಲಿಗಲ್ಲು ಮಾತ್ರ. ಬ್ರಿಟಿಷರಿಂದ ಭಾರತವನ್ನು ಮುಕ್ತಗೊಳಿಸುವುದು ಬರೀ ರಾಜಕೀಯ ಸ್ವಾತಂತ್ರ್ಯ. ಆದರೆ ಆರ್ಥಿಕ ಸ್ವಾತಂತ್ರ್ಯವೇ ಅಸಲು ಸ್ವಾತಂತ್ರ್ಯ. ಹೋರಾಟದ ಸಾರ್ಥಕತೆ ಇರುವುದು ಕೇವಲ ಸ್ವಾತಂತ್ರ್ಯ ಗಳಿಕೆಯಲ್ಲಲ್ಲ, ಸಮಾಜವಾದಿ ಸ್ಥಾಪನೆಯಲ್ಲಿ' ಎಂಬ ಸ್ಪಷ್ಟ ಧೋರಣೆಯನ್ನು ಸಮರ್ಥವಾಗಿ ಪ್ರತಿಪಾದಿಸುವ ಪ್ರಯತ್ನವನ್ನು ಭಗತ್ ಸಿಂಗ್ ಮಾಡಲಾರಂಭಿಸಿದ. ೧೯೨೮ರ ಸೆಪ್ಟೆಂಬರ್‌ನಲ್ಲಿ ದೆಹಲಿಯ ಫಿರೋಜಕೋಟ್ಲಾದಲ್ಲಿ ನಡೆದ ರಾಷ್ಟ್ರೀಯ ಕ್ರಾಂತಿಕಾರಿಗಳ ಸಭೆಯಲ್ಲಿ ಸಮಾಜವಾದಿ ಸಿದ್ಧಾಂತವು ಹೋರಾಟದ ದಿಕ್ಸೂಚಿಯಾಗಬೇಕೆಂಬ ಸಲಹೆಯನ್ನು ಭಗತ್ ಸಿಂಗ್ ಸಾದರಪಡಿಸಿದ. ಭಗತ್ ಸಿಂಗನ ಈ ಸಲಹೆಯನ್ನು ಸಭೆ ಅಂಗೀಕರಿಸಿದ ಪರಿಣಾಮವಾಗಿ "ನೌ ಜವಾನ್ ಭಾರತ್ ಸಭಾ" ಸಂಘಟನೆಯು "ಹಿಂದೂಸ್ತಾನ ಸಮಾಜವಾದಿ ಗಣತಂತ್ರ ಸಂಘಟನೆ" ಎಂಬ ಹೊಸ ಹೆಸರು ಪಡೆಯಿತು.

ಸೈಮನ್ ಆಯೋಗವನ್ನು ಪ್ರತಿಭಟಿಸಿ ೧೯೨೮ರ ಅಕ್ಟೋಬರ್ ೩೦ರಂದು ನಡೆದ ಪ್ರತಿಭಟನಾ ಮೆರವಣಿಗೆಯಲ್ಲಿ ಅಹಿಂಸಾತ್ಮಕವಾಗಿ ವರ್ತಿಸಿದ ಲಾಲಾ ಲಜಪತರಾಯ್ ಅವರ ಮೇಲೆ ಪೊಲೀಸ್ ಮುಖ್ಯಾಧಿಕಾರಿ ಸ್ಕಾಟ್ ಲಾಠಿ ಏಟುಗಳ ಮಳೆಗರೆದಾಗ ಅದನ್ನು ಕಣ್ಣಾರೆ ಕಂಡ ಭಗತ್ ಸಿಂಗ್ ಪಕ್ಷದ ಆದೇಶಕ್ಕೆ ಕಟ್ಟುಬಿದ್ದು ಹೊಟ್ಟೆಯಲ್ಲಿ ಸಿಟ್ಟು, ರಟ್ಟೆಯಲ್ಲಿ ಬಲವಿದ್ದರೂ ಅವಡುಗಚ್ಚುತ್ತ ಅಸಹಾಯಕನಾಗಿ ನಿಂತು ಅಹಿಂಸಾವ್ರತವನ್ನಾಚರಿಸಿದ. ನವೆಂಬರ್ ೧೭ರಂದು ಲಾಲಾ ಲಜಪತರಾಯ್ ಅವರ ಸಾವಿನ ಸುದ್ದಿ ಕೇಳಿ ಭಗತ್ ಸಿಂಗ್ ತಳಮಳಿಸಿದ. ಆತನ ಎದೆ ಕುದಿವ ಕೊಪ್ಪರಿಗೆಯಾಯಿತು.

೧೯೨೮ರ ಡಿಸೆಂಬರ್ ೧೦ರಂದು ರಾತ್ರಿ ಹಿಂದೂಸ್ತಾನ್ ಸಮಾಜವಾದಿ ಗಣತಂತ್ರ ಸಭೆ ಸೇರಿ ಪ್ರತೀಕಾರದ ಕಾರ್ಯಕ್ರಮ ರೂಪಿಸಿತು. ಲಾಲಾ ಲಜಪತ ರಾಯ್ ಅವರ ಕೊಲೆಗೆ ಕಾರಣವಾದ ಸ್ಕಾಟ್‌ನ ಮೇಲೆ ಸೇಡು ತೀರಿಸಿಕೊಳ್ಳುವ ಕೆಲಸವನ್ನು ಭಗತ್ ಸಿಂಗ್, ರಾಜಗುರು, ಸುಖದೇವ್, ಚಂದ್ರಶೇಖರ ಆಜ಼ಾದ್ ಮತ್ತು ಜಯಗೋಪಾಲರಿಗೆ ವಹಿಸಲಾಯಿತು. ಡಿಸೆಂಬರ್ ೧೭ರಂದು ಸ್ಕಾಟ್‌ನನ್ನು ಕೊಲ್ಲಲು ಎಲ್ಲಾ ಏರ್ಪಾಟು ಆಯಿತು. ಆದರೆ ಸ್ಕಾಟ್ ಬದುಕುಳಿದ. ಪೊಲೀಸ್ ಸಹಾಯಕ ಸುಪರಿಂಟೆಂಡೆಂಟ್ ಜೆ. ಪಿ. ಸ್ಯಾಂಡರ್ಸ್ ಕೊಲೆಯಾದ. ಈ ಘಟನೆ ಕುರಿತಂತೆ ಭಗತ್ ಸಿಂಗ್ ಹಾಗೂ ಚಂದ್ರಶೇಖರ್ ಆಜ಼ಾದ್ ಹೊರಡಿಸಿದ ಕರಪತ್ರದ ಸಾಲುಗಳು ಹೀಗಿವೆ :

"...ಒಬ್ಬ ವ್ಯಕ್ತಿಯನ್ನು ಬಲಿ ತೆಗೆದುಕೊಳ್ಳಬೇಕಾಗಿಬಂದ ದುರ್ಭಾಗ್ಯಕ್ಕಾಗಿ ನಮಗೆ ದುಃಖವೆನಿಸುತ್ತದೆ. ವ್ಯಕ್ತಿಯ ಕೊಲೆಗಾಗಿ ನಮ್ಮ ಕಣ್ಣೀರಿದೆ. ಸಾವಿಗಾಗಿ ನಮ್ಮ ಸಂತಾಪವಿದೆ. ಆದರೆ ನಾವು ಕೊಲ್ಲಬೇಕಾಗಿರುವ ವ್ಯಕ್ತಿ ದರ್ಪ, ದೌರ್ಜನ್ಯ, ಅನ್ಯಾಯ ಹಾಗೂ ರಾಕ್ಷಸೀ ವ್ಯವಸ್ಥೆಯ ಒಂದು ಅವಿಭಾಜ್ಯ ಅಂಗವಾಗಿರುವನೆಂಬ ಕಾರಣವೇ ನಮ್ಮ ಕ್ರೌರ್ಯಕ್ಕೆ ಪ್ರೇರಣೆಯಾಗಿದೆ. ಮಾನವ ರಕ್ತದ ಘನತೆಯ ಪೂರ್ಣಪ್ರಜ್ಞೆ ನಮಗಿದೆ. ರಕ್ತ ಹರಿಸುವುದರಲ್ಲಿ ನಮಗೆ ಸರ್ವಥಾ ಸಂತೋಷವಿಲ್ಲ. ಆದರೆ ಕ್ರಾಂತಿಯ ಬಲಿಪೀಠದಲ್ಲಿ ರಕ್ತದ ಅರ್ಪಣೆ ಅತ್ಯಂತ ಅನಿವಾರ್ಯ. ಮಾನವನಿಂದ ಮಾನವನ ಶೋಷಣೆ ತಪ್ಪಿಸುವುದು ನಮ್ಮ ಗುರಿ. ಕ್ರಾಂತಿ ನಮ್ಮ ದಾರಿ."

ಲಾಹೋರ್‌ನಿಂದ ಹೊರಟ ಕ್ರಾಂತಿ ಕಿಡಿ ಭಗತ್ ಸಿಂಗ್ ನೇರ ಕಲ್ಕತ್ತಾಕ್ಕೆ ಹೋದ. ಅಲ್ಲಿ ಜರುಗಿದ ಅಖಿಲ ಭಾರತ ಕಾಂಗ್ರೆಸ್ ಅಧಿವೇಶನದಲ್ಲಿ ಫಣೀಂದ್ರನಾಥ್ ಹಾಗೂ ಜಿತೇಂದ್ರನಾಥ್ ದಾಸ್ ಅವರನ್ನು ಭೇಟಿಯಾದ.

೧೯೨೭ರ ಮದ್ರಾಸ್ ಕಾಂಗ್ರೆಸ್ ಅಧಿವೇಶನದ ಎರಡು ನಿರ್ಣಯಗಳಾದ ಪೂರ್ಣ ಸ್ವರಾಜ್ಯಕ್ಕಾಗಿ ಹೋರಾಟ, ವಿದೇಶಿ ವಸ್ತುಗಳ ಬಹಿಷ್ಕಾರ ಹಾಗೂ ಬಾರ್ಡೋಲಿಯಲ್ಲಿ ವಲ್ಲಭಭಾಯಿ ಪಟೇಲರ ನಾಯಕತ್ವದಲ್ಲಿ ಜರುಗಿದ ರೈತ ಆಂದೋಲನದಿಂದಾಗಿ ಉಗ್ರಗೊಂಡ ಪ್ರತಿಭಟನೆಗಳು ಬ್ರಿಟಿಷ್ ಸರಕಾರವನ್ನು ಕಂಗೆಡಿಸಿದವು. ಈ ಚಳುವಳಿಗಳನ್ನು ಹತ್ತಿಕ್ಕಲು ಪ್ರಬಲ ಅಸ್ತ್ರ ಪಡೆಯುವ ಅಸಲು ಉದ್ದೇಶದಿಂದ "ಅಪಾಯಕಾರಿ ಸಿದ್ಧಾಂತಗಳ ಪ್ರಚಾರ ಪ್ರತಿಬಂಧಿಸಲು ಅಗತ್ಯವೆಂದು" ಮೇಲ್ನೋಟದ ಹೇಳಿಕೆ ಕೊಟ್ಟು ಭಾರತೀಯರ ಬೆನ್ನು ಸವರುತ್ತ ಬೆನ್ನಲ್ಲಿ ಚೂರಿ ಹಾಕುವ ಹಾಗೂ ರೈತರ, ಕಾರ್ಮಿಕರ, ದುಡಿವ ವರ್ಗಗಳ ಜನರ ನೆತ್ತಿಯ ಮೇಲೆ ಮೊಳೆ ಹೊಡೆಯುವ "ಸಾರ್ವಜನಿಕ ರಕ್ಷಣಾ ಮಸೂದೆ" ಹಾಗೂ "ಕಾರ್ಮಿಕ ವಿವಾದಗಳ ಮಸೂದೆ"ಗಳನ್ನು ವೈಸ್‌ರಾಯ್ ಇರ್ವಿನ್ ಕೇಂದ್ರ ಶಾಸನ ಸಭೆಯಲ್ಲಿ ಮಂಡಿಸುವ ತರಾತುರಿಯಲ್ಲಿದ್ದರು. ಇದನ್ನರಿತ ಭಗತ್ ಸಿಂಗ್ ಹಾಗೂ ಸಂಗಡಿಗರು ಈ ಮಸೂದೆಗಳನ್ನು ಶಾಸನ ಸಭೆಯಲ್ಲಿ ಮಂಡಿಸುವ ವೇಳೆಯಲ್ಲಿ ಬಾಂಬ್ ಸಿಡಿಸಲು, ಘೋಷಣೆ ಕೂಗಲು ಹಾಗೂ ಕರಪತ್ರ ಪ್ರಕಟಿಸಲು ತೀರ್ಮಾನಿಸಿದರು. ಈ ಘಟನೆಯ ಮೂಲಕ ಕೇಂದ್ರ ಶಾಸನ ಸಭೆಯ ಬ್ರಿಟಿಷ್ ಮತ್ತು ಭಾರತೀಯ ಸದಸ್ಯರ ಕಣ್ಣು ತೆರೆಸಬೇಕಾದದ್ದು ತಮ್ಮ ಕರ್ತವ್ಯವೆಂದು ಭಾವಿಸಿದರು. ಜೊತೆಗೆ ಬಾಂಬ್ ಸಿಡಿಸಿದ ಮೇಲೆ ಪಾರಾಗಲು ಪ್ರಯತ್ನಿಸದೆ ತಾವಾಗಿಯೇ ಬ್ರಿಟಿಷ್ ಸರಕಾರದ ಬಂಧನಕ್ಕೊಳಗಾಗಿ ಸರಕಾರ ನಡೆಸುವ ನ್ಯಾಯ ವಿಚಾರಣೆ ಕಾಲದಲ್ಲಿ ನ್ಯಾಯಾಲಯವನ್ನು ಬ್ರಿಟಿಷ್ ಸರಕಾರದ ವಿರುದ್ಧ ಹಾಗೂ ಶೋಷಣೆ, ದೌರ್ಜನ್ಯಕ್ಕೊಳಗಾದ ತಾಯ್ನಾಡಿನ ಕೋಟಿ ಕೋಟಿ ನಿರ್ಭಾಗ್ಯರ ಪರವಾಗಿ ವಾದಿಸುವ ವೇದಿಕೆಯನ್ನಾಗಿಸಿಕೊಳ್ಳಬೇಕೆಂಬುದು ಅವರ ಅಭಿಪ್ರಾಯವಾಗಿತ್ತು.

೧೯೨೯ರ ಏಪ್ರಿಲ್ ೮. ಕೇಂದ್ರ ಶಾಸನ ಸಭೆಯಲ್ಲಿ ವೈಸ್‌ರಾಯ್ ಮಂಡಿಸಿದ ಮಸೂದೆಗಳ ಬಗೆಗಿನ ಶಾಸನ ಸಭೆಯ ತೀರ್ಮಾನವನ್ನು ಘೋಷಿಸಿ ಸಭಾಧ್ಯಕ್ಷರು ತಮ್ಮ ರೂಲಿಂಗ್ ನೀಡುವ ಭರದಲ್ಲಿದ್ದರು. ಪ್ರೇಕ್ಷಕರ ಗ್ಯಾಲರಿಯಿಂದ ಭಗತ್ ಸಿಂಗ್ ಬಾಂಬನ್ನು ಎಸೆದ. ಸಭೆ ನಡುಗಿತು. ಸಭಾ ಸದಸ್ಯರ ಧೈರ್ಯ ಉಡುಗಿತು. ಸಭೆಯ ತುಂಬೆಲ್ಲ ಹೊಗೆ ಹರಡಿತು. ಸದಸ್ಯರು, ಪತ್ರಕರ್ತರು ದಿಕ್ಕು ತೋಚದೆ ಓಡಾಡತೊಡಗಿದರು. ಆದರೆ ಯಾರಿಗೂ ಮಾರಣಾಂತಿಕ ಗಾಯಳಾಗಿರಲಿಲ್ಲ. ಹಾಗೆ ಮಾಡುವುದು ಕ್ರಾಂತಿಕಾರರ ಉದ್ದೇಶವೂ ಆಗಿರಲಿಲ್ಲ. ಭಗತ್ ಸಿಂಗ್ ಮತ್ತು ದತ್ ನಿಂತ ಸ್ಥಳ ಬಿಟ್ಟು ಕದಲಲಿಲ್ಲ. ಸ್ಥಳದಲ್ಲೇ ನಿಂತು ಘೋಷಣೆ ಮೊಳಗಿಸಿದರು – "ಕ್ರಾಂತಿ ಚಿರಾಯುವಾಗಲಿ", "ಬ್ರಿಟಿಷ್ ಸಾಮ್ರಾಜ್ಯಶಾಹಿಗೆ ಧಿಕ್ಕಾರ." ಸರಳವಾಗಿ ಪಾರಾಗುವ ಎಲ್ಲ ಸಾಧ್ಯತೆ ಹಾಗೂ ಅವಕಾಶವಿದ್ದರೂ ಪೂರ್ವಯೋಜನೆಯಂತೆ




**ಹುತಾತ್ಮರಾದ ಭಗತ್ ಸಿಂಗ್, ಸುಖದೇವ್ ಹಾಗೂ ರಾಜಗುರು ಇವರುಗಳನ್ನು ನೇಣಿಗೇರಿಸಿದ ಸ್ಥಳ**

ಸ್ವಯಂಪ್ರೇರಣೆಯಿಂದ ಬಂಧನಕ್ಕೊಳಗಾದ ಕ್ರಾಂತಿವೀರ ಭಗತ್ ಸಿಂಗ್ ಮತ್ತು ದತ್ ಸಾರ್ಜೆಂಟ್ ಚೆರ್‍ರಿಯ ಕೆಲಸವನ್ನು ಅನಾಯಾಸಗೊಳಿಸಿದರು.

ನ್ಯಾಯ ವಿಚಾರಣೆ ದೆಹಲಿ ಜೇಲಿನಲ್ಲಿಯೇ ಮೇ ೭ರಿಂದ ಪ್ರಾರಂಭಗೊಂಡಿತು. ವಿಚಾರಣಾ ಕೋಣೆಯೊಳಗೆ ಪ್ರವೇಶಿಸುತ್ತಿದ್ದಂತೆ ಭಗತ್ ಸಿಂಗ್ "ಕ್ರಾಂತಿ ಚಿರಾಯುವಾಗಲಿ" ಎಂಬ ಘೋಷಣೆಯನ್ನು ಗರ್ಜಿಸಿದ. ಸೆಶನ್ಸ್ ಕೋರ್ಟ್‌ನಲ್ಲಿ ವಿಚಾರಣೆ ಮುಂದುವರಿಯಿತು. ಅಸಂಖ್ಯ ಭಾರತೀಯರ ಅಸಹನೀಯ ಅಳಲನ್ನು ಅಭಿವ್ಯಕ್ತಗೊಳಿಸುವ ಪರಿಣಾಮಕಾರಿ ವೇದಿಕೆಯನ್ನಾಗಿ ನ್ಯಾಯಾಲಯವನ್ನು ಭಗತ್ ಸಿಂಗ್ ಸಮರ್ಥವಾಗಿ ಬಳಸಿಕೊಂಡ. ನ್ಯಾಯ ವಿಚಾರಣೆಯ ಸಂದರ್ಭದಲ್ಲಿ ಭಗತ್ ಸಿಂಗ್ ಸಿಡಿಸಿದ ನುಡಿಕಿಡಿಗಳು :

"ಕಷ್ಟಕಾರ್ಪಣ್ಯಗಳ ಕುಲುಮೆಯಲ್ಲಿ ಕುದಿಯುತ್ತಿರುವ ತಮ್ಮ ಮಾತಿಗೂ ಮೀರಿದ ನೋವನ್ನು, ಅಮಾನುಷ ದೌರ್ಜನ್ಯದಿಂದಾಗಿ ಅನುಭವಿಸುತ್ತಿರುವ ಬವಣೆಯನ್ನು ಬಾಯ್ದೆರೆದು ಹೇಳಲು ಬೇರಾವ ದಾರಿಯೂ ಇಲ್ಲದೆ ಒಳಗೊಳಗೆ ಬೆಂದು ಬೂದಿಗೊಳ್ಳುತ್ತಿರುವ ಅಸಂಖ್ಯ ನಿರ್ಭಾಗ್ಯರ ಪರವಾಗಿ ನಾವು ಈ ಬಗೆಯಲ್ಲಿ ನಮ್ಮ ಪ್ರತಿಭಟನೆ ಸಲ್ಲಿಸಿದ್ದೇವೆ. ನಮ್ಮ ಏಕೈಕ ಉದ್ದೇಶವೆಂದರೆ "ಕಿವುಡರಿಗೂ ಕೇಳುವಂತೆ ಗಟ್ಟಿಯಾಗಿ ಕೂಗಿ ಹೇಳುವುದು ಮತ್ತು ದಿವ್ಯ ನಿರ್ಲಕ್ಷ್ಯ ತಳೆದವರಿಗೆ ಸಕಾಲಿಕ ಎಚ್ಚರಿಕೆ ನೀಡುವುದು... ಕ್ರಾಂತಿ ಮಾನವ ಕುಲದ ಅಲ್ಲಗಳೆಯಲಾಗದ ಆಜನ್ಮಸಿದ್ಧ ಹಕ್ಕು... ನಾವು ರೂಪಿಸಿಕೊಂಡ ಈ ನಮ್ಮ ಆದರ್ಶಗಳಿಗಾಗಿ ನಮಗೆ ಕೊಡುವ ಎಂಥ ಕ್ರೂರ ಶಿಕ್ಷೆಯನ್ನೂ ಆದರಪೂರ್ವಕವಾಗಿ, ಅತ್ಯಂತ ಆತ್ಮೀಯವಾಗಿ ಸ್ವಾಗತಿಸುತ್ತೇವೆ. ಕ್ರಾಂತಿಯ ಈ ಬಲಿಪೀಠಕ್ಕೆ ನಮ್ಮ ತಾರುಣ್ಯದ ಪರಿಮಳ ಲೇಪಿಸಲು ಬಂದಿದ್ದೇವೆ... ಇಂಥ ಶ್ರೇಷ್ಠ ಆದರ್ಶಗಳಿಗೆ ಎಂಥ ಮಹಾನ್ ತ್ಯಾಗವೂ ಅತ್ಯಲ್ಪವೆಂಬ ಅರಿವು ನಮಗಿದೆ. ನಮಗೆ ತೃಪ್ತಿ ಇದೆ. ಕ್ರಾಂತಿಯ ಕಹಳೆಯ ಧ್ವನಿ ಕೇಳಲು ನಾವು ಕಾತುರರಾಗಿದ್ದೇವೆ... ಕ್ರಾಂತಿ ಚಿರಾಯುವಾಗಲಿ..."

೧೯೨೯ ಜೂನ್ ೧೨ರಂದು ತೀರ್ಪನ್ನು ಘೋಷಿಸಲಾಯಿತು. ಭಗತ್ ಸಿಂಗ್ ಮತ್ತು ಬಿ. ಕೆ. ದತ್ ಇಬ್ಬರಿಗೂ ಆಜೀವಪರ್ಯಂತ ಗಡೀಪಾರು ಶಿಕ್ಷೆ ವಿಧಿಸಲಾಯಿತು. ಉಚ್ಚ ನ್ಯಾಯಾಲಯವು ಸೆಶನ್ಸ್ ಕೋರ್ಟಿನ ಈ ತೀರ್ಪನ್ನು ಎತ್ತಿ ಹಿಡಿಯಿತು.

ಸ್ಯಾಂಡರ್ಸ್ ಹತ್ಯೆಯ ಆರೋಪದ ಮೇಲೆ ಇನ್ನೊಂದು ಮೊಕದ್ದಮೆ ಆರಂಭಿಸಲು ಬ್ರಿಟಿಷ್ ಸರಕಾರ ಸಿದ್ಧತೆ ನಡೆಸಿತು. ಇದೇ ಲಾಹೋರ್ ಪಿತೂರಿ ಮೊಕದ್ದಮೆ. ಭಗತ್ ಸಿಂಗ್‌ನನ್ನು ಲಾಹೋರ್ ಸೆಂಟ್ರಲ್ ಜೇಲಿನಲ್ಲಿಡಲಾಯಿತು. ರಾಜಕೀಯ ಕೈದಿಗಳಿಗೆ ಜೇಲಿನಲ್ಲಿ ಕೊಡಲಾಗುತ್ತಿದ್ದ ಕಿರುಕುಳವನ್ನು ಕಣ್ಣಾರೆ ಕಂಡ ಭಗತ್ ಸಿಂಗ್ ಜೈಲಿನಲ್ಲಿ ಸುಧಾರಿತ ಸೌಲಭ್ಯಗಳಿಗಾಗಿ ಉಪವಾಸ ಸತ್ಯಾಗ್ರಹ ಆರಂಭಿಸಿದ. ಎಂಬತ್ತೊಂದು ದಿನಗಳ ಉಪವಾಸದಿಂದ ಶೋಚನೀಯವಾಗಿ ಶಿಥಿಲಗೊಂಡ ಭಗತ್‌ಸಿಂಗನ ಆರೋಗ್ಯ ಹಾಗೂ ಸಾರ್ವಜನಿಕರ ತೀವ್ರ ಒತ್ತಾಯಗಳಿಗೆ ಮಣಿಯುವುದನ್ನು ಬಿಟ್ಟರೆ ಬ್ರಿಟಿಷ್ ಸರಕಾರಕ್ಕೆ ಬೇರೆ ದಾರಿಯೇ ಇರಲಿಲ್ಲ. ಕೊನೆಗೂ ಬ್ರಿಟಿಷ್ ಸರಕಾರ ಮಣಿಯಿತು. ರಾಜಕೀಯ ಕೈದಿಗಳಿಗೆ ಸುಧಾರಿತ ಸೌಲಭ್ಯಗಳನ್ನು ನೀಡಲು ಒಪ್ಪಿತು. ಜೊತೆ ಜೊತೆಗೆ, ಸ್ಯಾಂಡರ್ಸ್ ಹತ್ಯೆಗೆ ಸಂಬಂಧಿಸಿದಂತೆ ಮೊಕದ್ದಮೆ ನಡೆದೇ ಇತ್ತು. ಸ್ಯಾಂಡರ್ಸ್ ಕೊಲೆಯ ಪಿತೂರಿಯ ಪ್ರಮುಖ ಸದಸ್ಯರೆಂಬ ಕಾರಣಕ್ಕಾಗಿ ೧೯೩೦ರ ಅಕ್ಟೋಬರ್ ೭ರಂದು ತನ್ನ ತೀರ್ಪಿನಲ್ಲಿ ನ್ಯಾಯಾಲಯ ಭಗತ್ ಸಿಂಗ್‌ಗೆ ಗಲ್ಲು ಶಿಕ್ಷೆ ವಿಧಿಸಿತು. ಇದೇ ಶಿಕ್ಷೆಯನ್ನು ಸುಖದೇವ್ ಮತ್ತು ರಾಜಗುರು ಅವರಿಗೂ ವಿಧಿಸಿತು.

೧೯೩೧ರ ಮಾರ್ಚ್ ೨೩ರಂದು ಸಾಯಂಕಾಲ ೭.೩೩ ನಿಮಿಷಕ್ಕೆ ಹುತಾತ್ಮರಾದ ಭಗತ್ ಸಿಂಗ್, ಸುಖದೇವ್ ಹಾಗೂ ರಾಜಗುರು ಜೀವನದ ಕಟ್ಟಕಡೆಯ ಗಳಿಗೆಯಲ್ಲೂ, ಸಾವಿನ ಸಮ್ಮುಖದಲ್ಲೂ ಸ್ವಲ್ಪವೂ ವಿಚಲಿತರಾಗದೆ ದೇಶದ ಸ್ವಾತಂತ್ರ್ಯ ಹಾಗೂ ಶೋಷಿತರ ಬಂಧಮುಕ್ತತೆಯ ಶ್ರೇಷ್ಠ ಕಾರಣಗಳಿಂದ ಉತ್ತೇಜಿತರಾಗಿ ದೇಶಕ್ಕೆ ಹಾಗೂ ಶೋಷಿತ ಸಮೂಹಕ್ಕೆ ಪ್ರಾಣಾರ್ಪಣೆ ತಮ್ಮ ಪರಮ ಪವಿತ್ರ ಕರ್ತವ್ಯವೆಂಬ ಭಾವನೆಯಿಂದ "ಕ್ರಾಂತಿ ಚಿರಾಯುವಾಗಲಿ" ಎಂಬ ಘೋಷಣೆ ಕೂಗುತ್ತ ತುಂಬು ನಗೆಯಿಂದ ನೇಣುಗಂಬವನ್ನೇರಿ ಭಾರತದ ಕ್ರಾಂತಿಕಾರಿ ಚಳವಳಿಯ ಅಧ್ಯಾಯಕ್ಕೆ ಉಜ್ವಲ ಪುಟ ಸೇರಿಸಿದರು. ಸ್ವತಂತ್ರ ಭಾರತದ ಯುವಶಕ್ತಿಯ ಕ್ರಿಯಾಶೀಲ ಚೈತನ್ಯಕ್ಕೆ ದಿಕ್ಸೂಚಿಯಾದರು.

ಭಗತ್ ಸಿಂಗ್ ಬರೀ ಆಕ್ರೋಶದ ವ್ಯಕ್ತಿಯಲ್ಲ. ಆದರ್ಶಶೀಲ ಶಕ್ತಿ. ಕ್ಷಣಕಾಲ ಹೊತ್ತುರಿದು ತಣ್ಣಗಾಗುವ ಹುಲ್ಲಿನ ಪೆಂಡಿಯಲ್ಲ. ಚಿರಕಾಲ ಬಿಸಿಯಾಗಿರುವ ಬೆಂಕಿಯ ಗುಂಡು. ಬೆಳಕಿನ ಚೆಂಡು. ಕ್ರಾಂತಿಕಾರಿ ಸಂಘಟನೆಗೆ ಭದ್ರ ಬುನಾದಿಯಾಗಬಲ್ಲ ಸುಭದ್ರ ಸೈದ್ಧಾಂತಿಕ ನೆಲೆಗಟ್ಟನ್ನು ಹೊಂದಿದ ಇತಿಹಾಸದ ಗಟ್ಟಿಗಾಳು. ವಿಮೋಚನಾ ಹೋರಾಟದ ಬೀಜಗಾಳು. ಕಮ್ಯುನಿಸಂ ಸಿದ್ಧಾಂತದ ಸಮಗ್ರ ಕಲ್ಪನೆ ಆತನಿಗಿತ್ತು. ಈ ನೆಲದ ಮೇಲೆ ಅದನ್ನು ನಿಜಗೊಳಿಸುವ ನೀಲನಕ್ಷೆಯೂ ಆತನ ಮೆದುಳಿನ ಖಜಾನೆಯಲ್ಲಿತ್ತು. ಮಾರ್ಚ್ ೨೩ರಂದು ಗಲ್ಲಿಗೇರುವ ದಿನವೂ ಲೆನಿನ್ ಅವರ ಜೀವನ ಚರಿತ್ರೆಯನ್ನು ಅತ್ಯಾಸಕ್ತಿಯಿಂದ ಓದಿದ ಸತತ ಅಧ್ಯಯನಶೀಲನಾಗಿದ್ದ ಭಗತ್ ಸಿಂಗ್ ಬುದ್ಧಿಜೀವಿಗಳಿಗೂ ಆದರ್ಶಪ್ರಾಯನಾದ ಅಪ್ಪಟ ಅಪರಂಜಿ. ಆತ ಪ್ರತಿಭಟಿಸಿದ್ದು ಬ್ರಿಟಿಷರ ಸಾಮ್ರಾಜ್ಯಶಾಹಿ ಧೋರಣೆಯನ್ನು. ಆತ ಖಂಡಿಸಿದ್ದು ಎಲ್ಲ ರೀತಿಯ ಶೋಷಣೆಯನ್ನು. ಆತ ಬಯಸಿದ್ದು ಸ್ವತಂತ್ರ ಭಾರತವನ್ನು. ಆತ ಕಟ್ಟಬಯಸಿದ್ದು ಶೋಷಣಾರಹಿತ ಸುಂದರ ಸಮಾಜವನ್ನು. ಯಾವ ಧರ್ಮವನ್ನೂ ತುಚ್ಛೀಕರಿಸದ ಆತ ಅಪೇಕ್ಷಿಸಿದುದು ಧರ್ಮನಿರಪೇಕ್ಷತೆಯನ್ನು. ರಾಷ್ಟ್ರದ ರಾಜಕಾರಣದಲ್ಲಿ ಮತ್ತು ಮಾನವ ಸಂಬಂಧಗಳಲ್ಲಿ ಮತೀಯ ಭಾವನೆಗಳಿಗೆ ಎಳ್ಳಷ್ಟೂ ಸ್ಥಾನವಿರಕೂಡದೆಂದು ನುಡಿದು ನೇಣುಗಂಬದ ನೆರಳಡಿ ನಿಲ್ಲುವವರೆಗೂ ಅದರಂತೆಯೇ ನಡೆದ ಅದಮ್ಯ ಚೇತನಶೀಲ ವ್ಯಕ್ತಿ–ಶಕ್ತಿ ಭಗತ್ ಸಿಂಗ್. ಕಾರ್ಮಿಕರಲ್ಲಿ, ರೈತರಲ್ಲಿ, ದುಡಿವ ವರ್ಗದಲ್ಲಿ ಅನನ್ಯ ಅನುಕಂಪ ಹಾಗೂ ಕ್ರಿಯಾತ್ಮಕ ಕಳಕಳಿ ಹೊಂದಿದ್ದ ಭಗತ್ ಸಿಂಗ್ ಒಬ್ಬ ಸಮಾಜವಾದಿ. ಅಂತೆಯೇ ಮಾನವಕುಲ ಕಂಡ ಒಬ್ಬ ಮಾನವತಾವಾದಿಯೂ ಕೂಡ.

**ಟಿ. ವಿ. ಮಾಗಳದ**
'ಶ್ರೀ ಬಸವ', ನಿಸರ್ಗ ಬಡಾವಣೆ, ಪುಟ್ಟರಾಜ ನಗರ,
ಸಂಭಾಪುರ ರಸ್ತೆ, ಅಂಚೆ : ಗದಗ – ೫೮೨ ೧೦೧




# ಅವಿಚ್ಛಿನ್ನ ಉತ್ಸಾಹದ ವಿಜ್ಞಾನಿ, ಶಿಕ್ಷಣ ತಜ್ಞ ಪ್ರೊ|| ಎಸ್. ಎಂ. ಶಿವಪ್ರಸಾದ್

ಬೆಂಗಳೂರಿನ ಜವಾಹರ್‌ಲಾಲ್ ನೆಹರು ಉನ್ನತ ವೈಜ್ಞಾನಿಕ ಸಂಶೋಧನಾ ಕೇಂದ್ರದ ಹಿರಿಯ ವಿಜ್ಞಾನಿ, ಶಿಕ್ಷಣತಜ್ಞರು ಮತ್ತು ಪ್ರಾಧ್ಯಾಪಕರೂ ಆಗಿರುವ ಎಸ್. ಎಂ. ಶಿವಪ್ರಸಾದ್ ಅವರದ್ದು ವೈವಿಧ್ಯಮಯ ವ್ಯಕ್ತಿತ್ವ. ಕನ್ನಡ ಸಾಹಿತ್ಯದ ಖ್ಯಾತ ಸಾಹಿತಿ ದಂಪತಿಗಳ ಮಗನಾಗಿ, ಎಳೆಯ ವಯಸ್ಸಿನಲ್ಲಿಯೇ ಸಾಹಿತ್ಯದ ಅಭಿರುಚಿ ಬೆಳೆಸಿಕೊಂಡು, ತದನಂತರ ವಿಜ್ಞಾನದಲ್ಲಿ ಅಪಾರ ಆಸಕ್ತಿ ಹೊಂದಿ, ಇಂದು ವಸ್ತು ವಿಜ್ಞಾನ ವಲಯದಲ್ಲಿ ಮುಂಚೂಣಿ ವಿಜ್ಞಾನಿಯಾಗಿ ರೂಪುಗೊಂಡ ಬಗೆ ಕುತೂಹಲಭರಿತವಾಗಿದೆ. ಇದೇ ಹೊತ್ತಿನಲ್ಲಿಯೇ ಓರ್ವ ಅಪರೂಪದ ಶಿಕ್ಷಣತಜ್ಞರಾಗಿ ತಿರುವು ಪಡೆದ ಬಗೆ ಅಷ್ಟೇ ರೋಚಕವಾಗಿದೆ. ಕರ್ನಾಟಕ ರಾಜ್ಯ ಉನ್ನತ ಶಿಕ್ಷಣ ಅಕಾಡೆಮಿಯ ಪ್ರಸ್ತುತ ನಿರ್ದೇಶಕರಾಗಿರುವ ಅವರನ್ನು 'ಹೊಸತು' ವಿಶೇಷ ಸಂಚಿಕೆಗಾಗಿ ಸಂದರ್ಶಿಸಲಾಯಿತು. ಬೆಂಗಳೂರಿನ ಕೇಂಬ್ರಿಜ್ ತಾಂತ್ರಿಕ ಮಹಾವಿದ್ಯಾಲಯದ ಭೌತವಿಜ್ಞಾನ ಸಹಾಯಕ ಪ್ರಾಧ್ಯಾಪಕ ಎಸ್. ಮಂಜುನಾಥ ಅವರು ನಡೆಸಿದ ಸಂದರ್ಶನ ಇಲ್ಲಿದೆ. ಇವರೊಡನೆ ಪತ್ರಿಕೆಯ ಡಾ|| ಜಿ. ರಾಮಕೃಷ್ಣ ಮತ್ತು ಡಾ|| ಎನ್. ಗಾಯತ್ರಿ ಕೂಡ ಸಂದರ್ಶನದಲ್ಲಿ ಭಾಗವಹಿಸಿದ್ದರು.

ಸಂದರ್ಶಕರು

**ಎಸ್. ಮಂಜುನಾಥ**
**ಡಾ|| ಜಿ. ರಾಮಕೃಷ್ಣ**
**ಡಾ|| ಎನ್. ಗಾಯತ್ರಿ**

**ಹೊಸತು** : ನಮಸ್ಕಾರ ಸರ್, ಪತ್ರಿಕೆಯ ಪರವಾಗಿ ತಮಗೆ ಹೊಸ ವರ್ಷದ ಹಾರ್ದಿಕ ಶುಭಾಶಯಗಳು. ಪತ್ರಿಕೆಯ ಓದುಗರಿಗಾಗಿ, ಹೊಸ ವರ್ಷದ ವಿಶೇಷ ಸಂಚಿಕೆಗೆ ತಮ್ಮ ಸಂದರ್ಶನ ಮೌಲಿಕವಾದದ್ದು. ಈ ಹಿನ್ನೆಲೆಯಲ್ಲಿ, ತಮ್ಮ ಬಾಲ್ಯದ ದಿನಗಳು ಮತ್ತು ತಮ್ಮ ವ್ಯಕ್ತಿತ್ವದ ಮೇಲೆ ಪರಿಣಾಮ ಬೀರಿರುವ ಅಂಶಗಳನ್ನು ತಿಳಿಸುವಿರಾ ?

**ಶಿವಪ್ರಸಾದ್** : ಪತ್ರಿಕೆಗೆ ನಾನು ಮೊದಲು ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ಬಾಲ್ಯದ ದಿನಗಳು ನನ್ನ ಜೀವನಕ್ಕೆ ಭದ್ರ ಬುನಾದಿ ಹಾಕಿವೆ. ನಾನು ತುಂಬ ಅದೃಷ್ಟವಂತ. ಏಕೆಂದರೆ, ನನ್ನ ತಂದೆ-ತಾಯಿ ಇಬ್ಬರೂ ಸಾಹಿತಿಗಳಾಗಿದ್ದರಿಂದ, ನನಗೆ





ಆರಂಭದಲ್ಲಿಯೇ ಉತ್ತಮ ಮೌಲ್ಯಗಳನ್ನು ರೂಢಿಸಿಕೊಳ್ಳಲು ಸಹಾಯಕ ವಾಯಿತು. ಅಪ್ಪ ಪ್ರೊ॥ ಎಸ್. ಎಂ. ವೃಷಭೇಂದ್ರ ಸ್ವಾಮಿ, ಅಮ್ಮ ಪ್ರೊ॥ ಲಲಿತಾಂಬ ಇಬ್ಬರೂ ಧಾರವಾಡ ವಿಶ್ವವಿದ್ಯಾಲಯದಲ್ಲಿ ಬೋಧನೆಯಲ್ಲಿದ್ದದ್ದೂ, ಮತ್ತೆ ವಿಶ್ವವಿದ್ಯಾಲಯದ ಪರಿಸರ, ನನ್ನ ಜೀವನದ ಮೇಲೆ ಅಪಾರ ಪರಿಣಾಮವನ್ನು ಬೀರಿದ್ದು ಮಾತ್ರ ಅವಿಸ್ಮರಣೀಯ. ಧಾರವಾಡ ಒಂದು ಅದ್ಭುತ ಸ್ಥಳ. ಅಲ್ಲಿ ಸಾಧನೆಗೆ ಮನ್ನಣೆಯಿದೆ. ಮನೆಯಲ್ಲಿಯ ಸಾಹಿತ್ಯಿಕ–ಶೈಕ್ಷಣಿಕ ವಾತಾವರಣದ ಹೊರತಾಗಿಯೂ, ನಾನು ಒಂದು ರೀತಿ "ಜಾಕ್ ಆಫ್ ಆಲ್, ಮಾಸ್ಟರ್ ಆಫ್ ನನ್" ಎನ್ನುವಂತಿದ್ದೆ. ವಿದ್ಯಾರ್ಥಿ ದಿನಗಳಲ್ಲಿಯೇ ಕ್ರೀಡಾಪಟುವಾಗಿದ್ದೆ. ಅನೇಕ ಕ್ರೀಡೆಗಳಲ್ಲಿ ಭಾಗವಹಿಸುತ್ತಿದ್ದೆ.

**ಹೊಸತು :** ಯಾವ ಯಾವ ಕ್ರೀಡೆಗಳಲ್ಲಿ ತೊಡಗಿಸಿಕೊಳ್ಳುತ್ತಿದ್ದಿರಿ ?

**ಶಿವಪ್ರಸಾದ್ :** ನಿಜ ಹೇಳಬೇಕೆಂದರೆ, ಅನೇಕ ವರ್ಷಗಳ ಕಾಲ, ನಾನೊಬ್ಬ ಗಂಭೀರ ಕ್ರೀಡಾಪಟುವಾಗಿದ್ದೆ. ದೆಹಲಿಯ ಬಿರು ಬಿಸುಲಿನ ಮೈದಾನದಲ್ಲೂ ಮತ್ತು ಇಂಗ್ಲೆಂಡಿನ ಗಢಗಢ ನಡುಗುವ ಚಳಿಯ ಮೈದಾನದಲ್ಲೂ ಸಾಕಷ್ಟು ಕ್ರಿಕೆಟ್ ಆಡಿದ್ದೇನೆ. ರಾಜ್ಯ ಮಟ್ಟದಲ್ಲಿ ಮತ್ತು ಇಂಗ್ಲೆಂಡಿನಲ್ಲಿ ಕೌಂಟಿ ಕ್ರಿಕೆಟ್ ಕೂಡ ಆಡಿದ್ದೆ. ಅಂತರರಾಷ್ಟ್ರೀಯ ಖ್ಯಾತಿಯ ಇಮ್ರಾನ್ ಖಾನ್, ದೆಹಲಿಯಲ್ಲಿ ಕಪಿಲ್ ದೇವ್, ಮನೋಜ್ ಪ್ರಭಾಕರ್ ಇವರ ಜೊತೆಯಲ್ಲೆಲ್ಲಾ ಕ್ರಿಕೆಟ್ ಆಡಿದ್ದೇನೆ.

**ಹೊಸತು :** ಸಾಹಿತ್ಯ ಮತ್ತು ಕ್ರೀಡೆಗಳಲ್ಲಿ ತೊಡಗಿಸಿಕೊಂಡಿದ್ದ ನೀವು, ಅದು ಹೇಗೆ ವಿಜ್ಞಾನದ ಕಡೆ ವಾಲಿದಿರಿ? ತಾವು ವಿಜ್ಞಾನಿಯಾದ ಬಗ್ಗೆ ತಿಳಿಸುವಿರಾ?

**ಶಿವಪ್ರಸಾದ್:** ನಾನೇನು ವಿಜ್ಞಾನಿಯಾಗ್ತೇನೆ ಅಂತ ಅಂದುಕೊಂಡಿರಲಿಲ್ಲ. ವಿಜ್ಞಾನದಲ್ಲಿಯೂ ಚೆನ್ನಾಗಿ ಅಭ್ಯಾಸ ಮಾಡುತ್ತಿದ್ದೆ, ಉತ್ತಮ ಅಂಕಗಳೂ ಬಂದವು. ಆದ್ರೆ ಇದೆಲ್ಲಕ್ಕಿಂತ ಮಿಗಿಲಾಗಿ, ೧೯೭೮ರ ನನ್ನ ಎಂ.ಎಸ್ಸಿ ದಿನಗಳಲ್ಲಿ ಗುರುಗಳಾದ ಪ್ರೊ॥ ಮಲ್ಲಿಕಾರ್ಜುನ ಅಂಗಡಿಯವರು, ಆಗತಾನೆ ಅಮೆರಿಕಾದಲ್ಲಿ ತಮ್ಮ ಪಿಎಚ್‌ಡಿ ಮುಗಿಸಿಕೊಂಡು, ಧಾರವಾಡದ ಕರ್ನಾಟಕ ವಿ.ವಿ.ಗೆ ಸೇರಿಕೊಂಡಿದ್ರು. ಅವರು ನನ್ನನ್ನು ಗುರುತಿಸಿ, "ನೀನೇ ನನ್ನ ಮೊದಲ ಪಿಎಚ್‌ಡಿ ವಿದ್ಯಾರ್ಥಿಯಾಗಬೇಕು" ಎಂದು, ನನ್ನನ್ನು ವಿಜ್ಞಾನದ ಸಂಶೋಧನಾ ಜಗತ್ತಿಗೆ ಸೇರಲು ಸಾಕಷ್ಟು ಪ್ರೇರೇಪಿಸಿದರು. ಅವರೇ ನನಗೆ ಸಂಶೋಧನೆ ಎಂದರೆ ಏನು, ಸಂಶೋಧನಾ ಪ್ರಬಂಧಗಳೆಂದರೇನು? ಸಂಶೋಧನೆಗಳನ್ನು ಹೇಗೆ ಕೈಗೊಳ್ಳಬೇಕು, ಎಂಬಿತ್ಯಾದಿ ಸಂಗತಿಗಳನ್ನು ತಿಳಿಸಿದ್ದು, ಮತ್ತು ನಾನು ಕಲಿತದ್ದು. ಅಂಗಡಿಯವರೇ ನಮ್ಮ ಮನೆಗೆ ಬಂದು ನನ್ನ ತಾಯಿಯ ಮನವೊಲಿಸಿ ಸಂಶೋಧನೆಯ ಹಾದಿಗೆ ಹಚ್ಚಿದರು. ಆಗಿನ ಕಾಲದಲ್ಲಿಯೇ ಅಂತರರಾಷ್ಟ್ರೀಯ ಜರ್ನಲ್‌ಗಳಲ್ಲಿ ನನ್ನ ಸಂಶೋಧನೆಗಳು ಪ್ರಕಟಗೊಂಡಿದ್ದು. ನನ್ನ ಪಿಎಚ್‌ಡಿ ಮುಗಿಯುವ ಹೊತ್ತಿಗೆ ಸುಮಾರು ೧೫ ಸಂಶೋಧನಾ ಪ್ರಬಂಧಗಳು ಪ್ರಕಟಗೊಂಡಿದ್ದವು. ಅವರಿಂದಲೇ ನನ್ನ ಜೀವನಕ್ಕೆ ಪ್ರಮುಖ ತಿರುವು ಸಿಕ್ಕಿದ್ದು ನನ್ನ ಬದುಕಿಗೊಂದು ಮಾರ್ಗ ಸಿಕ್ಕಿತು.

**ಹೊಸತು :** ತಮ್ಮ ವೃತ್ತಿ ಬದುಕಿನ ಆರಂಭಿಕ ದಿನಗಳು ಹೇಗಿದ್ದವು ?

**ಶಿವಪ್ರಸಾದ್ :** 'ಥಿನ್ ಫಿಲ್ಮ್'ಗಳ ಮೇಲೆ ನಾನು ಸಂಶೋಧನೆಗಳನ್ನು ಆರಂಭಿಸಿದ್ದು. ಈ ಕ್ಷೇತ್ರದಲ್ಲಿ ಜಾಗತಿಕ ಮಟ್ಟದಲ್ಲಿ ಗುರುತಿಸಿಕೊಂಡಿದ್ದ, ಐಐಟಿ ದೆಹಲಿಯ ಪ್ರೊ॥ ಕೆ. ಎಲ್. ಚೋಪ್ರ ಅವರ ಜೊತೆಯಲ್ಲಿ ಒಂದು ವರ್ಷ ಡಾಕ್ಟರೋತ್ತರ ಸಂಶೋಧನೆಗಳನ್ನು ಕೈಗೊಂಡೆ. ತದನಂತರ ಇಂಗ್ಲೆಂಡಿನ ಸಸೆಕ್ಸ್ ವಿ.ವಿ.ಯಲ್ಲಿ ಸಂಶೋಧನಾ ಅವಕಾಶ ಲಭಿಸಿತು. ಅಲ್ಲಿಂದ ದೆಹಲಿಯ ರಾಷ್ಟ್ರೀಯ ಭೌತವಿಜ್ಞಾನ ಪ್ರಯೋಗಾಲಯ (ಎನ್.ಪಿ.ಎಲ್) ಸೇರಿಕೊಂಡೆ. ಅಲ್ಲಿ, ಉತ್ತಮವಾದ ಪ್ರಯೋಗಾಲಯ ಸ್ಥಾಪಿಸಲು ಅವಕಾಶ ಲಭಿಸಿತು. ಶುದ್ಧ ವಿಜ್ಞಾನದ ಮೇಲೆ ಕೈಗೊಂಡ ಅನೇಕ ನನ್ನ ಸಂಶೋಧನೆಗಳು ಪ್ರಕಟಗೊಂಡವು.

**ಹೊಸತು :** ನಿಮ್ಮ ಮತ್ತು ಪ್ರೊ॥ ಸಿ. ಎನ್. ಆರ್. ರಾವ್ ಪರಿಚಯ ಮತ್ತು ಒಡನಾಟದ ಬಗ್ಗೆ ತಿಳಿಸುವಿರಾ?

**ಶಿವಪ್ರಸಾದ್ :** ನಮ್ಮ ತಂದೆಗೆ ಮತ್ತು ದೇ. ಜ. ಗೌ. (ದೇ. ಜವರೇ ಗೌಡ) ಹಾಗೂ ಪ್ರೊ॥ ಸಿ. ಎನ್. ಆರ್. ರಾವ್ ಅವರಿಗೆ ಒಂದೇ ವೇದಿಕೆಯಲ್ಲಿಯೇ ಶಿವಮೊಗ್ಗದ ಕುವೆಂಪು ವಿ.ವಿ.ಯಿಂದ ಗೌರವ ಡಾಕ್ಟರೇಟ್ ನೀಡಲಾಯಿತು. ಆ ಸಂದರ್ಭದಲ್ಲಿ, ತಂದೆಯವರು ನನ್ನನ್ನು ಪ್ರೊ॥ ರಾವ್ ಅವರಿಗೆ ಪರಿಚಯಿಸಿದರು. ಆಗ ಪ್ರೊ॥ ರಾವ್ "ನಿಮ್ಮ ಸಂಶೋಧನೆಗಳನ್ನು ನಾನು ಓದಿದ್ದೇನೆ, ನಾನು ಪ್ರಸಾದ್ ಅಂದರೆ, ಎಲ್ಲೋ ಆಂಧ್ರದವರು ಎಂದು ತಿಳಿದಿದ್ದೆ. ದೆಹಲಿಯಲ್ಲಿ ಏನ್ ಇರ್‍ತೀರಾ, ಇಲ್ಲಿಯೇ ನಮ್ಮಲ್ಲಿ ಬಂದುಬಿಡಿ ಇಲ್ಲೇ ನಿಮ್ಮ ಸಂಶೋಧನೆಗಳನ್ನು ಕೈಗೊಳ್ಳಿ" ಎಂದು ತಕ್ಷಣವೇ ಆಹ್ವಾನವಿತ್ತರು. ಅದಾಗಲೇ, ನನಗೆ ಮೆಟಿರಿಯಲ್ಸ್ ರಿಸರ್ಚ್ ಸೊಸೈಟಿ ಆಫ್ ಇಂಡಿಯಾದಿಂದ ಉಪನ್ಯಾಸ ಗೌರವ (Oration award) ದೊರೆತಿತ್ತು. ಲಕ್ನೌದಲ್ಲಿ ನಡೆದಿದ್ದ ಆ ಉಪನ್ಯಾಸದಲ್ಲಿ ಪ್ರೊ॥ ರಾವ್ ಕೂಡ ಇದ್ದರು. ಅವರ ಆಹ್ವಾನ ಮತ್ತು ಕನ್ನಡ ನಾಡಿನ ಸೆಳೆತದಿಂದಾಗಿ ತಕ್ಷಣವೇ ನಾನು ಸ್ಪಂದಿಸಿದೆ. ಅಂದಿನಿಂದ ಬೆಂಗಳೂರಿನ ಜವಾಹರ್‌ಲಾಲ್ ನೆಹರು ಉನ್ನತ ವೈಜ್ಞಾನಿಕ ಸಂಶೋಧನಾ ಕೇಂದ್ರದಲ್ಲಿ ಪ್ರಾಧ್ಯಾಪಕನಾಗಿ ಸೇರಿಕೊಂಡೆ. ಇಲ್ಲಿ ಗ್ಯಾಲಿಯಮ್ ನೈಟ್ರೈಡ್ ಮೇಲಿನ ಹೊಸ ಸಂಶೋಧನೆಗಳನ್ನು ಆರಂಭಿಸಿದೆ, ಅಣ್ವಿಕ ದೂಲ ಅಧಿಪದರಣದ (Molecular Beam Epitaxy) ಅದ್ಭುತವಾದ ಪ್ರಯೋಗಾಲಯ ಸ್ಥಾಪಿಸಿದೆ. ಈ ಸಂದರ್ಶನದ, ಸಂದರ್ಶಕರಾದ ಮಂಜುನಾಥರು ಕೂಡ ಕೆಲ–ಕಾಲ ನನ್ನ ಪ್ರಯೋಗಾಲಯದಲ್ಲಿ ಕೆಲಸ ಮಾಡಿದ್ದಾರೆ. ಪ್ರೊ॥ ರಾವ್ ಅಂಥ ಧೀಮಂತ ವಿಜ್ಞಾನಿಯ ಜೊತೆ ಸಹೋದ್ಯೋಗಿಯಾಗುವ, ನಿತ್ಯವೂ ಅವರೊಂದಿಗೆ ವ್ಯವಹರಿಸುವ ಅವಕಾಶ ಲಭಿಸಿದ್ದು, ನನ್ನ ಜೀವನದ ಮತ್ತೊಂದು ಮಹತ್ವದ ಮೈಲುಗಲ್ಲು ಎಂದೇ ಭಾವಿಸುವೆ.

**ಹೊಸತು :** ವಸ್ತುವಿಜ್ಞಾನದಲ್ಲಿನ ನಿಮ್ಮ ಅತ್ಯಾಧುನಿಕ ಸಂಶೋಧನೆಗಳು ಜನಸಾಮಾನ್ಯರಿಗೆ ಯಾವ ರೀತಿ ಸಹಾಯಕವಾಗಿವೆ? ಇವುಗಳಿಂದ ಏನು ಪ್ರಯೋಜನ ?

**ಶಿವಪ್ರಸಾದ್ :** ವಿಜ್ಞಾನ, ತಂತ್ರಜ್ಞಾನ ಮತ್ತು ಇಂಜಿನಿಯರಿಂಗ್ ಈ ಮೂರು ಬೇರೆ ಬೇರೆ, ಅವುಗಳ ಪಾತ್ರ, ಸ್ವರೂಪ ಎಲ್ಲವೂ ಭಿನ್ನ–ವಿಭಿನ್ನ. ಅನ್ವಯಿಕ ವೈಜ್ಞಾನಿಕ ಸಂಶೋಧನೆಗಳೆ ಬೇರೆ, ಮೂಲ ವಿಜ್ಞಾನದ ಸಂಶೋಧನೆಗಳೆ ಬೇರೆ, ಒಂದನ್ನೊಂದು ಮಿಶ್ರಣ ಮಾಡಕೂಡದು. ನೀಲಿ /ಬಿಳಿ ಬಣ್ಣದ ಎಲ್.ಇ.ಡಿ. ಬಲ್ಬ್‌ಗಳ ಸಂಶೋಧನೆ ಆಗತಾನೆ ಜನಪ್ರಿಯವಾಗತೊಡಗಿತ್ತು. ಎಲ್ಲರೂ ನನ್ನ ನೀವೂ ಎಲ್.ಇ.ಡಿ. ತಯಾರಿಸುತ್ತೀರಾ ? ಅಂತ ಕೇಳಿದ್ರು. ಆಗ ನಾನು, "ಇಲ್ಲ ! ಎಲ್.ಇ.ಡಿ.ಗೆ ಬೇಕಾಗುವ ಉತ್ತಮವಾದ ಸಾಮಗ್ರಿ ಹುಡುಕುವತ್ತ ನನ್ನ ಸಂಶೋಧನೆಗಳು ಇರುತ್ತವೆ" ಎಂದು ಉತ್ತರಿಸುತ್ತಿದ್ದೆ. ಸಾಮಾನ್ಯವಾಗಿ ಎಲ್.ಇ.ಡಿ. ಟೀವಿ, ಮೊಬೈಲ್ ಟಾರ್ಚ್ ಲೈಟ್‌ಗಳಲ್ಲಿ ಎಲ್ಲರೂ ಗ್ಯಾಲಿಯಮ್ ನೈಟ್ರೈಡ್ ಫಿಲ್ಮ್ ಆಕಾರಗಳಲ್ಲಿ ತಯಾರಿಸಿ ಬಳಸುತ್ತಾರೆ. ಆದ್ರೆ ನಮ್ಮ ಪ್ರಯೋಗಾಲಯದಲ್ಲಿ, ಗ್ಯಾಲಿಯಮ್ ನೈಟ್ರೈಡ್ ನ್ಯಾನೊವಾಲ್ ನೆಟ್‌ವರ್ಕ್ ತಯಾರಿಸಿ, ಇದರಿಂದ ಹೊರಹೊಮ್ಮುವ ಬೆಳಕು ಅಧಿಕ ಕ್ಷಮತೆ ಹೊಂದಿದೆ

ಎಂದು ತೋರಿಸಿದ್ದೇವೆ. ಈಗ ದೊರೆಯುತ್ತಿರುವ ಎಲ್.ಇ.ಡಿ.ಗೆ ಹೋಲಿಸಿದರೆ, ನಮ್ಮ ಪದಾರ್ಥವು ಸುಮಾರು ೨೦೦–೩೦೦ ಪಟ್ಟು ಹೆಚ್ಚು ಬೆಳಕು ಬಿಡುಗಡೆಗೊಳಿಸಿದೆ. ಆದ್ರೆ, ನಾವು ಮಾಡಿರುವುದು ಅತಿನೇರಳೆ ತರಂಗ ವ್ಯಾಪ್ತಿಯಲ್ಲಿ. ಮುಂದೆ, ಗೋಚರ ತರಂಗವ್ಯಾಪ್ತಿಯಲ್ಲಿಯೂ ಇದನ್ನು ವ್ಯಾಪಿಸುವ ಸಂಶೋಧನೆಗಳು ಪ್ರಗತಿಯಲ್ಲಿವೆ. ನಮ್ಮ ಸಂಶೋಧನೆಗಳನ್ನು ಉಪಯೋಗಿಸಿಕೊಂಡು ಎಲ್.ಇ.ಡಿ. ದೀಪ ಹೇಗೆ ತಯಾರಿಸಬಹುದೆಂಬುದು ನಮ್ಮ ಕೆಲಸವಲ್ಲ, ಬದಲಾಗಿ ಅದು ತಂತ್ರಜ್ಞರ ಸಮಸ್ಯೆ.

**ಹೊಸತು :** ಎಲ್.ಇ.ಡಿ. ದೀಪಗಳಲ್ಲಿ ಬಿಳಿ ಬೆಳಕು ಹೊಮ್ಮಿಸುವುದು ತುಂಬ ಕಷ್ಟದ ಸಂಗತಿಯೇ?

**ಶಿವಪ್ರಸಾದ್ :** ಹೌದು, ಎಲ್.ಇ.ಡಿ. ದೀಪಗಳಲ್ಲಿ ಬಿಳಿ ಬೆಳಕು ಹೊಮ್ಮಿಸುವುದು ಅಷ್ಟು ಸರಳವಲ್ಲ. ಇದಕ್ಕಾಗಿ ಜಾಗತಿಕ ಮಟ್ಟದಲ್ಲಿ ಒಂದು ರೀತಿಯ ಜಿದ್ದಾಜಿದ್ದಿ ಪೈಪೋಟಿಯಲ್ಲಿ ಸಂಶೋಧನೆಗಳು ಸಾಗುತ್ತಿವೆ. ಈಗ ಲಭ್ಯವಿರುವ ಎಲ್.ಇ.ಡಿ. ಬಿಳಿ ಬೆಳಕು, ಶುದ್ಧ ಬಿಳುಪಿನದಲ್ಲ. ಕಾರಣ, ನೀಲಿ ಬೆಳಕು ಉತ್ಪಾದಿಸುವ ದೀಪದ ಮೇಲೆ ಹಳದಿ ಫಾಸ್ಫರ್ ಲೇಪಿಸಿ, ಬಿಳಿ ಬೆಳಕು ಉತ್ಪಾದಿಸಲಾಗುವುದು. ಶುದ್ಧ ಬಿಳಿ ಬೆಳಕು ಅಂದರೆ, ಕೆಂಪು, ನೀಲಿ, ಹಸಿರು ಮಿಶ್ರಿತವಾದ ಬಿಳಿ ಬೆಳಕನ್ನು ಎಲ್.ಇ.ಡಿ.ಗಳಿಂದ ಹೊರತೆಗೆಯುವುದು, ಇನ್ನೂ ಪ್ರಯಾಸದ ಕೆಲಸವೇ ಆಗಿದೆ.

**ಹೊಸತು :** ಎಲ್.ಇ.ಡಿ. ಮೇಲಿನ ಸಂಶೋಧನೆ ಹೊರತುಪಡಿಸಿ, ತಾವು ಕೈಗೊಂಡಿರುವ ಇನ್ನಿತರ ಸಂಶೋಧನೆಗಳ ಬಗ್ಗೆ ಬೆಳಕು ಚೆಲ್ಲುವಿರಾ?

**ಶಿವಪ್ರಸಾದ್ :** ಎಲ್.ಇ.ಡಿ. ಅಲ್ಲದೆ, ಲೇಸರ್ ಬೆಳಕಿನ ಮೇಲೆ ಸಂಶೋಧನೆಗಳು ನಡೆದಿವೆ. ಇತ್ತೀಚೆಗಷ್ಟೇ ನಮ್ಮ ತಂಡ ಮತ್ತು ಐಐಟಿ ಮುಂಬೈಯವರ ಸಹಭಾಗಿತ್ವದಲ್ಲಿ ಜಗತ್ತಿನ ಅತಿ ಸಣ್ಣ ಲೇಸರ್ ಎಂದು ಕರೆಸಿಕೊಳ್ಳಬಹುದಾದ ಆವಿಷ್ಕಾರ ಪ್ರಗತಿಯ ಹಂತದಲ್ಲಿದೆ. ಹಾಗೆಯೇ, ಸ್ಪಿನ್‌ಟ್ರಾನಿಕ್ಸ್ (spintronics) ಕುರಿತಾದ ಸಂಶೋಧನೆಗಳನ್ನೂ ಕೈಗೊಂಡಿದ್ದೇವೆ. ಈಗ ಲಭ್ಯವಿರುವ ಡಿಜಿಟಲ್ ಎಲೆಕ್ಟ್ರಾನಿಕ್ಸ್ ೦ ಮತ್ತು ೧ಅನ್ನು, ಅಂದರೆ ಎಲೆಕ್ಟ್ರಾನ್ ಸ್ಪಿನ್ ಅಪ್ ಅಥವಾ ಡೌನ್ ಆಧಾರದ ಮೇಲೆ ನಿಂತಿದೆ. ಆದರೆ, ಸ್ಪಿನ್ಟ್ರಾನಿಕ್ಸ್‌ದಲ್ಲಿ, ೦ ಮತ್ತು ೧ರ ಮಧ್ಯದಲ್ಲಿರುವ ವಿವಿಧ ಎಲೆಕ್ಟ್ರಾನ್ ಗಿರಕಿಗಳ ಸ್ಥಿತಿಯನ್ನು ಪತ್ತೆಹಚ್ಚಿ, ಅವುಗಳಿಂದ ಅಪಾರ ಪ್ರಮಾಣದ ಮಾಹಿತಿ ಹೊರತೆಗೆಯಬಹುದಾಗಿದೆ. ಇಲ್ಲಿ ಬಳಸುವ ಸಾಮಗ್ರಿಗಳು ಅರೆವಾಹಕಗಳಲ್ಲದೆ, ಕಾಂತಿಯ ಗುಣಗಳನ್ನು ಹೊಂದಿರುವುದು ಅತಿ ಅವಶ್ಯವಾಗಿದೆ. ಈ ನಿಟ್ಟಿನ ಸಂಶೋಧನೆಗಳು ನಿಜಕ್ಕೂ ಆಸಕ್ತಿದಾಯಕ ಮತ್ತು ಸಂಶೋಧಕರಿಗೆ ಪ್ರಫುಲ್ಲ ಅವಕಾಶಗಳನ್ನು ಒದಗಿಸಿವೆ.

**ಹೊಸತು :** ಸುದೀರ್ಘವಾದ ತಮ್ಮ ವೃತ್ತಿ ಬದುಕಿನಲ್ಲಿ ತಮಗೆ ಅತ್ಯಂತ ಮಹತ್ವಪೂರ್ಣವೆನ್ನಿಸುವ ಅಥವಾ ಅತಿಯಾಗಿ ಖುಷಿ ನೀಡಿದ ಸಂಶೋಧನೆ ಯಾವುದು?

**ಶಿವಪ್ರಸಾದ್ :** ಇಲ್ಲಿಯವರೆಗೂ ಕೈಗೊಂಡಿರುವ ಎಲ್ಲಾ ಸಂಶೋಧನೆಗಳು ನನಗೆ ಅತೀವ ಖುಷಿ ತಂದಿವೆ. ಅದರಲ್ಲಿ, ಎರಡು ಮಾತಿಲ್ಲ. ಯಾಕಂದ್ರೆ, ನಾನು ಎಲ್ಲವನ್ನೂ ಇಷ್ಟಪಟ್ಟೆ ಮಾಡಿದ್ದೇನೆ, ಖುಷಿಪಟ್ಟು ಆಸ್ವಾದಿಸಿದ್ದೇನೆ. ಆದ್ರೆ, ಹಾಗೆ ಹೇಳಬೇಕೆಂದರೆ, ಅರೆವಾಹಕಗಳ ಗುಣಗಳನ್ನು ಮತ್ತು ನ್ಯಾನೋ ಗುಣಗಳನ್ನು ಸಮ್ಮಿಲನಗೊಳಿಸುವ ಸಂಶೋಧನೆ, ನನಗೆ ಅತ್ಯಂತ ಸಮಾಧಾನ ತಂದಿದೆ. ಹೊಸ–ಹೊಸ ಆವಿಷ್ಕಾರಗಳನ್ನು ಕೈಗೊಳ್ಳಲು ಅವಕಾಶ ಕಲ್ಪಿಸಿದೆ.

**ಹೊಸತು :** ವೈಜ್ಞಾನಿಕ ಸಂಶೋಧನೆಗಳ ಪ್ರಕಟಣೆ ಮತ್ತು ಪೇಟೆಂಟ್ ಈ ಎರಡು ಮಾರ್ಗಗಳಲ್ಲಿ ಯಾವುದು ಸರಿ?

**ಶಿವಪ್ರಸಾದ್ :** ಮೂಲ ವಿಜ್ಞಾನದ ಸಂಶೋಧನೆಗಳನ್ನು ಪೇಟೆಂಟ್ ಮಾಡಕೂಡದು, ಮಾಡಲಿಕ್ಕೆ ಬರೋದೂ ಇಲ್ಲ ! ಆದರೆ, ತಂತ್ರಜ್ಞಾನ ಅಥವಾ ಇಂಜಿನಿಯರಿಂಗ್ ಸಂಶೋಧನೆಗಳನ್ನು ಪೇಟೆಂಟ್ ಮಾಡಬಹುದು. ವೈಜ್ಞಾನಿಕ ಸಂಶೋಧನೆಗಳನ್ನು ಪೇಟೆಂಟ್ ಮಾಡ್ತಾ ಹೋದರೆ, ವಿಜ್ಞಾನ ಬೆಳೆಯುವುದಾದರು ಹೇಗೆ? ವೈಜ್ಞಾನಿಕ ಸಂಶೋಧನಾ ಪ್ರಬಂಧ ಪ್ರಕಟಣೆಗಳು,

ಧಾರವಾಡದ ಸಾಹಿತ್ಯ ದಂಪತಿಗಳಾದ ದಿವಂಗತ ಪ್ರೊ॥ ವೃಷಭೇಂದ್ರ ಸ್ವಾಮಿ ಮತ್ತು ದಿವಂಗತ ಪ್ರೊ॥ ಲಲಿತಾಂಬ ಸ್ವಾಮಿಯವರ ಮಗನಾಗಿ ೧೯೫೭ರಲ್ಲಿ ಬೆಂಗಳೂರಿನಲ್ಲಿ ಜನಿಸಿದ ಶ್ರೀ ಎಸ್. ಎಂ. ಶಿವಪ್ರಸಾದರು ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯ, ದೆಹಲಿಯ ಐಐಟಿ, ಲಂಡನ್‌ನ ಸಸೆಕ್ಸ್ ವಿಶ್ವವಿದ್ಯಾಲಯಗಳಲ್ಲಿ ತಮ್ಮ ಅಧ್ಯಯನವನ್ನು ನಡೆಸಿ, ದೆಹಲಿಯ ನ್ಯಾಷನಲ್ ಫಿಸಿಕಲ್ ಲ್ಯಾಬೋರೇಟರಿಯಲ್ಲಿ ವಿಜ್ಞಾನಿಯಾಗಿ ಕಾರ್ಯನಿರ್ವಹಿಸಿ, ನಂತರ ಈಗ ಬೆಂಗಳೂರಿನ ಜವಾಹರಲಾಲ್ ನೆಹರೂ ಉನ್ನತ ವೈಜ್ಞಾನಿಕ ಸಂಶೋಧನಾ ಕೇಂದ್ರದಲ್ಲಿ ಪ್ರೊಫೆಸರ್ ಆಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಧಾರವಾಡದಲ್ಲಿರುವ ಕರ್ನಾಟಕ ರಾಜ್ಯ ಉನ್ನತ ಶಿಕ್ಷಣದ ಅಕಾಡೆಮಿಯ ನಿರ್ದೇಶಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ.



ಶ್ರೀಯುತರು ೨೬೦ಕ್ಕೂ ಹೆಚ್ಚಿನ ಸಂಶೋಧನಾ ಪ್ರಬಂಧಗಳನ್ನು ಅಂತರರಾಷ್ಟ್ರೀಯ ಪತ್ರಿಕೆಗಳಲ್ಲಿ ಪ್ರಕಟಿಸಿರುವುದಲ್ಲದೆ, ೨೧೦ ಸಮ್ಮೇಳನಗಳಲ್ಲಿ ವಿದ್ವತ್‌ಪೂರ್ಣ ಪ್ರಬಂಧಗಳನ್ನು ಪ್ರಕಟಿಸಿದ್ದಾರೆ. ೩೪೫ ಉಪನ್ಯಾಸಗಳಿಗೆ ಆಹ್ವಾನಿತರಾಗಿರುವ ಪ್ರತಿಭಾನ್ವಿತರು ಮತ್ತು ಮೂರು ಗ್ರಂಥಗಳನ್ನು ರಚಿಸಿದ್ದಾರೆ. ವಿಶ್ವಸಂಸ್ಥೆಯ ಫೆಲೋ ಆಗಿ ಸನ್ಮಾನಿತರಾಗಿರುವ ಡಾ॥ ಶಿವಪ್ರಸಾದ್ ಅಮೆರಿಕಾ, ಜಪಾನ್ ಮತ್ತು ಜರ್ಮನಿ ದೇಶಗಳ ವಿವಿಧ ವಿಶ್ವವಿದ್ಯಾಲಯಗಳಿಗೆ ಸಂದರ್ಶಕ ಪ್ರೊಫೆಸರ್ ಆಗಿ ಕಾರ್ಯನಿರ್ವಹಿಸಿದ್ದಾರೆ.

ಇವರ ಪ್ರತಿಭೆ ಮತ್ತು ವಿದ್ವತ್ತಿಗೆ ಸಂದ ಬಹುಮಾನಗಳು ಹಲವಾರು: ರಾಷ್ಟ್ರದ ಪ್ರಧಾನಿಯಿಂದ ೧೯೯೨ರಲ್ಲಿ ಯುವ ವಿಜ್ಞಾನಿ ಪ್ರಶಸ್ತಿಯನ್ನು ಸ್ವೀಕರಿಸಿರುವ ಇವರು ಸಿ.ಎನ್.ಆರ್. ರಾವ್ ಫೌಂಡೇಷನ್ ಪ್ರಶಸ್ತಿ, ಐಐಟಿ ಮುಂಬೈಯಿಂದ ಪ್ರತಿಷ್ಠಿತ ಶಿಕ್ಷಕ ಪ್ರಶಸ್ತಿ, ಇನ್ನು ಮುಂತಾದ ಹತ್ತು ಹಲವಾರು ಪ್ರಶಸ್ತಿಗಳನ್ನು ಪಡೆದಿದ್ದಾರೆ. ಬಳ್ಳಾರಿ ವಿಶ್ವವಿದ್ಯಾಲಯವು ಗೌರವ ಡಾಕ್ಟರೇಟ್ ಪದವಿಯನ್ನು ಅವರಿಗೆ ನೀಡಿದೆ. ಅವರಿಗೆ ಸಿಕ್ಕ ಮನ್ನಣೆಗಳ ಒಂದು ದೊಡ್ಡ ಪಟ್ಟಿಯೇ ಇದೆ.

ವಿಜ್ಞಾನದ ಸುಂದರ ಕಾವ್ಯವಿದ್ದಂತೆ. ಈ ಪ್ರಕಟಣೆಗಳ ದಿಸೆಯಿಂದ ಜ್ಞಾನ ವೃದ್ಧಿಸಿದೆ. ಜಗತ್ತನ್ನು ನಾವು ನೋಡುವ ಪರಿ ಬದಲಾಗಿದೆ. ಆದ್ದರಿಂದ, ವಿಜ್ಞಾನ ಸಂಶೋಧನೆಗಳ ಪ್ರಕಟಣೆಯೇ ಯುಕ್ತ ಮಾರ್ಗವಾಗಿದೆ.

**ಹೊಸತು :** ಸರ್ ಸಿ. ವಿ. ರಾಮನ್, ಎಸ್. ಚಂದ್ರಶೇಖರ್, ಹರ್ ಗೋವಿಂದ್ ಖುರಾನಾ, ಇತ್ತೀಚೆಗೆ ವೆಂಕಟ ರಾಮಕೃಷ್ಣನ್ ಹೊರತುಪಡಿಸಿದರೆ ನಮ್ಮ ದೇಶದ ವಿಜ್ಞಾನಿಗಳಿಗೆ ನೊಬೆಲ್ ಪ್ರಶಸ್ತಿ ಸಂದಿರುವುದು ತೀರಾ ಕಡಿಮೆ. ಯಾಕೆ?

**ಶಿವಪ್ರಸಾದ್ :** ನೊಬೆಲ್ ಪ್ರಶಸ್ತಿ ಅಥವಾ ಇನ್ನಾವುದೇ ಪ್ರಶಸ್ತಿ ಇರಲಿ, ಇವು ವೈಜ್ಞಾನಿಕ ಸಾಧನೆಗಳಿಗೆ ಮಾನದಂಡವಾಗಲು ಸಾಧ್ಯವಿಲ್ಲ. ಯಾಕೆಂದರೆ, ಸತ್ಯೇಂದ್ರನಾಥ್ ಬೋಸ್, ಮೇಘನಾದ ಸಹಾ, ಜಗದೀಶ್‌ಚಂದ್ರ ಬೋಸ್, ಜಿ. ಎನ್. ರಾಮಚಂದ್ರನ್ ಅಷ್ಟೇ ಯಾಕೆ ನಮ್ಮ ಪ್ರೊ॥ ಸಿ. ಎನ್. ಆರ್. ರಾವ್ ಇವರಿಗೆಲ್ಲಾ ನೊಬೆಲ್ ಪ್ರಶಸ್ತಿ ಸಂದಿಲ್ಲ. ಆದರೆ, ಇವರುಗಳ ಸಾಧನೆ ಮತ್ತು ಕೊಡುಗೆಗಳು ಅನುಪಮವಾಗಿವೆ, ವಿಶ್ವವಂದ್ಯವಾಗಿವೆ. ಪ್ರಶಸ್ತಿಗಳ ಬಗ್ಗೆ ನನ್ನ ನಿಲುವು ಹೇಳಬೇಕೆಂದರೆ, ಹತ್ತು ಜನ ಸಾಧಕರಲ್ಲಿ, ಒಬ್ಬರಿಗೆ ಪ್ರಶಸ್ತಿ ನೀಡಿದಾಗ, ಸಹಜವಾಗಿ ಆ ಒಬ್ಬರಿಗೆ ಖುಷಿಯಾಗುತ್ತೆ. ಆದರೆ, ಮಿಕ್ಕ ಒಂಬತ್ತು ಮಂದಿಗೆ ಹೇಳಲಾರದ ಸಂಕಟವುಂಟುಮಾಡುವುದೇ ಹೆಚ್ಚು. ಅದಕ್ಕಾಗಿ, ಈ ಪ್ರಶಸ್ತಿಗಳನ್ನು ಮತ್ತು ವ್ಯಕ್ತಿಯ ಸಾಧನೆಗಳನ್ನು ಬೇರೆ-ಬೇರೆಯಾಗಿಯೇ ನೋಡಬೇಕು.

**ಹೊಸತು :** ವಿಜ್ಞಾನ-ತಂತ್ರಜ್ಞಾನ ಕ್ಷೇತ್ರಕ್ಕೆ ತಕ್ಕ ಮಟ್ಟಿಗೆ ಅನುದಾನಗಳು ದೊರೆಯುತ್ತಿವೆಯೇ?

**ಶಿವಪ್ರಸಾದ್ :** ೧೯೬೦ರಲ್ಲಿ ನಮಗೂ ಚೀನಾಕ್ಕೂ ಯಾವುದೇ ವ್ಯತ್ಯಾಸವಿರಲಿಲ್ಲ. ಆದರೆ, ಇಂದು ಆ ದೇಶ ಆಶ್ಚರ್ಯವೆಂಬಂತೆ ವಿಜ್ಞಾನ-ತಂತ್ರಜ್ಞಾನ ಕ್ಷೇತ್ರದಲ್ಲಿ ಸಾಧನೆ ಮಾಡಿದೆ. ನಮ್ಮ ದೇಶದಲ್ಲಿ ವಿಜ್ಞಾನ ಕ್ಷೇತ್ರಕ್ಕೆ ಜಿ.ಡಿ.ಪಿ.ಯ ಶೇ. ೦.೮ರಷ್ಟು ಮಾತ್ರ ವ್ಯಯಿಸುತ್ತಿದ್ದೇವೆ. ಆದರೆ, ಆ ದೇಶದಲ್ಲಿ ೩.೫%ರಷ್ಟು ವ್ಯಯಿಸುತ್ತಿದ್ದಾರೆ. ಅವರ ಜಿಡಿಪಿ ನಮ್ಮ ದೇಶಕ್ಕಿಂತ ೧೫ ಪಟ್ಟು ಜಾಸ್ತಿಯಿದೆ. ಇದರಿಂದ ನೀವು ಅಂದಾಜಿಸಬಹುದು, ಅಲ್ಲಿ ವಿಜ್ಞಾನ-ತಂತ್ರಜ್ಞಾನಕ್ಕೆ ಎಷ್ಟು ವ್ಯಯಿಸಲಾಗುತ್ತಿದೆ ಹಾಗೂ ಅಲ್ಲಿ ಈ ಕ್ಷೇತ್ರಗಳಿಗೆ ಎಷ್ಟು ಮನ್ನಣೆ ನೀಡುತ್ತಿದ್ದಾರೆ ಎಂದು. ಇದೇ ರೀತಿಯಲ್ಲಿ, ನಮ್ಮಲ್ಲಿ ಕೂಡ ವಿಜ್ಞಾನ-ತಂತ್ರಜ್ಞಾನಕ್ಕೆ ಹೆಚ್ಚಿನ ಅನುದಾನ ನೀಡಬೇಕು. ಇಲ್ಲಾ ಅಂದರೆ, ನಮ್ಮ ದೇಶ ಮುಂದುವರೆಯಲು ಸಾಧ್ಯವೇ ಇಲ್ಲ! ಇಂದು, ಜಗತ್ತನ್ನು ತಂತ್ರಜ್ಞಾನ ಆಳುತ್ತಿದೆ, ಈ ತಂತ್ರಜ್ಞಾನ ದೊರೆಯುವುದು ವಿಜ್ಞಾನದಲ್ಲಾಗುವ ಸಂಶೋಧನೆಗಳಿಂದ. ಹಾಗಾಗಿಯೇ, ವಿಜ್ಞಾನ-ತಂತ್ರಜ್ಞಾನಕ್ಕೆ ಹೆಚ್ಚಿನ ಅನುದಾನ ದೊರೆಯದಿದ್ದರೆ, ದೇಶದ ಅಭಿವೃದ್ಧಿಯ ಮೇಲೆ ಪ್ರತಿಕೂಲ ಪರಿಣಾಮ ಬೀರುವುದು.

**ಹೊಸತು :** ವಿಜ್ಞಾನ-ತಂತ್ರಜ್ಞಾನ ಕ್ಷೇತ್ರದಲ್ಲಿ ಜಾಗತಿಕವಾಗಿ ನಮ್ಮ ದೇಶ ಯಾವ ಸ್ಥಾನದಲ್ಲಿ ನಿಂತಿದೆ ?

**ಶಿವಪ್ರಸಾದ್ :** ಇದು ಅತ್ಯಂತ ಗಂಭೀರವಾದ ಪ್ರಶ್ನೆ. ಹಾಗೆ ನೋಡಿದರೆ, ನಮ್ಮ ದೇಶದಲ್ಲಿ ನಡೀತಾ ಇರೋದು ಒಂದರ್ಥದ ಅನುಕರಣೆಯ ಸಂಶೋಧನೆ ಯಾದಂತಿದೆ. ಎಲ್ಲಾ ಮಹತ್ವಪೂರ್ಣ ಸಂಶೋಧನೆಗಳು ಪೇಟೆಂಟ್ ಪಡೆದು, ಪಾಶ್ಚಾತ್ಯ ದೇಶದಲ್ಲಿ ಭದ್ರವಾಗಿವೆ. ನಿಜ ಹೇಳಬೇಕೆಂದರೆ, ಇಲ್ಲಿಯವರೆಗೂ ನಮ್ಮ ದೇಶದಲ್ಲಿ ಒಂದೇ ಒಂದು ಎಲ್.ಇ.ಡಿ. ಬಲ್ಬ್ ತಯಾರಿ ಮಾಡೋಕೆ ಆಗಿಲ್ಲ. ಅರೆವಾಹಕ ಸಾಮಗ್ರಿಗಳ ಕೈಗಾರಿಕೆಯ ಅಭಿವೃದ್ಧಿಯ ದಿಸೆಯಲ್ಲಿ ರಾಜಕೀಯ ಇಚ್ಛಾಶಕ್ತಿಯ ಕೊರತೆಯನ್ನೂ ನೋಡಬಹುದು. ದೇಶದಲ್ಲಿ ಸುಮಾರು ನಾಲ್ಕುವರೆ ಲಕ್ಷ ಸಾಫ್ಟ್‌ವೇರ್ ಇಂಜಿನಿಯರ್‌ಗಳಿದ್ದಾರೆ. ಆದರೆ, ಇದುವರೆಗೂ ಒಂದು ಆಪರೇಟಿಂಗ್ ಸಿಸ್ಟಮ್ ಇಲ್ಲ, ವಿಂಡೋಸ್ ಇಲ್ಲ, ಟ್ವಿಟರ್ ಇಲ್ಲ, ಫೇಸ್‌ಬುಕ್ ಇಲ್ಲ. ಇದು ಯಾಕೆ ಹೀಗೆ ? ನಮ್ಮವರೇ ವಿದೇಶಗಳಿಗೆ ತೆರಳಿ, ಅಲ್ಲಿ ಕೆಲಸ ಮಾಡುವುದು ಬೇರೆ, ನಮ್ಮ ದೇಶದಲ್ಲಿಯೇ ಆವಿಷ್ಕರಿಸಿ ಬಳಕೆಗೆ ತರುವುದರಲ್ಲಿ ಬಹಳ ವ್ಯತ್ಯಾಸವಿದೆ. ಹಾಗಾಗಿ, ನಮ್ಮಲ್ಲಿ ಶುದ್ಧವಾದ ಅಪ್ಪಟ ದೇಶೀಯವಾಗಿ ಅಭಿವೃದ್ಧಿಪಡಿಸಿದ ಸಂಶೋಧನೆಗಳ ಕೊರತೆ ಬಹಳಷ್ಟಿದೆ. ಇದಕ್ಕೆಲ್ಲಾ ಪ್ರಮುಖ ಕಾರಣವೆಂದರೆ, ನಮ್ಮ ಶಿಕ್ಷಣ ವ್ಯವಸ್ಥೆಯಲ್ಲಿರುವ ದೋಷಗಳು ಮತ್ತು ರಾಜಕೀಯ ಇಚ್ಛಾಶಕ್ತಿಯ ಕೊರತೆ.

**ಹೊಸತು :** ಹಾಗಾದರೆ, ಪ್ರಸ್ತುತ ನಮ್ಮ ಶಿಕ್ಷಣ ಪದ್ಧತಿಯಲ್ಲಿರುವ ಪ್ರಮುಖ ಕುಂದು-ಕೊರತೆಗಳೇನು ?

**ಶಿವಪ್ರಸಾದ್ :** ಈಗಿನ ನಮ್ಮ ಶಿಕ್ಷಣ ಪದ್ಧತಿ, ಮಕ್ಕಳ ಮನಸ್ಸನ್ನು ಅರಳಿಸುತ್ತಿಲ್ಲ. ಬದಲಾಗಿ ಕಮರಿಸುತ್ತಿದೆ. ಎಲ್ಲರೂ ನಾವು ವಿದ್ಯಾರ್ಥಿಗಳಿಗೆ ಕಷ್ಟಪಟ್ಟು ಓದು ಅಂತ ಹೇಳುತ್ತೇವೆ ಹೊರತು, ಇಷ್ಟಪಟ್ಟು ಓದು ಅಂತ ಯಾರೂ ಉಪದೇಶ ಮಾಡೋಲ್ಲ. ಇಂದಿನ ಪದ್ಧತಿಯಲ್ಲಿ ವಿದ್ಯಾರ್ಥಿಗಳ ಕ್ರಿಯಾಶೀಲತೆಗೆ ಅವಕಾಶಾನೇ ಕಲ್ಪಿಸಿಲ್ಲ. ಉರುಹೊಡೆದು ಉತ್ತರಗಳನ್ನು ಕಲಿತು, ಪರೀಕ್ಷೆಗಳಲ್ಲಿ ಅಂಕಗಳಿಸುವ ಯಂತ್ರಗಳನ್ನು ತಯಾರಿಸುತ್ತಿದ್ದೇವೆ ಹೊರತು, ನಿಜ ಶಿಕ್ಷಣ ಪಡೆದ ಜ್ಞಾನ ಸಮುದಾಯಗಳನ್ನಲ್ಲ. ಈ ನಿಟ್ಟಿನಲ್ಲಿ ನಮ್ಮ ಶಿಕ್ಷಣ ವ್ಯವಸ್ಥೆಯಲ್ಲಿ ಸಾಕಷ್ಟು ಬದಲಾವಣೆಗಳಾಗಬೇಕು. ಶಾಲಾ-ಕಾಲೇಜು ನಡೆಸುವ ವಿಜ್ಞಾನ ವಸ್ತುಪ್ರದರ್ಶನಗಳಲ್ಲಿ, ಒಂದೂ ವಿಜ್ಞಾನದ ಮಾದರಿಗಳನ್ನು ನೋಡೋಕೆ ಆಗಲ್ಲ. ಅಲ್ಲಿರುವುದೆಲ್ಲ ತಾಂತ್ರಿಕ ಮಾದರಿಗಳೇ ಹೊರತು, ಶುದ್ಧ ವಿಜ್ಞಾನಕ್ಕೆ ಸಂಬಂಧಿಸಿದ್ದಲ್ಲ. ನಮ್ಮ ವಿದ್ಯಾರ್ಥಿಗಳಿಗೆ ಮತ್ತು ಶಿಕ್ಷಕ ವೃಂದಕ್ಕೆ ವಿಜ್ಞಾನ, ತಂತ್ರಜ್ಞಾನ ಮತ್ತು ಇಂಜಿನಿಯರಿಂಗ್ ಮಧ್ಯೆಯಿರುವ ಸೂಕ್ಷ್ಮ ವ್ಯತ್ಯಾಸಗಳನ್ನು ತಿಳಿಸಬೇಕಾಗಿದೆ. ಹಾಗೆಯೇ ಮಕ್ಕಳಿಗೆ ಯೋಚನೆ ಮಾಡಲು ಪ್ರೇರೇಪಿಸಬೇಕಿದೆ.

**ಹೊಸತು :** ವೈಜ್ಞಾನಿಕ ಮನೋಭಾವ ವಿಜ್ಞಾನಿ ಗಳಲ್ಲಿ ಅತ್ಯವಶ್ಯವಾಗಿರಲೇಬೇಕೆ?

**ಶಿವಪ್ರಸಾದ್ :** ವಿಜ್ಞಾನಿಗಳಿಗೆ ವೈಜ್ಞಾನಿಕ ಮನೋಭಾವ ಇರಲೇಬೇಕು. ವಿಜ್ಞಾನಿಗಳಲ್ಲಿ ಈ ಮನೋಭಾವ ಇಲ್ಲದೇ ಹೋದರೆ, ಇನ್ನಾರಿಗೆ ಇರಬೇಕು? ನಿಜವಾದ ವಿಜ್ಞಾನಿಯಾದವರು, ದೇವರನ್ನು ಯಾವುದೇ ರೂಪದಲ್ಲಾಗಲಿ ಊಹಿಸಲು ಸಾಧ್ಯವೇ ಇಲ್ಲ. ವಿಜ್ಞಾನಿಗಳಿಗೆ ತಾರ್ಕಿಕ ಮನೋಭಾವ ಬಹಳ ಮುಖ್ಯ. ವೈಜ್ಞಾನಿಕತೆ ಮತ್ತು ವೈಚಾರಿಕತೆಗಳು ವಿಜ್ಞಾನಿಗಳ ಜೀವನದಲ್ಲಿ ಹಾಸು ಹೊಕ್ಕಾಗಿರಬೇಕು.

**ಹೊಸತು :** ದಿನಬೆಳಗಾದರೆ ಮಾಧ್ಯಮಗಳಲ್ಲಿ ವಾಸ್ತು-ಜ್ಯೋತಿಷ್ಯವೆಂದು, ಜನಸಾಮಾನ್ಯರಲ್ಲಿ ಇನ್ನಿಲ್ಲದ ಮೌಢ್ಯಗಳನ್ನು ನೋಡುತ್ತಿದ್ದೇವೆ. ಈ ಅಪಾಯಕಾರಿ ಬೆಳವಣಿಗೆಗೆ ವಿಜ್ಞಾನಿಗಳ ಪ್ರತಿಕ್ರಿಯೆ ?

**ಶಿವಪ್ರಸಾದ್ :** ಎಲ್ಲವನ್ನೂ ವಿಜ್ಞಾನವೇ ನಿರ್ಧರಿಸಲು ಅಥವಾ ವಿಜ್ಞಾನಿಗಳೇ ನಿಭಾಯಿಸಲು ಸಾಧ್ಯವಿಲ್ಲ. ಜನರಲ್ಲಿ ವೈಜ್ಞಾನಿಕ ಅರಿವು ಜಾಗ್ರತೆ ಮೂಡಿಸುವುದೊಂದೆ, ಉತ್ತಮ ಮಾರ್ಗ. ಅದಕ್ಕಾಗಿ ನಮ್ಮ ಶಿಕ್ಷಣ ಪದ್ಧತಿಯಲ್ಲಿ, ತಳ ಮಟ್ಟದಿಂದಲೇ ಮಕ್ಕಳಲ್ಲಿ ವೈಜ್ಞಾನಿಕತೆಯನ್ನು ಬೆಳೆಸುವ ಮಾರ್ಗೋಪಾಯವನ್ನು ಕಂಡುಕೊಳ್ಳಬೇಕು. ಜನರು ಎಚ್ಚೆತ್ತುಕೊಳ್ಳದಿದ್ದರೆ, ಗ್ರಹಗಳ ಹೆಸರಲ್ಲಿ, ಗೋಡೆ-ಕಿಟಕಿಗಳ ರೂಪದಲ್ಲಿ, ಈ ರೀತಿಯ ನಿರಂತರ ಶೋಷಣೆ ತಪ್ಪಿದ್ದಲ್ಲ !

**ಹೊಸತು :** ಇತ್ತೀಚೆಗೆ ನೀವು ಕರ್ನಾಟಕ ರಾಜ್ಯ ಉನ್ನತ ಶಿಕ್ಷಣ ಅಕಾಡೆಮಿಯ ನಿರ್ದೇಶಕರಾಗಿರುವಿರಿ. ಅಕಾಡೆಮಿಯ ಕಾರ್ಯಕ್ರಮಗಳೇನು ?

**ಶಿವಪ್ರಸಾದ್ :** ಹೌದು, ಉನ್ನತ ಶಿಕ್ಷಣ ಅಕಾಡೆಮಿಯ ನಿರ್ದೇಶಕನಾಗಿ ಪೂರ್ಣ ಪ್ರಮಾಣದಲ್ಲಿ ತೊಡಗಿಸಿಕೊಂಡಿದ್ದೇನೆ. ಅಕಾಡೆಮಿ ಸದ್ಯ ಧಾರವಾಡದ ಕರ್ನಾಟಕ ವಿ.ವಿ.ಯಲ್ಲಿ ಬಾಡಿಗೆ ಕಟ್ಟಡದಲ್ಲಿ ಕಾರ್ಯ ನಿರ್ವಹಿಸುತ್ತಿದೆ. ಅಕಾಡೆಮಿಗಾಗಿಯೇ, ವಿ.ವಿ.ಯ ಪಕ್ಕದಲ್ಲಿಯೇ ಸ್ಥಳ ಮಂಜೂರಾಗಿ, ಈಗ ಕಟ್ಟಡಕಾರ್ಯ ಭರದಿಂದ ಸಾಗಿದೆ. ಇಲ್ಲಿ ಹೊಸದಾಗಿ ನೇಮಕಗೊಳ್ಳುವ, ಪದವಿ ತರಗತಿಗಳನ್ನು ಬೋಧಿಸುವ ಅಧ್ಯಾಪಕರಿಗೆ ೨೧ ದಿನಗಳ ಸಂಪೂರ್ಣ ರೀತಿಯ ತರಬೇತಿ ನೀಡುತ್ತಿದ್ದೇವೆ. ಶಿಕ್ಷಕರಿಗೆ ಬೋಧನೆಯಲ್ಲಿನ ನ್ಯೂನತೆಗಳನ್ನು ಸರಿಪಡಿಸಿಕೊಳ್ಳುವ, ವಿದ್ಯಾರ್ಥಿಗಳನ್ನು ಕಲಿಕೆಯಲ್ಲಿ ಹುರಿದುಂಬಿಸುವ ಮತ್ತು ಆಧುನಿಕ ತಂತ್ರಜ್ಞಾನ, ಸಮಕಾಲಿನ ಅಭಿವೃದ್ಧಿಗಳನ್ನು ಅಪ್ಡೇಟ್ ಮಾಡಿಕೊಳ್ಳುವ ವಿವಿಧ ಬಗೆಗಳನ್ನು ತಿಳಿಸಿ, ವಿಶೇಷ ತರಬೇತಿಯನ್ನು ನೀಡುತ್ತಿದ್ದೇವೆ. ಇಲ್ಲಿ ತರಬೇತಿ ಪಡೆದವರು, ಶಿಸ್ತು, ಸಂಯಮ, ಸಮಯ ಪರಿಪಾಲನೆ, ಉನ್ನತ ಮೌಲ್ಯಗಳನ್ನು ರೂಢಿಸಿಕೊಂಡು ತಮ್ಮ-ತಮ್ಮ ಕಾಲೇಜುಗಳಿಗೆ ಹಿಂದಿರುಗಿ, ಇವುಗಳನ್ನು ಅನುಷ್ಠಾನಗೊಳಿಸಿರುವುದನ್ನು ನೋಡಿದ್ದೇನೆ. ಆರಂಭಿಕ ಹಂತದಲ್ಲಿರುವ ಅಕಾಡೆಮಿಗೆ ರಾಜ್ಯ ಸರಕಾರವು ಅಷ್ಟೇ ಪ್ರಮಾಣದಲ್ಲಿ ಸಹಕಾರ ಮತ್ತು ಸೌಲಭ್ಯಗಳನ್ನು ಕೊಡುತ್ತಿರುವುದು ಸುತ್ತ್ಯರ್ಹವಾಗಿದೆ.

---

ಲೇಖನ ಸಿದ್ಧಪಡಿಸಿದವರು : **ಎಸ್. ಮಂಜುನಾಥ**
ನಂ. ೬೩, ವಾರ್ಡ್-೧೨, ರೆಡ್ಡಿ ಬೀದಿ, ಬಿ. ಎಂ. ಡಿ. ಶಾಲೆ ಹಿಂಭಾಗ
ಬಳ್ಳಾರಿ - ೫೮೩ ೧೦೧, manjusballari@gmail.com

# ಜಲ ಸಂಕಷ್ಟದ ಸಂದರ್ಭದಲ್ಲಿ ನೀರು ಬಳಕೆದಾರರ ಸಹಕಾರ ಸಂಘ ದಾರಿ ದೀಪ



**ಡಾ॥ ರಾಜೇಂದ್ರ ಪೋದ್ದಾರ**

ಬೆಳೆಯುತ್ತಿರುವ ಜನಸಂಖ್ಯೆ ಹಾಗೂ ಜೀವನಾವಶ್ಯಕ ವಸ್ತುಗಳ, ವಿಶೇಷವಾಗಿ ಆಹಾರ ಧಾನ್ಯಗಳ ಬೇಡಿಕೆಗಾಗಿ ಇತ್ತೀಚಿನ ದಿನಗಳಲ್ಲಿ ದೇಶದಲ್ಲಿ ನೀರಾವರಿ ಕೃಷಿಗೆ ಹೆಚ್ಚಿನ ಒತ್ತು ಕೊಡಲಾಗಿದೆ. ಭಾರತದಲ್ಲಿ ಸ್ವಾತಂತ್ರ್ಯಾನಂತರ ಈ ಅವಶ್ಯಕತೆಯನ್ನು ಮನಗಂಡು ಸರಕಾರಗಳು ಅನೇಕ ನೀರಾವರಿ ಯೋಜನೆಗಳನ್ನು ಅನುಷ್ಠಾನಗೊಳಿಸಿವೆ. ಯೋಜನೆಗಳ ಅಡಿಯಲ್ಲಿ ಜಲ ಮೂಲಗಳ ಅಭಿವೃದ್ಧಿ, ನೀರಿನ ಸಂಗ್ರಹಣೆ ಹಾಗೂ ವಿತರಣೆ ಸರಕಾರಗಳ ಪಾತ್ರವಾದರೆ ನೀರಿನ ಸಮರ್ಪಕ ನಿರ್ವಹಣೆ ರೈತ ಫಲಾನುಭವಿಗಳ ಜವಾಬ್ದಾರಿಯಾಗಿರುತ್ತದೆ. ಫಲಾನುಭವಿಗಳ ಸಹಭಾಗಿತ್ವವಿಲ್ಲದೇ ಕಾರ್ಯನಿರ್ವಹಿಸುತ್ತಿರುವ ಯೋಜನೆಗಳು ವಿಫಲವಾಗಿರುವ ಅನೇಕ ನಿದರ್ಶನಗಳು ನಮ್ಮೆದುರಿಗಿವೆ. ತತ್ಪರಿಣಾಮ ಅವೈಜ್ಞಾನಿಕ ನೀರಿನ ಬಳಕೆಯಿಂದ ಉಂಟಾದ ಅಸಮರ್ಪಕ ನೀರಿನ ವಿತರಣೆ, ನಿರ್ಮಾಣಗೊಂಡ ನೀರಾವರಿ ಸಾಮರ್ಥ್ಯವನ್ನು ಬಳಸದೇ ಇರುವುದು ಸವಳು–ಜವಳು ಸಮಸ್ಯೆ, ಹೆಚ್ಚಾಗುತ್ತಿರುವ ಕೃಷಿ ಉತ್ಪಾದನಾ ವೆಚ್ಚಗಳಂತಹ ಸಮಸ್ಯೆಗಳಿಂದು ಪೆಡಂಭೂತವಾಗಿ ಕಾಡುತ್ತಿವೆ. ಇವು ಸಾಮಾಜಿಕ – ಆರ್ಥಿಕ ಸಮಸ್ಯೆಗಳನ್ನು ಹುಟ್ಟುಹಾಕಿ ರಾಜಕೀಯ ಸಂಘರ್ಷಗಳಲ್ಲಿ ಪರ್ಯವಸಾನಗೊಳ್ಳುತ್ತಿವೆ. ಹೀಗಾಗಿ ನೀರಾವರಿ ವರವೋ ಅಥವಾ ಶಾಪವೋ ಎಂಬ ಪ್ರಶ್ನೆ ನಮ್ಮನ್ನು ಕಾಡುತ್ತಿದೆ. ಜಾಗತಿಕ ಹವಾಮಾನ ವೈಪರೀತ್ಯದ ವ್ಯತಿರಿಕ್ತ ಪರಿಣಾಮಗಳು ಜಲ ಸಂಕಷ್ಟ ಸಮಸ್ಯೆಗಳನ್ನು ಉಲ್ಬಣಗೊಳಿಸುತ್ತಿವೆ. ಜಾಗತಿಕ ಹಾಗೂ ಸ್ಥಳೀಯ ಸಂಶೋಧನೆ ಹಾಗೂ ಚಿಂತನೆಗಳ ಪ್ರಕಾರ ಫಲಾನುಭವಿಗಳ ಸಹಭಾಗಿತ್ವದ ನೀರಾವರಿ ನಿರ್ವಹಣೆ ಪದ್ಧತಿ (ಪಿಐಎಂ) ಸಮಸ್ಯೆಗಳಿಗೆ ಸೂಕ್ತ ಮಾರ್ಗೋಪಾಯವಾಗಿ ಕಂಡು ಬಂದಿದೆ. ನೀರು ಬಳಕೆದಾರರ ಸಹಕಾರಿ ಸಂಘಗಳ (ಡಬ್ಲ್ಯುಯುಸಿಎಸ್) ಮೂಲಕ ಈ ಪದ್ಧತಿಯನ್ನು ಅನುಷ್ಠಾನಗೊಳಿಸಲಾಗುತ್ತಿದೆ. ಆದಾಗ್ಯೂ, ಈ ಪದ್ಧತಿ ನಿರೀಕ್ಷಿತ ಯಶಸ್ಸನ್ನು ಕಂಡಿಲ್ಲ. ಅದಕ್ಕೆ ಅನೇಕ ಕಾರಣಗಳುಂಟು. ಇವುಗಳನ್ನು ಮೀರಿ, ಪರಿಹಾರಗಳನ್ನು ಕಂಡುಕೊಳ್ಳುವ ಜವಾಬ್ದಾರಿ ಇದೀಗ ನಮ್ಮ ಮೇಲಿದೆ.

**ಸಹಭಾಗಿತ್ವದ ನೀರಾವರಿ ಪದ್ಧತಿ ಎಂದರೇನು?**

"ಜನರಿಗಾಗಿ, ಜನರಿಂದಲೇ ಮೂಡಿದ, ಜನರೊಂದಿಗಿರುವ ಹಾಗೂ ಫಲಾನುಭವಿಗಳು ಮತ್ತು ಸರಕಾರಗಳ ಸಹಭಾಗಿತ್ವದ ಸಮರ್ಪಕ ಹಾಗೂ ವೈಜ್ಞಾನಿಕ ನೀರಿನ ಸದ್ಬಳಕೆಯನ್ನು ಸಹಭಾಗಿತ್ವದ ನೀರಾವರಿ ಪದ್ಧತಿ ಎನ್ನಬಹುದು."

**ಸಹಭಾಗಿತ್ವದ ನೀರಾವರಿ ನಿರ್ವಹಣೆಯ ಉದ್ದೇಶಗಳೇನು?**

ನೀರಿನ ಬಳಕೆಯ ಸಾಮರ್ಥ್ಯವನ್ನು ಹೆಚ್ಚಿಸುವುದು, ನೀರಿನ ಬಳಕೆಯಲ್ಲಿ ಆರ್ಥಿಕತೆಯನ್ನು ಪ್ರಚೋದಿಸುವುದು, ನೀರಿನ ಹಂಚಿಕೆಯಲ್ಲಿ ಸಮಾನತೆಯನ್ನು ಸಾಧಿಸುವುದು, ಭೂಮಿ ಮತ್ತು ನೀರಿನ ಉತ್ಪಾದಕತೆಯನ್ನು ಹೆಚ್ಚಿಸುವುದು ಮತ್ತು ನೆಲ – ಜಲ ಸಂರಕ್ಷಣೆ, ಬೆಳೆ ಉತ್ಪಾದಕತೆ ಹಾಗೂ ಆದಾಯ ಹೆಚ್ಚಳದ ಮೂಲಕ ರೈತರ ಒಟ್ಟಾರೆ ಕ್ಷೇಮಾಭಿವೃದ್ಧಿಯನ್ನು ಸಾಧಿಸುವುದು ಈ ಪದ್ಧತಿಯ ಮೂಲ ಉದ್ದೇಶಗಳಾಗಿವೆ.

**ಸಹಭಾಗಿತ್ವದ ನೀರಾವರಿ ಪದ್ಧತಿ ರೈತರಿಗೆ ಏಕೆ ?**

- ಫಲಾನುಭವಿಗಳಿಂದ ಜಲ ಆಯವ್ಯಯದ ಆಧಾರದ ಮೇಲೆ ನೀರಿನ ವೈಜ್ಞಾನಿಕ ಹಂಚಿಕೆ ನಡೆಯುವುದರಿಂದ ನೀರಾವರಿ ವ್ಯವಸ್ಥೆಯ ನಿರ್ವಹಣೆಯಲ್ಲಿ ರೈತರ ಸಹಭಾಗಿತ್ವದ ಜವಾಬ್ದಾರಿ ಹಾಗೂ ಸಹ ಒಡೆತನದ ಘನತೆ.
- ಅಮೂಲ್ಯವಾದ ನೀರು ವ್ಯರ್ಥ ಪೋಲಾಗುವುದನ್ನು ತಡೆಗಟ್ಟುವುದು.
- ನೀರಿನ ದುರ್ಬಳಕೆಯಿಂದ ಇಡೀ ನೀರಾವರಿ ಹಾಗೂ ಕೃಷಿ ವ್ಯವಸ್ಥೆಗಾಗುವ ಹಾನಿಯನ್ನು ತಡೆಗಟ್ಟುವುದು.
- ನೀರು ಹಂಚಿಕೆಯಲ್ಲಿನ ವೈಷಮ್ಯಗಳನ್ನು ತಡೆಗಟ್ಟುವುದು.

**ರೈತ ಸಹಭಾಗಿತ್ವದ ನೀರಾವರಿ ಹೇಗೆ ?**

ಈ ನಿಟ್ಟಿನಲ್ಲಿ ಕೇಂದ್ರ ಹಾಗೂ ರಾಜ್ಯ ಸರಕಾರಗಳು ತಮ್ಮ ಜಲ ಸಂಪನ್ಮೂಲ ನೀತಿಗಳಲ್ಲಿ ಸೂಕ್ತ ಮಾರ್ಗದರ್ಶನಗಳನ್ನು ಕ್ರೋಢೀಕರಿಸಿ ಪದ್ಧತಿಯ ಅನುಷ್ಠಾನದಲ್ಲಿ ಕಾರ್ಯಪ್ರವೃತ್ತವಾಗಿವೆ. ಕರ್ನಾಟಕ ರಾಜ್ಯ ಜಲ ನೀತಿ (೨೦೦೨)ಯ ಅಡಿಯಲ್ಲಿ ರಾಜ್ಯದ ಜಲ ಸಂಪನ್ಮೂಲ ನಿರ್ವಹಣೆಯಲ್ಲಿ ಸಹಭಾಗಿತ್ವದ ಪದ್ಧತಿಗೆ ಒತ್ತನ್ನು ನೀಡಲಾಗಿದೆ. ಆದರೆ, ಫಲಾನುಭವಿಗಳಿಗೆ ಪದ್ಧತಿಯ ಲಾಭಗಳು ಸಂಪೂರ್ಣ ಮನವರಿಕೆಯಾಗಿಲ್ಲ. ಕೆಲವೆಡೆ ಪ್ರಯತ್ನಗಳು ನಡೆದರೂ ಅರೆಬರೆ ಮಾಹಿತಿಯಿಂದ ತಪ್ಪು ತಿಳುವಳಿಕೆಗಳು ಮೂಡಿ ರಾಜಕೀಯ ಪೈಪೋಟಿ ಹಾಗೂ ಸಂಘರ್ಷಗಳಿಗೆಡೆಮಾಡಿಕೊಟ್ಟಿವೆ.

ರಾಜ್ಯದಲ್ಲಿ ರೈತರ ಸಹಭಾಗಿತ್ವದ ನೀರಾವರಿ ಪದ್ಧತಿಯನ್ನು ಕರ್ನಾಟಕ ನೀರಾವರಿ ಕಾಯ್ದೆ ೨೦೦೨ರ ಅಡಿಯಲ್ಲಿ ಅನುಷ್ಠಾನಗೊಳಿಸಲಾಗುತ್ತಿದೆ. ಈ ಕಾಯ್ದೆಯಡಿ ನೀರು ಬಳಕೆದಾರರ ಸಹಕಾರಿ ಸಂಘಗಳನ್ನು ರಚಿಸಲಾಗಿದೆ. ಈ ಸಂಘಗಳನ್ನು ಕರ್ನಾಟಕ ಸಹಕಾರಿ ಕಾಯ್ದೆ ೧೯೫೯ರ ಅಡಿಯಲ್ಲಿ ನೋಂದಾಯಿಸಬಹುದಾಗಿದೆ ಮತ್ತು ಈ ಸಂಘಗಳಿಗೆ "ನೀರು ಬಳಕೆದಾರರ ಸಹಕಾರಿ ಸಂಘ"ಗಳೆಂದು ಕರೆಯಲಾಗುವುದು.

**ಪ್ರಗತಿ**

೨೦೧೮ರ ಅಂಕಿ ಅಂಶಗಳ ಪ್ರಕಾರ ರಾಜ್ಯದ ಆರು ನೀರಾವರಿ ಅಚ್ಚುಕಟ್ಟು ಪ್ರದೇಶಗಳಲ್ಲಿ ಒಟ್ಟಾರೆ ೪೨೩೭ ನೀರು ಬಳಕೆದಾರರ ಸಹಕಾರಿ ಸಂಘಗಳನ್ನು ರಚಿಸುವ ಗುರಿಯನ್ನು ಹೊಂದಲಾಗಿದ್ದು, ಅವುಗಳ ಪೈಕಿ ३೧೪६ ಸಂಘಗಳು ನೋಂದಾಯಿಸಲಾಗಿದ್ದು, ೨೨೩೮ ಸಂಘಗಳು ನೀರಾವರಿ ನಿಗಮಗಳೊಂದಿಗೆ ಒಡಂಬಡಿಕೆಯನ್ನು ಏರ್ಪಡಿಸಿಕೊಂಡಿವೆ. ಒಡಂಬಡಿಕೆಯನ್ನು ಹೊಂದಿರುವ ಸಂಘಗಳ ಪೈಕಿ ೨೧೯೯ ಸಂಘಗಳನ್ನು ಫಲಾನುಭವಿ ರೈತರಿಗೆ ಹಸ್ತಾಂತರಿಸಲಾಗಿದೆ. ಕೇವಲ ೧೭೭೫ ಸಂಘಗಳು ಮಾತ್ರ ಕಾರ್ಯನಿರತವಾಗಿರುತ್ತವೆ. ನೋಂದಾಯಿಸಲ್ಪಟ್ಟ ಸಂಘಗಳ ಸಂಖ್ಯೆಗೆ ಹೋಲಿಸಿದರೆ ಕಾರ್ಯನಿರತ ಸಂಘಗಳ ಪ್ರಮಾಣ ಕೇವಲ ಶೇಕಡಾ ३೭ ಮಾತ್ರ. ಇದರಲ್ಲೂ ಕೂಡಾ ಸರಕಾರದ ಕಾಯ್ದೆ ಹಾಗೂ ತಮ್ಮ ಬೈಲಾಗಳ ಮಾನದಂಡಗಳ ಪ್ರಕಾರ ಸಕ್ರಿಯವಾಗಿ ಮತ್ತು ಯಶಸ್ವಿಯಾಗಿ ಕಾರ್ಯನಿರ್ವಹಿಸುತ್ತಿರುವ ಸಂಘಗಳು ಅತೀ ಕಡಿಮೆ. ರೈತರ ಸಹಭಾಗಿತ್ವದ ಕಾಯ್ದೆ ಅನುಷ್ಠಾನಗೊಂಡು ಹದಿನೈದು ವರ್ಷಗಳೇ ಕಳೆದರೂ ಸಂಘಗಳ ರಚನೆ ಮತ್ತು ಅವುಗಳ ಸಬಲೀಕರಣ ವಿಷಯದಲ್ಲಿ ಸಾಧಿಸಿದ್ದು ಕಡಿಮೆ.

**ಸ್ಥಿತಿಗತಿ**

ಕರ್ನಾಟಕದಲ್ಲಿ ಸಂಘಗಳು ಹುಟ್ಟಿನಿಂದಲೂ ನೋವನ್ನು ಅನುಭವಿಸುತ್ತಾ ಬಂದಿವೆ ಮತ್ತು ಅವಹೇಳನಕ್ಕೆ ಒಳಗಾಗಿವೆ. ಇದು ವಿಷಾದನೀಯ. ರೈತರ ಸಹಭಾಗಿತ್ವದ ಪದ್ಧತಿ ನೀರಿನ ಸದ್ಬಳಕೆಗೆ ಅತ್ಯುತ್ತಮ ಮಾರ್ಗೋಪಾಯ ಎಂದು ಕಂಡುಬಂದರೂ ಅವು ಸೂಕ್ತಮಾರ್ಗವಲ್ಲ ಎಂಬ ವಿತಂಡವಾದ ಖಂಡನೀಯ.

ಸಂಘಗಳು ನಿರೀಕ್ಷಿತ ಮಟ್ಟದಲ್ಲಿ ಪ್ರಗತಿಯನ್ನು ಸಾಧಿಸದಿರಲು ಅನೇಕ ಕಾರಣಗಳುಂಟು. ೧೯೭೦-೧೯೮೦ರ ದಶಕಗಳಲ್ಲಿ ನೀರಾವರಿ ಯೋಜನೆಗಳ ನಿರ್ಮಾಣಕ್ಕೆ ವಿಶ್ವ ಬ್ಯಾಂಕಿನ ಹಣಕಾಸಿನ ನೆರವು ಅವಶ್ಯಕವಾಗಿತ್ತು. ಹಣಕಾಸಿನ ನೆರವು ಕೆಲವು ಷರತ್ತುಗಳಿಗೆ ಒಳಪಟ್ಟಿತ್ತು. ಅವುಗಳಲ್ಲಿ ನೀರಾವರಿ ಅಚ್ಚುಕಟ್ಟು ಪ್ರದೇಶಗಳಲ್ಲಿ ನೀರಿನ ನಿರ್ವಹಣೆಗಾಗಿ ನೀರು ಬಳಕೆದಾರರ ಸಂಘಗಳನ್ನು ರಚಿಸುವುದು ಪ್ರಮುಖ ಷರತ್ತಾಗಿತ್ತು. ಈ ಷರತ್ತಿಗನು ಗುಣವಾಗಿ ಸಂಘಗಳನ್ನು ರಚಿಸಲಾಗಿತ್ತು. ಹೊಸ ಪದ್ಧತಿಯ ಕುರಿತು ಮಾಹಿತಿ, ಪೂರ್ವಭಾವಿ ತಯಾರಿ ಹಾಗೂ ಸಮಗ್ರ ತಿಳುವಳಿಕೆಯ ಕೊರತೆಯಿಂದಾಗಿ ತರಾತುರಿಯಲ್ಲಿ ಅಚ್ಚುಕಟ್ಟು ಪ್ರದೇಶದ ರೈತರ ಹೆಸರುಗಳನ್ನು ಸೇರಿಸಿ ಔಪಚಾರಿಕವಾಗಿ ಸಂಘಗಳನ್ನು ರಚಿಸಲಾಗಿತ್ತು. ಈ ಕಟುಸತ್ಯವನ್ನು ಒಪ್ಪಲೇಬೇಕು. ಸಂಘಗಳ




## ಬಯಲಿಗೂ ಗೋಡೆಗಳು

ಕಾಯಕ್ಕೆ ಕಲ್ಲಿನ ಗೋಡೆ
ಎಲುಬು ಮಾಂಸ ಮಜ್ಜೆಗೆ
ತೊಗಲಿನ ಗೋಡೆ
ತನು – ಮನಕ್ಕೆ
ಆದ ದೇವ ಇನ್ನೊಂದು ಗೋಡೆ
ಪೂರ್ವಿಕರಿಗೊಂದು
ಅಜ್ಜಿ ತಾತ
ಅಪ್ಪ ಅವ್ವ ಅತ್ತೆ ಮಾವ
ಗಂಡ / ಹೆಂಡತಿ ಮಕ್ಕಳು
ಸಂಬಂಧಗಳಿಗೊಂದೊಂದು
ಗುರು ಪರಂಪರೆ
ದೇಶ – ಕಾಲ
ವ್ಯವಸ್ಥೆ –
ಗಡಿ –
ಜಾತಿ ಧರ್ಮ –
ಸಂಸಾರ –
ಕಷ್ಟ ಸುಖ –
ಕನಸು –
ರಾಗ ದ್ವೇಷ
ಹಸಿವು ಕಾಮ –
ಮಾನ
ಭಕ್ತಿ ಮಡಿ ಮೈಲಿಗೆ
ಅಡಿಗಡಿಗೆ
ಓಹೋ!
ಎಷ್ಟೊಂದು ಗೋಡೆಗಳ ಹಂಗು!?
ಗಿಡದ ಗರ್ಭದೊಳಗೆ
ಮೊಗ್ಗಾಗುವುದ ಕಾಣಲಿಲ್ಲ
ಮೊಗ್ಗು ಹೂವಾಗಿ ಅರಳುವುದ
ನೋಡಲಿಲ್ಲ
ಹೂವು ಚೆಲ್ಲಿದ ಕಂಪ
ಮೂಸಲಿಲ್ಲ
ಗೋಡೆಗಳ ಆಳದಲ್ಲಿ
ಅದೆಷ್ಟೆಷ್ಟೋ ಗೋಡೆಗಳುಂಟು
ಅಲ್ಲೆಲ್ಲೋ ಮೂಲದಲ್ಲಿ
ಅಡಗಿ ಕುಳಿತ 'ಆತ್ಮ'
ಕಾಣಲುಂಟೇನು?
ಕೆಡವಬೇಕಲ್ಲವೇ?



**ಸೌಮ್ಯ ಕೆ. ಆರ್.**
ನಂ. ೧೩೪೨/೨, ३ನೇ ಮುಖ್ಯರಸ್ತೆ, ಮುನೇಶ್ವರ ನಗರ
ಕದಿರೇನಹಳ್ಳಿ, ಬೆಂಗಳೂರು – ५६೦ ೦೬೧

ಪ್ರಾರಂಭಿಕ ಹಂತದಲ್ಲಿ ಪೂರ್ಣ ಪ್ರಮಾಣದ ಮಾಹಿತಿ ಕೊರತೆಯಿಂದಾಗಿ ಗ್ರಾಮೀಣ ರೈತ – ಫಲಾನುಭವಿಗಳು ಸಂಘಗಳು ತಮ್ಮ ರಾಜಕೀಯ ಭವಿಷ್ಯದ ಮೆಟ್ಟಿಲುಗಳಾಗಬಹುದೆಂದು ವಿಜ್ರಂಭಣೆ ಯಿಂದ ಸಂಘಗಳನ್ನು ಉದ್ಘಾಟಿಸಿದ್ದರು ಮತ್ತು ಬೃಹತ್ ಕಾರ್ಯಕ್ರಮಗಳನ್ನು ಕೂಡಾ ಸಂಘಟಿಸಲಾಯಿತು. ಜೀವನದ ಮೂಲಭೂತ ಅವಶ್ಯಕತೆಗಳಾದ ನೆಲ – ಜಲದ ಸದ್ಬಳಕೆಗಾಗಿ ಇಡೀ ದೇಶದಲ್ಲಿಯೇ ವಿಶಿಷ್ಟವಾದ ಈ ಸಹಕಾರಿ ಚಳುವಳಿಯನ್ನು ಸದುಪಯೋಗಪಡಿಸಿಕೊಳ್ಳ ಬಹುದಿತ್ತು. ಕಾಲಕ್ರಮೇಣ ತಮ್ಮ ನಿರೀಕ್ಷೆ ಯಂತೆ ಸಾರ್ವಜನಿಕ ಜೀವನದಲ್ಲಿ ಯಾವುದೇ ಲಾಭ ದೊರೆಯದಾದಾಗ ಜನರು ಸಂಘಗಳಿಂದ ವಿಮುಖರಾದಾಗ, ಕಾಲಕ್ರಮೇಣ ವಿಮುಖತೆ ನಿರ್ಲಕ್ಷ್ಯದತ್ತ ಹೊರಳಿತು. ಫಲಾನುಭವಿಗಳ ನಿರ್ಲಕ್ಷ್ಯ ಹಾಗೂ ನಿರುತ್ಸಾಹದಿಂದ ಹೆಚ್ಚಿನದೇನನ್ನೂ ಸಾಧಿಸಲಾಗಲಿಲ್ಲ. ಉದ್ದೇಶ ಸರಿಯಾಗಿದ್ದರೂ ಪ್ರಕ್ರಿಯೆ ದಾರಿ ತಪ್ಪಿತ್ತು. ಈ ಅವಧಿಯಲ್ಲಿ ಅನೇಕ ರಾಷ್ಟ್ರೀಯ ಹಾಗೂ ಸ್ಥಳೀಯ ಚರ್ಚೆ, ವಿಚಾರಗೋಷ್ಠಿ, ಕಾರ್ಯಾಗಾರ/ತರಬೇತಿಗಳು ನಡೆದರೂ ಅವು ಕೇವಲ ಬುದ್ಧಿಜೀವಿಗಳ ಮಸ್ತಕಕ್ಕೆ ಆಹಾರವಾಗಿ ಉಳಿದವೇ ಹೊರತು ಕ್ಷೇತ್ರ ಮಟ್ಟದಲ್ಲಿ ಯಾವುದೇ ಬದಲಾವಣೆ ತರಲು ಸಾಧ್ಯವಾಗಲಿಲ್ಲ.

ಸಾರ್ವತ್ರಿಕವಾಗಿ ಎಲ್ಲೆಡೆ ಸಂಘಗಳು ಯಶಸ್ಸನ್ನು ಕಾಣದಿದ್ದರೂ ಕತ್ತಲೆಯಲ್ಲಿನ ಆಶಾಕಿರಣಗಳಂತೆ ಅಲ್ಲಲ್ಲಿ ಕೆಲವು ಸಂಘಗಳು ಕಾರ್ಯನಿರತ ವಾಗಿದ್ದವು. ಆದಾಗ್ಯೂ, ಅವು ಯಶಸ್ವಿ ಮಾದರಿ ಗಳೆಂದು ಹೇಳುವಂತಿರಲಿಲ್ಲ. ಕೃಷ್ಣಾ ಮೇಲ್ದಂಡೆ (ಬಳಶೆಟ್ಟಿಹಾಳ), ಘಟಪ್ರಭಾ, ಭದ್ರಾ ಮತ್ತು ಹಾರಂಗಿಯಂತಹ ಕೆಲವು ಅಚ್ಚುಕಟ್ಟುಗಳಲ್ಲಿ ವ್ಯಕ್ತಿಗಳ ವಿಶೇಷ ಪ್ರಯತ್ನ ಹಾಗೂ ನಾಯಕತ್ವದ ಪ್ರಭಾವ ದಿಂದ ಕೆಲವು ಸಂಘಗಳು ಚಾಲ್ತಿಯಲ್ಲಿರುವಂತೆ ಆಯಿತು. ಇವುಗಳನ್ನು ಹೊರತುಪಡಿಸಿ ಬಹುತೇಕ ಸಂಘಗಳು ನಿಷ್ಕ್ರಿಯವಾಗಿದ್ದವು. ನೀರು ಬಳಕೆದಾರರ ಸಹಕಾರ ಸಂಘಗಳ ಈ ಪರಿಸ್ಥಿತಿ (ದುಸ್ಥಿತಿ!) ಬಗ್ಗೆ ಅನೇಕ ಸಂಶೋಧನೆಗಳು ನಡೆದರೂ ಯಾವುದೂ ಕೂಡಾ ಸಂಘಗಳ ಬಲವರ್ಧನೆಗೆ ನೆರವಾಗಲಿಲ್ಲ.

ಈ ಸಂದರ್ಭದಲ್ಲಿ ಸಾರ್ವಜನಿಕವಾಗಿ ಋಣಾತ್ಮಕ ಅಭಿಪ್ರಾಯಗಳು ಮೂಡಿಬಂದವು. ಕಳೆದ ಹದಿನೈದು ವರ್ಷಗಳಲ್ಲಿ ಅತ್ಯಂತ ಉನ್ನತ ಮಟ್ಟದ ಜನ ಪ್ರತಿನಿಧಿಗಳಲ್ಲದೇ ಅಧಿಕಾರಿ ಗಳಿಂದಲೂ ಸಂಘಗಳು ಆಪಾದನೆಗೆ ಹಾಗೂ ಅವಹೇಳನಕ್ಕೆ ಗುರಿಯಾದವು. "ಸಂಘಗಳು ಉಪಯುಕ್ತವಾದವುಗಳಲ್ಲ", "ಸಂಘಗಳು ಕೆಲಸಕ್ಕೆ ಬರದವು", "ಅವು ಕಾಂಟ್ರ್ಯಾಕ್ಟರ್‌ಗಳ ಲಾಭದ ಸಂತತಿ", "ಸಂಘಗಳಿಂದಲೇ ನೀರಾವರಿ ನಿರ್ವಹಣೆ ವ್ಯವಸ್ಥೆ ಹದಗೆಟ್ಟಿತು", "ಸಂಘಗಳಿಂದಲೇ ನೀರಿನ ರಾಜಕೀಯ ಪ್ರಾರಂಭವಾಯಿತು" ಎಂಬ ಅಹಿತಕರ




ಆರೋಪಗಳು ಕೇಳಿಬಂದವು. ಆದರೆ, ಇದು ಸಾಮಾಜಿಕ – ಆರ್ಥಿಕ, ವಿಶೇಷವಾಗಿ ಕೃಷಿ ಕ್ಷೇತ್ರದ ಒಳಿತಿನ ಹಿತದೃಷ್ಟಿಯಿಂದ ಸಕಾರಾತ್ಮಕ ಧೋರಣೆ ಅಲ್ಲ. ಇಂತಹ ಪೂರ್ವಾಗ್ರಹಗಳನ್ನು ಬದಿಗಿರಿಸಿ ಆತ್ಮಾವಲೋಕನ ಮಾಡಿಕೊಳ್ಳುವ ಕಾಲ ಬಂದಿದೆ. ಸದ್ಯದ ಪರಿಸ್ಥಿತಿ ಹಾಗೂ ಮುಂಬರುವ ದಿನಗಳಲ್ಲಿ ಉಂಟಾಗಬಹುದಾದ ನೀರಿನ ನಿರ್ವಹಣೆ ಸಮಸ್ಯೆ ಗಳನ್ನು ಗಮನದಲ್ಲಿಟ್ಟುಕೊಂಡರೆ ನೀರಿನ ಕುರಿತು ಒಂದು ಸೂಕ್ತವಾದ ವ್ಯವಸ್ಥೆ ಈ ಸಂದರ್ಭದಲ್ಲಿ ಬೇಕೇ ಬೇಕೆನಿಸುತ್ತದೆ.

ಜಾಗತಿಕ ಹಾಗೂ ರಾಷ್ಟ್ರಮಟ್ಟದ ಅಂದಾಜಿನಂತೆ ಪ್ರತಿಶತ ಸುಮಾರು ೭೦ರಿಂದ ೮೦ರಷ್ಟು ಲಭ್ಯ ನೀರು ಕೃಷಿಯಲ್ಲಿ, ವಿಶೇಷವಾಗಿ ನೀರಾವರಿಗಾಗಿ ಬಳಸಲಾಗುತ್ತಿದೆ. ಉಳಿದ ಪ್ರತಿಶತ ೨೦ರಷ್ಟು ನೀರನ್ನು ಕುಡಿಯಲು ಗೃಹಬಳಕೆ, ಕೈಗಾರಿಕೆಗೆ, ವಿದ್ಯುಚ್ಛಕ್ತಿ ಉತ್ಪಾದನೆ, ಜಲ ಸಾಗಾಣಿಕೆ ಇತ್ಯಾದಿ ಗಳಿಗಾಗಿ ಬಳಸಲಾಗುತ್ತಿದೆ. ನಿರ್ದಿಷ್ಟ ಪ್ರಮಾಣದಲ್ಲಿ ಲಭ್ಯವಿರುವ ನೀರಿಗಾಗಿ ಕೇವಲ ಕೃಷಿ ಕ್ಷೇತ್ರದಿಂದಲೇ ಅಪಾರ ಪ್ರಮಾಣದ ಬೇಡಿಕೆ ಇರುವುದರಿಂದ ನೀರಿನ ಸದ್ಬಳಕೆ ನಿಜಕ್ಕೂ ಒಂದು ಸವಾಲೇ ಸರಿ. ಮುಂಬರುವ ದಿನಗಳಲ್ಲಿ ಕೃಷಿಯೇತರ ಕ್ಷೇತ್ರಗಳಿಂದ ನೀರಿಗಾಗಿ ಗಂಭೀರ ಪೈಪೋಟಿ ಉಂಟಾಗಿ ಕೃಷಿಗೆ ನೀರಿನ ಕೊರತೆಯುಂಟಾಗಿ ಕೃಷಿ ಕ್ಷೇತ್ರ ಗಂಭೀರ ಜಲ ಸಂಕಷ್ಟವನ್ನು ಎದುರಿಸುವ ಸಾಧ್ಯತೆಗಳನ್ನು ಅನೇಕ ತಜ್ಞರು ಈಗಾಗಲೇ ವಿವರಿಸಿದ್ದಾರೆ.

ಈ ಹಿನ್ನೆಲೆಯಲ್ಲಿ ರೈತರ ಸಹಭಾಗಿತ್ವದ ನೀರಾವರಿ ಪದ್ಧತಿ ಸುವರ್ಣ ಮಾರ್ಗವಾಗಿ ಕಾಣುತ್ತದೆ. ಇದೀಗ, ಅದನ್ನು ಉಳಿಸಿ ಬೆಳೆಸುವುದು ನಮ್ಮ ಆದ್ಯ ಕರ್ತವ್ಯವಾಗಿದೆ. ಆದರೆ, ರೈತರ ಸಹಭಾಗಿತ್ವದ ನೀರಾವರಿ ನಿರ್ವಹಣೆ ರಾಷ್ಟ್ರದಲ್ಲಾಗಲೀ, ರಾಜ್ಯದಲ್ಲಾಗಲೀ ನಿರೀಕ್ಷಿಸಿದ ಮಟ್ಟದಲ್ಲಿ ಬೆಳವಣಿಗೆಯನ್ನು ಸಾಧಿಸಿಲ್ಲ. ಇದಕ್ಕೆ ಅನೇಕ ಕಾರಣಗಳುಂಟು. ಅವುಗಳನ್ನು ವಿಶ್ಲೇಷಿಸಿ ಪರಿಹಾರ ಕಂಡುಕೊಳ್ಳಬೇಕಾಗಿದೆ.

**ಸವಾಲುಗಳು**

೧) **ಸಹಕಾರ ಕ್ಷೇತ್ರದ ಸಾರ್ವತ್ರಿಕ ಹಿನ್ನಡೆ :** ನೀರು ಬಳಕೆದಾರರ ಸಹಕಾರಿ ಸಂಘಗಳು ವಿಶಾಲವಾದ ಸಹಕಾರಿ ಕ್ಷೇತ್ರದ ಒಂದು ವಿಭಾಗ. ದುರ್ದೈವ ವಶಾತ್ ಸಹಕಾರ ಕ್ಷೇತ್ರದ ಸಾರ್ವತ್ರಿಕ ಹಿನ್ನಡೆಯೇ ನೀರು ಬಳಕೆದಾರರ ಸಹಕಾರ ಸಂಘಗಳ ಹಿನ್ನಡೆಗೂ ಕಾರಣ ಎನ್ನಬಹುದು. ಬದಲಾಗು ತ್ತಿರುವ ಜಾಗತಿಕ ಆರ್ಥಿಕ ಅಭಿವೃದ್ಧಿಯ ಮಾದರಿಗಳು ಜನಪರ ವ್ಯವಸ್ಥೆ, ವಿಧಾನಗಳು ಹಾಗೂ ಸಂಘ ಸಂಸ್ಥೆಗಳನ್ನು ಹಾಳು ಮಾಡು ತ್ತಿರುವ ಹಿನ್ನೆಲೆಯಲ್ಲಿ ಸಹಕಾರ ಸಂಸ್ಥೆಗಳು ಹಿನ್ನಡೆಯನ್ನು ಅರ್ಥಮಾಡಿಕೊಳ್ಳಬೇಕಾಗುತ್ತದೆ. ಇಂದಿನ ಕಾರ್ಪೊರೇಟ್ ಅಭಿವೃದ್ಧಿ ಮಾದರಿ ಸಹಕಾರ ವ್ಯವಸ್ಥೆಗೆ ಮಾರಕವಾಗಿರುವುದರಲ್ಲಿ ಎರಡು ಮಾತಿಲ್ಲ. ಈ ದುಸ್ಥಿತಿಗೆ ಜನ ಸಮುದಾಯ ಹಾಗೂ ಪ್ರಭುತ್ವ ವ್ಯವಸ್ಥೆ ಸಮ– ಸಮನಾಗಿ ಜವಾಬ್ದಾರಿಯಾಗಿವೆ. ಆದರೆ, ಇದೇ ವ್ಯವಸ್ಥೆಯಲ್ಲಿ ಜನಪರ ದಾರಿಯನ್ನು ಕಂಡು ಕೊಳ್ಳುವ ಶಕ್ತಿಯೂ ಕೂಡ ಇರುವುದು ನಮ್ಮ ಈಗಿನ ಆತ್ಮವಿಶ್ವಾಸಕ್ಕೆ ಕಾರಣ. ಡಾ॥ ವರ್ಗಿಸ್ ಕುರಿಯನ್ ಅವರ ಶ್ವೇತ ಕ್ರಾಂತಿಯಂತಹ ಮಾದರಿಗಳೇ ಇದಕ್ಕೆ ಉದಾಹರಣೆ.

೨) **ಸಂಘಟನಾ / ರಾಜಕೀಯ ಇಚ್ಛಾಶಕ್ತಿಯ ಕೊರತೆ :** ಲಾಭಕೋರ ಆರ್ಥಿಕ ನೀತಿಗಳು ಸಾಮಾನ್ಯವಾಗಿ ಪುರೋಗಾಮಿ ಸಂಘ –ಸಂಸ್ಥೆ ಗಳನ್ನು ನಿರ್ಲಕ್ಷ್ಯ ಮಾಡುವುದು ಸಾಮಾನ್ಯ. ಜನರಿಂದ, ಜನರಿಗಾಗಿರುವ ಸಹಕಾರ ಸಂಘಗಳು ಸಮಾನತೆ ಹಾಗೂ ಸೌಹಾರ್ದತೆಯ ವಾಹಕಗಳಾಗಿದ್ದು ಅವು ಕೆಲವರ ರಾಜಕೀಯ ಹಿತಾಸಕ್ತಿಗೆ ವಿಘ್ನಗಳಾಗಬಹುದೆಂಬ ಶಂಕೆ ಕಾಡುತ್ತಿರುವುದು ಸಹಕಾರಿ ಸಂಘಗಳ ಬೆಳವಣಿಗೆಗೆ ಅಡೆತಡೆಯಾಗಿದೆ.

೩) **ಸಂಪನ್ಮೂಲ ಕೊರತೆ :** ನೀರು ಬಳಕೆದಾರರ ಸಹಕಾರ ಸಂಘಗಳು ಹಣಕಾಸು ಸಂಪನ್ಮೂಲ ಗಳ ಬುನಾದಿ ದುರ್ಬಲವಾಗಿರುವುದು ಸಂಘಗಳ ದುಸ್ಥಿತಿಗೆ ಕಾರಣವಾಗಿದೆ.

೪) **ಆಡಳಿತ ವ್ಯವಸ್ಥೆಯ ನಿರುತ್ಸಾಹ :** ನೀರಾವರಿ ಸಹಕಾರಿ ಸಂಘಗಳು ಸ್ವಾವಲಂಬನೆಯನ್ನು ಸಾಧಿಸಿ ಬಲಿಷ್ಠವಾಗಿ ಬೆಳೆದರೆ, ತಮ್ಮ ಸ್ಥಾನಮಾನ ಮತ್ತು ಲಾಭದ ಹಿತಾಸಕ್ತಿಗಳಿಗೆ ಧಕ್ಕೆಯಾಗಬಹುದೆಂಬ ಭಯ ಕೆಲವು ಜನರಲ್ಲಿ ಮನೆ ಮಾಡಿದೆ. ಇದು ಸಾಮಾಜಿಕವಾಗಿ ಆರೋಗ್ಯಪೂರ್ಣ ಧೋರಣೆ ಅಲ್ಲ. ಸಮಾಜದ ಒಂದು ವಿಭಾಗ ತಮ್ಮ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳಲು ಇನ್ನೊಂದು ವಿಭಾಗದ ಬೆಳವಣಿಗೆಯನ್ನು ಕುಂಠಿತಗೊಳಿಸುವುದು ಸಂಕುಚಿತ ಧೋರಣೆಯಾಗುತ್ತದೆ.

ಇಡೀ ಅಚ್ಚುಕಟ್ಟು ಪ್ರದೇಶದ ನೀರಿನ ಸರಬರಾಜು ಮತ್ತು ಬೇಡಿಕೆಯ ಅಂದಾಜುಗಳ ಬಗ್ಗೆ ಸೂಕ್ತ ತಿಳುವಳಿಕೆ ಇಲ್ಲದೆ ರೈತರು ಸಮಸ್ಯೆಯನ್ನು ತಮ್ಮ ಮೂಗಿನ ನೇರಕ್ಕೆ ನೋಡು ವಂತಾಗಿದೆ. "ತನ್ನ ಸಮಸ್ಯೆ ಮಾತ್ರ ಬಗೆಹರಿದರೆ ಸಾಕಪ್ಪ" ಎನ್ನುವ ಮನೋಭಾವನೆಯಿಂದ ಸಮಸ್ಯೆ ಉದ್ಭವವಾಗುತ್ತದೆ. ಸಾರ್ವಜನಿಕ ಸ್ವತ್ತಾದ ನೀರನ್ನು ಸಮುದಾಯದ ಹಿತಾಸಕ್ತಿಯನ್ನು ಗಮನದಲ್ಲಿಟ್ಟುಕೊಂಡು ಪರಸ್ಪರ ಸಹಕಾರದಿಂದ ಹಂಚಿಕೊಳ್ಳ ಬೇಕೆಂಬ ಕನಿಷ್ಠ ತಿಳುವಳಿಕೆ ರೈತರಲ್ಲಿ ಮೂಡಬೇಕು. ರೈತರು ತಮ್ಮ ಹೊಲಕ್ಕೆ ಹರಿದು ಬರುವ ನೀರನ್ನು ವೈಜ್ಞಾನಿಕವಾದ "ನೀರು – ಮಣ್ಣು – ಬೆಳೆ" ಎಂಬ ಸಂಯೋಜಿತ ವ್ಯವಸ್ಥೆಯಾಗಿ ನೋಡಬೇಕೆ ವಿನಹ ಕೇವಲ ನೀರನ್ನು ಬಳಸುವ (ಕಬಳಿಸುವ) ದೃಷ್ಟಿಯಿಂದಲ್ಲ. ನೀರನ್ನು ಕಡಿಮೆ ಬಳಸುವುದರಿಂದಾಗಲೀ, ಅತೀ ಹೆಚ್ಚು ಬಳಸುವುದರಿಂದಾಗಲೀ ರೈತನಿಗೆ ನಷ್ಟವೇ ಹೊರತು ಯಾವುದೇ ಲಾಭವಿಲ್ಲದ ಕಾರಣ, ನೀರಿನ ಸಮರ್ಪಕ ಬಳಕೆ ವಿಧಾನಗಳನ್ನು ಪ್ರೋತ್ಸಾಹಿಸಬೇಕಾಗಿದೆ.

ಈ ಹಿಂದೆಯೇ ನೀರಾವರಿ ನಿರ್ವಹಣಾ ವ್ಯವಸ್ಥೆಯನ್ನು ರೈತರಿಗೆ ವಹಿಸಿಕೊಡಬೇಕಾಗಿತ್ತು. ಅದು ಆಗಿಲ್ಲ. ಆದರೆ, ಈಗಲಾದರೂ ಬದಲಾದ ಸಂದರ್ಭದಲ್ಲಿ ರೈತರು ನೀರಿನ ಕೊರತೆಯಿಂದ ಅಥವಾ ಅತಿಯಾದ ಬಳಕೆಯಿಂದುಂಟಾಗುವ ಪರಿಣಾಮಗಳಿಂದ ಪರಿತಪಿಸುತ್ತಿರುವಾಗ ವ್ಯವಸ್ಥಿತ ರೀತಿಯಲ್ಲಿ ನೀರು ನಿರ್ವಹಣಾ ಅಧಿಕಾರವನ್ನು ಫಲಾನುಭವಿಗಳಿಗೆ ಆದ್ಯತೆ ಮೇರೆಗೆ ಹಸ್ತಾಂತರಿಸುವುದು ಸೂಕ್ತ. ಆಡಳಿತಾತ್ಮಕವಾಗಿ ಈ ಪ್ರಕ್ರಿಯೆಯಲ್ಲಿ ಅನೇಕ ಅಡಚಣೆಗಳು ಎದುರಾಗಬಹುದು. ಅವುಗಳನ್ನು ಬಗೆಹರಿಸಿ ನೀರಾವರಿ ನಿರ್ವಹಣೆಯನ್ನು ವಿಕೇಂದ್ರೀಕರಣಗೊಳಿಸಿ ಫಲಾನುಭವಿಗಳಿಗೆ ಹಸ್ತಾಂತರಿಸುವಲ್ಲಿ ನಮ್ಮ ಶ್ರೇಯಸ್ಸು ಅಡಗಿದೆ. ಇಲ್ಲಿಯವರೆಗಿನ ಅನುಭವದಲ್ಲಿ ಸಂಘಗಳಿಗೆ ಸಂಬಂಧಿಸಿದಂತೆ ರೈತರು ಹಾಗೂ ಸ್ಥಳೀಯ ಅಧಿಕಾರಿಗಳು (ಇಂಜನಿಯರ್ಸ್)ಗಳ ಮಧ್ಯೆ ವೈಮನಸ್ಸು ಹಾಗೂ ಮನಸ್ತಾಪಗಳು ಉಂಟಾಗಿರುವುದು ಸತ್ಯ. ಇವುಗಳಿಗೆ ತಪ್ಪು ಗ್ರಹಿಕೆಗಳೇ ಕಾರಣ. ಇವುಗಳನ್ನು ನಿವಾರಿಸಲು ಜಲ ನಿರ್ವಹಣೆಯ ವಿವಿಧ ಪಾಲುದಾರರು ನಿರಂತರ ಸಂವಾದ ನಡೆಸುವುದು ಅನಿವಾರ್ಯವಾಗಿದೆ.

ರೈತರಲ್ಲಿ ತಿಳುವಳಿಕೆಯ ಕೊರತೆ ಹಾಗೂ ವ್ಯವಸ್ಥೆಯ ನಿರುತ್ಸಾಹಗಳನ್ನು ಬಲವಾದ ಆಡಳಿತಾತ್ಮಕ ಇಚ್ಛಾಶಕ್ತಿಯಿಂದ ತೊಡೆದುಹಾಕಬಹುದಾಗಿದೆ. ಆದರೆ, ದುರ್ದೈವವಶಾತ್ ಕಳೆದ ದಶಕಗಳಲ್ಲಿ ನಡೆದ ವಿದ್ಯಮಾನಗಳಿಂದ ಸಂಘಗಳು ತಮ್ಮ ಶಕ್ತಿ ಹಾಗೂ ಪ್ರಸ್ತುತತೆಯನ್ನು ಕಳೆದುಕೊಂಡಿರುವುದರಿಂದ ಸಾರ್ವತ್ರಿಕವಾಗಿ ಒಂದು ರೀತಿಯ ಋಣಾತ್ಮಕ ಅಭಿಪ್ರಾಯ ಮೂಡಿರುವುದು ವಿಷಾದನೀಯವಾಗಿದೆ. ಆದರೆ, ಇಂದು ಕಾಲ ಬದಲಾಗಿದೆ, ಕೊರತೆ ರೈತರನ್ನು ಜಾಗೃತಗೊಳಿಸಿದೆ ಮತ್ತು ಅಧಿಕಾರ ಹಂಚಿಕೊಡುವುದು ಆಡಳಿತ ವ್ಯವಸ್ಥೆಗೆ ಅನಿವಾರ್ಯವಾಗುತ್ತಿದೆ. ಇಂತಹ ಸಂದರ್ಭದಲ್ಲಿ ಬಲವಾದ ರಾಜಕೀಯ ಶಕ್ತಿ ಪ್ರದರ್ಶನದಿಂದ ಸಂಘಗಳನ್ನು ಬಲವರ್ಧನೆಗೊಳಿಸಬಹುದು ಮತ್ತು ಅವುಗಳನ್ನು ಪ್ರಜಾಪ್ರಭುತ್ವ ನೆಲೆಗಟ್ಟಿನಲ್ಲಿ ಅಭಿವೃದ್ಧಿಯ ಉತ್ಕೃಷ್ಟ ಮಾದರಿಗಳನ್ನಾಗಿ ಬಳಸಿಕೊಳ್ಳಬಹುದು.

೫) **ತಾಂತ್ರಿಕ ಅಡೆತಡೆಗಳು :** ನೀರು ನಿರ್ವಹಣಾ ವ್ಯವಸ್ಥೆಯಲ್ಲಿರುವ ಅನೇಕ ತಾಂತ್ರಿಕ ನ್ಯೂನತೆಗಳು ನೀರಿನ ಸಮರ್ಪಕ ಹಂಚಿಕೆಗೆ ಅಡ್ಡಿಯಾಗುತ್ತಿವೆ. ಉದಾ: ಮುಖ್ಯ ಕಾಲುವೆ, ಹಂಚು ಕಾಲುವೆ, ಕ್ಷೇತ್ರ ನೀರಾವರಿ ನಾಲೆಗಳು ಹಾಗೂ ಗೇಟ್‌ಗಳ ದುಸ್ಥಿತಿ ಕ್ಷೇತ್ರ ಮಟ್ಟದ ದೊಡ್ಡ ಸಮಸ್ಯೆಗಳಾಗಿವೆ. ಇವು ಕಾಲುವೆಗಳಲ್ಲಿ ನೀರು ಸರಾಗವಾಗಿ ಹರಿಯದಂತೆ ಅಡೆತಡೆಗಳನ್ನುಂಟು ಮಾಡುತ್ತವೆ. ಸದಸ್ಯರಿಗೆ ಸರಿಯಾದ ಸಮಯ ಮತ್ತು ಪ್ರಮಾಣದಲ್ಲಿ ನೀರು ದೊರೆಯದೇ ಇದ್ದಾಗ ಕಲಹಗಳು ಉಂಟಾಗುತ್ತವೆ.

೬) **ಮಾಹಿತಿ ಕೊರತೆ :** ಸಂಘಗಳ ನಿರ್ವಹಣೆಗೆ ಸರಕಾರದಿಂದ ಹೊರಡುವ ನೀತಿ ನಿರೂಪಣಾ ಕಾಯ್ದೆಗಳು ರಾಜ್ಯಾದ್ಯಂತ ಏಕ ರೂಪದಲ್ಲಿರದ ಕೊರತೆ ಉದಾ: ಸರಕಾರಕ್ಕೆ ಕರ ಪಾವತಿಸುವ ವಿಧಾನ ನೀರಾವರಿ ಸಂಯೋಜನಾ ಸಮಿತಿ ಸದಸ್ಯತ್ವ .

**ಮುಂದಿನ ದಾರಿ**

೧. **ಸಂಘಟನೆ :** ಜಗತ್ತಿನಾದ್ಯಂತ ಅಥವಾ ಭಾರತದಲ್ಲಿ ಸಹಕಾರ ಚಳುವಳಿ ಹಿನ್ನಡೆಯನ್ನು ಅನುಭವಿಸುತ್ತಿರುವ ಸಂದರ್ಭದಲ್ಲಿಯೇ ಅನೇಕ ವಿಶಿಷ್ಟ ಯಶಸ್ವಿ ಮಾದರಿಗಳು, ಪ್ರಯೋಗಗಳು ನಮ್ಮ ಮುಂದೆ ಜೀವಂತವಾಗಿವೆ. ಇವು ನಮಗೆ ಸಹಕಾರ ಕ್ಷೇತ್ರದಲ್ಲಿ ಮುನ್ನಡೆಸುವ ಆಶಾಕಿರಣಗಳಾಗಿವೆ. ಉದಾಹರಣೆಗೆ ಶ್ರೇಷ್ಠ ಸಹಕಾರಿ ಧುರೀಣರಾದ ಡಾ॥ ವರ್ಗಿಸ್ ಕುರಿಯನ್ ಅವರ ನೇತೃತ್ವದಲ್ಲಿ ಸಹಕಾರ ಕ್ಷೇತ್ರದಲ್ಲಿ ನಡೆದ "ಶ್ವೇತ ಕ್ರಾಂತಿ" ಜಗತ್ತಿಗೆ ಮಾದರಿಯಾಗಿದೆ. ಈ ಮಾದರಿಗಳಿಂದ ನಾವು ನೀರಿನ ಸಹಕಾರ ಸಂಘಗಳ ಪುನಶ್ಚೇತನಕ್ಕೆ ಸಿದ್ಧರಾಗಬೇಕಾಗಿದೆ. ಅದಕ್ಕೆ ಇದೀಗ ಸುವರ್ಣಾವಕಾಶ. ಈ ಅವಕಾಶ ತಪ್ಪಿಹೋದರೆ, ನೀರಾವರಿ ನಿರ್ವಹಣೆ ರೈತ–ಫಲಾನುಭವಿಗಳ ಕೈಯಿಂದ ಲಾಭಕೋರರ ಕೈಗೆ ಹಸ್ತಾಂತರವಾಗುವ ಕಾಲ ದೂರವಿಲ್ಲ, ನಂತರ ಪರಿತಪಿಸಿ ಪ್ರಯೋಜನವಿಲ್ಲ. ಇದಕ್ಕಾಗಿ ನಾವು ಜಾಗೃತರಾಗಲೇಬೇಕಾಗಿದೆ.

೨. **ಪರ್ಯಾಯ ವ್ಯವಸ್ಥೆ :** ನೀರು ಬಳಕೆದಾರರ ಸಹಕಾರ ಸಂಘಗಳ ಬೆಳವಣಿಗೆ ತಮ್ಮ ಅಸ್ತಿತ್ವಕ್ಕೆ ಧಕ್ಕೆಯಾಗಬಹುದೆಂಬ ಆತಂಕವುಳ್ಳ ಜನ ವಿಭಾಗಗಳ ಭಯ ಆತಂಕಗಳನ್ನು ದೂರಮಾಡಿ ನೀರಾವರಿ ಸಹಕಾರ ಸಂಘಗಳ ಆರೋಗ್ಯಪೂರ್ಣ ಬೆಳವಣಿಗೆಗೆ ಸರಕಾರ ದಾರಿ ಮಾಡಿ ಕೊಡಬೇಕು. ಆತಂಕ ಅನುಭವಿಸುತ್ತಿರುವ ಜನ ಆಡಳಿತ ವಿಭಾಗಳಿಗೆ / ವ್ಯಕ್ತಿಗಳಿಗೆ ಸೂಕ್ತ ಪರ್ಯಾಯ ಅವಕಾಶಗಳನ್ನು ಕಲ್ಪಿಸಬಹುದಾಗಿದೆ.

೩. **ನೂತನ ಸಂಘಗಳ ನೋಂದಣಿ ಮತ್ತು ನೋಂದಾಯಿತ ಸಂಘಗಳ ಸಬಲೀಕರಣ:** ಈ ಪ್ರಕ್ರಿಯೆಯ ಯಶಸ್ವಿಗಾಗಿ ರಾಜ್ಯಾದ್ಯಂತ ಬೃಹತ್ ಅಭಿಯಾನದ ತುರ್ತು ಅವಶ್ಯಕತೆ ಇದೆ. ಇದಕ್ಕಾಗಿ ಸಂಬಂಧಿಸಿದ ರೈತರು, ಸಹಕಾರಿ ಧುರೀಣರು, ನೀರಾವರಿ / ಸಹಕಾರಿ ಇಲಾಖೆಯ ಅಧಿಕಾರಿಗಳು ಕೈಜೋಡಿಸಿ ಸಂಬಂಧಿಸಿದ ಎಲ್ಲರಲ್ಲೂ ಸಮರ್ಪಕ ತಿಳುವಳಿಕೆಯನ್ನು ನೀಡಬೇಕಾಗಿದೆ. ಸರಕಾರದ ವಿವಿಧ ಇಲಾಖೆಗಳು ಕಾಲಕಾಲಕ್ಕೆ ಅಭಿಯಾನಗಳನ್ನು ಹಮ್ಮಿಕೊಳ್ಳುವ ರೀತಿಯಲ್ಲಿ "ಜಲ ಸಹಕಾರ



ಅಭಿಯಾನ"/"ಜಲ ಸಹಕಾರ ಸಪ್ತಾಹ"ದಂತಹ ಕಾರ್ಯಕ್ರಮಗಳನ್ನು ಸಂಘಗಳು / ಮಹಾಮಂಡಳಗಳು ಜಲ ಸಂಪನ್ಮೂಲ / ಸಹಕಾರ ಇಲಾಖೆಗಳು ಜಂಟಿಯಾಗಿ ಹಮ್ಮಿಕೊಳ್ಳುವ ಅವಶ್ಯಕತೆ ಇದೆ.

ಕಾಡಾದ ಸಹಕಾರಿ ವಿಭಾಗವು ಸಂಘಗಳ ಸ್ಥಿತಿಗತಿಗಳನ್ನು ಪರಿಶೀಲಿಸುತ್ತ, ಕಾಲ-ಕಾಲಕ್ಕೆ ಚುನಾವಣೆಗಳನ್ನು ನಡೆಸಿ ಸಂಘಗಳು ನೀರಾವರಿ ಸಹಕಾರಿ ಕಾಯ್ದೆಗಳು ಹಾಗೂ ಪೋಟ ನಿಯಮಗಳ ಪ್ರಕಾರ ಕಾರ್ಯ ನಿರ್ವಹಿಸುತ್ತಿರುವುದರ ಬಗ್ಗೆ ನಿಗಾವಹಿಸುವುದು, ರೋಗಗ್ರಸ್ತ ಸಂಘಗಳನ್ನು ಗುರುತಿಸಿ ಅವುಗಳ ಪುನಃಶ್ಚೇತನಕ್ಕೆ ಕ್ರಮಕೈಗೊಳ್ಳುವುದು. ಸಂಘಗಳ ನೋಂದಣಿ ಸಮಯದಲ್ಲಿ ಪ್ರಜಾತಾಂತ್ರಿಕ ಹಾಗೂ ಪಾರದರ್ಶಕ ವಿಧಾನಗಳನ್ನು ಅಳವಡಿಸಿಕೊಳ್ಳಬೇಕು. ಇದರಿಂದ ಮುಂದೆ ಬಂದೊದಗುವ ಅನೇಕ ವಿಪತ್ತುಗಳನ್ನು ತಡೆಯಬಹುದು. ಈ ಚಟುವಟಿಕೆಗಳಿಗೆ ಅವಶ್ಯವಿರುವ ಹಣಕಾಸು ಹಾಗೂ ಸಿಬ್ಬಂದಿ ಸಂಪನ್ಮೂಲಗಳನ್ನು ಸರಕಾರವು ಒದಗಿಸಿಕೊಡಬೇಕು. ಸಂಘದ ವ್ಯಾಪ್ತಿಯಲ್ಲಿ ಬರುವ ಎಲ್ಲ ರೈತರನ್ನು ಕಡ್ಡಾಯವಾಗಿ ಸಂಘದ ಸದಸ್ಯರನ್ನಾಗಿ ಮಾಡಲು ಸೂಕ್ತ ಕಾಯ್ದೆ ತಿದ್ದುಪಡಿಯಾಗಬೇಕು.

೪. **ತರಬೇತಿ :** ಸಂಘಗಳ ಸುಸೂತ್ರ ನಿರ್ವಹಣೆಗಾಗಿ ಸಂಘಗಳ ರಚನೆ, ಆಡಳಿತ ಹಾಗೂ ಹಣಕಾಸು ನಿರ್ವಹಣೆಗಾಗಿ ಸೂಕ್ತ ತಿಳುವಳಿಕೆ ನೀಡಲು ತರಬೇತಿ, ಪ್ರಾತ್ಯಕ್ಷಿಕೆಗಳನ್ನು ಹಾಗೂ ಕ್ಷೇತ್ರ ಭೇಟಿಗಳನ್ನು ಏರ್ಪಡಿಸುವುದು ಅವಶ್ಯ. ಕೆಲವು ಸಂಸ್ಥೆಗಳು ಈ ನಿಟ್ಟಿನಲ್ಲಿ ಕಾರ್ಯನಿರತವಾಗಿವೆ. ಇಂತಹ ತರಬೇತಿ ಕಾರ್ಯದಲ್ಲಿ ತೊಡಗಿರುವ ವಾಲ್ಮಿ ಹಾಗೂ ಕೆ.ಇ.ಆರ್.ಎಸ್.ನಂತಹ ಸಂಸ್ಥೆಗಳನ್ನು ಬಲಪಡಿಸುವ ಅವಶ್ಯಕತೆ ಕೂಡ ಇದೆ. ತರಬೇತಿಗಳ ಗುಣಮಟ್ಟವನ್ನು ಸುಧಾರಿಸುವ ನಿಟ್ಟಿನಲ್ಲಿ ಕ್ರಮಕೈಕೊಳ್ಳಬೇಕಾಗಿದೆ. ತರಬೇತಿಯ ಉಪಯುಕ್ತತೆ ಬಗ್ಗೆ ಸಾಮಾನ್ಯವಾಗಿ ಆಡಳಿತ ವ್ಯವಸ್ಥೆಯಲ್ಲಿ ನಿರಾಶೆ ಹಾಗೂ ತಾತ್ಸಾರ ಮನೋಭಾವನೆ ತಲೆದೋರಿದೆ. ಇದಕ್ಕೆ ಕಾರಣ, ಸಂಘಗಳು ಶೀಘ್ರ ಬದಲಾವಣೆಗಳನ್ನು ತೋರದೆ ಇರುವುದು ಹಾಗೂ ತರಬೇತಿಯಿಂದ ತ್ವರಿತ ಪರಿಣಾಮಗಳನ್ನು ಬಯಸುವುದು, ಸಾಮಾಜಿಕ ಪರಿವರ್ತನೆ ಅಥವಾ ಮಾನಸಿಕ ಸ್ಥಿತಿಗಳ ಬದಲಾವಣೆ ಸಂದರ್ಭದಲ್ಲಿ ತ್ವರಿತ ಲಾಭಗಳನ್ನು ಬಯಸುವುದು ಸೂಕ್ತವಲ್ಲ. ದೀರ್ಘಕಾಲದಿಂದ ಬಂದ ಆಚಾರ, ವಿಚಾರ ಹಾಗೂ ವಿಧಾನಗಳ ಬದಲಾವಣೆಗೆ ಕಾಲಾವಕಾಶ ಬೇಕು. ಕಾರಣ, ತರಬೇತಿಗಳ ಉಪಯುಕ್ತತೆಯಲ್ಲಿ ನಂಬಿಕೆ ಇರಿಸಿ ಅವುಗಳನ್ನು ಸಮರ್ಥಿಸುವ ಮತ್ತು ಸಹಾಯ ಹಸ್ತ ನೀಡುವ ಅವಶ್ಯಕತೆ ಇದೆ.

೫. **ಕಾಯ್ದೆ / ಕಾನೂನುಗಳ ತಿಳುವಳಿಕೆ :** ಗ್ರಾಮೀಣ ಜನತೆ ನೂರಾರು ವರ್ಷಗಳಿಂದ ತಮ್ಮದೇ ಆದ ನಂಬಿಕೆ ಹಾಗೂ ಆಚರಣೆಗಳನ್ನು ಪಾಲಿಸುತ್ತ ಬಂದಿರುತ್ತಾರೆ. ಬದಲಾವಣೆಯ ಸಂದರ್ಭದಲ್ಲಿ ಕಾನೂನು ಹಾಗೂ ನೀತಿ ನಿರೂಪಣೆಯಲ್ಲಿ ಅನೇಕ ಮಾರ್ಪಾಡುಗಳನ್ನು ತರಲಾಗುತ್ತದೆ. ಉದಾಹರಣೆಗೆ, ನೂರಾರು ವರ್ಷಗಳವರೆಗೆ ಮಳೆಯಾಶ್ರಿತ/ ಒಣ ಬೇಸಾಯ ಪದ್ಧತಿಗಳನ್ನು ಅನುಸರಿಸುತ್ತಾ ಬಂದ ರೈತಾಪಿಗೆ ಕೇವಲ ೫-೧೦ ವರ್ಷಗಳಲ್ಲಿ ಸಂಪೂರ್ಣವಾಗಿ ಭಿನ್ನವಾದ ನೀರಾವರಿ ಕೃಷಿಗೆ ಸ್ಥಿತ್ಯಂತರ ಮಾಡುವಾಗ ಸಹಜವಾಗಿ ಕೆಲವು ಜಟಿಲತೆಗಳು ಎದುರಾಗುತ್ತವೆ. ಇವುಗಳನ್ನು ಮೀರಲು ಸದಸ್ಯರ ಜ್ಞಾನ, ಕೌಶಲ್ಯ ಹಾಗೂ ಧೋರಣೆಗಳಲ್ಲಿ ಸೂಕ್ತ ಬದಲಾವಣೆ ತರಬೇಕಾಗುತ್ತದೆ. ಇದಕ್ಕೆ ತಾಳ್ಮೆ ಹಾಗೂ ಶ್ರದ್ಧಾಪೂರ್ವಕ ಪ್ರಯತ್ನಗಳು ಬೇಕು.

೬. **ಹಣಕಾಸು :** ನೀರು ಬಳಕೆದಾರರ ಸಹಕಾರಿ ಸಂಘಗಳು ಇತ್ತೀಚೆಗೆ ಅಸ್ತಿತ್ವಕ್ಕೆ ಬಂದಿದ್ದು, ಅನೇಕ ಕಾರಣಗಳಿಂದ ಅವುಗಳ ಹಣಕಾಸಿನ ಸ್ಥಿತಿಗತಿ ಸಮಂಜಸವಾಗಿಲ್ಲ. ಸಂಘಗಳ ಯಶಸ್ಸಿಗಾಗಿ ಅವುಗಳ ಹಣಕಾಸಿನ ಪರಿಸ್ಥಿತಿಯನ್ನು ಗಟ್ಟಿಗೊಳಿಸುವುದು ನಮ್ಮ ಪ್ರಥಮಾದ್ಯತೆಯಾಗಬೇಕು. ಸಂಘಗಳು ಹಾಗೂ ಸಂಘಗಳ ಪದಾಧಿಕಾರಿಗಳು ಉತ್ಸಾಹದಿಂದ ಸಂಘದ ನಿಧಿಯನ್ನು ಬಲವರ್ಧನೆಗೊಳಿಸಬೇಕು. ಕ್ರಿಯಾಶೀಲ ಪ್ರಯತ್ನಗಳಿಂದ ಇದು ಸಾಧ್ಯ. ಸಂಘದ ಮೂಲ ಹಣಕಾಸು ನಿಧಿಗಳನ್ನು ಸಮರ್ಪಕವಾಗಿ ಕ್ರೋಢೀಕರಿಸಿ, ಲೆಕ್ಕ-ಪತ್ರಗಳ ಬಗ್ಗೆ ನಿರಂತರ ನಿಗಾವಹಿಸಬೇಕು. ಪರಿಣಿತರ ಮಾರ್ಗದರ್ಶನದಲ್ಲಿ ಹಣಕಾಸಿನ ಮೂಲವನ್ನು ಬಲವರ್ಧನೆಗೊಳಿಸಬೇಕು. ಸಂಘದ ಪದಾಧಿಕಾರಿಗಳಿಂದ ಎಷ್ಟು ಸಾಧ್ಯವೋ ಅಷ್ಟೂ ಪ್ರಯತ್ನಗಳು ನಡೆಯಲೇಬೇಕು. ಸಂಘಗಳ ಹಣಕಾಸು ನಿರ್ವಹಣೆ ಸಾಧ್ಯವಾದಷ್ಟು ಪಾರದರ್ಶಕವಾಗಿರಬೇಕು. ಇದಕ್ಕಾಗಿ ವಿದ್ಯುನ್ಮಾನ ವಿಧಾನಗಳನ್ನು ಬಳಸಿಕೊಳ್ಳಬಹುದು. ಇನ್ನು ಸಂಘಗಳ ಅಭಿವೃದ್ಧಿ ಹಿತದೃಷ್ಟಿಯಿಂದ ಸರಕಾರ ಆರ್ಥಿಕ ವಲಯದ ಅನೇಕ ಅಭಿವೃದ್ಧಿಯ ಸಂಸ್ಥೆಗಳಿಗೆ ಮತ್ತು ಉದ್ದಿಮೆಗಳಿಗೆ ನೀಡುವ ಸಾಲ-ಸವಲತ್ತುಗಳನ್ನು ನೀರು ಬಳಕೆದಾರರ ಸಹಕಾರ ಸಂಘಗಳಿಗೆ ವಿಸ್ತರಿಸುವುದಲ್ಲದೆ, ಸ್ವಲ್ಪ ಹೆಚ್ಚಿನ ಮಟ್ಟದ ಸವಲತ್ತುಗಳನ್ನು ವಿಸ್ತರಿಸಿದರೂ ತಪ್ಪಾಗಲಿಕ್ಕಿಲ್ಲ. ಪ್ರಸ್ತುತ ಆರ್ಥಿಕ ಅಂಕಿ ಅಂಶಗಳ ಪ್ರಕಾರ ಕೇಂದ್ರ / ರಾಜ್ಯ ಸರಕಾರಗಳು ನಷ್ಟದಲ್ಲಿರುವ ಅನೇಕ ಸಂಘ / ಸಂಸ್ಥೆಗಳಿಗೆ / ಉದ್ದಿಮೆಗಳಿಗೆ ಹಣಕಾಸಿನ ನೆರವನ್ನು ನೀಡುತ್ತಿರುವುದು ಸರ್ವೇಸಾಮಾನ್ಯವಾಗಿದೆ. ಇದೇ ಮಾನದಂಡಗಳು ನಮ್ಮ ಬದುಕಿನ ಮೂಲವಾದ ಜಲ, ನೆಲ ಹಾಗೂ ಕೃಷಿ ಅಭಿವೃದ್ಧಿಗೆ ಮುಡಿಪಾಗಿರುವ ನೀರು ಬಳಕೆದಾರರ ಸಹಕಾರ ಸಂಘಗಳಿಗೆ ಯಾಕೆ ಅಳವಡಿಸಿಕೊಳ್ಳಬಾರದು?

✳ ಅವು ವಿಶೇಷ ಅನುದಾನಗಳಿರಬಹುದು, ಕರ ವಿನಾಯಿತಿ ಇರಬಹುದು, ಮೂಲಭೂತ ಸೌಕರ್ಯಗಳ ಅಭಿವೃದ್ಧಿ ಅನುದಾನಗಳಿರಬಹುದು ಅಥವಾ ಸಾಲಗಳಿರಬಹುದು. ವಿವಿಧ ರೀತಿಯ ಸವಲತ್ತುಗಳನ್ನು ಜಲ ಸಂಘಗಳಿಗೆ ಉದಾರವಾಗಿ ನೀಡುವುದರಿಂದ ಸಂಘಗಳ ಬಲವರ್ಧನೆ ಸಾಧ್ಯ. ಈ ಸವಲತ್ತುಗಳ ಉದ್ದೇಶ ಸಂಘಗಳನ್ನು ನಿರಂತರವಾಗಿ ಬಲಹೀನ ಅಥವಾ ರೋಗಗ್ರಸ್ತ ಸ್ಥಿತಿಯಲ್ಲಿ ಇಡುವುದಲ್ಲ ಬದಲಾಗಿ ಅವುಗಳನ್ನು ಆ ಸ್ಥಿತಿಯಿಂದ ಹೊರತರುವುದಾಗಿದೆ. ಸದಸ್ಯರು ತಾವು ಕೊಡಬೇಕಾದ ಎಲ್ಲ ರೀತಿಯ ಶುಲ್ಕಗಳು, ಕರಗಳನ್ನು ನಿಷ್ಠೆಯಿಂದ ಸಂಘಗಳಿಗೆ ಕೊಡುವಂತೆ ಪ್ರೋತ್ಸಾಹಿಸಬೇಕು ಮತ್ತು ಅವುಗಳನ್ನು ಉತ್ತೇಜಿಸಲು ಸೂಕ್ತ ಪ್ರೋತ್ಸಾಹಗಳನ್ನು ನೀಡಬೇಕು. ಸಂಘಗಳು ನಿರಾಯಾಸವಾಗಿ ನೀರಿನ ಕರ ವಸೂಲಿ ಮಾಡುವಂತಹ ಪಾರದರ್ಶಕ ವ್ಯವಸ್ಥೆ ನಿರ್ಮಾಣವಾಗಬೇಕು. ಲೆಕ್ಕಪತ್ರ ವ್ಯವಹಾರಗಳಲ್ಲಿ ಸಂಘದ ಅಧಿಕಾರಿಗಳು ಪಾರದರ್ಶಕತೆಯನ್ನು ಪ್ರದರ್ಶಿಸುವುದರಿಂದ ಸಂಘದ ಸದಸ್ಯರಲ್ಲಿ ವಿಶ್ವಾಸ ಮೂಡುತ್ತದೆ.

✳ ನೀರು ಬಳಕೆದಾರರು ನೀರಾವರಿ ಕಾಯ್ದೆ ಪ್ರಕಾರ ನೀರಾವರಿ ನಿಗಮಗಳು, ಸಂಘಗಳಿಗೆ ಘನಗಾತ್ರದ ಆಧಾರದ ಮೇಲೆ ನೀರನ್ನು ಪೂರೈಸುವುದಾಗಿದೆ. ಆದರೆ, ನೀರಾವರಿ ವ್ಯವಸ್ಥೆ ಅದಕ್ಕೆ ಪೂರಕವಾಗಿಲ್ಲ. ಸದ್ಯದಲ್ಲಿ ಎಲ್ಲಿಯೂ ಘನಗಾತ್ರ ನೀರಿನ ಹಂಚಿಕೆ ನಡೆಯುತ್ತಿಲ್ಲ. ಆದರೆ, ಅನೇಕ ಸಂಘಗಳು ಕ್ಷೇತ್ರವಾರು ನೀರಿನ ಸರಬರಾಜಿನ ಅಂದಾಜಿನ ಮೇಲೆ ನೀರಿನ ಕರವನ್ನು ಸಂಗ್ರಹಿಸಿ ನಿಗಮಗಳಿಗೆ ಪಾವತಿಸುತ್ತಿವೆ. ನೀರಾವರಿ ನಿರ್ವಹಣೆಯಲ್ಲಿ ಸಮಗ್ರ ತಾಂತ್ರಿಕ ಬದಲಾವಣೆಗಳನ್ನು ಅಳವಡಿಸಿಕೊಳ್ಳುವವರೆಗೆ ಈ ವಿಧಾನವನ್ನು ಅನಿವಾರ್ಯವಾಗಿ ಮುಂದುವರಿಸಬೇಕಾಗುತ್ತದೆ. ಸಮಯಕ್ಕೆ ಸರಿಯಾಗಿ ಕರ ಭರಣ ಮಾಡುವ ಸಂಘಗಳಿಗೆ ಉತ್ತೇಜನಾ ಯೋಜನೆಗಳನ್ನು ಹಮ್ಮಿಕೊಳ್ಳಬೇಕು. ಸಂಘಗಳು ತಮ್ಮ ಸಂಪನ್ಮೂಲ ಕ್ರೋಢೀಕರಣಕ್ಕಾಗಿ ವಿಶೇಷ ಕಾರ್ಯಕ್ರಮಗಳನ್ನು ರೂಪಿಸಿಕೊಳ್ಳಬೇಕು. ಇನ್ನಿತರ ಸಹಕಾರ ಸಂಘಗಳಂತೆ ಉತ್ಪಾದನಾ ಅಥವಾ ಸೇವಾ ಚಟುವಟಿಕೆಗಳನ್ನು

ಕೈಕೊಳ್ಳಬಹುದಾಗಿದೆ. ಉದಾಹರಣೆಗೆ: ಸಂಘಗಳು ಸದಸ್ಯರಿಗೆ ಅಥವಾ ಇತರ ರೈತರಿಗೆ ಅವಶ್ಯವಿರುವ ಬೀಜ, ಗೊಬ್ಬರಗಳಂತಹ ಪರಿಕರಗಳ ಮಾರಾಟ ಮಾಡುವುದರ ಮೂಲಕ ತಮ್ಮ ಆದಾಯವನ್ನು ಹೆಚ್ಚಿಸಿಕೊಳ್ಳಬೇಕು. ಜಲ ಸಂಘಗಳು ಇನ್ನಿತರ ಸಹಕಾರಿ ಸಂಘಗಳು ವಿವಿಧ ಮೂಲಗಳಿಂದ ಸಾಲ ಪಡೆದುಕೊಳ್ಳುವ ರೀತಿಯಲ್ಲಿ ತಾವೂ ಸಾಲಗಳನ್ನು ಪಡೆದು ಸಂಘದ ಚಟುವಟಿಕೆಗಳನ್ನು ಬಲವರ್ಧನೆಗೊಳಿಸಬಹುದು.




೭. **ಆಡಳಿತ ಸುಧಾರಣೆ :** "ನೀರು ಬಳಕೆದಾರರ ಸಹಕಾರ ಸಂಘಗಳು – ನಿಗಮಗಳು – ಕಾಡಾಗಳ" ಮಧ್ಯೆ ಬಿಡಿಸಲಾರದ ನಂಟು ಉಂಟು. ಇದು ಯಾವ ಕಾಲಕ್ಕೂ ಯಾರಿಂದಲೂ ಕೆಡದ ಹಾಗೆ ಜಾಗ್ರತೆ ವಹಿಸಬೇಕು ಮತ್ತು ಪೋಷಿಸಬೇಕು. ಕಾಡಾಗಳು ಸಹಕಾರಿ ಸಂಘಗಳ ರಚನೆಯ ಸಂದರ್ಭದಲ್ಲಿ ವಿಭಾಗ ಪ್ರವರ್ತಕರನ್ನು / ಪದಾಧಿಕಾರಿಗಳನ್ನು ಚುನಾಯಿಸುವ ಸಂದರ್ಭದಲ್ಲಿ ಅತ್ಯಂತ ಜಾಗರೂಕತೆ ಹಾಗೂ ಪಾರದರ್ಶಕತೆಯನ್ನು ಅಳವಡಿಸಿಕೊಂಡರೆ, ದೀರ್ಘಕಾಲೀನ ಸಮಸ್ಯೆಗಳನ್ನು ತಡೆಗಟ್ಟಬಹುದು. ಕಾಡಾ ಮತ್ತು ಸಂಘಗಳು ಪರಸ್ಪರ ಸಹಕಾರ ಮತ್ತು ಸಂಯೋಜನೆಯನ್ನು ಜತನವಾಗಿ ಕಾಪಾಡಿಕೊಳ್ಳಬೇಕು.

✶ ಸಂಘಗಳ ಅಸ್ತಿತ್ವಕ್ಕೆ ನಿಗಮಗಳ ಮೂಲಕ ದೊರೆಯುವ ನೀರೇ ಮೂಲ ಕಾರಣ, ಸಂಘಗಳ ಮತ್ತು ನಿಗಮಗಳ ಉತ್ತಮ ಸಂಬಂಧಗಳನ್ನು ಕಾಪಾಡಿಕೊಳ್ಳುವ ಅವಶ್ಯಕತೆ ಇದೆ. ನೀರಿನ ಹಂಚಿಕೆ, ವ್ಯವಸ್ಥೆಯ ನಿರ್ವಹಣೆ ಹಾಗೂ ಕರ ವಸೂಲಾತಿ ಕುರಿತು ಸಂಘದ ಪದಾಧಿಕಾರಿಗಳು ಮತ್ತು ನಿಗಮಗಳ ಅಭಿಯಂತರುಗಳ ಮಧ್ಯೆ ತಪ್ಪು ತಿಳುವಳಿಕೆ, ಮನಃಸ್ತಾಪ, ವಾಗ್ವಾದಗಳು ಸರ್ವೇಸಾಮಾನ್ಯವಾಗಿವೆ. (ಮೊದಲು ನೀರು ಬಿಡು – ಮೊದಲು ಕರ ಕಟ್ಟು) ಈ ನಡವಳಿಕೆ ಬದಲಾಗಬೇಕು. ಸಂಘದ ಪದಾಧಿಕಾರಿಗಳು ಹಾಗೂ ನಿಗಮದ ಅಧಿಕಾರಿಗಳು ಪರಸ್ಪರ ತಿಳುವಳಿಕೆ ಹಾಗೂ ಗೌರವದಿಂದ ನಡೆದುಕೊಳ್ಳುವಂತಹ ಸಾರ್ವಜನಿಕ ವಾತಾವರಣ ನಿರ್ಮಾಣವಾಗಬೇಕು. ಒಂದು ವ್ಯವಸ್ಥೆಯಲ್ಲಿ ನಿರಂತರವಾಗಿ ಕಾರ್ಯನಿರತವಾದ ವಿವಿಧ ವಿಭಾಗಗಳ ನಡುವೆ ಭಿನ್ನಾಭಿಪ್ರಾಯಗಳಿರುವುದು ಸಹಜ. ಆದರೆ, ಅವು ಮನಸ್ತಾಪ ಹಾಗೂ ಕಲಹಗಳಿಗೆ ಎಡೆ ಮಾಡಿಕೊಡಬಾರದು. ಈ ನಿಟ್ಟಿನಲ್ಲಿ ಹಿರಿಯ ಜನಪ್ರತಿನಿಧಿಗಳು, ಸಾರ್ವಜನಿಕ ಮುಖಂಡರು ಹಾಗೂ ಸರಕಾರಿ ಇಲಾಖೆಯ ಹಿರಿಯ ಅಧಿಕಾರಿಗಳ ಪಾತ್ರ ಬಹಳೇ ಮುಖ್ಯ.

✶ **ಸಂಘಗಳು :** ತಾವು ಸಂಗ್ರಹಿಸಿದ ನೀರಿನ ಕರವನ್ನು ನೇರವಾಗಿ ನಿಗಮಗಳಿಗೆ ಕಟ್ಟುವಂತಹ ಏಕರೂಪದ ಕಾಯ್ದೆ ರಾಜ್ಯಾದ್ಯಂತ ಜಾರಿಯಾಗಬೇಕು. ನೀರಿನ ಕರವನ್ನು ವಿವಿಧ ಕಾರಣಗಳನ್ನೊಡ್ಡಿ ಕಂದಾಯ ಇಲಾಖೆಗೆ ಕಟ್ಟುವುದು ಸೂಕ್ತವಲ್ಲ. ಸದಸ್ಯರನ್ನು ವಿಶ್ವಾಸಕ್ಕೆ ತೆಗೆದುಕೊಂಡು ಸರಿಯಾದ ತಿಳುವಳಿಕೆಯನ್ನು ಮೂಡಿಸುವುದರ ಮೂಲಕ ಕರ ಸಂಗ್ರಹದ ಮೊತ್ತವನ್ನು ಹೆಚ್ಚಿಸಬಹುದು. ಕರ ಸಂಗ್ರಹಣೆಯಲ್ಲಿ ಆಧುನಿಕ ವಿದ್ಯುನ್ಮಾನ ವಿಧಾನಗಳನ್ನು ಅಳವಡಿಸಿಕೊಳ್ಳುವುದು ಮತ್ತು ಪಾರದರ್ಶಕತೆ ಮುಖ್ಯವಾಗಿವೆ.

✶ **ರಾಜ್ಯದಲ್ಲಿ ಜಲ ಸಂಪನ್ಮೂಲ ಅಭಿವೃದ್ಧಿ ಯೋಜನೆಗಳು :** ಈಗಾಗಲೇ ಕೊನೆ ಹಂತ ತಲುಪುತ್ತಿದ್ದು, ಇದೀಗ ನೀರು ನಿರ್ವಹಣೆ ಹಾಗೂ ಕೃಷಿ ಉತ್ಪಾದನೆಗೆ ಹೆಚ್ಚಿನ ಆದ್ಯತೆ ನೀಡುವ ಸಮಯ ಬಂದಿದೆ. ಕಾಡಾ / ನಿಗಮಗಳ ಅಧಿಕಾರಿಗಳು ವಿಶೇಷವಾಗಿ ಕ್ಷೇತ್ರ ಮಟ್ಟದ ಕಿರಿಯ ಅಧಿಕಾರಿಗಳು ರೈತರ ಸಮಸ್ಯೆಗಳಿಗೆ ಸ್ಪಂದಿಸುತ್ತಾ ಕ್ಷೇತ್ರ ಮಟ್ಟದ ಸಣ್ಣ–ಪುಟ್ಟ ಕಾಮಗಾರಿ / ರಿಪೇರಿ ಕೈಗೊಳ್ಳಲು ನೆರವಾದದ್ದಾದರೆ ಇಲಾಖೆಗಳ ಬಗ್ಗೆ ಸಾರ್ವಜನಿಕರಲ್ಲಿ ಉತ್ತಮ ಅಭಿಪ್ರಾಯ ಮೂಡುತ್ತದೆ. ಈ ನಿಟ್ಟಿನಲ್ಲಿ ಇಲಾಖೆಯ ಕಾರ್ಯವೈಖರಿಯಲ್ಲಿ ಸೂಕ್ತ ಬದಲಾವಣೆಗಳನ್ನು ತರುವುದು ಅವಶ್ಯವಾಗಿದೆ. ಕೆಲವು ಪಟ್ಟಭದ್ರ ಹಿತಾಸಕ್ತಿಗಳು "ಸಂಘ–ನಿಗಮ–ಕಾಡಾಗಳ" ಸಂಬಂಧಗಳನ್ನು ಕೆಡಿಸಲು ಮಾಡುತ್ತಿರುವ ಪ್ರಯತ್ನಗಳನ್ನು ತಡೆಗಟ್ಟಿ, ಒಟ್ಟಾರೆ ನೀರು ನಿರ್ವಹಣಾ ವ್ಯವಸ್ಥೆಯಲ್ಲಿ ಸೌಹಾರ್ದ ವಾತಾವರಣ ನಿರ್ಮಾಣವಾಗಬೇಕು.

೮. **ಮಹಾಮಂಡಳಗಳ ಪಾತ್ರ :** ರೈತರ ಸಹಭಾಗಿತ್ವದ ನೀರಾವರಿ ಪದ್ಧತಿ ಕಾಯ್ದೆ ೨೦೦೨ ಅಡಿ ಕಾಲುವೆ, ಯೋಜನೆ ಹಾಗೂ ರಾಜ್ಯ ಮಟ್ಟದ (ಅಪೆಕ್ಸ್) ಮಹಾಮಂಡಳಗಳನ್ನು ರಚಿಸಲು ಅವಕಾಶ ಮಾಡಿಕೊಡಲಾಗಿದ್ದು ಇನ್ನೂ ಅನೇಕ ಕಡೆಗಳಲ್ಲಿ ಕಾಲುವೆ ಮತ್ತು ಯೋಜನಾ ಮಟ್ಟದ (ಉದಾ. ಕೃಷ್ಣಾ ಮೇಲ್ದಂಡೆ ಯೋಜನೆ) ಮಹಾಮಂಡಳಗಳು ರಚನೆಯಾಗಿಲ್ಲ. ಅದೇ ರೀತಿ ಶೃಂಗ ಮಹಾಮಂಡಳದ ರಚನೆಯೂ ಕೂಡ ಆಗಿಲ್ಲ. ತುರ್ತಾಗಿ ಇವುಗಳನ್ನು ಮಾಡುವುದು ಅವಶ್ಯಕ. ಮಹಾಮಂಡಳಗಳು ರಾಜಕೀಯ ತಾಣಗಳಾಗದೇ ವ್ಯವಸ್ಥೆಯ ನಿರ್ವಹಣಾ ವಾಹಕಗಳಾದರೆ ಅದು ಪ್ರಜಾಪ್ರಭುತ್ವದ ಯಶಸ್ಸೇ ಸರಿ. ಸೂಕ್ತ ತರಬೇತಿ ಮೂಲಕ ಮಹಾಮಂಡಳಗಳಿಗೆ ಹೆಚ್ಚಿನ ಜವಾಬ್ದಾರಿಯನ್ನು ನೀಡಬಹುದಾಗಿದೆ. ಮಹಾಮಂಡಳಗಳು ಅಚ್ಚುಕಟ್ಟು ಪ್ರದೇಶದ ವಿವಿಧ ಭಾಗಗಳಲ್ಲಿ ಹರಡಿರುವ ಸಂಘಗಳಿಗೆ ಕೊಂಡಿಯಂತೆ ಕೆಲಸ ಮಾಡುತ್ತಾ ಉತ್ತಮ ಸಂಯೋಜನೆಯನ್ನು ಸಾಧಿಸಬಹುದು. ಒಕ್ಕೂಟಗಳು ಸಹಭಾಗಿತ್ವ ಪದ್ಧತಿಯ ಒಂದು ವಿಶಾಲ ಚಿತ್ರಣವನ್ನು ಕ್ರೋಢೀಕರಿಸಿ, ಪ್ರಜಾತಾಂತ್ರಿಕ ಮುಂದಾಳತ್ವದ ಮೂಲಕ ಸಂಘರ್ಷಮಯ ವಾತಾವರಣವನ್ನು ತೊಡೆದು ಹಾಕಿ ಸಹಕಾರಿ ಮನೋಭಾವನೆಯನ್ನು ಬೆಳೆಸುವಲ್ಲಿ ಮಹತ್ತರ ಪಾತ್ರವನ್ನು ವಹಿಸಬಲ್ಲವು. ಶೀಘ್ರದಲ್ಲಿ ರಾಜ್ಯದ ಎಲ್ಲ ಮಹಾಮಂಡಳ ರಚನೆ ಬಗ್ಗೆ ಜಲ ಸಹಕಾರಿ ಧುರೀಣರು ಕಾರ್ಯೋನ್ಮುಖರಾಗಬೇಕಾಗಿದೆ.

ಪಂಚಾಯತ್‌ರಾಜ್ ವ್ಯವಸ್ಥೆ ಅಡಿಯಲ್ಲಿ ವಿಕೇಂದ್ರೀಕರಣದ ವಿವಿಧ ಹಂತಗಳಲ್ಲಿ ದಿನಕಳೆದಂತೆ ಹಣಕಾಸು ನಿರ್ವಹಣೆ, ಆಡಳಿತಾತ್ಮಕ ಹಕ್ಕು ಹಾಗೂ ಕರ್ತವ್ಯಗಳ ಬಗ್ಗೆ ನಾಗರಿಕರಲ್ಲಿ ಸಾಮಾನ್ಯ ತಿಳುವಳಿಕೆ ಮೂಡುತ್ತಾ ಜವಾಬ್ದಾರಿ ಹೆಚ್ಚುತ್ತಿರುವ ರೀತಿಯಲ್ಲಿಯೇ ವಿಕೇಂದ್ರೀಕೃತ ನೀರಾವರಿ ಪದ್ಧತಿಯಲ್ಲಿಯ ತಿಳುವಳಿಕೆ ಹೆಚ್ಚಾದಂತೆ ಸಮಸ್ಯೆಗಳು ಕಡಿಮೆಯಾಗಬಲ್ಲವು. ಎಂದಾದರೊಂದು ದಿನ ಈ ಪದ್ಧತಿಯೇ ನೀರಾವರಿ ನಿರ್ವಹಣೆ ಸಮಸ್ಯೆಗಳಿಗೆ ಪರಿಹಾರವಾಗಬಹುದಾದರೆ ಇಂದೇ ಯಾಕೆ ಈ ಪದ್ಧತಿಯನ್ನು ಶ್ರದ್ಧೆಯಿಂದ ಅನುಷ್ಠಾನಗೊಳಿಸಬಾರದು?

೯. **ತಾಂತ್ರಿಕ ಮಾರ್ಗೋಪಾಯಗಳು :**

- ನೀರಾವರಿ ಕಾಯ್ದೆ ಅಡಿಯಲ್ಲಿ ಸಂಘಗಳು ಯಾವೆಲ್ಲ ತಾಂತ್ರಿಕ ಸೌಲಭ್ಯಗಳನ್ನು ಪಡೆಯಬೇಕೋ ಅವುಗಳನ್ನು ಒದಗಿಸುವ ಜವಾಬ್ದಾರಿ ಸರಕಾರಕ್ಕಿದೆ. ಉದಾಹರಣೆಗೆ – ನೀರು ಹಂಚಿಕೆಯ ದೊಡ್ಡ ಹಾಗೂ ಸಣ್ಣ ಕಾಲುವೆಗಳನ್ನು ಸುಸ್ಥಿತಿಯಲ್ಲಿ ಇಡಬೇಕಾದದ್ದು ನಿಗಮಗಳ ಜವಾಬ್ದಾರಿಯಾಗಿದ್ದು ಇದು ನಿರಂತರವಾಗಿ ನಡೆಯಲೇಬೇಕು. ಅನೇಕ ಸಲ ಸಣ್ಣ ತಾಂತ್ರಿಕ ದೋಷದಿಂದಾಗಿ ದೊಡ್ಡ ಕಲಹಗಳುಂಟಾಗುತ್ತವೆ. ಕಾರಣ, ನೀರಾವರಿ ವ್ಯವಸ್ಥೆಯನ್ನು ಸುಸ್ಥಿತಿಯಲ್ಲಿಡಲು ನಿರಂತರ ಓ&ಎಂ ಚಟುವಟಿಕೆಗಳು ನಡೆಯುತ್ತಿರಲೇಬೇಕು ಮತ್ತು ಸರಕಾರ ಇದಕ್ಕಾಗಿ ಅವಶ್ಯ

ಅನುದಾನ ಒದಗಿಸಬೇಕು. ಕಾಲುವೆಯ ಪ್ರಾರಂಭದಿಂದ ಕಾಲುವೆಯ ಅಂಚಿನವರೆಗೆ ನೀರು ಹರಿಯದಿರುವುದು ಇತ್ತೀಚಿನ ದಿನಗಳಲ್ಲಿ ರೈತ–ರೈತರ ಮಧ್ಯೆ ಹಾಗೂ ರೈತ–ಅಧಿಕಾರಿಗಳ ಮಧ್ಯೆ ಕಲಹಗಳಿಗೆ ಕಾರಣವಾಗಿದೆ. ಲಭ್ಯವಿರುವ ನೀರು ಸರಾಗವಾಗಿ ಹರಿಯುವಂತಾದರೆ ಕಾಲುವೆಯ ಅಂಚಿನ ರೈತರಿಗೂ ನೀರು ದೊರೆಯುವಂತಾಗುತ್ತದೆ. ಕಾಡಾ / ನಿಗಮಗಳು ಸಂಘಗಳ ವ್ಯಾಪ್ತಿಗೆ ಒಳಪಡುವ ನೀರಾವರಿ ವ್ಯವಸ್ಥೆಯ ಗೇಟ್ / ನಾಲೆಗಳನ್ನು ಸುಸ್ಥಿತಿಯಲ್ಲಿಡಲು ಪ್ರೋತ್ಸಾಹಿಸಬೇಕು ಮತ್ತು ಮಾರ್ಗದರ್ಶನ ನೀಡಬೇಕು.

- ಸಾಧ್ಯವಾದಲ್ಲೆಲ್ಲ ನಿಗಮಗಳು ಘನಗಾತ್ರದ ಆಧಾರದ ಮೇಲೆ ನೀರಿನ ಸರಬರಾಜು ಮಾಡಲು ಆಧುನಿಕ ತಂತ್ರಜ್ಞಾನವನ್ನು ಅಳವಡಿಸಿಕೊಳ್ಳಬೇಕು ಮತ್ತು ಕ್ರಮೇಣವಾಗಿ ಆ ವ್ಯವಸ್ಥೆಯತ್ತ ನಮ್ಮ ಪದ್ಧತಿಗಳನ್ನು ಮಾರ್ಪಾಡು ಮಾಡಿಕೊಳ್ಳಬೇಕು. ಸಾಮಾನ್ಯವಾಗಿ ಕಾಲುವೆಗಳಲ್ಲಿ ನೀರು ಹರಿವ ತಾಂತ್ರಿಕ ಮಾಹಿತಿಯನ್ನು ವಿದ್ಯುನ್ಮಾನ ವಿಧಾನಗಳ ಮೂಲಕ ರೈತರಿಗೆ ಸೂಕ್ತ ಸಮಯದಲ್ಲಿ ದೊರಕಿಸುವುದು ನಿಗಮಗಳ ಜವಾಬ್ದಾರಿಯಾಗಿದೆ. ಈ ನಿಟ್ಟಿನಲ್ಲಿ ನಿಗಮಗಳು ತಮ್ಮ ನೀರು ನಿರ್ವಹಣಾ ತಾಂತ್ರಿಕತೆಗಳನ್ನು ಆಧುನೀಕರಣಗೊಳಿಸುವ ಜವಾಬ್ದಾರಿ ಇದೆ. ಕೆಲವು ಯೋಜನೆಗಳಲ್ಲಿ ಸರಕಾರ ಕ್ರಮಗಳನ್ನು ಕೈಕೊಳ್ಳುತ್ತಿರುವುದು ಸ್ವಾಗತಾರ್ಹವಾಗಿದೆ (ಉದಾ: ಗೊಂದಿ ನಾಲಾ ಆಧುನಿಕರಣ ಯೋಜನೆ, ನಾರಾಯಣಪೂರ ಎಡದಂಡೆ ಸ್ಕಾಡಾ ಯೋಜನೆ)
- **ಜಲ – ಆಯವ್ಯಯ :** ಕಾಲುವೆಗಳಲ್ಲಿ ನೀರು ಸರಾಗವಾಗಿ ಹರಿಯದೇ ಅಂಚಿನವರೆಗೆ ತಲುಪದಿರಲು ಕೇವಲ ತಾಂತ್ರಿಕ ಕಾರಣಗಳಲ್ಲದೇ, ಕಾನೂನುಬಾಹಿರ ನೀರಿನ ಕಬಳಿಕೆ, ಬಲಾಢ್ಯರ ಹಸ್ತಕ್ಷೇಪಗಳೂ ಕಾರಣವಾಗಿವೆ. ಇದನ್ನು ತಡೆಗಟ್ಟಲು ಸಂಘ ಹಾಗೂ ಸರಕಾರಗಳ ಇಚ್ಛಾಶಕ್ತಿ ಹಾಗೂ ಕಾನೂನಿನ ಕಟ್ಟು ನಿಟ್ಟಿನ ಪರಿಪಾಲನೆ ಅತೀ ಅವಶ್ಯಕ. ಸ್ಥಳೀಯ ಜನಪ್ರತಿನಿಧಿಗಳು ಈ ಕುರಿತು ಸಕಾರಾತ್ಮಕ ಧೋರಣೆಯನ್ನು ತೋರಿದರೆ ಮಾತ್ರ ಈ ಸಮಸ್ಯೆಯನ್ನು ಬಗೆಹರಿಸಬಹುದು.
- ನೀರಿನ ಕೊರತೆ ಅಥವಾ ಅತೀ ಬಳಕೆಗಳನ್ನು ನಿಯಂತ್ರಿಸಲು **"**ಜಲ ಆಯವ್ಯಯ**"** ಅತ್ಯಂತ ಉಪಯುಕ್ತ ವಿಧಾನವಾಗಿದೆ. ನೀರಾವರಿ ಅಚ್ಚುಕಟ್ಟು ಪ್ರದೇಶದಲ್ಲಿ ಜಲ ಆಯವ್ಯಯ ಪದ್ಧತಿಯನ್ನು ಅಳವಡಿಸಿಕೊಳ್ಳುವುದರಿಂದ ನೀರಿನ ಲಭ್ಯತೆಗೆ ಅನುಗುಣವಾಗಿ ರೈತರು ಸೂಕ್ತ ಬೆಳೆ – ಪದ್ಧತಿಯನ್ನು ಅನುಸರಿಸಬಹುದು. ಸಂಘಗಳು ಜಲ ಆಯವ್ಯಯ ಪದ್ಧತಿಯನ್ನು ಅಳವಡಿಸಿಕೊಳ್ಳುವುದನ್ನು ಕಡ್ಡಾಯಗೊಳಿಸಬೇಕು. ಇದಕ್ಕಾಗಿ ಸೂಕ್ತ ಜಲ ಹಾಗೂ ಕೃಷಿ ತಜ್ಞರನ್ನೊಳಗೊಂಡ ವಿಶೇಷ ತರಬೇತಿಗಳ ಅವಶ್ಯಕತೆ ಇದೆ. ಮಹಾಮಂಡಳಗಳು ನಿಗಮಗಳ ಮುಂದೆ ನೀರಿನ ಬೇಡಿಕೆಯನ್ನಿಡುವಾಗ ಜಲ – ಆಯವ್ಯಯ ಅನುಕೂಲವಾಗುವುದರಿಂದ ಪ್ರತಿ ಜಲ ವರ್ಷದ ಜಲ ಆಯವ್ಯಯವನ್ನು ತಯಾರಿಸುವಂತೆ ಸಂಘಗಳಿಗೆ ಪ್ರೋತ್ಸಾಹ ಹಾಗೂ ಮಾರ್ಗದರ್ಶನ ನೀಡಲೇಬೇಕು. ಇದರಲ್ಲಿ ಮಹಾಮಂಡಳಗಳ ಪಾತ್ರ ಪ್ರಮುಖವಾಗಿದೆ.
- **ಮಣ್ಣು ಮತ್ತು ನೀರಿನ ಪರೀಕ್ಷೆ :** ನೀರಿನ ಸದುಪಯೋಗಪಡಿಸಿಕೊಳ್ಳಲು ಸಂಘದ ಸದಸ್ಯರು ಹೊಲಗಳ ಮಣ್ಣು ಮತ್ತು ನೀರಿನ ಪರೀಕ್ಷೆ ಕಡ್ಡಾಯಗೊಳಿಸಬೇಕು. ಮಣ್ಣು ಮತ್ತು ನೀರಿನ ಉಳಿತಾಯ ಹಾಗೂ ಸದ್ಬಳಕೆಯ ಮೂಲಕ ಕೃಷಿ ಉತ್ಪಾದನೆಯನ್ನು ಹೆಚ್ಚಿಸಬಹುದು. ನೋಟಿಫೈಡ್ ಕ್ಷೇತ್ರ ಅಥವಾ ಸಂಘಗಳ ಕಾರ್ಯಕ್ಷೇತ್ರದ ಹೊರಗಡೆಯಿಂದ ನೀರಿನ ಕಳ್ಳತನ / ದುರ್ಬಳಕೆಗಳನ್ನು ತಡೆಗಟ್ಟಬೇಕು. ಈ ಕುರಿತು ಈಗಾಗಲೇ ಕಾಯ್ದೆ ಜಾರಿಯಲ್ಲಿದ್ದರೂ ಅದನ್ನು ಅನುಷ್ಠಾನಗೊಳಿಸದಿರುವುದು ಪ್ರಮಾದ. ಸ್ಥಳೀಯ ಬಲಾಢ್ಯ, ಪಟ್ಟಭದ್ರ ಹಿತಾಸಕ್ತಿಗಳ ಹೆದರಿಕೆ / ಶಕ್ತಿ ಪ್ರದರ್ಶನಕ್ಕೆ ಅವಕಾಶ ನೀಡಿದಂತೆ ಸಮಾಜದ ಮುಖಂಡರು / ಜನ ಪ್ರತಿನಿಧಿಗಳು ಆರೋಗ್ಯಪೂರ್ಣ ಸಾರ್ವಜನಿಕ ಅಭಿಪ್ರಾಯ ಮೂಡಿಸಬೇಕಾದ ಜವಾಬ್ದಾರಿ ಇದೆ.
- **ಸುಸ್ಥಿರ ಕೃಷಿ :** ನೀರಾವರಿ ಯೋಜನೆಗಳ ಅಂತಿಮ ಉದ್ದೇಶ ಕೃಷಿ ಕ್ಷೇತ್ರಕ್ಕೆ

# ಮೋಟುಮರ



**ಒಂ**ಟಿಯಾಗಿ ಒಣಗಿನಿಂತ ಮೋಟು ಮರ
ಹತ್ತಿರ ಹೋದೆ.
ಬತ್ತಿ ಹೋದ ಬೇರುಗಳು ಕಿತ್ತಿ ಹೊರಬರುವಂತೆ ನಿಂತವೆ
ಯಾವ ಕ್ಷಣ ಉರುಳುವುದೋ
ಮುಟ್ಟಿದರೆ ಮೈಮೇಲೆ ಎಂದು ನಾ ತಟ್ಟನೆ ಹಿಂದೆ ಸರಿದೆ.
ಅಯ್ಯೋ ಎನಿಸಿದರೂ ಆಸರೆ ನೀಡುವ ಶಕ್ತಿ ಇಲ್ಲ
ಸುಮ್ಮನಿರಲೂ ಆಗಲಿಲ್ಲ.
ಮರವನ್ನೇ ನಿಟ್ಟಿಸಿದೆ...
ಹಿಂದೆ ಹೂ ಬಿಟ್ಟು ನೆರಳಿಟ್ಟು ಫಲ ಕೊಟ್ಟು ತಣಿಸಿದ್ದು
ಎಲ್ಲರೂ ಮರೆತಿದ್ದಾರೆ.
ಹತ್ತಿದ್ದಾರೆ, ಕಿತ್ತಿದ್ದಾರೆ, ಸಿಪ್ಪೆ ಸುಲಿದು, ಕೆತ್ತಿ ಬೆತ್ತಲಮಾಡಿದ್ದಾರೆ.
ರೆಂಬೆ ಕೊಂಬೆಗಳಿಂದ ದೂರ ಮಾಡಿ
ಮತ್ತೆ ಚಿಗುರದಂತೆ ಬೋಳು ಮಾಡಿದ್ದಾರೆ.
ನೋಡುತ್ತಲೇ ಇದ್ದೆ, ವಿಚಿತ್ರ
ಮರದ ಹಿಂದೆ ಅವ್ವ ನಿಂತಿದ್ದಾಳೆ.!!
ಕಣ್ಣಲ್ಲಿ ನೀರು ಬಂತು
ದಿಗ್ಗನೇ ಜ್ವಾಲೆಯೊಂದು ಮನದಲ್ಲಿ ಹೊತ್ತಿಕೊಂಡಿತು
ಬಿಸಿಗೆ ನರ ನಾಡಿಗಳು ಉಬ್ಬಿ ಬಂದವು.
ಮುಷ್ಟಿ ಎತ್ತಿ ನೆಲ ಗುದ್ದಿದೆ.
ಹೊಡೆತಕ್ಕೆ ನೆಲದೆದೆಯ ನೀರು
ಮುಷ್ಟಿಯ ರಕ್ತದೊಂದಿಗೆ ಚಿಮ್ಮಿ
ಮರದ ಮೇಲೆ ತುಂತುರಿಸಿತು
ಯಾವುದೀ ವಿಚಿತ್ರ ಮಳೆಯೆಂದು
ಅವ್ವ ಆಕಾಶದೆಡೆಗೆ ನೋಡಿದಳು.
ತಂಪಾದಂತಾಗಿ ತುಸು ನಕ್ಕಳು


**ಶಮಾ (ದಾಕ್ಷಾಯಣಿ ಬಿರಾದಾರ)**
ದರ್ಬಾರ ಗಲ್ಲಿ, ಬಾಗಲಕೋಟ ಕ್ರಾಸ್
ವಿಜಯಪುರ

ನೀರನ್ನು ಒದಗಿಸಿ ಕೃಷಿ ಉತ್ಪಾದನೆಯನ್ನು ಹೆಚ್ಚಿಸುವುದು. ಆದರೆ, ದುರ್ದೈವವಶಾತ್ ಕಬ್ಬು, ಬಾಳೆ ಹಾಗೂ ಭತ್ತಗಳ ಏಕ ಬೆಳೆ ಪದ್ಧತಿ ನೀರಾವರಿ ವ್ಯವಸ್ಥೆಗೆ ಮಾರಕವಾಗಿದೆ. ಇದರಿಂದಾಗಿ ನೀರಿನ ದುರ್ಬಳಕೆ ಹಾಗೂ ಭೂಮಿಯ ಫಲವತ್ತತೆ ನಾಶ ಅವ್ಯಾಹತವಾಗಿ ನಡೆಯುತ್ತಿದೆ. ಈ ಅನಾಹುತಗಳನ್ನು ತಡೆಗಟ್ಟುವಲ್ಲಿ ಕಾಡಾಗಳ ಕೃಷಿ ವಿಭಾಗಗಳ ಕಾರ್ಯಕ್ಷಮತೆಯನ್ನು ಹೆಚ್ಚಿಸಬೇಕು. ಕಾಡಾ ಕೃಷಿ ವಿಭಾಗಗಳು ಕೃಷಿ ವಿಶ್ವವಿದ್ಯಾಲಯಗಳ ಸಂಶೋಧನಾ ಕೇಂದ್ರಗಳು ಹಾಗೂ ಕೃಷಿ ವಿಭಾಗ ಕೇಂದ್ರಗಳು ಹಾಗೂ ಸಂಘಗಳ ಸಹಕಾರದಲ್ಲಿ ಉತ್ತಮ ಮತ್ತು ಬೃಹತ್ ಪ್ರಾತ್ಯಕ್ಷಿಕೆಗಳನ್ನು ಹಮ್ಮಿಕೊಂಡು ಸುಸ್ಥಿರ ಕೃಷಿಯನ್ನು ಉತ್ತೇಜಿಸಬೇಕು.

೧೦.ರಾಜ್ಯದಲ್ಲಿ ಸಹಭಾಗಿತ್ವದ ನೀರಾವರಿ ಪದ್ಧತಿಯ ಸಮರ್ಪಕ ಅನುಷ್ಠಾನಕ್ಕೆ ಜಲ ಸಂಪನ್ಮೂಲ ಇಲಾಖೆ ಅಡಿಯಲ್ಲಿ ಸರಿಯಾದ ತಿಳುವಳಿಕೆ, ಮಾರ್ಗದರ್ಶನ, ಸಂವಹನ ಮತ್ತು ರಾಜ್ಯಾದ್ಯಂತ ಏಕ ಪ್ರಕಾರದ ಮಾರ್ಗಸೂಚಿಗಳ ಅವಶ್ಯಕತೆ ಇದೆ. ಸರಕಾರದಿಂದ ಅನೇಕ – ಸಹಾಯ –ಸವಲತ್ತುಗಳ ಘೋಷಣೆಯಾಗಿದ್ದರೂ ಅವು ಸಂಘಗಳಿಗೆ ಸರಿಯಾದ ಸಮಯದಲ್ಲಿ ತಲುಪುವುದಿಲ್ಲ ಎಂಬ ಕೊರಗು ರೈತರಿಂದ ಪದೇ ಪದೇ ಕೇಳಿ ಬರುತ್ತಿರುವ ಹಿನ್ನೆಲೆಯಲ್ಲಿ ತ್ವರಿತ ಗತಿಯಲ್ಲಿ ಮಾಹಿತಿ ವಿಲೇವಾರಿ ಹಾಗೂ ಅನುದಾನ ಬಿಡುಗಡೆ ಕುರಿತು ಕಟ್ಟುನಿಟ್ಟಿನ ಕ್ರಮ ಜರುಗಿಸಬೇಕು.

೧೧.ಸಂಘಗಳ ಉತ್ತೇಜನಕ್ಕಾಗಿ ಉತ್ಕೃಷ್ಟಮಟ್ಟದ ಸಂಘಗಳಿಗೆ ರಾಜ್ಯ ಮಟ್ಟದ ಪ್ರಶಸ್ತಿ ಮತ್ತು ಪ್ರೋತ್ಸಾಹ ಧನಗಳನ್ನು ನೀಡುವ ಯೋಜನೆಯನ್ನು ಜಲ ಸಂಪನ್ಮೂಲ ಇಲಾಖೆ ಹಮ್ಮಿಕೊಳ್ಳಬಹುದು.

೧೨.**ಶಿವಸ್ವಾಮಿ ಸಮಿತಿ :** ರೈತರ ಸಹಭಾಗಿತ್ವದ ನೀರಾವರಿ ಪದ್ಧತಿ, ಕಾಡಾ, ವಾಲ್ಮಿ, ಧಾರವಾಡ ಹಾಗೂ ಕೆ.ಇ.ಆರ್.ಎಸ್. ಮೈಸೂರನ್ನು ಪುನಶ್ಚೇತನಕ್ಕಾಗಿ ಕಾಯ್ದೆಗೆ ಬದಲಾವಣೆಗಳನ್ನು ತರಲು ಶ್ರೀ ಶಿವಸ್ವಾಮಿಯವರ ಸಮಿತಿಯ ಶಿಫಾರಸ್ಸುಗಳು (೨೦೧೪) ಬಹು ಪ್ರಸ್ತುತವೆನಿಸುತ್ತವೆ. (ಲೇಖಕರು ಈ ಸಮಿತಿಯ ಸದಸ್ಯರಾಗಿರುವುದನ್ನು ಸ್ಮರಿಸಬಹುದು). ಸಮಿತಿಯ ಶಿಫಾರಸ್ಸುಗಳನ್ವಯ ನಿಗಮಗಳು, ಹೆಚ್ಚಿನ ಸಂಖ್ಯೆಯಲ್ಲಿ ಸಂಘಗಳನ್ನು ರಚಿಸುವುದು, ಈಗಾಗಲೇ ರಚಿಸಲ್ಪಟ್ಟ ಸಂಘಗಳನ್ನು ಪುನಶ್ಚೇತನಗೊಳಿಸುವುದು, ರಚನೆಯಾದ ಸಂಘಗಳನ್ನು ರೈತರಿಗೆ ನಿರ್ದಿಷ್ಟ ಸಮಯಾವಧಿಯಲ್ಲಿ ಹಸ್ತಾಂತರಿಸುವುದು, ಅಚ್ಚುಕಟ್ಟು ಪ್ರದೇಶದ ನೀರಾವರಿ ಕಾಮಗಾರಿಗಳನ್ನು ಸಂಘಗಳಿಗೆ ವಹಿಸಿಕೊಡುವುದು, ಸಂಘಗಳಿಗೆ ಮೂಲಭೂತ ಸೌಕರ್ಯಗಳನ್ನು ಹೊಂದಲು ಹೆಚ್ಚಿನ ಅನುದಾನವನ್ನು ನೀಡುವುದು, ಇವೇ ಮುಂತಾದವುಗಳಿವೆ. ಜೊತೆಗೆ ಜಲ ಸಂಪನ್ಮೂಲ ಇಲಾಖೆ, ನೀರು ಸರಬರಾಜು ವ್ಯವಸ್ಥೆಯಿಂದ ನೀರು ನಿರ್ವಹಣಾ ವ್ಯವಸ್ಥೆಗೆ ಮಾರ್ಪಾಡಾಗಬೇಕು ಮತ್ತು ನೀರಾವರಿ ಕೃಷಿಯ ಸಮಗ್ರ ಅಭಿವೃದ್ಧಿಗಾಗಿ ಕಾಡಾಗಳನ್ನು ಬಲಪಡಿಸಬೇಕು.




ಈ ಶಿಫಾರಸ್ಸುಗಳನ್ನು ಗಂಭೀರವಾಗಿ ಪರಿಗಣಿಸಿ ಆಡಳಿತಾತ್ಮಕ ಅನುಮೋದನೆ ದೊರೆತು ಸಂಘಗಳು ಸಬಲೀಕರಣಗೊಳ್ಳಬೇಕು. ಈ ನಿಟ್ಟಿನಲ್ಲಿ ಸರಕಾರ ಕೆಲವು ಕ್ರಮಗಳನ್ನು ಕೈಕೊಂಡಿದೆ. ಇನ್ನೂ ಕೆಲವು ಕ್ರಮಗಳನ್ನು ಕೈಕೊಳ್ಳುವ ಅವಶ್ಯಕತೆ ಇದೆ. ಸಂಘಗಳು ಆರ್ಥಿಕವಾಗಿ ಹಾಗೂ ಆಡಳಿತಾತ್ಮಕವಾಗಿ ಸದೃಢವಾಗಲು ಜಲ ಸಂಪನ್ಮೂಲ ಇಲಾಖೆಯಲ್ಲಿ ರೈತರ ಸಹಭಾಗಿತ್ವದ ನೀರಾವರಿ ನಿರ್ವಹಣೆ ಕುರಿತು ಒಂದು ವಿಶೇಷ ಕೋಶವನ್ನು ಪ್ರಾರಂಭಿಸಬಹುದು. ಕೋಶವು ಸಂಘಗಳ ಎಲ್ಲ ರೀತಿಯ ಆಗು – ಹೋಗುಗಳಿಗೆ ಸ್ಪಂದಿಸುತ್ತಾ "ಏಕ ಗವಾಕ್ಷಿ" ರೀತಿಯಲ್ಲಿ ಕಾರ್ಯ ನಿರ್ವಹಿಸಿದರೆ ಪ್ರಗತಿಯನ್ನು ಸಾಧಿಸಬಹುದು. ರಾಜ್ಯದಲ್ಲಿ ರೈತರ ಸಹಭಾಗಿತ್ವದ ನೀರಾವರಿ ಪದ್ಧತಿಯನ್ನು ಯಶಸ್ವಿಯಾಗಿ ಅನುಷ್ಠಾನಗೊಳಿಸಲು ವಾಲ್ಮಿ ಸಂಸ್ಥೆಗೆ ಈ ಜವಾಬ್ದಾರಿಯನ್ನು ನೀಡಬಹುದು.

ಇಂದು ಕರ್ನಾಟಕದ ಅಚ್ಚುಕಟ್ಟು ಪ್ರದೇಶಗಳಲ್ಲಿ ಹರಡಿರುವ ಸಾವಿರಾರು ಸಂಘಗಳ ಪದಾಧಿಕಾರಿಗಳು ಜವಾಬ್ದಾರಿಯನ್ನು ಹೊರಲು ಸನ್ನದ್ಧರಾಗಿದ್ದಾರೆ. ಅವರಿಗೆ ಸೂಕ್ತ ನೀರಾವರಿ ನಿರ್ವಹಣೆಯ ಅಗತ್ಯತೆಯ ಅರಿವು ಮೂಡಿದೆ. ಅಣೆಕಟ್ಟಿನಿಂದ ಕಾಲುವೆಗಳ ಮೂಲಕ ನೀರನ್ನು ಹರಿಸುವುದು ನಮ್ಮ ಅಂತಿಮ ಗುರಿ ಅಲ್ಲ, ಅದು ಮಾರ್ಗ ಮಾತ್ರ. ರೈತನ ಭೂಮಿಗೆ ನೀರೊದಗಿಸಿ ಕೃಷಿ ಉತ್ಪಾದನೆಯನ್ನು ಹೆಚ್ಚಿಸುವುದು ನಮ್ಮ ಪರಮ ಗುರಿ. ನೀರನ್ನು ಸಂರಕ್ಷಿಸಿ, ಸಂಗ್ರಹಿಸಿ, ಅದನ್ನು ಕಾಲುವೆಗಳ ಮುಖಾಂತರ ಹರಿಸುವ ಶ್ಲಾಘನೀಯ ಕಾರ್ಯವನ್ನು ನೀರಾವರಿ ಇಲಾಖೆ ನಿರ್ವಹಿಸಿದೆ. ಇದೀಗ ಭೂಮಿಗೆ ನೀರು ಹರಿಸಿ ಅತ್ಯುತ್ತಮ ಬೆಳೆ ಉತ್ಪಾದನೆ ತನ್ಮೂಲಕ ರೈತ ಕುಟುಂಬದ ಆದಾಯ ಹೆಚ್ಚಿಸುವುದು ಈ ಪದ್ಧತಿಯ ಮಹತ್ವದ ಉದ್ದೇಶವಾಗಿದೆ.

ರೈತರು, ಅಭಿಯಂತರರು ಮತ್ತು ಕೃಷಿ ವಿಜ್ಞಾನಿಗಳು ಕೈಜೋಡಿಸಿದಾಗ ಒಂದು ನಿರ್ವಹಣಾ ವ್ಯವಸ್ಥೆ ನಿರ್ಮಾಣವಾಗುತ್ತದೆ. ಈ ವ್ಯವಸ್ಥೆಗೆ ಸಹಕಾರ ಹಾಗೂ ಜಲ ಸಂಪನ್ಮೂಲ ಇಲಾಖೆಗಳ ಅಧಿಕಾರಿಗಳು ಹಾಗೂ ಜನ ಪ್ರತಿನಿಧಿಗಳ ಸಹಕಾರ ದೊರೆತರೆ ವ್ಯವಸ್ಥೆ ಮಾದರಿಯಾಗುವದರಲ್ಲಿ ಸಂಶಯ ಇಲ್ಲ. ವ್ಯವಸ್ಥೆ ಮೇಲೆ ವಿಶ್ವಾಸವಿರಿಸಿ ರೈತರ ಸಹಭಾಗಿತ್ವದ ಪದ್ಧತಿಯನ್ನು ಪ್ರೋತ್ಸಾಹಿಸುವುದು ಇಂದಿನ ಅವಶ್ಯಕತೆಯಾಗಿದೆ. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಇಂತಹ ಮಾದರಿಗಳು ವಿಶೇಷವಾಗಿ ಸಹಕಾರ ತತ್ವಗಳ ಮೇಲೆ ರಚಿತವಾದ ನೀರು ಬಳಕೆದಾರರ ಸಹಕಾರಿ ಸಂಘಗಳೇ ನಮ್ಮ ಮುಂದಿನ ದಾರಿ. "ಪ್ರಜಾತಾಂತ್ರಿಕ – ವಿಕೇಂದ್ರೀಕೃತ – ಸಮುದಾಯ ಆಧಾರಿತ – ಸಹಕಾರಿ ನೀರು ನಿರ್ವಹಣಾ ಪದ್ಧತಿಯೇ ನಮ್ಮ ಮುಂದಿರುವ ಸುವರ್ಣ ಮಾರ್ಗ.

*(ಈ ಲೇಖನದ ವಿಷಯಗಳು ಲೇಖಕರ ವೈಯಕ್ತಿಕ ಅಭಿಪ್ರಾಯಗಳು)*

**ಡಾ॥ ರಾಜೇಂದ್ರ ಪೋದ್ದಾರ**
ನಂ.೧೮, ಯಶಸ್ವಿನಿ, ಹಸಿರುಸಿರಿ ನಗರ, ಕೆಂಗೇರಿ ರಸ್ತೆ, ಧಾರವಾಡ–೮

# ವೈದಿಕೇತರ ಪರಂಪರೆಯ ಜನ್ಮಭೂಮಿ - ಕೋಲಾರ

- ಡಾ|| ಸಿ. ಎಸ್. ದ್ವಾರಕಾನಾಥ್

ಮೂಲತಃ ಕೋಲಾರ ವೈದಿಕೇತರ ಪರಂಪರೆಯ ಜನ್ಮಭೂಮಿ, ಆಂಧ್ರದ ವೇಮನ, ವೀರಬ್ರಹ್ಮಯ್ಯನವರೊಂದಿಗೆ ತಮಿಳುನಾಡಿನ ತಿರುವಳ್ಳುವರ್, ಅಯ್ಯನ್ ಕಾಳಿಯಂಥವರು ಈ ಜಿಲ್ಲೆಯ ಮೇಲೆ ಪ್ರಭಾವ ಬೀರಿದಂತೆ ಹದಿನೆಂಟನೇ ಶತಮಾನದ ದಾರ್ಶನಿಕ ಕವಿ ಕೈವಾರ ತಾತಯ್ಯ ಮತ್ತು ಅವರ ಪರಂಪರೆಯನ್ನು ಮುಂದುವರಿಸಿದ ಗಟ್ಟಹಳ್ಳಿ ಆಂಜನಪ್ಪ, ದಾದಿನಾಯಕನದೊಡ್ಡಿ ವೆಂಕಟಗಿರಿಯಪ್ಪ, ಬೇರಿಕಿ ಪುಟ್ಟಪ್ಪ ಸ್ವಾಮಿಗಳಂಥವರು ಇಲ್ಲಿನ ವೈದಿಕತ್ವಕ್ಕೆ ಪ್ರತಿರೋಧ ಒಡ್ಡುತ್ತಲೇ ಬಂದಿದ್ದರು. ಅತಿಹೆಚ್ಚು ಅಸ್ಪೃಶ್ಯರಿರುವ ಈ ಜಿಲ್ಲೆಯಲ್ಲಿ 'ಗಂಗಭಾರತ'ದಂತಹ ಪ್ರತಿರೋಧದ ಕಾವ್ಯಗಳು ಅಂತರಗಂಗೆಯಾಗಿ ಇಲ್ಲಿನ ಜನಪದರ ಸುಪ್ತಚೇತನದಲ್ಲಿ ಹರಿಯುತ್ತಲೇ ಇದ್ದವು. ಈ ಎಲ್ಲಾ ಹಿನ್ನೆಲೆಯೂ ಇಲ್ಲಿ ದಲಿತ ಚಳುವಳಿಯ ಬೆಳವಣಿಗೆಗೆ ಪರೋಕ್ಷವಾಗಿ ಬುನಾದಿಯಾಗಿತ್ತು! ಇದು ಚಳುವಳಿಗಳ ಬೀಡಾಗಲೂ ಇದೇ ಕಾರಣವಾಗಿತ್ತು.

**ಕೋ**ಲಾರ ಎಂಬ ಈ 'ದೊಡ್ಡಹಳ್ಳಿ'ಯ ಕಠಾರಿಪಾಳ್ಯ ಎಂಬ ಸಣ್ಣ 'ಹಟ್ಟಿ'ಯ ಒಂದು ಅವಿಭಕ್ತ ರೈತ ಕುಟುಂಬದಲ್ಲಿ ಹುಟ್ಟಿದವನು ನಾನು, ಮೊದಲ ತಲೆಮಾರಿನ ಅಕ್ಷರಸ್ಥ! ಶಾಲೆಗಳಿಗಿಂತಲೂ ಗರಡಿಮನೆಗಳೇ ಇರುವ ಪರಿಸರ! ಹೊಡೆದಾಟ, ಬಡಿದಾಟಗಳನ್ನೇ ಕಾಣುತ್ತಾ ಬೆಳೆದ ಬಾಲ್ಯ, ಹೈಸ್ಕೂಲ್ ಮೆಟ್ಟಿಲೇರುವವರೆಗೂ ಕಠಾರಿಪಾಳ್ಯವೇ ನನ್ನ ಜಗತ್ತು! ನಂತರದ ಆಕರ್ಷಣೆ ಉತ್ಕಟ ದೇಶಪ್ರೇಮ! ಆದ್ದರಿಂದಲೇ ಆರೆಸೆಸ್ ಸೇರಿದೆ, ಇಲ್ಲಿ ಇನ್ನೇನು ಲೀನನಾಗಿಬಿಡುತ್ತಿದ್ದೇನೇನೋ! ಅಷ್ಟರಲ್ಲಿ ನನಗೆ ಕೋಟಿಗಾನಹಳ್ಳಿ ರಾಮಯ್ಯ ಪರಿಚಿತರಾಗಿ ನನ್ನನ್ನು ಇಲ್ಲಿಂದ ಹೊರತಂದ ಗುರುಗಳವರು. ಇಲ್ಲಿಂದ ಮುಂದೆ ದಲಿತ ಚಳುವಳಿ, ಬಂಡಾಯ ಚಳುವಳಿ, ಕನ್ನಡ ಚಳುವಳಿ, ಅಹಿಂದ ಚಳುವಳಿಗಳ ನಂತರ ನನ್ನ ಪಯಣದ ಹಾದಿ ವಿವಿಧ ಮಜಲುಗಳನ್ನು ಪಡೆಯಿತು. ಇಂದು ಅನೇಕ ಕವಲು ದಾರಿಗಳು ನನ್ನ ಮುಂದಿವೆ...

"ಕನ್ನಡನಾಡು ಚಿನ್ನದಬೀಡು..." ಎಂದು ನಮ್ಮ ಕವಿವರ್ಯರು ಈ ನಾಡನ್ನು ವೈಭವೀಕರಿಸಿ ಹಾಡಿದ್ದು ನಮ್ಮ ಕೆ.ಜಿ.ಎಫ್.ನ ಭೂಗರ್ಭದಲ್ಲಿ ಅಡಗಿದ್ದ ಚಿನ್ನದ ನಿಕ್ಷೇಪವನ್ನು ಕಂಡೇ ಅಲ್ಲವೆ? ಈ ಮಾತನ್ನು ಸಾಕ್ಷೀಕರಿಸಲು ಅಸಂಖ್ಯಾತ ದಲಿತ, ಅಸ್ಪೃಶ್ಯ ಹಾಗೂ ತಮಿಳು ಭಾಷಿಕ ಕಾರ್ಮಿಕರು ಸಾವಿರ ಸಾವಿರ ಸಂಖ್ಯೆಯಲ್ಲಿ ಈ ಚಿನ್ನದ ಗಣಿಯಲ್ಲಿ ನೆತ್ತರು, ಬೆವರು ಸುರಿಸಿ ಇಲ್ಲೇ ಕಾಯಕ ಮಾಡುತ್ತಲೇ ಭೂಸಮಾಧಿಯಾದದ್ದು 'ಸಭ್ಯ' ಸಮಾಜದ ಅರಿವಿಗೆ ಬಾರದ, ಯಾರೂ ಬರೆಯದ ಇತಿಹಾಸ!

ಈ ಕಾರಣಕ್ಕೆ ನಮ್ಮಂಥವರು ಕನ್ನಡವನ್ನು ಬರೀ ಭಾಷೆಯನ್ನಾಗಿ ಮಾತ್ರ ನೋಡದೆ ಕನ್ನಡವನ್ನು ಬದುಕಾಗಿ ನೋಡುತ್ತೇವೆ. ಅಂತೆಯೇ ಕರ್ನಾಟಕವನ್ನು ಕೂಡ ಕೇವಲ ಮಣ್ಣಾಗಿ ನೋಡುವುದಿಲ್ಲ. ನಮ್ಮಲ್ಲಿನ ಕನ್ನಡ ಪ್ರಜ್ಞೆಯನ್ನು ರೂಪಿಸಿದ ರಾಷ್ಟ್ರಕವಿ ಕುವೆಂಪುರವರು ಹೇಳುವಂತೆ...

*ಕರ್ನಾಟಕ ಎಂಬುದೇನು*
*ಹೆಸರೆ ಬರಿಯ ಮಣ್ಣಿಗೆ*
*ಮಂತ್ರ ಕಣಾ! ಶಕ್ತಿ ಕಣಾ!*



*ತಾಯಿ ಕಣಾ! ಸಿಡಿಲು ಕಣಾ!*
*ಕಾವ ಕೊಲುವ ಒಲವ ಬಲವ*
*ಪಡೆದ ಚಲದ ಚಂಡಿ ಕಣಾ!*
*ಋಷಿಯ ಕಾಣ್ಬ ಕಣ್ಣಿಗೆ!*

ಕೋಲಾರ ಜಿಲ್ಲೆ ತ್ರಿಭಾಷಾ ನೆಲೆಯ ಜಿಲ್ಲೆಯಾದರೂ ಕನ್ನಡದ ಹೋರಾಟಕ್ಕೆ ಎಂದೂ ಹಿನ್ನಡೆಯಾಗಿದ್ದಿಲ್ಲ. ಸಂಸ್ಕೃತದ ಹೇರಿಕೆಯ ವಿರುದ್ಧ ಸಿಡಿದೆದ್ದ ಗೋಕಾಕ್ ಚಳುವಳಿಯ ಕಿಡಿ ಹಾರಿದ್ದೇ ಕೋಲಾರದಿಂದ! ನಮಗೆ ಭಾಷಾ ಹೋರಾಟದ ಸ್ಪಷ್ಟತೆಯಿತ್ತು. ನಮ್ಮ ಸೋದರ ಭಾಷೆಗಳ ಬಾಂಧವ್ಯದ ಬಗ್ಗೆ ಅರಿವಿದ್ದಂತೆಯೇ ಕನ್ನಡದ ಬೆಳವಣಿಗೆಗೆ ನಾನಾ ಕಾರಣಗಳಿಗಾಗಿ ಅಡ್ಡಿಯಾದ ಭಾಷೆಗಳ ಬಗ್ಗೆಯೂ ನಿರಂತರ ಎಚ್ಚರ ಇತ್ತು. ಸಂಸ್ಕೃತ ಎಂಬ ವೈದಿಕಶಾಹಿ, ಹಿಂದಿ ಎಂಬ ಸಾಮ್ರಾಜ್ಯಶಾಹಿ ಹಾಗೂ ಇಂಗ್ಲಿಷ್ ಎಂಬ ವಸಾಹತುಶಾಹಿ ಭಾಷೆಗಳ ಬಗ್ಗೆ ನಮಗೆ ಸ್ಪಷ್ಟ ನಿಲುವಿತ್ತು. ಈ ಕಾರಣದಿಂದಲೇ ನಾವು ಸಂಸ್ಕೃತದ ವಿರುದ್ಧ ಗಟ್ಟಿಯಾಗಿ ನಿಲ್ಲಲಿಕ್ಕೆ ಕಾರಣವಾಯಿತು. ಗೋಕಾಕ್ ಚಳುವಳಿಯ ಸಂದರ್ಭದ ಪೊಲೀಸ್ ಬಂಧನದಲ್ಲಿದ್ದಾಗಲೂ ಕೂಡ ನಾಳಿನ ಹೋರಾಟಕ್ಕೆ ಸಜ್ಜಾಗಲು ತೆಲುಗಿನಲ್ಲೇ ಚರ್ಚಿಸುತ್ತ ಕನ್ನಡ ಹೋರಾಟದಲ್ಲಿ ತೊಡಗಿಸಿಕೊಳ್ಳುತ್ತಿದ್ದ ಕನ್ನಡ ಚಳುವಳಿಗಾರರು ನೆನಪಾಗುತ್ತಿದ್ದಾರೆ.

**ಕಮ್ಯುನಿಸ್ಟ್ ಚಳುವಳಿ**

ಭಾಷಾ ಹೋರಾಟದೊಂದಿಗೆ ಸಾಮಾಜಿಕ ಹೋರಾಟಗಳು ನಮ್ಮಂಥವರನ್ನು ಸೆಳೆದಿದ್ದೂ ಕೂಡ ಕೋಲಾರದ ಹೋರಾಟದ ಪರಂಪರೆಯಿಂದಲೇ.

ಮೂಲತಃ ಕೋಲಾರ ವೈದಿಕೇತರ ಪರಂಪರೆಯ ಜನ್ಮಭೂಮಿ, ಆಂಧ್ರದ ವೇಮನ, ವೀರಬ್ರಹ್ಮಯ್ಯನವರೊಂದಿಗೆ ತಮಿಳುನಾಡಿನ ತಿರುವಳ್ಳುವರ್, ಅಯ್ಯನ್ ಕಾಳಿಯಂಥವರು ಈ ಜಿಲ್ಲೆಯ ಮೇಲೆ ಪ್ರಭಾವ ಬೀರಿದಂತೆ ಹದಿನೆಂಟನೇ ಶತಮಾನದ ದಾರ್ಶನಿಕ ಕವಿ ಕೈವಾರ ತಾತಯ್ಯ ಮತ್ತು ಅವರ ಪರಂಪರೆಯನ್ನು ಮುಂದುವರಿಸಿದ ಗಟ್ಟಳ್ಳಿ ಆಂಜನಪ್ಪ, ದಾದಿನಾಯಕನದೊಡ್ಡಿ ವೆಂಕಟಗಿರಿಯಪ್ಪ, ಬೇರಿಕಿ ಪುಟ್ಟಪ್ಪ ಸ್ವಾಮಿಗಳಂಥವರು ಇಲ್ಲಿನ ವೈದಿಕತ್ವಕ್ಕೆ ಪ್ರತಿರೋಧ ಒಡ್ಡುತ್ತಲೇ ಬಂದಿದ್ದರು. ಅತಿಹೆಚ್ಚು ಅಸ್ಪೃಶ್ಯರಿರುವ ಈ ಜಿಲ್ಲೆಯಲ್ಲಿ 'ಗಂಗಭಾರತ'ದಂತಹ ಪ್ರತಿರೋಧದ ಕಾವ್ಯಗಳು ಅಂತರಗಂಗೆಯಾಗಿ ಇಲ್ಲಿನ ಜನಪದರ ಸುಪ್ತಚೇತನದಲ್ಲಿ ಹರಿಯುತ್ತಲೇ ಇದ್ದವು. ಈ ಎಲ್ಲಾ ಹಿನ್ನೆಲೆಯೂ ಇಲ್ಲಿ ದಲಿತ ಚಳುವಳಿಯ ಬೆಳವಣಿಗೆಗೆ ಪರೋಕ್ಷವಾಗಿ ಬುನಾದಿಯಾಗಿತ್ತು! ಇದು ಚಳುವಳಿಗಳ ಬೀಡಾಗಲೂ ಇದೇ ಕಾರಣವಾಗಿತ್ತು.

ಕೋಲಾರದ ಕನಿಷ್ಠ ಒಂದು ಶತಮಾನದ ಸಾಹಿತ್ಯಿಕ ಪರಂಪರೆಯನ್ನೂ ಇಲ್ಲಿ ಗಮನಿಸಬೇಕು. ನಮ್ಮ ಜಿಲ್ಲೆಯ ಮಾಸ್ತಿಯವರನ್ನು ನನಗೆ ಪರಿಚಯಿಸಿದ್ದು ಲಂಕೇಶರೇ. ಒಮ್ಮೆ ನಾನು ಆಸ್ಪತ್ರೆಯಲ್ಲಿದ್ದಾಗ ನನಗೆ ಲಂಕೇಶರು ಮಾಸ್ತಿಯವರ ಸಮಗ್ರ ಕತೆಗಳನ್ನು ತಂದುಕೊಟ್ಟು ಓದಲು ಹೇಳಿದ್ದರು. ಆಗಲೇ ನನಗೆ ಸಣ್ಣಕತೆಗಳ ಒಂದು ಹೊಸ ಲೋಕ ನನ್ನ ಮುಂದೆ ತೆರೆದುಕೊಂಡಿದ್ದು. ಒಬ್ಬ ವಕೀಲನಾಗಿ ನನಗೆ "ಜ್ಯೋಗ್ಯೋರ ಆಂಜನಪ್ಪನ ಕೋಳಿ ಕತೆ" ಅನೇಕ ಪ್ರಕರಣಗಳಲ್ಲಿ ನೆನಪಿಗೆ ಬರುತ್ತಿರುತ್ತೆ. ಸಾಹಿತ್ಯದ ವಿದ್ಯಾರ್ಥಿ ಅಲ್ಲದ ನನಗೆ ಸಾಹಿತ್ಯ ಕೃತಿಯೊಂದು ಇಷ್ಟು ಬೇಗ ನನ್ನನ್ನು ಆವರಿಸಲು ಕಾರಣವಾದದ್ದು ಮಾಸ್ತಿಯವರ ಕತೆಗಳಲ್ಲಿನ ಪಾತ್ರಗಳು ನಮ್ಮ ಸುತ್ತಮುತ್ತಲಿನವೇ ಆಗಿರುವುದರಿಂದ. ಇನ್ನು ಡಿವಿಜಿಯವರ 'ಮಂಕುತಿಮ್ಮನ ಕಗ್ಗ' ಮತ್ತು 'ಉಮರನ ಒಸಗೆ' ನನ್ನಲ್ಲಿ ಹೊಸ ಹೊಳಹುಗಳನ್ನು ಹುಟ್ಟುಹಾಕಿದ ಕೃತಿಗಳು. ಮೂಲತಃ ವಿಜ್ಞಾನದ ವಿದ್ಯಾರ್ಥಿಯಾದ ನನಗೆ ಡಿವಿಜಿಗಿಂತಲೂ ಅವರ ಮಗ ಬಿ. ಜಿ. ಎಲ್. ಸ್ವಾಮಿಯವರ 'ಹಸಿರು ಹೊನ್ನು' ಇಷ್ಟ. ಇನ್ನು ಕೆ. ವಿ. ಐಯ್ಯರ್ ಅವರ 'ಶಾಂತಲಾ' ಮತ್ತು ಎಲ್. ಬಸವರಾಜುರವರ ವೈಚಾರಿಕತೆ ನನ್ನನ್ನು ಸೆಳೆದದ್ದರಲ್ಲಿ ಆಶ್ಚರ್ಯವಿಲ್ಲ. ಮೊದಲಿನಿಂದಲೂ ನಾನು ಹೋರಾಟದ ಹಿನ್ನೆಲೆಯಿಂದಲೇ ಬಂದ ಪರಿಣಾಮ ನನ್ನ ಸಾಹಿತ್ಯಿಕ ಓದು ಕೂಡ ಹೋರಾಟದ ನೆಲೆಯಿಂದಲೇ ಬಂದ ಕೃತಿಗಳ ಮೇಲೆ ಅವಲಂಬಿಸಿತು.

**ಕಮ್ಯುನಿಸಂ**

ಕರ್ನಾಟಕದಲ್ಲಿ ಕಮ್ಯುನಿಸ್ಟ್ ಹೋರಾಟದ ಮೊದಲ ದನಿ ಮೊಳಗಿದ್ದೇ ಕೋಲಾರದಿಂದ. ಅಂತೆಯೇ ಬಾಬಾಸಾಹೇಬ ಅಂಬೇಡ್ಕರ್‌ರವರು ಕಟ್ಟಿದ ಆರ್.ಪಿ.ಐ. ಚಳುವಳಿಯೂ ಕೂಡ ಪ್ರಭಾವಶಾಲಿಯಾಗಿದ್ದದ್ದು ಇಲ್ಲಿಯೇ. ಈ ಎರಡೂ ಪಕ್ಷಗಳು ವಿಧಾನಸಭೆಗೆ ತಮ್ಮ ಶಾಸಕರನ್ನು ಆರಿಸಿ ಕಳಿಸಿದ್ದು ಕೆ.ಜಿ.ಎಫ್.ನಿಂದಲೇ. ಇದರೊಂದಿಗೆ ಜಿಲ್ಲೆಯ ಇತರೆಡೆ ಕೆಂಬಾವುಟ ಹಾರಾಡಿದ್ದು ಕೂಡ ರಾಜ್ಯದಲ್ಲೇ ಮೊದಲೆನಿಸುತ್ತದೆ. ನಾವು ವಯೋಮಾನಕ್ಕೆ ಬಂದು ಕಣ್ಣು ತೆರೆಯುವಷ್ಟರ ವೇಳೆಗೆ ಪಿ. ವೆಂಕಟಗಿರಿಯಪ್ಪನವರ ನೇತೃತ್ವದಲ್ಲಿ ನಡೆದ 'ಇನಾಂ ಅಬಾಲಿಷನ್ ಚಳುವಳಿ' ಅಂತ್ಯವಾಗಿ ಇದರ ಪರಿಣಾಮ 'ಇನಾಂ ಅಬಾಲಿಷನ್ ಕಾಯ್ದೆ' ಜಾರಿಗೆ ಬಂದಿತ್ತು. ಸಾಗರದ ಶಾಂತವೇರಿ ಗೋಪಾಲಗೌಡರು ಮತ್ತು ನಮ್ಮ ವೆಂಕಟಗಿರಿಯಪ್ಪನವರು ಸಮಕಾಲೀನರು ಮತ್ತು ಆಪ್ತರು, ಶಾಂತವೇರಿಯವರ ಕಾಗೋಡು ಸತ್ಯಾಗ್ರಹ ನಡೆದದ್ದೂ ಇದೇ ಕಾಲಘಟ್ಟದಲ್ಲೇ. ನಂತರ ನಮ್ಮ ಕಣ್ಣಿಗೆ ಬಿದ್ದಿದ್ದೇ ದಲಿತ ಚಳುವಳಿ. ಕರ್ನಾಟಕದಲ್ಲೇ ದಲಿತ ಚಳುವಳಿ ಅತ್ಯಂತ ಪ್ರಭಾವಶಾಲಿಯಾಗಿದ್ದದ್ದು ಕೋಲಾರ ಜಿಲ್ಲೆಯಲ್ಲಿಯೇ. ಆ ಕಾಲಘಟ್ಟದಲ್ಲಿ ಅಂಬೇಡ್ಕರ್ ಸಾಹಿತ್ಯ ಸಮರ್ಪಕವಾಗಿ ತಲುಪಿರಲಿಲ್ಲ. ಆದ್ದರಿಂದ ಡಾ॥ ಅಂಬೇಡ್ಕರ್ ಅಷ್ಟಾಗಿ ಪರಿಚಯವಿಲ್ಲದ ಕಾರಣಕ್ಕೆ ದಲಿತ ಚಳುವಳಿ ಸೈದ್ಧಾಂತಿಕವಾಗಿ ಆಧಾರಪಟ್ಟಿದ್ದೂ ಕೂಡ ಕಮ್ಯುನಿಸಂ, ಲೋಹಿಯಾಯಿಸಂ ಮತ್ತು



ಆಂಧ್ರದಿಂದ ನಮಗೆ ಹತ್ತಿರವಾದ ಮಾರ್ಕ್ಸಿಸ್ಟ್ – ಲೆನಿನಿಸಂಗಳ ಮೇಲೆಯೇ! ಸ್ವಲ್ಪ ಹೆಚ್ಚುಕಡಿಮೆ ಅದೇ ಕಾಲಘಟ್ಟದಲ್ಲಿ ಪಕ್ಕದ ತಮಿಳುನಾಡಿನಲ್ಲಿ ಜನ್ಮತಳೆದ ದ್ರಾವಿಡ ಚಳುವಳಿ ನಮ್ಮ ಮೇಲೆ ಹೆಚ್ಚು ಪ್ರಭಾವ ಬೀರಿದ್ದಿದ್ದರೆ ದಲಿತ ಚಳುವಳಿ ಆಗಲೇ ಪೊಲಿಟಿಸೈಸ್ ಆಗಿರುತಿತ್ತೇನೋ. ಯಾಕೆಂದರೆ ಭಾಷಾ ಚಳುವಳಿಯೊಂದು ತಮಿಳರ ಆತ್ಮಗೌರವದ ಚಳುವಳಿಯಾಗಿ ಮಾರ್ಪಾಟಾಗಿ ನಂತರ ಪೆರಿಯಾರರ ದ್ರಾವಿಡ ರಾಜಕೀಯ ಸಿದ್ಧಾಂತವನ್ನು ಗಟ್ಟಿಯಾಗಿ ಪ್ರತಿಪಾದಿಸುತ್ತಾ, ಹಿಂದಿ ಪ್ರದೇಶದಿಂದ ಬಂದ ವೈದಿಕ ಮೂಲದ ರಾಜಕೀಯ ಪಕ್ಷಗಳನ್ನು ಬೇರು ಸಮೇತ ಕಿತ್ತುಹಾಕಿದ ಇತಿಹಾಸ ರೂಪಿಸಿದ ದ್ರಾವಿಡ ಚಳುವಳಿ ಆಗ ನಮಗೆ ಕಾಣಲಿಲ್ಲ! "ಶಾಸನ ರೂಪಿಸುವ ಜಾಗಕ್ಕೆ ನಾವು ಹೋಗದ ಹೊರತು ನಮ್ಮ ಸಮಸ್ಯೆಗಳು ಪರಿಹಾರ ಕಾಣಲ್ಲ" ಎಂಬ ಡಾ॥ ಅಂಬೇಡ್ಕರ್‌ರವರ ಮಾತು ದಲಿತ ಚಳುವಳಿಗೆ ತಲುಪುವಷ್ಟರಲ್ಲಿ ಚಳುವಳಿ ತನ್ನ ಪ್ರಖರತೆಯನ್ನು ಕಳೆದುಕೊಂಡು ವಿಭಜನೆಯಾಗಿತ್ತು! ಆದರೆ ದಲಿತ ಚಳುವಳಿ ಕೊಟ್ಟ ಆತ್ಮವಿಶ್ವಾಸ, ಅರಿವು ಮತ್ತು ಪ್ರಜ್ಞೆ ಎಲ್ಲವೂ ನನ್ನ ಅರಿವಿನಲ್ಲಿ ಜಾಗೃತವಾಗೇ ಇದೆ. ಈ ಹಿನ್ನೆಲೆ ಅರಿತೇ ನಾನು ಈ ಮಾತುಗಳನ್ನು ಆಡುತ್ತಿದ್ದೇನೆ. ಹಾಗೇನಾದರೂ ದಲಿತ ಚಳುವಳಿ ಪೊಲಿಟಿಸೈಸ್ ಆಗಿದ್ದು, ದಲಿತರಿಗೆ ಅಧಿಕಾರ ದಕ್ಕಿದ್ದಿದ್ದರೆ, ಅದರಲ್ಲೂ ಹೋರಾಟದಿಂದ ಬಂದ ಪ್ರಜ್ಞಾವಂತ ದಲಿತರಿಗೆ ರಾಜ್ಯಾಧಿಕಾರ ಸಿಕ್ಕಿದ್ದರೆ ಕಂಬಾಲಪಲ್ಲಿ, ಬಿಲ್ಲಾಂಡ್ಲಪಲ್ಲಿ, ನಾಗಲಾಪಲ್ಲಿಯಂತಹ ಘಟನೆಗಳು ಘಟಿಸುತ್ತಲೇ ಇರಲಿಲ್ಲವೇನೋ ಅಥವಾ ಇದು ನನ್ನ ಆಶಯವೋ ಏನೋ...

ಇದೇ ಸಂದರ್ಭದಲ್ಲೇ ಹಿಂದುಳಿದ ವರ್ಗಗಳ ಸಂಘಟನೆಯ ಅವಶ್ಯಕತೆ ಕೂಡ ನಮಗೆ ಅವಶ್ಯಕ ಎನಿಸಿದ್ದು. "ಹಿಂದುಳಿದ ವರ್ಗಗಳ ಸಮರಶೀಲ ಒಕ್ಕೂಟ"ದಂತಹ ಸಂಘಟನೆ ಕಟ್ಟಿಕೊಂಡು ಸೈಕಲ್ ಹೊಡೆದದ್ದೂ ಆಗಲೇ. ನಮ್ಮ ಮೇಲೆ ಆಂಧ್ರದ ನಕ್ಸಲ್ ಚಳುವಳಿ, ತಮಿಳುನಾಡಿನ ದ್ರಾವಿಡ ಚಳುವಳಿ, ಮಹಾರಾಷ್ಟ್ರದ ದಲಿತ ಪ್ಯಾಂಥರ್ಸ್ ಚಳುವಳಿಗಳು ಒಂದಲ್ಲ ಒಂದು ರೀತಿಯಲ್ಲಿ ಪ್ರಭಾವ ಬೀರಿದ್ದವು. ಅಂತೆಯೇ ಮಾರ್ಕ್ಸ್, ಮಾವೋ, ಲೆನಿನ್, ಕೋವೂರ್, ಪೆರಿಯಾರ್, ಗಾಂಧಿ, ಲೋಹಿಯಾಗಳೂ ಕೂಡ ನಮ್ಮ ವಯೋಮಾನಕ್ಕೆ ತಕ್ಕಂತೆ ಅಸ್ಪಷ್ಟವಾಗಿ ಪ್ರಭಾವ ಬೀರಿದ್ದವು. ನಂತರದ ಕಾಲಘಟ್ಟದಲ್ಲಿ ನನ್ನಂಥವನಿಗಂತೂ ಅಂಬೇಡ್ಕರ್ ಓದುವವರೆಗೂ ಒಂದು ಸೈದ್ಧಾಂತಿಕ ಸ್ಪಷ್ಟತೆ ಬಂದೇ ಇರಲಿಲ್ಲ.

ಮತ್ತೊಂದು ದುರಂತಮಯ ಸಂಗತಿಯೆಂದರೆ ಆಗಿನ ನಮ್ಮ ಕಾಲಘಟ್ಟದಲ್ಲಿ ಅಂದಿನ ಪ್ರಸಕ್ತ ರಾಜಕೀಯ ಪಕ್ಷಗಳಲ್ಲಿದ್ದರೂ ಪ್ರಗತಿಪರ ಕಾಳಜಿಗಳನ್ನು ಹೊಂದಿದ್ದ ಮತ್ತು ಅಭಿವೃದ್ಧಿಯ ಕನಸುಗಳನ್ನು ಕಾರ್ಯರೂಪಕ್ಕೆ ತರಲು ಪ್ರಾಮಾಣಿಕವಾಗಿ ಹೆಣಗಾಡುತ್ತಿದ್ದ ರಾಜಕಾರಣಿಗಳ ಪರಂಪರೆ ನಮ್ಮ ಕಣ್ಣಮುಂದೆಯೇ ಕಾಲ ಗರ್ಭದಲ್ಲಿ ಕರಗಿಹೋಗಿದ್ದು! ನಮ್ಮ ಜಿಲ್ಲೆಯ ಕೆ. ಸಿ. ರೆಡ್ಡಿಯವರು ಮೈಸೂರು ರಾಜ್ಯದ ಮೊಟ್ಟಮೊದಲ ಮುಖ್ಯಮಂತ್ರಿಯಾಗಿದ್ದರೂ ಅದಾಗತಾನೇ ಸ್ವಾತಂತ್ರ್ಯ ಪಡೆದ ದೇಶದ ರಾಜ್ಯವೊಂದರಲ್ಲಿ ಅವರಿಗೆ ಅವರದೇ ಆದ ಸಮಸ್ಯೆಗಳು, ಸವಾಲುಗಳೂ ಇದ್ದವು. ಮಿಕ್ಕಂತೆ ಅಪಾರ ಜನಕಾಳಜಿಯಿದ್ದ ಎಂ. ವಿ. ಕೃಷ್ಣಪ್ಪ, ಟಿ. ಚನ್ನಯ್ಯ, ಕೆ. ಪಟ್ಟಾಭಿರಾಮನ್, ಬಿ. ಎಲ್. ನಾರಾಯಣಸ್ವಾಮಿ, ಗಂಗಿರೆಡ್ಡಿ, ಅಪ್ಪಸ್ವಾಮಿರೆಡ್ಡಿ, ವಾಸನ್, ನರಸಿಂಹನ್, ಪಿ. ವೆಂಕಟಗಿರಿಯಪ್ಪ, ಸಿ. ವಿ. ವೆಂಕಟರಾಯಪ್ಪ, ಲಕ್ಷ್ಮೀಪತಿ, ಸಿ. ಭೈರೇಗೌಡ, ರಶೀದ್‌ಸಾಬ್, ಅಬ್ದುಲ್ ಲತೀಫ್, ಆರ್. ವೆಂಕಟರಾಮಯ್ಯ, ಕೆ. ಎಂ. ಕೃಷ್ಣಾರೆಡ್ಡಿಯಂಥ ರಾಜಕಾರಣಿಗಳು ತಮ್ಮ ಮಿತಿಗಳಲ್ಲೇ ಕೆಲಸ ಮಾಡಿ ಕ್ರಮೇಣ ಕಣ್ಮರೆಯಾದದ್ದು ದುರಂತ ! ಈ ಎಲ್ಲಾ ಮಿತಿಗಳಲ್ಲೂ ಇವರು ಕೊಟ್ಟು ಹೋದುದನ್ನು ಮರೆಯುವಂತಿಲ್ಲ.

ಪ್ರಗತಿಯ ಕಲ್ಪನೆ, ಆಲೋಚನೆಗಳಿಲ್ಲದ ಇಂದಿನ ರಾಜಕಾರಣದ ಅಭಾವ ನಮ್ಮ ಅಭಿವೃದ್ಧಿಯ ಹಿನ್ನಡೆಗೆ ಕಾರಣವಾಗಿದೆ ಎಂದರೆ ತಪ್ಪಾಗಲಾರದು! ಬೆಂಗಳೂರೆಂಬ ರಾಜಧಾನಿಗೆ ನಾವು ಕೇವಲ ೬೫ ಕಿ.ಮೀ. ದೂರದಲ್ಲಿದ್ದರೂ ಅಭಿವ್ಯಕ್ತಿಯ ದೃಷ್ಟಿಯಿಂದ ಈ ಜಿಲ್ಲೆ ಬೆಂಗಳೂರಿಗೆ ಸಹಸ್ರಾರು ಮೈಲಿ ದೂರದಲ್ಲಿದ್ದಂತಿದೆ. ದಲಿತರು, ಹಿಂದುಳಿದವರು, ಅಲ್ಪಸಂಖ್ಯಾತರೇ ಮುಂತಾದ ರೈತಾಪಿ ಜನ ತಮ್ಮ ಕುಲವೃತ್ತಿಗಳನ್ನು ಕಳಕೊಂಡು ಬರಿಗೈಯಾಗಿರುವ ಈ ಕಾಲಘಟ್ಟದಲ್ಲಿ ಈ ಜಿಲ್ಲೆಗೆ ಯಾವುದೇ ಅಭಿವೃದ್ಧಿಯ ಯೋಜನೆಗಳು ಬಾರದಿರುವುದು, ತಾರದಿರುವುದು ಇಲ್ಲಿನ ರಾಜಕಾರಣ ಸೋತಿರುವುದರ, ಪಂಚೇಂದ್ರಿಯಗಳನ್ನು ಕಳೆದುಕೊಂಡಿರುವುದರ ಸಂಕೇತ.

**ಚಿನ್ನದ ಬೀಡು**

ಕೋಲಾರದ ಚಿನ್ನದ ಗಣಿ ತನ್ನ ೧೨೧ ವರ್ಷಗಳ ಇತಿಹಾಸದಲ್ಲಿ ಬ್ರಿಟನ್ನಿನ ಜಾನ್ ಟೇಲರ್ ಕಂಪನಿಗೆ, ಭಾರತ ಸರ್ಕಾರಕ್ಕೆ, ಮೈಸೂರು ಸರ್ಕಾರಕ್ಕೆ ಬಗೆದು ಕೊಟ್ಟ ಚಿನ್ನವೆಷ್ಟು? ಐವತ್ತಕ್ಕೂ ಹೆಚ್ಚು ಮಿಲಿಯನ್ ಟನ್ನಿನಷ್ಟು ಅದಿರು ಹೊರತೆರೆಯಲು ಎಂಟು ಸಾವಿರ ಮೀಟರ್ ಭೂಮಿಯ ಆಳದಲ್ಲಿ ೧೩೧°F ಬಿಸಿಯಲ್ಲಿ ಬೆಂದ ಕಾರ್ಮಿಕರು ತಾವೇ ಸುಟ್ಟು ಕರಕಲಾಗಿ ಸುಮಾರು ೮೩೦ ಟನ್ನಿನಷ್ಟು ಬಂಗಾರವನ್ನು ಬಗೆದುಕೊಟ್ಟಿದ್ದಾರೆ!! ಆದರೆ ಜಾನ್ ಟೇಲರ್ ಕಂಪೆನಿ, ಭಾರತ ಸರ್ಕಾರ ಮತ್ತು ಮೈಸೂರು ಸರ್ಕಾರ ಕೋಲಾರಕ್ಕೆ, ಇಲ್ಲಿನ ಕಾರ್ಮಿಕರಿಗೆ ಕೊಟ್ಟಿದ್ದೇನು...? ಒಂದು ಕಾಲದಲ್ಲಿ ಕೆ.ಜಿ.ಎಫ್.ನ ರಸ್ತೆ ಬದಿ ಬೋಗನ್ ವಿಲ್ಲಾ ಹೂವುಗಳು ನಳನಳಿಸುತ್ತಿದ್ದವು ಇಂದು ಆ ಜಾಗದಲ್ಲಿ ಲಂಟಾನ ಗಿಡಗಳು, ಪಾರ್ಥೇನಿಯಂ ಪೊದೆಗಳು

ಮೊಳೆತಿವೆ! ಒಂದು ಕಾಲದಲ್ಲಿ ಬ್ರಿಟಿಷ್ ಬಂಗಲೆಗಳು ಕೆ.ಜಿ.ಎಫ್.ಅನ್ನು 'ಲಿಟಲ್ ಇಂಗ್ಲೆಂಡ್' ಎಂದು ಬಿಂಬಿಸುತ್ತಿದ್ದವು, ಇಂದು ಇಡೀ ಕೆ.ಜಿ.ಎಫ್. ಪಾಳುಬಿದ್ದ ಕೊಂಪೆಯಾಗಿದೆ! ೨೦೦೧ರಲ್ಲಿ ಗಣಿಯನ್ನು ಪೂರ್ಣವಾಗಿ ಮುಚ್ಚಿದಾಗ ೩೮೦೦ ಕಾರ್ಮಿಕ ಕುಟುಂಬಗಳು ಬೀದಿಗೆ ಬಿದ್ದವು! ಚಿನ್ನ ಬಾಚಿದವರ ಕೈಗೆ ಕೆಲಸವಿಲ್ಲದಾಗ ಅನ್ನಕ್ಕಾಗಿ ಪರದಾಡುತ್ತಾ ಹಸಿವು ತಾಳಲಾರದೆ ತುತ್ತು ಅನ್ನಕ್ಕಾಗಿ ಅನಿರೀಕ್ಷಿತವಾಗಿ ಮಾಡಿದ ಕೆಲಸವನ್ನು ನಮ್ಮ 'ಸಭ್ಯ' ಸಮಾಜ 'ಕಾರ್ಮಿಕರ ಅಪರಾಧ ಚಟುವಟಿಕೆ' ಎನ್ನತೊಡಗಿತು! ಈಗ ಈ ಕಾರ್ಮಿಕರು ಕೇವಲ ಬಡತನವೇ ಅಲ್ಲ, ಕ್ರಿಮಿನಲ್ ಕೇಸುಗಳ ಚಕ್ರವ್ಯೂಹದಲ್ಲಿ ಸಿಕ್ಕಿ ಕಂಗಾಲಾಗಿದ್ದಾರೆ! ಸಿಲಿಕೋಸಿಸ್, ಕ್ಷಯ, ಅಂಗವಿಕಲತೆ, ಪೌಷ್ಟಿಕ ಆಹಾರದ ಕೊರತೆ ಮತ್ತು ಭೀಕರ ಕಾಯಿಲೆ ಕಸಾಲೆಗಳಲ್ಲಿ ನಲುಗಿ ಜೀವಚ್ಛವಗಳಾಗಿದ್ದಾರೆ!

ಇಂದು ಕೆ.ಜಿ.ಎಫ್.ನಲ್ಲಿ ಸಾವಿರಾರು ಎಕರೆ ಸರ್ಕಾರಿ ಭೂಮಿಯಿದೆ, ನೆಲದ ಆಳದಲ್ಲಿ ಒಂದು ಜಲಸಾಗರವೇ ಇದೆ, ಮೈಮುರಿದು, ಬೆವರ ಬಸಿದು ದುಡಿಯಲು ಅಸಂಖ್ಯಾತ ಕಾರ್ಮಿಕರಿದ್ದಾರೆ. ಅಂದು ಮೈಸೂರು ರಾಜ್ಯಕ್ಕೆ ವಿದ್ಯುತ್ ಬಂದಾಗ ಅದನ್ನು ಮೊದಲಿಗೆ ಕೋಲಾರದ ಚಿನ್ನದ ಗಣಿಗೆ ನೀಡಿದವರು ನಾಲ್ವಡಿ ಕೃಷ್ಣರಾಜ ಒಡೆಯರ್ ಅವರು. ಶರಾವತಿಯಿಂದ ಕೆ.ಜಿ.ಎಫ್.ಗೆ ನೇರ ವಿದ್ಯುತ್ ಸಂಕರ್ಪವಿದೆ ಇದರಿಂದಾಗಿ ಸಾಕಷ್ಟು ವಿದ್ಯುತ್ ಕೂಡ ಇಲ್ಲಿದೆ, ಆದರೆ ಇದನ್ನು ಬಳಸಿಕೊಂಡು ಒಂದು ಬೃಹತ್ ಕೈಗಾರಿಕೆಯನ್ನು ತರುವ ರಾಜಕೀಯ ಇಚ್ಛಾಶಕ್ತಿಯೇ ನಮ್ಮ ರಾಜಕಾರಣಿಗಳಿಗೆ ಇಲ್ಲ! ಯಾವುದೇ ಬೃಹತ್ ಕಾರ್ಖಾನೆ ಬರಲು ಕೆ.ಜಿ.ಎಫ್. ಪ್ರಶಸ್ತವಾದ ಸ್ಥಳ. ನಮ್ಮ ರಾಜಕಾರಣಿಗಳಿಗೆ ಕನಿಷ್ಠ ಕಾಳಜಿ ಇದ್ದಿದ್ದರೆ ಇಂದು ಕೆ.ಜಿ.ಎಫ್. ಸ್ಮಶಾನದಂತಿರುತ್ತಿರಲಿಲ್ಲ!

ಇಲ್ಲಿ ಬಹುತೇಕ ಬೀದಿಗೆ ಬಿದ್ದ ಕಾರ್ಮಿಕರು ಅಸ್ಪೃಶ್ಯರು, ದಲಿತ ಸಮುದಾಯಕ್ಕೆ ಸೇರಿದವರು, ಈ ಕಾರಣಕ್ಕೂ ಇಲ್ಲಿಗೆ ಅಭಿವೃದ್ಧಿಯ ಹಾದಿಗಳು ತೆರೆದುಕೊಳ್ಳುತ್ತಿಲ್ಲವೇನೋ ಎನಿಸುತ್ತೆ. ಈ ದೇಶದಲ್ಲಿ ಅಭಿವೃದ್ಧಿ ಕೂಡ ಜಾತಿಯ ಜಾಡು ಹಿಡಿದು ಹೋಗುತ್ತೇನೋ ಅನಿಸುತ್ತೆ! ಕೆ.ಜಿ.ಎಫ್. ಎಂದರೆ ಕೇವಲ ಚಿನ್ನವಷ್ಟೇ ಅಲ್ಲ, ಅಲ್ಲಿ ದೇಶಕ್ಕಾಗಿ ಪ್ರಾಣತ್ಯಾಗ ಮಾಡಿದ ಬಾಪ್ಪಾ ಅಂಥವರ ಕತೆಗಳೂ ಇವೆ. ಎರಡನೇ ವರ್ಲ್ಡ್ ವಾರ್‌ನಲ್ಲಿ ಭಾರತದ ಸೈನ್ಯದಲ್ಲಿದ್ದು ಶತ್ರುಗಳೊಡನೆ ಹೋರಾಡಿ ಎರಡೂ ಕಾಲುಗಳಲ್ಲಿ ಹತ್ತಾರು ಗುಂಡಿನ ತೂತುಗಳನ್ನು ಹೊಂದಿದ್ದ ಪುಷ್ಪನಾಥನ್ ಎಂಬ ಪರಮವೀರ ಚಕ್ರಪಡೆದ ಅಸ್ಪೃಶ್ಯ ಸೈನಿಕನ ಬಗ್ಗೆ ನಾನೇ ಆಗ ಲಂಕೇಶ್ ಪತ್ರಿಕೆಯಲ್ಲಿ ಬರೆದಿದ್ದೆ. ಹೀಗೆ ಹೇಳುತ್ತಾ ಹೋದರೆ ಇದನ್ನು ಕೊನೆಗಾಣಿಸುವುದು ಕಷ್ಟ, ಅದಿರಲಿ...

ಅಂದು ಟಿಪ್ಪು ಎಂಬ ದೂರದರ್ಶಿತ್ವದ ಮೈಸೂರಿನ ಸುಲ್ತಾನ, ನಮ್ಮ ಜಿಲ್ಲೆಯಲ್ಲಿ ಹುಟ್ಟಿದ ಹೈದರಾಲಿಯ ಮಗ, ಅಂದು ಪರ್ಷಿಯಾದಿಂದ ರೇಷ್ಮೆ ತಂದ ಪರಿಣಾಮ ಇಂದು ಇನ್ನೂರ ಐವತ್ತು ವರ್ಷಗಳ ನಂತರವೂ ಸಹಸ್ರಾರು ಕುಟುಂಬಗಳು ರೇಷ್ಮೆಯಿಂದ ಅನ್ನ ತಿನ್ನುತ್ತಿವೆ. ಸುಮಾರು ನಾಲ್ಕು ದಶಕಗಳ ಹಿಂದೆ ಮತ್ತೊಬ್ಬ ಜನಪರ ರಾಜಕಾರಣಿ ಎಂ. ವಿ. ಕೃಷ್ಣಪ್ಪನವರು ಹೈನುಗಾರಿಕೆ ತಂದ ಪರಿಣಾಮ ಇಂದು ಅಸಂಖ್ಯಾತ ರೈತ ಕುಟುಂಬಗಳು ಹಾಲು ಮಾರಿ ಜೀವನ ಮಾಡುತ್ತಿವೆ. ಅದೇ ರೀತಿ ಅಂದು ಟಿ. ಚೆನ್ನಯ್ಯನವರು ಕೋಲಾರಕ್ಕೆ ಕುಡಿಯಲು ನೀರು ಕೊಟ್ಟಿದ್ದನ್ನು ನಾವಿಂದು ಮರೆತಿದ್ದೇವೆ. ಯಾಕೋ ನಿಯತ್ತು ನಮ್ಮಿಂದ ದೂರವಾಗುತ್ತಿದೆ!

ರಾಮಕೃಷ್ಣ ಹೆಗಡೆ ಸರ್ಕಾರದಲ್ಲಿ ಮುಖ್ಯ ಸಚೇತಕರಾಗಿದ್ದ ಇದೇ ಕೆ.ಜಿ.ಎಫ್.ನ ಎಮ್. ಸಿ. ಪೆರುಮಾಳ್ ಅವರು ಕೋಲಾರ ಜಿಲ್ಲೆಯಲ್ಲಿ ಸಿಗುವ ಸಂಪನ್ಮೂಲಗಳನ್ನು ಬಳಸಿ ಏನೆಲ್ಲಾ ಅಭಿವೃದ್ಧಿಯ ಕೆಲಸಗಳನ್ನು ಮಾಡಬಹುದು ಎಂದು ಒಂದು ವಿಶೇಷ ವರದಿಯೊಂದನ್ನು ಸರ್ಕಾರಕ್ಕೆ ಕೊಟ್ಟಿದ್ದರು. ಶ್ರೀನಿವಾಸಪುರದ ಮಾವು, ಸುಣ್ಣಕಲ್ಲು, ಮಾಲೂರಿನ ತರಕಾರಿ, ಹೂವು, ಹೆಂಚು, ಇಟ್ಟಿಗೆ, ಕೋಲಾರದ ಕಂಬಳಿ, ನಮ್ಮ ನೀರಿಲ್ಲದ ನೆಲದಲ್ಲಿ ಬೆಳೆಯುವ ರಾಗಿ, ಅವರೆ, ಹುರುಳಿ ಮುಂತಾಗಿ ಸಿಗುವ ಲಭ್ಯ ಸಂಪನ್ಮೂಲಗಳನ್ನು ಹೇಗೆ ಆರ್ಥಿಕವಾಗಿ ಅಭಿವೃದ್ಧಿಪಡಿಸಬಹುದೆಂದು ಕೊಟ್ಟ ವರದಿಯ ಬಗ್ಗೆ ನಾನು ಆಗ 'ಲಂಕೇಶ್ ಪತ್ರಿಕೆ'ಯಲ್ಲಿ ಬರೆದಿದ್ದೆ. ಅದೇ ಸಂದರ್ಭದಲ್ಲಿ

ಸಿ. ಭೈರೇಗೌಡರು ಸರ್ಕಾರದಿಂದ ಒಂದು ಬೃಹತ್ ಪ್ರಮಾಣದ ಮಾವಿನ ಹಣ್ಣಿನ ಪ್ರೊಸೆಸಿಂಗ್ ಘಟಕವನ್ನು ಶ್ರೀನಿವಾಸಪುರದಲ್ಲಿ ಹಾಕಬೇಕೆಂದು, ಮಾವು, ಟೊಮ್ಯಾಟೊ, ಆಲೂಗಡ್ಡೆಯನ್ನು ಸಂಗ್ರಹಿಸಿ ಅವನ್ನು ಶೈತ್ಯೀಕರಣದಲ್ಲಿಟ್ಟು, ಅವಕ್ಕೆ ಬೆಲೆ ಬಂದಾಗ ಮಾರಿದರೆ ರೈತರಿಗೆ ತಾವು ಕಷ್ಟಪಟ್ಟು ಬೆಳೆದ ಬೆಳೆಗೆ ನ್ಯಾಯಯುತ ದರ ಸಿಗುತ್ತದೆಂದು ಕನಸಿದ್ದರು. ಇದಕ್ಕಾಗಿ ಏನೆಲ್ಲಾ ಪ್ರಯತ್ನಪಟ್ಟಿದ್ದರೆಂಬುದು 'ಲಂಕೇಶ್ ಪತ್ರಿಕೆ'ಯ ವರದಿಗಾರನಾಗಿ ಕೆಲಸ ಮಾಡುತ್ತಿದ್ದ ನನ್ನ ಬಳಿ ಹೇಳಿಕೊಂಡಿದ್ದರು. ಅಷ್ಟರಲ್ಲಿ ಅಕಾಲ ಮರಣಕ್ಕೆ ತುತ್ತಾದರು! ದುರಂತವೆಂದರೆ ಇಂದಿನ ರಾಜಕಾರಣಿಗಳಿಗೆ ಹಿಂದಿನ ಪುಟಗಳನ್ನು ತಿರುವಿಹಾಕುವ ಪ್ರಜ್ಞೆಯೂ ಇಲ್ಲ, ಇಂತಹ ಪ್ರಗತಿಪರ ಆಲೋಚನೆಯಿರಲಿ ಅಂತದ್ದೊಂದು ಕನಸು ಕೂಡ ಬೀಳಲಾರದಷ್ಟೂ ಅವರ ತಲೆಗಳು ಬರಡಾಗಿರುವುದು ದುರಂತ!

**ತಣ್ಣೀರ್ ತಣ್ಣೀರ್**

ಸುಮಾರು ಮೂರು ದಶಕಗಳ ಹಿಂದೆಯೇ ನಮ್ಮೆಲ್ಲ ಗೆಳೆಯರು ಸೇರಿ ಕುಡಿಯುವ ನೀರಿಗಾಗಿ ಹೋರಾಟ ಆರಂಭಿಸಿದೆವು. ಕೃಷಿಗೆ ನೀರು ಕೇಳಿದರೆ ನೀರಿನ ರಾಜಕರಣವಾಗುತ್ತದೆಂದು, ಕುಡಿಯಲು ಮಾತ್ರ ನೀರು ಕೇಳಿದರೆ ನೀರಿನ ರಾಜಕರಣದಿಂದ ವಿನಾಯಿತಿ ಪಡೆಯಬಹುದೆಂದು ಲೆಕ್ಕಾಚಾರ ಹಾಕಿ ಹೋರಾಟಕ್ಕೆ ಚಾಲನೆ ನೀಡಿದೆವು. ಗೆಳೆಯ ದಿವಂಗತ ಸೋಮಶೇಖರ ಗೌಡ ಅದಕ್ಕೆ 'ಜಲವಾಹಿನಿ' ಎಂಬ ಹೆಸರನ್ನೂ ಸೂಚಿಸಿದ್ದ. "ನೀರು ನೆಲಕ್ಕಲ್ಲ ನಾಲಿಗೆಗೆ" ಎಂಬ ಘೋಷವಾಕ್ಯವನ್ನು ನೀಡಿದ್ದೆವು. ನೀರು ನಾಲಗೆಗೆ ಬಂದರೆ ಭೂಮಿಗೂ ಸಿಗುತ್ತದೆ ಎಂಬ ಲೆಕ್ಕಾಚಾರ ನಮ್ಮದು. ಈ ವಿಷಯದಲ್ಲಿ ಪರಮಶಿವಯ್ಯನವರಿಂದ ಹಿಡಿದು ಡಾ॥ ಎಚ್. ನರಸಿಂಹಯ್ಯನವರವರೆಗೂ ಅನೇಕ ಮಂದಿ ಜಲತಜ್ಞರನ್ನು, ಗಣ್ಯರನ್ನು ಎಡತಾಕಿದ್ದೆವು. ಅನೇಕ ಸಭೆ, ಚರ್ಚೆ, ಸಂವಾದ, ಧರಣಿ, ಮೆರವಣಿಗೆಗಳನ್ನೆಲ್ಲ ಮಾಡಿದೆವು. ಸರ್ಕಾರಗಳು ಸ್ಪಂದಿಸಲಿಲ್ಲ. ಚಳುವಳಿಯನ್ನು ಜೀವಂತವಾಗಿ ಇಟ್ಟುಕೊಳ್ಳಲು ನಮಗೆ ಸಮರ್ಪಕವಾದ ಬೆಂಬಲ, ನೆರವು, ಸಹಾಯ ಸಿಗದ ಕಾರಣ ಮತ್ತೂ ಇತರೆ ಅನೇಕ ಕಾರಣಾಂತರಗಳಿಂದಾಗಿ ಚಳುವಳಿ ನೆನೆಗುದಿಗೆ ಬಿತ್ತು. ಈಚಿನ ವರ್ಷಗಳಲ್ಲಿ ಚಳುವಳಿ ಮತ್ತೆ ಆರಂಭವಾಯಿತು. ಅನೇಕ ಯುವಕರು ಚಳುವಳಿಯಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿದ್ದಾರೆ. ಆದರೆ ಸತತವಾಗಿ ಚಳುವಳಿಗಾರರನ್ನು ವಂಚಿಸುತ್ತಲೇ ಬಂದ ಸರ್ಕಾರಗಳು ಯಾವುಯಾವುದೋ ಸಬೂಬುಗಳನ್ನು ನೀಡುತ್ತಾ ಕಡೆಗೆ ನಮಗೆ ವಿಷದ ನೀರನ್ನು ಕೊಡಲು ತೀರ್ಮಾನಿಸಿ ಕಾರ್ಯೋನ್ಮುಖವಾದವು!

ಕೆ. ಸಿ. ವ್ಯಾಲಿ ಪ್ರಾಜೆಕ್ಟ್ ಅಂದರೆ ಕೋರಮಂಗಲ – ಚಲ್ಲಘಟ್ಟ ವ್ಯಾಲಿ ಪ್ರಾಜೆಕ್ಟ್ ಮೂಲಕ ಕೋಲಾರ–ಚಿಕ್ಕಬಳ್ಳಾಪುರ ಕೆರೆಗಳನ್ನು ತುಂಬಿಸಿ ಅಂತರ್ಜಲ ಮಟ್ಟವನ್ನು ವೃದ್ಧಿಪಡಿಸುವ ಯೋಜನೆಯನ್ನು ಸರ್ಕಾರ ಅತ್ಯಂತ "ಔದಾರ್ಯ"ದಿಂದ ಮಾಡಹೊರಟಿತು. ಆದರೆ ಇದು ಕನಿಷ್ಠ ವಿವೇಚನೆಯ ಕೊರತೆಯನ್ನು ಆರಂಭದಿಂದಲೇ ಎದುರಿಸಬೇಕಾಯಿತು! ಲಭ್ಯ ದಾಖಲೆಗಳ ಪ್ರಕಾರ ಇದು ೧೩೦೦ ಕೋಟಿಗಳ ಯೋಜನೆ! ದುರಂತವೆಂದರೆ ಬೆಂಗಳೂರು ನಗರದ ಕೊಳಕು ಚರಂಡಿ ನೀರನ್ನು ನಮ್ಮ ಕೆರೆಗಳಿಗೆ ಬಿಡುವುದು!! ಇದೆಷ್ಟು ಅವೈಜ್ಞಾನಿಕ ಯೋಜನೆಯೆಂದರೆ ಈ 'ಮಹದ್' ಯೋಜನೆ ಆರಂಭವಾಗುತ್ತಿದ್ದಂತೆಯೇ ನರಸಾಪುರ ಗ್ರಾಮ ಪಂಚಾಯತಿ ಒಂದು ಸುತ್ತೋಲೆ ಹೊರಡಿಸಿ "ಕೆ. ಸಿ. ವ್ಯಾಲಿ ನೀರನ್ನು ನರಸಾಪುರದ ಕೆರೆಗೆ ಬಿಟ್ಟ ಪರಿಣಾಮ ಇಡೀ ಕೆರೆಯೇ ಕಲುಷಿತವಾಗಿದ್ದು ಅದರ ಸುತ್ತಲಿನ ಬೋರ್‌ವೆಲ್ ನೀರನ್ನು ಕೂಡ ಮನುಷ್ಯರೂ ಕುಡಿಯಬೇಡಿ, ಜಾನುವಾರುಗಳಿಗೂ ಕುಡಿಸಬಾರ"ದೆಂದು ಎಚ್ಚರಿಕೆ ನೀಡಿದೆ! ನಮ್ಮ ಕೆರೆಗಳಿಗೆ ಕೆ. ಸಿ. ವ್ಯಾಲಿಯಿಂದ ಬಂದ ನೀರು ಕೇವಲ ಚರಂಡಿ ನೀರಲ್ಲ, ಅದರಲ್ಲಿ ಕೈಗಾರಿಕಾ ತ್ಯಾಜ್ಯಗಳೂ ಇವೆ, ಅದರಲ್ಲಿ ಫ್ಲೋರೈಡ್, ಕ್ಲೋರೈಡ್ ಮತ್ತು ನೈಟ್ರೇಟ್ ಅಂಶಗಳೂ ಇವೆ. ಇದರೊಂದಿಗೆ ಪಾಚಿ, ವೈರಸ್, ಬ್ಯಾಕ್ಟೀರಿಯಾ, ಪ್ರೋಟೋಜೋವದಂಥ ಜೀವಿಗಳು ಇವೆ. ಯಾವುದಕ್ಕೂ ಬಳಸ ಬಾರದಂತಹ ಅಂಶಗಳಿರುವುದಾಗಿ ಜಲವಿಜ್ಞಾನಿಗಳು ಅಭಿಪ್ರಾಯಪಟ್ಟಿದ್ದಾರೆ. ಈ ಕಾರಣಕ್ಕೇ ಕರ್ನಾಟಕ ಉಚ್ಚ ನ್ಯಾಯಾಲಯ ಸಾರ್ವಜನಿಕ ಹಿತಾಸಕ್ತಿಯ ಅರ್ಜಿಯ ಮೇಲೆ ಕೆ. ಸಿ. ವ್ಯಾಲಿ ನೀರನ್ನು ನಮ್ಮ ಕೆರೆಗಳಿಗೆ ಬಿಡದಂತೆ ತಡೆಯಾಜ್ಞೆ ನೀಡಿದೆ!

ನನಗೆ ಅರ್ಥವಾಗದಿರುವುದು ಕೆರೆಗಳನ್ನು ವೃದ್ಧಿಪಡಿಸುವ ವಿಷಯದಲ್ಲಿ ನಮ್ಮ ಸರ್ಕಾರಗಳು ಮಾಡುವ ಕೆ. ಸಿ. ವ್ಯಾಲಿಯ ಕೊಳಕು ನೀರಿಗಿಂತಲೂ ಕೆಟ್ಟ ಮತ್ತು ಕೊಳಕು ರಾಜಕಾರಣ! ಹಾಗಾದರೆ ಉತ್ತಮ ರಾಜಕಾರಣ ಹೇಗೆ ಮಾಡಬಹುದು?

# ಬೆಳಕಿನ ಬೀಜಗಳು

ಕಲ್ಲು ಬಂಡೆಗಳ ಮೇಲೆ
ಬೆಳಕ ಬೀಜಗಳ ಮೊಳಕೆ!
ಕಣ್ಣ ಪಿಸೆಯೊಳಗೆ
ಲೋಕ ವಿಕಾರಗಳ ಚಹರೆ

ಹೂತೋಟ್ಟ ಹುಡುಗಿಯ
ಪುಟ್ಟ ಪಾದಗಳು ಕುಣಿಯುತಿವೆ
ಕೆಂಡದ ಮೇಲೆ.

ಹರಿದ ಅಂಗಿಗೆ ತ್ಯಾಪಿ
ಹಾಕುವ ಸೂಜಿ ಕಳೆದು ಹೋಗಿದೆ
ಗೌಡರ ಗದ್ದೆಯೊಳಗೆ

ಗುಳೆ ಹೋದ ಗುಡಿಸಲಿನ
ಚೂರು ಚೂರಾದ ವಿಳಾಸದೊಳಗೆ
ಕಾಗದದ ಹಾಯಿದೋಣಿ

ಕನಸು ಮಾರಲು ಹೋದ ಅವ್ವ
ಸೋರುವ ಜೋಳಿಗೆಯೊಳಗೆ ಏನು ತಂದಾಳು?
ತಂಗಳ ರೊಟ್ಟಿ ತಿಂಗಳ ಜೀತದ ವಾರಸುದಾರರು ನಾವು

ಈಗ
ಬಿಸಿಲ ಕೋಲಿಂದ
ಜಾರಿಬಿದ್ದ ಬೆಳಕ ಬೀಜಗಳೇ
ಹೊಸ ಹಾಡು ಬರೆಯಬೇಕಿದೆ.

**ಕಳಕೇಶ ಡಿ. ಗುಡ್ಲಾನೂರ (ಕಡಿಗು)**
'ಅಕ್ಷರ', ಎ. ಡಿ. ನಗರ, ಮುಂಡರಗಿ ತಾ॥, ಗದಗ ಜಿಲ್ಲೆ

ಉದಾಹರಣೆಗೆ ಹೇಳುತ್ತೇನೆ... ಪಕ್ಕದ ತೆಲಂಗಾಣದಲ್ಲಿ ಅಲ್ಲಿನ ಸರ್ಕಾರದ 'ಮಿಷನ್ ಕಾಕತೀಯ ಯೋಜನೆ' ಮತ್ತು 'ಭಗೀರಥ ಯೋಜನೆ'ಗಳನ್ನು ಗಮನಿಸಿ. ಕೇಂದ್ರ ಸರ್ಕಾರದ ನೆರವು ಪಡೆದು ಐದು ಸಾವಿರ ಕೋಟಿಯ ವೆಚ್ಚದಲ್ಲಿ ಕೆರೆಗಳ ಹೂಳೆತ್ತುವ ಯೋಜನೆಯಲ್ಲಿ ಈಗಾಗಲೇ ೪೬,೫೩೧ ಕೆರೆಗಳಲ್ಲಿ ಹೂಳೆತ್ತಲಾಗಿದೆ! ಈಗಾಗಲೇ ಮಿಷನ್ ಕಾಕತೀಯ ಯೋಜನೆಯ ಮೊದಲ ಹಂತ ಮುಗಿದಿದೆ. ೨೦೧೫, ಮಾರ್ಚ್ ೧೨ರಲ್ಲಿ ೨,೨೦೦ ಕೋಟಿ ಬಜೆಟ್‌ಅನ್ನು ಮೀಸಲಿಟ್ಟು ಆರಂಭವಾದ ಯೋಜನೆ ೮೦೫೮ ಕೆರೆಗಳಿಂದ ಆರಂಭವಾಗಿ ಈಗಾಗಲೇ ೨೮೫೩ ಕೆರೆಗಳ ಕಾರ್ಯ ಮುಗಿದಿದೆ. ಇದರ ವಿವರಗಳನ್ನು ಹೇಳುತ್ತಾ ಹೋದರೆ ಅದಕ್ಕೆ ಕೊನೆಯೇ ಇಲ್ಲ. ತೆಲಂಗಾಣದ ಅನೇಕ ಬರಪೀಡಿತ ಜಿಲ್ಲೆಗಳ ಕೆರೆಗಳನ್ನು ಲೆಕ್ಕ ಹಾಕಿದರೆ ಹೈದರಾಬಾದ್ ಸೇರಿದಂತೆ ೧೮,೦೦೦ ಕೆರೆಗಳ ಕಾರ್ಯ ಮುಗಿದಿದೆ. ಈ ವಿವರಗಳನ್ನು ಯಾಕೆ ಹೇಳುತ್ತಿದ್ದೇನೆಂದರೆ ಪಕ್ಕದ ರಾಜ್ಯದ ಸರ್ಕಾರವೊಂದು ಇಷ್ಟೊಂದು ಪ್ರಗತಿಪರವಾಗಿರುವಾಗ ನಮ್ಮ ಸರ್ಕಾರಕ್ಕೆ ಕೇವಲ ಎರಡು ಜಿಲ್ಲೆಗಳ ಕೆರೆಗಳು ಸವಾಲಾಗಿ ಕಾಣುತ್ತವೆಂದರೆ ನಮ್ಮ ಸರ್ಕಾರಗಳಿಗೆ ಬಂದಿರುವ ರೋಗವಾದರೂ ಏನು ಎಂಬುದನ್ನು ಪತ್ತೆಹಚ್ಚಬೇಕಿದೆ.

ಯಾರು ಏನೇ ಹೇಳಲಿ, ಯಾವುದೇ ಆರ್ಥಿಕ, ತಾಂತ್ರಿಕ ಅಡ್ಡಿ ಆತಂಕಗಳಾಗಲಿ ನಾನು ಮಾತ್ರ ನಮ್ಮ ನೀರಿನ ಸಮಸ್ಯೆಗೆ ಪರಿಹಾರವೆಂದು ವ್ಯಕ್ತಿಗತವಾಗಿ ನಂಬಿರುವುದು ತಾಯಿ ಕಾವೇರಿಯೊಂದನ್ನೇ! ನಮ್ಮ ನಾಲಿಗೆಯ ಮತ್ತು ನೆಲದ ದಾಹವನ್ನು ತಣಿಸಬಲ್ಲ ಶಕ್ತಿ ಇರುವುದು ಕಾವೇರಿಗೆ ಮಾತ್ರ. ಈ ಬಗ್ಗೆ ಗಂಭೀರ ಚರ್ಚೆಗಳಾಗಬೇಕಿದೆ. ಮತ್ತು ಈ ವಿಷಯದಲ್ಲಿ ನಾವು ಹೆಚ್ಚು ಹೆಚ್ಚು ಆಲೋಚಿಸಿ ಹೋರಾಟಗಳನ್ನು ರೂಪಿಸಬೇಕಿದೆ. ನಮ್ಮ ಪ್ರಸಕ್ತ ರಾಜಕಾರಣ ಕೂಡ ನೀರಿನ ಹೋರಾಟಗಳ ಮೇಲೆಯೇ ಅವಲಂಬಿತವಾಗಬೇಕಿದೆ.

ನೀರು ನಮಗೆ ಎಷ್ಟೇ ದುಬಾರಿಯಾದರೂ ರೈತ ತನ್ನೆಲ್ಲಾ ಸಂಕಷ್ಟಗಳಲ್ಲಿ ತೊಡಗಿ ಹೈರಾಣವಾದರೂ, ಸಮೃದ್ಧವಾಗಿ ನೀರನ್ನು ಹೊಂದಿ ಸದಾ ಹಸಿರಿನ ಹಾಸಿನಲ್ಲಿರುವ ಇತರೆ ನೀರಾವರಿ ಪ್ರದೇಶದ ರೈತರಂತೆ ನಮ್ಮ ಜಿಲ್ಲೆಯ ರೈತರು ಎಂದೂ ಆತ್ಮಹತ್ಯೆಗೆ ಶರಣಾಗಲಿಲ್ಲ ಎಂಬುದು ನಿಜಕ್ಕೂ ಆಲೋಚಿಸಬೇಕಾದ ಪ್ರಶ್ನೆ! ಆತ್ಮಹತ್ಯೆಗೆ ಶರಣಾದ ರೈತರ ಜಿಲ್ಲಾವಾರು ಸಮೀಕ್ಷೆಯನ್ನು ಕಂಡರೆ ಆಶ್ಚರ್ಯವಾಗುತ್ತೆ!

ಮೈಸೂರು ವಿಶ್ವವಿದ್ಯಾಲಯಕ್ಕೆ ಡಾ॥ ಜಯಶಂಕರ್ ಎಂಬ ಅರ್ಥಶಾಸ್ತ್ರ ಪ್ರಾಧ್ಯಾಪಕರು ಮಂಡಿಸಿರುವ ಪ್ರೌಢ ಪ್ರಬಂಧದ ಆಧಾರದ ಪ್ರಕಾರ ಕರ್ನಾಟಕದಲ್ಲಿ ೨೦೧೪ರಿಂದ ೨೦೧೭ರ ನಡುವೆ ಸಂಭವಿಸಿದ ರೈತರ ಆತ್ಮಹತ್ಯೆಗಳಲ್ಲಿ ಅತಿ ಹೆಚ್ಚು ಆಗಿರುವುದು ಅವ್ಯಾಹತವಾಗಿ ಜನಸಂಪನ್ಮೂಲವಿರುವ ಮಂಡ್ಯದಲ್ಲಿ! ಇಲ್ಲಿನ ಅಂಕಿಅಂಶ ನೋಡಿ...

ಮಂಡ್ಯ – ೫೬, ಬೆಳಗಾಂ – ೨೧, ಬಿಜಾಪುರ – ೨೭, ಹಾವೇರಿ – ೨೨, ಮೈಸೂರು – ೧೬, ಆದರೆ ಕೋಲಾರ – ೭ ಅದರಲ್ಲೂ ದೃಢಪಟ್ಟಿರುವುದು ಕೇವಲ ೪. ಚಿಕ್ಕಬಳ್ಳಾಪುರ – ೬, ಅದರಲ್ಲೂ ದೃಢಪಟ್ಟಿರುವುದು ಕೇವಲ ೩ ಮಾತ್ರ. ಹಾಗಾದರೆ ಇದಕ್ಕೆ ಕಾರಣವೇನಿರಬಹುದು? ನಮಗೆ ಬರ, ಬಾಯಾರಿಕೆ, ಹಸಿವು, ಕಷ್ಟನಷ್ಟಗಳು ಅಭ್ಯಾಸವಾಗಿ ಹೋಗಿವೆ ಎಂದೋ, ಎಂಥ ಕಷ್ಟ ಬಂದರೂ ನಾವು ಬದುಕುವುದನ್ನು ಕಲಿತಿದ್ದೇವೆ ಎಂದೋ, ಸಾವು ನಮಗೆ ಎಂದೂ ಅನಿವಾರ್ಯ ಎನಿಸಿಲ್ಲ ಎಂದೋ, ಅಥವಾ ನಮಗೆ ಸಾವು ಸಮಸ್ಯೆಗೆ ಪರಿಹಾರವಲ್ಲವೆಂದೋ? ಈ ಎಲ್ಲ ಕಾರಣಗಳೂ ನಿಜವೇ... ಇದರೊಂದಿಗೆ ನಮಗೆ ಆಳುವ ಸರ್ಕಾರಗಳು ಮಾಡುವ ರಾಜಕಾರಣದ ಯಾವುದೇ ತಾರತಮ್ಯಗಳು ಕೂಡ ನಮಗೆ ತೀರ ಬೇಸರ ತರಿಸಲ್ಲ! ಎನ್ನುವುದೂ ನಿಜ.

**ಹಿಂದುಳಿದ ವರ್ಗಗಳ ಅಧ್ಯಕ್ಷನಾಗಿ**

ಅಲೆಮಾರಿಗಳೊಂದಿಗೆ ಅಲೆಮಾರಿಯಾಗಿ ಸುತ್ತಾಡಿದ ಪರಿಣಾಮ ಸುಮಾರು ಐವತ್ತಕ್ಕಿಂತಲೂ ಹೆಚ್ಚು ಅಲೆಮಾರಿ ಸಮುದಾಯಗಳು ನನ್ನ ಆಯೋಗದ ಕಣ್ಣಿಗೆ ಕಾಣತೊಡಗಿದವು. ಕೆಲ ಸಮುದಾಯಗಳಂತೂ ಸರ್ಕಾರದ ಯಾವುದೇ ಪಟ್ಟಿಗಳಲ್ಲಿರಲಿಲ್ಲ! ಆಯೋಗದಲ್ಲಿ ಕೆಲಸ ಮಾಡಿದ ಪರಿಣಾಮ ನನಗೆ ಅಸಂಖ್ಯಾತ ಜಾತಿಗಳ ಪರಿಚಯವಿದೆ ಎಂಬ ನನ್ನ ಭ್ರಮೆಯನ್ನು ನೋಡಿ ನಾನೇ ನಗುವಂತೆ, ನಾನು ಹುಟ್ಟಿ ಬೆಳೆದ ಕೋಲಾರ ಜಿಲ್ಲೆಯಲ್ಲಿಯೇ ಇಷ್ಟೊಂದು ಅನಾಮಿಕ ಜಾತಿಗಳಿವೆಯೆಂಬ ಪರಿಕಲ್ಪನೆಯಿರಲಿಲ್ಲ. ಇಡೀ ರಾಜ್ಯದ ವಿವರಕ್ಕೆ ಹೋಗಬೇಕಿಲ್ಲ, ಕೇವಲ ನಮ್ಮ ಜಿಲ್ಲೆಯಲ್ಲಿರುವ ಒಂದಷ್ಟು ಜಾತಿಗಳನ್ನು ನೋಡಿ ದಂಗುಬಡಿದುಹೋದೆ. ಇಲ್ಲಿ ಕೊಟ್ಟಿರುವ ಜಾತಿಗಳಲ್ಲಿ ನಾವೆಲ್ಲ ಎಷ್ಟು ಜಾತಿಗಳನ್ನು ನೋಡಿದ್ದೇವೆ...? ಒಮ್ಮೆ ಈ ಪಟ್ಟಿ ನೋಡಿ... ಅರಯ್ ಮಾಲ, ಅರುಂಧತಿಯಾರ್, ಅರ್ವಮಾಲ, ಭೈರ, ಬುಡ್ಗ ಜಂಗಮ್, ಭಂಗಿ, ಮೆಹ್ತರ್, ಹಲಾಲ್ ಕೋರ್, ಬಾಲ್ಮಿಕಿ, ಜಾಡ್ಮಾಲಿ, ಅಸಾದಿ, ಅಸೋಡಿ, ಚಮಾಡಿಯ, ಚಮ್ಮಾರ್, ಹರಳಯ್ಯ, ಮೋಚಿಗಾರ್, ಮಾದರ್, ಕಾಮಾಟಿ ಮೋಚಿ, ರಾನಿಗರ್, ಸಮಗಾರ್, ಬಿಂಡ್ಲ, ಬ್ಯಾಗರ, ಚಕ್ಕಲಿಯನ್, ಚನ್ನಯ್ಯ, ಚೆನ್ನದಾಸರ್, ಹೊಲೆಯದಾಸರ್, ದಕ್ಕಲ್, ದಕ್ಕಲ್ವಾರ್, ದೋರ್, ಕಕ್ಕಯ್ಯ, ಕಂಕಯ್ಯ, ಡೋಮ್, ಡೊಂಬರ, ಪೈದಿ, ಪಾನೋ, ಯಲ್ಲಮ್ಮಲವಾಂಡ್ಲು, ಗರೋಡ, ಗೊಡ್ಡ, ಹಂದಿಜೋಗಿ, ಹೊಲೆಯದಾಸರಿ, ಜಗ್ಗಲಿ, ಜಾಂಬುವುಲು, ಕೂಸ, ಕುರುವನ್, ಕೊರಮ, ಕುರುವನ್, ಮಾದಾರಿ, ದೇಗುಮೇಗು, ಮಾಹ್ಯವಂಶಿ, ದೇಡ್, ಮೈಲ, ಮಾಲದಾಸರಿ, ಮಾಲ ಹನ್ನೈ, ಮಾಲ ಸನ್ಯಾಸಿ, ಮಾಂಗ್, ಮಾತಂಗ, ಮಾಂಗ್ ಗಾರುಡಿ, ಮೇಗವಾಲ್, ಮೋಗರ್, ಮುಂಡಾಲ, ನಾಡಿಯ, ನಾಯಡಿ, ಪಾಲೆ, ಪಲ್ಲನ್, ಪರೈಯನ್, ಸಂಬನ್, ಸಪಾರಿ, ಸಿಳ್ಳೇಕ್ಯಾತ, ಸುಡುಗಾಡು ಸಿದ್ಧ, ತಿರಗಾರ್, ವಲ್ಲುವನ್‌ಪಿಚಗುಂಟ್ಲು – ಹೀಗೆ ಅನೇಕ ನಮ್ಮ ಸುತ್ತಲೇ ಇದ್ದು ನಮ್ಮ ಕಣ್ಣಿಗೆ ಕಾಣದ ಸಮುದಾಯಗಳಿವೆ. ಆದ್ದರಿಂದಲೇ ನಾವು 'ಅನ್‌ಟಚ್ಚಬಲ್'ಗಳನ್ನು ಮಾತ್ರ ನೋಡಿದ್ದೇವೆ ಅವರ ನೋವನ್ನು ಆಲಿಸಿದ್ದೇವೆ. ಆದರೆ ಈ ಅಲೆಮಾರಿಗಳೆಂಬ 'ಅನ್‌ಸೀಯೆಬಲ್ಸ್' ಮತ್ತು 'ಅನ್‌ಅಪ್ರೋಚಬಲ್ಸ್'ಗಳನ್ನು ನೋಡಿಲ್ಲ. ಇಂತಹ ಸಮುದಾಯಗಳ ಬದುಕು ನಮ್ಮ ಹೃದಯಗಳನ್ನು ತಟ್ಟದಿದ್ದರೆ, ನಮ್ಮ ಎಲ್ಲ ಚಳುವಳಿಗಳು, ಹೋರಾಟಗಳು, ರಾಜಕಾರಣಗಳು ಕೂಡ ಹೃದಯಹೀನವಾಗೇ ಇಂಗಿಹೋಗುತ್ತವೆ!

**ಸಂವಿಧಾನ**

ಈ ಎಲ್ಲ ಆತಂಕಗಳಿಗೆ ನಮಗೆ ಉತ್ತರ ಸಿಗುವುದು ಆಳುವ ಸರ್ಕಾರಗಳು ಸಮರ್ಪಕವಾಗಿ ಸಂವಿಧಾನವನ್ನು ಅನುಷ್ಠಾನಕ್ಕೆ ತರಬೇಕಾದ ಕಾರ್ಯಕ್ರಮಗಳಲ್ಲಿ. ಸಂವಿಧಾನದೊಂದಿಗೆ ಡೈರೆಕ್ಟಿವ್ ಪ್ರಿನ್ಸಿಪಲ್ಸ್ ಆಫ್ ಸ್ಟೇಟ್ ಪಾಲಿಸಿಯನ್ನು ಅರ್ಥಮಾಡಿಕೊಳ್ಳುವ ಪ್ರಕ್ರಿಯೆಯಲ್ಲಿ. ಆದರೆ ಇಲ್ಲಿ ಆಗುತ್ತಿರುವುದೇನು? ಸಂವಿಧಾನದ ಆಶಯಗಳನ್ನು ಅನುಷ್ಠಾನಕ್ಕೆ ತರಬೇಕೆನ್ನುವವರಿಗೇ ಗುಂಡಿಡುತ್ತಿರುವುದು! ಎಂ. ಎಂ. ಕಲಬುರ್ಗಿ, ಗೌರಿ ಲಂಕೇಶರ ಹತ್ಯೆಯ ನಂತರ ನಮ್ಮಂತಹ ಅನೇಕ ಪ್ರಜಾಪ್ರಭುತ್ವವಾದಿಗಳು, ಮಾನವತಾವಾದಿಗಳಿಗೆ ಸತತವಾಗಿ ಜೀವ ಬೆದರಿಕೆಯಿದೆ! ಈ ಹಿಟ್ ಲಿಸ್ಟ್ ಪಟ್ಟಿಯಲ್ಲಿ ನನ್ನ ಹೆಸರೂ ಇದ್ದು ಈಗ ನನ್ನ ಹುಟ್ಟೂರಿಗೆ ಬರುವಾಗಲೂ ಸೆಕ್ಯುರಿಟಿಯಲ್ಲಿ ಬರಬೇಕಾದ ಪರಿಸ್ಥಿತಿ ಇದೆ! ಸಂವಿಧಾನದತ್ತವಾಗಿ ನಮಗೆ ದಕ್ಕಿರುವ ರೈಟ್ ಆಫ್ ಎಕ್ಸ್‌ಪ್ರೆಷನ್ ಅಂದರೆ ಮಾತಾಡುವ ಮಾನವ ಹಕ್ಕನ್ನೂ ಕಸಿದುಕೊಳ್ಳುವಂಥ ವಾತಾವರಣ ಸೃಷ್ಟಿಯಾಗಿದೆ. ಸಂವಿಧಾನದ ಮೇಲೆ ಪ್ರಮಾಣ ಮಾಡಿ ಮಂತ್ರಿಯಾದವರೂ ಸಂವಿಧಾನದ ವಿರುದ್ಧ ವಿಷಕಾರುತ್ತಿದ್ದಾರೆ! ಇಂಥವರು ಒಂದು ಕ್ಷಣವೂ ಆ ಜವಾಬ್ದಾರಿಯುತ ಹುದ್ದೆಯಲ್ಲಿ ಇರಲು ಸಾಧ್ಯವೇ ಇಲ್ಲ, ದುರಂತವೆಂದರೆ ಅವರಿಗೆ ಇನ್ನಷ್ಟು ಮಾತನಾಡುವ ಕುಮ್ಮಕ್ಕು ನೀಡಲಾಗುತ್ತಿದೆ. ಸಂವಿಧಾನವನ್ನು ಸಾರ್ವಜನಿಕವಾಗಿ ಸುಡಲಾಗುತ್ತಿದೆ. ಸಂವಿಧಾನದ ವಿರುದ್ಧ ನಾಯಿನರಿಗಳೆಲ್ಲಾ ಊಳಿಡುತ್ತಿವೆ! ಇದು ದೇಶವೊಂದಕ್ಕೆ ಒದಗುತ್ತಿರುವ ಕೇಡಿನ ಸಂಕೇತ. ದೇಶದ ಬಗ್ಗೆ ಕನಿಷ್ಠ ಕಾಳಜಿ ಇರುವವರೆಲ್ಲರೂ ಈ ವಿಚ್ಛಿದ್ರಕಾರಕ ಶಕ್ತಿಗಳನ್ನು ಸದೆಬಡಿದು ಈ ದೇಶವನ್ನು ಉಳಿಸಿಕೊಳ್ಳಬೇಕಾದಂಥ ತುರ್ತಿದೆ. ಬಾಬಾಸಾಹೇಬರು ನಮ್ಮೆಲ್ಲರಿಗಾಗಿ ಬರೆದ ಸಂವಿಧಾನವನ್ನು ಉಳಿಸಿಕೊಳ್ಳ ಬೇಕಾದ ಜವಾಬ್ದಾರಿ ನಮ್ಮೆಲ್ಲರ ಮೇಲಿದೆ.

***(ಡಿಸೆಂಬರ್ ೧೮, ೨೦೧೮ರಂದು ನಡೆದ ಕೋಲಾರ ಜಿಲ್ಲಾ ಸಾಹಿತ್ಯ ಸಮ್ಮೇಳನಾಧ್ಯಕ್ಷರಾದ ಡಾ॥ ಸಿ. ಎಸ್. ದ್ವಾರಕಾನಾಥ್ ಅವರ ಭಾಷಣದ ಆಯ್ದಭಾಗ)***

**ಡಾ॥ ಸಿ. ಎಸ್. ದ್ವಾರಕಾನಾಥ್**
ನಂ. ೧೨೦೩/೨, 'ಚೊಕ್ಕಮನೆ', ೧೯ನೇ ಮುಖ್ಯರಸ್ತೆ, 'ಎ' ಬ್ಲಾಕ್
ಸಹಕಾರನಗರ, ಬೆಂಗಳೂರು – ೫೬೦ ೦೯೨

‘ಭಾರತದ ಸಂವಿಧಾನ’ – ಇಂದು ಬಿಸಿ ಬಿಸಿಯಾದ ಚರ್ಚೆಯನ್ನು ಸೃಷ್ಟಿಸಿದೆ . ಕೆಲವರು ಅದನ್ನು ಬದಲಾಯಿಸಬೇಕು ಎಂದು ಹೇಳುತ್ತಿದ್ದರೆ, ಮತ್ತೆ ಕೆಲವರು ಚರ್ಚೆಯ ಮೂಲಕ ಅದನ್ನು ಬಲಗೊಳಿಸುವ ಕಾಯಕದಲ್ಲಿ ತೊಡಗಿದ್ದಾರೆ. ಸಂವಿಧಾನ – ಓದು, ಸಂವಿಧಾನ ಕುರಿತ ಶಿಬಿರಗಳು, ಸಂವಿಧಾನ ಕುರಿತ ವಿಪುಲ ಸಾಹಿತ್ಯ ಸೃಷ್ಟಿ, ಎಲ್ಲವೂ ಈ ವಿಷಯದ ಗಂಭೀರತೆಯನ್ನು ಮತ್ತು ಸಮಕಾಲೀನ ಅಗತ್ಯವನ್ನು ತೋರಿಸುತ್ತಿದೆ. ೨೦೧೯ರ ‘ಹೊಸತು’ ವಿಶೇಷ ಸಂಚಿಕೆಯು ಈ ವಿಷಯವನ್ನು ಕುರಿತು ಒಂದು ಚರ್ಚೆಯನ್ನು ‘ಹೊಸತು’ ಕಚೇರಿಯಲ್ಲಿ ಏರ್ಪಡಿಸಿತ್ತು. ಈ ಚರ್ಚೆಯಲ್ಲಿ ಅಖಿಲ ಭಾರತ ವಕೀಲರ ಸಂಘದ ಅಧ್ಯಕ್ಷರಾದ ಶ್ರೀ ಸಿ. ಮುರಳಿಧರ್, ಜನವಾದಿ ಮಹಿಳಾ ಸಂಘಟನೆಯ ರಾಜ್ಯ ಉಪಾಧ್ಯಕ್ಷರಾದ ಶ್ರೀಮತಿ ಲಕ್ಷ್ಮಿ, ಲಿಂಗ ಅಲ್ಪಸಂಖ್ಯಾತರ ಸಂಘಟನೆಯಾದ ‘ಒಂದೆಡೆ’ಯ ಅಧ್ಯಕ್ಷರಾದ ಅಕ್ಕೈ ಪದ್ಮಶಾಲಿ, ‘ಹೊಸತು’ ಸಂಪಾದಕ ಬಳಗದಿಂದ ಡಾ॥ ಜಿ.ರಾಮಕೃಷ್ಣ, ಎಂ. ಅಬ್ದುಲ್ ರೆಹಮಾನ್ ಪಾಷಾ ಮತ್ತು ಡಾ॥ ಎನ್. ಗಾಯತ್ರಿ ಭಾಗವಹಿಸಿದ್ದರು. ಅಬ್ದುಲ್ ರೆಹಮಾನ್ ಪಾಷಾ ಅವರು ಈ ಒಟ್ಟು ಚರ್ಚೆಯನ್ನು ನಿರ್ವಹಿಸಿದರು. ಎನ್. ಗಾಯತ್ರಿ ಈ ಚರ್ಚೆಯ ಲೇಖನವನ್ನು ಸಿದ್ಧಪಡಿಸಿದ್ದಾರೆ.

.......................................................................................................

**ಪಾಷಾ :** ಈ ಚರ್ಚೆಗೆ ಎಲ್ಲರಿಗೂ ಸ್ವಾಗತ. ನಮ್ಮ ಈ ಚರ್ಚೆಗೆ ಒಂದು ಚೌಕಟ್ಟು ಹಾಕಿಕೊಳ್ಳುವ ಉದ್ದೇಶದಿಂದ ಕೆಲವು ಪ್ರಶ್ನೆಗಳನ್ನಿಟ್ಟುಕೊಂಡು ಚರ್ಚೆಯನ್ನು ಆರಂಭಿಸೋಣ. ಆದರೆ ಅದೇ ನಮ್ಮ ಗಡಿಯಲ್ಲ. ಮೊದಲಿಗೆ ಇಂದು ನಮ್ಮ ಸಂವಿಧಾನ ಎದುರಿಸುತ್ತಿರುವ ಸವಾಲುಗಳೇನು?

ಸಿ. **ಮುರಳಿಧರ್ :** ಇವತ್ತಿನ ದಿನ ಸಂವಿಧಾನ ಕೆಲವು ಸವಾಲುಗಳನ್ನು ಎದುರಿಸುತ್ತಿದೆ. ಅದರಲ್ಲಿ ಪ್ರಮುಖವಾದುದು ಅಸ್ತಿತ್ವದ ಸವಾಲು. ಸಂವಿಧಾನದಲ್ಲಿ ಬದಲಾವಣೆ ತರಬೇಕು ಮತ್ತು ಮಾರ್ಪಾಡಾಗಬೇಕು ಎನ್ನುವುದಕ್ಕಿಂತ ಈ ಸಂವಿಧಾನವನ್ನೇ ಬದಲಾಯಿಸಬೇಕು ಎಂಬ ಕೂಗು ಕೇಳಿಬರುತ್ತಿದೆ, ಇದಕ್ಕೋಸ್ಕರ ವಾಜಪೇಯಿ ಸರ್ಕಾರದಲ್ಲಿ ಸಂವಿಧಾನವನ್ನು ಪರಿಷ್ಕರಿಸಲೆಂದೇ ಒಂದು ಸಮಿತಿಯನ್ನು ಜಸ್ಟಿಸ್ ಎಂ. ಎನ್. ವೆಂಕಟಾಚಲಯ್ಯ ಅವರ ನೇತೃತ್ವದಲ್ಲಿ ರಚಿಸಲಾಗಿತ್ತು. ಅದರ ಪ್ರಮುಖ ಉದ್ದೇಶ ಸಂವಿಧಾನದ ಕೆಲವು ಪ್ರಮುಖ ವಿಚಾರಗಳನ್ನು ಬದಲಾಯಿಸಬೇಕು ಅನ್ನೋದಾಗಿತ್ತು. ಆದರೆ ಅದು ಸಾಧ್ಯವಾಗಲಿಲ್ಲ. ಇವತ್ತು ಈ ಚರ್ಚೆ ಅಥವಾ ‘ಸಂವಿಧಾನದ ಓದು’ ಅನ್ನುವಂತಹ ಕಾರ್ಯಕ್ರಮಗಳು, ಸಂವಿಧಾನವನ್ನು ಅರ್ಥಮಾಡಿಸುವ ಮತ್ತು ಮಾಡಿಕೊಳ್ಳುವ ಕ್ರಿಯೆಗಳಾಗಿಯೇ ಒಂದು ಸವಾಲಾಗಿದೆ. ಅಲ್ಲದೆ, ಸಮಾಜದ ಒಂದು ಗುಂಪು ಅಥವಾ ಒಂದು ಶಕ್ತಿ ಇದನ್ನು ಒಪ್ಪಿಕೊಳ್ಳೋದಕ್ಕೆ ಸಿದ್ಧವಿಲ್ಲ. ಅದನ್ನು ಎದುರಿಸುವುದು ಹೇಗೆ ಎನ್ನುವುದು ಈಗ ನಮ್ಮ ಮುಂದಿರುವ ಸವಾಲು.

ಸಂವಿಧಾನ ಅಂದರೆ ಒಂದು ರೀತಿಯಲ್ಲಿ Rule of law. ಇವತ್ತಿನ ಪ್ರಜಾಪ್ರಭುತ್ವ ಇದನ್ನು ಧಿಕ್ಕರಿಸುತ್ತಿದೆ. ಒಂದು ರೀತಿಯ ಕಾನೂನುರಾಹಿತ್ಯ ಸ್ಥಿತಿ ಇದೆ. ಅಸಹನೆ ಎಲ್ಲ ಕಡೆ ಎದ್ದು ಕಾಣುತ್ತದೆ. ಸಂವಿಧಾನಾತ್ಮಕ ಮೌಲ್ಯಗಳ ವಿರುದ್ಧ ಉಗ್ರವಾದ ಪ್ರತಿಕ್ರಿಯೆ ವ್ಯಕ್ತವಾಗುತ್ತಿದೆ. ಸಂವಿಧಾನ ನ್ಯಾಯಾಂಗಕ್ಕೆ

# ಭಾರತ ಸಂವಿಧಾನದ ಪ್ರಸ್ತುತತೆ – ಒಂದು ಚರ್ಚೆ



ಒಂದು ಪಾತ್ರ ಕೊಟ್ಟಿದೆ. ನ್ಯಾಯಾಂಗ ಅದನ್ನು ನಿರ್ವಹಿಸಿದಾಗ ಕೆಲವೊಮ್ಮೆ ಪಾರ್ಲಿಮೆಂಟ್ ಅದನ್ನು ವಿರೋಧಿಸುವ ಕೆಲಸ ಮಾಡಬಹುದು. ಕಾಂಗ್ರೆಸ್ ಸರ್ಕಾರವು ಶಾಬಾನೋ ಪ್ರಕರಣದಲ್ಲಿ ಇದೇ ತಪ್ಪನ್ನು ಮಾಡಿದ್ದು. ಯಾವತ್ತೂ ಆಳುವವರಿಗೆ ನಿಯಮಗಳು ಅನುಕೂಲ ವಾಗಿರುವುದಿಲ್ಲ. ವಿರೋಧ ಪಕ್ಷಗಳು ಅದನ್ನು ಬೆಂಬಲಿಸಬಹುದು ಅಷ್ಟೇ.

**ಲಕ್ಷ್ಮಿ :** ಕಾಮ್ರೇಡ್ ಮುರಳೀಧರ್ ಅವರನ್ನು ಸಂಪೂರ್ಣವಾಗಿ ಅನುಮೋದಿಸುತ್ತೇನೆ. ಇವತ್ತು ಸಂವಿಧಾನವನ್ನು ಓದಿಸುವ ಮತ್ತು ಸಂವಿಧಾನದ ಮೂಲತತ್ವಗಳಿಗೆ ಪೂರಕವಾಗಿ ನ್ಯಾಯಾಂಗ, ಶಾಸಕಾಂಗ ಮತ್ತು ಕಾರ್ಯಾಂಗಗಳು ಕಾರ್ಯ ನಿರ್ವಹಿಸುವಂತೆ ಮಾಡುವ ಮತ್ತು ಸಂವಿಧಾನದ ಆಶಯಗಳನ್ನು ಜಾರಿಗೊಳಿಸಲು ಬೇಕಾದ ಇಚ್ಛಾಶಕ್ತಿಯನ್ನು ಪ್ರಕಟಿಸುವುಕ್ಕೆ ಒತ್ತಾಯಿಸುವ ಮತ್ತು ಒತ್ತಾಯಿಸುವಂತೆ ಮಾಡುವುದೇ ನಿಜವಾದ ಸವಾಲಾಗಿದೆ.

## ಪ್ರಶ್ನೆಗಳು

೧. ಸಂವಿಧಾನ ಇಂದು ಎದುರಿಸುತ್ತಿರುವ ಸವಾಲುಗಳೇನು?
೨. ಭಾರತ ಸಂವಿಧಾನ ದೇಶದ ಇಂದಿನ ಸವಾಲುಗಳನ್ನು ಎದುರಿಸುವಷ್ಟು ಸಮರ್ಥವಾಗಿದೆಯೇ?
೩. ಸಂವಿಧಾನದ ಮೇಲೆ ಆಕ್ರಮಣ ನಡೆದಿದೆ, ಸುಟ್ಟು ಹಾಕಲಾಗುತ್ತಿದೆ, ನಿಮ್ಮ ಪ್ರತಿಕ್ರಿಯೆ?
೪. ದಲಿತರು, ಅಲ್ಪಸಂಖ್ಯಾತರು, ಮಹಿಳೆಯರು, ಕಾರ್ಮಿಕರ ಹಕ್ಕುಗಳನ್ನು ಕಾಪಾಡುವಲ್ಲಿ ಸಂವಿಧಾನ ಸಮರ್ಥವಾಗಿದೆಯೇ?
೫. ವಿವಿಧ ಬಗೆಯ ಮೀಸಲಾತಿಗಳು ಇನ್ನೆಷ್ಟು ದಿನ? ಕೆಲವರಿಗೆ ನೀಡಲಾಗಿರುವ ಮೀಸಲಾತಿಯಿಂದ ಉಳಿದವರಿಗೆ ಅನ್ಯಾಯವಾಗುವುದಿಲ್ಲವೇ?
೬. ಭಾರತ ಸಂವಿಧಾನ ನಮಗೆ ಒದಗಿರುವ ಅತ್ಯುತ್ತಮ ಸಂವಿಧಾನ ಎಂದು ನಿಮಗನ್ನಿಸುತ್ತದೆಯೇ?
೭. ವಿವಿಧ ಪಕ್ಷಗಳ ಚುನಾಯಿತ ಸದಸ್ಯರಿಂದ ರಚಿತವಾಗುವ ಶಾಸಕಾಂಗದ ಪ್ರಮಾದ ಗಳನ್ನು ನ್ಯಾಯಾಂಗವು ತಪ್ಪಿಸುವಲ್ಲಿ ಸಂವಿಧಾನವು ಸಹಾಯಕವಾಗಿದೆಯೇ?

**ಅಕ್ಕೈ :** ನಾನು ಒಬ್ಬ ಲಿಂಗತ್ವ ಅಲ್ಪಸಂಖ್ಯಾತರ, ದೈಹಿಕ ಅಲ್ಪಸಂಖ್ಯಾತರ ಸಂಘಟನೆಯಾದ 'ಒಂದೆಡೆ' ಸಂಘಟನೆಯ ಅಧ್ಯಕ್ಷೆ. ೧೯೯೫ರಿಂದ ಇಂದಿನವರೆಗೂ ನಮ್ಮ ಸಮುದಾಯದ ಮೇಲೆ ನಡೆಯುತ್ತಿರುವ ಸಮಾಜದ ತಾರತಮ್ಯ, ದೌರ್ಜನ್ಯಗಳನ್ನು ವಿರೋಧಿಸುತ್ತಾ ಬಂದಿದ್ದೇವೆ. ನಾನು ಹೆಚ್ಚು ಓದಿಲ್ಲ. ನಾನು ಹತ್ತನೇ ಕ್ಲಾಸ್ ಫೇಲು. ಬದುಕಿಗಾಗಿ ಭಿಕ್ಷಾಟನೆ ಮಾಡಿದೀನಿ, ಸೆಕ್ಸ್ ವರ್ಕ್ ಮಾಡಿದೀನಿ. ನಮ್ಮಲ್ಲಿ ಬಹುಮಂದಿ ಓದಿಲ್ಲ. ನಮಗೆ ಈ ಸಂವಿಧಾನ ಗೊತ್ತಿಲ್ಲ. ಯಾವ ಕಲಂ ಏನು ಹೇಳುತ್ತೆ ಅನ್ನೋದು ಗೊತ್ತಿಲ್ಲ. ಹತ್ತು ವರ್ಷಗಳ ಹಿಂದೆ ಈ ಕೂಲಿ ಮಾಡೋರು, ಗಾಡಿ ಎಳೆಯೋರು, ಬೀದಿ ಬದಿ ಕೆಲಸ ಮಾಡೋರು – ಒಟ್ಟಿನಲ್ಲಿ ಶೋಷಿತರು ತಮ್ಮ ಹಕ್ಕುಗಳಿಗಾಗಿ ಹೋರಾಡುತ್ತಿದ್ದಾಗ ನಾವೂ ಅವರೊಂದಿಗೆ ಸೇರಿ ಹೋರಾಟ ನಡೆಸಿದ್ದೇವೆ. ನಮ್ಮ ಹೋರಾಟಕ್ಕೆ ಫಲವೂ ಸಿಕ್ಕಿದೆ. ಹಿಂದೆ ನಮ್ಮನ್ನು ನೋಡಿದರೆ ಮೊಟ್ಟೆ, ಕಲ್ಲು, ಕಕ್ಕಸ್ಸು – ಎಲ್ಲಾ ನಮ್ಮತ್ತ ಎಸೆಯುತ್ತಿದ್ದ ಜನರು ಇಂದು ಬದಲಾಗಿದ್ದಾರೆ. ಈ ರೀತಿ ನಮ್ಮನ್ನು ಕೀಳಾಗಿ ಕಾಣುತ್ತಿದ್ದವರಲ್ಲಿ ಎಲ್ಲ ಪಕ್ಷದ, ಧರ್ಮದ ಗಂಡಸರು, ಹೆಂಗಸರೂ ಸೇರಿದ್ದರು. ಆಮೇಲೆ ಬಾಬಾ ಸಾಹೇಬ್ ಅವರು ಕೊಟ್ಟಿರುವ ಸಂವಿಧಾನ ಎಲ್ಲರಿಗೂ ಬದುಕುವ ಹಕ್ಕನ್ನು ಕೊಟ್ಟಿದೆ.



ಇದು ಜಗತ್ತಿನಲ್ಲೇ ದೊಡ್ಡ ಸಂವಿಧಾನ, ಹಾಗೆ ಹೀಗೆ ಅಂತ ಹೇಳ್ತಿದ್ದಾಗ ನಾವು ಆತ್ಮವಿಮರ್ಶೆ ಮಾಡಿಕೊಂಡ್ವಿ. ಜಾತ್ಯತೀತವಾದ, ಸಮಾಜವಾದದ ಈ ಸಂವಿಧಾನದ ಪ್ರಕಾರ ನಮಗೂ ಬದುಕುವ ಹಕ್ಕು ಇರಬೇಕಲ್ಲಾ, ಎಂದು ಹೊಳೆಯಿತು. ದೇಶದಲ್ಲಿ ಎಲ್ಲರೂ ಸಮಾನರು ಅಂದಾಗ ನಮ್ಮನ್ನೇಕೆ ಸಮಾನವಾಗಿ ಕಾಣಬಾರದು ಎಂದು ಪ್ರಶ್ನಿಸಿಕೊಂಡ್ವಿ. ಹಿಂದೆ ವಾಜಪೇಯಿ ಅವರ ಭಾಜಪ ಸರ್ಕಾರ ಏನು ಮಾಡಿತೋ ಗೊತ್ತಿಲ್ಲ. ಆದರೆ ಇವತ್ತು ಮೋದಿಯವರ ಭಾಜಪ ಸರ್ಕಾರ ಸಂವಿಧಾನಕ್ಕೆ ದೊಡ್ಡ ಪೆಟ್ಟು ಕೊಡುತ್ತಿದೆ ಅಂದರೆ, ಅದು ನಮ್ಮಂಥ ಎಲ್ಲ ದಮನಿತರಿಗೆ ಭಯ ಹುಟ್ಟಿಸುತ್ತಿದೆ. ಆದ್ದರಿಂದ ಇಂದು ಬದುಕುವ ಹಕ್ಕನ್ನು ರಕ್ಷಿಸುವ ನಮ್ಮ ಸಂವಿಧಾನವನ್ನು ಉಳಿಸಿಕೊಳ್ಳಬೇಕಿರುವುದು ನಮ್ಮ ಮುಂದಿರುವ ಸವಾಲು. ೨೦೦೯ರಲ್ಲಿ ದೆಹಲಿಯ ಹೈಕೋರ್ಟ್ ನಮ್ಮನ್ನು ಅಪರಾಧಿಗಳು ಎನ್ನುವ ನೆಲೆಯಿಂದ ಮುಕ್ತಗೊಳಿಸಿತು. ಸಂವಿಧಾನದ ನೈತಿಕತೆ ನಮ್ಮ ದೇಶದ ಪರಮೋಚ್ಚ ನೈತಿಕತೆ ಎನ್ನುವುದು ಸ್ಥಿರಗೊಳಿಸಿತು. ಆದರೆ ಆಗ ಬಾಬಾ ರಾಮದೇವ್, ಕ್ರಿಶ್ಚಿಯನ್ ಮಿಶನರಿಗಳು ಮತ್ತು ಮುಲ್ಲಾಗಳು ನಮ್ಮ ದೇಶದ ಜಾತಿ, ಸಂಸ್ಕೃತಿ, ಪರಂಪರೆಯನ್ನು ರಕ್ಷಿಸುವ ದೃಷ್ಟಿಯಿಂದ ಈ ತೀರ್ಪಿನ ವಿರುದ್ಧ ಸುಪ್ರೀಂ ಕೋರ್ಟಿನಲ್ಲಿ ಮೊಕದ್ದಮೆ ಹೂಡಿದರು. ನಮಗೆ ಗೊತ್ತಾಯ್ತು, ಸಂವಿಧಾನದ ಶಕ್ತಿ ಎಷ್ಟಿದೆ, ಎಂದು. ಆಗ ಸುಪ್ರೀಂ ಕೋರ್ಟ್ ೨೦೧೪ರಲ್ಲಿ ಈ ದೇಶದ ಎಲ್ಲ ಜನರನ್ನು ಸಮಾನರಾಗಿ ಕಾಣಬೇಕು ಅಂತ ತೀರ್ಪು ಕೊಟ್ಟರು. ನಮಗೆ ಇದರಿಂದ ಸಮಾಧಾನ ಆಗಲಿಲ್ಲ. ನಾನು ಮತ್ತು ನನ್ನ ಗೆಳತಿ ಸುಮನ್ ಮತ್ತೆ ಸುಪ್ರೀಂ ಕೋರ್ಟಲ್ಲಿ ಮೊಕದ್ದಮೆ ಹೂಡಿ, 'ನಮಗೆ ಸಮಾನತೆಯಿಲ್ಲ, ನಮ್ಮ ಸಾಂವಿಧಾನಿಕ ಹಕ್ಕುಗಳನ್ನು ಹೇಗೆ ಗಳಿಸಿಕೊಳ್ಳಬೇಕು' ಎಂದು ಪ್ರಶ್ನಿಸಿದೆವು. ಗೌರಿ ಸತ್ತ ಒಂದು ವರ್ಷ ಆದ ಮೇಲೆ ನಮ್ಮ ಪರವಾಗಿ ತೀರ್ಪು ಬಂದಿದೆ. ಒಟ್ಟಿನಲ್ಲಿ ಇದರಿಂದ ಸಂವಿಧಾನಕ್ಕಿಂತ ಸಂಸತ್ತು ದೊಡ್ಡದಲ್ಲ, ಎನ್ನುವುದು ಮತ್ತೊಮ್ಮೆ ಸ್ಥಾಪಿತವಾಗಿದೆ.

**ಜಿ. ರಾಮಕೃಷ್ಣ :** ಇವತ್ತು ಸಂವಿಧಾನಕ್ಕೆ ಮತ್ತೂ ಒಂದು ಸವಾಲಿದೆ. ಅದು ಆಸ್ತಿ ಹಕ್ಕಿನ ಬಗ್ಗೆ. ಚಾರಿತ್ರಿಕವಾಗಿ ೧೯೭೦ರ ದಶಕದಲ್ಲಿ ಮೂಲಭೂತ ಹಕ್ಕುಗಳ ಬಗ್ಗೆ ವಿಪರೀತ ಚರ್ಚೆ ನಡೆದಿತ್ತು. ನಮ್ಮ ಆರ್ಥಿಕ ಸಂರಚನೆಯಲ್ಲಿ ಖಾಸಗಿ ಮಾಲೀಕರಿಗಿರುವಂಥ ಸ್ವಾತಂತ್ರ್ಯ ಮತ್ತು ಸಮಾನತೆಯನ್ನು ಯಾರೂ ಪರಿಷ್ಕರಿಸೋಕೆ ಆಗೋಲ್ಲಾಂತ. ಅದು ಕೇಶವಾನಂದ ಭಾರತಿ ಪ್ರಕರಣದಲ್ಲಿ ಮೂಲಭೂತ ಹಕ್ಕುಗಳನ್ನು ಬದಲಾಯಿಸೋಕೆ ಆಗಲ್ಲಾಂತ. ಪಾರ್ಲಿಮೆಂಟ್ ಇದನ್ನು ಎದುರಿಸಬೇಕಿತ್ತು. ಆದರೆ ನಂತರದ ದಿನಗಳಲ್ಲಿ ಇದು ಚರ್ಚೆಯಿಂದ ಹೊರಗೇ ಉಳಿಯಿತು. ಇವತ್ತು ಅದನ್ನು ಎಲ್ಲರೂ ಮರೆತಿದ್ದಾರೆ.

**ಮುರಳೀಧರ್ :** ಜಿ. ಆರ್. ಅವರು ಹೇಳಿದ್ದನ್ನು ನಾನು ಬೇರೆ ರೀತಿಯಲ್ಲಿ ಅರ್ಥೈಸೋಕೆ ಇಷ್ಟಪಡ್ತೀನಿ. ಅದು ಕೇಶವಾನಂದ ಭಾರತಿ ಪ್ರಕರಣ ಇರಬಹುದು, ಮಿನರ್ವ ಮಿಲ್ ಪ್ರಕರಣ ಇರಬಹುದು, ಇಲ್ಲವೆ ಎಸ್.ಆರ್.ಬೊಮ್ಮಾಯಿ ಪ್ರಕರಣ ಇರಬಹುದು... ಇಲ್ಲೆಲ್ಲಾ ಸಂವಿಧಾನದ ಮೂಲ ಲಕ್ಷಣಗಳನ್ನು ಬದಲಾಯಿಸೋಕೆ ಆಗಲ್ಲ, ತಿದ್ದುಪಡಿ ಮಾಡಬಹುದು ಎಂಬುದಾಗಿದೆ. ಇವತ್ತು ಏನಾದರೂ ಸಂವಿಧಾನ ಉಳಿದಿದ್ದರೆ ಅದು ಸಂವಿಧಾನದ ಈ ಲಕ್ಷಣದಿಂದ. ಹಿಂದೆ ವಸಂತ

ಸಾಠೆಯವರು ಹೇಳ್ತಿದ್ದರು, ನಮಗೆ ಅಧ್ಯಕ್ಷೀಯ ಪ್ರಜಾಪ್ರಭುತ್ವ ಬೇಕೇ ಹೊರತು ಪಾರ್ಲಿಮೆಂಟರಿ ಪ್ರಜಾಪ್ರಭುತ್ವ ಅಲ್ಲ, ಅಂತ. ಆಮೇಲೆ ಆದ್ವಾನಿಯವರು ಇದನ್ನೇ ಹೇಳುತ್ತಿದ್ದರು. ಹಾಗಾದಾಗ ನಮ್ಮ ಸಂವಿಧಾನದ ಮೂಲ ಲಕ್ಷಣಗಳಾದ ಸೆಕ್ಯುಲರಿಸಂ, ಸಮಾಜವಾದ, ಫೆಡರಲಿಸಂಗಳಿಗೆ ಧಕ್ಕೆ ಬರುತ್ತಿತ್ತು.

**ಜಿ.ಆರ್. :** ಈಗ ಸಂವಿಧಾನ ಸುಪ್ರೀಂಕೋರ್ಟಿಗೆ ಒಂದು ಉನ್ನತ ಸ್ಥಾನ ಕೊಟ್ಟಿದೆ ಅಂತ ಇಟ್ಟುಕೊಳ್ಳೋಣ. ಸರ್ವೋಚ್ಚ ನ್ಯಾಯಾಲಯ ಹೇಳೋದು ಸರ್ವಮಾನ್ಯ ಆಗಿದ್ದಿದ್ದರೆ ಶಬರಿಮಲೈ ಘಟನೆ ಹೀಗೇಕಾಗಿರುತ್ತಿತ್ತು? ಪೇಜಾವರದ ಸ್ವಾಮಿಗಳು ಹೇಳುತ್ತಾರೆ, ಇದು ಸುಪ್ರೀಂಕೋರ್ಟಿನ ಅಧಿಕಾರದ ವ್ಯಾಪ್ತಿಗೆ ಬರಲ್ಲ, ಬರಕೂಡದು ಅಂತ. ಅದಕ್ಕೆ ಬೀದಿಗಿಳೀತಿವಿ. ಅಂದರೆ ಏನರ್ಥ? ಆದ್ದರಿಂದ ಸವಾಲುಗಳು ಇರೋದೆ ಇಂತಹ ತೀರ್ಪುಗಳನ್ನು ಅನುಷ್ಠಾನ ಮಾಡುವುದರಲ್ಲಿ ಅಲ್ಲವಾ? ಅದೇ ಈಗಿರುವ ಮುಖ್ಯ ಸವಾಲು. ಈ ಅಯೋಧ್ಯಾ ತೀರ್ಪಿನ ಬಗ್ಗೆ ಹೇಳಿದರು ನೋಡಿ. ಜನರ ಮನಸ್ಸನ್ನು ಅರ್ಥಮಾಡಿಕೊಂಡು ಅದರಂತೆ ತೀರ್ಪುಕೊಡಬೇಕು. ಅಂದರೆ ಅವರಿಗೆ ಅನುಕೂಲವಾಗಿಲ್ಲದಿದ್ದಾಗ ಸಂವಿಧಾನದ ಅಡಿಪಾಯವನ್ನು ಬೇಕಾದರೂ ಅಲ್ಲಾಡಿಸಲು ಇವರು ಸಿದ್ಧರಿರುತ್ತಾರೆ.

**ಪಾಷಾ :** ಅಲ್ಲ, ಇದೇ ಸಂವಿಧಾನ ನೀವು ಬೇರೆಯವರ, ಸಮುದಾಯದ ನಂಬಿಕೆಗಳನ್ನು ಗೌರವಿಸಬೇಕು ಅಂತಲೂ ಹೇಳುತ್ತಲ್ಲಾ! ಹಾಗಾದರೆ ಇದನ್ನು ಹೇಗೆ ಅರ್ಥೈಸುತ್ತೀರಿ?

**ಜಿ. ಆರ್. :** ಯಾರ ನಂಬಿಕೆ? ಈಗ ಒಬ್ಬರ ನಂಬಿಕೆ ಬೇರೆಯವರ ಹಕ್ಕಿಗೆ ತೊಂದರೆಯಾಗುತ್ತಿದ್ದರೆ, ಆ ನಂಬಿಕೆಯನ್ನು ಹೇಗೆ ಮಾನ್ಯ ಮಾಡೋದು? ಅಯ್ಯಪ್ಪ ದೇವರ ಹೆಸರೇ ಗೊತ್ತಿಲ್ಲದಿರುವ ಸಮುದಾಯಗಳು ಬೇಕಾದಷ್ಟು ಇವೆ. ಪ್ರಶ್ನೆ ಅದಲ್ಲ, ಉಚ್ಚ ನ್ಯಾಯಾಲಯದ ತೀರ್ಪನ್ನು ಉಲ್ಲಂಘಿಸುವ ಧಾರ್ಷ್ಟ್ಯ ಎಲ್ಲಿಂದ ಬಂತು?

**ಅಕ್ಕೈ :** ಅಲ್ಲ, ಗಣಪತಿ ದೇವಸ್ಥಾನಕ್ಕೆ ಮಹಿಳೆಯರು ಹೋಗಬಹುದಾದರೆ, ಅಯ್ಯಪ್ಪನ ದೇವಸ್ಥಾನಕ್ಕೆ ಏಕೆ ಹೋಗಬಾರದು? ಹೆಣ್ಣು ಮುಟ್ಟಾಗ್ತಾರೆ, ಅದಕ್ಕೆ ಹೋಗಬಾರದು, ಅಂದರೆ ಅವರಿಗೆ ಮುಟ್ಟು ಕೊಟ್ಟದ್ದು ಪ್ರಕೃತಿನೋ ದೇವರೋ? ಇದರಲ್ಲಿ ತರ್ಕವೇ ಇಲ್ಲ. ಈಗ ಸಂವಿಧಾನ ಏನೇ ಹೇಳಲಿ, ತಕೊಳ್ಳಿ ಮಚ್ಚು, ಹಾಕಿ ಚುಚ್ಚು ಎಂದರೆ ಹೇಗೆ? ಈಗಿರುವ ಕೇಂದ್ರ ಸರ್ಕಾರದ ಮಂತ್ರಿ ಅನಂತಕುಮಾರ ಹೆಗಡೆ, ಈ ಸಂವಿಧಾನಾನ ಬದಲಿಸಬೇಕು, ಎಲ್ಲರ ಕೈಗೆ ಭಗವದ್ಗೀತೆ ಕೊಡಬೇಕು, ಅಂದರೆ ಏನರ್ಥ? ಇನ್ನು ನಮ್ಮ ಲೈಂಗಿಕ ಅಲ್ಪಸಂಖ್ಯಾತರ ವಿಷಯಕ್ಕೆ ಹಿಂದಕ್ಕೆ ಬರೋದಾದರೆ, ಸೆಕ್ಷನ್ ೩೭೭ನ್ನು ಕುರಿತು ೨೦೦೯ರಲ್ಲಿ ತೀರ್ಪು ಬಂತು. ಮತ್ತೆ ೨೦೧೪ರಲ್ಲಿ ಇದೇ ತೀರ್ಪನ್ನು ತಿರುಚಿ ಇದರ ಬಗ್ಗೆ ನ್ಯಾಯಾಲಯ ತೀರ್ಪು ತೆಗೆದುಕೊಳ್ಳತ್ತಲ್ಲ, ಪಾರ್ಲಿಮೆಂಟ್ ನಿರ್ಧಾರ ತೆಗ್ದುಕೊಳ್ಳಲಿ ಅಂತ ಹೇಳಿಬಿಟ್ಟಿತು. ಅಲ್ಲಿ ಪಾರ್ಲಿಮೆಂಟಿನವರು ಇದು ಲೈಂಗಿಕತೆಯ ಪ್ರಶ್ನೆ, ನಮಗೆ ಬರಲ್ಲ ಅಂತ ಹೇಳಿ ಕಿವಿ ಮುಚ್ಚಿದರು. ಆಗ ನಾವು ಯಾರನ್ನು ಹೋಗಿ ಕೇಳಬೇಕು? ಬಂಡವಾಳಶಾಹಿಗಳು, ಮೂಲಭೂತವಾದಿಗಳು ಎಲ್ಲ ಗೆದ್ದು ಬಂದು ಈ ರೀತಿ ಮಾತನಾಡಲಿಕ್ಕೆ ಆರಂಭಿಸಿದರೆ ಇದ್ಯಾವ ಸಂಸತ್ತು ? ಇದ್ಯಾವ ಸಂವಿಧಾನ?

**ಲಕ್ಷ್ಮಿ :** ಮೇಷ್ಟ್ರು ಹೇಳಿದ್ದನ್ನು ನಾನು ಹೀಗೆ ಅರ್ಥ ಮಾಡಿಕೊಳ್ಳಲು ಪ್ರಯತ್ನಿಸುತ್ತೇನೆ. ನಮ್ಮದು ಸಂಪೂರ್ಣ ಅಸಮಾನತೆಯನ್ನು ಹೋಗಿಸುವ ಸಂವಿಧಾನ ಅಲ್ಲದಿದ್ದರೂ ಇವತ್ತಿನ ಬಂಡವಾಳಶಾಹಿ ವ್ಯವಸ್ಥೆಯಲ್ಲಿಯೇ, ಪ್ರಜಾಪ್ರಭುತ್ವದ ಚೌಕಟ್ಟಿನಲ್ಲಿಯೇ ನಮಗೆ ಹಕ್ಕುಗಳನ್ನು ನೀಡುವ ಸಂವಿಧಾನವನ್ನು ಉಳಿಸಿ, ರಕ್ಷಿಸಿಕೊಳ್ಳಬೇಕಾಗಿರುವುದು ಇಂದಿನ ಸವಾಲು. ಇದರಿಂದ ನಾವು ಹೋರಾಟಮಾಡಿ ಮುಂದೆ ನಮಗೆ ಇನ್ನೂ ಹೆಚ್ಚಿನ ಅವಕಾಶಗಳನ್ನು ನೀಡುವಂತಹ ವ್ಯವಸ್ಥೆಗೆ ಹೋರಾಟಮಾಡಬೇಕು ಅಂತ ನಾನು ಅರ್ಥಮಾಡಿಕೊಳ್ತೀನಿ.

**ಜಿ. ಆರ್. :** ನಾನು ಹೇಳುತ್ತಿರೋದು ಅದಲ್ಲ. ಸಂವಿಧಾನ ಯಾವುದೇ ಸ್ವರೂಪದಲ್ಲಿರಲಿ, ಅದು ಇನ್ನು ನೂರು ವರ್ಷಗಳಾದ ಮೇಲೂ ಹಾಗೇ ಇರಬೇಕಂತ ಹೇಳೋಕಾಗತ್ತಾ? ಇನ್ನು ಸಂವಿಧಾನದಲ್ಲಿ ಬದಲಾವಣೆ ತರುವುದಾದರೆ, ಯಾರು ತರುತ್ತಾರೆ, ಯಾರ ಪರವಾಗಿ ತರುತ್ತಾರೆ ಅನ್ನುವುದು ಮುಖ್ಯ ಪ್ರಶ್ನೆ ಅಂದಷ್ಟೇ ನಾನು ಹೇಳುತ್ತಿರುವುದು. ಅದನ್ನು ಪಾರ್ಲಿಮೆಂಟ್ ಮಾಡಬೇಕು. ಆದರೆ ಪಾರ್ಲಿಮೆಂಟಿಗೆ ಆ ಇಚ್ಛೆಯಿಲ್ಲ. ಇನ್ನು ಇವತ್ತಿನ ಪಾರ್ಲಿಮೆಂಟ್ ಏನಾದರೂ ಮಾಡಿದರೆ ಅದು ತುಂಬಾ ಅಪಾಯಕಾರಿಯಾಗಿಯೂ ಇರುತ್ತದೆ.

**ಲಕ್ಷ್ಮಿ :** ಹೌದು. ಅದು ಹೇಗೆ ಅಂದರೆ, ಈಗ ಫ್ಯಾಕ್ಟರಿಗಳಲ್ಲಿ ಕಾರ್ಮಿಕರಿಗೆ ಸಂಘ ಕಟ್ಟಿಕೊಳ್ಳುವ ಹಕ್ಕೂ ಕೊಟ್ಟು ಮಾಲೀಕರಿಗೆ ಫ್ಯಾಕ್ಟರಿ ಮುಚ್ಚುವ ಹಕ್ಕೂ ಕೊಟ್ಟಂತೆ.

**ಪಾಷಾ :** ಅಂದರೆ, ಇರುವಂತಹ ಸಂವಿಧಾನವನ್ನೇ ಆಡಳಿತ ಪಕ್ಷದವರು ತಮಗೆ ಬೇಕಾದಂತೆ ತಿರುಚಿಕೊಳ್ಳಬಹುದು ಎಂದೆನ್ನುವುದಾದರೆ, ಸಂವಿಧಾನದಲ್ಲೇ ಎಲ್ಲೋ ದೋಷವಿದೆಯೆಂದು ಅರ್ಥವೇ?

**ಮುರಳೀಧರ್ :** ಹೌದು ಕೆಲವು ದೋಷಗಳಿವೆ. ಅದನ್ನು ಉದಾಹರಣೆಗಳೊಂದಿಗೆ ಹೇಳಬಹುದು. ಈಗ ನ್ಯಾಯಮೂರ್ತಿ ವೆಂಕಟಾಚಲಯ್ಯನವರ ವರದಿಯನ್ನೇ ತೆಗೆದುಕೊಳ್ಳುವುದಾದರೆ, ಆ ಸಮಿತಿಯಲ್ಲಿ ಜಸ್ಟಿಸ್ ಕೃಷ್ಣ ಅಯ್ಯರ್ ಇದ್ದರು, ಜಸ್ಟಿಸ್ ಜೀವನ್ ರೆಡ್ಡಿ, ಇನ್ನು ಹಲವಾರು ಮಂದಿ ಕೊಟ್ಟಿರುವ ವರದಿಯಲ್ಲಿ ಈಗಿನ ಸಂವಿಧಾನದಲ್ಲಿ ಯಾವುದು ರಿಡಂಟೆಂಟ್ ಅಂತ ಹೇಳಿಲ್ಲ. ಆದರೆ ಕೆಲವು ಹೊಸ ಅಂಶಗಳನ್ನು ಸೇರಿಸಬೇಕು ಅಂತ ಹೇಳಿದಾರೆ. ಉದಾಹರಣೆಗೆ ಚುನಾವಣಾ ಸುಧಾರಣೆಗಳು. ಈಗಿನಂತೆ ಶೇಕಡ ೩೧ ತೆಗೆದುಕೊಂಡವರು ಪ್ರಧಾನಿ ಮಂತ್ರಿ ಆಗಬಹುದಲ್ಲ, ಅದು ಬೇಡ. ಶೇಕಡ ೫೦ ಮತಗಳು ಬಂದರೆ ಮಾತ್ರ ಚುನಾವಣೆಯಲ್ಲಿ ಗೆಲ್ಲೋಕೆ ಸಾಧ್ಯ ಅಂತಾಗಬೇಕು ಅಂತಹ ಸಲಹೆ ಕೊಟ್ಟಿದ್ದರು.

**ಪಾಷಾ :** ಒಮ್ಮೆ ಬರದಿದ್ದರೆ,

**ಮುರಳೀಧರ್ :** ಇಲ್ಲದಿದ್ದರೆ, ಮತ್ತೆ ಎರಡನೇ ಸಲ ಚುನಾವಣೆ ನಡೆಯಬೇಕು. ಈಗ ಬ್ರೆಜಿಲ್, ವೆನಿಜುಲಾನಲ್ಲಿ ಆದಂತೆ ಮತ್ತೊಮ್ಮೆ ಚುನಾವಣೆ





ನಡೆಯಬೇಕು. ನಿಜವಾದ ಪ್ರಜಾಪ್ರಭುತ್ವ ಆಗಬೇಕೆಂದರೆ ಇದು ಅವಶ್ಯ ಅಂತ. ಈಗ ಜಮ್ಮು ಕಾಶ್ಮೀರದಲ್ಲಿ ನೋಡಿ ಶೇಕಡ ಮೂರು ಬಂದರೂ ಚುನಾವಣೆಯಲ್ಲಿ ಗೆಲ್ಲಬಹುದು, ಅಂದರೆ ಏನು ಅರ್ಥ?

**ಲಕ್ಷ್ಮಿ :** ಇಲ್ಲಿ ನನ್ನದೊಂದು ಅನುಭವಾನ ಹಂಚಿಕೊಳ್ಳೋಕೆ ಇಷ್ಟಪಡುತ್ತೀನಿ. ನಮ್ಮ ಮನೆಯ ಎದುರಿಗೆ ಒಂದು ದೇವಸ್ಥಾನ ಇದೆ. ದಸರಾ ಹಬ್ಬದ ಸಂದರ್ಭದಲ್ಲಿ ಅಲ್ಲಿ ಪೂಜೆ, ಉತ್ಸವಗಳು ಅದ್ದೂರಿಯಾಗಿ ನಡೆಯುತ್ತವೆ. ಅಲ್ಲಿ ನಮ್ಮ ಮಹಿಳಾ ಸಂಘಟನೆಯ ವತಿಯಿಂದ ಈಗ ಬಂದಿರುವ ಸುಪ್ರೀಂಕೋರ್ಟಿನ ತೀರ್ಪನ್ನು ಬೆಂಬಲಿಸಲು ನಾವು ಒಂದು ಹದಿನೈದು ಜನ ಫಾರ್ಮು ತೊಗೊಂಡು ಒಂದು ಸಹಿ ಅಭಿಯಾನಕ್ಕೆ ಇಳಿದೆವು. ಮೊದಲಿಗೆ ಆ ದೇವಸ್ಥಾನದ ಟ್ರಸ್ಟಿಗಳನ್ನು ಮಾತಾಡಿಸಿದೀವಿ. ಅವರೆಲ್ಲಾ ಓಬಿಸಿಗೆ ಸೇರಿದವರು. ಸಂಜೆ ೬.೩೦ರಿಂದ ರಾತ್ರಿ ೯ ಗಂಟೆಯವರೆಗೆ ಸಹಿ ಸಂಗ್ರಹಿಸಿದೀವಿ. ಅದರಲ್ಲಿ ಬೆಂಬಲಿಸಿ ಸಹಿ ಮಾಡಿದವರು ಕೇವಲ ೨೬೦ ಮಂದಿ ಮಾತ್ರ. ಉಳಿದವರು, ಅದರಲ್ಲಿ ಅವಿದ್ಯಾವಂತರಿದ್ದರು, ವಿದ್ಯಾವಂತರೂ ಇದ್ದರು. ಲೆಕ್ಚರರ್‌ಗಳು ಎಲ್ಲರೂ ಇದ್ದರು. ಅವರು ನಮ್ಮ ಮೇಲೆ ಸಿಟ್ಟು, ಕೋಪ, ಜಗಳ ಎಲ್ಲ ತೋರಿಸಿಬಿಟ್ಟರು. ಕೊನೆಗೆ ಇಲ್ಲಿಂದ ಹೋಗಿ ಅಂತ ಹೊಡೆಯೋಕೆ ಬಂದರು. ಇಲ್ಲಿ ನನ್ನ ಪ್ರಶ್ನೆ ಏನೆಂದರೆ ಏಕೆ ನಮ್ಮ ಪ್ರಭುತ್ವ ನಮ್ಮ ಪ್ರಜೆಗಳಿಗೆ ಸಂವಿಧಾನದ ಆಶಯಗಳನ್ನು ಅರ್ಥಮಾಡಿಸುವಲ್ಲಿ ವಿಫಲವಾಗಿದೆ. ಒಂದು ಐದೋ ಆರನೇ ಕ್ಲಾಸಿನಲ್ಲಿ ಓದುವಾಗ ಸಂವಿಧಾನದ ಶಬ್ದ ಕಿವಿಯ ಮೇಲೆ ಬೀಳತ್ತೆ. ಆಮೇಲೆ ರಾಜ್ಯಶಾಸ್ತ್ರ ಓದಿದರೆ, ಇಲ್ಲ ಕಾನೂನು ಓದಿದರೆ ಸಂವಿಧಾನದ ವಿಷಯದ ವ್ಯಾಪ್ತಿ ಗೊತ್ತಾಗತ್ತೆ. ಆಗಲೂ ಅದು ಶೈಕ್ಷಣಿಕ ಪಠ್ಯವಾಗಿ, ಅಂಕ ಗಳಿಸುವ ವಿಷಯವಾಗಿ ಮಾತ್ರ ಮುಖ್ಯವಾಗುತ್ತೆ. ಸಂವಿಧಾನದ ಆಶಯಗಳಿಗೆ ನಮ್ಮ ಎಲ್ಲ ಸಾಮಾನ್ಯ ಜನರನ್ನು ತೆರೆದುಕೊಳ್ಳುವಂತೆ ಅರ್ಥಮಾಡಿಸುವುದು ಹೇಗೆ? ಅದು ಯಾರ ಹೊಣೆ?

**ಜಿ. ಆರ್. :** ಇಲ್ಲ, ಶಾಲಾ ಕಾಲೇಜುಗಳಲ್ಲಿ ಪಠ್ಯದ ಭಾಗವಾಗಿ ಸಂವಿಧಾನದ ಪರಿಚಯ ಇದೆ. ಇದ್ದರೂ ಅದನ್ನು ಬದುಕಿಗೆ ಅನ್ವಯಿಸುವ ಪ್ರಯತ್ನ ನಡೆಯುತ್ತಿಲ್ಲ.

**ಲಕ್ಷ್ಮಿ :** ಅದನ್ನೇ ನಾನು ಹೇಳುತ್ತಿರೋದು. ನಾವು ಶಬರಿಮಲೆ ಪ್ರಕರಣದಲ್ಲಿ ಜನರ ನಡುವೆ ಸಹಿ ಸಂಗ್ರಹ ಮಾಡಲಿಕ್ಕೆ ಹೋದಾಗ ಸಂವಿಧಾನದ ಆಶಯಗಳಿಗಿಂತ ಹೆಚ್ಚಾಗಿ ಅಲಿಖಿತ ಶಾಸನಗಳು, ಸಂಪ್ರದಾಯಗಳು ಈ ಜನರನ್ನು ಹೆಚ್ಚು ಪ್ರಭಾವಿಸುತ್ತಿರುವುದನ್ನು ಕಂಡೆವು. ನಾವು ಅದರ ಬಗ್ಗೆ ಹೆಚ್ಚು ಗಮನ ಹರಿಸಬೇಕು ಅಂತ ಅನ್ನಿಸತ್ತೆ.

**ಮುರಳಿಧರ್ :** ನೀವು ಶಬರಿಮಲೆ ವಿಷಯ ಎತ್ತಿದ್ದಕ್ಕೆ ಒಂದು ವಿಷಯ ಸ್ಪಷ್ಟಪಡಿಸಕ್ಕೆ ಇಷ್ಟಪಡುತ್ತೀನಿ. ಇದು ಸಾಂವಿಧಾನಿಕವಾಗಿ ಸರಿಯೆನಿಸುವ ತೀರ್ಪು. ಏಕೆಂದರೆ ಇದನ್ನು ನೀಡುವಾಗ ಅವರು ೧೯೫೨ರಲ್ಲಿ ಮುಂಬೈ ಹೈಕೋರ್ಟಿನ ಜಸ್ಟಿಸ್ ಚಾಗ್ಲಾ ಮತ್ತು ಜಸ್ಟಿಸ್ ಗಜೇಂದ್ರಗಡ್ ಅವರು ಬಹುಪತ್ನಿತ್ವಕ್ಕೆ ಸಂಬಂಧಪಟ್ಟಂತೆ ಕೊಟ್ಟಿರುವ ತೀರ್ಪನ್ನು ಆಧರಿಸಿದ್ದಾರೆ. ಸಾಮಾನ್ಯವಾಗಿ ಹಿಂದೂ ಧರ್ಮಕ್ಕೆ ಸಂಬಂಧಪಟ್ಟಂತೆ ತೀರ್ಪು ನೀಡುವಾಗ ಸ್ಮೃತಿ, ಶ್ರುತಿಗಳಲ್ಲಿ ಏನು ಹೇಳಿದೆ, ಅಂತ ನೋಡುತ್ತಾರೆ, ಮತ್ತೆ ಸಂಪ್ರದಾಯ ಮತ್ತು ಆಚರಣೆಗಳು ಎಷ್ಟು ಹಳೆಯವು ಅಂತಲೂ ನೋಡುತ್ತಾರೆ. ಇಲ್ಲಿ ಶಬರಿಮಲೆಯಲ್ಲಿ ೨೭ ವರ್ಷಕ್ಕಿಂತ ಹಿಂದೆ ಹೆಣ್ಣುಮಕ್ಕಳಿಗೆ ಪ್ರವೇಶ ಇತ್ತು. ಆದ್ದರಿಂದ ಸುಪ್ರೀಂ ಕೋರ್ಟು ೧೪ನೇ ಕಲಮಿನ ಪ್ರಕಾರ ಸಮಾನತೆಯನ್ನು ಎತ್ತಿಹಿಡಿಯಲು ಮತ್ತು ೨೫(೨)ನೇ ಕಲಮಿನ ಪ್ರಕಾರ ಲಿಂಗದ ಕಾರಣಕ್ಕೆ ಪ್ರತ್ಯೇಕತೆಯನ್ನು ಆಚರಿಸಕ್ಕಾಗಲ್ಲ. ಇನ್ನು ಅದರಿಂದ ಸಾರ್ವಜನಿಕರಿಗೆ ಏನೂ ತೊಂದರೆ ಆಗುವುದಿಲ್ಲ, ಅದರಿಂದ ಆರೋಗ್ಯಕ್ಕೆ ತೊಂದರೆ ಆಗುವುದಿಲ್ಲ ಮತ್ತು ಸಾರ್ವಜನಿಕ ನೈತಿಕತೆಯನ್ನು ಗಮನದಲ್ಲಿಟ್ಟುಕೊಂಡಿದೆ – ಈ ಮೂರೂ ಅಂಶಗಳನ್ನು ಸುಪ್ರೀಂಕೋರ್ಟ್ ಶಬರಿಮಲೆ ತೀರ್ಪಿನಲ್ಲಿ ಗಮನಿಸಿದೆ. ಆದರೆ ಇಂದು ಮಲ್ಹೋತ್ರಾ ಅವರು ಕೊಟ್ಟ ತೀರ್ಪಿನಲ್ಲಿ ಈ ಪದ್ಧತಿ ಅತ್ಯಂತ ಪುರಾತನವಾದುದು ಎಂಬ ಅಂಶವನ್ನು ಮಾತ್ರ ಎತ್ತಿ ಹಿಡಿದಿದ್ದರು.

**ಪಾಷಾ :** ಇಲ್ಲಿ ಜನರ ನಂಬಿಕೆಗಳು ಮತ್ತು ಆಚರಣೆಗಳು ಎಷ್ಟು ಪುರಾತನವಾದದ್ದು ಎಂಬುದನ್ನು ಚರ್ಚಿಸುತ್ತಿದ್ದೇವೆ. ಆದರೆ, ಲಕ್ಷ್ಮಿಯವರು ಹೇಳಿದಂತೆ ಬಹುಪಾಲು ಮಹಿಳೆಯರು ತೀರ್ಪಿನ ವಿರುದ್ಧವೇ ಇದ್ದಾರೆ, ಅವರ ನಂಬಿಕೆಗಳು ಅಷ್ಟು ಗಾಢವಾಗಿವೆ ಅಂದಾಗ ನಾವು ಏನು ಮಾಡಬೇಕು?

**ಲಕ್ಷ್ಮಿ :** ನಾವು ಮಾತನಾಡಿಸಿದ ಹೆಂಗಸರಿಗೆ ಮುಟ್ಟು, ಮೈಲಿಗೆಗಳ ಬಗ್ಗೆ ಆಳವಾದ ನಂಬಿಕೆ ಇರುವುದನ್ನು ಗಮನಿಸಿದೆವು. ಅವರನ್ನು ಹೋಗಿ ಅಂದರೂ ಅವರು ದೇವಾಲಯಕ್ಕೆ ಹೋಗಲ್ಲ. ಆಗ ನಮ್ಮ ಜವಾಬ್ದಾರಿ ಏನಾಗಬೇಕು ಅಂದರೆ ವೈದ್ಯರನ್ನು ಕರೆದುಕೊಂಡು ಹೋಗಿ ಮುಟ್ಟಿನ ಬಗ್ಗೆ ತಿಳುವಳಿಕೆ ಮಾಡಿಸುವಂತಹ ಕಾರ್ಯಕ್ರಮ ಹಾಕಿಕೊಳ್ಳಬೇಕೆಂದುಕೊಂಡಿದ್ದೇವೆ.

**ಅಕ್ಕೈ :** ದೇವರನ್ನು ಮುಟ್ಟಕ್ಕೆ ಕೆಲವರಿಗೆ ಹೆದರಿಕೆಯಾದ್ದರಿಂದ ಪ್ರವೇಶ ಬೇಡ ಅಂದುಕೊಂಡರೆ, ನಮಗೆ ಕೆಲವರಿಗೆ ದೇವರನ್ನು ಮುಟ್ಟಬೇಕು ಅಂತ ಅನಿಸುತ್ತೆ. ಆ ನಮ್ಮ ಭಾವನೆಗೂ ಬೆಲೆ ಕೊಡಬೇಕಲ್ಲವಾ? ಇದರ ಹಿಂದೆ ವೋಟಿನ ರಾಜಕೀಯವನ್ನು ಗುರುತಿಸಬೇಕು.

**ಪಾಷಾ :** ಈಗ ಸಂವಿಧಾನದಡಿಯಲ್ಲಿ ದಲಿತರು, ಅಲ್ಪಸಂಖ್ಯಾತರು, ಮಹಿಳೆಯರು ಹೀಗೆ ಕೆಲವು ಸಮುದಾಯಗಳಿಗೆ ಮೀಸಲಾತಿಯನ್ನು ಕಲ್ಪಿಸಿ ಕೊಡಲಾಗಿದೆ. ಅದರಿಂದ ಇಂತಹ ಸವಲತ್ತು ಇಲ್ಲದ ಗುಂಪುಗಳು ಇನ್ನೆಷ್ಟು ದಿನ ಈ ಮೀಸಲಾತಿ ಮುಂದುವರೆಯಬೇಕು? ಇದರಿಂದ ಸಮಾನತೆಗೆ ಧಕ್ಕೆಯಾಗೋಲ್ವೆ ಅಂತ ಪ್ರಶ್ನೆ ಕೇಳುತ್ತಿರುತ್ತಾರೆ? ಇದಕ್ಕೆ ನಿಮ್ಮಗಳ ಪ್ರತಿಕ್ರಿಯೆ...

**ಮುರಳಿಧರ್ :** ಇದು ತುಂಬ ಹಳೆಯ ಪ್ರಶ್ನೆ. ಪುನಃ ಪುನಃ ಎದ್ದು ಬರುತ್ತಲೇ ಇರುತ್ತದೆ. ಮೊನ್ನೆ ಊನಾದಲ್ಲಿ ನಾಲ್ಕು ಜನ ದಲಿತರನ್ನು ಕೊಂದಾಗ, ಅಯ್ಯೋ ಇವರಿಗೆ ಇನ್ನೂ ರಕ್ಷಣೆ ಬೇಕು ಅಂತ ನನಗೆ ಅನ್ನಿಸಿತು. ನಾವು ಒಬ್ಬರಿಗೆ ಸಮಾನತೆ ಕೊಡಿಸಬೇಕು ಅಂದಾಗಲೇ, ಅಲ್ಲಿ ಮತ್ತೊಬ್ಬರಿಗೆ ಅಸಮಾನತೆಯನ್ನು ಹುಟ್ಟುಹಾಕುತ್ತಿರುತ್ತೇವೆ. ಈಗ ಒಬ್ಬ ದಲಿತ ಮತ್ತು ಬ್ರಾಹ್ಮಣ ಇಬ್ಬರು ಸಂವಿಧಾನದ ಅನುಚ್ಛೇದ ೧೪ರ ಪ್ರಕಾರ ಸಮಾನ ಹಕ್ಕುಗಳಿಗಾಗಿ ಸ್ಪರ್ಧಿಸಬಹುದು. ಆದರೆ ಅದಕ್ಕೆ ಅನುಚ್ಛೇದ ೧೬ರನ್ನು ತಂದದ್ದು ಬಾಬಾ ಸಾಹೇಬ್ ಅಂಬೇಡ್ಕರ್ ನೇತೃತ್ವದಲ್ಲಿ ರಚಿತವಾದ ಸಂವಿಧಾನದಲ್ಲೇ ಈ ಎಲ್ಲ ಅಂಶಗಳೂ ಅಡಕವಾಗಿವೆ. ಅದರ ಬಗ್ಗೆ ಪಾರ್ಲಿಮೆಂಟಿನಲ್ಲಿ ದೀರ್ಘವಾದ ಚರ್ಚೆ ನಡೀತು. ಈ ಚರ್ಚೆ ನಡೆಯುತ್ತಿದ್ದಾಗ ಜವಹರಲಾಲ್ ನೆಹರೂ ಅವರು ಒಂದು ಮಾತು ಹೇಳಿದರು. ಅದು ಅವತ್ತಿಗಷ್ಟೇ ಅಲ್ಲ, ಇವತ್ತಿಗೂ ಸರಿ ಅಂತ ಅನ್ನಿಸತ್ತೆ. ಕೆಳಗಿನವರನ್ನು ಮೇಲಕ್ಕೆತ್ತಲು ಅನುಚ್ಛೇದ ೧೬ ಬೇಕಾಗುತ್ತೆ. ಈ ಮೀಸಲಾತಿಯನ್ನು ಅವರು 'ಧನಾತ್ಮಕ ತಾರತಮ್ಯ' ಅಂತ ಕರೆದರು. ಸಾವಿರಾರು ವರ್ಷಗಳಿಂದ ಇರುವ ಅಸಮಾನತೆಯ ಹಿನ್ನೆಲೆಯಲ್ಲಿ ಈ ಎಪ್ಪತ್ತು ವರ್ಷಗಳ ಮೀಸಲಾತಿ ಏನೇನೂ ಸಾಲದು. ಎಲ್ಲಿಯವರೆಗೆ ದಲಿತರ ಮೇಲೆ ದೌರ್ಜನ್ಯ ನಡೀತಿರತ್ತೆ, ದಲಿತರ ಕೈಯಲ್ಲಿ ಮಲ ಹೊರಿಸುವ ಕೆಲಸ ನಡೆಯುತ್ತಿರತ್ತೆ, ಅಲ್ಲಿಯವರೆಗೆ ಅವರನ್ನು ಮೇಲೆ ತರುವ ಪ್ರಯತ್ನ ಮಾಡಲೇಬೇಕು. ಅದು ಸಂವಿಧಾನದ ಆಶಯವೂ ಕೂಡ. ಅಲ್ಲಿಯವರೆಗೂ ಅನುಚ್ಛೇದ ೧೬ ಇರಲೇಬೇಕಾಗುತ್ತೆ. ಆದರೆ ಇದು ಯಾತಕ್ಕಿರಬೇಕು ಮತ್ತು ಎಲ್ಲಿಯವರೆಗೆ ಇರಬೇಕು ಅನ್ನುವ ಪ್ರಶ್ನೆಯೂ ಇದ್ದೇ ಇರತ್ತೆ. ಈಗ ಗುಜರಾತಿನಲ್ಲಿ ಈ ಪತಿದಾರ್ ಸಮುದಾಯದವರು ಕೃಷಿಯನ್ನು ತಮ್ಮ ಹಿಡಿತದಲ್ಲಿಟ್ಟುಕೊಂಡಿದ್ದರು. ಯಾವಾಗ ಕೃಷಿ ಆದಾಯ

ತರುವ ಕಸಬಲ್ಲ ಅಂತ ಗೊತ್ತಾಯಿತೋ ಆಗ ಅವರೆಲ್ಲ ಹಳ್ಳಿ ಬಿಟ್ಟು ನಗರಕ್ಕೆ ವಲಸೆ ಬಂದರು. ಅಲ್ಲೂ ಅವರಿಗೆ ನೌಕರಿ ಸಿಗಲಿಲ್ಲ. ಆಗ ನಮಗೂ ಮೀಸಲಾತಿ ಕೊಡಿ ಅಂತ ಕೂಗೆಬ್ಬಿಸಿದರು. ಎಲ್ಲಿಯವರೆಗೆ ಈ ದೇಶದಲ್ಲಿ ಎಲ್ಲ ಕೈಗಳಿಗೆ ಕೆಲಸ ಇರಲ್ಲವೋ ಅಲ್ಲಿಯವರೆಗೆ, 'ಅವರಿಗೆ ಮೀಸಲಾತಿ ಕೊಡಬೇಡಿ, ನಮಗೂ ಮೀಸಲಾತಿ ಕೊಡಿ' ಎನ್ನುವಂತಹ ಕೂಗು ಕೇಳುತ್ತಲೇ ಇರುತ್ತೆ. ಅದಕ್ಕೆ ಪರಿಹಾರ ಕೊಡಬೇಕಾದ್ದು ಪ್ರಭುತ್ವದ ಕೆಲಸ. ಆದ್ದರಿಂದ ಈ ಮೀಸಲಾತಿ ಎನ್ನುವುದು ಸಂವಿಧಾನದ ನಿರ್ದೇಶಕ ತತ್ವದಲ್ಲಿದೆ. ಇನ್ನೂ ಇರಬೇಕಿದೆ.

**ಜಿ. ಆರ್. :** ಈಗ ಮೀಸಲಾತಿಯ ಪ್ರಶ್ನೆ ೧೯೫೦ರಲ್ಲಿದ್ದದ್ದಕ್ಕೂ ೧೯೮೦ರ ಸಂದರ್ಭಕ್ಕೂ ಭಿನ್ನವಾಗಿದೆ. ಮೀಸಲಾತಿ ಯಾವ ಉದ್ಯೋಗದಲ್ಲಿ ಕೊಡುತ್ತಾರೆ? ಸರ್ಕಾರಿ, ಸಾರ್ವಜನಿಕ ಉದ್ದಿಮೆ, ವಿಶ್ವವಿದ್ಯಾಲಯಗಳಲ್ಲಿ ಈಗ ಸರ್ಕಾರ ಕೈತೊಳೆದು ಕೊಂಡು ಎಲ್ಲವನ್ನು ಮುಚ್ಚುತ್ತಾ ಹೊರಟಾಗ ಎಲ್ಲಿ ಮೀಸಲಾತಿ ಕೊಡುವುದು? ಇನ್ನು ಗುಜರಾತಿನಲ್ಲಿ ನವ ನಿರ್ಮಾಣ ಚಳುವಳಿ ಅಂತ ಏನೋ ಗದ್ದಲ ಮಾಡಿದಾಗ ಎಲ್ಲ ಡಾಕ್ಟರ್, ಇಂಜನಿಯರ್, ಲೆಕ್ಚರರ್ ಕೆಲಸಗಳನ್ನು ಮೀಸಲಾತಿಯವರು ತೊಗೊಂಡು ಬಿಡ್ತಾರೆ, ನಮಗೇನು ಸಿಕ್ಕಲ್ಲ, ಅಂತಂದ ಸಂದರ್ಭದಲ್ಲಿ ಒಂದು ಸರ್ವೆ ಮಾಡಿದ್ದರು. ಆ ಹುದ್ದೆಗಳಲ್ಲಿ ತುಂಬೋಕೆ ಕೆಳ ಜಾತಿ ಸಮುದಾಯದಲ್ಲಿ ಅರ್ಹ ಅಭ್ಯರ್ಥಿಗಳೇ ಇರಲಿಲ್ಲ. ಹಾಗೇ ಸರ್ಕಾರಿ ನೇಮಕಾತಿಗಳೇ ಇಲ್ಲದಿರುವಾಗ ಎಲ್ಲಿಂದ ಮೀಸಲಾತಿ ತುಂಬೋದು? ಇನ್ನು ಸರ್ಕಾರಿ ಶಾಲಾ ಕಾಲೇಜುಗಳನ್ನು ಮುಚ್ಚುತ್ತಾ ಹೋದರೆ, ಮತ್ತೆ ಮೀಸಲಾತಿ ಎಲ್ಲಿ, ಯಾರಿಗೆ ಸಿಕ್ಕುತ್ತೆ? ಸರ್ಕಾರಿ ಉದ್ಯೋಗಗಳನ್ನೇ ಹುಟ್ಟು ಹಾಕದೆ ಮೀಸಲಾತಿಯ ಬಗ್ಗೆ ಹುಯಿಲೆಬ್ಬಿಸಿದರೆ ಅದು ಗಾಳಿಯಲ್ಲಿ ಗುದ್ದಾಡಿದಂತೆ.

**ಲಕ್ಷ್ಮಿ :** ಅದಕ್ಕೆ ಖಾಸಗಿ ಸಂಸ್ಥೆಗಳಲ್ಲಿ, ಐಟಿ ವಲಯಗಳಲ್ಲಿಯೂ ಮೀಸಲಾತಿ ಕೊಡಬೇಕು ಅಂತ ನಾವು ಕೇಳುತ್ತಿದ್ದೀವಿ.

**ಜಿ. ಆರ್. :** ಕೇಳಬಹುದು, ಸರಿ. ಆದರೆ ಕೊಡಕ್ಕೆ ಬರಲ್ಲ. ಏಕೆಂದರೆ ಸಂವಿಧಾನದಲ್ಲಿ ಅದಕ್ಕೆ ಸಾಧ್ಯತೆಯಿಲ್ಲ.

**ಮುರಳಿಧರ್ :** ಸರ್, ಈ ಸಂಬಂಧದಲ್ಲಿ ನಾವು ಶ್ರೀಮಂತರ ಮೀಸಲಾತಿ ಬಗ್ಗೆಯೂ ಹೇಳ ಬೇಕು. ಈ ಇಂಜಿನಿಯರ್, ಮೆಡಿಕಲ್ ಸೀಟುಗಳನ್ನು ಖಾಸಗಿ ಕಾಲೇಜುಗಳಲ್ಲಿ ಕ್ಯಾಪಿಟೇಶನ್ ಶುಲ್ಕ ಕೊಟ್ಟು ಕೊಂಡರೆ ಅದೂ ಮೀಸಲಾತಿಯೇ. ಯಾರಿಗೆ ದುಡ್ಡಿದೆಯೋ ಅವರಿಗೆ ಮಾತ್ರ ಸಿಕ್ಕುವಂತಹುದು.

**ಅಕ್ಕೈ :** ನೀವೆಲ್ಲ ಈ ಮೀಸಲಾತಿಯ ಬಗ್ಗೆ ಮಾತನಾಡ್ತಿದೀರ. ಆದರೆ ನಾನು ಪ್ರತಿನಿಧಿಸುವ ಲಿಂಗತ್ವ ಅಲ್ಪ ಸಮುದಾಯಕ್ಕೆ ಯಾವುದೇ ಮೀಸಲಾತಿಯ ಬಲವಿಲ್ಲ. ಆದರೆ ಅದು ಖಂಡಿತ ಬೇಕು. ಮೊದಲಿಗೆ ನಮ್ಮನ್ನು ಮನುಷ್ಯರೂ ಅಂತ ಗುರುತಿಸುತ್ತಿರೋದೇ ಇತ್ತೀಚೆಗೆ. ಇನ್ನು ನಮ್ಮ ಮೇಲೂ ದೌರ್ಜನ್ಯಗಳಾಗುತ್ತವೆ ಮತ್ತು ಅದಕ್ಕೆ ರಕ್ಷಣೆಯ ಅಗತ್ಯವಿದೆ ಎನ್ನುವುದನ್ನು ಗುರುತಿಸಿದ್ದು ವರ್ಮಾ ವರದಿ. ದೇಶದ ಚರಿತ್ರೆಯಲ್ಲಿ ಒಂದು ಮೈಲಿಗಲ್ಲಾದ ವರದಿ ಇದು. ಆದ್ದರಿಂದ ಸಂವಿಧಾನದ ಮೀಸಲಾತಿಯ ಚರ್ಚೆಯಲ್ಲಿ ನಮಗೂ ಅಗತ್ಯವಾಗಿ ಮೀಸಲಾತಿ ಕೊಡುವುದನ್ನು ಪರಿಗಣಿಸಬೇಕು.

**ಪಾಷಾ :** ಕೊನೆಯದಾಗಿ ಈ ಚರ್ಚೆಯನ್ನು ಮುಗಿಸುವ ಮುನ್ನ ಈ ಸಂವಿಧಾನದ ಆಶಯಗಳನ್ನು ಎಲ್ಲ ಜನರ ಬಳಿ ತೆಗೆದುಕೊಂಡು ಹೋಗಲು ನೀವು ಕಾರ್ಯಪ್ರವೃತ್ತವಾಗಿರುವ ಕ್ಷೇತ್ರಗಳಲ್ಲಿ ಏನು ಮಾಡಬಹುದು?

**ಮುರಳಿಧರ್ :** ನನ್ನದೊಂದು ಸಲಹೆ. ನಾವು ಸಂವಿಧಾನದ ಬಗ್ಗೆ ಮಾತನಾಡುವಾಗಲೆಲ್ಲಾ ಅದು ಕೊಟ್ಟಿರುವ ಹಕ್ಕುಗಳ ಬಗ್ಗೆ ಮಾತಾಡ್ತೀವಿ. ಆದರೆ ನಾವು ಸಂವಿಧಾನ ನಮ್ಮಿಂದ ನಿರೀಕ್ಷಿಸುವ ಕರ್ತವ್ಯಗಳ ಬಗ್ಗೆ ಮಾತಾಡಬೇಕು. ಅದು ದೇಶದ ಅಖಂಡತೆಯನ್ನು ಕುರಿತಾಗಿರಬಹುದು, ಜಾತ್ಯತೀತತೆ, ರಾಷ್ಟ್ರೀಯತೆ, ವೈಜ್ಞಾನಿಕ ಮನೋಭಾವ – ಇವುಗಳನ್ನು ಹೊಂದುವುದು ಮುಖ್ಯ ಎಂದು ಒತ್ತಿ ಹೇಳಬೇಕು. ಹಾಗೆ ನೋಡಿದರೆ, ಅನಂತಕುಮಾರ ಹೆಗಡೆಯಂತಹವರು ಪ್ರತಿ ದಿನ ಸಂವಿಧಾನದ ಆಶಯಗಳನ್ನು ಉಲ್ಲಂಘಿಸುತ್ತಿರುತ್ತಲೇ ಇರುತ್ತಾರೆ. ಸಂವಿಧಾನದ ಕರ್ತವ್ಯಗಳನ್ನು ಪರಿಚಯಿಸು ವಂತಹ ಸೆಮಿನಾರ್, ವಿಚಾರಸಂಕಿರಣಗಳನ್ನು ಏರ್ಪಡಿಸಬಹುದು.

**ಲಕ್ಷ್ಮಿ :** ಔಪಚಾರಿಕ ಶಿಕ್ಷಣದಲ್ಲಿರುವ ಸಂವಿಧಾನದ ಪಠ್ಯವನ್ನು ಇನ್ನೂ ಹೆಚ್ಚು ಗಂಭೀರವಾಗಿ ಪರಿಗಣಿಸುವಂತೆ ಮಾಡಬೇಕು. ಅದಕ್ಕಿಂತ ಹೆಚ್ಚಾಗಿ, ಅನೌಪಚಾರಿಕವಾಗಿ ನಾವು ಕೆಲಸ ಮಾಡುತ್ತಿರುವ ಎಲ್ಲ ರಂಗಗಳಲ್ಲೂ ಸಂವಿಧಾನದ ಜಾಗೃತಿ ಮೂಡುವಂತೆ ಮಾಡಬೇಕು. ಹಾಗೆಯೇ ಎಲ್ಲ ವಯೋಮಾನದ, ಲಿಂಗದ ಜನರ ಜೊತೆಯಲ್ಲಿ ಚರ್ಚೆ, ಸೆಮಿನಾರ್, ಮಾತು–ಕತೆಯ ಮೂಲಕ ಸಂವಿಧಾನದ ಆಶಯಗಳನ್ನು ತಲುಪಿಸುವ ಕೆಲಸ ಮಾಡಲು ಸಂಘಟನೆ ಮಾಡಬೇಕು. ಶಾಸಕಾಂಗ ಮತ್ತು ಕಾರ್ಯಾಂಗಗಳಿಗೆ ಛಾಟಿ ಏಟು ಹೊಡೆಯುವಂತಹ ಕೆಲಸ ಮಾಡಬೇಕು. ಅವರ ಕಾರ್ಯಶೈಲಿಯನ್ನು ಸಂವಿಧಾನದ ಶೈಲಿಯಲ್ಲಿ ಪುನಃ ವಿನ್ಯಾಸಗೊಳಿಸುವ ಕೆಲಸ ಮಾಡಬೇಕು. ಒಟ್ಟಿನಲ್ಲಿ ಸಮುದಾಯದ ಪರವಾಗಿ ನಿಲ್ಲುವಂತಹ ಮನೋಭಾವವನ್ನು ಜನರಲ್ಲಿ ಹುಟ್ಟುಹಾಕಬೇಕು.

**ಅಕ್ಕೈ :** ನಮ್ಮ ಸಮುದಾಯದಲ್ಲಿ ಎರಡು ವರ್ಗಗಳಿವೆ. ಶ್ರೀಮಂತರಿಗೆ ಇಂತಹ ಮಾಹಿತಿಗಳನ್ನು ತಿಳಿಕೊಳ್ಳುವುದಕ್ಕೆ ಹಲವಾರು ಮಾರ್ಗಗಳಿರುತ್ತವೆ. ಅವರು ಅದನ್ನು ತಿಳ್ಕೋತಾರೆ. ಆದರೆ ನಮ್ಮಂತಹ ಕೆಳವರ್ಗದ



ಮಹಿಳೆಯರಿಗೆ ಈ ಸಂವಿಧಾನದ ಅರಿವಿನ ಅವಶ್ಯಕತೆಯಿರೋದು. ಮೊದಲಿಗೆ ನಮ್ಮಲ್ಲಿ ನಾಯಕತ್ವದ ಕೊರತೆಯಿದೆ ಅನ್ನೋತೀನಿ. ಇಲ್ಲಿ ನಾವಿಬ್ಬರು ನಾಯಕಿಯರಿರಬಹುದು. ಇಡೀ ದೇಶದಲ್ಲಿ ಎಣಿಸಿದರೆ, ಒಂದು ಹತ್ತು ಹದಿನೈದು ಜನ ನಾಯಕಿಯರಿದ್ದರೆ ಹೆಚ್ಚು. ನಮಗಾಗುತ್ತಿರುವ ಹಿಂಸೆಯ ಬಗ್ಗೆ ಮಾತನಾಡದೆ, ನಾವು ಸಂವಿಧಾನದ ಹಕ್ಕುಗಳನ್ನು ಕೇಳಕ್ಕಾಗಲ್ಲ. ಎಲ್ಲಕ್ಕಿಂತ ಹೆಚ್ಚಾಗಿ ಸಮಾನತೆ ಬರಬೇಕಾದರೆ ಎಲ್ಲರೂ ನಮ್ಮ ಮನೆಗೆ ಬರಬೇಕು, ಹೋಗಬೇಕು, ಒಡನಾಡಬೇಕು ಅನ್ನುವುದನ್ನು ಮುಖ್ಯವಾಗಿ ಹೇಳುತ್ತೇನೆ.

**ಗಾಯತ್ರಿ :** ನನ್ನದೇನು ವಿಶೇಷವಾಗಿ ಹೇಳುವಂಥದ್ದಿಲ್ಲ. ಮೀಸಲಾತಿಯೆನ್ನುವುದು ಈ ಸಮಾಜದಲ್ಲಿ ಎಲ್ಲರನ್ನೂ ಒಳಗೊಳ್ಳುವ ಪ್ರಯತ್ನ. ಇಂತಹ ಮೀಸಲಾತಿಯ ಅವಕಾಶವಿಲ್ಲ ದಿರುವ ಸಂದರ್ಭದಲ್ಲಿಯೂ ನಾವುಗಳು ಪ್ರಜ್ಞಾಪೂರ್ವಕವಾಗಿ ಎಲ್ಲ ಸಮುದಾಯಗಳ ಪ್ರತಿನಿಧೀಕರಣವಿರುವಂತೆ ನಮ್ಮ ಕಾರ್ಯಕ್ರಮಗಳನ್ನು ಯೋಜಿಸಿಕೊಳ್ಳುವ, ಅವಕಾಶಗಳನ್ನು ಹಂಚಿಕೊಳ್ಳುವಂತೆ ಮಾಡಬೇಕಾದ್ದು ನನಗೆ ಮುಖ್ಯ ಅಂತ ಅನ್ನಿಸತ್ತೆ.

**ಪಾಷಾ :** ಹೌದು ಸಂವಿಧಾನ ಸಾಕ್ಷರತೆಯ ಮೂಲಕ ಸಂವಿಧಾನದ ಆಶಯಗಳನ್ನು ಎಲ್ಲರಲ್ಲೂ ಹಂಚೋಣ ಅಂತ ಹೇಳುತ್ತಾ ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ ಎಲ್ಲರಿಗೂ 'ಹೊಸತು' ಪರವಾಗಿ ಅಭಿನಂದನೆಗಳನ್ನು ಸಲ್ಲಿಸುತ್ತೇನೆ.

**ಡಾ|| ಎನ್. ಗಾಯತ್ರಿ**
ನಂ. ೨೦೧, 'ಸ್ಕೈಲೈನ್ ಗೋಲ್ಡನ್ ರೇಸ್'
ಛತ್ರಂ ಬ್ಲಾಕ್, ಕೆಂಪೇಗೌಡ ನಗರ, ಗವೀಪುರಂ
ಬೆಂಗಳೂರು – ೫೬೦ ೦೧೯

# ದುಡ್ಡು ಕದ್ದ ದೇವರು



ಡಾ|| ಸಿದ್ದನಗೌಡ ಪಾಟೀಲ

ಎಣ್ಣೆ ಕಾಣದ ತಲೆ, ಗೊಣ್ಣೆ ಇಣುಕುವ ಮೂಗು, ನೀರು ಕಾಣದ ಅಂಗಿ, ಗುಂಡಿ ಇಲ್ಲದ ಚೊಣ್ಣ, ಸೀಳುಬಿಟ್ಟ ಪಾದ, ಗೋಳು ಸೂಸುವ ಕಣ್ಣು, ನಕ್ಕರೆ ಕಾಣುವ ಕಂದು ಮಿಶ್ರಿತ ಹಲ್ಲು ಇದೆಲ್ಲದರ ಮಧ್ಯೆಯೂ ಪಾದರಸದಂಥ ಓಟ. ಈ ಅಷ್ಟ ವರ್ಣನೆಗೆ ಅರ್ಹನಾದ ಗಂಡಸು ಏಳೆಂಟು ವರ್ಷದ ಪೋರ, ಪುಟ್ಟ. ಅವನ ವಯಸ್ಸು ಏಳೆಂಟು ಅನ್ನಲು ಕಾರಣ ಅವನು ಹುಟ್ಟಿದ ತಿಂಗಳು, ವರ್ಷ ನಿಖರವಾಗಿ ಅವನ ತಂದೆ, ತಾಯಿಗೇ ಗೊತ್ತಿಲ್ಲ. ಐದಾರು ವರ್ಷದ ಹಿಂದೆ ಕಲಬುರಗಿಯ ಕಡೆ ಸತತ ಮೂರು ವರ್ಷ ಬರಗಾಲ ಬಿದ್ದಾಗ ಊರು ತೊರೆದು ಬೆಂಗಳೂರು ಬೀದಿಗೆ ಪುಟ್ಟನ ತಂದೆ, ತಾಯಿ ಬಂದರು. ಆಗ ಈತ ಬಗಲಗೂಸು. ಇವನ ವಯಸ್ಸನ್ನ ಕೇಳಿದರೆ 'ಗೊತ್ತಿಲ್ಲ' ಅಂತ ತಂದೆ ಗೊಲ್ಲಾಳ ಹಲ್ಲು ಕಿರಿಯುತ್ತಾನೆ. ಹೆಸರು ಕೇಳಿದರೆ 'ಪುಟ್ಯಾರಿ...' ಅಂತ ತಾಯಿ ಚಂಬಮ್ಮ ನಾಚಿಕೊಳ್ಳುತ್ತಾಳೆ.

ಬೆಂಗಳೂರಿಗೆ ಬಂದ ಹೊಸತರಲ್ಲಿ ಬೀದಿ ಬದಿಯಲ್ಲಿಯೇ ಸಂಸಾರ ನಡೆಸಿದ ಈ ಪುಟ್ಟ ಕುಟುಂಬ ಈಗ ಸದಾಶಿವ ನಗರದಂಥ ಬೆಂಗಳೂರಿನಲ್ಲಿಯೇ ಬೆಲೆ ಬಾಳುವ ಪ್ರದೇಶದಲ್ಲಿ ವಾಸ ಮಾಡುತ್ತಿದೆ. ಕಟ್ಟಡ ಕಟ್ಟುವ ಗುತ್ತಿಗೆದಾರನ ಕೈಯ್ಯಲ್ಲಿ ದುಡಿಯುತ್ತ, ವಿಶ್ವಾಸ ಗಳಿಸಿದ ಪುಟ್ಟನ ತಂದೆ ಗೊಲ್ಲಾಳ ಈಗ ವಾಚ್‌ಮನ್. ಗುತ್ತಿಗೆದಾರ ಹೊಸ ಕಟ್ಟಡ ಗುತ್ತಿಗೆ ಪಡೆದಾಗಲೊಮ್ಮೆ ನಮ್ಮ ಗೊಲ್ಲಾಳನಿಗೆ ನಿರಂತರ ಟ್ರಾನ್ಸ್‌ಫರ್. ಈಗಾಗಲೇ ಜಯನಗರ, ಡಾಲರ್ಸ್‌ಕಾಲನಿ, ಎಂ. ಜಿ. ರಸ್ತೆಗಳಂಥ ಬಹು ಕಿಮ್ಮತ್ತಿನ ಪ್ರದೇಶಗಳಲ್ಲಿ ವಾಸಮಾಡಿ ಈಗ ಸದಾಶಿವ ನಗರಕ್ಕೆ ಬಂದಿದ್ದಾರೆ. ಎಂ. ಜಿ. ರಸ್ತೆಯಲ್ಲಿದ್ದಾಗಲೇ ಪುಟ್ಟನಿಗೆ ತಂಗಿ ಗುಡ್ಡಿ ಹುಟ್ಟಿ ಈಗವರದು ನಾಲ್ಕು ಜನರ ತುಂಬಿದ ಕುಟುಂಬ.

ಗೊಲ್ಲಾಳ, ಚಂಬಮ್ಮ ಎಂಬ ಹೆಸರುಗಳೇ ಅವರ ಜೊತೆ ಕೆಲಸಗಾರರಿಗೆ ವಿಚಿತ್ರವೆನಿಸಿದ್ದವು. ಗೊಲ್ಲಾಳನ ಊರಕಡೆ ಗೊಲ್ಲಾಳೇಶ್ವರ ಎಂಬ ದೇವರು ಪ್ರಸಿದ್ಧಿ, ಹೀಗಾಗಿ ಅವನ ಹೆಸರು ಗೊಲ್ಲಾಳ. ಚಂಬಮ್ಮ ಎನ್ನುವುದು ಚನ್ನಬಸಮ್ಮ ಎನ್ನುವ ಹೆಸರಿನ ಸಂಕ್ಷಿಪ್ತ ರೂಪ. ಇತ್ತೀಚೆಗೆ ಹುಟ್ಟಿದ ಗುಡ್ಡಿ ಎಂಟು ತಿಂಗಳ ಕೂಸು. ಗುಡಾಪುರದ ದಾನವ್ವನ ಪ್ರಸಾದವೆಂಬುದು ಅವರ ನಂಬಿಕೆ. ಹೀಗಾಗಿ ಗುಡ್ಡವ್ವ ಬೆಂಗಳೂರಿನ ಎಂ. ಜಿ. ರಸ್ತೆಯ ಪಕ್ಕದಲ್ಲಿ ಜನಿಸಿ ಗುಡ್ಡಿಯಾಗಿ ಆ ಕುಟುಂಬ ಸೇರಿದ್ದಾಳೆ. ಬರಗಾಲದಲ್ಲಿ ಜನಿಸಿದ್ದರಿಂದ ಪುಟ್ಟನಿಗೆ ಹೆಸರಿಡುವ ಯೋಚನೆಯನ್ನೂ ಮಾಡದೆ ಅವರು ಊರು ತೊರೆದು ಬೆಂಗಳೂರು ಸೇರಿದರು. ಜೊತೆ ಇರುವ ಕಟ್ಟಡ ಕಾರ್ಮಿಕರು ಪುಟ್ಟಾ, ಪುಟ್ಟಾ ಎಂದು ಕರೆಯುವುದರ ಮೂಲಕ ಆ ಹೆಸರೇ ಅವನಿಗೆ ಖಾಯಂ ಆಯಿತು. ಗುತ್ತಿಗೆದಾರ ಹಿಡಿದ ಹೊಸಕಟ್ಟಡ ಕಟ್ಟುವ ಕೆಲಸಕ್ಕೆ ಸಹಾಯಕನಾಗಿ ಗೊಲ್ಲಾಳ, ಚಂಬಮ್ಮ ದುಡಿಯುತ್ತಿದ್ದರು. ಕೂಲಿ ಹೇಳಿಕೊಳ್ಳುವಂಥಾದ್ದಾಗಿರಲಿಲ್ಲವಾದರೂ ಊರೊಳಗಿನ ಎರಡು ಎಕರೆ ಒಣ ಭೂಮಿಯ ಆದಾಯಕ್ಕಿಂತ ಒಳ್ಳೆಯದೇ. ಗೊಲ್ಲಾಳನಿಗೆ ತೀರ್ಥಂಕರರ ಸಹವಾಸದಿಂದ ಪ್ರತಿದಿನ ಕುಡಿವ ಚಟ ಅಂಟಿಕೊಂಡಿದ್ದರಿಂದ ಗಂಡ ಹೆಂಡತಿಯ ದುಡಿಮೆಯ ಆದಾಯ ಕರಗಿ ತಿಂಗಳ ಕೊನೆಗೆ ಚಂಬಮ್ಮ ಗುತ್ತಿಗೆದಾರನಿಂದ ಸಾಲ ಪಡೆಯುವುದು ಅನಿವಾರ್ಯವಾಗುತ್ತಿತ್ತು. ಗೊಲ್ಲಾಳ ರಾತ್ರಿ ಕುಡಿದು ಗೊಲ್ಲಾಳೇಶ್ವರನ ಅವತಾರ ತಾಳಿ ತನ್ನ ಹಿರಿಮೆ, ಗರಿಮೆಗಳನ್ನು ಹೇಳುತ್ತ, ಕುಡಿತ ವಿರೋಧ ಮಾಡುವ ಚಂಬಮ್ಮನನ್ನು ಆಗಾಗ ಬಡಿದು ತನ್ನ ಗಂಡಸುತನವನ್ನು ಸಾಬೀತು ಮಾಡುತ್ತಿದ್ದ. ಅವ್ವನನ್ನು ಬಡಿವಾಗ ಹೆದರಿದ ಪುಟ್ಟ ಕೂಸು ಗುಡ್ಡಿಯನ್ನು ಎತ್ತಿಕೊಂಡು

ಬಂಗಾರದ ಹಾಗೆ ಹೊಳೆಯುತ್ತಿದ್ದ ಆ ನಾಣ್ಯವನ್ನು ನೋಡುತ್ತಲೇ ನಿಂತಿದ್ದ ಪುಟ್ಟ. ಖುಷಿಯೂ ಆಗಿತ್ತು. ತನ್ನ ಅರಮನೆ, ಅಂದರೆ ಅರ್ಧ ಕಟ್ಟಿದ ಮನೆಯ ಮುಂದೆ ಬಂದು ನಿಂತು. ಈ ರೊಕ್ಕಕ್ಕ ಎಷ್ಟು ಚಾಕಲೇಟ್ ಬರಬಹುದು, ಯಾವ ಚಾಕ್‌ಲೇಟ್.... ಅಂತ ಯೋಚಿಸುತ್ತಿದ್ದ. ಕೆಲದಿನಗಳ ಹಿಂದೆ ನಡೆದ ಚಾಕ್‌ಲೇಟ್ ಘಟನೆ ನೆನಪಾಯಿತು.

ಮೂಲೆಯಲ್ಲಿ ಕುಳಿತು ಅಳುತ್ತಿದ್ದ. ಹಗಲು ಸರಿಯಾಗಿರುವ ಅಪ್ಪನಿಗೆ ರಾತ್ರಿ ಏನಾಗುತ್ತದೆ ಎಂಬ ಪ್ರಶ್ನೆ ಸದಾ ಪುಟ್ಟನನ್ನು ಕಾಡುತ್ತಿತ್ತು.

ಅದೊಂದು ಸಂಜೆ ಸಣ್ಣಗೆ ಮಳೆ, ಗೊಲ್ಲಾಳ ಕುಡಿಯಲು ಹೋದವನು ಇನ್ನೂ ಬಂದಿರಲಿಲ್ಲ. ಗುಡ್ಡಿ ಅಳುತ್ತಿದ್ದಳು. ಅವಳಿಗೆ ಹಾಲು ತರಲೆಂದು ಕೂಡಿಟ್ಟ ಹಣವನ್ನು ಗೊಲ್ಲಾಳ ಎತ್ತಿಕೊಂಡು ಹೋಗಿದ್ದ. ಅಂದು ಮಾತ್ರ ಚಂಬಮ್ಮ ಎಂದಿನಂತಿರಲಿಲ್ಲ. ಗೊಲ್ಲಾಳ ಬರುವುದೇ ತಡ ಚಂಡಿಯಾಗಿಬಿಟ್ಟಳು. ಯಥಾರೀತಿ ಪುಟ್ಟ ಗುಡ್ಡಿಯನ್ನೆತ್ತಿಕೊಂಡು ಹೆದರಿ ಮೂಲೆ ಸೇರಿದ್ದ. ಗುಡ್ಡಿ ಅಳು, ಅವ್ವನ ಕೂಗಾಟ, ಅಪ್ಪನ ಬೈಗುಳಗಳು ಎಲ್ಲವೂ ತಾರಕಕ್ಕೇರಿ ಸದಾಶಿವ ನಗರವೆಂಬ ಸಭ್ಯರ ಓಣಿಯಲ್ಲಿ ಕಿರಿಕಿರಿ ಉಂಟಾಯಿತು. ಪಕ್ಕದ ಮನೆಯ ಯಜಮಾನ ಛತ್ರಿ ಹಿಡಿದು ಹೊರಗೆ ಬಂದು ಬಯ್ಯತೊಡಗಿದ. ಚಂಬಮ್ಮ ಆಗಾಗ ಅವರ ಮನೆಯ ಕೆಲಸಕ್ಕೂ ಹೋಗಿ ಬರುತ್ತಿದ್ದಳು. ಗೊಲ್ಲಾಳ ಅಂದು ಜಾಸ್ತಿನೇ ಕುಡಿದು ಬಂದು ನಿಲ್ಲಲೂ ಆಗದೇ ಒದರಾಡುತ್ತಿದ್ದ. ಪಕ್ಕದ ಮನೆಯ ಯಜಮಾನನ ಮಾತಿಗೂ ಬೆಲೆಕೊಡದೆ ಕೂಗಾಡುತ್ತಿದ್ದ. ಆಗ ಯಜಮಾನ ಗೊಲ್ಲಾಳನ ಕಪಾಳಕ್ಕೊಂದು ಬಾರಿಸಿದ. ಗೊಲ್ಲಾಳ ತೂರಾಡುತ್ತಲೇ ನೆಲಕ್ಕೆ ಬಿದ್ದ. ಆ ಯಜಮಾನ ಗೊಲ್ಲಾಳನನ್ನೆಳೆದು ಕಟ್ಟಡದ ಒಂದು ಮೂಲೆಯಲ್ಲಿ ಬಿಟ್ಟ. ಗೊಲ್ಲಾಳ ಗೊಣಗುತ್ತ ಅಲ್ಲೇ ಮಲಗಿದ. ಗುಡ್ಡಿ ಅಳುತ್ತಲೇ ಇತ್ತು. 'ಗುಡ್ಡಿಗೆ ಹಾಲು ತರಾಕ ಇಟ್ಟ ರೊಕ್ಕಾನೂ ತೊಗೊಂಡು ಹೋಗಿ ಕುಡದ ಬಂದಾನ್ರಿ ಅಪ್ಪಾರ' ಕಣ್ಣೀರಿಡುತ್ತಲೇ ಹೇಳಿದಳು ಚಂಬಮ್ಮ. ಪಕ್ಕದ ಮನೆ ಯಜಮಾನರು ಮಂದ ಬೆಳಕಿನಲ್ಲಿ, ಮೂಲೆಯಲ್ಲಿ ಗುಡ್ಡಿಯನ್ನು ಎತ್ತಿಕೊಂಡು ಕುಳಿತ ಪುಟ್ಟನ ಕಡೆಗೆ ನೋಡಿದರು. ಪುಟ್ಟನಿಗೆ ಹೆದರಿಕೆ ಆಯಿತು. 'ಪುಟ್ಟಾ ಬಾರೋ ಮನೇಲಿ ಹಾಲಿದಾವೆ ತಕೊಂಡು ಹೋಗು' ಅಂದರು. ಪುಟ್ಟ ಹೆದರಿ ಅವ್ವನ ಮಕ ನೋಡಿದ. ಅವ್ವ ಇನ್ನೂ ಶಾಂತಳಾಗಿರಲಿಲ್ಲ. ಗುಡ್ಡಿಯನ್ನು ಪುಟ್ಟನ ಕೈಯಿಂದ ಕಸಿದುಕೊಂಡು ಗೋಡೆಗೊರಗಿ ಅಳುತ್ತ ಕುಳಿತಳು.

ಪುಟ್ಟನಿಗೆ ಸ್ವಲ್ಪ ತಡವಾಗೇ ಎಚ್ಚರವಾಯ್ತು. ಕಣ್ಣು ಬಿಡುವಾಗಲೇ ಅವನಿಗೆ ರಾತ್ರಿಯ ಭಯಾನಕ ಚಿತ್ರಗಳು ಕಣ್ಣ ಮುಂದೆ ಬಂದವು. ಹೆದರಿ ಎದ್ದು ಕುಳಿತ. ಅಪ್ಪ ಕಟ್ಟಡಕ್ಕೆ ನೀರು ಹೊಡೆಯುತ್ತಿದ್ದ. ಅವ್ವ ಒಲೆಯ ಮುಂದೆ ಕುಳಿತಿದ್ದಳು. ರಾತ್ರಿ ಏನೂ ನಡೆದೇ ಇಲ್ಲ ಎಂಬಂತೆ ಇದ್ದ ಅವರನ್ನು ನೋಡಿ ಪುಟ್ಟ ಅಚ್ಚರಿಪಟ್ಟ. ಎಂದಿನಂತೆ ಅವ್ವ ಚಹಾ ಲೋಟಾ ಕೊಟ್ಟಳು, ಪುಟ್ಟ ಹೋಗಿ ಅದನ್ನು ಅಪ್ಪನಿಗೆ ಕೊಟ್ಟು ಬಂದ. ಗುಡ್ಡಿ ಮಲಗಿತ್ತು. ಪುಟ್ಟನಿಗೆ ಸ್ವಲ್ಪ ಸಮಾಧಾನವಾದಂತಾಗಿ ಕಂಪೌಂಡ್ ಬದಿಗೆ ಹೋಗಿ ಕಣ್ಣೊರಸಿಕೊಳ್ಳುತ್ತ ಉಚ್ಚೆ ಹೊಯ್ದು ಬಂದ.

ಒಂದು ದಿನ ಪುಟ್ಟ ರಸ್ತೆ ಬದಿಯಲ್ಲಿ ಆಟ ಆಡುವಾಗ ಆಟೋರಿಕ್ಷಾ ಒಂದು ಬಂದು ನಿಂತಿತು. ವಯಸ್ಸಾದ ಯಜಮಾನರು ಕೆಳಗಿಳಿದರು. ಸಾಮಾನುಗಳನ್ನು ಕೆಳಗಿಳಿಸಿಕೊಂಡು ಯಾರಿಗೋ ಕಾಯ್ದರು. ಕೊನೆಗೆ ತಾವೇ ಸಾಮಾನು ಎತ್ತಿಕೊಂಡು ಹೊರಟರು. ಕಷ್ಟ ಪಡುತ್ತಿರುವ ಅಜ್ಜನನ್ನು ನೋಡಿದ ಪುಟ್ಟ ಓಡಿ ಹೋಗಿ ಅವರ ಕೈಯ್ಯಲ್ಲಿನ ಒಂದು ಚೀಲ ಇಸಿದುಕೊಂಡು ಅವರ ಕೈ ಹಿಡಿದು ರಸ್ತೆ ದಾಟಿಸಿದ. ರಸ್ತೆಯ ಆ ಬದಿಗೆ ಇದ್ದ ಮನೆಯ ಮುಂದೆ ಹೋಗುವಷ್ಟರಲ್ಲಿ ಆ ಮನೆಯವರು ಹೊರಗೆ ಬಂದರು. ಪುಟ್ಟ ಚೀಲ ಕೆಳಗಿಟ್ಟ. ವಯಸ್ಸಾದ ಯಜಮಾನ ಪ್ರೀತಿಯಿಂದ ಪುಟ್ಟನ ತಲೆ ನೇವರಿಸಿದ. ಪುಟ್ಟ ಹಲ್ಲು ಕಿರಿದ. ಕಿಸೆಗೆ ಕೈಹಾಕಿದ ಅಜ್ಜ ಹತ್ತು ರೂಪಾಯಿಯ ನಾಣ್ಯವನ್ನು ಪುಟ್ಟನ ಕೈಗೆ ಕೊಟ್ಟು 'ಚಾಕಲೇಟ್ ತಿನ್ನು' ಎಂದು ಹೇಳಿ ಹೋದ.

ಬಂಗಾರದ ಹಾಗೆ ಹೊಳೆಯುತ್ತಿದ್ದ ಆ ನಾಣ್ಯವನ್ನು ನೋಡುತ್ತಲೇ ನಿಂತಿದ್ದ ಪುಟ್ಟ. ಖುಷಿಯೂ ಆಗಿತ್ತು. ತನ್ನ ಅರಮನೆ, ಅಂದರೆ ಅರ್ಧ ಕಟ್ಟಿದ ಮನೆಯ ಮುಂದೆ ಬಂದು ನಿಂತು ಈ ರೊಕ್ಕಕ್ಕ ಎಷ್ಟು ಚಾಕಲೇಟ್ ಬರಬಹುದು, ಯಾವ ಚಾಕ್‌ಲೇಟ್.... ಅಂತ ಯೋಚಿಸುತ್ತಿದ್ದ. ಕೆಲದಿನಗಳ ಹಿಂದೆ ನಡೆದ ಚಾಕ್‌ಲೇಟ್ ಘಟನೆ ನೆನಪಾಯಿತು. ಅವನ ಮನೆಯ ಹತ್ತಿರದಲ್ಲಿಯೇ ಇದ್ದ ಮೈದಾನದಲ್ಲಿ ಹುಡುಗರು ಕ್ರಿಕೆಟ್ ಆಡಲು ಬರುತ್ತಿದ್ದರು. ಅವರ ಆಟ ನೋಡುತ್ತಿದ್ದ ಪುಟ್ಟ ಆಗಾಗ ಅವರಿಗೆ ಬಾಲ್ ಎತ್ತಿಕೊಟ್ಟು ತಾನೂ ಆಟ ಆಡಿದ ಖುಷಿಗೆ ಒಳಗಾಗುತ್ತಿದ್ದ. ಆಗ ಒಬ್ಬ ಹುಡುಗ ಪುಟ್ಟನ ಹತ್ತಿರ ಬಂದು 'ತಗೋ ಇಂದು ನನ್ನ ಬರ್ತ್‌ಡೇ' ಅಂತಹೇಳಿ ಒಂದು ಡೈರಿ ಮಿಲ್ಕ್ ಚಾಕ್‌ಲೇಟ್ ಕೊಟ್ಟಿದ್ದ. ಖುಷಿಯಿಂದ ಅದನ್ನು ಮನೆಗೆ ತಂದ ಪುಟ್ಟ, ಅಲ್ಲಿಯೇ ಮಲಗಿದ್ದ ಗುಡ್ಡಿಯ ಮುಂದೆ ಬಿಚ್ಚಿದ. ಅಪ್ಪ, ಅಮ್ಮ ಇತರ ಕೆಲಸಗಾರರು ಮನೆಗೆ ಬಣ್ಣ ಬಳಿವ ಕೆಲಸದಲ್ಲಿ ನಿರತರಾಗಿದ್ದರು. ಪುಟ್ಟ ಚಾಕಲೇಟ್ ತಿಂದು ನೋಡಿದ, ರುಚಿಯಾಗಿತ್ತು. ಗುಡ್ಡಿಯ ಬಾಯಿಗಿಟ್ಟು ನೆಕ್ಕಿಸಿದ. ಗುಡ್ಡಿ ಕೈ ಕಾಲು ಹಿಗ್ಗಿಸಿ ನಕ್ಕಿತು. ಅವಳನ್ನೆತ್ತಿ ತೊಡೆಯ ಮೇಲೆ ಕೂರಿಸಿಕೊಂಡು ಅದಕ್ಕೂ ತಿನ್ನಿಸಿ, ತಾನೂ ಚಾಕಲೇಟ್ ಸವಿಯನ್ನು ಸವಿಯುತ್ತಿದ್ದ. ಇವರನ್ನು ನೋಡಿದ ಚಂಬಮ್ಮ ಹತ್ತಿರ ಬಂದು ಪುಟ್ಟನ ತಲೆಗೊಂದು ಹೊಡೆದು 'ಎಲ್ಲಿಂದ ತಂದಿ ಇದನ್ನ...' ಅಂತ ಗದರಿದಳು. ಪುಟ್ಟ ಹೆದರಿದ. 'ಕಳ್ಳತನಾ ಮಾಡಿದೀ...?' ಮತ್ತಷ್ಟು ಜೋರಾಗಿ ಕೇಳಿದಳು. ಪುಟ್ಟ ಅಳುತ್ತಲೇ ಚಾಕ್‌ಲೇಟ್ ಪಡೆದ ಬಗೆ ಹೇಳಿದ. ಬಾಯಿತುಂಬ ಚಾಕ್‌ಲೇಟ್ ಮೆತ್ತಿಕೊಂಡ ಗುಡ್ಡಿ ಅಣ್ಣನನ್ನೂ, ಅವ್ವನನ್ನೂ ನೋಡಿ ನಕ್ಕಿತು.

ಕೈಯ್ಯಲ್ಲಿರುವ ಹತ್ತು ರೂಪಾಯಿಯ ನಾಣ್ಯ ಯಾಕೋ ಭಾರವೆನಿಸ ತೊಡಗಿತು. ಕಾಲು ಚಾಕ್‌ಲೇಟ್ ತರಲು ಸಿದ್ಧವಾದರೆ ಬುದ್ಧಿ ಬೇಡ ಅನ್ನುತ್ತಿತ್ತು. ಅವ್ವ ಹೊಡೆಯುತ್ತಾಳೆನ್ನುವ ಭಯ ಬೇರೆ. ತಕ್ಷಣ ಪುಟ್ಟನಿಗೆ ಒಂದು ಯೋಚನೆ ಹೊಳೆಯಿತು. ಗುಡ್ಡಿಯ ಹಾಲಿನ ಸಲುವಾಗಿ ಇಟ್ಟ ರೊಕ್ಕ ಅಪ್ಪ ಒಯ್ದು ಕುಡಿದು ಬಂದದ್ದು, ಅವ್ವ ಜಗಳ ಮಾಡಿದ್ದು, ಗುಡ್ಡಿ ಅತ್ತದ್ದು... ಎಲ್ಲ ನೆನಪಾಗಿ, ಇನ್ನೊಮ್ಮೆ ಗುಡ್ಡಿಗೆ ಕುಡಿಯಲು ಹಾಲಿಲ್ಲದಾಗ ಅವ್ವನ ಕೈಗೆ ಈ ದುಡ್ಡು ಕೊಡಬೇಕು ಎಂಬ ತೀರ್ಮಾನಕ್ಕೆ ಬಂದ. ಆಗ ಅವನ ಹೊಯ್ದಾಟ ನಿಂತು ಖುಷಿ ಆಯ್ತು. ಮನೆಗೆ ಬಂದಾಗ ಗುಡ್ಡಿಯನ್ನು ಎತ್ತಿಕೊಂಡೇ ಅಮ್ಮ ಕೆಲಸ ಮಾಡುತ್ತಿದ್ದಳು. ಅಪ್ಪ ಎಲ್ಲೋ ಹೋಗಿದ್ದ. ಇತರೆ ಕೆಲಸಗಾರರ ಗದ್ದಲ. ಚಂಬಮ್ಮ ಪುಟ್ಟನನ್ನು ನೋಡುತ್ತಲೇ 'ಎಲ್ಲಿಗೆ ಹೋಗಿದ್ದಿ... ತಗೋ ಈ ಗುಡ್ಡೀನ...' ಎಂದು ಗದರಿದಳು. ಪುಟ್ಟ ಗುಡ್ಡಿಯನ್ನು ಎತ್ತಿಕೊಂಡು ತಮ್ಮ ಟೆಂಟ್ ಮನೆಗೆ ಬಂದ. ಗುಡ್ಡಿಗೆ ಹೇಳಿದ 'ಗುಡ್ಡೀ... ನನ್ನ ಹತ್ರ ರೊಕ್ಕ ಅದ... ಇನ್ನೊಮ್ಮೆ ನಿನಗ ಹಾಲ ಬೇಕಾದಾಗ ನಾನsssಕೊಡ್ತೀನಿ' ಗುಡ್ಡಿ ಅಣ್ಣನನ್ನು ನೋಡಿ ಕಿಸಕ್ ಎಂದು ನಕ್ಕಿತು. ಕಿಸೆಗೆ ಕೈಹಾಕಿ ಮತ್ತೊಮ್ಮೆ ನಾಣ್ಯವನ್ನು ಮುಟ್ಟಿ ನೋಡಿ ಖುಷಿಯಿಂದ ನಸು ನಕ್ಕ ಪುಟ್ಟ.

ಮನೆಯ ಕಟ್ಟಡ ಮುಕ್ತಾಯ ಹಂತದಲ್ಲಿದ್ದುದರಿಂದ ಕೆಲಸ ಜೋರಾಗಿ ನಡೆದಿತ್ತು. ಮೇಸ್ತ್ರಿ ಕೆಲಸದವರನ್ನು ನಿರಂತರ ಬೈಯ್ಯುತ್ತಲೇ ಇದ್ದ. ಚೆಂಬಮ್ಮ ದಣಿದು ಬಂದು ನೀರು ಕುಡಿದು ಒಂದು ಕ್ಷಣ ಕುಳಿತು ಸೆರಗಿನಿಂದ ಗಾಳಿ ಹಾಕಿಕೊಂಡು, ಗುಡ್ಡಿಗೆ ಒಂದು ಮುತ್ತುಕೊಟ್ಟು, ಮಗನ ತಲೆ ನೇವರಿಸಿದಳು. ಮೇಸ್ತ್ರಿ ಅಲ್ಲಿಂದಲೇ ಕೂಗಿದ, ಮತ್ತೆ ಎದ್ದು ಓಡಿದಳು. ಪುಟ್ಟನಿಗೆ ಒಂದು ಗಂಭೀರ ಸಮಸ್ಯೆ ಕಾಡತೊಡಗಿತು. ತನ್ನ ಕಿಸೆಯಲ್ಲಿರುವ ನಾಣ್ಯವನ್ನು ಎಲ್ಲಿಡುವುದು ಎಂಬುದು. ಅವ್ವನ ಕೈಗೆ ಕೊಟ್ಟರೆ 'ಎಲ್ಲಿದೂ ಕಳ್ಳತನಾ ಮಾಡಿದ್ಯಾ...' ಅಂತ ಬೈತಾಳೆ, ಅಪ್ಪನ ಕೈಗೆ ಕೊಟ್ರೆ ಕುಡದ ಬಿಡ್ತಾನೆ, ಪುಟ್ಟನಿಗೆ ಭಯ ಆಗತೊಡಗಿತು. ಚಿಂತಾಕ್ರಾಂತನಾದ ಪುಟ್ಟನಿಗೆ ತಕ್ಷಣ ಒಂದು ಯೋಚನೆ ಹೊಳೆಯಿತು. ಹೊಸ ಕಟ್ಟಡದ ದೇವರ ಕೊಠಡಿಯಲ್ಲಿ ಇರುವ ದೇವರ ಫೋಟೋದ ಮುಂದೆ ಅವ್ವ ಚಿಲ್ಲರೆ ದುಡ್ಡು ಇಟ್ಟದ್ದು ನೆನಪಾಯಿತು. ಗುಡ್ಡಿಯನ್ನು ಮಲಗಿಸಿದವನೇ ಒಳಗೆ ಓಡಿದ. ಕೆಲಸದವರೆಲ್ಲ ಹೊರಗಿದ್ದರು. ದೇವರ ಕೊಠಡಿ, ಅಲ್ಲಿನ ಗದ್ದುಗೆಯ ಮೇಲೆ ಚಂಬಮ್ಮ ತಮ್ಮೂರಿನಿಂದಲೇ ತಂದ ಹಳೆಯ ಶಿವನ ಫೋಟೋ ರಾರಾಜಿಸುತ್ತಿತ್ತು. ಪುಟ್ಟ ಶಿವನನ್ನೇ ಒಂದು ಕ್ಷಣ ದಿಟ್ಟಿಸಿ ನೋಡಿದ. ನಸು ನಗುತ್ತಿದ್ದ ಶಿವ. ಅತ್ತಿತ್ತ ನೋಡಿ ಯಾರೂ ಇಲ್ಲದ್ದನ್ನು ಖಾತರಿ ಮಾಡಿಕೊಂಡ ಪುಟ್ಟ ನಿಧಾನವಾಗಿ ಬಂಗಾರ ಬಣ್ಣದ ಹತ್ತು ರೂಪಾಯಿ ನಾಣ್ಯ ತೆಗೆದು ಕಣ್ತುಂಬ ನೋಡಿದ. ಮತ್ತೊಮ್ಮೆ ಹಿಂದೆ ಮುಂದೆ ನೋಡಿ ಶಿವನ ಹಳೆಯ ಫೋಟೋದ ಹಿಂಭಾಗದಲ್ಲಿ ಯಾರಿಗೂ ಕಾಣದಂತೆ ನಾಣ್ಯ ಇರಿಸಿದ 'ದೇವರೆ ಇದು ಗುಡ್ಡಿಯ ಹಾಲಿನ ರೊಕ್ಕ ನೀನೇ ಕಾಯ್ಬೇಕು, ಬೇಕಾದಾಗ ಇಸ್ಕೊತೀನಿ' ಅಂತ ಕಣ್ಣು



ಲೇ! ಇಲ್ನೋಡೇ! ನಮ್ಮ ಮಗು ಥೇಟು ಮುಖ್ಯಮಂತ್ರಿಗಳ ಥರಾನೇ ಅಳ್ತಾ ಇದೆಯಲ್ಲೇ ಮುಂದೆ ಇವನೂ ಕೂಡ ಮುಖ್ಯಮಂತ್ರಿ ಆಗಬಹುದು ಕಣೇ

ಮುಚ್ಚಿ ಕೈ ಮುಗಿದ. ಹೃದಯ ಹಗುರಾಯಿತು. ಕಿಸೆಯ ಭಾರ ಇಳಿಯಿತು. ಶಿವನ ಸುಪರ್ದಿಯಲ್ಲಿಟ್ಟ ತನ್ನ ನಾಣ್ಯವನ್ನು ಆಗಾಗ ನೋಡಿ ಬರುತ್ತಿದ್ದ ಪುಟ್ಟ.

ಒಂದು ದಿನ ನಸುಕಿನಲ್ಲೇ ಗದ್ದಲ. ಕಂಪೌಂಡಿನ ತುದಿಯ ಟೆಂಟ್‌ನಲ್ಲಿ ಮಲಗಿದ್ದ ಪುಟ್ಟನಿಗೆ ಎಚ್ಚರವಾಯಿತು. ಇನ್ನೂ ಕತ್ತಲು. ಅಪ್ಪ ಅಮ್ಮ ಇಬ್ಬರೂ ಇಲ್ಲ. ಗುಡ್ಡಿ ಮಲಗಿತ್ತು. ಕಣ್ಣು ತಿಕ್ಕಿಕೊಂಡು ನೋಡಿದ ಪುಟ್ಟನಿಗೆ ಆಶ್ಚರ್ಯ. ಹೊಸ ಮನೆಯ ತುಂಬ ಉರಿವ ದೀಪಗಳು, ಮನೆಯ ಮೇಲೆಲ್ಲ ಸಾಲು ಸಾಲು ಚಿಕ್ಕ ಚಿಕ್ಕ ಲೈಟ್‌ಗಳು. ಹೊಸ ಸೀರೆ, ಪಂಚೆ ಉಟ್ಟ ಜನರ ಓಡಾಟ, ಮಂತ್ರಗಳ ಮಣ ಮಣ. ಪುಟ್ಟನಿಗೆ ತಾನೆಲ್ಲಿದ್ದೇನೆಂದು ಗೊಂದಲವಾಯಿತು. ಎದ್ದು ಬಂದು ನೋಡಿದರೆ ಅದೇ ಮನೆ, ಶೃಂಗಾರಗೊಂಡು ಹೊಳೆಯುತ್ತಿತ್ತು. ತಿರುಗಿ ತನ್ನ ಟೆಂಟ್ ಕಡೆ ನೋಡಿದ ಅದೇ ಕತ್ತಲು. ಹೌದು ನಮ್ಮದೇ ಮನೆ. ತಕ್ಷಣ ಪುಟ್ಟನಿಗೆ ತಾನು ಬಚ್ಚಿಟ್ಟ ಬಂಗಾರ ಬಣ್ಣದ ನಾಣ್ಯದ ನೆನಪಾಯಿತು. ಮನೆಯ ಒಳಕ್ಕೆ ಓಡಿದ. ದೇವರ ಮನೆಯೂ ಬದಲಾಗಿದೆ. ಜಗಜಗಿಸುವ ಲೈಟ್‌ಗಳು, ಗದ್ದುಗೆ ನೋಡಿದ ಶಿವನ ಫೋಟೋ ಕಾಣುತ್ತಿಲ್ಲ. ಪುಟ್ಟನ ಉಸಿರು ಜೋರಾಯಿತು. ಗದ್ದುಗೆಯತ್ತ ಧಾವಿಸಿದ. ಅಲ್ಲಿ ಚಂಬಮ್ಮನ ಹಳೆಯ ಶಿವನ ಫೋಟೋ ಬದಲಾಗಿ ಬಂಗಾರ ಬಣ್ಣದ ಮೂರ್ತಿಗಳು, ಬೆಳ್ಳಿಯ ಗಂಟೆ ಏನೆಲ್ಲ ತುಂಬಿವೆ. ಪುಟ್ಟ ಶಿವನ ಫೋಟೋ ಇಟ್ಟ ಜಾಗದಲ್ಲಿ ತಾನಿಟ್ಟ ನಾಣ್ಯ ಹುಡುಕಿದ, ಅಲ್ಲಿನ ಮೂರ್ತಿಗಳನ್ನು ಗಡಬಡಿಸಿ ಎತ್ತಿ ತನ್ನ ನಾಣ್ಯ ಹುಡುಕಿದ, ಕಾಣಿಸಲಿಲ್ಲ. ಅಷ್ಟರಲ್ಲಿ ಬರಿಮೈಲಿ, ಪಂಚೆ ಸುತ್ತಿಕೊಂಡ, ದಪ್ಪ ಹೊಟ್ಟೆಯ ಅರ್ಚಕ ಓಡಿ ಬಂದ. 'ಥೂ... ಅಲ್ಲೇನು ಮಾಡ್ತಿದಿ, ಕಳ್ಳ, ಕಳ್ಳ' ಎಂದು ಕೂಗಿದ. ಮನೆಯವರೆಲ್ಲ ಸೇರಿದರು. ಯಜಮಾನನೊಬ್ಬ ಬಂದು ಪುಟ್ಟನ ಕೆನ್ನೆಗೆ ಜೋರಾಗೇ ಬಾರಿಸಿದ. ಅಂಥ ಬೆಳಕಿನಲ್ಲಿಯೂ ಪುಟ್ಟನ ಕಣ್ಣಿಗೆ ಕತ್ತಲಾವರಿಸಿತು. ಅರ್ಚಕ 'ನಾರಾಯಣ... ನಾರಾಯಣ' ಎಂದು ಅರಚುತ್ತಿದ್ದುದು ಮಾತ್ರ ಕೊನೆಯದಾಗಿ ಕೇಳಿಸಿತು.

ಪುಟ್ಟನಿಗೆ ಎಚ್ಚರವಾದಾಗ ಬೆಳ್ಳನೆ ಬೆಳಕಾಗಿತ್ತು. ಚಂಬಮ್ಮನ ತೊಡೆಯ ಮೇಲೆ ಮಲಗಿದ್ದ ಪುಟ್ಟ ನಿಧಾನವಾಗಿ ಎದ್ದು ಕುಳಿತ. ಅಪ್ಪ ಗುಡ್ಡಿಯನ್ನು ಎತ್ತಿಕೊಂಡು ಚಿಂತಾಕ್ರಾಂತನಾಗಿ ಕುಳಿತಿದ್ದ. ಅವ್ವನ ಕಣ್ಣೀರು ಹರಿಯುತ್ತಿತ್ತು. ಸುತ್ತಮುತ್ತ ಅವರ ಸಾಮಾನುಗಳು. ಪುಟ್ಟನ ಸಂಸಾರ ಮನೆಯಲ್ಲಿರಲಿಲ್ಲ. ಪುಟ್ಟ ಆಟವಾಡುತ್ತಿದ್ದ ಮೈದಾನದ ಬದಿಗೆ ಬೀದಿ ಪಕ್ಕದಲ್ಲಿತ್ತು. ಅಪ್ಪ ಜೋಲು ಮುಖ ಹಾಕಿ ಸಾಮಾನುಗಳನ್ನೆತ್ತಿಕೊಂಡು ಹೊರಟ, ಅವ್ವನೂ ಗುಡ್ಡಿಯನ್ನು ಬಗಲಲ್ಲಿಟ್ಟುಕೊಂಡು ಪುಟ್ಟನ ಕೈ ಹಿಡಿದು ಗೊಲ್ಲಾಳನ ಹಿಂದೆ ಹೊರಟಳು. ಆಗಲೂ ಪುಟ್ಟನಿಗೆ ಅದೇ ಚಿಂತೆ 'ಶಿವನ ಹತ್ತಿರವಿಟ್ಟ ನನ್ನ ರೊಕ್ಕ... ಶಿವ ಎಲ್ಲಿ ಹೋದ...' ಕೊನೆಗೂ ಪುಟ್ಟ ಒಂದು ತೀರ್ಮಾನಕ್ಕೆ ಬಂದ 'ದೇವರು ನನ್ನ ದುಡ್ಡು ಕದ್ದು ಓಡಿ ಹೋಗಿದ್ದಾನೆ.' ಪುಟ್ಟನಿಗೆ ಕಣ್ಣೀರು ಬಂದವು.

ಸಾಮಾನು ಗಂಟು ಹೊತ್ತ ಗೊಲ್ಲಾಳ ಮುಂದೆ, ಗುಡ್ಡಿಯನ್ನೆತ್ತಿಕೊಂಡ ಚಂಬಮ್ಮ ಹಿಂದೆ, ಅವಳ ಹಿಂದೆ ಚಿಂತಾಕ್ರಾಂತನಾದ ಪುಟ್ಟ ಹೊರಟಿದ್ದರು. ಅಪ್ಪ, ಅವ್ವ ಮಾತನಾಡುತ್ತಿಲ್ಲ. ಹಿಂದೆ ಹೊರಟ ಪುಟ್ಟ ಗಕ್ಕನೆ ನಿಂತ. ರಸ್ತೆ ಬದಿಯ ಕಸದ ಕಡೆ ಕಣ್ಣಗಲಿಸಿ ನೋಡಿದ. ಒಂದೇ ಉಸಿರಿಗೆ ಓಡಿದ. ಹೌದು, ಅದು ಅದೇ... ಕಸದ ಮಧ್ಯೆ ಶಿವನ ಫೋಟೋ ಬಿದ್ದಿದೆ. ಅದನ್ನೆತ್ತಿಕೊಂಡ ಪುಟ್ಟ ಅದರ ಮೇಲಿನ ಧೂಳನ್ನು ಒರೆಸಿದ. ಗಡಬಡಿಸಿ ಅದರ ಹಿಂಭಾಗ ನೋಡಿದ, ಫೋಟೋ ಕಟ್ಟಿನಲ್ಲಿ ಬೆರಳ ತೂರಿಸಿದ ಊಹೂಂ... ಅವನ ಬಂಗಾರ ಬಣ್ಣದ ನಾಣ್ಯ ಕಾಣಿಸಲಿಲ್ಲ. ಶಿವನ ಫೋಟೋ ಬಗಲಲ್ಲಿ ಹಿಡಿದು ಇನ್ನೊಂದು ಕೈಯಿಂದ ಕಸದಲ್ಲಿ ಕೈಯ್ಯಾಡಿಸಿದ... ಎಲ್ಲೂ ಅವನ ನಾಣ್ಯ ಸಿಗಲಿಲ್ಲ. ದೂರದಲ್ಲಿ ನಿಂತ ಗೊಲ್ಲಾಳ ಜೋರಾಗಿ ಕೂಗಿದ 'ಲೇ ಪುಟ್ಟ್ಯಾ... ಬಾ ಅಲ್ಲೇನ್ ಮಾಡಾಕತ್ತಿ. ಅದೇನ ಕೈಯ್ಯಾಗ ಅಲ್ಲೇ ಒಗದು ಬಾ...' ಪುಟ್ಟ ಶಿವನ ಫೋಟೋವನ್ನು ಕರುಣೆಯಿಂದ ನೋಡಿದ. 'ಬರ್ತೀಯ ಒದೀಲ್ಯೋ...' ಮತ್ತೆ ಅಪ್ಪನ ಘರ್ಜನೆ. ನಿಧಾನಕ್ಕೆ ಶಿವನ ಫೋಟೋ ಕೆಳಗಿಟ್ಟ ಪುಟ್ಟ ಚಂಬಮ್ಮನ ಕಡೆ ನಡೆದ. ಅವ್ವನ ಬಗಲಲ್ಲಿ ಕುಳಿತ ಗುಡ್ಡಿ ನಗುತ್ತ ಅಣ್ಣನನ್ನು ಕೈಮಾಡಿ ಕರೆಯುತ್ತಿತ್ತು.

**ಡಾ॥ ಸಿದ್ದನಗೌಡ ಪಾಟೀಲ**
ನಂ. ೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – ೧

# ಯುದ್ಧ ವಿರೋಧಿ ಪ್ರಣಾಳಿಕೆ

# ಒಲ್ಲೆ ಎನ್ನು!

ಜರ್ಮನ್ ಮೂಲ
**ವೊಲ್ಫ್‌ಗಾಂಗ್ ಬಾರ್‌ಶರ್ಟ್**

.....................

ಕನ್ನಡಕ್ಕೆ
**ಮೈತ್ರಿ ಬೆಂಗಳೂರು**

**ನೀನು**. ಯಂತ್ರದ ಮುಂದೆ ನಿಂತ ಮನುಷ್ಯ ಹಾಗೂ ಕಾರ್ಯಾಗಾರದಲ್ಲಿನ ಮನುಷ್ಯ. ನಾಳೆ ನೀನು ನೀರಿನ ಕೊಳವೆಗಳು ಮತ್ತು ಅಡುಗೆಯ ಪಾತ್ರೆಗಳ ಬದಲಾಗಿ ಉಕ್ಕಿನ ಶಿರಸ್ತ್ರಾಣ ಹಾಗೂ ಫಿರಂಗಿ ಯಂತ್ರವನ್ನು ತಯಾರಿಸಬೇಕೆಂದು ಅವರು ನಿನಗೆ ಆದೇಶಿಸಿದಾಗ, ನಿನಗಿರುವುದು ಒಂದೇ ದಾರಿ: **ಒಲ್ಲೆ** ಎನ್ನು !

ನೀನು. ಅಂಗಡಿಯ ಮೇಜಿನ ಹಿಂದೆ ನಿಂತ ಹುಡುಗಿ ಹಾಗೂ ಕಚೇರಿಯಲ್ಲಿರುವ ಹುಡುಗಿ. ನಾಳೆ ನೀನು ಸಿಡಿಗುಂಡುಗಳನ್ನು ತುಂಬಿ, ಕೋವಿಗಳಿಗೆ ದುರ್ಬೀನುಗಳನ್ನು ಅಳವಡಿಸಬೇಕೆಂದು ಅವರು ನಿನಗೆ ಆದೇಶಿಸಿದಾಗ, ನಿನಗಿರುವುದು ಒಂದೇ ದಾರಿ: **ಒಲ್ಲೆ** ಎನ್ನು !

ನೀನು. ಕಾರ್ಖಾನೆಯ ಮಾಲೀಕ. ನಾಳೆ ನೀನು ಹಿಟ್ಟು ಹಾಗೂ ಕೋಕೋ ಪುಡಿಯ ಬದಲಾಗಿ ಸಿಡಿಮದ್ದನ್ನು ಮಾರಬೇಕೆಂದು ಅವರು ನಿನಗೆ ಆದೇಶಿಸಿದಾಗ, ನಿನಗಿರುವುದು ಒಂದೇ ದಾರಿ : **ಒಲ್ಲೆ** ಎನ್ನು !

ನೀನು. ಪ್ರಯೋಗಶಾಲೆಯಲ್ಲಿನ ಸಂಶೋಧಕ. ನಾಳೆ ನೀನು ಹಳೆಯ ಬದುಕಿನ ಬದಲಾಗಿ ಹೊಸ ಸಾವೊಂದನ್ನು ಸೃಷ್ಟಿಸಬೇಕೆಂದು ಅವರು ನಿನಗೆ ಆದೇಶಿಸಿದಾಗ, ನಿನಗಿರುವುದು ಒಂದೇ ದಾರಿ : **ಒಲ್ಲೆ** ಎನ್ನು !

ನೀನು. ದಿವಾನಖಾನೆಯಲ್ಲಿ ಕುಳಿತ ಕವಿ. ನಾಳೆ ನೀನು ಪ್ರೇಮಗೀತೆಯ ಬದಲಾಗಿ ದ್ವೇಷಗೀತೆಯನ್ನು ಹಾಡಬೇಕೆಂದು ಅವರು ನಿನಗೆ ಆದೇಶಿಸಿದಾಗ, ನಿನಗಿರುವುದು ಒಂದೇ ದಾರಿ : **ಒಲ್ಲೆ** ಎನ್ನು !

ನೀನು. ರೋಗಿಯ ಶಯ್ಯೆಯ ಬಳಿ ನಿಂತ ವೈದ್ಯ. ನಾಳೆ ನೀನು ಮನುಷ್ಯರು ಯುದ್ಧದಲ್ಲಿ ಕಾದಲು ಸಿದ್ಧರೆಂದು ಪ್ರಮಾಣೀಕರಿಸಬೇಕೆಂದು ಅವರು ನಿನಗೆ ಆದೇಶಿಸಿದಾಗ, ನಿನಗಿರುವುದು ಒಂದೇ ದಾರಿ : **ಒಲ್ಲೆ** ಎನ್ನು !

ನೀನು. ಪೀಠದ ಮುಂದೆ ನಿಂತ ಪಾದ್ರಿ. ನಾಳೆ ನೀನು ಹತ್ಯೆಗೆ ಆಶೀರ್ವಾದ ನೀಡಿ, ಯುದ್ಧವನ್ನು ಪವಿತ್ರವಾದದ್ದೆಂದು ಘೋಷಿಸಬೇಕೆಂದು ಅವರು ನಿನಗೆ ಆದೇಶಿಸಿದಾಗ, ನಿನಗಿರುವುದು ಒಂದೇ ದಾರಿ : **ಒಲ್ಲೆ** ಎನ್ನು !

ನೀನು. ಉಗಿಹಡಗಿನ ನಾಯಕ. ನಾಳೆ ನೀನು ಗೋಧಿಯ ಬದಲಾಗಿ ತೋಪುಗಳು ಹಾಗೂ ಫಿರಂಗಿ ರಥಗಳನ್ನು ಕೊಂಡೊಯ್ಯಬೇಕೆಂದು ಅವರು ನಿನಗೆ ಆದೇಶಿಸಿದಾಗ, ನಿನಗಿರುವುದು ಒಂದೇ ದಾರಿ : **ಒಲ್ಲೆ** ಎನ್ನು !

ನೀನು. ವಿಮಾನದಾಣದಲ್ಲಿರುವ ವಿಮಾನ ಚಾಲಕ. ನಾಳೆ ನೀನು ಬಾಂಬುಗಳು ಮತ್ತು ಬೆಳಕವನ್ನು ನಗರಗಳ ಮೇಲೆ ಉದುರಿಸಬೇಕೆಂದು ಅವರು ನಿನಗೆ ಆದೇಶಿಸಿದಾಗ, ನಿನಗಿರುವುದು ಒಂದೇ ದಾರಿ : **ಒಲ್ಲೆ** ಎನ್ನು !

ನೀನು. ಹಾಸಿಗೆಯಲ್ಲಿರುವ ದರ್ಜಿ. ನಾಳೆ ನೀನು ಸಮವಸ್ತ್ರಗಳನ್ನು ಹೊಲಿಯಬೇಕೆಂದು ಅವರು ನಿನಗೆ ಆದೇಶಿಸಿದಾಗ, ನಿನಗಿರುವುದು ಒಂದೇ ದಾರಿ : **ಒಲ್ಲೆ** ಎನ್ನು !

ನೀನು. ಮೇಲಂಗಿ ತೊಟ್ಟ ನ್ಯಾಯಾಧೀಶ. ನಾಳೆ ನೀನು ಸೈನಿಕ ನ್ಯಾಯಾಲಯಕ್ಕೆ ಹೋಗಬೇಕೆಂದು ಅವರು ನಿನಗೆ ಆದೇಶಿಸಿದಾಗ, ನಿನಗಿರುವುದು ಒಂದೇ ದಾರಿ : **ಒಲ್ಲೆ** ಎನ್ನು !

ನೀನು. ರೈಲು ನಿಲ್ದಾಣದಲ್ಲಿನ ಸಿಬ್ಬಂದಿ. ನಾಳೆ ನೀನು ಯುದ್ಧ ಸಾಮಗ್ರಿಗಳು ಹಾಗೂ ಸೈನಿಕರನ್ನು ಸಾಗಿಸುವ ರೈಲುಗಾಡಿ ಹೊರಡಲು ಸಂಜ್ಞೆ ಮಾಡಬೇಕೆಂದು ಅವರು ನಿನಗೆ ಆದೇಶಿಸಿದಾಗ, ನಿನಗಿರುವುದು ಒಂದೇ ದಾರಿ : **ಒಲ್ಲೆ** ಎನ್ನು !

ನೀನು. ಹಳ್ಳಿಯಲ್ಲಿರುವ ಮನುಷ್ಯ ಹಾಗೂ ನಗರದಲ್ಲಿರುವ ಮನುಷ್ಯ. ನಾಳೆ ಅವರು ಕಡ್ಡಾಯ ಸೈನ್ಯ ಸೇವೆಯ ಆದೇಶ ದೊಂದಿಗೆ ನಿನ್ನಲ್ಲಿಗೆ ಬಂದಾಗ, ನಿನಗಿರುವುದು ಒಂದೇ ದಾರಿ : **ಒಲ್ಲೆ** ಎನ್ನು !

ನೀನು. ನಾರ್ಮಾಂಡಿಯಲ್ಲಿನ ತಾಯಿ ಮತ್ತು ಉಕ್ರೇನಿನಲ್ಲಿನ ತಾಯಿ, ನೀನು, ಫ್ರಿಸ್ಕೋ ಮತ್ತು ಲಂಡನ್‌ನಲ್ಲಿನ ತಾಯಿ, ನೀನು, ಹುಆಂಗ್‌ಹೋ ಮತ್ತು ಮಿಸ್ಸಿಸ್ಸಿಪ್ಪಿಯವಳು, ನೀನು, ನೇಪಲ್ಸ್, ಹ್ಯಾಂಬರ್ಗ್, ಕಾಯ್‌ರೋದಲ್ಲಿರುವ ತಾಯಿ – ಎಲ್ಲ ಭೂಖಂಡ ಗಳಲ್ಲಿನ ತಾಯಂದಿರೆ, ಜಗದ ಎಲ್ಲ ತಾಯಂದಿರೆ, ನಾಳೆ ನೀವು ಮಕ್ಕಳನ್ನು, ಸೈನ್ಯದ ಆಸ್ಪತ್ರೆಗಳಿಗಾಗಿ ದಾದಿಯರನ್ನು ಹಾಗೂ ಹೊಸ ಯುದ್ಧಗಳಿಗಾಗಿ ಹೊಸ ಸೈನಿಕರನ್ನು ಹೆರಬೇಕೆಂದು ಅವರು ನಿಮಗೆ ಆದೇಶಿಸಿದಾಗ, ತಾಯಂದಿರೇ, ನಿಮಗಿರುವುದು ಒಂದೇ ದಾರಿ : **ಒಲ್ಲೆ** ಎನ್ನಿ ! ತಾಯಂದಿರೇ, **ಒಲ್ಲೆ** ಎನ್ನಿ !

ಏಕೆಂದರೆ, ನೀವು ಒಲ್ಲೆ ಎನ್ನದಿದ್ದರೆ, ನೀವು ಒಲ್ಲೆ ಎನ್ನದಿದ್ದರೆ, ತಾಯಂದಿರೇ, ಆಗ: ಆಗ:

ಆರ್ಭಟದ ಹೊಗೆ ಕವಿದ ಬಂದರು ನಗರಗಳಲ್ಲಿ ಹಡಗುಗಳು ನರಳಾಡುತ್ತ ನಿಶ್ಶಬ್ದಗೊಳ್ಳುವವು, ನೀರಿನಲ್ಲಿ ಮುಳುಗಿದ ಬೃಹದ್ಗಜದ ಹೆಣದಂತೆ ನಿಧಾನವಾಗಿ ನಿರ್ಜೀವ, ಒಂಟಿಯಾದ ಬಂದರು ಕಟ್ಟೆಗೆ ಬಡಿಯುತ್ತಿದ್ದರೆ, ಒಮ್ಮೆ ಅಬ್ಬರಿಸುತ್ತ, ಹೊಳೆಯುತ್ತಿದ್ದ ಹಡಗಿನ ಒಡಲು ನಂತರ ಕಡಲು ಪಾಚಿ, ಜೊಂಡು, ಶಂಬೂಕಗಳ ಮೇಲಂಗಿಯನ್ನು ಹೊದ್ದು, ಸತ್ತ ಮೀನಿನ ಕೊಳೆತ ನಾತದ ಸ್ಮಶಾನದಲ್ಲಿ ನಿಶ್ಶಕ್ತವಾಗಿ, ಜೀರ್ಣಗೊಂಡು ಸಾವನ್ನಪ್ಪುವವು – ಟ್ರ್ಯಾಂಗಳು ಅರ್ಥಹೀನ, ನಿಸ್ತೇಜ, ಗಾಜಿನ ಕಂಗಳ ಪಂಜರಗಳಾಗುವವು, ಮಂಕು ಕವಿದು, ನಜ್ಜುಗುಜ್ಜಾಗಿ, ಸಿಪ್ಪೆ ಸುಲಿಯುತ್ತ ಅಡ್ಡಾದಿಡ್ಡಿ ಬಿದ್ದ ತಂತಿಗಳ, ರೈಲು ಕಂಬಿಗಳ ಉಕ್ಕಿನ ಅಸ್ಥಿಪಂಜರಗಳ ಬಳಿ, ಶಿಥಿಲವಾದ ಕೊಳೆಯುತ್ತಿರುವ ಶೆಡ್‌ಗಳ ಹಿಂದೆ ಮತ್ತು ಕಳೆದು ಹೋದ, ಗುಂಡಿಬಿದ್ದ ರಸ್ತೆಗಳಲ್ಲಿ – ಬೂದುಬಣ್ಣದ, ಗಂಜಿಯಂತಹ ಜಡವಾದ, ಎಲ್ಲವನ್ನು ಕಬಳಿಸುತ್ತ ಬೆಳೆಯುತ್ತಿರುವ ನೀರವತೆ ಕರಾಳವಾಗಿ, ಅತಿಯಾಸೆಯಿಂದ, ತಡೆಯಿಲ್ಲದೆ ಶಾಲೆಗಳಲ್ಲಿ, ವಿಶ್ವವಿದ್ಯಾಲಯಗಳಲ್ಲಿ, ಕ್ರೀಡಾಂಗಣಗಳಲ್ಲಿ, ಮಕ್ಕಳ ಆಟದ ಮೈದಾನಗಳಲ್ಲಿ ಉರುಳುವುದು – ರಸಭರಿತ, ಸೂರ್ಯನಡಿಯಲ್ಲಿ ಮಾಗಿದ ದ್ರಾಕ್ಷಿಗಳು ಮುರಿದ ಟೊಂಗೆಗಳ ಮೇಲೆಯೇ



ವೊಲ್ಫ್‌ಗಾಂಗ್ ಬಾರ್‌ಶರ್ಟ್ ಜರ್ಮನಿಯಲ್ಲಿ ಎರಡನೆ ಮಹಾಯುದ್ಧದ ಕಾಲದಲ್ಲಿ ಬಹಳ ಪ್ರಸಿದ್ಧಿ ಪಡೆದ ಲೇಖಕ. ೧೯೨೧ರಲ್ಲಿ ಹ್ಯಾಂಬರ್ಗ್ ನಗರದಲ್ಲಿ ಜನಿಸಿದ ಬಾರ್‌ಶರ್ಟ್ ೧೫ನೆಯ ವಯಸ್ಸಿನಲ್ಲಿ ಕವಿತೆಗಳನ್ನು ಬರೆಯಲಾರಂಭಿಸಿದನು. ಹ್ಯಾಂಬರ್ಗ್‌ನ ಸಂಚಾರಿ ರಂಗತಂಡದಲ್ಲಿ ನಟನಾಗಿದ್ದ. ೧೯೪೦ರ ಹೊತ್ತಿಗಾಗಲೇ ಹಿಟ್ಲರ್‌ನ ಗೆಸ್ಟಪೋದ (ಗುಪ್ತ ಪೊಲೀಸ್ ದಳ) ಕೆಂಗಣ್ಣು ಬಾರ್‌ಶರ್ಟ್‌ನ ಮೇಲೆ ಬಿದ್ದಿತ್ತು. ೧೯೪೧ರಲ್ಲಿ ಅವನು ಕಡ್ಡಾಯವಾಗಿ ಹಿಟ್ಲರ್‌ನ ಸೈನ್ಯವನ್ನು ಸೇರಬೇಕಾಯಿತು. ಅಲ್ಲಿನ ಅನುಭವಗಳು ಅವನ ಎಲ್ಲ ಕೃತಿಗಳ ಮೇಲೆ ಬಲವಾದ ಪರಿಣಾಮವನ್ನು ಬೀರಿದವು. ಅವನ ನಾಟಕ *ಡ್ರೌಸೆನ್ ಫೋರ್ ದೆರ್ ಟ್ಯೂರ್ (ಹೊರಗಡೆ ನಿಂತವ)* ಯುದ್ಧ ನಂತರದ ಕಾಲದಲ್ಲಿ ಅತ್ಯಂತ ಜನಪ್ರಿಯವಾಯಿತು. ೧೯೪೬ರಲ್ಲಿ *ಲಾಟರ್ನ, ನಾಖ್ಟ್ ಉಂಡ್ ಶ್ಟೆರ್ನ (ಲಾಟೀನು, ರಾತ್ರಿ ಮತ್ತು ನಕ್ಷತ್ರಗಳು)* ಎಂಬ ಕವನಸಂಕಲನವನ್ನು ಬರೆದನು. ಯುದ್ಧದ ಭೀಕರತೆಗೆ ಕನ್ನಡಿ ಹಿಡಿದಂತಿರುವ ಬಾರ್‌ಶರ್ಟ್‌ನ ಹಲವಾರು ಸಣ್ಣ ಕತೆಗಳು ಇಂದಿಗೂ ಜನಪ್ರಿಯವಾಗಿವೆ. ೧೯೪೭ರಲ್ಲಿ ಅನಾರೋಗ್ಯದ ಕಾರಣದಿಂದಾಗಿ ಸ್ವಿಟ್ಜರ್ಲೆಂಡಿನ ಬೇಸಲ್ ನಗರದ ಆರೋಗ್ಯ ಕೇಂದ್ರಕ್ಕೆ ಬಾರ್‌ಶರ್ಟ್ ಸೇರ್ಪಡೆಯಾಗಬೇಕಾಯಿತು. ೨೦ ನವೆಂಬರ್ ೧೯೪೭ರಂದು ಅವನು ಕೊನೆಯುಸಿರೆಳೆಯುವ ಕೆಲವೇ ದಿನಗಳ ಮುನ್ನ ಬಾರ್‌ಶರ್ಟ್ ಯುದ್ಧದ ವೈಫಲ್ಯತೆಯ ಸಂದೇಶವನ್ನು ಸಾರುವ *ದನ್ ಗಿಬ್ಟ್ ಎಸ್ ನುರ್ ಐನ್ಸ್ (ಆಗ ಇರುವುದು ಒಂದೇ ದಾರಿ)* ಎಂಬ ಪ್ರಣಾಳಿಕೆಯನ್ನು ಬರೆದನು. ಅವನ ಈ ಕೃತಿಯನ್ನು ಅವನು ಸತ್ತ ದಿನದಂದು ಮೊದಲ ಬಾರಿಗೆ ಆಕಾಶವಾಣಿಯಲ್ಲಿ ಪ್ರಸ್ತುತಪಡಿಸಲಾಯಿತು. ಬಾರ್‌ಶರ್ಟ್‌ನ ಸಾಲುಗಳು ಹಲವಾರು ಬಾರಿ ಯುದ್ಧ ವಿರೋಧಿ ಚಳುವಳಿಗಳಲ್ಲಿ ಮೊಳಗಿವೆ. ಜಗತ್ತಿನ ಪ್ರತಿಯೊಂದು ದೇಶವೂ ಯುದ್ಧಕ್ಕೆ ಸಿದ್ಧವಾಗಿ ನಿಂತಿರುವ ಇಂದಿನ ಕ್ಲಿಷ್ಟವಾದ ರಾಜಕೀಯ ಪರಿಸ್ಥಿತಿಯಲ್ಲಿ ಸಾರ್ವಕಾಲಿಕವಾದ ವೊಲ್ಫ್‌ಗಾಂಗ್ ಬಾರ್‌ಶರ್ಟ್‌ನ ಎಚ್ಚರಿಕೆಯನ್ನು ಮನ್ನಿಸುವ ತುರ್ತು ಅಗತ್ಯ ಇಂದು ನಮಗೆಲ್ಲರಿಗೂ ಇದೆ.



**ಚಿತ್ರಕೃಪೆ : ಅಂತರರಾಷ್ಟ್ರೀಯ ವೊಲ್ಫ್‌ಗಾಂಗ್ ಬಾರ್‌ಶರ್ಟ್ ಸೊಸೈಟಿ**

ಕೊಳೆಯುವವು, ಅಕ್ಕಿ ಬರಡು ಭೂಮಿಯ ಮೇಲೆ ಒಣಗುವುದು, ಆಲೂಗಡ್ಡೆಗಳು ತೊರೆದ ಹೊಲಗಳಲ್ಲಿ ಮಂಜುಗಡ್ಡೆಗಳಾಗುವವು, ಹಸುಗಳು ಸಾವಿನಿಂದ ಸೆಟೆದು ನಿಂತ ತಮ್ಮ ಕಾಲುಗಳನ್ನು ನೆಲಕ್ಕುರುಳಿದ ಗೊಲ್ಲನ ಕಾಲುಮಣೆಯಂತೆ ಆಗಸದತ್ತ ಚಾಚುವವು – ಸಂಶೋಧನಾ ಸಂಸ್ಥೆಗಳಲ್ಲಿ ಮಹಾವೈದ್ಯರ ಆವಿಷ್ಕಾರಗಳು ಹುಳ್ಳಗಾಗಿ, ಕೊಳೆತು, ಬೂಷ್ಟು ಬಂದಂತಾಗುವವು – ಅಡುಗೆಮನೆಗಳಲ್ಲಿ, ಊಟದ ಕೋಣೆಗಳಲ್ಲಿ, ನೆಲಮಾಳಿಗೆಗಳಲ್ಲಿ, ಶೈತ್ಯಾಗಾರಗಳಲ್ಲಿ, ಉಗ್ರಾಣಗಳಲ್ಲಿ ಕೊನೆಯ ಹಿಟ್ಟಿನ ಚೀಲಗಳು, ಕೊನೆಯ ನೆಲಮುಳ್ಳಿ, ಸಿಹಿಗುಂಬಳ, ಚೆರ‍್ರಿ ಹಣ್ಣುಗಳ ರಸವುಳ್ಳ ಜಾಡಿಗಳು ಹಾಳಾಗುವವು – ತಲೆಕೆಳಗಾಗಿ ಉರುಳಿಬಿದ್ದ ಮೇಜುಗಳ, ಚೂರುಚೂರಾದ ತಟ್ಟೆಗಳ ಅಡಿಯಲ್ಲಿ ಬಿದ್ದ ರೊಟ್ಟಿಗಳು ಹಸಿರು ಬಣ್ಣಕ್ಕೆ ತಿರುಗುವವು ಹಾಗೂ ಹಳಸಿದ ಬೆಣ್ಣೆಯು ಮೆತ್ತಗಾದ ಸಾಬೂನಿನಂತೆ ನಾರುವುದು, ಹೊಲಗಳಲ್ಲಿನ ಧಾನ್ಯಗಳು ಹೊಡೆದುರುಳಿಸಿದ ಸೈನ್ಯದಂತೆ ತುಕ್ಕುಹಿಡಿದ ನೇಗಿಲ ಬಳಿ ಕುಸಿಯುವವು, ಇಟ್ಟಿಗೆಯ ಚಿಮಣಿಗಳು, ಹೊಗೆ ಕಾರುವ ಕಾರ್ಖಾನೆಗಳ ಹೊಗೆನಳಿಗೆಗಳು, ಕಂಡಿಗಳು ಚಿರಂತನವಾದ ಹುಲ್ಲಿನಿಂದ ಮುಚ್ಚಿಹೋಗುವವು, ಚೂರು ಚೂರಾಗುವವು – ಚೂರುಚೂರಾಗುವವು– ಚೂರುಚೂರಾಗುವವು – ಆಗ ಉಳಿದ ಕೊನೆಯ ಮನುಷ್ಯ, ಹರಿದ ಕರುಳು ಮತ್ತು ಕಲುಷಿತ ಶ್ವಾಸಗಳೊಂದಿಗೆ, ಉತ್ತರವಿಲ್ಲದೆ ಒಂಟಿಯಾಗಿ ವಿಷಭರಿತ ಉರಿಯುವ ಸೂರ್ಯ ಮತ್ತು ತೂಗಾಡುವ ನಕ್ಷತ್ರರಾಶಿಗಳಡಿ, ಅಲೆದಾಡುತ್ತ, ಸ್ಪಷ್ಟವಾಗಿ ಗೋಚರಿಸುವ ಸಾಮೂಹಿಕ ಗೋರಿಗಳ ಮತ್ತು ತಣ್ಣನೆಯ, ನಿರ್ಜನವಾದ ಬೃಹತ್ ಕಾಂಕ್ರೀಟ್ ಕಾಡುಗಳಾದ ನಗರಗಳ ಮೂರ್ತಿಗಳ ನಡುವೆ ತೂರಾಡುತ್ತಾ, ಆ ಸಣಕಲು, ಮತಿಗೆಟ್ಟ, ನಿಂದಿಸುವ, ಆಪಾದಿಸುವ ಕೊನೆಯ ಮನುಷ್ಯ, ಮತ್ತವನ ಭಯಂಕರ ಕೂಗು: **ಏಕೆ?** ಯಾರಿಗೂ ಕೇಳದೆಯೇ ಬೆಂಗಾಡಿನಲ್ಲಿ ಕಳೆದು ಹೋಗುವುದು, ಭಗ್ನಾವಶೇಷಗಳ ನಡುವೆ ತೂರಿ ಹೋಗುವುದು, ಹಾಳು ಇಗರ್ಜಿಗಳ ಮಧ್ಯೆ ಸೋರಿ ಹೋಗುವುದು, ಎತ್ತರದ ಕಾಪುಗೂಡುಗಳಿಗೆ ಅಪ್ಪಳಿಸುವುದು, ರಕ್ತದ ಕೊಳಗಳಲ್ಲಿ ಮುಳುಗುವುದು ಕೊನೆಯ ಮನುಷ್ಯ ಪ್ರಾಣಿಯ ಕೊನೆಯ ಉತ್ತರವಿಲ್ಲದ ಪಶುವಿನ ಆಕ್ರಂದನ – ಈ ಎಲ್ಲವೂ ನಡೆಯುವವು ನಾಳೆ, ಪ್ರಾಯಶಃ ನಾಳೆ, ಪ್ರಾಯಶಃ ಇಂದು ರಾತ್ರಿಯೇ, ರಾತ್ರಿ ಇಂದೇ, ಎನ್ನದಿದ್ದರೆ – ಎನ್ನದಿದ್ದರೆ – ನೀವು ಒಲ್ಲೆ ಎನ್ನದಿದ್ದರೆ... ನೀವು **ಒಲ್ಲೆ** ಎನ್ನದಿದ್ದರೆ!

**ಮೈತ್ರಿ ಬೆಂಗಳೂರು**
ಇಂಗ್ಲಿಷ್ ಮತ್ತು ಫಾರಿನ್ ಲಾಂಗ್ವೇಜ್ಸ್ ವಿಶ್ವವಿದ್ಯಾಲಯ, ಹೈದರಾಬಾದ್

# ಗೆಳೆಯ ಮೋಹಿತ್ ಸೇನ್‌ರವರ ಸವಿನೆನಪುಗಳು



ನೆನಪುಗಳು ಮಾಸಲು ಸಾಧ್ಯ. ಜೀವನದ ಪಯಣದಲ್ಲಿ ಅನುಭವಿಸಿದ ಹಲವಾರು ಕ್ಷಣಗಳು ಮಾತ್ರ ನಮ್ಮನ್ನಗಲದೆ ನಮ್ಮ ನಂತರವೂ ಪ್ರಚಲಿತವಾಗಿರುವುದು ಸಾಧ್ಯ. 'ಐಡಿಯಾ ಇಸ್ ಪವರ್'! ನಮ್ಮೆಲ್ಲರ ನೆಚ್ಚಿನ ಸಂಗಾತಿ ಮೋಹಿತ್ ಸೇನ್‌ರವರ ಜೊತೆ ನನ್ನ ಪರಿಮಿತ ಒಡನಾಟದ ಕ್ಷಣಗಳು ಜ್ಞಾಪಕಕ್ಕೆ ಬರುತ್ತಿವೆ. ೧೯೭೧ನೇ ವರ್ಷ ಇರಬಹುದು. ಮೊಟ್ಟಮೊದಲ ಬಾರಿ ಅವರನ್ನು ನೋಡಿದೆ. ಅಂದರೆ ಸುಮಾರು ೪೭ ವರ್ಷಗಳ ಹಿಂದೆ. ನಾನು ಆಗಿನ್ನೂ ಜೀವ ವಿಮಾ ನಿಗಮದಲ್ಲಿ ನೌಕರಿಯಲ್ಲಿದ್ದ ಒಬ್ಬ ಯುವಕ. ನನ್ನ ಟ್ರೇಡ್ ಯೂನಿಯನ್ ಜೀವನದ ಆರಂಭದ ದಿನಗಳು. ಮಲ್ಲೇಶ್ವರದ ನ್ಯೂ ಕೃಷ್ಣ ಭವನದಲ್ಲಿ ಮೂರು ದಿನಗಳ ಅಧ್ಯಯನ ಶಿಬಿರವನ್ನು ಡಾ|| ಜಿ. ರಾಮಕೃಷ್ಣರವರ ಮೇಲ್ವಿಚಾರಣೆಯಲ್ಲಿ ಏರ್ಪಡಿಸಲಾಗಿತ್ತು. ನಾನೂ ಒಬ್ಬ 'ವಿದ್ಯಾರ್ಥಿ'ಯಾಗಿ ಭಾಗವಹಿಸಿದ್ದೆ. ಮಾರ್ಕ್ಸ್‌ವಾದಿ ಸಿದ್ಧಾಂತಗಳು, ದ್ವಂದ್ವಮಾನ ಭೌತಿಕವಾದ ಮುಂತಾದ ವಿಚಾರಗಳ ಬಗ್ಗೆ ಗೆಳೆಯ ಮೋಹಿತ್ ಸೇನ್ ಪಾಠ ಮಾಡಿದರು. ಅವರ ವ್ಯಕ್ತಿತ್ವ, ಪಾಠ ಮಾಡುವ ಶೈಲಿ, ಕಂಚಿನ ಧ್ವನಿ, ಅಗಾಧವಾದ ಪಾಂಡಿತ್ಯ, ಸರಳತೆ, ಅವರ ಭಾಷೆ, ಅದನ್ನು ಲೀಲಾಜಾಲವಾಗಿ ಪ್ರಯೋಗಿಸುವ ಚಮತ್ಕಾರ, ಇವೆಲ್ಲವೂ ನನ್ನ ಮೇಲೆ ಹೆಚ್ಚಿನ ಪ್ರಭಾವ ಬೀರಿದವು. ನಿಜ ಹೇಳುವುದಾದರೆ, ಅಧ್ಯಯನ ಶಿಬಿರದಲ್ಲಿ ಅವರು ಮಾಡಿದ ಪಾಠಗಳು ನನಗೆ ಏನೂ ಅರ್ಥವಾಗಲಿಲ್ಲ. ನಾಲ್ಕನೇ ಕ್ಲಾಸ್ ಹುಡುಗನನ್ನು ಎಂ.ಎ. ತರಗತಿಯಲ್ಲಿ ಹಾಕಿದಂತೆ ಅನಿಸುತ್ತಿತ್ತು! ಇಷ್ಟು ವರ್ಷಗಳ ನಂತರವೂ ನಾನು 'ಕ್ಯಾರಿ ಓವರ್' ವಿದ್ಯಾರ್ಥಿಯೇ! ಆದರೆ ಏನೋ ಒಂದು ಅವಸರ, ಒಂದು ರೀತಿಯ ಪರದಾಟ, ವೇಗ ಅಥವಾ ಉದ್ವೇಗ ಜೀವನದಲ್ಲಿ ಪ್ರಾರಂಭವಾಯಿತು. ಹೊಸ ವಿಚಾರಗಳನ್ನು ತಿಳಿದುಕೊಳ್ಳಬೇಕು, ಹೆಚ್ಚಿನ ಅನುಭವವನ್ನು ಸಂಪಾದಿಸಬೇಕು, ಸಮಾಜದ ಬಗ್ಗೆ ತಿಳುವಳಿಕೆ ಹೊಂದಬೇಕು, ಅನ್ಯಾಯಗಳ ವಿರುದ್ಧ ಸಾಮೂಹಿಕವಾಗಿ ಚಿಂತನೆ ಮಾಡಿ ಹೋರಾಟ ಮಾಡಬೇಕು, ಮುಂತಾದ ವಿಚಾರಗಳು ಅಮೂರ್ತವಾಗಿ ನನ್ನ ಒಳಗೆ ಗೋಚರವಾಗತೊಡಗಿದವು. ಆ ದಿನಗಳಲ್ಲಿ ಈ ಅವಸ್ಥೆಯನ್ನು ನಾನು ಸ್ಪಷ್ಟವಾಗಿ ಮನಗಾಣದೆ ಇದ್ದರೂ, ಇಷ್ಟು ದೀರ್ಘ ಅವಧಿಯ ನಂತರ, ಅನುಭವಗಳನ್ನು ಮೆಲುಕು ಹಾಕಿದಾಗ, ಈಗ ಅದು ವಾಸ್ತವಿಕವಾಗಿ ಕಾಣುತ್ತದೆ. ಮೋಹಿತ್ ಸೇನ್‌ರವರ ಪ್ರಭಾವ ನನ್ನ ಮೇಲೆ ಸಾಕಷ್ಟು ಆಯಿತು. ನಂತರದ ಸಮಯದಲ್ಲಿ ಡಾ|| ಜಿ. ಆರ್.ರವರ ತತ್ವಶಾಸ್ತ್ರದ ತರಗತಿಗಳು, ಕೆಂಬಾವುಟದ ರಾಮಚಂದ್ರಭಟ್ಟರ ಉಪನ್ಯಾಸಗಳು ಮತ್ತು ಗೆಳೆಯ ಹಾಗೂ ನನ್ನ ಸಹೋದ್ಯೋಗಿ ಗೆಳೆಯ ಸಿ. ವಿ. ಜಯತೀರ್ಥರವರ ಐತಿಹಾಸಿಕ ವಾಸ್ತವವಾದದ ಪಾಠಗಳನ್ನು ಕೇಳಿದಾಗ, ಇನ್ನಷ್ಟು ಪ್ರಚೋದನೆಗೆ ಒಳಗಾದೆ. ಸ್ವಲ್ಪ ಮಸುಕು ಮಸುಕಾಗಿದ್ದರೂ ಹೊಸ ದಾರಿಯೊಂದು ನನಗೆ ಗೋಚರವಾಗಲು ಆರಂಭವಾಯಿತು. ನಾನೇ ಸಂಚಾಲಕ ಅಥವಾ ವ್ಯವಸ್ಥಾಪಕನಾಗಿದ್ದು, ಗೆಳೆಯ ಮೋಹಿತ್ ಸೇನ್‌ರವರ ಎರಡು ಮೂರು ಮಾರ್ಕ್ಸ್‌ವಾದದ ಅಧ್ಯಯನ ಶಿಬಿರಗಳನ್ನು ನ್ಯೂ ಕೃಷ್ಣ ಭವನ, ಸ್ಟೂಡೆಂಟ್ಸ್ ಕ್ರಿಶ್ಚಿಯನ್ ಮೂವ್‌ಮೆಂಟ್ (ಎಸ್ಸಿಎಂ) ಹಾಲ್ ಮುಂತಾದ ಜಾಗಗಳಲ್ಲಿ ವ್ಯವಸ್ಥೆ ಮಾಡಿದೆ. ನನ್ನನ್ನು ಹೆಸರಿನಿಂದ ಗುರುತಿಸುವಷ್ಟು ಒಂದು ಸಂಬಂಧ ನನಗೂ ಗೆಳೆಯ ಮೋಹಿತ್ ಸೇನ್‌ರವರಿಗೂ ಬೆಳೆಯಿತು. ಅವರ ಸರಳತೆಯ ಬಗ್ಗೆ ಒಂದು ನಿದರ್ಶನ ನನ್ನ ಜ್ಞಾಪಕಕ್ಕೆ ಬರುತ್ತದೆ. ಮಿಷನ್ ರಸ್ತೆಯ ಎಸ್ಸಿಎಂ ಹೌಸ್‌ನಲ್ಲಿ ಅಧ್ಯಯನ ಶಿಬಿರ. ಆ ದಿನದ ತರಗತಿಯ ನಂತರ ಸಂಜೆ ಅವರೊಂದಿಗೆ ಕೊಠಡಿಯಲ್ಲಿ ಮಾತನಾಡುತ್ತಾ ಇದ್ದೆವು. ಗೆಳೆಯ ಅನಂತಸುಬ್ಬರಾವ್, ಗೆಳೆಯ ಬಾಬು ಮಾಥ್ಯೂ ಜೊತೆಯಿದ್ದರು. ಮೋಹಿತ್ ಸೇನ್‌ರವರ ಶರ್ಟು ಕೊಳೆಯಾಗಿತ್ತು. ಬದಲಿ ಅಂಗಿ ಅವರ ಬಳಿ ಇರಲಿಲ್ಲ. ಬಂಗಾಲದ ಶ್ರೀಮಂತ ಮನೆತನದಲ್ಲಿ ಜನಿಸಿದವರು, ಇಂಗ್ಲೆಂಡ್‌ನ ಕೇಂಬ್ರಿಡ್ಜ್ ಯೂನಿವರ್ಸಿಟಿಯಲ್ಲಿ

**ನ. ಸುಂದರಮೂರ್ತಿ**

ಮಿಷನ್ ರಸ್ತೆಯ ಎಸ್ಸಿಎಂ ಹೌಸ್‌ನಲ್ಲಿ ಅಧ್ಯಯನ ಶಿಬಿರ. ಆ ದಿನದ ತರಗತಿಯ ನಂತರ ಸಂಜೆ ಅವರೊಂದಿಗೆ ಕೊಠಡಿಯಲ್ಲಿ ಮಾತನಾಡುತ್ತಾ ಇದ್ದೆವು. ಗೆಳೆಯ ಅನಂತಸುಬ್ಬರಾವ್, ಗೆಳೆಯ ಬಾಬು ಮಾಥ್ಯೂ ಜೊತೆಯಿದ್ದರು. ಮೋಹಿತ್ ಸೇನ್‌ರವರ ಶರ್ಟು ಕೊಳೆಯಾಗಿತ್ತು. ಬದಲಿ ಅಂಗಿ ಅವರ ಬಳಿ ಇರಲಿಲ್ಲ. ಬಂಗಾಲದ ಶ್ರೀಮಂತ ಮನೆತನದಲ್ಲಿ ಜನಿಸಿದವರು, ಇಂಗ್ಲೆಂಡ್‌ನ ಕೇಂಬ್ರಿಜ್ ಯೂನಿವರ್ಸಿಟಿಯಲ್ಲಿ ವ್ಯಾಸಂಗ ಮಾಡಿದವರು, ಮಾರ್ಕ್ಸ್‌ವಾದ, ಕಮ್ಯುನಿಸ್ಟ್ ಸಿದ್ಧಾಂತಗಳ ಕುರಿತು ಅಪಾರ ಪಾಂಡಿತ್ಯ ಹೊಂದಿದ್ದ ಅವರು ಜೀವನದ ಎಲ್ಲ ಸುಖಗಳನ್ನು ತಿರಸ್ಕರಿಸಿ ಅಥವಾ ತ್ಯಜಿಸಿ ಕಮ್ಯುನಿಸ್ಟ್ ಚಳುವಳಿಗೆ ಸೇರಿ ರಾಷ್ಟ್ರ ನಾಯಕರಾಗಿದ್ದರು. ಅತ್ಯಂತ ಸರಳ ಜೀವಿ. ಉತ್ತಮ ವಾಗ್ಮಿ. ಅವರ ಬಳಿ ಬದಲಿ ಅಂಗಿ ಇಲ್ಲದಿದ್ದಾಗ ರಾತ್ರಿ ವೇಳೆ ಅವರ ಕೊಳೆ ಶರ್ಟನ್ನು ಒಗೆದು, ಫ್ಯಾನ್ ಅಡಿ ಒಣಗಿಸಿ, ಬೆಳಗ್ಗೆ ಬೇಗ ಇಸ್ತ್ರೀ ಮಾಡಿಸಿ ಕೊಟ್ಟವರು ಗೆಳೆಯ ಅನಂತಸುಬ್ಬರಾವ್. ಅಂದರೆ ಗೆಳೆಯ ಮೋಹಿತ್ ಸೇನ್‌ರವರ ಜೀವನ ಎಷ್ಟು ಸರಳವಾಗಿತ್ತು ಎಂಬುದನ್ನು ಇಂದಿನ ತಲೆಮಾರಿನವರು ಅರ್ಥಮಾಡಿಕೊಳ್ಳಬಹುದು.

ವ್ಯಾಸಂಗ ಮಾಡಿದವರು, ಮಾರ್ಕ್ಸ್‌ವಾದ, ಕಮ್ಯುನಿಸ್ಟ್ ಸಿದ್ಧಾಂತಗಳ ಕುರಿತು ಅಪಾರ ಪಾಂಡಿತ್ಯ ಹೊಂದಿದ್ದ ಅವರು ಜೀವನದ ಎಲ್ಲ ಸುಖಗಳನ್ನು ತಿರಸ್ಕರಿಸಿ ಅಥವಾ ತ್ಯಜಿಸಿ ಕಮ್ಯುನಿಸ್ಟ್ ಚಳುವಳಿಗೆ ಸೇರಿ ರಾಷ್ಟ್ರ ನಾಯಕರಾಗಿದ್ದರು. ಅತ್ಯಂತ ಸರಳ ಜೀವಿ. ಉತ್ತಮ ವಾಗ್ಮಿ. ಅವರ ಬಳಿ ಬದಲಿ ಅಂಗಿ ಇಲ್ಲದಿದ್ದಾಗ ರಾತ್ರಿ ವೇಳೆ ಅವರ ಕೊಳೆ ಶರ್ಟನ್ನು ಒಗೆದು, ಫ್ಯಾನ್ ಅಡಿ ಒಣಗಿಸಿ, ಬೆಳಿಗ್ಗೆ ಬೇಗ ಇಸ್ತ್ರಿ ಮಾಡಿಸಿ ಕೊಟ್ಟವರು ಗೆಳೆಯ ಅನಂತಸುಬ್ಬರಾವ್. ಅಂದರೆ ಗೆಳೆಯ ಮೋಹಿತ್ ಸೇನ್‌ರವರ ಜೀವನ ಎಷ್ಟು ಸರಳವಾಗಿತ್ತು ಎಂಬುದನ್ನು ಇಂದಿನ ತಲೆಮಾರಿನವರು ಅರ್ಥಮಾಡಿಕೊಳ್ಳ ಬಹುದು. ಈ ವಿಚಾರವನ್ನು ಪ್ರಸ್ತಾಪಿಸುವ ಸಂದರ್ಭದಲ್ಲಿ ನನಗೆ ಇನ್ನೊಂದು ಇದೇ ರೀತಿಯ ಘಟನೆ ಓದಿದ್ದು ಮನಸ್ಸಿಗೆ ತಾಟುತ್ತಿದೆ. ಐವತ್ತು ವರ್ಷಗಳಿಗೂ ಹಿಂದಿನ ಕಥೆ. ತಮಿಳುನಾಡಿನ ಅತ್ಯಂತ ಹೆಸರುವಾಸಿ ಕಮ್ಯುನಿಸ್ಟ್ ನಾಯಕ, ತ್ಯಾಗಜೀವಿ, ಗೆಳೆಯ ಜೀವಾನಂದಂರವರು




ತನ್ನ ಇಡೀ ಜೀವನವನ್ನೇ ಕಮ್ಯುನಿಸ್ಟ್ ಚಳುವಳಿಗಾಗಿ, ಜನಸಾಮಾನ್ಯರ, ಕಾರ್ಮಿಕರ ಸೇವೆಗಾಗಿ ಏಳಿಗೆಗಾಗಿ ಮುಡುಪಾಗಿಟ್ಟವರು. ಕಡುಬಡತನ, ಒಂಟಿಜೀವಿ. ಮದ್ರಾಸ್‌ನ ಕೊಳಚೆ ಪ್ರದೇಶದಲ್ಲಿ ಗುಡಿಸಲು ವಾಸ. ಒಂದು ಬೆಳಿಗ್ಗೆ ಅನುಯಾಯಿಗಳು ಜೀವಾನಂದಂರವರ ಗುಡಿಸಲಿಗೆ ಬಂದು ರಾಜ್ಯದ ಮುಖ್ಯಮಂತ್ರಿ ಸಲಹೆಗಾಗಿ ಬರಹೇಳಿದ್ದಾರೆಂದು ತಿಳಿಸುತ್ತಾರೆ. ಜೀವಾರವರು "ಆಯಿತು, ನೀವು ಮುಂದೆ ಹೋಗಿ, ಸ್ವಲ್ಪ ಸಮಯದ ನಂತರ ನಾನು ಮುಖ್ಯಮಂತ್ರಿಯವರ ನಿವಾಸಕ್ಕೆ ಬರುತ್ತೇನೆ" ಎಂದು ಹೇಳುತ್ತಾರೆ. ವಿಷಯವೇನೆಂದರೆ, ಗೆಳೆಯ ಜೀವಾ ಬಳಿಯಿದ್ದದ್ದು ಒಂದು ಪಂಚೆ ಮಾತ್ರ. ಅದನ್ನು ಆಗ ತಾನೇ ಒಗೆದು ಒಣ ಹಾಕಿದ್ದರು. ಸ್ವಲ್ಪ ಸಮಯದ ನಂತರ ಅದು ಒಣಗಿದ ಬಳಿಕ ಮೈಗೆ ಸುತ್ತಿಕೊಂಡು ಸಿಎಂ ಬಳಿ ಹೋಗ್ತಾರೆ. ಈ ರೀತಿಯ ಉದಾಹರಣೆಗಳು ನಮಗೆ ಸ್ಫೂರ್ತಿ ನೀಡುತ್ತವೆ ಹಾಗೂ ಬದುಕಿನ ಅರ್ಥವನ್ನು ಮನದಟ್ಟು ಮಾಡಿಕೊಡುತ್ತವೆ. ಜೀವಾನಂದಂ, ಮೋಹಿತ್ ಸೇನ್, ಭೂಪೇಶ್ ಗುಪ್ತ ಮುಂತಾದ ವರಿಷ್ಠ ನಾಯಕರುಗಳ ಜೀವನ ಎಲ್ಲರಿಗೂ ಮಾದರಿ. ಅವರುಗಳು ಪಾಲಿಸಿದ ಸೂತ್ರ, ಮಹಾತ್ಮ ಗಾಂಧಿಯವರು ಹೇಳಿದ ಹಾಗೆ, "ನನ್ನ ಬದುಕೇ ನನ್ನ ಸಂದೇಶ!" ಇಂದಿನ ರಾಜಕೀಯ, ಸಾಮಾಜಿಕ ಪರಿಸ್ಥಿತಿಯಲ್ಲಿ, ಬದಲಾಗುತ್ತಿರುವ ಕೊಳ್ಳುಬಾಕತನದ ಜಗತ್ತಿನಲ್ಲಿ, ಮೇಲೆ ತಿಳಿಸಿದ ವಿಚಾರಗಳು ಹೇಳುವುದು ಕಷ್ಟ, ಜನರಿಗೆ ಕೇಳುವುದೂ ಕಷ್ಟ, ಊಹೆ ಮಾಡಿಕೊಳ್ಳುವುದೂ ಅತ್ಯಂತ ಕಠಿಣ. ಮದುಮಗಳು ಈಶಾ ಅಂಬಾನಿಯ ಮದುವೆ ಕುಪ್ಪಸದ ಬೆಲೆ ಕೇವಲ ರೂ. ಎರಡು ಕೋಟಿ. ಮದುವೆಯ ವೆಚ್ಚ ರೂ. ೪೫೦ ಕೋಟಿ ಮಾತ್ರ. ಇವುಗಳನ್ನು ಕೇಳಲು, ಸುದ್ದಿ ಚಾನಲ್‌ಗಳಲ್ಲಿ ನೋಡಲು ಸರಾಸರಿ ಮಧ್ಯಮ ವರ್ಗದ ಮತ್ತು ನಗರ ಪ್ರದೇಶದ ಜನತೆಗೆ ಎಲ್ಲಿಲ್ಲದ ಆತುರ, ಮೋಜು!

ಶ್ರೀಮತಿ ಇಂದಿರಾ ಗಾಂಧಿಯವರ ಭೀಕರ ಹತ್ಯೆಯ ನಂತರ, ೧೯೮೫ರಲ್ಲಿ ಲಕ್ನೋದಲ್ಲಿ ಆಲ್ ಇಂಡಿಯಾ ಎಲ್ಐಸಿ ಎಂಪ್ಲಾಯೀಸ್ ಫೆಡರೇಷನ್ನಿನ ಮಹಾಧಿವೇಶನ ನಡೆಯಿತು. ಅಧಿವೇಶನಕ್ಕೆ ಮುಖ್ಯ ಅತಿಥಿ ಗೆಳೆಯ ಮೋಹಿತ್ ಸೇನ್. ಮೂಲೆಯ ಗೆಳೆಯನಾಗಿದ್ದರೂ, ಸರ್ವಸದಸ್ಯರ ಸಭೆಯಲ್ಲಿ ಮುಖ್ಯ ಭೂಮಿಕೆಯನ್ನು ಹೊತ್ತಿದ್ದ ನನ್ನನ್ನು ಗುರುತಿಸಿ, ಒಂದು ಮುಗುಳ್ನಗೆ. ಅವರ

ಭಾಷಣದ ವಿಚಾರ, "ಭಾರತ ದೇಶದ ಸ್ವಾತಂತ್ರ್ಯ ಚಳುವಳಿಯಲ್ಲಿ ಕಾರ್ಮಿಕರ ಹಾಗೂ ಕಮ್ಯುನಿಸ್ಟರ ಪಾತ್ರ." ಅಧಿವೇಶನ ನಡೆದ ರೈಲ್ವೆ ಇನ್ಸ್‌ಟಿಟ್ಯೂಟ್ ಸಭಾಂಗಣದಲ್ಲಿ ಕಿಕ್ಕಿರಿದಿದ್ದ ಪ್ರತಿನಿಧಿಗಳು, ನಿಶ್ಶಬ್ದ! ಸುಮಾರು ಒಂದೂವರೆ ಗಂಟೆಗಳ ಕಾಲ ಗೆಳೆಯ ಮೋಹಿತ್ ಸೇನ್‌ರವರ ನಿರರ್ಗಳ ಭಾಷಣ. ಎಲ್ಲರೂ ಬೆಚ್ಚಿ ಬೆರಗಾದರು. ಅಧಿವೇಶನದ ಸರಾಸರಿ ಗುಣಮಟ್ಟ ಹಾಗೂ ವರ್ಚಸ್ಸು ಬಹಳ ಎತ್ತರಕ್ಕೆ ಹೋಯಿತು. ನನಗಂತೂ ನಿಧಿ ಸಿಕ್ಕಷ್ಟು ಖುಷಿ. ನಿಜ, ಅವರು ಮಾಡಿದ ಬೋಧಪ್ರದವಾದ ಉಪನ್ಯಾಸ ನಿಧಿಗಿಂತಲೂ ಕಾಲು ವೀಸ ಹೆಚ್ಚೇ! ವಿರಾಮದ ವೇಳೆ ಒಂದೆರಡು ಮಾತುಗಳನ್ನು ನಾನೂ ಕಾಮ್ರೇಡ್ ಮೋಹಿತ್ ಸೇನ್‌ರವರೂ ಹಂಚಿಕೊಂಡೆವು. ಅದಾಗಲೇ ನಾನು ಭಾರತ ಕಮ್ಯುನಿಸ್ಟ್ ಪಕ್ಷವನ್ನು ಸೇರಿ ಹದಿನೈದು ವರ್ಷಗಳಾಗಿದ್ದವು. ಕಾರ್ಲ್ ಮಾರ್ಕ್ಸ್‌ರವರ ಕಮ್ಯುನಿಸ್ಟ್ ಮ್ಯಾನಿಫೆಸ್ಟೋ ಮತ್ತು ದೇವಿಪ್ರಸಾದ ಚಟ್ಟೋಪಾಧ್ಯಾಯರ ಲೋಕಾಯತವನ್ನು ಓದಿ ಗ್ರಹಿಸಿಕೊಳ್ಳಲು ಹಲವಾರು ಬಾರಿ ಪ್ರಯತ್ನಗಳನ್ನು ಮುಂದುವರಿಸಿದ್ದೆ. ಆದ್ದರಿಂದ ಮೋಹಿತ್ ಸೇನ್‌ರವರ ಭಾಷಣ ನನಗೆ ಅತ್ಯಂತ ಮಾರ್ಗದರ್ಶಕ ಹಾಗೂ ಪ್ರೇರಕವಾಯಿತು.

೧೯೮೬ರಲ್ಲಿ ಬೆಂಗಳೂರಿನಲ್ಲಿ ಆಲ್ ಇಂಡಿಯಾ ಎಲ್‌ಐಸಿ ಎಂಪ್ಲಾಯೀಸ್ ಫೆಡರೇಷನ್ ಪ್ರಸ್ತುತಪಡಿಸಿದ ಹಾಗೂ ಆಯೋಜಿಸಿದ್ದ ನಾಲ್ಕು ದಿನಗಳ ಅಖಿಲ ಭಾರತ ಮಟ್ಟದ ಯುವ ಜನೋತ್ಸವ ನಡೆಯಿತು. ಅದರ ಸಂಪೂರ್ಣ ಹೊಣೆ ನನ್ನದೇ ಆಗಿತ್ತು. ಇಡೀ ದೇಶದ ಟ್ರೇಡ್ ಯೂನಿಯನ್ ಚಳುವಳಿಯ ಚರಿತ್ರೆಯಲ್ಲಿ ಅಂತಹ ಒಂದು ಯಶಸ್ವಿ ಪ್ರಯತ್ನ ಇಲ್ಲಿಯವರೆವಿಗೆ ಯಾರೂ ಮಾಡಿಲ್ಲ. ಅಂತರ ಭಾರತಿ ಯುವ ಉತ್ಸವದಲ್ಲಿ, ರಕ್ತದಾನ ಶಿಬಿರ, ಕ್ರೀಡಾ ಸ್ಪರ್ಧೆ, ಸಾಂಸ್ಕೃತಿಕ ಸ್ಪರ್ಧೆಗಳು, ವಿಚಾರ ಗೋಷ್ಠಿಗಳು ಮೂರು ದಿನಗಳು ಏಕಕಾಲದಲ್ಲಿ ಒಟ್ಟೊಟ್ಟಿಗೆ ಬೆಂಗಳೂರಿನ ಪುಟ್ಟಣ್ಣಚೆಟ್ಟಿ ಟೌನ್‌ಹಾಲ್, ರವೀಂದ್ರ ಕಲಾಕ್ಷೇತ್ರ, ಕಬ್ಬನ್ ಪಾರ್ಕ್, ಎನ್‌ಜಿಓ ಹಾಲ್, ಕಂಠೀರವ ಸ್ಟೇಡಿಯಂ, ನೃಪತುಂಗ ರಸ್ತೆಯ ಯೂತ್ ಸೆಂಟರ್ ಮುಂತಾದ ಸ್ಥಳಗಳಲ್ಲಿ ನಡೆದವು. ಈ ಸಮಗ್ರ ಕಾರ್ಯಕ್ರಮಕ್ಕೆ ತಾತ್ವಿಕ ತಳಹದಿ ರಚಿಸಿದವರು ಗೆಳೆಯ ಮೋಹಿತ್ ಸೇನ್‌ರವರು. ಐದು ದಿನಗಳ ಕಾಲ ನಮ್ಮ ಜೊತೆಯೇ ಇದ್ದರು. ರಾತ್ರಿ ಹಗಲು ಬಿಡುವಿಲ್ಲದ ಪರಿಶ್ರಮ. ನಮಗೆ ಮಾರ್ಗದರ್ಶಕರಾಗಿದ್ದು ಸ್ಫೂರ್ತಿ ತುಂಬಿದವರು. ಯುವಜನೋತ್ಸವದಲ್ಲಿ ಸಕ್ರಿಯವಾಗಿ ಪಾಲ್ಗೊಂಡ ಇತರರು ಇಪ್ಟಾದ ಧುರೀಣರಾಗಿದ್ದ ಹೆಸರಾಂತ ಚಿತ್ರನಟ ಎ. ಕೆ. ಹಂಗಲ್, ಮರಾಠಿ ಚಿತ್ರನಟಿ ಆಶಾಲತಾ, ಕೇಂದ್ರ ಸಚಿವರಾಗಿದ್ದ ಶ್ರೀಮತಿ ಮಾರ್ಗರೆಟ್ ಆಳ್ವ, ಶ್ರೇಷ್ಠ ಓಟಗಾರ್ತಿ ಪಿ. ಟಿ. ಉಷಾ, ಮಾರ್ಕ್ಸ್‌ವಾದಿ ಚಿಂತಕ ಮತ್ತು ನಮ್ಮ ನೆಚ್ಚಿನ ಮೇಷ್ಟ್ರು ಡಾ॥ ಜಿ. ಆರ್., ರಾಷ್ಟ್ರ ಮಹಿಳಾ ನಾಯಕಿಯಾಗಿದ್ದ ಗೆಳತಿ ಅಮರ್‌ಜಿತ್ ಕೌರ್, ರಾಷ್ಟ್ರ ಅಂತರರಾಷ್ಟ್ರೀಯ ಖ್ಯಾತಿಯ ಅನೇಕ ಕ್ರೀಡಾಪಟುಗಳು ಹಾಗೂ ಕನ್ನಡ ಚಲನಚಿತ್ರ ರಂಗದ ಕಲಾವಿದರು ಇತ್ಯಾದಿ. ಮಹಿಳಾ ಚಳುವಳಿಯ ನಾಯಕಿಯಾದ ಅಮರ್‌ಜಿತ್ ಕೌರ್ ಆಗಲೇ ರಾಷ್ಟ್ರದ ಬಾನಿನಲ್ಲಿ ಪ್ರವರ್ಧಮಾನಕ್ಕೆ ಬಂದಿದ್ದರು. ಆಗ ಆಕೆಯ ವಯಸ್ಸು ೩೩. ನನಗಿಂತ ನಾಲ್ಕು ವರ್ಷ ಕಿರಿಯರು. ಮಿಕ್ಕೆಲ್ಲ ವಿಚಾರಗಳಲ್ಲಿ ನನಗಿಂತ ಅತಿ ದೊಡ್ಡವರು. ನನಗಂತೂ ನನ್ನ ಜೀವನದಲ್ಲೇ ಮಹತ್ವಪೂರ್ಣ ಹಾಗೂ ಜೀವಾವಧಿಯಲ್ಲಿ ಒಮ್ಮೆ ಮಾತ್ರ ಸಿಗಬಹುದಾದಂತಹ ಒಂದು ದೊಡ್ಡ ಅನುಭವ. ವರಿಷ್ಠ ಚಿಂತಕ ಗೆಳೆಯ ಮೋಹಿತ್ ಸೇನ್ ಮತ್ತು ಯುವ ಶಕ್ತಿಯ ಪ್ರತೀಕ ಕಾ॥ ಅಮರ್‌ಜಿತ್ ಕೌರ್ ಅವರ ಜೊತೆ ಒಟ್ಟಿಗೆ ಕೆಲಸ ಮಾಡುವ ಸದಾವಕಾಶ. ಈ ಸಂದರ್ಭ ನನ್ನ ಜೀವನದ ಮೈಲಿಗಲ್ಲು. ನಾನು ಕಲಿತದ್ದು ತುಂಬ. ಕಡೆಯ ದಿನದ ಮುಕ್ತಾಯ ಸಮಾರಂಭ ರವೀಂದ್ರ ಕಲಾಕ್ಷೇತ್ರದಲ್ಲಿ. ಮಧ್ಯಾಹ್ನ ನಾಲ್ಕು ಗಂಟೆಯಿಂದಲೇ ಕಾರ್ಯಕ್ರಮ. ಪ್ರಭಾತ್ ಕಲಾವಿದರಿಂದ 'ಸಿಂಡ್ರೆಲಾ' ನಾಟ್ಯ, ನಾಟಕ ಪ್ರದರ್ಶನ. ನಂತರ ಪರಿಸಮಾಪನ ಕಾರ್ಯಕ್ರಮ. ಗೆಳೆಯ ಮೋಹಿತ್ ಸೇನ್‌ರವರ ಅಮೋಘ ಭಾಷಣ. ಸಂಕ್ಷಿಪ್ತ ಆದರೂ ಚಿಂತನೆಗೆ ಯೋಗ್ಯವಾದ ವಿಚಾರಧಾರೆ. 'ಹಿಂದೂಸ್ಥಾನ್ ಹಮಾರ' ಎಂಬ ಪ್ರಕಟಣೆಯನ್ನು ಯುವ ಜನೋತ್ಸವ ಸ್ವೀಕರಿಸಿತು. ಅದರ ಹಿಂದಿದ್ದ ರೂವಾರಿ ಗೆಳೆಯ ಮೋಹಿತ್ ಸೇನ್.

೧೯೮೬ರ ನಂತರ ಮತ್ತೆ ನಾನು ಕಾಮ್ರೇಡ್ ಮೋಹಿತ್‌ರವರನ್ನು ಸಂದರ್ಶಿಸಿದ್ದು ೨೦೦೧ರಲ್ಲಿ, ಹೈದರಾಬಾದ್‌ನಲ್ಲಿ. ಆಲ್ ಇಂಡಿಯಾ ಎಲ್‌ಐಸಿ ಎಂಪ್ಲಾಯೀಸ್ ಫೆಡರೇಷನ್ನಿನ ೯ನೇ ಅಖಿಲ ಭಾರತ ಅಧಿವೇಶನ. ಮತ್ತೆ ಗೆಳೆಯ ಮೋಹಿತ್ ಸೇನ್‌ರವರ ಮತ್ತು ಗೆಳತಿ ಅಮರ್‌ಜಿತ್ ಕೌರ್ ಜೊತೆ ಕೆಲಸ ಮಾಡುವ ಸುಸಂದರ್ಭ. ಈಗ ಎಲ್‌ಐಸಿ ಕಾರ್ಮಿಕ ಚಳವಳಿಯ ಅಧ್ಯಕ್ಷರಾಗಿದ್ದವರು ಗೆಳೆಯ ಗುರುದಾಸ್ ದಾಸ್‌ಗುಪ್ತ. ಇನ್ನೊಬ್ಬ ಹೆಸರಾಂತ ದೊಡ್ಡ ವ್ಯಕ್ತಿ, ನನಗೆ ಪರಿಚಯವಾದವರು ಡಾಕ್ಟರ್ ಪುಷ್ಪ ಭಾರ್ಗವ, ಶ್ರೇಷ್ಠ ವಿಜ್ಞಾನಿ. ಈ ಮಧ್ಯೆ ರಾಜಕೀಯವಾಗಿ ಅನೇಕ ಅಹಿತಕರ ಬೆಳವಣಿಗೆಗಳು ನಡೆದುಹೋಗಿದ್ದವು. ನಾನಂತೂ ತುಂಬ ಮಾನಸಿಕ ಯಾತನೆಯನ್ನು ಅನುಭವಿಸಿದ್ದೆ. ಕಮ್ಯುನಿಸ್ಟ್ ಚಳವಳಿಯ ಭೀಷ್ಮ ಪಿತಾಮಹರಾದಂತಹ ಕಾಮ್ರೇಡ್ ಎಸ್. ಎ. ಡಾಂಗೆ ಹಾಗೂ ಗೆಳೆಯ ಮೋಹಿತ್ ಸೇನ್‌ರವರುಗಳು ಭಾರತ ಕಮ್ಯುನಿಸ್ಟ್ ಪಕ್ಷದಿಂದ ವಿಸರ್ಜಿಸಲ್ಪಟ್ಟಿದ್ದರು. ಆದ್ದರಿಂದ ಮೋಹಿತ್ ಸೇನ್‌ರವರನ್ನು ದೀರ್ಘಕಾಲ ನೋಡಲಾಗಿರಲಿಲ್ಲ. ಈ ಅವಧಿಯಲ್ಲಿ ನನ್ನ ಕೆಲ ಲೇಖನಗಳು ಡೆಕ್ಕನ್ ಹೆರಾಲ್ಡ್, ಮೈನ್‌ಸ್ಟ್ರೀಂ, ನ್ಯೂ ಏಜ್ ಮುಂತಾದ ಪತ್ರಿಕೆಗಳಲ್ಲಿ ಪ್ರಕಟಗೊಂಡಿದ್ದವು. ಅವುಗಳನ್ನು ಮೋಹಿತ್ ಸೇನ್‌ರವರು ಓದಿದ್ದರು. ತಮ್ಮ ಅಭಿಪ್ರಾಯಗಳನ್ನು ನೀಡಿ, ಲೇಖನಗಳನ್ನು ಪ್ರಶಂಸಿಸಿ ನನಗೆ ಉತ್ತೇಜನ ನೀಡುತ್ತಿದ್ದರು. ಬರೆಯುವ ಅಭ್ಯಾಸವನ್ನು ಮುಂದುವರಿಸಬೇಕೆಂದು ಆಗ್ರಹಿಸಿದ್ದರು. ಡಿಸೆಂಬರ್ ೨೦೦೧ರಲ್ಲಿ ಜರುಗಿದ ಹೈದರಾಬಾದ್ ಎಲ್‌ಐಸಿ ಫೆಡರೇಷನ್ನಿನ ಅಧಿವೇಶನದಲ್ಲಿ ಗೆಳೆಯ ಮೋಹಿತ್ ಸೇನ್, ಗೆಳೆಯ ಗುರುದಾಸ್ ದಾಸ್‌ಗುಪ್ತ ಹಾಗೂ ಗೆಳತಿ ಅಮರ್‌ಜಿತ್ ಕೌರ್ ಭಾಗವಹಿಸಿದ್ದರು. ಇನ್ನೊಂದು ವಿಶೇಷ ಆಕರ್ಷಣೆ ದಾದಾಸಾಹೇಬ್ ಫಾಲ್ಕೆ ಪ್ರಶಸ್ತಿ ವಿಜೇತ ಅಕ್ಕಿನೇನಿ ನಾಗೇಶ್ವರರಾವ್‌ರವರು ಅಧಿವೇಶನದಲ್ಲಿ




# ಗಜಲ್

ಬದುಕಿನಲಿ ಕಳೆದು ಹೋದ ದಿನಗಳಲಿ ನನ್ನ ನೋವಿನ
ನಿಟ್ಟುಸಿರು ಇದೆ ಸಖಾ
ಮತ್ತೊಮ್ಮೆ ತಿರುಗಿ ನಾ ಅಲ್ಲಿ ನೋಡಲಾರೆ ನನ್ನೆದೆಯ ಕಾವಿನ
ಸುಡು ಬೆಂಕಿ ಇದೆ ಸಖಾ

ಎಷ್ಟು ಸುಂದರವಾಗಿ ಬಿಡಿಸಿದ್ದೆ ಬದುಕಿನ ಚಿತ್ರ ಬಣ್ಣಗಳ ತುಂಬಿ
ಭೀಕರ ಬಿರುಗಾಳಿ ಹೊತ್ತೊಯ್ದ ಸಾವಿನ ಕರಿನೆರಳು ಇದೆ ಸಖಾ

ಕಣ್ಣಲ್ಲಿ ಕಣ್ಣಿಟ್ಟು ಬೆಳಸಿದ ಬಗೀಚಿನ ಚೆಂದದ ಬಳ್ಳಿಯಲಿ
ಪಕಳೆ ಕಳೆದುಕೊಂಡ ಹೂವಿನ ದರ್ದ್ ಇದೆ ಸಖಾ

ಪ್ರೀತಿ ತುಂಬಿದ ಹೃದಯ ತುಳುಕಾಡುತ್ತಿತ್ತು ನಿನಗಾಗಿ
ಖದೀಮರು ಸವಿದೆಸೆದ ಜೇನಿನ ಮುರಿದ ಗೂಡು ಇದೆ ಸಖಾ

ನಾ ಬಿಕ್ಕಿ ಬಿಕ್ಕಿ ಅತ್ತ ಕಣ್ಣೀರ ಕೋಡಿ ಹರಿದಿದೆ ಅಲ್ಲಿ ಅರುಣಾ
ಒಡೆದು ಛಿದ್ರವಾದ ಹೃದಯದ ನೆತ್ತರಿನ ಹೋಳು ಇದೆ ಸಖಾ

**ಅರುಣಾ ನರೇಂದ್ರ**
ನಂದೀಶ್ವರ ಸ್ಕೂಲ್ ಹತ್ತಿರ, ನಂದಿನಗರ, ಕೊಪ್ಪಳ



ಭಾಗವಹಿಸಿದ್ದು. ಈ ಅನುಭವಗಳು ನಾನು ಎಂದೂ ಮರೆಯುವಂಥವಲ್ಲ.

ಭಾರತ ಕಮ್ಯುನಿಸ್ಟ್ ಪಕ್ಷದಿಂದ ೧೯೮೯ನೇ ಇಸವಿಯಲ್ಲಿ ಹೊರಬಿದ್ದ ಗೆಳೆಯ ಮೋಹಿತ್ ಸೇನ್‌ರವರು ತಮ್ಮದೇ ಆದ ಹೊಸ ಪಕ್ಷ ಯುನೈಟೆಡ್ ಇಂಡಿಯನ್ ಕಮ್ಯುನಿಸ್ಟ್ ಪಕ್ಷವನ್ನು (UICP) ಸ್ಥಾಪಿಸಿದರು. ಅದರ ಮುಖವಾಣಿಯಾಗಿದ್ದ 'ನ್ಯೂ ಥಿಂಕಿಂಗ್ ಕಮ್ಯುನಿಸ್ಟ್' ಪತ್ರಿಕೆಯ ಸಂಪಾದಕರೂ ಆಗಿದ್ದರು. ಆಗ ಅವರ ನಿವಾಸ ಹೈದರಾಬಾದ್. "ನ್ಯೂ ಥಿಂಕಿಂಗ್ ಕಮ್ಯುನಿಸ್ಟ್" ಚೆನ್ನೈನಿಂದ ಪ್ರಕಟವಾಗುತ್ತಿತ್ತು. ಮೇ ಒಂದನೇ ತಾರೀಖು, ೧೯೯೯ರ ಮೇನ್‌ಸ್ಟ್ರೀಂ ಪತ್ರಿಕೆಯಲ್ಲಿ ನನ್ನ ಲೇಖನ "ಟ್ರೇಡ್ ಯೂನಿಯನ್ ಮೂವ್‌ಮೆಂಟ್ – ದೆನ್ ಅಂಡ್ ನೌ" ಎಂಬ ಶೀರ್ಷಿಕೆಯಲ್ಲಿ ಮೇ ದಿನದ ವಿಶೇಷ ಲೇಖನವಾಗಿ ಪ್ರಕಟವಾಯಿತು. ಅದನ್ನು ಗೆಳೆಯ ಮೋಹಿತ್ ಸೇನ್ ತಮ್ಮ 'ನ್ಯೂ ಥಿಂಕಿಂಗ್ ಕಮ್ಯುನಿಸ್ಟ್' ಪತ್ರಿಕೆಯ ೧ನೇ ಜೂನ್ ೧೯೯೯ರ ಸಂಚಿಕೆಯಲ್ಲಿ ಪುನರ್ಮುದ್ರಣ ಮಾಡಿದರು. ನನಗೆ ಒಂದು ಪ್ರತಿಯನ್ನು ಗೌರವಾರ್ಥವಾಗಿ (ಕಾಂಪ್ಲಿಮೆಂಟರಿಯಾಗಿ) ಕಳುಹಿಸಿಕೊಟ್ಟರು. ಅದರ ಜೊತೆ ಅವರ ಕೈ ಬರಹದಲ್ಲಿ ಒಂದು ಪತ್ರ. ನನ್ನನ್ನು ಶ್ಲಾಘಿಸಿ ನನ್ನ ಲೇಖನವನ್ನು ಮೆಚ್ಚಿ ಬರೆದ ಪತ್ರ. ನನಗೆ ದೊರೆತ ವಿಶೇಷ ಗೌರವವಾಗಿ ಈ ಘಟನೆಯನ್ನು ನೆನಪಿಸಿಕೊಳ್ಳುತ್ತೇನೆ.

ತಮ್ಮ ಇಳಿ ವಯಸ್ಸಿನಲ್ಲಿ ಗೆಳೆಯ ಮೋಹಿತ್ ಸೇನ್‌ರವರು ಡಾಕ್ಟರ್ ವನಜ ಅಯ್ಯಂಗಾರ್‌ರವರನ್ನು ವಿವಾಹವಾದರು. ಇಲ್ಲಿ ಡಾ॥ ವನಜ ಅಯ್ಯಂಗಾರ್‌ರವರ ಬಗ್ಗೆ ಒಂದೆರಡು ಮಾತು. ವನಜರವರು ಕೇಂಬ್ರಿಜ್ ಯೂನಿವರ್ಸಿಟಿಯಲ್ಲಿ ಗಣಿತಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದವರು. ಮೋಹಿತ್ ಸೇನ್‌ರವರೂ ಸಹ ಅದೇ ಕೇಂಬ್ರಿಜ್ ಯೂನಿವರ್ಸಿಟಿಯಲ್ಲಿ ವ್ಯಾಸಂಗ ಮಾಡಿದವರು. ಅಲ್ಲಿಯೇ ಅವರಿಬ್ಬರ ಪರಿಚಯವಾಗಿತ್ತು. ನಂತರ ಸ್ವದೇಶಕ್ಕೆ ಮರಳಿ ಬಂದ ವನಜರವರು ಗಣಿತಶಾಸ್ತ್ರದ ಪ್ರಾಧ್ಯಾಪಕಿಯಾಗಿ, ಪಿಹೆಚ್‌ಡಿ ಡಿಗ್ರಿಯನ್ನೂ ಪಡೆದರು. ಭಾರತದ ಹೆಸರಾಂತ ಗಣಿತ ಶಾಸ್ತ್ರಜ್ಞೆಯಾದರು. ತಿರುಪತಿಯ ಶ್ರೀ ಪದ್ಮಾವತಿ ಮಹಿಳಾ ವಿಶ್ವವಿದ್ಯಾಲಯಂನ ಸ್ಥಾಪಕಿಯಾದ ಡಾಕ್ಟರ್ ವನಜ ಅಯ್ಯಂಗಾರ್ ಅದರ ಉಪಕುಲಪತಿಗಳೂ ಆಗಿದ್ದರು. ನಂತರದ ದಿನಗಳಲ್ಲಿ ಅವರಿಗೆ ಕೇಂದ್ರ ಸರ್ಕಾರ ಪದ್ಮಶ್ರೀ ಪ್ರಶಸ್ತಿಯನ್ನು ನೀಡಿ ಗೌರವಿಸಿತು. ಅನೇಕಾನೇಕ ಮಹಿಳಾ ಚಳುವಳಿಗಳಲ್ಲಿ ಮುಂದಾಳತ್ವ ವಹಿಸಿದವರು ಹಾಗೂ ಸಮಾಜ ಚಿಂತಕರು. ಮೋಹಿತ್ ಸೇನ್ – ವನಜ ಅಯ್ಯಂಗಾರ್ ಅಪರೂಪ ಅನುರೂಪ ಜೋಡಿ. ೨೦೦೧ರಲ್ಲಿ ವನಜ ಅಯ್ಯಂಗಾರ್‌ರವರು ಇನ್ನಿಲ್ಲವಾದರು. ಇದು ಮೋಹಿತ್ ಸೇನ್‌ರವರಿಗೆ ಬಹುದೊಡ್ಡ ಆಘಾತವಾಗಿ ಪರಿಣಮಿಸಿತು. ಮನೆಯಲ್ಲಿ ಈಗ ಮೋಹಿತ್ ಸೇನ್ ಒಬ್ಬರೇ. ಜೀವನದಲ್ಲಿ ವಿರಕ್ತಿ. ಬದುಕಿನಲ್ಲಿ ಆಸಕ್ತಿ ಕಡಿಮೆಯಾಯಿತು. ಹೈದರಾಬಾದ್‌ಗೆ ಹೋಗಿದ್ದಾಗ ಅವರ ಮನೆಗೆ ಹೋಗಿದ್ದೆ. ಸ್ವಲ್ಪ ಸಮಯ ಅವರೊಂದಿಗೆ ಇದ್ದೆ. ಕೃಶರಾಗಿದ್ದರು. ಮನೆಯಲ್ಲಿ, ಮನಸ್ಸಿನಲ್ಲಿ ಕತ್ತಲು, ಜಿಗುಪ್ಸೆ ಆವರಿಸಿತ್ತು. ಮಾನಸಿಕ ಯಾತನೆಯಲ್ಲಿದ್ದರು. "ನೀನು ನನ್ನ ಮನೆಗೆ ಬಂದಿದ್ದೀಯಾ. ನಿನಗೆ ಚಹಾ ಮಾಡಲೂ ಸಹ ಇಲ್ಲಿ ಯಾರು ಇಲ್ಲ. ನನಗೆ ಹೆಚ್ಚು ದಿನ ಬದುಕಲು ಆಸಕ್ತಿಯಿಲ್ಲ" ಎಂದರು. ತಾನು ಒಂದು ಪುಸ್ತಕ ಬರೆಯುತ್ತಿರುವುದಾಗಿಯೂ, ಇನ್ನೆರಡು ಅಧ್ಯಾಯಗಳು ಮಾತ್ರ ಉಳಿದಿದೆ, ಅವುಗಳನ್ನು ಪೂರೈಸಲು ಸಾಧ್ಯವಿದೆಯೋ ಇಲ್ಲವೋ, ತಾನು ಬದುಕಿರುತ್ತೀನೋ ಇಲ್ಲವೋ, ಎಂದು ಸಂಶಯಗಳನ್ನು ವ್ಯಕ್ತಪಡಿಸಿದರು. ನನ್ನ ಕಣ್ಣಿನಲ್ಲಿ ನೀರು ತುಂಬಿಕೊಂಡಿತು. ಹೃದಯ ಭಾರವಾಯಿತು. ಏನೂ ಮಾತು ಹೊರಬರಲಿಲ್ಲ. ಸ್ವಲ್ಪ ಸಮಯದ ನಂತರ ನಿಧಾನಗತಿಯಲ್ಲಿ ಅವರ ಮನೆಯಿಂದ ಹೊರಬಂದೆ. ಈ ಸನ್ನಿವೇಶದ ಗುಂಗಿನಿಂದ ಹೊರಬರಲು ಪ್ರಯಾಸಪಡಬೇಕಾಯಿತು. ನಂತರದ ಸುದ್ದಿ, ಗೆಳೆಯ ಮೋಹಿತ್ ಸೇನ್‌ರವರು ತಮ್ಮ ಪುಸ್ತಕವನ್ನು ಪೂರೈಸಿದರು. ಮೋಹಿತ್ ಸೇನ್‌ರವರು ಬರೆದ ಕಡೆಯ ಪುಸ್ತಕದ ಹೆಸರು "ಎ ಟ್ರಾವೆಲರ್ ಅಂಡ್ ದಿ ರೋಡ್." ಅದರ ಪ್ರಕಟಣೆಯೂ ಆಯ್ತು. ಅದಾದ ಕೆಲವೇ ಸಮಯದಲ್ಲಿ ಗೆಳೆಯ ಮೋಹಿತ್ ಸೇನ್ ೩ನೇ ಮೇ, ೨೦೦೩ರಂದು ನಮ್ಮೆಲ್ಲರನ್ನೂ ಅಗಲಿದರು. ಮರಣದ ಸಮಯ ಅವರ ವಯಸ್ಸು ೭೪. ಒಂದು ಮಹಾನ್ ಕಮ್ಯುನಿಸ್ಟ್ ಚೇತನ ಮತ್ತು ಮಾರ್ಕ್ಸ್‌ವಾದಿ ಚಿಂತಕ ನಮ್ಮನ್ನು ಅಗಲಿದರು. ಬದುಕಿನುದ್ದಕ್ಕೂ ಜನಗಳ ಮಧ್ಯೆಯೇ ಸಕ್ರಿಯವಾಗಿದ್ದ ಕಾಮ್ರೇಡ್ ಮೋಹಿತ್ ಸೇನ್ ತಮ್ಮ ಕಡೆಯ ಎರಡು ಮೂರು ವರ್ಷಗಳನ್ನು ಜನರಿಂದ, ಸಮಾಜದಿಂದ ದೂರವಿದ್ದು, ಏಕಾಂತವಾಗಿ ಅಥವಾ ವಿರಕ್ತರಾಗಿ ಕಳೆದರು. ನಿದ್ದೆಯಲ್ಲಿಯೇ ಸಾವನ್ನಪ್ಪಿದರು. ಎಂತಹ ದಾರುಣ ಹಾಗೂ ಕಠೋರ ವಿಪರ್ಯಾಸ! ಮೋಹಿತ್ ಸೇನ್‌ರವರ ಬಗ್ಗೆ ಪಂಡಿತ್ ಜವಹರಲಾಲ್ ನೆಹರೂರವರಿಗೆ ವಿಶೇಷವಾದ ಗೌರವವಿತ್ತು.




ಗೆಳೆಯ ಮೋಹಿತ್ ಸೇನ್‌ರವರ ನೆನಪುಗಳು ನನ್ನಲ್ಲಿ ಸದಾ ಉಳಿಯುವಂಥದ್ದು. ಅವುಗಳು ಮಾಸಲು ಸಾಧ್ಯವೇ ಇಲ್ಲ. ಅವರು ಎಂದಿಗೂ ನಮ್ಮೆಲ್ಲರ ಮೇಷ್ಟ್ರು. ಈ ಅನುಭವ ನಿರಂತರ.

ಈಗ ಕೆಲದಿನಗಳ ಹಿಂದೆ ಒಂದು ಚರ್ಚೆಯ ಸಂದರ್ಭದಲ್ಲಿ ಡಾ॥ ಜಿ. ಆರ್.ರವರು ತಮ್ಮನ್ನು "ನಿವೃತ್ತ ಮೇಷ್ಟ್ರು" ಎಂದು ಬಣ್ಣಿಸಿಕೊಂಡರು. ಮೇಷ್ಟ್ರು ಎಂದಿಗೂ ಮೇಷ್ಟ್ರೇ. ಅವರಿಗೆ ನಿವೃತ್ತಿ ಎಂಬುದು ಇಲ್ಲವೇ ಇಲ್ಲ. ನಾನು ಎಂದಿಗೂ ವಿದ್ಯಾರ್ಥಿಯಾಗಿರುವುದನ್ನೇ ಬಯಸುತ್ತೇನೆ. ಸೆಪ್ಟೆಂಬರ್ ೫ನೇ ತಾರೀಖು ಮಾತ್ರ "ಟೀಚರ್ಸ್ ಡೇ" ಅಲ್ಲ. ಬದುಕಿನ ಎಲ್ಲ ದಿನವೂ "ಟೀಚರ್ಸ್ ಡೇ"ನೇ.

**ನ. ಸುಂದರಮೂರ್ತಿ**
ಸಂಖ್ಯೆ ೧೪, ೬ನೇ ಅಡ್ಡರಸ್ತೆ, ಶ್ರೀರಾಂಪುರ
ಬೆಂಗಳೂರು – ೫೬೦ ೦೨೧




# ಭೀಕರ ಸತ್ಯಗಳನ್ನು ಬಿಚ್ಚಿಡುವ 'ಜೊಲಾಂಟಾ'




*ಲೇಖಕಿ* : **ಪಲ್ಲವಿ ಇಡೂರು**

*ಪುಟಗಳು* : ೧೭೬+೮ *ಬೆಲೆ* : **ರೂ. ೧೮೦/-**

*ಪ್ರಕಾಶಕರು* : **ಸಂಕಥನ**, ಉದಯಗಿರಿ, ಮಂಡ್ಯ - ೫೭೧ ೪೦೧

ಮನುಷ್ಯನೊಳಗಿನ ಪೈಶಾಚಿಕತನವನ್ನು ಮಾನವ ಕುಲವೇ ಬೆಚ್ಚಿಬೀಳುವಂತೆ ಪ್ರದರ್ಶನ ಮಾಡಿದ್ದು ಎರಡನೇ ಜಾಗತಿಕ ಮಹಾಯುದ್ಧ. ಮನುಷ್ಯನನ್ನು ಮನುಷ್ಯನೇ ದ್ವೇಷಿಸುವಂತೆ ಮಾಡಿ, ಕೇವಲ ಒಂದು ದೇಶದ ನಾಗರಿಕನಾಗಿದ್ದಕ್ಕಾಗಿ, ಒಂದು ಧರ್ಮದಲ್ಲಿ ಹುಟ್ಟಿದ್ದಕ್ಕಾಗಿ ಯಾರೂ ಕಲ್ಪಿಸಲಾಗದಂಥ ನೋವನ್ನು, ಚಿತ್ರಹಿಂಸೆಯನ್ನು ಅನುಭವಿಸುವಂತೆ ಮಾಡಿದ್ದು ನಾಝಿ ಮತ್ತು ಫ್ಯಾಸಿಸ್ಟ್ ಶಕ್ತಿಗಳು ಆರಂಭಿಸಿದ ಎರಡನೇ ವಿಶ್ವ ಮಹಾಯುದ್ಧ. ಅದರಲ್ಲೂ ಜರ್ಮನಿಯ ಹಿಟ್ಲರ್‌ನ ನಾಝಿ ಪಡೆಗಳು, ಪ್ರಭುತ್ವದ ಮಾರ್ಗ ದರ್ಶನದಲ್ಲಿಯೇ ನಡೆಸಿದ ಕ್ರೂರಹತ್ಯೆಗಳು, ಜನಾಂಗೀಯ ದಮನ ಕೃತ್ಯಗಳು ಇಂದಿಗೂ ಮೈ ನಡುಕ ತರುತ್ತವೆ. ಇದೆಲ್ಲ ನಿಜವಾ? ಹೀಗಾಗಿರಲು ಸಾಧ್ಯವಾ?- ಎಂಬ ಅನುಮಾನ ಮೂಡುವಷ್ಟು ಭೀಕರವಾಗಿವೆ. ಒಬ್ಬ ಮನುಷ್ಯನೊಳಗೆ ಇರುವ ಭಯಂಕರವಾದ ರಕ್ತ ಪಿಪಾಸುತನವನ್ನು ದಾಖಲೆಗಳ ಸಮೇತ ವಿಶ್ವದ ಮುಂದೆ ಸಾಬೀತುಪಡಿಸಿದ್ದು ಈ ಯುದ್ಧ. ಅಂಥ ಸಾವಿರಾರು ದಾಖಲೆಗಳನ್ನು ನೋಡಿ ವಿಶ್ವ ಬೆಚ್ಚಿ ಬಿದ್ದಿದೆ. ಆ ದಾಖಲೆಗಳಲ್ಲಿ ಪೋಲೆಂಡ್ ದೇಶದ ಆರೋಗ್ಯ ಕ್ಷೇತ್ರದ ಸಾಮಾಜಿಕ ಕಾರ್ಯಕರ್ತೆ ಇರೇನಾ ಸೆಂಡ್ಲರ್ ಎಂಬ ಮಹಾಮಾತೆಯ ಜೀವನ, ಹೋರಾಟದ ಚಿತ್ರಣ 'ಜೊಲಾಂಟಾ' ಕೃತಿಯೂ ಒಂದು.

೧೯೩೩ ಜನವರಿ ೨೦ಕ್ಕೆ ಜರ್ಮನಿಯಲ್ಲಿ ಅಲ್ಪಮತದಿಂದ ಅಧಿಕಾರಕ್ಕೆ ಬಂದ ಹಿಟ್ಲರ್ ಮೊದಲು ಕಮ್ಯುನಿಸ್ಟ್ ಸಂಸತ್ ಸದಸ್ಯರನ್ನು ಬಂಧಿಸಿ, ಕಮ್ಯುನಿಸ್ಟ್ ಪಕ್ಷದ ಮೇಲೆ ನಿಷೇಧ ಹೇರಿ ಸಂಸತ್‌ನಲ್ಲಿ ಬಹುಮತ ಸಾಧಿಸಿದ. ನಂತರ ಯಹೂದಿಗಳ ಮೇಲೆ ದಾಳಿ ಆರಂಭಿಸಿದ. ಜರ್ಮನಿಯಲ್ಲಿ ಕೂಡುದೊಡ್ಡಿ (ಕಾನ್ಸಂಟ್ರೇಶನ್ ಕ್ಯಾಂಪ್)ಗಳನ್ನು ಸೃಷ್ಟಿಸಿ ಅಲ್ಲಿ ಯಹೂದಿಗಳನ್ನೂ, ಕಮ್ಯುನಿಸ್ಟರನ್ನೂ, ತನ್ನ ವಿರೋಧಿಗಳನ್ನೂ ಕೂಡಿಹಾಕಿದ. ಅಲ್ಲಿ ನಡೆದ ಅಮಾನುಷ ಕೃತ್ಯಗಳು ಯುದ್ಧಾನಂತರ ಬೆಳಕಿಗೆ ಬಂದವು. ಹಸಿವಿನಿಂದ, ಶೀತದಿಂದ, ನಾಝಿ ವೈದ್ಯರು ಜೀವಂತ ವ್ಯಕ್ತಿಗಳ ಮೇಲೆ ನಡೆಸಿದ ಅಮಾನುಷ ಪ್ರಯೋಗಗಳಿಂದ ಲಕ್ಷಾಂತರ ಜನ ಜೀವ ಕಳೆದುಕೊಂಡರು. ಅಲ್ಲಿ ನಡೆದ ಘಟನೆಗಳು ವರದಿ, ಇತಿಹಾಸ, ಕಥೆ, ಕಾದಂಬರಿ, ಡಾಕ್ಯುಮೆಂಟರಿ, ಸಿನಿಮಾಗಳ ಮೂಲಕ ವಿಶ್ವದ ಮುಂದೆ ಬಿತ್ತರಗೊಂಡವು. ಜರ್ಮನಿಯಲ್ಲಿ ತನ್ನ ಪ್ರಾಬಲ್ಯ ಸ್ಥಾಪಿಸಿದ ಹಿಟ್ಲರ್ ೧೯೩೭ರ ನಂತರ ನೆರೆದೇಶಗಳ ಮೇಲೆ ಯುದ್ಧ ಸಾರಿದ. ಆಸ್ಟ್ರಿಯಾ, ಚೆಕೊಸ್ಲೊವಾಕಿಯಾ, ಪೋಲೆಂಡ್, ಸೋವಿಯತ್ ಯೂನಿಯನ್ ಹೀಗೆ ಯುರೋಪಿನ ತನ್ನ ವೈರಿ ರಾಷ್ಟ್ರಗಳ ಮೇಲೆ ಯುದ್ಧವನ್ನು ಮುಂದುವರೆಸಿದ. ಈ ಎಲ್ಲ ದೇಶಗಳಲ್ಲಿ ಜರ್ಮನಿಯಲ್ಲಿ ಅನುಸರಿಸಿದ ಜನಾಂಗೀಯ ದಮನದ ಕ್ರೂರ ನೀತಿಗಳನ್ನು ಜಾರಿಗೆ ತಂದ. ೧೯೩೯ರ ಆರಂಭಕ್ಕೆ ಪೋಲೆಂಡ್ ದೇಶವನ್ನು ಸೋಲಿಸಿ ಅಲ್ಲಿ ತನ್ನ ಅಧಿಕಾರ ಸ್ಥಾಪಿಸಿದ ಸಂದರ್ಭದಲ್ಲಿ ಅಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ನೆಲೆಸಿದ್ದ ಯಹೂದಿಗಳನ್ನು ಬಂಧಿಸಿ ಕೂಡುದೊಡ್ಡಿಗಳಲ್ಲಿ ಹಾಕಿ ಚಿತ್ರ ಹಿಂಸೆ ಕೊಟ್ಟು ಮರಣದಂಡನೆ ವಿಧಿಸಿದ. ಜರ್ಮನಿ, ಸೋವಿಯತ್ ಯೂನಿಯನ್‌ಗಳಲ್ಲಿ ನಡೆದ ಇಂಥ ಅಮಾನುಷ ಕೃತ್ಯಗಳು ವಿಶ್ವಕ್ಕೆ ಗೋಚರವಾಗಿವೆ. ಆದರೆ ಪೋಲೆಂಡ್‌ನಂಥ ಸಣ್ಣಪುಟ್ಟ ದೇಶಗಳಲ್ಲಿ ಹಿಟ್ಲರ್‌ನ ನಾಝಿಪಡೆಗಳು ನಡೆಸಿದ ಮಾರಣ ಹೋಮಗಳು ಅಷ್ಟಾಗಿ ಬೆಳಕು ಕಂಡಿಲ್ಲ. ಪಲ್ಲವಿ ಇಡೂರು ಅವರು ಇತ್ತೀಚೆಗೆ ಪ್ರಕಟಿಸಿದ 'ಜೊಲಾಂಟಾ' ಎಂಬ ಕೃತಿ ಪೋಲೆಂಡ್ ದೇಶ ಕಂಡ ನಾಝಿಗಳ ಅಮಾನುಷ ಆಡಳಿತದ ವಿವರಗಳನ್ನೂ ಮತ್ತು ಜನಾಂಗೀಯ ದಮನ ನೀತಿಗೆದುರಾಗಿ ನಡೆದ ಇರೇನಾ ಸೆಂಡ್ಲರ್ ಮುಂತಾದವರ ಹೋರಾಟವನ್ನೂ ಕಥಾರೂಪ ಇತಿಹಾಸದಂತೆ ದಾಖಲಿಸುತ್ತದೆ.

ಜರ್ಮನಿಯಲ್ಲಿ ಹಿಟ್ಲರ್ ಯಹೂದಿಗಳ ಮೇಲೆ ದಾಳಿ ಆರಂಭಿಸಿದ ಮೇಲೆ ಅಲ್ಲಿಂದ ತಪ್ಪಿಸಿಕೊಂಡು ಭಾರತಕ್ಕೆ, ಬೆಂಗಳೂರಿಗೆ ಬಂದ ಯಹೂದಿ ಜನಾಂಗದ ವಿಜ್ಞಾನಿ, ಅವನ ಮಗಳ ಕುರಿತು ಕನ್ನಡದ ಲೇಖಕಿ ನೇಮಿಚಂದ್ರ ಬರೆದ 'ಯಾದ್ ವಶೇಮ್' ಕಾದಂಬರಿ ಜರ್ಮನಿಯಲ್ಲಿನ ನಾಝಿ ಕ್ರೌರ್ಯವನ್ನು ಕನ್ನಡದ ಸಾಹಿತ್ಯಲೋಕಕ್ಕೆ ಪರಿಚಯಿಸಿತು. ಈಗ ಪಲ್ಲವಿ ಇಡೂರು, ಪೋಲೆಂಡ್ ದೇಶದಲ್ಲಿ ಮೃತ್ಯುಕೂಪದ ಮಧ್ಯೆಯೇ ಇದ್ದು ಇರೇನಾ ಸೆಂಡ್ಲರ್ ಎಂಬ ಆರೋಗ್ಯಕ್ಷೇತ್ರದ ಸಾಮಾಜಿಕ ಕಾರ್ಯಕರ್ತೆ, 'ಜೊಲಾಂಟಾ' ಎಂಬ ಹೆಸರಿಟ್ಟುಕೊಂಡು ಮಾನವತೆಗಾಗಿ, ಮಕ್ಕಳ ರಕ್ಷಣೆಗಾಗಿ ಜೀವದ ಹಂಗು ತೊರೆದು ಹೋರಾಡಿದ ಮಹಾಮಾತೆಯ ಜೀವನ ಕಥನವನ್ನು ಕನ್ನಡಕ್ಕೆ ತಂದಿದ್ದಾರೆ.

೧೫-೦೨-೧೯೧೦ರಲ್ಲಿ ಪೋಲೆಂಡಿನ ವಾರ್ಸಾ ನಗರದಲ್ಲಿ ಕ್ರಿಶ್ಚಿಯನ್ ಕುಟುಂಬಕ್ಕೆ ಸೇರಿದ ವೈದ್ಯನ ಮಗಳಾಗಿ ಜನಿಸಿದ 'ಇರೇನಾ' ಮುಂದೆ ಸಮಾಜ ಸೇವಕಿಯಾಗಿ ಬೆಳೆದು ವಿಶ್ವವೇ ಬೆರಗಾಗುವಂಥ ಸಾಧನೆ ಮಾಡಿದವಳು. ೧೯೩೯ರ ಸೆಪ್ಟೆಂಬರ್‌ನಲ್ಲಿ ಹಿಟ್ಲರ್‌ನ ದಾಳಿಗೆ ಬಲಿಯಾದ ಪೋಲೆಂಡ್ ದೇಶ ನಾಝಿ ಪಡೆಗಳ ವಶವಾಯಿತು. ನಂತರ ನಡೆದ ಯಹೂದಿ ಜನಾಂಗದ ಮೇಲಿನ ದಾಳಿ ಮಾನವಕುಲ ನಾಚಿಕೆಪಡುವಂಥದ್ದು. ನಿನ್ನೆ ಮೊನ್ನೆಯವರೆಗೆ ವ್ಯಾಪಾರಿಯಾಗಿ, ಭೂಮಾಲಿಕರಾಗಿ, ಕಾರ್ಮಿಕರಾಗಿ, ಶಿಕ್ಷಕರಾಗಿ ರಾಜಕಾರಣಿಗಳಾಗಿ ವಿವಿಧ ಕ್ಷೇತ್ರಗಳಲ್ಲಿ ವ್ಯವಸ್ಥಿತ ಜೀವನ ನಡೆಸುತ್ತಿದ್ದ ಯಹೂದಿ ಜನಾಂಗದ ಪ್ರಜೆಗಳು ಪೋಲೆಂಡಿನ ಪರಾಭವದೊಂದಿಗೆ ಕೈದಿಗಳಾಗಿ ಪರಿವರ್ತನೆಯಾಗಿದ್ದರು. ದೇಶದಾದ್ಯಂತ ಯಹೂದಿಗಳಿಗಾಗಿಯೇ ಕೂಡುದೊಡ್ಡಿಗಳನ್ನು ನಿರ್ಮಿಸಲಾಯಿತು. ಇತರೆ ಜನರಿಂದ ಅವರನ್ನು ಪ್ರತ್ಯೇಕಿಸಿ, ಬಂಧಿಸಿ ನಿರ್ಬಂಧಿತ ಪ್ರದೇಶದಲ್ಲಿ ಕೂಡಿಹಾಕಲಾಯಿತು.

ಯಹೂದಿ ಜನರನ್ನು ರೈಲುಗಳಲ್ಲಿ, ಲಾರಿಗಳಲ್ಲಿ ಕುರಿಗಳಂತೆ ತುಂಬಿ 'ಘೆಟ್ಟೋ' (ಕೂಡುದೊಡ್ಡಿ)ಗಳಿಗೆ ಸಾಗಿಸಲಾಯಿತು. ಪ್ರತಿಭಟಿಸಿದವರನ್ನು ಸಾರ್ವಜನಿಕವಾಗಿ ಗುಂಡಿಟ್ಟು ಕೊಲ್ಲಲಾಯಿತು, ವಸ್ತುಗಳಂತೆ ಸಾಗಿಸಲಾಯಿತು, ಪ್ರಯಾಣದಲ್ಲಿಯೇ ಹಲವಾರು ಜನ ಪ್ರಾಣ ಬಿಟ್ಟರು. ಸುತ್ತಲೂ ಗೋಡೆಕಟ್ಟಿ ಯಹೂದಿಗಳನ್ನು ಬಂಧಿಗಳನ್ನಾಗಿ ಮಾಡಲಾಯಿತು. ಆ ಪ್ರದೇಶಕ್ಕೆ ಬೇರೆಯವರು

**ಶ್ರೀಸುಮಿತ್ರಾಸುತ ಅಗಸಬಾಳ**

ಪ್ರವೇಶಿಸದಂತೆ ಸೇನೆಯ ಪಹರೆ ಇಡಲಾಯಿತು. ಘೆಟ್ಟೋ ಒಳಗೆ ಇರುವ ಲಕ್ಷಾಂತರ ಯಹೂದಿ ಪ್ರಜೆಗಳಿಗೆ ಯಾವ ಸೌಲಭ್ಯವನ್ನೂ ಒದಗಿಸದೆ ಕೊಳೆ ಹಾಕಲಾಯಿತು. ಹಸಿವು, ಸಾಂಕ್ರಾಮಿಕ ರೋಗ, ವಸತಿಹೀನತೆಯಿಂದ ಪ್ರತಿದಿನ ಸಾವಿರಾರು ಜನ ಸಾಯುತ್ತಿದ್ದರು. ಮಕ್ಕಳು, ಮುದುಕರು, ಗರ್ಭಿಣಿಯರು ತಾವು ಸಾಯುವ ಕ್ಷಣಕ್ಕಾಗಿ ಎದುರು ನೋಡುತ್ತಿದ್ದರು. ಅಂಥ ಸಂದರ್ಭದಲ್ಲಿ ಇರೇನಾ ಸೆಂಡ್ಲರ್ ಸಾಮಾಜಿಕ ಕಾರ್ಯಕರ್ತೆಯಾಗಿ ನರ್ಸ್ ವೇಷದಲ್ಲಿ 'ಜೊಲಾಂಟಾ' ಹೆಸರಿನಿಂದ ಮೃತ್ಯುಕೂಪದ ಒಳಹೋಗುತ್ತಾಳೆ. ತನ್ನ ಜೀವದ ಹಂಗು ತೊರೆದು ಒಳಗಿರುವ ಪುಟ್ಟ ಪುಟ್ಟ ಮಕ್ಕಳನ್ನು ಪಹರೆ ಸೈನಿಕರ ಕಣ್ಣು ತಪ್ಪಿಸಿ ಹೊರತರುತ್ತಾಳೆ. ಇಡೀ ಅವಳ ತಂಡ ಸಾವಿನ ಅಂಚಿನಲ್ಲಿಯೇ ಕೆಲಸ ಮಾಡುತ್ತದೆ. ಹೊರತಂದ ಮಕ್ಕಳ ಹೆಸರು ಬದಲಿಸಿ ದತ್ತು ಸ್ವೀಕರಿಸುವವರನ್ನು ಹುಡುಕಿಕೊಟ್ಟು ಮಕ್ಕಳ ಜೀವ ಉಳಿಸುತ್ತಾಳೆ. ಮಕ್ಕಳ ಮೂಲ ತಂದೆ ತಾಯಿಗಳ ಹೆಸರು, ದಾಖಲೆಗಳನ್ನು ಗುಟ್ಟಾಗಿ ಒಂದೆಡೆ ಹೂತಿಡುತ್ತಾಳೆ. ಹೀಗೆ ಯುದ್ಧ ಮುಗಿವವರೆಗೆ ೨೫೦೦ ಮಕ್ಕಳನ್ನು ರಕ್ಷಿಸಿದ ಈ ಮಹಾತಾಯಿಯ ಸಾಧನೆಯ ವಿವರಗಳು 'ಜೊಲಾಂಟಾ' ಕೃತಿಯಲ್ಲಿ ದಾಖಲಾಗಿವೆ. ಇರೇನಾಳ ಮಾನವೀಯ ತುಡಿತಗಳನ್ನು ದಾಖಲಿಸುವ ಜೊತೆ ಜೊತೆಗೇ ನಾಝಿಗಳು ಸಾಮೂಹಿಕವಾಗಿ ನಡೆಸಿದ ಜನಾಂಗೀಯ ಹತ್ಯೆಗಳ, ಕ್ರೌರ್ಯದ ವಿವರಗಳನ್ನು ಈ ಕೃತಿ ಕೊಡುತ್ತದೆ.




ಪೋಲೆಂಡ್ ದೇಶವನ್ನು ಆಕ್ರಮಿಸಿದ ಹಿಟ್ಲರ್‌ನ ನಾಝಿ ಪಡೆಗಳು ೨೮ ಸೆಪ್ಟೆಂಬರ್ ೧೯೩೯ರಂದು ಹೊರಡಿಸುವ ಮೊದಲ ಆದೇಶ "ಪ್ರತಿಯೊಬ್ಬ ಪೋಲೆಂಡ್ ಪ್ರಜೆಯ ನಾಗರಿಕ ಹಕ್ಕು ಇಂದಿನಿಂದ ಜರ್ಮನ್ ಸಾರ್ವಭೌಮತ್ವಕ್ಕೆ ಒಳಪಟ್ಟಿರುತ್ತದೆ" ಎಂಬುದು. ಮರುದಿನ ಹೊರಟ ಎರಡನೇ ಆದೇಶ "ಯಹೂದಿಗಳ ಒಡೆತನದಲ್ಲಿರುವ ಎಲ್ಲ ವ್ಯಾಪಾರ ವ್ಯವಹಾರಗಳನ್ನು ಜರ್ಮನ್ ಏಜೆಂಟರಿಗೆ ವರ್ಗಾಯಿಸತಕ್ಕದ್ದು ಮತ್ತು ಯಾವುದೇ ಯಹೂದಿಗಳನ್ನು ಕೆಲಸಕ್ಕೆ ಇಟ್ಟುಕೊಳ್ಳುವಂತಿಲ್ಲ... ಯಹೂದಿಗಳು ನಿರ್ವಹಿಸುತ್ತಿರುವ ವಸತಿ ಸಮುಚ್ಚಯಗಳು ಮತ್ತು ಯಹೂದಿ ಒಡೆತನದ ವಸತಿ ಸಮುಚ್ಚಯಗಳಿಂದ ಯಹೂದಿಗಳನ್ನು ಕಿತ್ತೊಗೆಯಲಾಗಿದೆ. ಯಹೂದಿ ಭೂಮಾಲೀಕರಿಂದ ಅವರ ಆಸ್ತಿಯನ್ನು ಜರ್ಮನ್ ಒಡೆತನಕ್ಕೆ ಸೇರಿಸಲಾಗಿದೆ". ಹೀಗೆ ನಾಝಿ ಪಡೆಗಳು ಎರಡನೇ ಜಾಗತಿಕ ಯುದ್ಧ ಮುಗಿವವರೆಗೂ ಆದೇಶಗಳನ್ನು ಹೊರಡಿಸಿವೆ. ಕೂಡುದೊಡ್ಡಿಯಲ್ಲಿ ಸಾವಿರಾರು ಮಕ್ಕಳನ್ನು, ಮಹಿಳೆಯರನ್ನು ವೃದ್ಧರನ್ನು ಗುಂಡಿಟ್ಟು ಕೊಲ್ಲಲೂ ಆದೇಶಗಳಾಗಿವೆ. ಇಂಥ ಹಲವಾರು ಅದೇಶಗಳನ್ನು ಈ ಕೃತಿಯಲ್ಲಿ ಪಲ್ಲವಿ ದಾಖಲಿಸಿದ್ದಾರೆ.

ಇದು ಇತಿಹಾಸದ ಒಂದು ಕರಾಳ ಅಧ್ಯಾಯದ ದಾಖಲೆಯ ಕೃತಿಯಾದರೂ ಇರೇನಾಳ ಬದುಕಿನ ಬದ್ಧತೆಗಳನ್ನು ಚಿತ್ರಿಸುವಾಗ ಒಂದು ಸಾಹಿತ್ಯ ಕೃತಿಯಂತೆ ಮೂಡಿಬಂದಿದೆ. 'ನರಳುವುದನ್ನೂ, ನೋವನ್ನೂ ನೋಡಲಾಗುವುದಿಲ್ಲ ನನಗೆ. ಯಹೂದಿ ಮಕ್ಕಳಷ್ಟು ಮತ್ತಾರೂ ನರಳುತ್ತಿಲ್ಲ ಇಲ್ಲಿ. ನನ್ನ ಕೈಲಾಗುವ ಒಳ್ಳೆಯ ಕೆಲಸ ನಾನು ಮಾಡುತ್ತೇನೆ' ಎಂದು ವೈದ್ಯರೊಬ್ಬರ ಪ್ರಶ್ನೆಗೆ ಉತ್ತರಿಸುವ ಇರೇನಾ, ಮಾನವತೆಗಾಗಿನ ಕರ್ತವ್ಯಕ್ಕಾಗಿ ತನ್ನ ಬದುಕನ್ನೇ ಪಣಕ್ಕಿಡುವ ಗಟ್ಟಿಗಿತ್ತಿ. ಘೆಟ್ಟೋದ ಒಳಗಿರುವ ಯಹೂದಿಗಳಿಗೆ ಮರುದಿನ ಬೆಳಗಿನ ಸೂರ್ಯನನ್ನು ನೋಡುವ ಭರವಸೆ ಇರುವುದಿಲ್ಲ. ಮಡಿಲಲ್ಲಿ ಪುಟ್ಟ ಪುಟ್ಟ ಕಂದಮ್ಮಗಳನ್ನಿಟ್ಟುಕೊಂಡು ಕಣ್ಣೀರು ಹಾಕುವ ತಂದೆ ತಾಯಿಗಳ ಮುಂದೆ ನಿಂತ ಇರೇನಾ ಕೇಳುತ್ತಾಳೆ, 'ನಿಮ್ಮ ಮಕ್ಕಳನ್ನು ಕೊಡಿ. ಇಲ್ಲಿಂದ ಅವರನ್ನು ಪಾರುಮಾಡಿ ಹೊರಗೊಯ್ದು ಜೀವ ಉಳಿಸುತ್ತೇನೆ' ಎಂದು, ಆಗ ತಮ್ಮ ಕರುಳಕುಡಿಗಳನ್ನು ಕೊಡಲು ಆಗದೆ, ಇಟ್ಟುಕೊಳ್ಳಲೂ ಆಗದೆ ಒದ್ದಾಡುವ ಸ್ಥಿತಿ ಮಾನವ ಕುಲ ಅನುಭವಿಸಿದ ದುರಂತ. ಇಂಥ ನೂರಾರು ಘಟನೆಗಳು 'ಜೊಲಾಂಟಾ'ದಲ್ಲಿವೆ.

ಭಾರತ ಇಂದು ಕುಲಮದವಾದಿಗಳಿಂದಾಗಿ ಅಪಾಯದ ಅಂಚಿನಲ್ಲಿದೆ. ೧೯೪೭ರ ಸ್ವಾತಂತ್ರ್ಯಾನಂತರ ನಡೆದ ಕೋಮುಗಲಭೆಗಳು ಯಾವುದೇ ಪ್ರಭುತ್ವ ನಿರ್ದೇಶಿತ ಗಲಭೆಗಳಲ್ಲ. ಅದೇರೀತಿ ೧೯೮೪ರಲ್ಲಿ ಇಂದಿರಾಗಾಂಧಿ ನಿಧನಾನಂತರ ನಡೆದ ಸಿಖ್ ಜನಾಂಗದ ಮೇಲಿನ ದಾಳಿ ಪ್ರಭುತ್ವ ಪ್ರಾಯೋಜಿಸಿದ್ದಲ್ಲ. ಆದರೆ ೨೦೦೨ರಲ್ಲಿ ಗುಜರಾತ್‌ನಲ್ಲಿ ನಡೆದ ನರಮೇಧಗಳು ಪ್ರಭುತ್ವ ನಿರ್ದೇಶಿತವಾದದ್ದು. ಅದರ ನಂತರ ಇಂದು ಭಾರತದ ವಿವಿಧ ಪ್ರದೇಶಗಳಲ್ಲಿ ಇಂಥ ಪ್ರಭುತ್ವ ರಕ್ಷಿತ ಅಮಾನುಷ ಪಡೆಗಳನ್ನು ನೋಡುತ್ತಿದ್ದೇವೆ. ಕ್ರೌರ್ಯ ಶೌರ್ಯವಾಗಿ ಪರಿವರ್ತನೆಯಾಗುತ್ತಿದೆ. ಇವೆಲ್ಲವೂ ಹಿಟ್ಲರ್ ಮಾದರಿಯ ಪ್ರಯೋಗಗಳೇ. ಭಾರತದಲ್ಲಿ 'ಕುಲಮದವಾದ' ಪ್ರಭುತ್ವದ ಬಲವನ್ನು ಪಡೆದಿದೆ. ಇಂಥ ಸಂದರ್ಭದಲ್ಲಿ 'ಜೊಲಾಂಟಾ'ದಂಥ ಕೃತಿಗಳು ಜನತೆಯ ಕಣ್ಣು ತೆರೆಸಬೇಕು. ಇರೇನಾರಂಥ ವ್ಯಕ್ತಿತ್ವಗಳು ಪ್ರತಿಯೊಬ್ಬರಲ್ಲೂ ಮೊಳಕೆಯೊಡೆಯಬೇಕು. ಆ ನಿಟ್ಟಿನಲ್ಲಿ 'ಜೊಲಾಂಟಾ' ಹೆಚ್ಚು ಓದುಗರನ್ನು ತಲುಪಬೇಕು.

'ಜೊಲಾಂಟಾ' ತಮ್ಮ ಮೊದಲ ಕೃತಿ ಎಂದು ಹೇಳುವ ಪಲ್ಲವಿ ಇಡೂರು ಸಾಕಷ್ಟು ಸಾಹಸವನ್ನು ಮಾಡಿದ್ದಾರೆ. ಈ ಕೃತಿಯನ್ನು ಕಟ್ಟಿಕೊಡಲು ಆಕರಗಳಿಗಾಗಿ ಸಾಕಷ್ಟು ಹುಡುಕಾಟ ನಡೆಸಿದ್ದಾರೆ. ಬಹುತೇಕ ಆಕರಗಳು ಅಮೆರಿಕಾ ಮತ್ತು ಇಸ್ರೇಲ್ ಮೂಲಕ ದೊರೆತಿರುವುದರಿಂದ ಅವರು ಅಂತಿಮ ನಿರ್ಣಯ ಕೊಡುವಾಗ ಏಕಮುಖಿ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಅಮೆರಿಕಾ ಯಾವತ್ತೂ ಯುದ್ಧ ಭೂಮಿಯಿಂದ ಭೌಗೋಳಿಕವಾಗಿ ದೂರ ಇದ್ದದ್ದು. ಎರಡನೇ ಜಾಗತಿಕ ಮಹಾಯುದ್ಧದ ಸಂದರ್ಭದಲ್ಲಿ ಯೂರೋಪಿನ ಎಡ, ಪ್ರಜಾಸತ್ತಾತ್ಮಕ, ಸೆಕ್ಯುಲರ್ ಸಂಘಟನೆಗಳು 'ಫ್ಯಾಸಿಸ್ಟ್ ವಿರೋಧಿ ಕೂಟ' ರಚಿಸಿಕೊಂಡು ನಿರಂತರ ಹೋರಾಡಿದವು. ಯುರೋಪಿನ ಕಮ್ಯುನಿಸ್ಟರು, ಅದರಲ್ಲೂ ಅಂದಿನ ಸೋವಿಯತ್ ಯೂನಿಯನ್ ಜನತೆ ಹಿಟ್ಲರನ ದಾಳಿಯಿಂದ ಅಪಾರವಾದ ಸಂಖ್ಯೆಯಲ್ಲಿ ಸಾವುನೋವುಗಳನ್ನು ಅನುಭವಿಸಿದ್ದಾರೆ. ಅಂತಿಮವಾಗಿ ಹಿಟ್ಲರ್‌ನ ಸೈನ್ಯವನ್ನು ಸದೆಬಡಿದು, ಅವನ ರಾಜಧಾನಿ ಬರ್ಲಿನ್‌ವರೆಗೂ ಹೋಗಿ ಯುದ್ಧಕ್ಕೆ ಅಂತಿಮ ಮೊಳೆ ಹೊಡೆದದ್ದು ಸೋವಿಯತ್ ಯೂನಿಯನ್‌ನ ಕೆಂಪು ಸೇನೆಯೇ. ಆ ಸೋಲಿನ ಸಂದರ್ಭದಲ್ಲಿಯೇ ಹಿಟ್ಲರ್ ಆತ್ಮಹತ್ಯೆ ಮಾಡಿಕೊಂಡದ್ದು. ಆ ಸಂದರ್ಭದಲ್ಲಿ ಅಮೆರಿಕದ ಪಡೆಗಳು ಪೂರ್ವ ಜರ್ಮನಿಯಲ್ಲಿ ತಮ್ಮ ಆಧಿಪತ್ಯ ಸ್ಥಾಪಿಸುವ ಕ್ರಿಯೆಯಲ್ಲಿ ತೊಡಗಿದ್ದವು. ಇಂದು ಸೋವಿಯತ್ ದೇಶದಲ್ಲಿ, ಪೋಲೆಂಡ್, ಜರ್ಮನಿಗಳಲ್ಲಿ ಕಮ್ಯುನಿಸ್ಟ್ ಸರಕಾರಗಳಿಲ್ಲ. ಇಂಥ ಸಂದರ್ಭದಲ್ಲಿ ಅಮೆರಿಕದ ಮೂಲದ ಆಕರಗಳೇ ಇಂಥ ಬರಹಗಳಿಗೆ ಆಧಾರವಾಗುತ್ತವೆ. ಅಮೆರಿಕ ವಿಯೆಟ್ನಾಂ, ಗ್ರೆನಡಾಗಳಂಥ ಪುಟ್ಟದೇಶಗಳ ಮೇಲೆ ನಡೆಸಿದ ಯುದ್ಧಗಳು ಹಿಟ್ಲರ್ ದಾಳಿಗಿಂತ ಕಡಿಮೆಯೇನಿರಲಿಲ್ಲ. ಫ್ಯಾಸಿಸ್ಟ್ ವಿರೋಧಿ ಹೋರಾಟದ ಹಲವಾರು ಸತ್ಯಗಳನ್ನು, ವಾಸ್ತವವನ್ನು ಅಮೆರಿಕದ ಪ್ರಭುತ್ವ, ಮಾಧ್ಯಮಗಳು ತಿರುಚುತ್ತಲೇ ಬಂದಿವೆ. ಪಲ್ಲವಿ ಇಡೂರು ಬಳಸಿದ ಆಕರಗಳಲ್ಲಿ ಖಂಡಿತ ಯೂರೋಪಿನ 'ಫ್ಯಾಸಿಸ್ಟ್ ವಿರೋಧಿ ಹೋರಾಟ'ಗಳ ಪ್ರಸ್ತಾಪವಿರುವುದಿಲ್ಲ. ರೋಸಾ ಲುಕ್ಸೆಂಬರ್ಗ್, ಜಾರ್ಜ್ ಡಿಮಿಟ್ರೋವ್‌ರಂಥ ಹಲವಾರು ಫ್ಯಾಸಿಸ್ಟ್ ವಿರೋಧಿ ಹೋರಾಟಗಾರರು ಅಮೆರಿಕಕ್ಕೂ, ಅವರ ಮಾಧ್ಯಮಗಳಿಗೂ ಅಪಥ್ಯ. ಅದೇನೇ ಇದ್ದರೂ ಇರೇನಾ ಸೆಂಡ್ಲರ್ ಜೀವನ ಕಥನವನ್ನು, ನಾಝಿ ಪಡೆಗಳನ್ನು ವಿರೋಧಿಸಿ ಮಕ್ಕಳ ರಕ್ಷಣೆಗಾಗಿ ತನ್ನ ಪ್ರಾಣವನ್ನೇ ಪಣಕ್ಕಿಟ್ಟ ಹೋರಾಟವನ್ನು ಸಮರ್ಥವಾಗಿ ಪಲ್ಲವಿ ಕಟ್ಟಿಕೊಟ್ಟಿದ್ದಾರೆ. ಇರೇನಾ ಹೋರಾಟದ ಬದುಕಿನ ಜೊತೆಗೇ ಹಿಟ್ಲರ್‌ನ ನಾಝಿ ಪಡೆಗಳ ಕ್ರೌರ್ಯವನ್ನು ವಾಸ್ತವವಾಗಿ, ಪರಿಣಾಮಕಾರಿಯಾಗಿ ನಿರೂಪಿಸಿದ್ದಾರೆ. ಕುಲಮದವಾದದ ರೋಗಾಣುಗಳು ಭಾರತದ ರಾಜಕೀಯ, ಸಾಮಾಜಿಕ ಕ್ಷೇತ್ರವನ್ನು ವ್ಯಾಪಿಸುತ್ತಿರುವ ಇಂದಿನ ಸಂದರ್ಭದಲ್ಲಿ 'ಜೊಲಾಂಟಾ' ಓದಲೇಬೇಕಾದ ಕೃತಿ.

**ಶ್ರೀಸುಮಿತ್ರಾಸುತ ಅಗಸಬಾಳ**
ನಂ. ೧೬೭, ಲಗ್ಗೆರೆ ಮುಖ್ಯರಸ್ತೆ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು – ೫೬೦ ೦೫೮

ಡಾ॥ ರಶ್ಮಿ ಎಸ್.

# ಇಂದಿರಾ ಗಾಂಧಿ

## ತುರ್ತುಪರಿಸ್ಥಿತಿ ಮತ್ತು ಪ್ರಾದೇಶಿಕ ರಾಜಕಾರಣ



ಶ್ರೀಮತಿ ಇಂದಿರಾ ಗಾಂಧಿಯವರು ರಾಷ್ಟ್ರ ಕಂಡ ಶಕ್ತಿಶಾಲಿ ಹಾಗೂ ಬಹುಮುಖ ವ್ಯಕ್ತಿತ್ವದ ಪ್ರಧಾನ ಮಂತ್ರಿಗಳಲ್ಲಿ ಒಬ್ಬರು. ಪ್ರಧಾನಮಂತ್ರಿಯಾಗಿ ಇವರ ಆಡಳಿತಾವಧಿಯನ್ನು ಎರಡು ಹಂತಗಳಲ್ಲಿ ವಿಂಗಡಿಸಬಹುದು. ಮೊದಲನೆಯದು, ೧೯೬೬ರಿಂದ ೧೯೭೭. ಈ ಹಂತದಲ್ಲಿ ಕಾಂಗ್ರೆಸ್ ಪಕ್ಷದೊಳಗೆ ಅಧಿಕಾರಕ್ಕಾಗಿ ಸಿಂಡಿಕೇಟ್‌ನವರೊಡನೆ ಹೋರಾಟವು ತೀವ್ರವಾಗಿ ವ್ಯಕ್ತಗೊಂಡಿತು. ೧೯೬೯ರ ಹೊತ್ತಿಗೆ ಕಾಂಗ್ರೆಸ್ ಪಕ್ಷ ಇಂದಿರಾ ಗಾಂಧಿಯವರ ನೇತೃತ್ವದಲ್ಲಿ ತನ್ನ ಹಳೆಯ ಚೌಕಟ್ಟುಗಳನ್ನು ಮುರಿದು ಹೊಸ ರೂಪ ಪಡೆಯುವಂತೆ ಗೋಚರಿಸುತ್ತದೆ. ಮುಂದೆ ಇದು ಹೊಸ ತಲೆಮಾರಿನ ರಾಷ್ಟ್ರೀಯ ಮತ್ತು ಪ್ರಾದೇಶಿಕ ನಾಯಕರ ಬೆಳವಣಿಗೆಗೆ ನಾಂದಿ ಹಾಡುತ್ತದೆ. ಕರ್ನಾಟಕದಲ್ಲಿ ದೇವರಾಜ ಅರಸು ಅವರು ಸಹ ಈ ರಾಜಕೀಯ ವಾತಾವರಣದ ಲಾಭ ಪಡೆದು ಮುಂಚೂಣಿಗೆ ಬಂದರು. ಈ ಸಂದರ್ಭದಲ್ಲಿ ಶ್ರೀಮತಿ ಇಂದಿರಾ ಗಾಂಧಿಯವರು ಎಡಪಂಥೀಯ ವಿಚಾರಧಾರೆಗಳಿಂದ ಪ್ರಭಾವಿತರಾದಂತೆ ತೋರುವರು. ಹಾಗೇ ಬ್ಯಾಂಕ್ ರಾಷ್ಟ್ರೀಕರಣ, ರಾಜಧನ ರದ್ದತಿಯಂತಹ ಕಾಯ್ದೆಗಳ ಅನುಷ್ಠಾನವು ಅನೇಕ ಸಮಾಜವಾದಿಗಳನ್ನು ಕಾಂಗ್ರೆಸ್‌ನೊಳಗೆ ಸೆಳೆದುಕೊಂಡಿತು. ಇದರ ಪ್ರಭಾವ ೧೯೭೧ರ ಲೋಕಸಭಾ ಚುನಾವಣೆಯಲ್ಲಿ ಸಮಾಜವಾದಿ ಪಕ್ಷ ತನ್ನ ಕೊನೆಯ ದಿನಗಳನ್ನು ಕಂಡರೆ, ಎಡಪಂಥೀಯ ಪಕ್ಷಗಳಲ್ಲಿ ಒಂದಾದ ಸಿಪಿಐ ಕಾಂಗ್ರೆಸ್‌ನ ಮಿತ್ರಪಕ್ಷವಾಗುತ್ತದೆ. ಇವೆಲ್ಲವೂ ಇಂದಿರಾ ಗಾಂಧಿಯವರಿಗೆ ಕಾಂಗ್ರೆಸ್ಸಿನೊಳಗೆ ಆಧಿಪತ್ಯವನ್ನು ಸಾಧಿಸಲು ಹಾಗೂ ಪಕ್ಷವನ್ನು ಪುನರ್ ಸಂಘಟಿಸಿ ಕಳೆದುಹೋಗುತ್ತಿದ್ದ ಪ್ರಾಮುಖ್ಯತೆಯನ್ನು ಪುನರ್ ಸ್ಥಾಪಿಸಲು ಸಾಧ್ಯವಾಗಿಸಿತು. ಆದರೆ ಇಂದಿರಾ ಗಾಂಧಿಯವರು ೧೯೭೫ರ ಹೊತ್ತಿಗೆ ಕ್ರಮೇಣ ಸರ್ವಾಧಿಕಾರಿಯಂತೆ ವರ್ತಿಸಿದರು. ೧೯೭೫ರಿಂದ ೧೯೭೭ರ ವರೆಗೆ ರಾಷ್ಟ್ರವು ತುರ್ತುಪರಿಸ್ಥಿತಿಯನ್ನು ಅನುಭವಿಸಿತು. ಈ ಅವಧಿಯಲ್ಲಿ ಪ್ರಜಾಪ್ರಭುತ್ವ ಭಾರತದಲ್ಲಿ ಹೊಸ ರೂಪವನ್ನು ಪಡೆಯಿತು. ಎರಡನೆಯದು, ೧೯೮೦ರಿಂದ ೧೯೮೪ರವರೆಗಿನ ಅವಧಿ. ಇಲ್ಲಿ ಇಂದಿರಾ ಗಾಂಧಿ ಅವರ ಆಡಳಿತಾವಧಿಯಲ್ಲಿ ರೂಪ ತಳೆದಿದ್ದ ಎಲ್ಲ ಸಮಸ್ಯೆಗಳನ್ನು ಸ್ವಲ್ಪ ಅವಸರವಸರವಾಗಿ ಬಗೆಹರಿಸಹೊರಟಂತೆ ತೋರುವರು. ಇದರೊಂದಿಗೆ ಪಕ್ಷದೊಳಗೆ ಎಲ್ಲ ಅಧಿಕಾರವನ್ನು ಕೇಂದ್ರೀಕರಿಸಿಕೊಂಡೇ ಉಳಿದರೂ ನಾಗರಿಕ ಸಮಾಜದಲ್ಲಿ ಸರ್ವಾಧಿಕಾರಿಯ ವೇಷದಿಂದ ಹೊರಬಂದಿದ್ದರು.

ಇಂದಿರಾ ಗಾಂಧಿಯವರ ಆಡಳಿತಾವಧಿಯಲ್ಲಿ ತುರ್ತುಪರಿಸ್ಥಿತಿಯ ಸಂದರ್ಭವು ಸ್ಥಿತ್ಯಂತರದ ಕಾಲವಾಗಿತ್ತು. ಭಾರತದ ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ಸಮತೋಲನವನ್ನು ಅದು ಮರುವ್ಯಾಖ್ಯಾನಿಸಿತು. ಪ್ರಜಾಪ್ರಭುತ್ವದ ಪತನವಾದಂತೆ ತೋರಿದರೂ ಪ್ರಜಾಪ್ರಭುತ್ವದ ಸ್ವರೂಪವನ್ನು ಭಿನ್ನ ಹಂತಗಳಲ್ಲಿ ಹಾಗೂ ವೇಗದಲ್ಲಿ ಬದಲಾಯಿಸುವಷ್ಟು ಶಕ್ತಿಯುತವಾಗಿತ್ತು. ಭಾರತದಾದ್ಯಂತ ತುರ್ತುಪರಿಸ್ಥಿತಿ ಜಾರಿಯಲ್ಲಿದ್ದ ಸಂದರ್ಭದಲ್ಲಿ ಮಧ್ಯಮ ವರ್ಗದ ಹಿತಾಸಕ್ತಿಯನ್ನು ಅಭಿವ್ಯಕ್ತಗೊಳಿಸುತ್ತಿದ್ದ ಮಾಧ್ಯಮಗಳು, ಹೋರಾಟಗಳು ತುರ್ತುಪರಿಸ್ಥಿತಿಯನ್ನು 'ಕತ್ತಲ ಯುಗ' ಎಂದು ಕರೆದವು. ಪೊಲೀಸ್ ಮತ್ತು ಮಿಲಿಟರಿಯ ಶಕ್ತಿಯುತ ಅಧಿಕಾರವನ್ನು ಕೈಯಲ್ಲಿಟ್ಟುಕೊಂಡು ಬಲಪ್ರಯೋಗದ ಮೂಲಕ ಭಾರತೀಯರನ್ನು ಆಳಿದ ಇಂದಿರಾ ಗಾಂಧಿಯವರ ಕಾಂಗ್ರೆಸ್ ಸರ್ಕಾರ ಜಗತ್ತಿನಾದ್ಯಂತ ಕಟುಟೀಕೆಗೆ ಒಳಪಟ್ಟಿತ್ತು. ಕರ್ನಾಟಕದ ಪರಿಸ್ಥಿತಿಯೂ ಇದಕ್ಕಿಂತ ಹೊರತಾಗಿರಲಿಲ್ಲ. ಆದರೆ ಕರ್ನಾಟಕದಲ್ಲಿ ಕಪ್ಪು –ಬಿಳುಪು ಅಂಶಗಳಿಗಿಂತ ತುರ್ತುಪರಿಸ್ಥಿತಿಯ ದಿನಗಳು ಸಾಮಾಜಿಕ ನೆಲೆಗಟ್ಟುಗಳ ಮೇಲೆ ಆಳವಾದ ಪರಿಣಾಮ ಬೀರಿತು. ಉದಾಹರಣೆಗೆ, ೧೯೭೭ರ ಚುನಾವಣೆಯಲ್ಲಿ ರಾಷ್ಟ್ರದಾದ್ಯಂತ ಜನತಾ ಪಕ್ಷ ಮತ್ತು ಅದರ ಒಕ್ಕೂಟದಲ್ಲಿದ್ದ ಪಕ್ಷಗಳು ವಿಜಯ ಸಾಧಿಸಿದರೆ, ಕರ್ನಾಟಕ ಮತ್ತು ಅವಿಭಜಿತ ಆಂಧ್ರಪ್ರದೇಶಗಳಲ್ಲಿ ಕಾಂಗ್ರೆಸ್ ಪಕ್ಷವೇ ಪುನರ್ ಆಯ್ಕೆ ಆಗುವುದು. ತುರ್ತುಪರಿಸ್ಥಿತಿಯ ಪರಿಣಾಮ ನೇರವಾಗಿ ಚುನಾವಣಾ ಫಲಿತಾಂಶದಲ್ಲಿ ಕಂಡುಬರದಿದ್ದರೂ ಇಲ್ಲಿನ ರಾಜಕೀಯ ಮತ್ತು ಸಾಮಾಜಿಕ ಪರಿಸರದಲ್ಲಿ ಬೃಹತ್ ಬದಲಾವಣೆಗಳಿಗೆ ನಾಂದಿ ಹಾಡಿತು. ತುರ್ತುಪರಿಸ್ಥಿತಿಯ ನಂತರ ೧೯೭೭ರಿಂದ ೧೯೮೦ರವರೆಗಿನ ಕಾಂಗ್ರೆಸ್ ಪಕ್ಷದಲ್ಲಿ ಕಂಡುಬಂದ ಪಲ್ಲಟಗಳು ಆಸಕ್ತಿಕರವಾಗಿವೆ. ಇವು ತುರ್ತುಪರಿಸ್ಥಿತಿಯೋತ್ತರದಲ್ಲಿ ಪ್ರಜಾಪ್ರಭುತ್ವ ಮತ್ತು ಪ್ರಾದೇಶಿಕ ರಾಜಕಾರಣದ ವಿವಿಧ ಸ್ವರೂಪಗಳನ್ನು ತೆರೆದಿಡುವುವು.

**ತುರ್ತುಪರಿಸ್ಥಿತಿಯೋತ್ತರ ರಾಜಕೀಯ ಮಜಲುಗಳು ಮತ್ತು ಪ್ರಾದೇಶಿಕ ರಾಜಕಾರಣ**

ತುರ್ತುಪರಿಸ್ಥಿತಿಯ ಜಾರಿಯನ್ನು ವಿರೋಧಿಸಿದ ಜನತೆ ೧೯೭೭ರ ಲೋಕಸಭಾ ಚುನಾವಣೆಯಲ್ಲಿ ಇಂದಿರಾ ಗಾಂಧಿಯವರನ್ನು ಅಧಿಕಾರದಿಂದ ಕೆಳಗಿಳಿಸಿದರು. ಆದರೆ ೧೯೮೦ರ ಚುನಾವಣೆಯಲ್ಲಿ ಅಧಿಕಾರವನ್ನು ಪುನಃ ನೀಡಿದುದು ಚೋದ್ಯದಂತೆಯೇ ಕಾಣುವುದು. ೧೯೭೭ರ ಮಾರ್ಚ್‌ನಲ್ಲಿ ನಡೆದ ಲೋಕಸಭಾ ಚುನಾವಣೆಯಲ್ಲಿ ಆಡಳಿತಾರೂಢ ಕಾಂಗ್ರೆಸ್ ಪಕ್ಷ ಸೋಲು ಕಂಡಿತು. ಮೊದಲ ಬಾರಿಗೆ ಕಾಂಗ್ರೆಸ್ಸೇತರ ರಾಜಕೀಯ ಪಕ್ಷ ಬಹುಮತ ಪಡೆದು ಆಡಳಿತಕ್ಕೆ ಬಂದಿತು. ಜನತಾ ಸರ್ಕಾರ ತುರ್ತುಪರಿಸ್ಥಿತಿ ಕಾಲದ ಅಧಿಕಾರ

ದುರುಪಯೋಗಕ್ಕಾಗಿ ಅನೇಕ ವಿಚಾರಣಾ ಆಯೋಗಗಳನ್ನು ನೇಮಿಸಿತು. ಕೇಂದ್ರ ಸರ್ಕಾರದ ವಿರುದ್ಧ ಷಾ ವಿಚಾರಣಾ ಆಯೋಗ ರಚಿತವಾದರೆ, ಕರ್ನಾಟಕದಲ್ಲಿ 'ಗ್ರೋವರ್ ವಿಚಾರಣಾ ಆಯೋಗ', ತಮಿಳುನಾಡಿನಲ್ಲಿ ರಾಷ್ಟ್ರಪತಿ ಆಳ್ವಿಕೆಯ ಅಧಿಕಾರ ದುರ್ಬಳಕೆಗಾಗಿ 'ದಿ ಇಸ್ಮಾಯಿಲ್ ಆಯೋಗ'ವನ್ನು ಕಾಣಬಹುದು. ಆಂಧ್ರಪ್ರದೇಶದಲ್ಲಿ ಪೊಲೀಸ್ ದೌರ್ಜನ್ಯದ ಹಿನ್ನೆಲೆಯಲ್ಲಿ 'ತಾರ್ಕುಂಡೆ ಆಯೋಗ', ಅದರ ಶಿಫಾರಸ್ಸಿನ ಮೇರೆಗೆ 'ಭಾರ್ಗವ' ಹಾಗೂ ಆಡಳಿತ ದುರ್ಬಳಕೆಗಾಗಿ 'ವಿಮಾದ್‌ಲಾಲ್' ನೇತೃತ್ವದ ವಿಚಾರಣಾ ಆಯೋಗಗಳ ರಚನೆಯಾಯಿತು. ಪಶ್ಚಿಮ ಬಂಗಾಳದಲ್ಲಿ ತುರ್ತುಪರಿಸ್ಥಿತಿ ಪೂರ್ವದಲ್ಲಿ ಜೈಲಿನಲ್ಲಿ ಸಂಭವಿಸಿದ ಸಾವುಗಳ ಕುರಿತು 'ಸರ್ಕಾರ್ ವಿಚಾರಣಾ ಆಯೋಗ', ಅಲ್ಲದೆ 'ಮಾರುತಿ ವಿಚಾರಣಾ ಆಯೋಗ', 'ಜಗಮೋಹನ್ ರೆಡ್ಡಿ ಆಯೋಗ' ಮೊದಲಾದವುಗಳನ್ನು ಜನತಾ ಸರ್ಕಾರ ನೇಮಿಸಿತು.

ಕರ್ನಾಟಕದ ಜನತೆ ೧೯೭೭ರ ಲೋಕಸಭಾ ಚುನಾವಣೆ ಮತ್ತು ೧೯೭೮ರ ವಿಧಾನಸಭಾ ಚುನಾವಣೆಗಳೆರಡರಲ್ಲಿಯೂ ಕಾಂಗ್ರೆಸ್ ಪಕ್ಷವನ್ನೇ ಮರುಚುನಾಯಿಸಿತು. ಈ ಸಂದರ್ಭದಲ್ಲಿ ಕರ್ನಾಟಕದ ಮುಖ್ಯಮಂತ್ರಿಯಾಗಿದ್ದವರು ದೇವರಾಜ ಅರಸುರವರು. ಕಾಂಗ್ರೆಸ್ ಪಕ್ಷವು ೧೯೭೭ರ ಲೋಕಸಭಾ ಚುನಾವಣೆಯಲ್ಲಿ ಸೋಲುಂಡ ನಂತರ ರಾಜಕೀಯ ಪಲ್ಲಟಗಳ ನಡುವೆ ಅನೇಕ ಸ್ಥಿತ್ಯಂತರಗಳನ್ನು ಎದುರಿಸಿತು. ಕಾಂಗ್ರೆಸ್ ಪಕ್ಷದ ಸ್ಥಿತ್ಯಂತರಗಳು ಮತ್ತು ಕರ್ನಾಟಕದ ರಾಜಕಾರಣವನ್ನು ಪಕ್ಷ, ವ್ಯಕ್ತಿ ಹಾಗೂ ಪ್ರಾದೇಶಿಕ ರಾಜಕಾರಣದ ನೆಲೆಯಲ್ಲಿ ನೋಡಲು ಪ್ರೇರೇಪಿಸುತ್ತದೆ.

೧೯೭೭ರ ಲೋಕಸಭಾ ಚುನಾವಣೆಯ ತರುವಾಯ ಕಾಂಗ್ರೆಸ್ ಪಕ್ಷದ ಅಧಃಪತನ ಪ್ರಾರಂಭವಾಗಿತ್ತು. ಅದರ ಪ್ರಭಾವ ರಾಜ್ಯ ರಾಜಕಾರಣದಲ್ಲಿ ಗುರುತರವಾಗಿ ಮೂಡಿಬಂದಿತು. ಇದರೊಡನೆ ಕರ್ನಾಟಕದ ಪ್ರಾದೇಶಿಕ ರಾಜಕಾರಣವು ಹಲವು ಹಂತಗಳಲ್ಲಿ ಕಾಂಗ್ರೆಸ್ ಪಕ್ಷದಲ್ಲಿ ಉಂಟಾಗುತ್ತಿದ್ದ ಪಲ್ಲಟಗಳನ್ನು ಪ್ರಭಾವಿಸಿತು. ೧೯೭೭ರ ಲೋಕಸಭಾ ಚುನಾವಣೆಯಿಂದ ಡಿಸೆಂಬರ್‌ವರೆಗೆ ಕಂಡುಬಂದ ಪ್ರಮುಖ ರಾಜಕೀಯ ವಿಚಾರಗಳು ಇದನ್ನೇ ಸ್ಪಷ್ಟಪಡಿಸಿವೆ. ಇವು ಪ್ರಾದೇಶಿಕ ರಾಜಕಾರಣದಲ್ಲಿ ಕಾಂಗ್ರೆಸ್ ಪಕ್ಷ ಮತ್ತು ಅರಸು, ಕಾಂಗ್ರೆಸ್ ಪಕ್ಷದೊಳಗಿನ ಆಂತರಿಕ ಭಿನ್ನಮತ, ರಾಜ್ಯದ ವಿರೋಧ ಪಕ್ಷಗಳು ಸೃಷ್ಟಿಸುತ್ತಿದ್ದ ಒತ್ತಡಗಳ ವಿವಿಧ ಮಜಲುಗಳನ್ನು ಎಳೆಎಳೆಯಾಗಿ ಬಿಂಬಿಸಿವೆ. ಕಾಂಗ್ರೆಸ್ಸಿನೊಳಗೆ ಉಂಟಾದ ಆಂತರಿಕ ಬಿಕ್ಕಟ್ಟು ವರ್ಷಾಂತ್ಯದ ಹೊತ್ತಿಗೆ ಪಕ್ಷದ ವಿಭಜನೆಯಲ್ಲಿ ಕೊನೆಗೊಂಡಿತು. ಕಾಂಗ್ರೆಸ್ ಪಕ್ಷದೊಳಗಿನ ಬಿರುಕು ಸೆಪ್ಟೆಂಬರ್ ವೇಳೆಗಾಗಲೇ ರಾಜ್ಯದಲ್ಲಿ ಪ್ರಾದೇಶಿಕ ರಾಜಕಾರಣಿಗಳ ಅಸ್ತಿತ್ವ ಮತ್ತು ಪ್ರತಿಷ್ಠೆಯ ವಿಚಾರವಾಗಿ ಪರಿವರ್ತನೆ ಹೊಂದಿತು. ಜನತಾ ಪಕ್ಷದ ನಾಯಕರು ಇದಕ್ಕೆ ಸಹಾಯ ಮಾಡುತ್ತಿದ್ದಾರೆ ಎನ್ನುವುದರಲ್ಲಿ ಅನುಮಾನವಿಲ್ಲ, ದೇವರಾಜ ಅರಸು ಅವರ ನಾಯಕತ್ವದ ಆಳ್ವಿಕೆ ಹಿಂದಿನ ಎಲ್ಲ ಆಳ್ವಿಕೆಗಳಿಗಿಂತ ಹೆಚ್ಚು ಭ್ರಷ್ಟ ಸರ್ಕಾರ ಎಂದು ಒಪ್ಪಿಕೊಂಡರೂ ಆಡಳಿತ ಉತ್ತಮವಾಗಿತ್ತು. ಅರಸು ಗುಂಪಿನವರು ಕೆ. ಎಚ್. ಪಾಟೀಲರನ್ನು ಪ್ರದೇಶ ಕಾಂಗ್ರೆಸ್ ಸಮಿತಿ ಅಧ್ಯಕ್ಷ ಸ್ಥಾನದಲ್ಲಿ ನೋಡಲು ನಿರಾಕರಿಸಿದರು. ಮತ್ತು ಕಾಂಗ್ರೆಸ್ ಸಮಿತಿಯು ಅರಸರ ವಿರುದ್ಧ ಶಿಸ್ತು ಕ್ರಮ ತೆಗೆದುಕೊಳ್ಳುವುದಾಗಿ ಹೆದರಿಸಿದೆ. ಇದರಿಂದ ಕರ್ನಾಟಕ ಕಾಂಗ್ರೆಸ್ಸಿನಲ್ಲಿ ಹಿಂದಿರುಗಲಾರದಂಥ ಬಿರುಕು ಉಂಟಾಗುವ ಸಾಧ್ಯತೆ ಇತ್ತು. ಈ ಬಿರುಕಿಗೆ ಸೈದ್ಧಾಂತಿಕ ಆಯಾಮವನ್ನು ನೀಡಿ ದೇವರಾಜ ಅರಸು ಅವರ ಗುಂಪಿನವರು ರಾಜ್ಯದಲ್ಲಿ ಪ್ರಗತಿಪರ ಎಂದು ಗುರುತಿಸಿಕೊಂಡರು. ಪಂಜಾಬ್, ಪಶ್ಚಿಮ ಬಂಗಾಳ, ಕರ್ನಾಟಕ ಮತ್ತು ಆಂಧ್ರ ಈ ಎಲ್ಲ ಕಡೆಗಳಲ್ಲಿಯೂ ಒಂದೆ ಕಥೆ. ಕಾಂಗ್ರೆಸ್ ಪಕ್ಷ ಆಡಳಿತದಲ್ಲಿದ್ದ ರಾಜ್ಯಗಳ ಮುಖ್ಯಮಂತ್ರಿಗಳಲ್ಲಿ ದೇವರಾಜ ಅರಸು ಅವರು ಪ್ರಮುಖ ರಾಜಕಾರಣಿಯಾಗಿದ್ದರು. ಹಾಗೆ ಆಡಳಿತದ ಮೇಲೆ ನಿಯಂತ್ರಣ ಸಾಧಿಸುವ ಹಿನ್ನೆಲೆಯಲ್ಲಿ ಕೆ. ಎಚ್. ಪಾಟೀಲರು ಮತ್ತು ಅರಸರ ನಡುವೆ ಪದೇಪದೇ ಘರ್ಷಣೆಗಳು ಉಂಟಾಗುತ್ತಿತ್ತು.

ಎರಡನೇ ಹಂತದ ಬೆಳವಣಿಗೆಯನ್ನು ೧೯೭೮ರಿಂದ ೧೯೮೦ರವರೆಗೆ ನೋಡಬಹುದು. ಈ ಸಂದರ್ಭದಲ್ಲಿ ಮೂರು ಪ್ರಮುಖ ಚುನಾವಣೆಗಳು ನಡೆದವು. ಅವುಗಳೆಂದರೆ ೧೯೭೮ರ ವಿಧಾನಸಭೆ, ಚಿಕ್ಕಮಗಳೂರು ಲೋಕಸಭಾ ಕ್ಷೇತ್ರದ ಮಧ್ಯಂತರ ಚುನಾವಣೆ ಮತ್ತು ೧೯೮೦ರಲ್ಲಿ ನಡೆದ ಲೋಕಸಭಾ ಚುನಾವಣೆಗಳು. ಈ ಚುನಾವಣೆಗಳ ನಡುವೆ ಉಂಟಾದ ರಾಜಕೀಯ ಬೆಳವಣಿಗೆಗಳು ಪ್ರಾದೇಶಿಕ ರಾಜಕಾರಣವನ್ನು ತೀವ್ರವಾಗಿ ಪ್ರಭಾವಿಸಿತು. ೧೯೭೮ರ ವಿಧಾನಸಭಾ ಚುನಾವಣೆಯಿಂದ ಚಿಕ್ಕಮಗಳೂರು ಮಧ್ಯಂತರ ಚುನಾವಣೆಯವರೆಗಿನ ರಾಜಕಾರಣವನ್ನು ವ್ಯಕ್ತಿಗತ ನೆಲೆಯಲ್ಲಿ ಅರಸು ಅವರ ಏರುಮುಖ ಬೆಳವಣಿಗೆ ಕಂಡುಬರುತ್ತದೆ. ಈ ಹಂತದಲ್ಲಿ ಅರಸು ಮತ್ತು ಇಂದಿರಾ ಗಾಂಧಿಯವರ ನಡುವಿನ ಸಂಬಂಧ ಉತ್ತಮವಾಗಿತ್ತು. ಚಿಕ್ಕಮಗಳೂರು ಚುನಾವಣೆಯ ನಂತರದಿಂದ ೧೯೮೦ರ ಲೋಕಸಭಾ ಚುನಾವಣೆಯವರೆಗೆ ಪ್ರಾದೇಶಿಕ ರಾಜಕಾರಣದಲ್ಲಿ ರಾಷ್ಟ್ರೀಯ ರಾಜಕಾರಣದ ಪ್ರಭಾವ ಎದ್ದುಕಾಣುತ್ತದೆ. ಆ ಸಂದರ್ಭದಲ್ಲಿ ಇಂದಿರಾ ಗಾಂಧಿ ಮತ್ತು ಅರಸರ ನಡುವಿನ ಸಂಬಂಧ ಹದಗೆಡುತ್ತಾ ಸಾಗುವುದಲ್ಲದೆ, ಅರಸು ಕಾಂಗ್ರೆಸ್ (ಐ)ನಿಂದ ಉಚ್ಚಾಟಿತರಾಗುತ್ತಾರೆ.

**ಕರ್ನಾಟಕ ಮತ್ತು ದೇವರಾಜ ಅರಸು**

ಕರ್ನಾಟಕ ೧೯೭೭ರ ಲೋಕಸಭಾ ಚುನಾವಣೆಯಲ್ಲಿ ರಾಜ್ಯ ಪ್ರಬಲ ಕಾಂಗ್ರೆಸ್ ವಲಯವಾಗಿ ಗುರುತಿಸಿಕೊಂಡಿತು. ಪ್ರಾದೇಶಿಕ ರಾಜಕಾರಣದಲ್ಲಿ ಪ್ರಭಾವಿ ರಾಜಕಾರಣಿಯಾಗಿ ಅರಸು ಕಂಡುಬರುತ್ತಾರೆ. ಹಾಗಾಗಿ ಈ ಸಂದರ್ಭದ ಸುದ್ದಿ ಮಾಧ್ಯಮಗಳಲ್ಲಿ ರಾಜ್ಯ ರಾಜಕಾರಣದ ವಿಚಾರಗಳೆಲ್ಲವೂ ವ್ಯಕ್ತಿಗತ ನೆಲೆಯಲ್ಲೇ ಪ್ರಕಟವಾಗಿವೆ. ಕರ್ನಾಟಕದಲ್ಲಿ ೧೯೭೮ರ ವಿಧಾನಸಭಾ ಚುನಾವಣೆಯಲ್ಲಿ ಕಾಂಗ್ರೆಸ್ (ಐ) ಹಾಗೂ ಅರಸರು ಪುನಃ ಅಧಿಕಾರಕ್ಕೆ ಬರುವುದನ್ನು ಸಮೂಹ ಮಾಧ್ಯಮಗಳು ಅನುಮಾನಾಸ್ಪದವಾಗಿ ನೋಡುತ್ತಿದ್ದವು. ಈ ಚುನಾವಣಾ ಫಲಿತಾಂಶ ಜನತಾ ಸರ್ಕಾರಕ್ಕೆ ಅನುಕೂಲಕರವಾಗಿರುವ ಸಾಧ್ಯತೆಯ ಕುರಿತು ಹೆಚ್ಚಿನ ಚರ್ಚೆ ನಡೆಯುತ್ತಿತ್ತು. ಪ್ರಮುಖ ನಿಯತಕಾಲಿಕೆಗಳಲ್ಲಿ 'ದಕ್ಷಿಣದಲ್ಲಿ ನಡೆಯುವ ಮತದಾನವು ರಾಜಕೀಯ ಧ್ರುವೀಕರಣದ ಮೇಲೆ ಪ್ರಭಾವ ಬೀರಲಿದೆ. ಜನತಾ ಅಲೆ ಹಾಗೂ ಕಾಂಗ್ರೆಸ್ ಪಕ್ಷದ ದುಃಸ್ಥಿತಿ ಮುಂಬರುವ ದಕ್ಷಿಣದ ರಾಜ್ಯ ಚುನಾವಣೆಗಳ ಮೇಲೆ ಪ್ರಭಾವ ಬೀರುವ ಸಾಧ್ಯತೆಗಳಿದ್ದು, ಕುತೂಹಲದ ವಾತಾವರಣವನ್ನು ಸೃಷ್ಟಿಸಿತ್ತು' ಎಂದೆಲ್ಲ ಚುನಾವಣಾ ಪೂರ್ವದಲ್ಲಿ ವಿಮರ್ಶಿಸಿದ್ದವು. ಆದರೆ ಚುನಾವಣೆಯ ನಂತರ 'ರಾಜ್ಯಕ್ಕೆ ಮತ್ತೆ ಇಂದಿರಾ ಕಾಂಗ್ರೆಸ್ ಸರ್ಕಾರ', 'ವಿಜಯದ ಶಿಲ್ಪಿ ಅರಸು ಮತ್ತೆ ಮುಖ್ಯಮಂತ್ರಿ', ಎಂದು ಮಾಧ್ಯಮಗಳು ಫಲಿತಾಂಶವನ್ನು ಬಿಂಬಿಸಿದವು. ಈ ವರದಿಗಳಲ್ಲಿ ಅರಸರ ನಾಯಕತ್ವ, ರಾಜಕಾರಣ, ಪಕ್ಷ ಸಂಘಟನೆಯ ನೆಲೆಗಳಿಗೆ ಪೂರ್ಣವಾಗಿ ಒತ್ತು ನೀಡಲಾಗಿದೆ. ೧೯೭೮ರ ವಿಧಾನಸಭಾ ಚುನಾವಣೆಯ ತರುವಾಯ ಅರಸರು ಮುತ್ಸದ್ದಿ ರಾಜಕಾರಣಿಯಾಗಿ ಬೆಳೆದಿರುವುದನ್ನು ನೋಡಬಹುದು. ಈ ಹಂತದಲ್ಲೇ ಪ್ರಬಲ ಪ್ರಾದೇಶಿಕ ರಾಜಕಾರಣಿಯಿಂದ ರಾಷ್ಟ್ರೀಯ ನೆಲೆಯ ರಾಜಕಾರಣಿಯಾಗಿ ಅವರು ಬೆಳೆದಿರುವುದು ಕಂಡುಬರುತ್ತದೆ. ಮುಂದೆ ಕಾಂಗ್ರೆಸ್ ಪಕ್ಷಗಳ ಆಂತರಿಕ ಭಿನ್ನತೆ ಮತ್ತು ಒಡೆದುಹೋಗಿದ್ದ ಕಾಂಗ್ರೆಸ್ ಪಕ್ಷವನ್ನು ಒಗ್ಗೂಡಿಸುವ ಮೂಲಕ ಜನತಾ ಪಕ್ಷಕ್ಕೆ ಪರ್ಯಾಯವಾಗಿ ಪ್ರಬಲ ಪಕ್ಷ ರೂಪಿಸುವ ಪ್ರಯತ್ನದಲ್ಲಿ ಅರಸರು ನಿರತರಾಗುವರು. ಈ ಹಂತದಲ್ಲಿ ಅರಸರು ಅಂತರ್ ರಾಜ್ಯ, ಕೇಂದ್ರ ಮತ್ತು ರಾಜ್ಯಗಳ ಸಂಬಂಧ, ಕಾಂಗ್ರೆಸ್ ಪಕ್ಷದ ಪುನರ್‌ಸಂಘಟನೆಗಳಂತಹ ವಿಚಾರಗಳ ಕುರಿತು ರಾಷ್ಟ್ರಮಟ್ಟದಲ್ಲಿ ಹೇಳಿಕೆ ನೀಡಿರುವುದು ಗಮನಸೆಳೆಯುವುದು. ಇದು ರಾಷ್ಟ್ರೀಯ ನಾಯಕರಾಗಿ ಅವರು ಬೆಳೆಯುತ್ತಿರುವ ಮೊದಲ ಹಂತದ ಲಕ್ಷಣಗಳಾಗಿವೆ.

ಚಿಕ್ಕಮಗಳೂರಿನ ಮಧ್ಯಂತರ ಚುನಾವಣೆಯು ಇಂದಿರಾ ಗಾಂಧಿ ಅವರು ರಾಜಕಾರಣದ ಮುಖ್ಯಧಾರೆಗೆ ಮರಳಲು ಪ್ರಮುಖ ನೆಲೆಗಟ್ಟನ್ನು ಒದಗಿಸಿತು. ಇದು ರಾಷ್ಟ್ರದಾದ್ಯಂತ ಸಂಚಲನವನ್ನುಂಟುಮಾಡಿತ್ತು. ಇದು ಇಂದಿರಾ ಗಾಂಧಿ ಮತ್ತು ಜನತಾ ಪಕ್ಷದ ನಡುವಣ ಚುನಾವಣಾ ಸಂಘರ್ಷ ಎಂಬಂತೆ ಬಿಂಬಿತವಾಗಿತ್ತು. ಆದರೆ ಜನತಾ ಪಕ್ಷದ ಅಭ್ಯರ್ಥಿ ವೀರೇಂದ್ರ ಪಾಟೀಲರು ವ್ಯಕ್ತಿಗತ ನೆಲೆಯಲ್ಲಿ ಬಿಂಬಿತವಾಗಿರಲಿಲ್ಲ. ಈ ಚುನಾವಣೆ ರಾಜಕೀಯ ಪಕ್ಷಗಳ ಧ್ರುವೀಕರಣದಲ್ಲಿ ಮತ್ತೊಂದು ಹೆಜ್ಜೆಯಾಗಿ, ರಾಜಕೀಯ ಪಕ್ಷಗಳ ಪ್ರಾಮುಖ್ಯತೆ ಮತ್ತು ಕಾರ್ಯನೀತಿಗೆ ಇನ್ನೂ ಹೆಚ್ಚಿನ ಖಚಿತತೆಯನ್ನು ನೀಡಿತು. ಜನತಾ ಪಕ್ಷ, ಡಿಎಂಕೆ ಮತ್ತು ಸಿಪಿಐ (ಎಂ) ಮತ್ತಿತರ ರಾಜಕೀಯ ಪಕ್ಷಗಳು ಜನತಾ ಪಕ್ಷದ ಅಭ್ಯರ್ಥಿಯ ಪರವಾಗಿದ್ದರೆ, ಎಐಡಿಎಂಕೆ ಕಾಂಗ್ರೆಸ್ಸನ್ನು ಬೆಂಬಲಿಸಿತು.

ಚಿಕ್ಕಮಗಳೂರು ಚುನಾವಣೆಯ ಫಲಿತಾಂಶ ರಾಷ್ಟ್ರ ಮತ್ತು ರಾಜ್ಯ ರಾಜಕಾರಣಕ್ಕೆ ಮಹತ್ವದ ತಿರುವನ್ನು ನೀಡಿತು. ಚುನಾವಣಾ ಫಲಿತಾಂಶದ ನೆಲೆಯಲ್ಲಿ ಸಾಮಾನ್ಯವಾಗಿ ಚರ್ಚಿತವಾದ ವಿಚಾರಗಳೆಂದರೆ 'ಇಂದಿರಾ ಗೆಲುವು–ಸಮರ್ಥ ನಾಯಕತ್ವಕ್ಕೆ ಜನರ ಬೇಡಿಕೆಯೇ?', 'ಇಂದಿರಾ ಯಶಸ್ಸಿನ ಪರಿಣಾಮಗಳು', 'ಶ್ರೀ ದೇವರಾಜ ಅರಸು ಮುತ್ಸದ್ದಿತನ' ಇವೇ ಮೊದಲಾದವುಗಳಾಗಿವೆ. ಕಾಂಗ್ರೆಸ್ ಪಕ್ಷದ ಪುನಶ್ಚೇತನ, ರಾಷ್ಟ್ರ ರಾಜಕಾರಣ ಹಾಗೂ ವ್ಯಕ್ತಿಗತ ನೆಲೆಯಲ್ಲಿ ದೇವರಾಜ ಅರಸರ ರಾಜಕಾರಣದ ಪ್ರೌಢತನ ಮೊದಲಾದ ವಿಚಾರಗಳು ಪದೇಪದೇ ಚರ್ಚೆಗೆ ಒಳಗಾಗುತ್ತಿದ್ದವು. ಇಲ್ಲಿಂದೀಚೆಗೆ ಕರ್ನಾಟಕ ರಾಜಕಾರಣದಲ್ಲಿ ಮತ್ತೊಮ್ಮೆ ಸ್ಥಿತ್ಯಂತರಗಳು ರೂಪುಗೊಂಡು, ಕಾಂಗ್ರೆಸ್ (ಐ) ಪುನಃ ವಿಭಜನೆಗೆ ಕಾರಣವಾಯಿತು. ಚಿಕ್ಕಮಗಳೂರು ಚುನಾವಣೆಯ ನಂತರ ರಾಷ್ಟ್ರ ರಾಜಕಾರಣ ಮತ್ತು ಕರ್ನಾಟಕದ ಪ್ರಾದೇಶಿಕ ರಾಜಕಾರಣದಲ್ಲಿ ತೀವ್ರತರ ಸ್ಥಿತ್ಯಂತರಗಳು ಕಂಡುಬಂದವು. ಜನತಾ ಪಕ್ಷದೊಳಗಿನ ಆಂತರಿಕ ಭಿನ್ನತೆಗಳು ಸರ್ಕಾರದ ಪತನಕ್ಕೆ ಕಾರಣವಾದವು. ಅದೇ ಸಂದರ್ಭದಲ್ಲಿ ಕಾಂಗ್ರೆಸ್ (ಐ) ಪಕ್ಷದೊಳಗೆ ಬಿರುಸಾದ ರಾಜಕಾರಣ ಹಾಗೂ ನಾಯಕತ್ವದ ಪ್ರಶ್ನೆಗಳು ಪ್ರಾಮುಖ್ಯತೆ ಪಡೆದುಕೊಂಡವು. ಇವು ಪ್ರಾದೇಶಿಕ ರಾಜಕಾರಣದಲ್ಲಿನ ಪಕ್ಷ ರಾಜಕಾರಣ ಮತ್ತು ವ್ಯಕ್ತಿ ರಾಜಕಾರಣದ ನೆಲೆಗಳಲ್ಲಿ ಕಂಡುಬಂದ ತಕ್ಷಣದ ಪರಿಣಾಮಗಳು. ಈ ಹಂತದಿಂದ ಹಲವಾರು ಸ್ಥಳೀಯ ಮತ್ತು ರಾಷ್ಟ್ರೀಯ ನಾಯಕರು ಅರಸು ನಾಯಕತ್ವದ ಬಗ್ಗೆ ವಿಭಿನ್ನ ಪ್ರತಿಕ್ರಿಯೆಗಳನ್ನು ವ್ಯಕ್ತಪಡಿಸತೊಡಗಿದರು. ಇಂದಿರಾ ಕಾಂಗ್ರೆಸ್‌ನಲ್ಲಿರುವ ಏಕೈಕ ಸ್ವತಂತ್ರ ವ್ಯಕ್ತಿತ್ವದ ಪ್ರಾದೇಶಿಕ ನೆಲೆಯ ರಾಷ್ಟ್ರೀಯ ನಾಯಕನಾಗಿ, ಅರಸರ ಕುರಿತು ಹೆಚ್ಚು ಚರ್ಚೆಗಳು ನಡೆಯತೊಡಗಿದ್ದವು. ಚುನಾವಣೆಯ ಹಿನ್ನೆಲೆಯಲ್ಲಿ ಇಂದಿರಾ ಗಾಂಧಿ ಮತ್ತು ಅರಸರ ಮಧ್ಯೆ ಉಂಟಾಗಿದ್ದ ಭಿನ್ನಾಭಿಪ್ರಾಯ ಹಾಗೂ ಪ್ರಾದೇಶಿಕ ಅಸಮಾಧಾನ ಅರಸರ ವಿರುದ್ಧ ಆರೋಪದ ಬೆಳವಣಿಗೆಯ ರೂಪದಲ್ಲಿ ಹೊರಹೊಮ್ಮಿದವು. ಆರಂಭಿಕ ಹಂತದಲ್ಲಿ ಈ ಭಿನ್ನಾಭಿಪ್ರಾಯಗಳು ಸಂಜಯ್ ಗಾಂಧಿ ಹಿನ್ನೆಲೆಯಲ್ಲಿ ಕಂಡುಬಂದಿವೆ. ಆದರೆ ಕ್ರಮೇಣ ಅರಸು ಮತ್ತು ಇಂದಿರಾ ಗಾಂಧಿ ಮಾತ್ರ ಕಂಡುಬರುತ್ತಿದ್ದು ವೈಯಕ್ತಿಕ ನಿಲುವುಗಳು ಸ್ಥಾನಮಾನದ ಪ್ರಶ್ನೆಯಾಗಿ ಬದಲಾದಂತೆ ತೋರುವುದು. ಈ ಹೊತ್ತಿಗೆ ಬಿಕ್ಕಟ್ಟು ಅಧಿಕೃತವಾಗಿ ಪತ್ರಿಕಾ ಮಾಧ್ಯಮಗಳಲ್ಲಿ ಪ್ರಕಟವಾಗಿತ್ತು. ಪ್ರಾದೇಶಿಕ ಕಾಂಗ್ರೆಸ್ ಸಮಿತಿಯ ಅಧ್ಯಕ್ಷ ಸ್ಥಾನ ತ್ಯಜಿಸಲು ಹೈಕಮಾಂಡ್ ಆಜ್ಞೆ ಹಾಗೂ ಅದಕ್ಕೆ ಜಗ್ಗದ ಅರಸು ವರ್ತನೆ ಕುರಿತ ಅನೇಕ ವರದಿಗಳು ಪ್ರಕಟವಾಗಿದ್ದವು. ಈ ಆಂತರಿಕ ಸಂಘರ್ಷದ ಮೂಲ ಪಕ್ಷದ ಮೇಲಿನ ನಿಯಂತ್ರಣ ಸಾಧಿಸುವುದಾಗಿತ್ತು. ೧೯೬೯ರಿಂದ ಕಾಂಗ್ರೆಸ್ ವಿಭಜನೆಗಳಲ್ಲಿ ಹೊರಹೋಗಿದ್ದ ಎಲ್ಲ ಕಾಂಗ್ರೆಸ್ ಪಕ್ಷಗಳೂ ಒಟ್ಟಾಗಿ, ಪರ್ಯಾಯ ರಾಜಕೀಯ ಪಕ್ಷ ರೂಪಿಸುವ ಪ್ರಯತ್ನ ೧೯೭೮ರ ವಿಧಾನಸಭಾ ಚುನಾವಣೆಯ ತರುವಾಯ ಅರಸು ಅವರ ನೇತೃತ್ವದಲ್ಲಿ ಜರುಗತೊಡಗಿತ್ತು. ಈ ವಿಭಜನೆಗಳ ಮೇಲೆ ಇಂದಿರಾ ಗಾಂಧಿ ನಾಯಕತ್ವದ ವಿರೋಧಿ ನೆಲೆಯು ನಿರ್ಣಾಯಕವಾಗಿ ಕಾರ್ಯ ನಿರ್ವಹಿಸಿತ್ತು. ಕಾಂಗ್ರೆಸ್ ಪಕ್ಷವನ್ನು ಸದೃಢಗೊಳಿಸಲು ಈ ವಲಯದೊಡನೆ ಅರಸು ಸದಾ ಸಂಪರ್ಕದಲ್ಲಿದ್ದರು. ಇದೇ ರಾಷ್ಟ್ರೀಯ ರಾಜಕಾರಣದಲ್ಲಿ ಅರಸು ಅವರ ಬೆಳವಣಿಗೆಗೆ ವೇದಿಕೆಯನ್ನು ಒದಗಿಸಿಕೊಟ್ಟಿತ್ತು. ರಾಷ್ಟ್ರದಾದ್ಯಂತ ಅರಸು ಅವರ ಈ ಕ್ರಿಯೆಗೆ ಪೂರಕ ಪ್ರತಿಕ್ರಿಯೆಗಳು ಹರಿದು ಬರುತ್ತಿದ್ದವು. ಇದಕ್ಕೆ ಪಶ್ಚಿಮ ಬಂಗಾಳದ ಕಾಂಗ್ರೆಸ್(ಐ), ಮಹಾರಾಷ್ಟ್ರ , ಬಿಹಾರ, ತಮಿಳುನಾಡು, ಆಂಧ್ರಪ್ರದೇಶಗಳ ಅತೃಪ್ತ ನಾಯಕರು, ರಾಷ್ಟ್ರೀಯ ನಾಯಕರಾದ ಬರೂವಾ ಮತ್ತು ಜನತಾ ಸರ್ಕಾರದ ನಾಯಕರ ಬೆಂಬಲ ಸಹ ದೊರಕಿತ್ತು. ಆದರೆ ಪ್ರಾದೇಶಿಕ ನೆಲೆಯಲ್ಲಿ ಅರಸರ ನಾಯಕತ್ವದ ವಿರೋಧಿ ಬೆಳವಣಿಗೆಗಳು ತೀವ್ರತೆಯನ್ನು ಪಡೆಯತೊಡಗಿದ್ದವು. ಅಲ್ಲದೆ, ಕರ್ನಾಟಕದ ಪ್ರಾದೇಶಿಕ ರಾಜಕಾರಣದಲ್ಲಿ ಜನತಾ ಪಕ್ಷದ ಪ್ರತಿಕ್ರಿಯೆಯೂ ಬೇರೆಯದೇ ಆಗಿತ್ತು. ರಾಷ್ಟ್ರೀಯ ವಲಯದಲ್ಲಿ ಅರಸು ಅವರ ರಾಜಕಾರಣವನ್ನು

ಗಮನಿಸುತ್ತಿದ್ದ ರಾಜಕೀಯ ವಲಯಗಳನ್ನು, ಅದರಲ್ಲಿಯೂ ವಿಶೇಷವಾಗಿ ಕಾಂಗ್ರೆಸ್ ಪಕ್ಷದೊಳಗಿನ ಸಾಂಪ್ರದಾಯಿಕ ನಾಯಕತ್ವವನ್ನು ವಿರೋಧಿಸುತ್ತಿದ್ದ ಬಣಗಳನ್ನು ಮಾತ್ರವೇ ಸಂಪರ್ಕಿಸಲು ಸಾಧ್ಯವಾಗಿತ್ತು. ಇದೇ ಪ್ರಾದೇಶಿಕ ರಾಜಕಾರಣದಲ್ಲಿ ಅರಸರ ವಿಫಲತೆಗೆ ಕಾರಣವಾಯಿತು. ಪರಿಣಾಮವಾಗಿ ಅರಸು ಅವರು ರಾಜ್ಯ ರಾಜಕಾರಣದಲ್ಲಿ ನೇಪಥ್ಯಕ್ಕೆ ಸರಿಯಲು ಆರಂಭಿಸಿದರು.

ಆಗ್ಗೆ ಕರ್ನಾಟಕ ರಾಜ್ಯ ರಾಜಕಾರಣದಲ್ಲಿ ಕೆಪಿಸಿಸಿ (ಐ)ನ ಪ್ರಾದೇಶಿಕ ಸಮಿತಿಯನ್ನು ೧೯೭೮ರ ಜೂನ್ ೧೫ರಂದು ವಿಸರ್ಜಿಸಿದರು. ಮುಂದೆ ಬಂಗಾರಪ್ಪನವರನ್ನು ಅಧ್ಯಕ್ಷರನ್ನಾಗಿ ಆರಿಸುವ ಮೂಲಕ ದೇವರಾಜ ಅರಸು ಅವರನ್ನು ಕಾಂಗ್ರೆಸ್ ಪಕ್ಷದೊಳಗೆ ಕಡೆಗಣಿಸಲಾಯಿತು. ಇದು ಪ್ರಾದೇಶಿಕ ನೆಲೆಯಲ್ಲಿ ಪಕ್ಷ ವಿಭಜನೆಗೆ ತಕ್ಷಣದ ಕಾರಣವಾಗಿ ಪರಿಣಮಿಸಿತು. ರಾಜ್ಯದಲ್ಲಿ ವ್ಯಕ್ತಿ ರಾಜಕಾರಣ ಮತ್ತು ಪ್ರಾದೇಶಿಕ ರಾಜಕಾರಣ ಇವೆರಡೂ ಭಿನ್ನ ಹಿತಾಸಕ್ತಿಯ ವಲಯಗಳಾಗಿ ಕಂಡುಬರುತ್ತವೆ. ಪ್ರಾದೇಶಿಕ ನೆಲೆಯಲ್ಲಿ ಪಕ್ಷವನ್ನು ಬಲಪಡಿಸುವ ಕಾರ್ಯ ಮತ್ತು ಕರ್ನಾಟಕ ಸರ್ಕಾರದ ಮೇಲಿನ ಅಧಿಕಾರ ಕಾಂಗ್ರೆಸ್ (ಐ)ಗೆ ಸೇರಿರುವ ಹಿನ್ನೆಲೆಯಲ್ಲಿ ಅರಸರಿಗೆ ರಾಜೀನಾಮೆ ನೀಡಬೇಕೆಂದು ಮತ್ತು ಶಾಸಕಾಂಗವನ್ನು ವಿಸರ್ಜಿಸಬೇಕೆಂದು ವಿರೋಧ ಪಕ್ಷಗಳಿಂದ ಸಲಹೆ, ಒತ್ತಡಗಳು ಕೇಳಿಬರುತ್ತಿದ್ದವು. ಜೊತೆಗೆ ಅರಸು ಅವರ ನಾಯಕತ್ವ, ಮುತ್ಸದ್ದಿತನ, ಕಾರ್ಯನೀತಿಯನ್ನು ಬೆಂಬಲಿಸುತ್ತ ಪ್ರಾದೇಶಿಕ ಪಕ್ಷ ಕಟ್ಟುವ ಸಲಹೆಗಳನ್ನು ಪತ್ರಿಕೆಗಳಲ್ಲಿ ಕಾಣಬಹುದು.

ಪ್ರಾದೇಶಿಕ ನೆಲೆಯಲ್ಲಿ ಅರಸರು ಎದುರಿಸುತ್ತಿದ್ದ ಸಮಸ್ಯೆ ಹಲವಾರು ವರ್ಷ ಗಳಿಂದ ಕಾಂಗ್ರೆಸ್ ಪಕ್ಷದೊಳಗೆ ಬೆಳೆದುಬಂದ ಪ್ರತಿಭಟನೆ ಅಥವಾ ವಿರೋಧಗಳಿಗೆ ಮತ್ತೊಂದು ಉದಾಹರಣೆ, ಅಷ್ಟೆ. ಸ್ಥಳೀಯ ಸರ್ಕಾರದ ಸಾಧನೆಗಳನ್ನು ರಾಷ್ಟ್ರೀಯ ನೆಲೆಯಲ್ಲಿ, ವ್ಯಕ್ತಿ ರಾಜಕಾರಣದಲ್ಲಿ ಇಂದಿರಾ ಗಾಂಧಿ ಅವರಿಗೆ ಅರ್ಪಿಸಲಾಗಿತ್ತು. ಭಿನ್ನಾಭಿಪ್ರಾಯ ತೀವ್ರಗೊಳ್ಳುವ ಹಂತದಲ್ಲಿ ಅರಸರ ಹೆಸರಿನಲ್ಲಿ ಇದರ ಮರು ವ್ಯಾಖ್ಯಾನ ಬೃಹತ್ ಪ್ರಮಾಣದಲ್ಲಿ ಆರಂಭವಾಗಿತ್ತು. ಪರ್ಯಾಯ ರಾಜಕೀಯ ಸಂಘಟನೆಯನ್ನು ಅರಸು ಅವರು ಕರ್ನಾಟಕದ ಹೊರಗೆ ಮಾಡುತ್ತಿದ್ದರು. ಆದರೆ ರಾಜ್ಯದ ಪ್ರಾದೇಶಿಕ ರಾಜಕಾರಣ ಮತ್ತು ಸ್ಥಳೀಯ ರಾಜಕಾರಣದೊಳಗಿನ ಸಂಬಂಧಗಳು ಸಂಪರ್ಕ ಕಡಿತಗೊಂಡಿದ್ದು, ಆರಂಭದಲ್ಲೇ ತಿಳಿಯದೆ ಹೋಗಿ, ನಿಧಾನವಾಗಿ ಅರಿವಿಗೆ ಬಂದಂತೆ ತೋರುತ್ತದೆ. ಈ ಬೆಳವಣಿಗೆಗಳು ಪ್ರಜಾಪ್ರಭುತ್ವದ ನೆಲೆಯಲ್ಲಿ ವ್ಯಕ್ತಿ ಮತ್ತು ಪಕ್ಷ ರಾಜಕಾರಣ ಪಡೆದ ಸ್ವರೂಪದ ಪ್ರಕ್ರಿಯೆಗಳ ಮೇಲೆ ಬೆಳಕು ಚೆಲ್ಲುತ್ತವೆ. ರಾಷ್ಟ್ರೀಯ ನೆಲೆಯಲ್ಲಿ ಜನತಾ ಸರ್ಕಾರ ಅರಸರನ್ನು ಬೆಂಬಲಿಸುತ್ತಿದ್ದಂತೆ ಕಂಡರೂ, ಪ್ರಾದೇಶಿಕವಾಗಿ ಜನತಾ ಪಕ್ಷದ ಮೌನ ಪ್ರಾದೇಶಿಕ ರಾಜ ಕಾರಣದ ಮತ್ತೊಂದು ಮಗ್ಗುಲನ್ನು ತೆರೆದಿಡುವುದು. ಪ್ರಾದೇಶಿಕ ರಾಜಕಾರಣವು ಪಕ್ಷ, ವ್ಯಕ್ತಿಗಳನ್ನು ಮೀರಿ ಕಾರ್ಯ ನಿರ್ವಹಿಸುವುದನ್ನು ಇಲ್ಲಿ ಗುರುತಿಸಬಹುದು. ಇಲ್ಲಿ ಸಮೂಹ ರಾಜಕಾರಣದ ಪಾತ್ರ ತುಂಬ ವ್ಯಾಪಕವಾಗಿದೆ.

೧೯೮೦ರ ಲೋಕಸಭಾ ಚುನಾವಣೆಯಲ್ಲಿ ಇಂದಿರಾ ಗಾಂಧಿಯವರ ನೇತೃತ್ವದ ಕಾಂಗ್ರೆಸ್ ಪಕ್ಷ ಬಹುಮತ ಪಡೆಯುವಲ್ಲಿ ಯಶಸ್ವಿಯಾಯಿತು. ೧೯೭೭ರಿಂದ ೧೯೮೦ರವರೆಗೆ ಕಂಡುಬಂದ ಸರ್ಕಾರದ ಅಸ್ಥಿರತೆಯನ್ನು ನೋಡಿದ ಜನರು ಸದೃಢ ಸರ್ಕಾರವನ್ನು ಬಯಸಿದಂತಿತ್ತು. ಈ ಚುನಾವಣೆಯ ನಂತರ ರಾಜಕೀಯ ಪಕ್ಷಗಳೊಳಗೆ ಮತ್ತೊಮ್ಮೆ ಬೃಹತ್ ಪ್ರಮಾಣದ ಸಂಚಲನ ಕಂಡುಬಂದಿತು. ಕಾಂಗ್ರೆಸ್ (ಯು) ಕರ್ನಾಟಕದಲ್ಲಿ ಒಂದು ಕ್ಷೇತ್ರದಲ್ಲಿಯೂ ಗೆಲುವು ಸಾಧಿಸಲು ಸಾಧ್ಯವಾಗಲಿಲ್ಲ. ಆದರೆ ರಾಷ್ಟ್ರದಾದ್ಯಂತ ೧೩ ಕ್ಷೇತ್ರಗಳಲ್ಲಿ ವಿಜಯ ಗಳಿಸಿತ್ತು. ಬಿಹಾರದಲ್ಲಿ ಚುನಾವಣೆಗೆ ನಿಂತ ೧೬ ಅಭ್ಯರ್ಥಿಗಳಲ್ಲಿ ನಾಲ್ವರು ಜಯ ಗಳಿಸಿದ್ದರು. ಆಂಧ್ರಪ್ರದೇಶ, ಗೋವಾ, ದಾಮನ್ ಮತ್ತು ದಿಯು, ಜಮ್ಮು ಮತ್ತು ಕಾಶ್ಮೀರ, ಮಹಾರಾಷ್ಟ್ರ ಹಾಗೂ ರಾಜಸ್ಥಾನದಲ್ಲಿ ತಲಾ ಒಂದೊಂದು ಕ್ಷೇತ್ರದಲ್ಲಿ ಕಾಂಗ್ರೆಸ್ (ಯು) ಗೆಲುವು ಕಂಡಿತ್ತು. ಕೇರಳದಲ್ಲಿ ೩ ಕ್ಷೇತ್ರಗಳಲ್ಲಿ ಆರಿಸಿಬಂದಿತ್ತು. ಚುನಾವಣೆಯಲ್ಲಿ ಕಾಂಗ್ರೆಸ್ (ಐ) ಬಹುಮತ ಸಾಧಿಸಿದ್ದರಿಂದ ಚುನಾವಣಾ ಪೂರ್ವದಲ್ಲಿ ಪ್ರಬಲ ರಾಜಕೀಯ ಪಕ್ಷಗಳಾಗಿ ಗುರುತಿಸಲ್ಪಟ್ಟ ಕಾಂಗ್ರೆಸ್ (ಯು) ಮತ್ತು ಜನತಾ ಪಕ್ಷಗಳು ಹೊಂದಿದ್ದ ಹೊಂದಾಣಿಕೆಗಳು ತಮ್ಮ ನೆಲೆಯನ್ನು ಕಳೆದುಕೊಳ್ಳತೊಡಗಿದ್ದವು. ಪರಿಣಾಮವಾಗಿ, ರಾಜಕೀಯ ಪಕ್ಷಗಳ ಧ್ರುವೀಕರಣ ಮತ್ತು ರಾಜಕಾರಣಿಗಳ ಪಕ್ಷಾಂತರ ಹೊಸ ರೂಪದಲ್ಲಿ, ತೀವ್ರಸ್ವರೂಪದಲ್ಲಿ ೧೯೮೧ರ ಕೊನೆಯವರೆಗೆ ಮುಂದುವರಿಯಿತು. ಬಾಬು ಜಗಜೀವನ್ ರಾಮ್ ಅವರು ಚುನಾವಣೆಯ ನಂತರ ಜನತಾ ಪಕ್ಷ ತೊರೆದು ಕಾಂಗ್ರೆಸ್ (ಯು) ಬಣಕ್ಕೆ ಸೇರಿದರು. ಆರಂಭದಿಂದಲೇ ಇದ್ದ ಸಣ್ಣಪುಟ್ಟ ಭಿನ್ನಾಭಿಪ್ರಾಯಗಳು ೧೯೮೧ರ ಹೊತ್ತಿಗೆ ದೇವರಾಜ ಅರಸು ಅವರು ಕಾಂಗ್ರೆಸ್ (ಯು) ತೊರೆಯಲು ಪೂರಕವಾಯಿತು. ಚುನಾವಣಾ ಪೂರ್ವದಲ್ಲಿ ಹಲವಾರು ಕಾರಣಗಳಿಂದ ಕುತೂಹಲ ಉಂಟುಮಾಡಿದ್ದ ಹಾಗೂ ಭರವಸೆ ಹುಟ್ಟುಹಾಕಿದ್ದ ಕಾಂಗ್ರೆಸ್(ಯು) ಪಕ್ಷ ಅನೇಕ ರಾಜಕೀಯ ರೂಪಾಂತರಗಳಿಗೆ ಸಾಕ್ಷಿಯಾಯಿತು. ೧೯೮೧ರ ಕೊನೆಯ ಹೊತ್ತಿಗೆ ದೇವರಾಜ್ ಅರಸರು ಕಾಂಗ್ರೆಸ್ (ಯು) ತೊರೆದು ರಾಷ್ಟ್ರ ರಾಜಕಾರಣಕ್ಕೆ ವಿದಾಯ ಹಾಡಿದರು. ಮುಂದೆ ಕ್ರಾಂತಿರಂಗ ಎಂಬ ಪ್ರಾದೇಶಿಕ ಪಕ್ಷವನ್ನು ಬೆಳೆಸುವ ಕಾರ್ಯದಲ್ಲಿ ತೊಡಗಿಕೊಳ್ಳುವರು. ಅರಸರ ನಿಧನದ ನಂತರ ಕ್ರಾಂತಿರಂಗದ ನೇತೃತ್ವವನ್ನು ಎಸ್. ಬಂಗಾರಪ್ಪ ಅವರು ವಹಿಸಿಕೊಳ್ಳುವರು. ಮುಂದೆ ೧೯೮೩ರಲ್ಲಿ ಕರ್ನಾಟಕದಲ್ಲಿ ಮೊದಲ ಕಾಂಗ್ರೆಸೇತರ ಆಡಳಿತ ಪಕ್ಷ ಬರಲು ಇದರ ಪ್ರಭಾವ ಅಪಾರವಾಗಿದೆ.

ಕರ್ನಾಟಕದಲ್ಲಿ ಪ್ರಬಲವಾದ ಪ್ರಾದೇಶಿಕ ರಾಜಕೀಯ ಪಕ್ಷದ ಬೆಳವಣಿಗೆ ಕಂಡುಬರುವುದಿಲ್ಲವಾದರೂ ಪ್ರಾದೇಶಿಕ ರಾಜಕಾರಣ ಪ್ರಬಲವಾದ ಅಸ್ಮಿತೆಯನ್ನು ಹೊಂದಿದೆ. ೧೯೭೭ರಿಂದ ೧೯೭೮ರವರೆಗೆ ಅನೇಕ ಸಂಕೀರ್ಣ ಸಂದರ್ಭ ಗಳಲ್ಲಿಯೂ ರಾಜ್ಯದಲ್ಲಿ ಕಾಂಗ್ರೆಸ್ ವಿಜಯ ಸಾಧಿಸಲು ಕಾರಣರಾದರೂ ಸಹ ವ್ಯಕ್ತಿ ರಾಜಕಾರಣದ ನೆಲೆಯಲ್ಲಿ ಪಕ್ಷವನ್ನು ಮೀರಿ ಬೆಳೆಯಲು ಅರಸರಿಗೆ ಅವಕಾಶ ದೊರೆಯುವುದಿಲ್ಲ. ಹಾಗೆ ತುರ್ತುಪರಿಸ್ಥಿತಿಯೋತ್ತರದಲ್ಲಿ ರಾಷ್ಟ್ರೀಯ ನೆಲೆಯಲ್ಲಿ ಜನತಾ ಪಕ್ಷ ಅರಸು ಅವರೊಡನೆ ಮೈತ್ರಿ ಸಾಧಿಸಿ ಸಹಕರಿಸಿದರೂ ಪ್ರಾದೇಶಿಕ ನೆಲೆಯಲ್ಲಿ ಸಹಕಾರ ದೊರಕುವುದಿಲ್ಲ. ಇದು ಪ್ರಾದೇಶಿಕ ರಾಜಕಾರಣದ ಹಲವು ಮಗ್ಗಲುಗಳ ಮೇಲೆ ಬೆಳಕು ಚೆಲ್ಲುವುದು. ಅಲ್ಲದೆ ಅರಸು ಅವರು ಬೆಳೆಸಿದ ಅನೇಕ ಹಿಂದುಳಿದ ವರ್ಗದ ನಾಯಕರು ಮುಂದೆ ರಾಜ್ಯ ರಾಜಕಾರಣದಲ್ಲಿ ಪ್ರಮುಖ ಸ್ಥಾನಮಾನಗಳನ್ನು ಅಲಂಕರಿಸುವರು. ಈ ನಿಟ್ಟಿನಲ್ಲಿ ಎಸ್. ಬಂಗಾರಪ್ಪ, ಎಂ. ವೀರಪ್ಪ ಮೊಯಿಲಿ, ಎಸ್. ಧರ್ಮಸಿಂಗ್, ಮಲ್ಲಿಕಾರ್ಜುನ ಖರ್ಗೆ ಮತ್ತು ಕಾಗೋಡು ತಿಮ್ಮಪ್ಪ ಮೊದಲಾದವರು ಕಂಡುಬರುತ್ತಾರೆ. ಅವರು ದೇವರಾಜ ಅರಸು ಅವರ ಸಾಮಾಜಿಕ ನ್ಯಾಯದ ರಾಜಕಾರಣದ ಉತ್ತರಾಧಿಕಾರಿಗಳಂತೆ ಬಿಂಬಿಸಿಕೊಳ್ಳುವರು. ಆದರೂ ಅರಸು ಮತ್ತು ಇಂದಿರಾ ಗಾಂಧಿ ನಡುವಿನ ಬಿಕ್ಕಟ್ಟಿಗೆ ಸಂಬಂಧಿಸಿದಂತೆ ಇಂದಿರಾ ಗಾಂಧಿಯವರ ಪರ ಇದ್ದವರು. ಹಾಗೆ ೧೯೭೭ರಿಂದ ಪ್ರಸ್ತುತದವರೆಗೆ ಕರ್ನಾಟಕ ವಿಧಾನಸಭಾ ಮತ್ತು ಲೋಕಸಭಾಗಳಲ್ಲಿ ಆಡಳಿತ ಪಕ್ಷಗಳು ಬೇರೆ ಬೇರೆಯಾಗಿರುತ್ತವೆ. ಇದು ಪ್ರಾದೇಶಿಕ ರಾಜಕಾರಣದ ಮತ್ತೊಂದು ಸ್ವರೂಪ. ನೆರೆಯ ತಮಿಳುನಾಡು, ಆಂಧ್ರಪ್ರದೇಶಗಳಂತೆ ಪ್ರಬಲವಾದ ಪ್ರಾದೇಶಿಕ ಪಕ್ಷ ರೂಪುಗೊಳ್ಳದಿರಲು ಸಹ ಅರಸರ ಕಾಲದ ಪ್ರಾದೇಶಿಕ ರಾಜಕಾರಣ ಕಾರಣವಾಗಿದೆ. ಇಂದಿರಾ ಗಾಂಧಿ ಜಾರಿಗೊಳಿಸಿದ ತುರ್ತುಪರಿಸ್ಥಿತಿಯು ಪ್ರಜಾಪ್ರಭುತ್ವ ಮತ್ತು ಪ್ರಾದೇಶಿಕ ರಾಜಕಾರಣದಲ್ಲಿ ಸ್ಥಿತ್ಯಂತರವಾಗಿದ್ದು, ವಿಭಿನ್ನ ಸ್ವರೂಪಗಳಲ್ಲಿ ಹರಡಲು ಕಾರಣವಾಯಿತು.

**ಡಾ|| ರಶ್ಮಿ ಎಸ್.**
೪೭೦, ೩ನೇ ಕ್ರಾಸ್, ಬನಶಂಕರಿ ೩ನೇ ಹಂತ, ೩ನೇ ಫೇಸ್, ೨ನೇ ಬ್ಲಾಕ್, ಬೆಂಗಳೂರು–೮೫

# ಅಮೆರಿಕ ಪಚಮಮ

ಅಮೆರಿಕದ ಮೂಲ ನಿವಾಸಿಗಳಾದ ನೇಟಿವ್ ಇಂಡಿಯನ್ ಸಮುದಾಯದ ಭಾಷೆಯೊಂದರಲ್ಲಿ ಪಚಮಮ ಎಂದರೆ ಭೂಮಿತಾಯಿ. ಇಂದಿನ ಗ್ಲೋಬಲ್ ಜಗತ್ತಿನಲ್ಲಿ ಅಮೆರಿಕ ಆಸೆ, ಕನಸು, ಯಶಸ್ಸಿನ ಗಮ್ಯಸ್ಥಾನವೇ ಆಗಿದೆ. ಬಾಬಾಸಾಹೇಬ್ ಅಂಬೇಡ್ಕರ್ ಕುರಿತ ಭಾವುಕತೆ ನನ್ನನ್ನೂ ಅಮೆರಿಕ ದೇಶಕ್ಕೆ ಎಳೆಯಿತು. ದಲಿತನಾಗಿ ವಿದ್ವಾಂಸನಾಗಿದ್ದ, ದಲಿತನಾಗಿ ಇಂಗ್ಲಿಷಿನಲ್ಲಿ ಬರೆಯುತ್ತಿದ್ದ, ಮಾತನಾಡುತ್ತಿದ್ದ, ದಲಿತನಾಗಿ ವಿದೇಶಿ ವಿಶ್ವವಿದ್ಯಾಲಯಗಳಲ್ಲಿ ಓದಿದ್ದ, ದಲಿತನಾಗಿ ದಲಿತರೊಳಗಿನ ಆತ್ಮಾಭಿಮಾನದ ಸಂಕೇತವಾಗಿರುವ, ಅವರ ಹೋರಾಟದ ದನಿಯೂ ಆಗಿದ್ದ, ದಲಿತನಾಗಿ ಏನೆಲ್ಲ ಸಾಧಿಸುವುದಕ್ಕೆ ಆಕಾಶವೇ ಮಿತಿ ಎಂದು ತೋರಿಸಿಕೊಟ್ಟ ಬಾಬಾಸಾಹೇಬರು ಅಮೆರಿಕದ ಕೊಲಂಬಿಯಾ ವಿಶ್ವವಿದ್ಯಾಲಯದಲ್ಲಿಯೇ ಪಿಹೆಚ್‌ಡಿ ಮಾಡಿದ್ದು. ಕೊಲಂಬಿಯಾ ವಿಶ್ವವಿದ್ಯಾಲಯವು ಅಲ್ಲಿ ಓದಿದ ೨೦೦ ಮೇಧಾವಿಗಳ ಪಟ್ಟಿ ಮಾಡಿದ್ದು ಅವರಲ್ಲಿ ಅಂಬೇಡ್ಕರ್ ಮೊದಲ ಐವರಲ್ಲಿದ್ದಾರೆ. ನಾನು ಪಿಹೆಚ್‌ಡಿ ಮಾಡುವ ಬಗ್ಗೆ ಸಂತೋಷಪಟ್ಟಿದ್ದ ನನ್ನ ಅಯ್ಯ 'ಇನ್ನು ಎಷ್ಟ ಓದ್‌ಬೇಕು ಅಂದ್ಕೊಂಡಿದಿಯಾ ಮಗು' ಎಂದು ಕೇಳಿದಾಗ ಟಕ್ಕನೆ 'ಅಯ್ಯಾ ಐ ವಾಂಟು ಲ್ಯಾಂಡ್‌ಅಪ್ ಇನ್ ಕೊಲಂಬಿಯಾ ವೇರ್ ಅಂಬೇಡ್ಕರ್ ಹ್ಯಾಡ್ ಡನ್ ಹಿಸ್ ಪಿಹೆಚ್‌ಡಿ' ಎಂದು ಒಂದು ಡೈಲಾಗ್ ಬಿಟ್ಟಿದ್ದಕ್ಕೆ ಭೇಷ್ ಎಂದಿದ್ದರು. ಅಂಬೇಡ್ಕರ್ ಓದಿದ ವಿಶ್ವವಿದ್ಯಾಲಯಕ್ಕೆ ಹೋಗುವಂತಹ ಅವಕಾಶ ಸಾಧ್ಯವಾಗಿದ್ದು ನಾನು ಸಂಶೋಧನೆ ಮಾಡುತ್ತಿರುವ ಅಕ್ಕಮಹಾದೇವಿ ವಿಶ್ವವಿದ್ಯಾಲಯದ, ಪ.ಜಾತಿ/ಪ.ಪಂಗಡ ಘಟಕದ ವತಿಯಿಂದ ಸಂಶೋಧನಾ ವಿದ್ಯಾರ್ಥಿಗಳು ಮತ್ತು ಅಧ್ಯಾಪಕರುಗಳನ್ನು ವಿದೇಶ ಪ್ರವಾಸಕ್ಕೆ ಕಳಿಸುವ ಸೌಲಭ್ಯದಿಂದಾಗಿ. ದೊಡ್ಡ ದೇಶವೊಂದನ್ನು ನೋಡಲು ಸಿಕ್ಕ ಕೆಲವೇ ದಿನಗಳ ಅವಕಾಶದಲ್ಲಿ ಕಂಡಷ್ಟನ್ನು, ತಿಳಿದಷ್ಟನ್ನು ಕಾಣಿಸುವ ಪ್ರಯತ್ನವಿದು.

**ಅಮೆರಿಕದ ಇತಿಹಾಸ**

ಕಸವಿಲ್ಲದ ನೀಟಾದ ರಸ್ತೆಗಳಲ್ಲಿ ಸಾಲಾಗಿ ಸಾಗುವ ಅಸಂಖ್ಯಾತ ಕಾರುಗಳು, ಆಕಾಶ ಮುಟ್ಟುವ ರೇಸಿಗೆ ಬಿದ್ದ ಕಟ್ಟಡಗಳು, ಎಲ್ಲಿಂದ ಎಲ್ಲಿಗೇ ಹೋಗಲಿ ಸ್ವಚ್ಛ ಶೌಚಾಲಯಗಳು, ಕುಡಿಯುವ ನೀರು, ಬೌದ್ಧಿಕ ಚಿಂತನೆಗೆ ತಕ್ಕುದಾದ ಭವ್ಯ ವಿಶ್ವವಿದ್ಯಾಲಯಗಳು... ಇರುವ ಅಮೆರಿಕದ ಇತಿಹಾಸವು ನೇಟಿವ್ ಅಮೆರಿಕನ್ನರ, ವಲಸಿಗರ ಮತ್ತು ಕರಿಯರ ಚಳುವಳಿಗಳಿಲ್ಲದೆ ಪೂರ್ಣವಾಗುವುದಿಲ್ಲ.

**ನೇಟಿವ್ ಅಮೆರಿಕನ್ನರ ಚಳುವಳಿ**

ನೇಟಿವ್ ಅಮೆರಿಕನ್ಸ್, ಅಮೆರಿಂಡಿಯನ್ಸ್, ಅಮೆರಿಕನ್ ಇಂಡಿಯನ್ಸ್, ಇಂಡಿಜೀನಸ್ ಅಮೆರಿಕನ್ಸ್, ಇಂಡಿಜೀನಸ್ ಪೀಪಲ್ಸ್ ಆಫ್ ಯುನೈಟೆಡ್ ಸ್ಟೇಟ್ಸ್ ಎಂದು ಕರೆಸಿಕೊಳ್ಳುವ ದೇಸಿ ಅಮೆರಿಕನ್ನರ ಪೂರ್ವಿಕರು ೩೦೦೦೦ ವರ್ಷಗಳ ಹಿಂದೆ ಹಿಮಯುಗದಲ್ಲಿ ಸೈಬೀರಿಯಾದಿಂದ ಇಂದಿನ ಅಲಾಸ್ಕಾಕ್ಕೆ ಸಂಪರ್ಕ ಕಲ್ಪಿಸಿದ್ದ ಬೆರಿಂಗಿಯಾ ಎಂಬ ಭೂ ಸೇತುವೆ ಮೂಲಕ ಹಲವು ಹಂತಗಳಲ್ಲಿ ಯುರೇಸಿಯಾದಿಂದ ಬಂದು, ಹಲವು ಪ್ರದೇಶಗಳಲ್ಲಿ ಹಲವು ಬುಡಕಟ್ಟುಗಳಾಗಿ ನೆಲೆಯೂರಿದವು. ಈ ಪುರಾತನ ನೆಲೆಸಿಗರನ್ನು ಪಲೆಯೊ ಅಮೆರಿಕನ್ನರು ಎಂದು ಕರೆಯಲಾಗುತ್ತಿತ್ತು. ಮುಂದೆ ೧೪೯೨ರಲ್ಲಿ ಆರಂಭವಾದ ಐರೋಪ್ಯ ವಸಾಹತುಶಾಹಿಯೊಂದಿಗಿನ ಆಕ್ರಮಣಗಳು, ಯುದ್ಧ, ತಿಕ್ಕಾಟ, ಕಾಯಿಲೆ, ಗುಲಾಮಗಿರಿಯಿಂದಾಗಿ ದೇಸಿ ಜನರ ಸಂಖ್ಯೆ ಗಣನೀಯವಾಗಿ ಇಳಿಯಿತು. ದೇಸಿ ಜನರನ್ನು ಅನಾಗರಿಕರೆಂದು ಭಾವಿಸಿದ್ದ ಬಿಳಿಯರು ತಂತ್ರ, ಕುತಂತ್ರ, ಯುದ್ಧ ಮತ್ತು ಏಕಪಕ್ಷೀಯ ಒಪ್ಪಂದಗಳ ಮೂಲಕ ಅವರ ಹಕ್ಕು ಮತ್ತು ಸ್ವಾಯತ್ತತೆಯನ್ನು ಹತ್ತಿಕ್ಕಿ ಅವರ ಭೂಮಿಯನ್ನು ಸ್ವಾಧೀನಪಡಿಸಿಕೊಂಡರು. ದೇಸಿ ಅಮೆರಿಕನ್ನರು (ವಿಶೇಷವಾಗಿ ಪಶ್ಚಿಮ ಭಾಗದವರು) ತಮ್ಮ ಹಕ್ಕು ಮತ್ತು ಸ್ವಾಯತ್ತತೆಗಾಗಿ ಡಕೋಟ ಯುದ್ಧ, ಗ್ರೇಟ್ ಸಿಆಕ್ಸ್ ಯುದ್ಧ, ಸ್ನೇಕ್ ಯುದ್ಧ ಮತ್ತು ಕೊಲರಡೋ ಯುದ್ಧಗಳನ್ನು ನಡೆಸುವ ಮೂಲಕ ಬಿಳಿಯರ ಆಧಿಪತ್ಯಕ್ಕೆ ಸೆಡ್ಡು ಹೊಡೆದಿದ್ದಾರೆ. ದೇಸಿ ಅಮೆರಿಕರನ್ನು ನಾಶಪಡಿಸಲು ಅಮಾನುಷ ತಂತ್ರಗಳನ್ನು ಬಳಸಲಾಗಿತ್ತು. ದೇಸಿ ಅಮೆರಿಕನ್ನರ ಜನಾಂಗವನ್ನು ನಾಶಪಡಿಸಲು ಸಿಡುಬಿನ ವೈರಾಣುಗಳನ್ನು ಸೇರಿಸಿದ್ದ ಕಂಬಳಿ ಹಂಚಿದ್ದನ್ನು ಶ್ಲಾಘಿಸಿ ಬ್ರಿಟಿಷ್ ಸೇನೆಯ ದಂಡನಾಯಕ ಜೆಫ್ರಿ ಅಮ್‌ಹರ್ಸ್ಟ್ ೧೭೬೩ರಲ್ಲಿ ಪತ್ರ ಬರೆದಿದ್ದರು. ಇನ್‌ಶತ–ಥಿಯುಂಬ ಮತ್ತು ಸುಂಕ–ಲುಟ ಎಂಬ ನೇಟಿವ್ ಇಂಡಿಯನ್ ಹೋರಾಟಗಾರ್ತಿಯರ ಮಾತುಗಳು ಬಿಳಿಯರ ಶ್ರೇಷ್ಠತೆಯನ್ನು ಬಯಲು ಮಾಡುತ್ತವೆ.

"ಭಾವಿ ನಾಗರಿಕರು ಮಗುವೋ, ವಸ್ತುವೋ ಅಥವಾ ಕೇವಲ ಪಶುವೋ ಎಂದು ಪರಿಗಣಿಸಿದ್ದ ಅಪ್ಪಟ ಮನುಷ್ಯನಾದ ಇಂಡಿಯನ್, ತನ್ನ ಆಸ್ತಿ, ಸ್ವಾತಂತ್ರ್ಯ ಮತ್ತು ಬದುಕಿಗಾಗಿ ಹೋರಾಡಿದರೆ ಅನಾಗರಿಕ ಎಂದು ಕರೆಯುತ್ತಾರೆ. ಈ ದೇಶಕ್ಕೆ ಬಂದ ವಲಸಿಗರು ಅವರ ಆಸ್ತಿ, ಸ್ವಾತಂತ್ರ್ಯ ಮತ್ತು ಬದುಕುಗಳಿಗಾಗಿ ಹೋರಾಡಿದಾಗ ಹೀರೋಗಳೆಂದು ಕರೆದರು. ಈ ಮಹಾನ್ ದೇಶದ ವಿರುದ್ಧ ಇಂಡಿಯನ್ ಹೋರಾಡಿ ಗೆದ್ದಾಗ ಅದನ್ನು ನರಮೇಧವೆಂದು ಕರೆದರು; ಇಂಡಿಯನ್ನರ ವಿರುದ್ಧ ಈ ಮಹಾನ್ ದೇಶ ಹೋರಾಡಿ ಗೆದ್ದಾಗ ಅದನ್ನು ವಿಜಯವೆಂದು ಕರೆದರು" (ಇನ್‌ಶತ–ಥಿಯುಂಬ ತಮ್ಮ 'ಇಂಡಿಯನ್ನ ಕ್ವೆಶ್ಚನ್' ಎಂಬ ಪ್ರಬಂಧದಲ್ಲಿ ಹೇಳಿರುವ ಮಾತುಗಳು.)

"ಸ್ನೇಹಿತರೇ, ನಿಮ್ಮೊಂದಿಗೆ ಆಡಲು ನನಗಿರುವುದು ಕೆಲವೇ ಮಾತುಗಳು. ಒಳ್ಳೆಯ ಆತ್ಮವು ನಮ್ಮನ್ನು ಬೆಳೆಸುವಾಗ ಪರಿಪೂರ್ಣತೆಯ ಉತ್ತಮ ಮನುಷ್ಯರೊಂದಿಗೆ ಬೆಳೆಸಿತು. ನಿಮ್ಮನ್ನು ಹಾಗೆಯೇ ಬೆಳೆಸಿದ್ದು. ಆದರೆ ನಿಮ್ಮವರು ಕೆಡುತ್ತಲೇ ಹೋದರೂ ನಮ್ಮವರು ಒಳ್ಳೆಯರಾಗೇ ಉಳಿದರು. ಪಿತಾಮಹ (ಅಧ್ಯಕ್ಷ) ನಮ್ಮ ಜನರ ಬಳಿಗೆ ಮಂದಿಯನ್ನು ಕಳಿಸಿದಾಗ ನಾನು ಬಡವಳಾಗಿದ್ದೆ, ಸಣ್ಣಗಿದ್ದೆ, ತೆಳ್ಳಗಿದ್ದೆ; ಈಗ ನಾನು ಅಗಲಕ್ಕೆ, ದಪ್ಪಗೆ, ಕೊಬ್ಬಿದ್ದೇನೆ. ಕಾರಣ ಅದೆಷ್ಟು ಜನ ಸುಳ್ಳು ಬುರುಕರನ್ನು ಕಳಿಸಿದ್ದಾರೆಂದರೆ ಅವರ ಸುಳ್ಳುಗಳಿಂದ ನಾನು ಉಬ್ಬಿಕೊಂಡಿದ್ದೇನೆ.

[redacted]

ಡು. ಸರಸ್ವತಿ

(ಒಗ್ಲಲ-ಲಕೊಟ ನಿಯೋಗ ವಾಷಿಂಗ್‌ಟನ್ ಡಿಸಿಗೆ ಭೇಟಿ ನೀಡಿದ ನಂತರ ನ್ಯೂಯಾರ್ಕ್ ನಗರದಲ್ಲಿ ೧೮೭೦ರ ಜೂನ್ ೧೬ರಂದು ನಡೆದ ಸಭೆಯಲ್ಲಿ ಸುಂಕಲುಟ ಮಾಡಿದ ಭಾಷಣ)

ಅಮೆರಿಕನ್ ಇಂಡಿಯನ್ಸ್ ಹಾಗೂ ನಾಗರಿಕ ಹಕ್ಕುಗಳ ಚಳುವಳಿಯ ನಿರಂತರ ಹೋರಾಟದ ಫಲವಾಗಿ 'ಅಮೆರಿಕನ್ ಇಂಡಿಯನ್ ಸೆಲ್ಫ್ ಡಿಟರ್ಮಿನೇಷನ್ ಅಂಡ್ ಎಜುಕೇಷನ್ ಅಸಿಸ್ಟೆನ್ಸ್ ಆ್ಯಕ್ಟ್' ಜಾರಿಗೆ ಬಂತು. ೩೦೦೦೦ ವರ್ಷಗಳಿಂದ ನೆಲೆಸಿದ ವರಿಗೆ ಸಂಯುಕ್ತ ಸಂಸ್ಥಾನದ ಮೊದಲ ಪೌರತ್ವ ದೊರೆತದ್ದು ೧೮೧೭ರಲ್ಲಿ ಚೆರೋಕಿಸ್ ಎಂಬ ೩೦೦ ಕುಟುಂಬಗಳಿಗೆ.



***ನೇಟಿವ್ ಇಂಡಿಯನ್ ಮ್ಯೂಸಿಯಂನಲ್ಲಿರುವ ರೋಸಲಿ ಪಯನಿಕ್ ಅವರು ಮಾಡಿರುವ ಸ್ವಾತಂತ್ರ್ಯ ದೇವತೆಯ ಬೊಂಬೆ***

ಅಮೆರಿಕದಲ್ಲಿ ವಸಾಹತುಶಾಹಿ ಆಡಳಿತಕ್ಕೆ ನಾಂದಿ ಹಾಡಲು ಕಾರಣನಾದ ನಾವಿಕ ಕ್ರಿಸ್ಟೊಫರ್ ೧೪೫೧ರಲ್ಲಿ ಜೆನೊವಾ (ಈಗಿನ ಇಟಲಿ)ದಲ್ಲಿ ಜನಿಸಿದವ. ಹತ್ತನೇ ವಯಸ್ಸಿಗೆ ಕಡಲನ್ನು ಕಂಡಿದ್ದ ಕೊಲಂಬಸ್ ಸಣ್ಣ ವಯಸ್ಸಿಗೆ ಸಮುದ್ರಯಾನದ ಆಸಕ್ತಿ ಬೆಳೆಸಿಕೊಂಡಿದ್ದ. ಭೂಗೋಳ, ಖಗೋಳ ಶಾಸ್ತ್ರ ಮತ್ತು ಇತಿಹಾಸವನ್ನು ಸ್ವತಃ ಓದಿಕೊಂಡಿದ್ದ. ತನ್ನ ಸಮುದ್ರಯಾನಕ್ಕೆ ಸಹಾಯ ಮಾಡುವಂತೆ ಸ್ಪೇನ್ ಮತ್ತು ಪೋರ್ಚುಗೀಸ್ ರಾಜರನ್ನು ಪದೇಪದೇ ಎಡತಾಕಿದ್ದ. ಬಹಳ ಪ್ರಯತ್ನದ ನಂತರ ಸ್ಪೇನಿನ ಕ್ಯಾಥೋಲಿಕ್ ದೊರೆ ಫರ್ಡಿನೆಂಡ್ ಮತ್ತು ರಾಣಿ ಇಸಬೆಲ್ಲ ಇವನ ಸಮುದ್ರಯಾನದ ಖರ್ಚು ಭರಿಸಲು ಒಪ್ಪಿಕೊಂಡು ಮೂರು ಬಲಿಷ್ಠ ನೌಕೆಗಳನ್ನು ಹಾಗೂ ಜನರನ್ನು ಕಳಿಸಿದರು. ಕೊಲಂಬಸ್ ಸಮುದ್ರಯಾನದ ತನ್ನ ಯೋಜನೆಯನ್ನು ರಾಜನ ಮುಂದಿಟ್ಟು ತನ್ನನ್ನು ಅಡ್ಮಿರಲ್ ಆಫ್ ಓಷನ್ ಮಾಡಬೇಕು, ಸ್ಪೇನಿಗಾಗಿ ಕಂಡುಹಿಡಿವ ಹೊಸ ಜಾಗಗಳ ಗವರ್ನರ್ ಮತ್ತು ವೈಸ್‌ರಾಯ್ ಮಾಡಬೇಕು, ಅಲ್ಲಿ ಆರಂಭಿಸುವ ವಾಣಿಜ್ಯ ವ್ಯವಹಾರಗಳ ಪಾಲುದಾರಿಕೆ ಮತ್ತು ಲಾಭದಲ್ಲಿ ೧/೮ ಭಾಗ ಪಾಲು ನೀಡಬೇಕು ಎಂದು ಷರತ್ತು ಹಾಕಿದ್ದ. ಒಟ್ಟು ನಾಲ್ಕು ಸಮುದ್ರಯಾನಗಳನ್ನು ಮಾಡಿ ೧೪೯೨ರಲ್ಲಿ ಬಹಮಸ್ (ಅಮೆರಿಕ), ೧೪೯೩ರಲ್ಲಿ ಲೆಸರ್ ಆಂಟೆಲ್ಸ್, ೧೪೯೮ರಲ್ಲಿ ಟ್ರಿನಿಡಾಡ್ ಮತ್ತು ೧೫೦೨ರಲ್ಲಿ ಮಧ್ಯ ಅಮೆರಿಕದ ಪೂರ್ವ ಕರಾವಳಿಯನ್ನು ಗುರುತಿಸಿದ. ತಾನು ಮೊದಲು ತಲುಪಿದ ಈಗಿನ ಬಹಮಸ್ ದ್ವೀಪವನ್ನು ಏಷಿಯಾದ ಭಾಗವೆಂದೇ ಕೊಲಂಬಸ್ ಭಾವಿಸಿದ್ದ. (ಮುಂದೆ ಅಮೆರಿಗೋ ವೆಸ್‌ಪುಸಿ ಎಂಬ ನಾವಿಕ ಅದು ಏಷಿಯಾ ಅಲ್ಲವೆಂದು ಹೇಳಿದ. ಅಮೆರಿಗೋನ ಲ್ಯಾಟಿನ್ ಉಚ್ಚಾರಣೆಯಾದ ಅಮೆರಕಸ್‌ಅನ್ನು ಆಧರಿಸಿ ಅಮೆರಿಕದ ಹೆಸರು ಬಂತು) ತಲುಪಿದ ಮೊದಲ ದ್ವೀಪವನ್ನು ಸ್ಯಾನ್ ಸಾಲ್ವಡಾರ್ (ಪವಿತ್ರ ರಕ್ಷಕ) ಎಂದು ಕರೆದ. ಅಲ್ಲಿ ನೆಲೆಸಿದ್ದ ಲುಕಯನ್, ಟೈನೊ ಮತ್ತು ಅರವಕ್ ದೇಸಿ ಜನರು ತಮ್ಮ ದ್ವೀಪವನ್ನು ಗುಆನಾಹನಿ ಎಂದು ಕರೆಯುತ್ತಿದ್ದರು. ತಾನು ಮೊದಲು ತಲುಪಿದ ಜನರ ಕುರಿತು ತನ್ನದೇ ಪತ್ರಿಕೆಯಲ್ಲಿ ಕೊಲಂಬಸ್ ದಾಖಲಿಸಿರುವುದು ಹೀಗೆ : "ನಾವು ಹೇಳಿದ್ದನ್ನು ತಕ್ಷಣವೇ ಪುನರುಚ್ಚರಿಸುವ ಅವರು ಉತ್ತಮ ಮತ್ತು ಕೌಶಲ್ಯಯುತ ಗುಲಾಮರಾಗಬಹುದು. ಅವರಿಗೆ ಯಾವುದೇ ಧರ್ಮವಿಲ್ಲವಾದ್ದರಿಂದ ಅವರನ್ನು ಸುಲಭವಾಗಿ ಕ್ರೈಸ್ತರನ್ನಾಗಿ ಮಾಡಬಹುದು. ನಮ್ಮ ಸ್ವಾಮಿಗಳು ಬಯಸಿದರೆ ಒಂದಾರು ಜನರನ್ನು ಕರೆತಂದು ಭಾಷೆಯನ್ನು ಕಲಿಸಬಹುದು. ಪ್ರಾಚೀನ ಶಸ್ತ್ರಾಸ್ತ್ರಗಳು ಮತ್ತು ತಂತ್ರಗಳನ್ನು ಬಳಸುವ ಅವರ ಮೇಲೆ ಸುಲಭವಾಗಿ ಆಕ್ರಮಣ ಮಾಡಬಹುದು. ಯುದ್ಧದ ವಿಷಯದಲ್ಲಿ ಅತ್ಯಂತ ಸರಳರಾದ ಇವರಲ್ಲಿ ೫೦ ಜನರನ್ನು ಗೆದ್ದು ಬೇಕಾದಂತೆ ಬಳಸಬಹುದು." ಕಂಡುಹಿಡಿದ ಹೊಸ ಜಾಗಗಳನ್ನು ಸ್ಪೇನಿನ ವಸಾಹತುವನ್ನಾಗಿಸುವಲ್ಲಿ ಕೊಲಂಬಸ್ ತನ್ನ ಜೊತೆಗಾರ ನಾವಿಕರೊಂದಿಗೆ ಬಳಸಿದ ತಂತ್ರಗಳು ಅಮಾನವೀಯವಾಗಿದ್ದವು. ಶಿಕ್ಷಿಸಲು ಬಳಸುತ್ತಿದ್ದ ಅಮಾನವೀಯ ವಿಧಾನಗಳು, ಬಲವಂತದ ದುಡಿಮೆ, ಮೋಸದಿಂದ ಕಬಳಿಸಿದ ಸಂಪತ್ತು ಎಲ್ಲವೂ ಸಮುದ್ರಯಾನದ ಕರಾಳತೆಗೆ ಸಾಕ್ಷಿಯಾಗಿವೆ. ಇವರ ಆಕ್ರಮಣದಿಂದ ದೇಸಿ ಜನರು ಆತ್ಮಹತ್ಯೆ, ಶಿಶುಹತ್ಯೆಗೆ ಶರಣಾದರು. ಜೊತೆಗೆ ಆಕ್ರಮಣಕಾರರು ತಂದ ಸಿಡುಬಿನ ವೈರಾಣುವಿಗೆ ಬಲಿಯಾಗಿ ಸಂತತಿಗಳು ನಶಿಸಿಹೋದವು. ನಾವಿಕರ ಸಮುದ್ರಯಾನದಲ್ಲಿಯೇ ರಕ್ತಸಿಕ್ತ ವಸಾಹತುಶಾಹಿಯ ಬೀಜಗಳಿದ್ದವು.

ಮುಂದೆ ಒಪ್ಪಿಕೊಂಡ ಕರಾರಿನಂತೆ ರಾಜ ಕೊಲಂಬಸ್‌ಗೆ ನೀಡಬೇಕಾದ್ದು ನೀಡದೆ ಕಾರಣ ಹುಡುಕಿ ಅವನನ್ನು, ಅವನ ಸೋದರರನ್ನು ಕೊಂಚಕಾಲ ಸೆರೆಮನೆಗೆ ದೂಡಿದ. ಮುಂದೆ ನ್ಯಾಯಾಲಯದ ಮೊರೆಹೊಕ್ಕು ಕೆಲವನ್ನು ಪಡೆದುಕೊಳ್ಳಲು ಸಫಲನಾದರೂ ಅಡ್ಮಿರಲ್ ಹುದ್ದೆ, ವೈಸ್‌ರಾಯ್ ಹುದ್ದೆಗಳನ್ನು ಕಳೆದುಕೊಳ್ಳಬೇಕಾಯಿತು. ನಿರಂತರ ಸಮುದ್ರಯಾನದಿಂದ ಕೊಲಂಬಸ್‌ನ ಆರೋಗ್ಯ ಹದಗೆಟ್ಟು ೫೧ನೇ ವಯಸ್ಸಿನಲ್ಲಿಯೇ ತೀರಿಕೊಂಡ.

**ವಲಸಿಗರ ಚಳುವಳಿ**

ಮುಂದೆ ಅಮೆರಿಕ ಬ್ರಿಟಿಷರ, ಫ್ರೆಂಚರ, ಡಚ್ಚರ ವಸಾಹತುವಾದರೂ ಬ್ರಿಟನ್ ಹೆಚ್ಚಿನ ಪ್ರಾಬಲ್ಯ ಹೊಂದಿತ್ತು. ಒಟ್ಟು ೧೩ ವಸಾಹತುಗಳ ಜನ ಜಾರ್ಜ್ ವಾಷಿಂಗ್‌ಟನ್ ನೇತೃತ್ವದಲ್ಲಿ ಬ್ರಿಟಿಷ್ ವಸಾಹತುಶಾಹಿ ದಬ್ಬಾಳಿಕೆಯ ವಿರುದ್ಧ ಫ್ರೆಂಚರ ಸಹಾಯ ಪಡೆದುಕೊಂಡು ಹೋರಾಡಿ ಗೆದ್ದಾಗ ಎಲ್ಲ ವಸಾಹತುಗಳನ್ನು ಒಗ್ಗೂಡಿಸಿ ಅಮೆರಿಕ ಸಂಯುಕ್ತ ಸಂಸ್ಥಾನವೆಂಬ ಸ್ವತಂತ್ರ ರಾಷ್ಟ್ರ ಸ್ಥಾಪನೆ ಯಾಯಿತು. ವಾಷಿಂಗ್‌ಟನ್ ಎರಡು ಬಾರಿ ಅಧ್ಯಕ್ಷರಾಗಿ ಆಯ್ಕೆಯಾಗಿದ್ದರು. ಕಳೆದ ೫೦೦-೬೦೦ ವರ್ಷಗಳಲ್ಲಿ ವಲಸಿಗರ ನಾಡಾಗಿರುವ ಅಮೆರಿಕ ಬಲಾಢ್ಯ ದೊಡ್ಡಣ್ಣನಾಗಿ ಬೆಳೆದು ನಿಂತಿದೆ.

**ಕರಿಯರ ಹೋರಾಟ**

ಅಮೆರಿಕದ ಆರ್ಥಿಕತೆಯನ್ನು ಬಲಿಷ್ಠ ಗೊಳಿಸಲು ದೂರದ ಆಫ್ರಿಕದ ಜನರನ್ನು ಪ್ರಾಣಿಗಳಂತೆ ಹಿಡಿದು ತಂದು ಗುಲಾಮರನ್ನಾಗಿಸಿ (ಅಮೆರಿಕದ ದಕ್ಷಿಣ ಭಾಗದಲ್ಲಿ ೪ ಮಿಲಿಯನ್ ಕರಿಯರನ್ನು ಗುಲಾಮಗಿರಿಗೆ ದೂಡಲಾಗಿತ್ತು) ದುಡಿಸಿಕೊಂಡು, ಹೀನಾಯವಾಗಿ ನಡೆಸಿಕೊಂಡ ಕತೆಯನ್ನು ಅಲೆಕ್ಸ್ ಹ್ಯಾಲಿ ಬರೆದಿರುವ ಕರಿಯರ ಏಳು ತಲೆಮಾರಿನ ಕತೆಯಾದ 'ರೂಟ್ಸ್' ಎಂಬ ಕಾದಂಬರಿ ಕಣ್ಣಿಗೆ ಕಟ್ಟಿದಂತೆ ಚಿತ್ರಿಸುತ್ತದೆ.

ಕರಿಯರಿಗೆ ಪೌರತ್ವ, ಮತ ಚಲಾಯಿಸುವ ಹಕ್ಕು, ಉದ್ಯೋಗದ ಹಕ್ಕು, ಉತ್ತಮ ವಸತಿಯಂತಹ ಮೂಲಸೌಕರ್ಯಗಳಾವುವೂ ಇರಲಿಲ್ಲ. ಜೊತೆಗೆ ಸಾರ್ವಜನಿಕ ಸ್ಥಳ ಮತ್ತು ಸಾರಿಗೆಯಲ್ಲಿ ವರ್ಣ ತಾರತಮ್ಯವನ್ನು ಆಚರಿಸಲಾಗುತ್ತಿತ್ತು. ೧೮೬೫-೧೮೭೭ರ ಅವಧಿಯಲ್ಲಿ ಬಿಳಿಯರ ಪರಮಾಧಿಪತ್ಯವನ್ನು ಎತ್ತಿಹಿಡಿಯುವ, ಬಿಳಿಯರ ರಾಷ್ಟ್ರೀಯತೆಯನ್ನು ಎತ್ತಿಹಿಡಿಯುವ, ವಲಸಿಗರನ್ನು ವಿರೋಧಿಸುವ ಕು ಕ್ಲಕ್ಸ್ ಕ್ಲಾನ್ ಎಂಬ ಮೂರು ಗೌಪ್ಯ ಚಳುವಳಿಗಳು ಕರಿಯರ ವಿರುದ್ಧ ಮತ್ತು ಬಿಳಿಯ ರಿಪಬ್ಲಿಕನ್ನರ ವಿರುದ್ಧ ಅಮಾನುಷ ದಾಳಿ ನಡೆಸಿದವು.



ರೈಲ್ವೆ ಸ್ಟೇಷನ್‌ನಲ್ಲಿ ಸಿಕ್ಕ ಗೆಳತಿ

ಉತ್ತಮ ಬದುಕನ್ನು ಅರಸಿ ೧೯೧೦-೧೯೭೦ರ ಅವಧಿಯಲ್ಲಿ ಉತ್ತರ ಮತ್ತು ಪಶ್ಚಿಮದ ದಕ್ಷಿಣ ಭಾಗದ ಕಡೆಗೆ ೭ ಮಿಲಿಯನ್ ಕರಿಯರು ವಲಸೆ ಹೋದರು. ವಲಸೆ ಬಂದ ಕರಿಯರ ಮೇಲೆ ಅಲ್ಲಿನ ಬಿಳಿಯರು ನಡೆಸಿದ ಗಲಭೆಗಳು ಮತ್ತು ಅಮಾನವೀಯ ತಾರತಮ್ಯದ ಪರಿಣಾಮವಾಗಿ ಕರಿಯರ ಗೆಟ್ಟೋಗಳು ಆರಂಭವಾದವು.

೧೯೫೫ರಲ್ಲಿ ೧೪ ವರ್ಷದ ಎಮ್ಮೆಟ್ ಟಿಲ್ ಮಿಸಿಸಿಪ್ಪಿಯ ತನ್ನ ಸಂಬಂಧಿಕರ ಮನೆಗೆ ಭೇಟಿ ನೀಡಿದ ಸಂದರ್ಭದಲ್ಲಿ ಅಲ್ಲಿ ಸಣ್ಣ ಕಿರಾಣಿ ಅಂಗಡಿಯೊಂದರಲ್ಲಿ ಬಿಳಿಯ ಮಹಿಳೆಯೊಬ್ಬಳೊಂದಿಗೆ ಮಾತನಾಡಿದನೆಂಬ ಕಾರಣಕ್ಕೆ ಆ ಮಹಿಳೆಯ ಗಂಡ ಮತ್ತು ಆತನ ಮಲಸಹೋದರ ಎಮ್ಮೆಟ್‌ನನ್ನು ಥಳಿಸಿ, ಮುಖವನ್ನು ಜಜ್ಜಿ ವಿರೂಪಗೊಳಿಸಿ ಗುಂಡಿಟ್ಟು ಸಾಯಿಸಿ ನದಿಯೊಳಗೆ ಎಸೆದರು. ಬಿಳಿಯ ನ್ಯಾಯಮೂರ್ತಿಗಳ ಪೀಠವು ಆರೋಪಿಗಳನ್ನು ಖುಲಾಸೆ ಮಾಡಿದ್ದು ಅಮೆರಿಕದ ಕ್ರೂರ ವರ್ಣಭೇದಕ್ಕೆ ಸಾಕ್ಷಿಯಾಯಿತು. ತೆರೆದ ಶವಪೆಟ್ಟಿಗೆಯಲ್ಲಿಯೇ ಮಗನನ್ನು ಇರಿಸಲು ಎಮ್ಮೆಟ್ ತಾಯಿ ಮಾಮೀ ಒತ್ತಾಯಿಸಿದಳು. ವಿರೂಪಗೊಂಡ ಮಗನ ಮುಖವನ್ನೇ ನೋಡುತ್ತ ಮೌನದ ಶಿಲೆಯಂತೆ ಕುಳಿತಿದ್ದ ತಾಯಿಯ ಚಿತ್ರ ಲಕ್ಷಾಂತರ ಕರಿಯರ ಎದೆ ಯಲ್ಲಿ ಪ್ರತಿಭಟನೆಯ ಕಿಡಿ ಹೊತ್ತಿಸಿತು. ತಾಯಿ ಒಬ್ಬಳ ಖಾಸಗಿ ದುಃಖವು ಸಾರ್ವಜನಿಕ ಹೋರಾಟವಾಗಿ ಪರಿಣಮಿಸಿತು. ಎಮ್ಮೆಟ್ ಟಿಲ್‌ನ ಸಾವಿನ ನಂತರ ಸಾವಿರಾರು ಕರಿಯ ಯುವಜನತೆ ತಮ್ಮನ್ನು ತಾವು ಎಮ್ಮೆಟ್‌ನ ಸಂತತಿ ಎಂದು ಕರೆದುಕೊಂಡರು. ಎಮ್ಮೆಟ್‌ನ ಹತ್ಯೆ ಆದ ೧೦೦ ದಿನಗಳ ನಂತರ ರೋಸಾ ಪಾರ್ಕ್ ಬಸ್ಸಿನಲ್ಲಿ ತಾವು ಕುಳಿತ ಸ್ಥಳವನ್ನು ಬಿಟ್ಟುಕೊಡಲು ನಿರಾಕರಿಸಿದಳು. ಈ ಪ್ರತಿಭಟನೆಯು ವ್ಯಾಪಕ ಪ್ರಚಾರ ಪಡೆದುಕೊಂಡಿತು. ೫೦,೦೦೦ ಕರಿಯರು ೩೮೧ ದಿನಗಳ ಕಾಲ ಬಸ್ಸಿನಲ್ಲಿ ನಡೆಯುವ ವರ್ಣ ತಾರತಮ್ಯವನ್ನು ಒಗ್ಗಟ್ಟಿನಿಂದ ಪ್ರತಿಭಟಿಸಿದ್ದರ ಪರಿಣಾಮವಾಗಿ ಬಸ್‌ನಲ್ಲಿ ಆಚರಿಸುತ್ತಿದ್ದ ವರ್ಣಭೇದ ನೀತಿಯನ್ನು ನಿಲ್ಲಿಸಲಾಯಿತು.

ಕರಿಯರ ಮಾನವ ಹಕ್ಕುಗಳಿಗಾಗಿ ಕಾಂಗ್ರೆಸ್ ಆಫ್ ರೇಷಿಯಲ್ ಈಕ್ವಾಲಿಟಿ, ನ್ಯಾಷನಲ್ ಅಸೋಸಿಯೇಷನ್ ಫಾರ್ ದ ಅಡ್ವಾನ್ಸ್‌ಮೆಂಟ್ ಆಫ್ ಕಲರ್ಡ್ ಪೀಪಲ್, ನ್ಯಾಷನಲ್ ಕೌನ್ಸಿಲ್ ಫಾರ್ ನೀಗ್ರೋ ವಿಮೆನ್, ಸದರ್ನ್ ಕ್ರಿಶ್ಚಿಯನ್ ಲೀಡರ್‌ಶಿಪ್, ರೀಜನಲ್ ಕೌನ್ಸಿಲ್ ಫಾರ್ ನೀಗ್ರೊ ಲೀಡರ್‌ಶಿಪ್, ಸ್ಟೂಡೆಂಟ್ ನಾನ್‌ವಯಲೆನ್ಸ್ ಕೋಆರ್ಡಿನೇಷನ್ ಕಮಿಟಿಯಂತಹ ಹಲವಾರು ಸಂಘಟನೆಗಳು ಹೋರಾಟ ಮಾಡಿದವು. ರೋಸಾ ಪಾರ್ಕ್, ಟಿ.ಆರ್.ಎಂ. ಹಾವರ್ಡ್, ಮಾರ್ಟಿನ್ ಲೂಥರ್ ಕಿಂಗ್ ಜೂನಿಯರ್, ಮಾಲ್ಕಂ ಎಕ್ಸ್‌ನಂತಹ ಹಲವಾರು ಕರಿಯ ಮುಖಂಡರು ತೀವ್ರವಾದ ಹೋರಾಟ ಮಾಡಿದರು. ಕರಿಯರ ಚಳುವಳಿಯ ನಿರಂತರ ಹೋರಾಟದ ಫಲವಾಗಿ ಅಮೆರಿಕದ ಸಂವಿಧಾನಕ್ಕೆ ತಿದ್ದುಪಡಿಗಳನ್ನು ತಂದು ೧೮೬೫ರಲ್ಲಿ ಗುಲಾಮಗಿರಿಯನ್ನು ನಿಷೇಧಿಸಲಾಯಿತು. ೧೮೬೮ರಲ್ಲಿ ಆಫ್ರೋ ಅಮೆರಿಕನ್ನರಿಗೆ ಪೌರತ್ವವನ್ನು ನೀಡಲಾಯಿತು. ೧೮೭೦ರಲ್ಲಿ ಕರಿಯರಿಗೆ ಮತದಾನದ ಹಕ್ಕನ್ನು ನೀಡಲಾಯಿತು.



ನೇಟಿವ್ ಇಂಡಿಯನ್ನ ಹೋರಾಟಗಾರ್ತಿ
ಸುಂಕಲುಟ



ನೇಟಿವ್ ಇಂಡಿಯನ್ ಹೋರಾಟಗಾರ್ತಿ
ಇನ್‌ಶತ ಥಿಯುಂಬ

**ಕೊಲಂಬಿಯಾ ವಿಶ್ವವಿದ್ಯಾಲಯ**

ಅಮೆರಿಕದಲ್ಲಿ, ಜಾಗತಿಕ ಮಟ್ಟದಲ್ಲಿ ಪ್ರತಿಷ್ಠಿತ ವಿಶ್ವವಿದ್ಯಾಲಯ ವೆನಿಸಿಕೊಂಡಿರುವ ಕೊಲಂಬಿಯಾ ವಿಶ್ವವಿದ್ಯಾಲಯ, ೨೯ ಎಕರೆಗಳಷ್ಟು ಹರಡಿಕೊಂಡಿದ್ದು ಅಲ್ಲಿ ೧೦೦ಕ್ಕೂ ಹೆಚ್ಚು ವಿಭಾಗಗಳಿವೆ. ಅಮೆರಿಕದ ನ್ಯೂಯಾರ್ಕ್ ನಗರದಲ್ಲಿರುವ ಈ ವಿಶ್ವವಿದ್ಯಾಲಯವು ಆರಂಭವಾದದ್ದು ೧೭೫೪ರಲ್ಲಿ. ಕಿಂಗ್ಸ್ ಕಾಲೇಜ್ ಎಂಬ ಹೆಸರಿದ್ದ ಈ ವಿಶ್ವವಿದ್ಯಾಲಯವನ್ನು ಆರಂಭಿಸಿದ್ದು ಬ್ರಿಟನ್ ದೊರೆ ೨ನೇ ಜಾರ್ಜ್. ಅಮೆರಿಕದ ಸ್ವಾತಂತ್ರ್ಯ ಹೋರಾಟದ ನಂತರ ೧೭೮೪ರಲ್ಲಿ ಕೊಲಂಬಿಯಾ ವಿಶ್ವವಿದ್ಯಾಲಯವೆಂದು ಹೆಸರು ಪಡೆದುಕೊಂಡಿತು. ಇಲ್ಲಿ ಕಲಿತ ಮೂವರು ಅಮೆರಿಕದ ಅಧ್ಯಕ್ಷರಾಗಿದ್ದಾರೆ, ೧೦ ಜನ ಅಲ್ಲಿನ ಸುಪ್ರೀಂ ಕೋರ್ಟಿನ ನ್ಯಾಯಮೂರ್ತಿಗಳಾಗಿದ್ದಾರೆ, ೯೫ ಜನ ನೊಬೆಲ್ ಬಹುಮಾನ ಪಡೆದುಕೊಂಡಿದ್ದಾರೆ, ೧೨೫ ಜನ ಪುಲಿಟ್ಜರ್ ಪ್ರಶಸ್ತಿ ಪಡೆದುಕೊಂಡಿದ್ದಾರೆ, ೧೧ ಜನ ಒಲಿಂಪಿಕ್ ಪದಕ ಪಡೆದುಕೊಂಡಿದ್ದಾರೆ, ೩೯ ಜನ ಅಕೆಡೆಮಿ ಅವಾರ್ಡ್ಸ್ ಪಡೆದುಕೊಂಡಿದ್ದಾರೆ. ಈ ವಿಶ್ವವಿದ್ಯಾಲಯದಲ್ಲಿ ಓದಿದ ೨೯ ಜನರು ಅವರ ದೇಶಗಳ ಆಡಳಿತದಲ್ಲಿ ಮುಖ್ಯ ಸ್ಥಾನಗಳಲ್ಲಿ ಕಾರ್ಯ ನಿರ್ವಹಿಸಿದ್ದರು.



**ಕೊಲಂಬಿಯ ವಿಶ್ವವಿದ್ಯಾಲಯ**

ಅವರಲ್ಲಿ ಬಾಬಾಸಾಹೇಬ್ ಅಂಬೇಡ್ಕರ್ ಅವರೂ ಒಬ್ಬರು.

ಬರೋಡಾ ಮಹಾರಾಜ ಸಯ್ಯಾಜಿರಾವ್ ಗಾಯಕ್ವಾಡ್ ಅವರು ಕೊಲಂಬಿಯಾ ವಿಶ್ವವಿದ್ಯಾಲಯದಲ್ಲಿ ಅಧ್ಯಯನ ಮಾಡುವ ವಿದ್ಯಾರ್ಥಿಗಳಿಗೆ ನೀಡುತ್ತಿದ್ದ ೧೧.೫೦ ಡಾಲರ್ ವಿದ್ಯಾರ್ಥಿ ವೇತನ ಪಡೆದುಕೊಂಡ ಅಂಬೇಡ್ಕರ್ ಅವರು ತಮ್ಮ ೨೨ನೇ ವಯಸ್ಸಿನಲ್ಲಿ ವಿದೇಶದಲ್ಲಿ ವ್ಯಾಸಂಗ ಮಾಡಲು ಹೋದರು. ೧೯೧೩ರಲ್ಲಿ ಜುಲೈ ಮೂರನೇ ವಾರದಲ್ಲಿ ನ್ಯೂಯಾರ್ಕ್ ನಗರವನ್ನು ತಲುಪಿದರು. ಅಲ್ಲಿ ಭಾರತೀಯ ವಿದ್ಯಾರ್ಥಿಗಳು ನಡೆಸುತ್ತಿದ್ದ ಕಾಸ್ಮೊಪಾಲಿಟನ್ ಕ್ಲಬ್‌ನಲ್ಲಿ ಕೆಲ ಕಾಲ ನೆಲೆಸಿದರು. ಮುಂದೆ ಲಿವಿಂಗ್‌ಸ್ಟನ್ ಹಾಲ್ ಎಂಬ ಡಾರ್ಮೆಟ್ರಿಯಲ್ಲಿ ಉಳಿದರು.

ಬಾಬಾಸಾಹೇಬ್ ಅಂಬೇಡ್ಕರ್ ಅವರು ವಿಶ್ವವಿದ್ಯಾಲಯದ ಸ್ಕೂಲ್ ಆಫ್ ಆರ್ಟ್ಸ್ ಅಂಡ್ ಸೈನ್ಸ್ ವಿಭಾಗದಲ್ಲಿ ಅಧ್ಯಯನ ಮಾಡಿದರು. ಅವರು ತೆಗೆದುಕೊಂಡಿದ್ದ ಕೋರ್ಸಿನಲ್ಲಿ ಇತಿಹಾಸ, ಸಮಾಜಶಾಸ್ತ್ರ, ತತ್ವಶಾಸ್ತ್ರ, ಆಂಥ್ರೊಪಾಲಜಿ, ರಾಜ್ಯಶಾಸ್ತ್ರ, ಫ್ರೆಂಚ್ ಮತ್ತು ಜರ್ಮನ್ ಭಾಷೆಯ ವಿಷಯಗಳಿದ್ದವು. ಕೊಲಂಬಿಯಾ ವಿಶ್ವವಿದ್ಯಾಲಯದಲ್ಲಿ ಅಧ್ಯಯನ ಮಾಡುವಾಗ ಎಡ್ವರ್ಡ್ ಸೆಲಿಗ್ಮನ್ ಮತ್ತು ಜಾನ್ ಡಿವೆ ಎಂಬುವವರು ಅವರ ಮೆಚ್ಚಿನ ಗುರುಗಳಾಗಿದ್ದರು. ಜಾನ್ ಡಿವೆ ಅವರ ಮಾರ್ಗದರ್ಶನದಲ್ಲಿ ಸಾಮಾಜಿಕ ನ್ಯಾಯ ಮತ್ತು ಸಮಾನತೆಯ ವಿಷಯಗಳ ಕುರಿತು ಆಳವಾಗಿ ಚಿಂತಿಸಿ ತಮ್ಮ ನಿಲುವುಗಳನ್ನು ರೂಪಿಸಿಕೊಂಡರು. ಸದಾ ಅಧ್ಯಯನಶೀಲರಾಗಿದ್ದ ಅಂಬೇಡ್ಕರ್ ಅವರು ಗಂಟೆಗಟ್ಟಲೆ ಲೈಬ್ರರಿಯಲ್ಲಿ ಕುಳಿತು ಓದುತ್ತಿದ್ದರು.

ಏನ್ಶಿಯಂಟ್ ಇಂಡಿಯನ್ ಕಾಮರ್ಸ್ (ಪ್ರಾಚೀನ ಭಾರತೀಯ ವಾಣಿಜ್ಯ) ಎಂಬ ಪ್ರೌಢ ಪ್ರಬಂಧಕ್ಕೆ ಎಂ.ಎ. ಪದವಿ ಪಡೆದುಕೊಂಡರು, ನ್ಯಾಷನಲ್ ಡಿವಿಡೆಂಟ್ ಆಫ್ ಇಂಡಿಯಾ–ಎ ಹಿಸ್ಟಾರಿಕ್ ಅಂಡ್ ಅನಲಿಟಿಕಲ್ ಸ್ಟಡಿ (ಭಾರತದ ರಾಷ್ಟ್ರೀಯ ಡಿವಿಡೆಂಡ್ – ಒಂದು ಐತಿಹಾಸಿಕ ವಿಶ್ಲೇಷಣಾತ್ಮಕ ಅಧ್ಯಯನ) ಎಂಬ ಪ್ರಬಂಧಕ್ಕೆ ಪಿಹೆಚ್‌ಡಿ ಪಡೆದುಕೊಂಡರು. ಈ ಪುಸ್ತಕವು ಬ್ರಿಟಿಷ್ ಭಾರತದಲ್ಲಿ ಪ್ರಾಂತೀಯ ಅರ್ಥವ್ಯವಸ್ಥೆಯ ವಿಕಾಸ ಎಂಬ ಪುಸ್ತಕವಾಗಿ ಪ್ರಕಟವಾಯಿತು. ಈ ಪುಸ್ತಕಕ್ಕೆ ಅವರ ಗುರುಗಳಾದ ಸೆಲಿಗ್ಮನ್ ಅವರು ಮುನ್ನುಡಿ ಬರೆದರು.

೧೯೧೬, ಮೇ ೬ರಂದು ಜಾತಿವ್ಯವಸ್ಥೆ ಕುರಿತ 'ಕ್ಯಾಸ್ಟ್ಸ್ ಇನ್ ಇಂಡಿಯಾ–ದೇರ್ ಮೆಕಾನಿಸಂ, ಜೆನಿಸಿಸ್ ಅಂಡ್ ಡೆವಲಪ್‌ಮೆಂಟ್' ಎಂಬ ಪ್ರಬಂಧವನ್ನು ಮಂಡಿಸಿದರು. ಈ ಪ್ರಬಂಧದಲ್ಲಿ ಅವರು ತಮ್ಮ ಆಳವಾದ ಅಧ್ಯಯನದಿಂದ ಸೂಕ್ತವಾದ ಆಧಾರಗಳ ಮೂಲಕ ಜಾತಿ ವ್ಯವಸ್ಥೆಯ ಉಗಮ, ಕಾರ್ಯ ಮತ್ತು ಬೆಳವಣಿಗೆಯನ್ನು ಚರ್ಚಿಸಿದ್ದಾರೆ. ಜಾತಿ ವ್ಯವಸ್ಥೆ ದೈವಿಕವಲ್ಲ, ವರ್ಗಗಳೇ ಜಾತಿಗಳಾಗಿ ಬದಲಾಗಿವೆ. ಕಡ್ಡಾಯ ಒಳವಿವಾಹದ ಮೂಲಕ ಜನಸಂಖ್ಯೆಯನ್ನು ನಿರ್ದಿಷ್ಟ ಘಟಕಗಳಾಗಿ, ಪರಸ್ಪರ ಬೆರೆಯುವುದಕ್ಕೂ ಅನುವು ಮಾಡಿಕೊಡದೆ ಕೃತಕವಾಗಿ ಒಡೆಯುವ ವ್ಯವಸ್ಥೆ ಜಾತಿಪದ್ಧತಿಯಾಗಿದೆ. ಒಂದೇ ಜಾತಿಯೊಳಗೆ ಮದುವೆಯಾಗಲು ಹೆಣ್ಣು

ಗಂಡಿನ ಸಂಖ್ಯೆ ಸಮನಾಗಿರುವುದಿಲ್ಲ. ವಿಧವೆಯರು, ವಿಧುರರು, ಹೆಚ್ಚುವರಿ ಮಹಿಳೆಯರು ಮತ್ತು ಪುರುಷರು ಜಾತಿ ಚೌಕಟ್ಟನ್ನು ಮೀರದಂತೆ ತಡೆಯಲು ಬಲವಂತದ ವೈಧವ್ಯ, ಸತಿ ಪದ್ಧತಿ, ಬಲವಂತದ ಬ್ರಹ್ಮಚರ್ಯ, ಕಿರಿಯ ಹೆಣ್ಣುಮಕ್ಕಳನ್ನು ಪ್ರೌಢರೊಂದಿಗೆ ಮದುವೆ ಮಾಡುವಂತಹ ಜೀವವಿರೋಧಿ ಪದ್ಧತಿಗಳಿಗೆ ಜಾತಿವ್ಯವಸ್ಥೆ ದಾರಿ ಮಾಡಿಕೊಟ್ಟಿದ್ದನ್ನು; ಈ ಪದ್ಧತಿಗಳು ಮತ್ತು ಜಾತಿಶುದ್ಧತೆಯನ್ನು ಕಾಪಾಡಿ ಕೊಳ್ಳುವ ಮೂಲ ಉದ್ದೇಶದ ಒಳವಿವಾಹವು ಹೆಣ್ಣಿನ ಲೈಂಗಿಕತೆಯ ನಿಯಂತ್ರಣಕ್ಕೆ ಕಾರಣ ವಾದದ್ದನ್ನು ಅಂಬೇಡ್ಕರ್ ಅವರು ವಿವರವಾಗಿ ಚರ್ಚಿಸಿದ್ದಾರೆ. ಅವರು ಗುರುತಿಸಿದ ಪುರುಷ ಪ್ರಧಾನತೆ ಮತ್ತು ಮಹಿಳೆಯರ ಮೇಲಿನ ಹಿಂಸೆ ಮತ್ತು ತಾರತಮ್ಯಕ್ಕೂ ಜಾತಿ ವ್ಯವಸ್ಥೆಗೂ ಇರುವ ನಿಕಟವಾದ ಸಂಬಂಧ, ಸ್ತ್ರೀವಾದಿ ವಿಶ್ಲೇಷಣೆಗೆ ಸಿಕ್ಕ ಬಹುಮುಖ್ಯ ಆಯಾಮವಾಗಿದೆ.

ಕೊಲಂಬಿಯಾ ವಿಶ್ವವಿದ್ಯಾಲಯದ ಲೆಹ್‌ಮನ್ ಸೋಶಿಯಲ್ ಸೈನ್ಸ್ ಲೈಬ್ರರಿಯಲ್ಲಿ ಅಂಬೇಡ್ಕರ್ ಅವರ ಕಂಚಿನ ಪ್ರತಿಮೆಯನ್ನು ಇಡಲಾಗಿದೆ. ಯುಕೆ ಬೌದ್ಧ ಸಂಘದವರು, ಅಮೆರಿಕದ ಬೌದ್ಧ ಸಂಘ ದವರ ದೇಣಿಗೆಯಲ್ಲಿ ಈ ಪ್ರತಿಮೆಯನ್ನು ಮಾಡ ಲಾಗಿದೆ. ಅಂಬೇಡ್ಕರ್ ಅವರ ಕೆಲವು ಫೋಟೊಗಳು ಮತ್ತು ಪುಸ್ತಕಗಳನ್ನು ಪ್ರದರ್ಶಿಸಲಾಗಿದೆ.

ಸಾಮಾಜಿಕ ನ್ಯಾಯವೂ ಕೊಲಂಬಿಯಾ ವಿಶ್ವವಿದ್ಯಾಲಯದ ಆದ್ಯತೆಯಾಗಿದೆ. ಅಲ್ಲಿ ೩೨,೪೨೯ ವಿದ್ಯಾರ್ಥಿಗಳು (೨೦೧೭ರಲ್ಲಿ) ಓದುತ್ತಿದ್ದಾರೆ. ಅವರಲ್ಲಿ ಶೇ. ೪೨ ವಿದ್ಯಾರ್ಥಿಗಳು ಅಲ್ಪಸಂಖ್ಯಾತ ವರ್ಗಕ್ಕೆ ಸೇರಿದವರು. ಶೇ. ೨೮ರಷ್ಟು ವಿದ್ಯಾರ್ಥಿಗಳು ಅಮೆರಿಕದ ಹೊರಗೆ ಜನಿಸಿದವರು. ಶೇ. ೨೬ರಷ್ಟು ವಿದ್ಯಾರ್ಥಿಗಳ ಕುಟುಂಬದ ಆದಾಯ ೬೦೦೦೦ ಡಾಲರ್, ಶೇ. ೧೫ರಷ್ಟು ವಿದ್ಯಾರ್ಥಿಗಳು ವಿಶ್ವವಿದ್ಯಾಲಯದಲ್ಲಿ ಓದುವ ಕುಟುಂಬದ ಮೊದಲ ಸದಸ್ಯರಾಗಿದ್ದಾರೆ.

ಸಾಮಾಜಿಕ, ರಾಜಕೀಯ ವಿದ್ಯಮಾನಗಳ ಬಗ್ಗೆ ಜಾಗೃತರಾಗಿರುವ ವಿದ್ಯಾರ್ಥಿ ವೃಂದವನ್ನು ಹೊಂದಿರುವ ಕೊಲಂಬಿಯಾ ವಿಶ್ವವಿದ್ಯಾಲಯವು ವಿದ್ಯಾರ್ಥಿ ಪ್ರತಿಭಟನೆಗಳ ದೀರ್ಘ ಇತಿಹಾಸವನ್ನು ಹೊಂದಿದೆ. ವಿಶ್ವವಿದ್ಯಾಲಯವು, ೧೯೬೮ರಲ್ಲಿ ಜಿಮ್ನಾಶಿಯಂಅನ್ನು ನಿರ್ಮಿಸಲು ನೆರೆಯ 'ನೇಬರ್‌ಹುಡ್ ಮಾರ್ನಿಂಗ್ ಸೈಡ್ ಪಾರ್ಕ್'ನ ಪ್ರದೇಶವನ್ನು ಸ್ವಾಧೀನಪಡಿಸಿಕೊಳ್ಳಲು ಮುಂದಾ ಯಿತು. ಆ ಜಾಗವನ್ನು ಸ್ವಾಧೀನಪಡಿಸಿ ಕೊಳ್ಳುವುದು ಅಲ್ಲಿ ವಾಸಿಸುತ್ತಿರುವ ಕರಿಯರ ಮೇಲಿನ ಆಕ್ರಮಣ ಎಂದು ವಿದ್ಯಾರ್ಥಿಗಳು ತೀವ್ರವಾಗಿ ಪ್ರತಿಭಟಿಸಿದ ಪರಿಣಾಮವಾಗಿ ವಿಶ್ವವಿದ್ಯಾಲಯವು ಅದನ್ನು ಕೈ ಬಿಟ್ಟು ತಮ್ಮದೇ ಕ್ಯಾಂಪಸ್ಸಿನ ಉತ್ತರ ತುದಿಯಲ್ಲಿ ಫಿಸಿಕಲ್ ಫಿಟ್‌ನೆಸ್ ಕೇಂದ್ರವನ್ನು ಸ್ಥಾಪಿಸಿತು.

ಅಮೆರಿಕದ ಪೆಂಟಗನ್ ಶಸ್ತ್ರಾಸ್ತ್ರ



ಕೊಲಂಬಿಯಾ ವಿ.ವಿ.ಯ ಲೆಹ್‌ಮನ್ ಲೈಬ್ರರಿಯಲ್ಲಿರುವ ಅಂಬೇಡ್ಕರ್ ಪ್ರತಿಮೆ ಬಳಿ ಲೇಖಕಿ ಮತ್ತು ಅನಿತಾ ಪಾತ್ರೋಟ

ಸಂಶೋಧನೆಯ ಹಿಂದಿನ ಮಿದುಳಿನಂತೆ ಕೆಲಸ ಮಾಡುವ ಇನ್‌ಸ್ಟಿಟ್ಯೂಟ್ ಆಫ್ ಡಿಫೆನ್ಸ್ ಅನಾಲಿಸಿಸ್ ಎಂಬ ಸಂಸ್ಥೆಯ ಸದಸ್ಯತ್ವದಿಂದ ಹೊರಬರಬೇಕೆಂದು ವಿದ್ಯಾರ್ಥಿಗಳು ನಡೆಸಿದ ಹೋರಾಟಕ್ಕೆ ವಿಶ್ವವಿದ್ಯಾಲಯವು ಮಣಿಯ ಬೇಕಾಯಿತು. ಜೊತೆಗೆ ಸಮರ್ಥ ವಿದ್ಯಾರ್ಥಿಗಳು ಬೇರೆ ವಿಶ್ವವಿದ್ಯಾಲಯಕ್ಕೆ ಸೇರಿಕೊಂಡಿದ್ದರಿಂದ




ಲಿಂಕನ್ ಮೆಮೊರಿಯಲ್ ಹಾಲ್‌ನಲ್ಲಿರುವ ಅಬ್ರಾಹಂ ಲಿಂಕನ್ ಪ್ರತಿಮೆ

ಹಾಗೂ ಹಲವಾರು ಹಳೆಯ ವಿದ್ಯಾರ್ಥಿಗಳು ದೇಣಿಗೆ ನೀಡುವುದನ್ನು ನಿಲ್ಲಿಸಿದ್ದರಿಂದ ಸಾಕಷ್ಟು ಆರ್ಥಿಕ ಹೊಡೆತವನ್ನು ಅನುಭವಿಸಿತು.

ವರ್ಣಭೇದ ನೀತಿಯನ್ನು ಅನುಸರಿಸುವ ದಕ್ಷಿಣ ಆಫ್ರಿಕದ ಹಲವಾರು ಕಂಪನಿಗಳಲ್ಲಿ ವಿಶ್ವವಿದ್ಯಾಲಯವು ಹೊಂದಿದ್ದ ಹೂಡಿಕೆಯನ್ನು ಹಿಂಪಡೆಯಬೇಕೆಂದು ಒತ್ತಾಯಿಸಿ ೭೦ರ ದಶಕದ ಕೊನೆ ಮತ್ತು ೮೦ರ ದಶಕದ ಆರಂಭದಲ್ಲಿ ಕಮಿಟಿ ಎಗೇನ್‌ಸ್ಟ್ ಇನ್‌ವೆಸ್ಟ್‌ಮೆಂಟ್ ಇನ್ ಸೌತ್ ಆಫ್ರಿಕ ಮತ್ತು ಹಲವಾರು ವಿದ್ಯಾರ್ಥಿ ಸಂಘಟನೆಗಳು ಒಂದು ವರ್ಷ ನಡೆಸಿದ ಪ್ರತಿಭಟನೆಯ ಪರಿಣಾಮವಾಗಿ ಹೂಡಿಕೆಯನ್ನು ಹಿಂಪಡೆಯ ಲಾಯಿತು. ೧೯೭೭ರಲ್ಲಿ ಅಮೆರಿಕ ಸರ್ಕಾರದ ಸೆಕ್ರಟರಿ ಆಫ್ ಸ್ಟೇಟ್ ಆಗಿದ್ದ ಹೆನ್ರಿ ಕಿಸಿಂಜರ್ ಅವರು ವಿಶ್ವವಿದ್ಯಾಲಯದ ಎನ್‌ಡೋವ್ ಚೇರ್ ಆಗಬಾರದೆಂದು ವಿದ್ಯಾರ್ಥಿಗಳು ಹೋರಾಡಿದ್ದರು.

೧೯೬೮ರ ವಿಯಟ್ನಾಂ ಯುದ್ಧದ ಸಂದರ್ಭದಲ್ಲಿ ವಿಶ್ವವಿದ್ಯಾಲಯವು ನಡೆಸುತ್ತಿದ್ದ 'ರಿಸರ್ವ್ ಆಫೀಸರ್ಸ್ ಟ್ರೇನಿಂಗ್ ಕಾರ್ಪ್ಸ್' ಎಂಬ ತರಬೇತಿ ಕಾರ್ಯಕ್ರಮವನ್ನು ವಿದ್ಯಾರ್ಥಿಗಳು ನಡೆಯದಂತೆ ತಡೆದರು. ಮುಂದೆ ಅಧ್ಯಕ್ಷ ಒಬಾಮ ಅವರು ತರಬೇತಿಯನ್ನು ಮತ್ತೆ ಆರಂಭಿಸಲು ಕೇಳಿದಾಗ ವಿಶ್ವವಿದ್ಯಾಲಯದ ಅಧ್ಯಕ್ಷ ಲೀ. ಸಿ. ಬೊಲಿಂಜರ್ ಅವರು ಮಿಲಿಟರಿಯವರ ಗೇ ವಿರೋಧಿ ನೀತಿಯಿಂದಾಗಿ ತರಬೇತಿಯನ್ನು ಮತ್ತೆ ಆರಂಭಿಸುವುದಿಲ್ಲವೆಂದರು.

ಅಮೆರಿಕದ ಖಾಸಗಿ ಜೈಲು ಉದ್ಯಮದಲ್ಲಿ ಬೃಹತ್ತಾದ 'ಕರೆಕ್ಷನ್ ಕಾರ್ಪೊರೇಷನ್ ಆಫ್ ಅಮೆರಿಕ ೧' ಮತ್ತು 'ಜಿ೪' ಎಂಬ ಬಹುರಾಷ್ಟ್ರೀಯ ಸೆಕ್ಯೂರಿಟಿ ಫರ್ಮ್ ಕಂಪೆನಿಯಲ್ಲಿ, ವಿಶ್ವವಿದ್ಯಾ ಲಯವು ಮಾಡಿದ್ದ ಹೂಡಿಕೆಯನ್ನು (೧೦ ಮಿಲಿಯನ್ ಡಾಲರ್) ಹಿಂದೆ ಪಡೆಯಬೇಕೆಂದು ವಿದ್ಯಾರ್ಥಿಗಳು ೨೦೧೪ರಲ್ಲಿ ನಡೆಸಿದ ೧೮ ತಿಂಗಳ ಹೋರಾಟಕ್ಕೆ ಟ್ರಸ್ಟಿಗಳ ಮಂಡಳಿಯು ಮಣಿಯಬೇಕಾಯಿತು.

**ಭವ್ಯ ವೈಟ್ ಹೌಸ್ ಎದುರಿನಲ್ಲೊಂದು ಪುಟ್ಟ ಶಾಂತಿ ಟೆಂಟ್**

ವಾಷಿಂಗ್‌ಟನ್‌ನಲ್ಲಿರುವ ಅಧ್ಯಕ್ಷರ ಭವ್ಯ ನಿವಾಸ 'ವೈಟ್ ಹೌಸ್' ಎದುರು ಇರುವ ಪುಟ್ಟ ಟೆಂಟಿಗೆ ಶಾಂತಿಗಾಗಿ ಹೋರಾಡುವವರ ಭವ್ಯ ಇತಿಹಾಸ ಇದೆ. ಈ ಇತಿಹಾಸವನ್ನು ಆರಂಭಿಸಿದವಳು ಮೆಕ್ಸಿಕೊ ಮೂಲದ ಕನ್‌ಸ್ಪಿಕಿಯನ್ ಪಿಕೊಟು. ಕೊಂಚಿಟೊ ಮತ್ತು ಕೊನ್ನಿ ಎಂದು ಆಕೆ ಜನಪ್ರಿಯಳು. ಆಕೆ ಹೊಟ್ಟೆಪಾಡನ್ನು ಅರಸಿ ೧೮ನೇ ವಯಸ್ಸಿನಲ್ಲಿ ನ್ಯೂಯಾರ್ಕಿಗೆ ಬಂದಳು. ಮುಂದೆ ಆಕೆ ತನ್ನ ಮದುವೆ ಮುರಿದು ಹೋದಮೇಲೆ ವಾಷಿಂಗ್‌ಟನ್‌ನಲ್ಲಿ ನೆಲಸಿದಳು. ಶಾಂತಿಗೆ ಮಾರಕ ವಾಗಿರುವ ಅಣ್ವಸ್ತ್ರ ವಿರೋಧಿಸುವ ಸಲುವಾಗಿ ಈಕೆ ೧೯೮೧ರಿಂದ ೨೦೧೩ರವರೆಗೂ ಎಂದರೆ ೩೨ ವರ್ಷಗಳ ಕಾಲ ಸತತವಾಗಿ ವೈಟ್‌ಹೌಸ್‌ನ

*ಲಿಂಕನ್ ಮೆಮೊರಿಯಲ್ ಹಾಲ್‌ನ ಗೋಡೆಯ ಮೇಲೆ ಲಿಂಕನ್ ಅವರ ಭಾಷಣದ ಸಾಲುಗಳು*

ಎದುರು ಟೆಂಟ್ ಹಾಕಿಕೊಂಡು ಅಣ್ವಸ್ತ್ರಗಳ ವಿರುದ್ಧ ಪ್ರತಿಭಟಿಸಿದಳು. ಮುಂದಿನ ಪೀಳಿಗೆಗೆ ಸುರಕ್ಷಿತವಾದ ಭೂಮಿಯನ್ನು ಉಳಿಸಬೇಕಾದರೆ ಅಣ್ವಸ್ತ್ರಗಳು ಕೊನೆಯಾಗಬೇಕೆಂದು ನಂಬಿದ್ದ ಆಕೆ ವೈಟ್ ಹೌಸ್ ನೋಡಲು ಬರುತ್ತಿದ್ದವರಿಗೆ ಅಣ್ವಸ್ತ್ರಗಳ ಅಪಾಯಗಳನ್ನು ತಿಳಿಸಿಕೊಡುತ್ತ, ಅಣ್ವಸ್ತ್ರಗಳ ಅಪಾಯ ಕುರಿತ ಮಾಹಿತಿಯನ್ನು ಹಂಚುತ್ತ, ಶಾಂತಿಯ ಮಹತ್ವವನ್ನು ಸಾರುತ್ತ ತನ್ನ ಆಯಸ್ಸನ್ನು ಸವೆಸಿದಳು. ಆ ಪರಂಪರೆ ಇನ್ನೂ ಮುಂದುವರೆದಿದೆ. ಅಣ್ವಸ್ತ್ರಗಳ ನಿರರ್ಥಕತೆ ಮತ್ತು ಅವುಗಳು ತಂದೊಡ್ಡುವ ಅಪಾಯದ ವಿರುದ್ಧ ಪ್ರಚಾರ ಮಾಡಲಾಗುತ್ತಿದೆ. ಅಧ್ಯಕ್ಷರ ನಿವಾಸದ ಎದುರು, ಅಮೆರಿಕವೂ ಸೇರಿದಂತೆ ಅಣ್ವಸ್ತ್ರ ಸನ್ನದ್ಧವಾಗಿರುವ ಇಂಗ್ಲೆಂಡ್, ಕೊರಿಯಾ, ಫ್ರಾನ್ಸ್, ಚೈನಾ, ಭಾರತ, ಪಾಕಿಸ್ತಾನ ರಷ್ಯಾ ದೇಶಗಳ ಅಣ್ವಸ್ತ್ರ ಕಾರ್ಯಕ್ರಮದ ಹಿಂದಿನ ಸತ್ಯಾಂಶಗಳ ಮಾಹಿತಿಯನ್ನು ಅಲ್ಲಿ ಬರುವವರಿಗೆ ಹಂಚುತ್ತಾ, ಬೆದರಿಕೆಗೆ ಅಂಜದೆ ಶಾಂತಿಯ ಮಹತ್ವವನ್ನು ಸಾರುತ್ತಿರುವುದು ಅಮೆರಿಕದ ಜನರ ಸತ್ಯಾಗ್ರಹವೇ ಆಗಿದೆ. ಅಲ್ಲಿ ನೀಡಲಾದ ಬ್ರೋಷರ್‌ನಲ್ಲಿ ನೀಡಿರುವ ಮಾಹಿತಿ ಹೀಗಿದೆ : "ಅಮೆರಿಕ ೧೯೪೦-೧೯೯೬ರವರೆಗೂ ೫.೫ ಟ್ರಿಲಿಯನ್ ಡಾಲರ್‌ಗಳನ್ನು ತನ್ನ ಅಣ್ವಸ್ತ್ರಗಳ ಕಾರ್ಯಕ್ರಮಕ್ಕೆ ಖರ್ಚು ಮಾಡಿದೆ. ಅಣ್ವಸ್ತ್ರಗಳಿಗಾಗಿ ಖರ್ಚು ಮಾಡುವ ಬದಲು ಶಾಲೆಗಳು, ಆಸ್ಪತ್ರೆಗಳು, ಆರೋಗ್ಯ ಸೇವೆ, ಮೂಲ ಸೌಕರ್ಯಗಳಿಗಾಗಿ ಖರ್ಚು ಮಾಡಬೇಕು. ಅಣ್ವಸ್ತ್ರಗಳ ಉನ್ನತೀಕರಣಕ್ಕೆ ೧ ಟ್ರಿಲಿಯನ್ ಖರ್ಚು ಮಾಡುವುದನ್ನು ಆಹಾರ ಭದ್ರತೆಯ ಜಾಗತಿಕ ಆಂದೋಲನಕ್ಕಾಗಿ ಖರ್ಚು ಮಾಡಿದರೆ ಅಮೆರಿಕ ದೇಶ ಒಂದೇ ಜಾಗತಿಕ ಹಸಿವನ್ನು ಕೊನೆಗಾಣಿಸಬಹುದು."

**ಪ್ರತಿಮೆಯಾದ ಸ್ವಾತಂತ್ರ್ಯ**

ಸ್ವಾತಂತ್ರ್ಯ ದೇವತೆಯ ಪ್ರತಿಮೆ ಅಮೆರಿಕದ ಸಂಕೇತವಾಗಿದೆ. ನ್ಯೂಯಾರ್ಕ್ ನಗರದ ಲಿಬರ್ಟಿ ಐಲೆಂಡಿನಲ್ಲಿರುವ ಸ್ವಾತಂತ್ರ್ಯ ದೇವತೆಯ ಕಂಚಿನ ಪ್ರತಿಮೆ ೧೫೧ ಅಡಿ ೧ ಇಂಚಿನಷ್ಟು ಉದ್ದವಿದೆ. ೨೦೪.೧ ಟನ್‌ನಷ್ಟು ಕಂಚನ್ನು ಪ್ರತಿಮೆಗಾಗಿ ಬಳಸಲಾಗಿದೆ. ಅಮೆರಿಕದ ಜನರಿಗೆ ಫ್ರೆಂಚರು ನೀಡಿದ ಕಾಣಿಕೆ ಇದು. ಫ್ರೆಡ್ರಿಕ್ ಅಗಸ್ಟೆ ಬಾರ್ತೊಲ್ಡಿ ವಿನ್ಯಾಸ ಮಾಡಿದ ಪ್ರತಿಮೆಯನ್ನು ಕೆತ್ತಿದ ಶಿಲ್ಪಿ ಗುಸ್ತಾವ್ ಐಫೆಲ್. ಬಿಡಿಬಿಡಿ ಭಾಗಗಳಾಗಿ ನಿರ್ಮಿಸಿದ ಪ್ರತಿಮೆಯನ್ನು ಫ್ರಾನ್ಸ್‌ನಿಂದ ಅಮೆರಿಕಾಕ್ಕೆ ಸಾಗಿಸಿದ ನಂತರ ಜೋಡಿಸಿ ೧೮೮೬ರ ಅಕ್ಟೋಬರ್ ೨೮ರಂದು ಪ್ರತಿಷ್ಠಾಪಿಸಲಾಯಿತು. ಪ್ರತಿಮೆ ನಿರ್ಮಾಣಕ್ಕೆ ೧,೨೦,೦೦೦ ಅಮೆರಿಕನ್ನರು ದೇಣಿಗೆ ನೀಡಿದ್ದರು. ಪ್ರತಿಮೆಗೆ ಸ್ಫೂರ್ತಿ ರೋಮನ್ನರ ಸ್ವತಂತ್ರ ದೇವತೆ ಲಿಬರ್ಟಸ್. ಮೇಲೆತ್ತಿರುವ ಬಲಗೈಲಿ ಪಂಜು ಹಿಡಿದಿದ್ದು (ಪಂಜಿನವರೆಗೂ ಹತ್ತಿ ಹೋಗಿ ಕಣ್ಣು ಹಾಯಿಸಿದಷ್ಟೂ ಕಾಣುವ ಅಮೆರಿಕವನ್ನು ಕಣ್ತುಂಬಿಕೊಳ್ಳಲು ಮೆಟ್ಟಿಲುಗಳ ವ್ಯವಸ್ಥೆ ಇದೆ) ಎಡಗೈಲಿ ಅಮೆರಿಕ ಸ್ವತಂತ್ರ ಪಡೆದುಕೊಂಡ ದಿನಾಂಕ (ಜುಲೈ ೪/೧೭೭೬) ಇದೆ. ಕೆಳಗೆ ಇರುವ ಮುರಿದ ಸರಪಳಿ, ಎತ್ತಿಟ್ಟ ಹೆಜ್ಜೆ ಮುನ್‌ಚಲನೆಯನ್ನು ಸಂಕೇತಿಸುತ್ತದೆ. ಗಾಳಿಯಲ್ಲಿ ಸೇರುವ ದ್ವೀಪದ ನೀರಿನ ಉಪ್ಪಿನ ಅಂಶದಿಂದಾಗಿ ಪ್ರತಿಮೆ ಕಿಲುಬಿನ ಹಸಿರು ಬಣ್ಣಕ್ಕೆ ತಿರುಗಿದೆ. ಯಾವ ದಿಕ್ಕಿನಿಂದ ನೋಡಿದರೂ ಆಕೆಯ ಮುಖದಲ್ಲಿ ವಿಷಾದವೇ ಪ್ರಧಾನವಾಗಿದೆ ಎನಿಸಿತು. ಮುಂದೆ ಚಲಿಸುವಂತೆ ಪಾದ ಎತ್ತಿಟ್ಟಿದ್ದರೂ ಕಟ್ಟಿಹಾಕಿರುವಂತೆನಿಸಿತು. ಹಗುರ ಆಗಿರದೆ ಭಾರ ಹೊತ್ತವಳಂತೆನಿಸಿತು. ನ್ಯೂಯಾರ್ಕ್‌ನ ನೇಟಿವ್ ಅಮೆರಿಕನ್ ಮ್ಯೂಸಿಯಂನಲ್ಲಿರುವ ವಿಲಕ್ಷಣ ಬೊಂಬೆಗಳ ತಯಾರಿಕೆಯಲ್ಲಿ ಅಂತರರಾಷ್ಟ್ರೀಯ ಖ್ಯಾತಿಯನ್ನು ಹೊಂದಿರುವ ರೋಸಲಿ-ಪನಿಯಕ್ ಎಂಬುವವರು ಗಾಜು, ಮರ, ಹತ್ತಿ, ಸೀಲ್ ಪ್ರಾಣಿಯ ಚರ್ಮವನ್ನು ಬಳಸಿ ಮಾಡಿರುವ ಸ್ವಾತಂತ್ರ್ಯ ದೇವತೆಯ ಬೊಂಬೆ ಬಿಡುಗಡೆಯನ್ನು ಸಂಕೇತಿಸುವಂತಿದ್ದಳು. ಈ ಬೊಂಬೆಗೆ ಆಕೆ ಕೊಟ್ಟಿರುವ ಹೆಸರು ನನ್ನ ಪ್ರೀತಿಯ ಸ್ವಾತಂತ್ರ್ಯ (ಮೈ ಲವ್ ಮಿಸ್ ಲಿಬರ್ಟಿ ಡಾಲ್).

**ಹೆಮ್ಮೆಯ ಚಿತ್ರಗಳು**

ಅಮೆರಿಕದ ಜನಪ್ರಿಯ ಅಧ್ಯಕ್ಷ ಅಬ್ರಹಾಂ ಲಿಂಕನ್ ಅವರ ನೆನಪಿಗೆ ನಿರ್ಮಿಸಿರುವ ಲಿಂಕನ್ ಮೆಮೋರಿಯಲ್‌ನಲ್ಲಿ ಅವರ ಬೃಹತ್ ಪ್ರತಿಮೆಯನ್ನು ಮತ್ತು ಅಲ್ಲಿನ ಗೋಡೆಗಳ ಮೇಲೆ ಅವರ ಕೊನೆಯ ಅಧ್ಯಕ್ಷೀಯ ಭಾಷಣವನ್ನು ಬರೆಯಲಾಗಿದೆ. "... ನಮ್ಮೊಳಗೆ ಮತ್ತು ಎಲ್ಲ ದೇಶಗಳೊಂದಿಗೆ ನ್ಯಾಯ ಮತ್ತು ಶಾಶ್ವತವಾದ ಶಾಂತಿ ಸಾಧನೆಗಾಗಿ ಅಗತ್ಯವಾದುದೆಲ್ಲವನ್ನೂ ಮಾಡೋಣ" ಎಂಬುದು ಕೊನೆಯ ಸಾಲು.

ರೈಲು ನಿಲ್ದಾಣದಲ್ಲಿ ಒಬ್ಬಾಕೆ ಕಸ ಹೊಡೆಯುತ್ತಿದ್ದಳು. ಎದುರಿನಿಂದ ಬಹುಶಃ ಆಕೆಯ ಸ್ನೇಹಿತನಿರಬೇಕು, ಬಂದ. ಆಕಸ್ಮಿಕವಾಗಿ ಕಂಡು ಸಂತೋಷದಿಂದ ಒಬ್ಬರನ್ನೊಬ್ಬರು ತಬ್ಬಿ ವಿಶ್ ಮಾಡಿ ಯೋಗಕ್ಷೇಮ ವಿಚಾರಿಸಿದರು. ನೋಡಿ ದಂಗಾದೆ. ನಾವು ಹೋಗಬೇಕಾಗಿದ್ದ ಜಾಗಕ್ಕೆ ಹೇಗೆ ಹೋಗಬೇಕೆಂದು ಗೊತ್ತಿರಲಿಲ್ಲ, ಕೇಳುವ ನೆಪದಲ್ಲಿ ಹೋಗಿ ಮಾತನಾಡಿಸಿದೆವು. ಆಕೆ ಮಾತನಾಡುತ್ತಿದ್ದ ಇಂಗ್ಲಿಷ್ ಉಚ್ಚಾರಣೆ ನಮಗೆ ಅರ್ಥವಾಗಲಿಲ್ಲ. 'ಸಾರಿ, ನಿಮಗೆ ತೊಂದರೆ ಕೊಡುತ್ತಿದ್ದೇವೆ, ನಿಮ್ಮ ಉಚ್ಚಾರಣೆ ತಿಳಿಯುವುದಿಲ್ಲ, ಬಿಡಿಸಿ ಹೇಳಿ' ಎಂದ ಮೇಲೆ ಸ್ವಲ್ಪ ಮುಂದೆ ಬಂದು ಬಸ್ ಹಿಡಿಯಬೇಕಾದ ಜಾಗವನ್ನು ತೋರಿಸಿ, ಇಳಿದ ಮೇಲೆ ಹೇಗೆ ಹೋಗಬೇಕೆಂದು ವಿವರಿಸಿದಳು. ಥ್ಯಾಂಕ್ಸ್ ಹೇಳಿ ಒಂದು ಫೋಟೋ ತೆಗೆಸಿಕೊಳ್ಳುತ್ತೀಯಾ ಎಂದು ಕೇಳಿದೆವು. ಖುಷಿಯಾಗಿ ಒಪ್ಪಿಕೊಂಡು ಫೋಟೋ ತೆಗೆಸಿಕೊಂಡಳು.

ನಾವಿದ್ದ ಹೋಟೆಲಿನಲ್ಲಿ ಕಸ ಗುಡಿಸುತ್ತಿದ್ದ ಮಹಿಳೆ ನಡುನಡುವೆ ಬಂದು, ಬೋಗುಣಿಯಲ್ಲಿ ಖಾಲಿಯಾದ ಪದಾರ್ಥಗಳನ್ನು ತುಂಬಿಸಿ, ಮತ್ತೆ ಗ್ಲೋವ್ಸ್ ತೊಟ್ಟು ಕಸ ಹೊಡೆಯುತ್ತಿದ್ದಳು. ಅಲ್ಲಿ ಉಣ್ಣುತ್ತಿದ್ದ ಕೆಲವರು ಇದೇ ಹೋಟೆಲಿನಲ್ಲಿ ಉಳಿದಿರುವವರೇ ಎಂದು ಅನುಮಾನ ಬಂದು 'ಶೋ ಯುವರ್ ಐಡಿ ಕಾರ್ಡ್' ಎಂದು ಕೇಳಿದಳು. ಅವರಿಬ್ಬರ ಮಾತು, ಬಾಡಿ ಲ್ಯಾಂಗ್ವೇಜ್‌ನ ಚಿತ್ರಣ ಕಣ್ಣಲ್ಲಿ ಮನೆ ಮಾಡಿದೆ. ಅಂಥ ಚಿತ್ರಣ ನನ್ನ ದೇಶದಲ್ಲಿ ಕಾಣುವುದಿಲ್ಲವಾದ್ದರಿಂದ ಆಡಿ ತೋರಿಸಲು ಪ್ರಾಕ್ಟೀಸ್ ಮಾಡಿಕೊಂಡಿರುವೆ.

**ರಕ್ತಸಿಕ್ತ ಇತಿಹಾಸ ಕೊನೆಯಾಗಲಿ**

ಸೆಪ್ಟಂಬರ್ ೧೧ರಂದು ಉರುಳಿಸಿದ ಅವಳಿ ಕಟ್ಟಡಗಳ ಜಾಗವನ್ನು ಸ್ಮಾರಕ ಮಾಡಿದ್ದಾರೆ. ಬೃಹತ್ ನೀರಿನ ಚಿಲುಮೆ ಮಾಡಿ ಅದರ ಸುತ್ತಲು ಕಟ್ಟಿರುವ ಗೋಡೆಗಳ ಮೇಲೆ ಅಲ್ಲಿ ದುರಂತಕ್ಕೆ ಬಲಿಯಾದವರೆಲ್ಲರ ಹೆಸರುಗಳನ್ನು ಬರೆದಿದ್ದಾರೆ. ಆ ಹೆಸರುಗಳ ಮೇಲೆ ಕೈ ಇಟ್ಟು ನಿಲ್ಲಿ ಎಂಬ ಬೋರ್ಡುಗಳನ್ನು ಹಾಕಿದ್ದಾರೆ. ಹೆಸರುಗಳ ಮೇಲೆ ಬೆರಳಾಡಿಸಿ ಕೈ ಇಟ್ಟು 'ರಕ್ತಸಿಕ್ತ ಇತಿಹಾಸ ಕೊನೆಗೊಳ್ಳಲಿ ರಕ್ತ ಹರಿಸದೇ ಬರೆವ ಇತಿಹಾಸ ಆರಂಭವಾಗಲಿ. ಅಮೆರಿಕ ಪಚಮುಮದ ಮಕ್ಕಳೆಲ್ಲರ ಬದುಕು ನೆಮ್ಮದಿ ಕಾಣಲಿ' ಎಂದು ಮೌನವಾಗಿ ಪ್ರಾರ್ಥಿಸಿದೆ.

**ದು. ಸರಸ್ವತಿ**
ಮಹಿಳಾ ಅಧ್ಯಯನ ವಿಭಾಗ
ಜ್ಞಾನಶಕ್ತಿ ಕ್ಯಾಂಪಸ್, ಅಥಣಿ ರಸ್ತೆ, ತೊರವಿ
ವಿಜಯಪುರ - ೫೮೬ ೧೦೮

**ಫೋ**ಟೋಗ್ರಫಿ ಹವ್ಯಾಸ ಬೆಳೆಸಿಕೊಂಡನಂತರ, ಕಣ್ಣಿಗೆ ಕಾಣಿಸುವ ಪ್ರತಿಯೊಂದನ್ನೂ ಹೊಸತಾಗಿ ನೋಡುವುದನ್ನು ರೂಢಿಸಿಕೊಂಡೆ. ಮರ, ಗಿಡ, ಹೊಳೆ, ಮುಂಜಾವು, ಸಂಜೆ ಬದಲಾಗುವ ಆಕಾಶದ ಬಣ್ಣ, ಆಕಾಶದಲ್ಲಿ ತೇಲಾಡುವ ಮೋಡಗಳು – ಎಲ್ಲವೂ ಹೊಸತಾಗಿ ಕಾಣಿಸತೊಡಗಿದವು!

ಮದರಾಸಿನಲ್ಲಿ ನಾವು ವಾಸವಿದ್ದ ವಠಾರದಲ್ಲಿ ನಮ್ಮ ಮತ್ತು ನೆರೆಹೊರೆಯ ಮನೆಗಳ ಮಕ್ಕಳು ಸೇರಿದ ಒಂದು ದೊಡ್ಡಪಟಾಲಮ್ಮೇ ಇದ್ದಿತು. ಆಗ ಟೆಲಿವಿಷನ್ ಎಂಬ ಮಾಯಾಬಜಾರ್‌ನ


ತಾತನೊಂದಿಗೆ ಪ್ರತಿಯೊಂದು ಕಾರ್ಯಕ್ರಮದಲ್ಲೂ ಹಾಜರಿರುತ್ತಿದ್ದ ಮೊಮ್ಮಗಳು

# ಮಕ್ಕಳಿವರೇನಮ್ಮ!

ಪರಿಚಯವಿರಲಿಲ್ಲ. ಮಕ್ಕಳನ್ನು ಏಕಾಂತಕ್ಕೆ ದೂಡುವ ಮೊಬೈಲ್ ಭೂತಗಳ ಕಾಟವಿರಲಿಲ್ಲ. ಶಾಲೆಯಿಂದ ಮನೆಗೆ ಬಂದನಂತರ ಅವರ ಪಾಲಿಗೆ ತೆರೆದುಕೊಳ್ಳುತ್ತಿದ್ದ ಏಕೈಕ ಅವಕಾಶವೆಂದರೆ ಆಟ, ಆಟ. ದಣಿದು ಸುಸ್ತಾಗುವವರೆಗೆ, ಕತ್ತಲಾಗುವವರೆಗೆ ಮತ್ತಷ್ಟು ಆಟ! ವಠಾರದ ಎಲ್ಲರೂ ಮಕ್ಕಳ ತುಂಟಾಟ, ಚೇಷ್ಟೆಗಳು, ಜಗಳ, ತಂಟೆ, ಗಲಾಟೆಗಳ ಕಿರಿಕಿರಿಯನ್ನು ಸಹಿಸಿಕೊಂಡು ತಮ್ಮ ದೊಡ್ಡತನವನ್ನು ತೋರಿಸುತ್ತಿದ್ದರು.

ಹವ್ಯಾಸಿ ಫೋಟೋಗ್ರಾಫರನಾಗಿದ್ದ ನಾನು ಮಕ್ಕಳ ಚಟುವಟಿಕೆಗಳನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದೆ. ಮಕ್ಕಳ ಮೂಡ್‌ಗಳನ್ನು ಆಸಕ್ತಿಯಿಂದ ಗಮನಿಸುತ್ತ, ನನ್ನ ಮನಸ್ಸಿನ ಪುಸ್ತಕದಲ್ಲಿ 'ಮುದ್ದು ಮಣಿಗಳು' – ವಿಭಾಗದಲ್ಲಿ ದಾಖಲಿಸಿಕೊಳ್ಳತೊಡಗಿದ್ದೆ. ಮಕ್ಕಳ ಚೆಂದದ ನಗು, ಹಠಮಾರಿತನ, ಅಂಜುಬುರುಕತನ, ಅಳು, ಸಿಡುಕುಗಳನ್ನು ಕ್ಯಾಮರಾದಲ್ಲಿ ದಾಖಲಿಸಲು ಪ್ರಯತ್ನಿಸುತ್ತಿದ್ದೆ. ಕೆಲವು ಮಕ್ಕಳು ತಮ್ಮದೇ ಸ್ಟೈಲಿನಲ್ಲಿ ಪೋಸ್ ನೀಡುತ್ತ ಸ್ವಇಚ್ಛೆಯಿಂದ ನನ್ನ ಮಾಡೆಲ್‌ಗಳಾಗಿ ಸಹಕರಿಸುತ್ತಿದ್ದರು!

ನನ್ನ ಅನುಭವದಿಂದ ಹೇಳುವುದಾದರೆ ಮಕ್ಕಳು ಸಹ ತಮ್ಮದೇ ರೀತಿಯಲ್ಲಿ ದೊಡ್ಡತಲೆಗಳನ್ನು ಗಮನಿಸುತ್ತಿದ್ದವು! ಅವರ ಸ್ವಭಾವಗಳನ್ನು ಅಂದಾಜು ಮಾಡುತ್ತಿದ್ದವು ಎನ್ನಿಸುತ್ತದೆ. ಸಿಡುಕು ಮೂತಿಗಳ ಕಡೆ ಅವು ಹೂ ನಗೆ ಅರಳಿಸುತ್ತಿರಲಿಲ್ಲ! ನಾನಂತೂ ಹೇಗೋ ಮಕ್ಕಳ 'ಫ್ರೆಂಡ್' ಪಟ್ಟಿಯಲ್ಲಿ ಸೇರಿಹೋಗಿದ್ದೆ! ಹಬ್ಬಹರಿದಿನಗಳಲ್ಲಿ ಅಥವಾ ಹುಟ್ಟುಹಬ್ಬದ ಸಂದರ್ಭದಲ್ಲಿ ತಮ್ಮ ಹೊಸ ಉಡುಪನ್ನು ಮತ್ತು ಮಾಡಿಸಿಕೊಂಡಿರುವ ಅಲಂಕಾರವನ್ನು ತಮಗೆ ಪ್ರಿಯರಾದವರ ಮುಂದೆ ಪ್ರದರ್ಶಿಸಿ ಅವರಿಗೆ ಚಾಕಲೇಟ್ ನೀಡಿ ಸಂತೋಷಪಡುತ್ತಿದ್ದವು. ಆಗ ಅವರ ಫೋಟೋ ಕ್ಲಿಕ್ಕಿಸಿ, ಅಂದು ಅವರು ತೊಟ್ಟಿದ್ದ ಉಡುಪನ್ನು ನೆನಪಿಸಿಕೊಳ್ಳುವಂತೆ ಮಾಡಿ ನಾನೂ ಅವರನ್ನು ಸಂತೋಷಪಡಿಸುತ್ತಿದ್ದೆ.

ನಮ್ಮ ವಠಾರದಲ್ಲಿದ್ದ ಮಕ್ಕಳ ಮಧ್ಯೆ ಸ್ನೇಹದ ಕಾರಣ ಅಲ್ಲಿ ನೆಲೆಸಿದ್ದ ವಾತಾವರಣ, ಅಲ್ಲಿನ ನಿವಾಸಿಗಳ ಮಧ್ಯೆ, ಮುಖ್ಯವಾಗಿ ಗೃಹಿಣಿಯರ ಮಧ್ಯೆ ಗಾಢವಾದ ಸ್ನೇಹ ಮತ್ತು ಸೌಹಾರ್ದದ ಪರಿಣಾಮ ಉಂಟುಮಾಡಿತ್ತೆನ್ನಿಸುತ್ತದೆ.

ನನ್ನ ಚಟುವಟಿಕೆಗಳನ್ನು ಸೂಕ್ಷ್ಮವಾಗಿ ಗಮನಿಸುತ್ತ ಬಂದಿದ್ದ ಸುಗಂಧಿ ಎಂಬ ಪುಟ್ಟ ಬಾಲಕಿ ನನಗೊಂದು ಸರ್ಟಿಫಿಕೇಟ್ ನೀಡಿದ ಪ್ರಕರಣ ಸ್ವಾರಸ್ಯಕರವಾಗಿದೆ! ಆಕೆಯನ್ನು ನಾವು 'ಸುಗಿ' ಎಂದು ಕರೆಯುತ್ತಿದ್ದೆವು. ಬೆಂಗಳೂರಿನಿಂದ ನಮ್ಮಲ್ಲಿಗೆ ಬರುತ್ತಿದ್ದ ನವಕರ್ನಾಟಕದ ರಾಜಾರಾಮ್ ಆಕೆಗೆ 'ಸುಬ್ಬಿ' ಎಂಬ ಹೆಸರಿಟ್ಟಿದ್ದರು. ನಾನು ಆಫೀಸಿಗೆ ಹೊರಟು ನಿಂತೆ. ತಮ್ಮ ಮನೆಯ ಕಿಟಕಿಯ ಹಿಂದೆ ನನ್ನನ್ನು ಗಮನಿಸುತ್ತಿದ್ದ ಸುಗಿ 'ಅಂಬಿ ಮಾಮ ಒಳ್ಳೆಯ ಹುಡುಗ!' ಎಂದು ತಮಿಳಿನಲ್ಲಿ ಹೇಳಿದಳು! ನನಗೆ ಆಶ್ಚರ್ಯವಾಯಿತು. ಪ್ರಾಯಶಃ ಅದು ಆಕೆ ಶಾಲೆಯಲ್ಲಿ ಇಂಗ್ಲಿಷಿನಲ್ಲಿ ಕಲಿತ ಮಾತು. ಆದರೆ 'ಒಳ್ಳೆಯ ಹುಡುಗ ಅಥವಾ ಒಳ್ಳೆಯ ವ್ಯಕ್ತಿ' ಎಂದು ಹೇಳಲು ತಿಳಿಯದಷ್ಟು ಮುಗ್ಧ ವಯಸ್ಸು ಆಕೆಯದು. ನನ್ನ ಫ್ರೆಂಡ್ಲಿ ನಡವಳಿಕೆಗೆ ಆಕೆ ನೀಡಿದ ಶಹಬಾಸ್‌ಗಿರಿ ಅದು!

ಹೀಗಿರುತ್ತ, ನಮ್ಮ ವಠಾರಕ್ಕೆ ಹೊಸದಾಗಿ ಬಂದಿದ್ದ 'ಮುದ್ದಿನ ಮುದ್ದೆ'ಯಂತಿದ್ದ ಒಂದು ಮಗುವಿನ ಫೋಟೋ ತೆಗೆದು ಎಡವಟ್ಟುಮಾಡಿಕೊಂಡೆ! ನಾನು ಮತ್ತು ನನ್ನ ಕ್ಯಾಮರಾ ಸೇರಿಯೇ ಆಪಾದನೆ ಎದುರಿಸಬೇಕಾಯಿತು. ಮುಜುಗರ ಅನುಭವಿಸಿದ ಪ್ರಕರಣ. ಈ ವಿಷಯ ನನ್ನ 'ನೆಗೆಟಿವ್ ನೆನಪುಗಳು' ಲೇಖನದಲ್ಲಿ ಪ್ರಸ್ತಾಪವಾಗಿದೆ. ಅದನ್ನೇ ಇಲ್ಲಿ ಮತ್ತೆ ಹೇಳುವುದು ಬೇಡವೆನ್ನಿಸುತ್ತದೆ.

ಆ ಕಾರಣದಿಂದ ಮಕ್ಕಳ ಚೆಲುವನ್ನು, ಅವರ ಚಟುವಟಿಕೆಗಳನ್ನು ಗಮನಿಸುವುದೇನೂ ನಿಂತುಹೋಗಲಿಲ್ಲ. ಮುದ್ದುಮಣಿಗಳು ಕಣ್ಣಿಗೆ ಬಿದ್ದಾಗ ನನ್ನ ಕ್ಯಾಮರಾ ಕಣ್ಣಿನಲ್ಲಿ ತುಂಬಿಕೊಳ್ಳಲು ಈಗಲೂ ಪ್ರಯತ್ನಿಸುತ್ತೇನೆ.

ಬೆಂಗಳೂರಿನಲ್ಲಿ ನವಕರ್ನಾಟಕ ಸಂಸ್ಥೆಯಲ್ಲಿ ಕೆಲಸ ಮಾಡಿದ ಅವಧಿಯಲ್ಲಿ, ನನ್ನ ಮೆಚ್ಚಿನ ಹವ್ಯಾಸದಲ್ಲಿ ತೊಡಗಿಕೊಳ್ಳಲು ಹೊಸ ಅವಕಾಶಗಳು ತೆರೆದುಕೊಂಡವು. ಆಗಾಗ ಪುಸ್ತಕ ಲೋಕಾರ್ಪಣೆ, ವಿಚಾರಸಂಕಿರಣ – ಮುಂತಾದ ಕಾರ್ಯಕ್ರಮಗಳು ನಡೆಯುತ್ತಿದ್ದವು. ಆ ಸಮಾರಂಭಗಳಲ್ಲಿ

ಎಲ್ಲರೂ ಬರೀ ಮಾತಾಡ್ತಾರೆ ಅಜ್ಜೀ... ಕತೆ ಹೇಳ್ತಾನೆ ಇಲ್ಲ....

'ಸುಬ್ಬಾ ಭಟ್ಟರ ಮಗಳೇ, ಇದೆಲ್ಲ ನಿಂದೇ ತಗೊಳ್ಳೆ' – ಎಂಬ ಪದ್ಯದಿಂದ ಸಭಿಕರ ಮೆಚ್ಚಿನ ಚಪ್ಪಾಳೆ ಗಿಟ್ಟಿಸಿದ ಮಕ್ಕಳು.

ಜಾಣ ಮರಿ ಅಲ್ವಾ, ಮೀಟಿಂಗ್ ನಡೆಯೋವಾಗ ಗಲಾಟೆ ಮಾಡಬಾರ್ದು!

**ಪರಂಜ್ಯೋತಿ**



ಹಿರಿಯ, ಕಿರಿಯ ಕವಿಗಳು ಮತ್ತು ಲೇಖಕರ, ಹಾಗೆಯೇ 'ಹೊಸತು' ಸಂಚಿಕೆಗಳಿಗಾಗಿ ಮಾಡಿದ ಹಲವು ಸಂದರ್ಶನಗಳ ನೂರಾರು ಫೋಟೋ ಕ್ಲಿಕ್ಕಿಸಿದ್ದೇನೆ. ವಿಶೇಷ ಸಂಚಿಕೆಗಳ ಪುಟಗಳ ಮಧ್ಯೆ ಅಲ್ಲಲ್ಲಿ ಕಾಣಸಿಗುವ ಸುಂದರ ಕವಿತೆಗಳಂತೆ, ಮೇಲಿನ ಸಮಾರಂಭಗಳಲ್ಲಿ ಹಲವು ಪುಟಾಣಿಗಳೂ ನನ್ನ ಕ್ಯಾಮರಾ ಕಣ್ಣಿಗೆ ಕಾಣಿಸಿವೆ.

ಹೊರ ಊರುಗಳಿಗೆ ಪ್ರವಾಸ ಹೋದಾಗ ಗೆಳೆಯರ ಅಥವಾ ಹೊಸದಾಗಿ ಪರಿಚಯವಾದವರು ಕೆಲವೊಮ್ಮೆ ಅಪರಿಚಿತರ ಮಕ್ಕಳ ಫೋಟೋ ಕ್ಲಿಕ್ಕಿಸಿ ಊರಿಗೆ ಬಂದ ನಂತರ ಅವರಿಗೊಂದು ಪ್ರತಿ ಕಳಿಸಿಕೊಡುವುದನ್ನು ರೂಢಿಸಿಕೊಂಡಿದ್ದೆ. ಅದನ್ನವರು ಮೆಚ್ಚುತ್ತಾರೆ ಎಂದು ನಾನು ಬಲ್ಲೆ. ಕೆಲವು ವರ್ಷಗಳು ಕಳೆದನಂತರ ಆ ಗೆಳೆಯರ ಭೇಟಿಯಾದಾಗ ನಾನು ಮೊದಲಿಗೆ ವಿಚಾರಿಸುವುದು ಫೋಟೋದಲ್ಲಿ ಕಾಣಿಸಿಕೊಂಡಿದ್ದ ಆ ಪುಟಾಣಿಗಳ ಬಗ್ಗೆ! ನಾನು ಫೋಟೋ ಕ್ಲಿಕ್ಕಿಸಿದಾಗಿನ ಪುಟಾಣಿಗಳ ರೂಪ ನನ್ನ ನೆನಪಿನಲ್ಲಿಯೂ ಅಚ್ಚಾಗಿರುತ್ತದೆ. ಆ ಪುಟಾಣಿ ಈಗ ಯಾವ ಕ್ಲಾಸು, ಎಷ್ಟು ಎತ್ತರ ಬೆಳೆದಿದ್ದಾನೆ ಎಂದು ವಿಚಾರಿಸಿದರೆ ಹೆತ್ತವರಿಗೂ ಅಚ್ಚರಿಯಾಗುತ್ತದೆ. ಓ, ಅದನ್ನು (ಆಕೆ/ಆತ) ಕೇಳುತ್ತಿದ್ದೀರಾ? ಅಂವ ಈಗ ಡಿಗ್ರಿ ಮುಗಿಸಿದ್ದಾನೆ ಎಂದೋ ಅಥವಾ ಮಗಳು ಡಾಕ್ಟರಿಕೆ ಕಲಿಯುತ್ತಿದ್ದಾಳೆ ಎಂದರೆ ಅಚ್ಚರಿಗೊಳ್ಳುವ ಸರದಿ ನನ್ನದು!

ಇತ್ತೀಚೆಗೊಮ್ಮೆ, ಪುಸ್ತಕ ಲೋಕಾರ್ಪಣೆ ಸಮಾರಂಭದಲ್ಲಿ ಹಳೆಯ ಮಿತ್ರ ದಂಪತಿ ಸಿಕ್ಕಿದ್ದರು. ಕ್ಷೇಮ ಸಮಾಚಾರ ವಿನಿಮಯದ ನಂತರ ಇನ್ನೂ ಶಾಲೆ ಕಲಿಯುತ್ತಿದ್ದ, ಶಾಲೆಯ ಸಮವಸ್ತ್ರದಲ್ಲಿ ಫೋಟೋ ಕ್ಲಿಕ್ಕಿಸಿದ್ದ ಅವರ ಪುಟ್ಟ ಮಗಳ ಬಗ್ಗೆ ವಿಚಾರಿಸಿದೆ. ತಾಯಿಯ ಹಿಂದೆ ಮುಸಿ ಮುಸಿ ನಗುತ್ತ ನಿಂತಿದ್ದ, ತಾಯಿಗಿಂತ ತುಸು ಎತ್ತರವಾಗಿದ್ದ, ಯುವತಿಯೊಬ್ಬಳನ್ನು ತೋರಿಸಿ, 'ಇಗೋ ನೀವು ಫೋಟೋ ತೆಗೆದಿದ್ದಾಕೆ. ಹಿಂದುಗಡೆ ನಿಂತಿರುವಾತ ಈಕೆಯ ಗಂಡ!' ಎಂದರು. ಸಂತೋಷದಿಂದ ಉಬ್ಬುವಂತಾಯಿತು. ನನ್ನ ನೆನಪಿನಲ್ಲುಳಿದಿದ್ದ ಪುಟ್ಟ ಬಾಲೆ ಈಗ ಯುವತಿಯಾಗಿ, ಗೃಹಿಣಿಯಾಗಿ ಪತಿಯ ಜೊತೆಗೆ ನಿಂತು ನನಗೆ ನಮಸ್ಕರಿಸುತ್ತಿದ್ದಾಳೆ! ಅಚ್ಚರಿಯಿಂದ ಪೆಚ್ಚಾದೆ! ಆ ಕ್ಷಣದ ಅನುಭವವನ್ನು ಬೇರೆ ಯಾವ ಸಂತೋಷದ ಕ್ಷಣದೊಂದಿಗೆ ಹೋಲಿಸಬೇಕೋ ತಿಳಿಯದು!

ಹೀಗೆ, ಫೋಟೋಗ್ರಫಿ ನನಗೆ ಬರಿಯ ಹವ್ಯಾಸ ಮಾತ್ರವೇ ಆಗಿಲ್ಲ. ಬದಲು ನೆನಪಿನಲ್ಲಿ ಹೂತುಹೋಗಿರುವ ಚಿತ್ರಗಳನ್ನು ಹಠಾತ್ತನೆ ನನ್ನ ಮುಂದೆ ತಂದು ತೋರಿಸುವ ಮಾಧ್ಯಮವಾಗಿ ಮತ್ತು ಹೊಸ ತಲೆಮಾರಿನೊಂದಿಗೆ ಸಂಬಂಧಗಳನ್ನು ಬೆಸೆಯುವ ಸಾಧನವಾಗಿ ಉಳಿದುಕೊಂಡಿದೆ.

ಪುಸ್ತಕ ಲೋಕಾರ್ಪಣೆಯಂಥ ಕಾರ್ಯಕ್ರಮಗಳಿಗೆ ತಮ್ಮ ಹಿರಿಯರೊಂದಿಗೆ ಬರುತ್ತಿದ್ದ ಮಕ್ಕಳನ್ನು ಒಂದು ಬಗೆಯ ಅಚ್ಚರಿಯಿಂದ ಗಮನಿಸುತ್ತಿದ್ದೆ. ಅದಕ್ಕೆ ಕಾರಣವಿದೆ. ಒಬ್ಬ ಬಾಲಕಿ ತನ್ನ ತಾತನ ಜೊತೆಗೆ ಪ್ರತಿಯೊಂದು ಕಾರ್ಯಕ್ರಮದಲ್ಲೂ ಹಾಜರಿರುತ್ತಿದ್ದಳು. ಕೆಲವು ತಾಯಂದಿರು ಮಕ್ಕಳನ್ನು ಕರೆತರುತ್ತಿದ್ದರು. ಲೇಖಕಿ ತನ್ನ ಪುಸ್ತಕ ಲೋಕಾರ್ಪಣೆಗೆ ಮಗುವನ್ನು ಕರೆತರದಿದ್ದರೆ ಹೇಗೆ? ಮಕ್ಕಳಿಗೆ ಚಿಕ್ಕಂದಿನಿಂದಲೇ ಒಳ್ಳೆಯ ನಡತೆಗಳನ್ನು ಕಲಿಸಿಕೊಡುವ, ಅದಕ್ಕಾಗಿ ಅವರನ್ನು ತಯಾರು ಮಾಡುವ ಪ್ರಯತ್ನವನ್ನು ಶ್ಲಾಘಿಸಲೇಬೇಕು. ಮಕ್ಕಳಿಗೆ ಹೊರ ಜಗತ್ತನ್ನು ಪರಿಚಯ ಮಾಡಿಸುವ, ನಮ್ಮ ಆಚಾರ-ವಿಚಾರಗಳನ್ನು, ಸಾಮಾಜಿಕ ಸಭ್ಯತೆಯನ್ನು, ನಡವಳಿಕೆಗಳನ್ನು, ಬೇಕಾದರೆ ನಮ್ಮ ಸಂಸ್ಕೃತಿಯನ್ನು ಎನ್ನಿ, ಮಕ್ಕಳಿಗೆ ತಿಳಿಸಿಕೊಡುವ ಕ್ರಮದ ಒಂದು ಭಾಗ ಎಂದರೂ ಆಗುತ್ತದೆ. ತಾವು ಭಾಗವಹಿಸುವ ಕಾರ್ಯಕ್ರಮದ ಪ್ರಭಾವದಿಂದ ತಮ್ಮ ಮಗ/ಮಗಳು ಮುಂದೆ ಕವಿ, ಸಾಹಿತಿ, ವಾಕ್ಪಟು ಆಗಬೇಕು ಎಂಬುದು ಎಲ್ಲ ಹೆತ್ತವರ ಆಶಯವಾಗಿದ್ದರೆ ತಪ್ಪೇನೂ ಇಲ್ಲ.

ಆದರೆ ಸಾಹಿತ್ಯ ಸಮಾರಂಭದ ವಾತಾವರಣ ಸಂಗೀತ ಅಥವಾ ನೃತ್ಯ ಕಾರ್ಯಕ್ರಮಗಳಂತಲ್ಲ. ನಾಟಕ, ಸಿನಿಮಾ ಅಥವಾ ಸರ್ಕಸ್ಸಿನಂತೆ ಮಕ್ಕಳಿಗೆ ಮನರಂಜನೆ ನೀಡಬಲ್ಲ ಸ್ಥಳವಲ್ಲ. ಅದೊಂದು ಗಂಭೀರ ವಾತಾವರಣ ನೆಲೆಸಿರುವ ಸ್ಥಳ. ತಿಂಡಿ ತೀರ್ಥದ ನಂತರ ಪ್ರಾರ್ಥನೆ, ಗಣ್ಯರೊಬ್ಬರ ಅಧ್ಯಕ್ಷತೆ, ಅತಿಥಿ ಅಥವಾ ವಿಶೇಷ ಭಾಷಣಕಾರರಾಗಿ ಒಬ್ಬರು, ಇಬ್ಬರು ಮೂವರು ಭಾಷಣಕಾರರು, ಪುಸ್ತಕ ಲೋಕಾರ್ಪಣೆ, ಗೌರವಾರ್ಪಣೆ, ಲೇಖಕರ, ಕೃತಿಯ ಕುರಿತು ಶೈಲಿಯ ಕುರಿತು ಮೆಚ್ಚುಗೆಯ ನುಡಿಗಳು, ಅನಂತರ ವಂದನಾರ್ಪಣೆ – ಹೀಗೆ ಎರಡು ಗಂಟೆಗೂ ಹೆಚ್ಚು ಸಮಯ ತೆಗೆದುಕೊಳ್ಳುವ ಸಮಾರಂಭ.



ಅಮ್ಮ ನೋಡೇ, ಈ ಅಣ್ಣ ಪೆದ್ದಿ ಪೆದ್ದಿ ಅಂತ ರೇಗಿಸ್ತಾನೆ !

ಸಮಾರಂಭದ ಫೋಟೋ ಕ್ಲಿಕ್ಕಿಸುವಾಗ, ಉತ್ಸಾಹದಿಂದ ಬಂದಿರುವ ಮಕ್ಕಳು ಏನು ಮಾಡುತ್ತಿರಬಹುದು? ದೊಡ್ಡವರ ವಿದ್ವತ್ಪೂರ್ಣ ಸುದೀರ್ಘ ಭಾಷಣಗಳು ಪುಟಾಣಿಗಳ ಮನಸ್ಸಿನ ಮೇಲೆ ಎಂಥ ಪರಿಣಾಮ ಉಂಟುಮಾಡಿರಬಹುದು? – ಮುಂತಾಗಿ ಆಲೋಚಿಸಲು ಪ್ರಾರಂಭಿಸುತ್ತಿದ್ದೆ. ಅವರೇನು ಮಾಡುತ್ತಿರಬಹುದು ಎಂದು ಆಗಾಗ ಅವರತ್ತ ಗಮನ ಹರಿಸುತ್ತಿದ್ದೆ. ದೊಡ್ಡವರ ಮಧ್ಯೆ ಸದ್ದಿಲ್ಲದೆ ಕುಳಿತಿದ್ದರೂ ಮಕ್ಕಳು ತಮ್ಮದೇ ಲೋಕದಲ್ಲಿ ವಿಹರಿಸುತ್ತಿದ್ದುದನ್ನು ಕಾಣುತ್ತಿದ್ದೆ. ಅಮ್ಮನ ಮಡಿಲಲ್ಲಿ ಆಗಲೇ ನಿದ್ದೆಗೆ ಜಾರಿರುವ ಮಗು, ಅಪ್ಪನ ಮೊಬೈಲ್ ಕಸಿದುಕೊಂಡು ಗೇಮ್ಸ್ ಆಡುತ್ತಿರುವ ಪೋರ, ದೊಡ್ಡವರ ಮಾತುಗಳು ಅರ್ಥವಾಗದೆ ತನಗಾಗಿರುವ ಕಿರಿಕಿರಿಯನ್ನು ಅಮ್ಮನಲ್ಲಿ ಹೇಳಿಕೊಳ್ಳಲಾಗದೆ ಚಡಪಡಿಸುವ ಮಗಳು, ಸದ್ದಾಗದಂತೆ ತಂಗಿಯನ್ನು ಛೇಡಿಸುವ ಅಣ್ಣ, ಅಮ್ಮನ ತೋಳನ್ನು ಬಲವಾಗಿ ಚಿವುಟಿ ಆಕೆ ಭಾಷಣ ಕೇಳಲು ಬಿಡದೆ ಹೊರಗೆ ಕರೆದೊಯ್ದ ಬಾಲಕ, ತಂದೆಯ ಮೊಬೈಲ್‌ನಿಂದ ಸಮಾರಂಭದ ಫೋಟೋ/ವಿಡಿಯೋ ಚಿತ್ರೀಕರಣದಲ್ಲಿ ತೊಡಗಿರುವ ಬಾಲಕ – ಇತ್ಯಾದಿ.

ದೊಡ್ಡವರ ಮಾತುಗಳು ಅರ್ಥವಾಗದ ಕಿರಿಕಿರಿಯ ಜೊತೆಗೆ, ಎ.ಸಿ. ಅಳವಡಿಸಿದ ಸಭಾಂಗಣದಲ್ಲಿ ಅವರನ್ನು ಒಂದೆರಡು ಗಂಟೆ ಕೂಡಿಹಾಕುವಂಥ ಪರಿಸ್ಥಿತಿ ಅವರ ಚಡಪಡಿಕೆಗೆ ಕಾರಣವಿರಬಹುದೆಂಬುದು ನನ್ನ ಭಾವನೆ. ಆದರೂ ಒಮ್ಮೆ ನವಕರ್ನಾಟಕದ ತೋಟದಲ್ಲಿ ಹಮ್ಮಿಕೊಂಡಿದ್ದ, ಶಾಮಿಯಾನದ ನೆರಳಿನಲ್ಲಿ, ಗುಟರೆ ಹಕ್ಕಿಯ ಸ್ವರದ ಹಿನ್ನೆಲೆಯಲ್ಲಿ ನಡೆದ ಸಮಾರಂಭದಲ್ಲಿ ಸಹ, ಪುಟಾಣಿಯೊಂದು ಅಜ್ಜಿಯನ್ನು ಎಬ್ಬಿಸಿಕೊಂಡು ಮತ್ತೊಂದು ಮರದ ನೆರಳಿನಲ್ಲಿ ಏನೋ ಮಾತಿಗೆ ತೊಡಗಿದ್ದುದನ್ನು ಕಂಡೆ. ಕೆಲವು ಮಕ್ಕಳು ಅಸಹನೆ ತೋರದೆ ದೊಡ್ಡಮನುಷ್ಯತನ ತೋರಿಸುತ್ತಿದ್ದರು.

ಮಕ್ಕಳೆಂದ ಮೇಲೆ ಸ್ವಾರಸ್ಯ ಇಲ್ಲದೆ ಇರುತ್ತದೆಯೇ?

ಒಮ್ಮೆ, ಪುಸ್ತಕ ಲೋಕಾರ್ಪಣೆ ಸಮಾರಂಭ ಪ್ರಾರಂಭವಾಗಲು ಸ್ವಲ್ಪ ತಡವಾಯಿತು. ಪ್ರಾಯಶಃ ಮುಖ್ಯ ಅತಿಥಿ ಟ್ರಾಫಿಕ್‌ನಲ್ಲಿ ಸಿಕ್ಕಿಹಾಕಿಕೊಂಡಿದ್ದರೆನಿಸುತ್ತದೆ. ಸಭೆಯಲ್ಲಿದ್ದ ಕೆಲವರು ಆಗಲೇ ಆಕಳಿಸಲು ಪ್ರಾರಂಭಿಸಿದ್ದರು. ಆಗ, ಅಪ್ಪನ ಜೊತೆಯಲ್ಲಿ ಬಂದಿದ್ದ ಇಬ್ಬರು ಪುಟ್ಟ ಹುಡುಗಿಯರನ್ನು ಪ್ರಕಾಶಕರು ಒಂದು ಹಾಡು ಹಾಡುವಂತೆ ಪುಸಲಾಯಿಸಿದರು. ಅಕ್ಕ-ತಂಗಿಯರು ವೇದಿಕೆ ಹತ್ತಿ ಮೈಕಿನ ಮುಂದೆ ನಿಂತರು. ಅವು ಸಂಗೀತ ಪಾಠಕ್ಕೆ ಹೋಗುತ್ತಿದ್ದಿರಬಹುದು, ಯಾವುದಾದರೊಂದು ದೇವರನಾಮ ಹಾಡಬಹುದೆಂದು ನಿರೀಕ್ಷಿಸಿದ್ದೆ. ಸಭೆಯಲ್ಲಿದ್ದವರೂ ಹಾಗೇ ನಿರೀಕ್ಷಿಸಿರಬಹುದು. ಮಕ್ಕಳು ಹಾಡಿದ್ದು ಬಿ. ಆರ್. ಲಕ್ಷ್ಮಣರಾಯರ 'ಸುಬ್ಬಾ ಭಟ್ಟರ ಮಗಳೇ। ಇದೆಲ್ಲ ನಿಂದೇ ತಗೊಳ್ಳೆ' – ಎಂಬ ಪದ್ಯವನ್ನು. ಸಭಿಕರಿಂದ ಮೆಚ್ಚಿನ ಚಪ್ಪಾಳೆ ಗಿಟ್ಟಿಸಿದರು. ಮುಖ್ಯ ಅತಿಥಿಗಳು ಬರಲು ತಡವಾಗಿರುವುದನ್ನು ಎಲ್ಲರೂ ಮರೆತಂತಿತ್ತು.

ಕೆಲವೇ ದಿನಗಳ ಹಿಂದೆ ಆ ಮಕ್ಕಳ ತಂದೆ ಅಕಸ್ಮಾತ್ ಸಿಕ್ಕಿದ್ದರು. 'ಹೇಗಿದ್ದಾರೆ ಸುಬ್ಬಾ ಭಟ್ಟರ ಮಕ್ಕಳು' – ಎಂದು ವಿಚಾರಿಸಿದೆ. ವರ್ಷಗಳು ಕಳೆದ ನಂತರ ಮಕ್ಕಳನ್ನು ನೆನಪು ಮಾಡಿಕೊಂಡಿದ್ದಕ್ಕೆ ಅವರಿಗೂ ಸಂತೋಷವಾಗಿತ್ತು. ಹಿರಿಯಾಕೆ ಎಂ.ಎ. ಕಲಿಯುತ್ತಿದ್ದಾಳೆ. ಕಿರಿಯವಳು ಪಿಯುಸಿಯಲ್ಲಿದ್ದಾಳೆ ಎಂದು ತಮ್ಮ ಮೊಬೈಲಿನಲ್ಲಿದ್ದ ಅವರ ಫೋಟೋ ತೋರಿಸಿದರು.

ನನಗೆ ಆಗಾಗ ಹೀಗೆ ಅಚ್ಚರಿಪಡುವ, ಸಂತೃಪ್ತಿಯಿಂದ ಉಬ್ಬುವ ಕ್ಷಣಗಳು ಎದುರಾಗುತ್ತಿರುತ್ತವೆ!

**ಪರಂಜ್ಯೋತಿ**
ನಂ. ೧೦, ೧ನೇ ಮಹಡಿ, ೨೧ 'ಬಿ' ಅಡ್ಡರಸ್ತೆ, ಶ್ರೀರಾಮ ದೇವಾಲಯ ರಸ್ತೆ, ಈಜಿಪುರ
ವಿವೇಕನಗರ ಅಂಚೆ, ಬೆಂಗಳೂರು – ೫೬೦ ೦೪೭

# ಮಾಧ್ಯಮ

# ಇದು ಯಾರ ಉದ್ಯಮ??

ಜಗತ್ತನ್ನು ನಿಯಂತ್ರಿಸುತ್ತಿರುವ ಮಾಧ್ಯಮ ಸಂಸ್ಥೆಗಳು ನಾಲ್ಕಕ್ಕಿಂತಲೂ ಹೆಚ್ಚಿಲ್ಲ. ಅಂದರೆ ಮಾಧ್ಯಮಗಳ ಮಾಲೀಕತ್ವ ಕೇವಲ ನಾಲ್ಕು ಜನರ ಮಧ್ಯೆ ಇದೆ. ಜಗತ್ತಿನ ಬಹುತೇಕ ಎಲ್ಲಾ ದೇಶಗಳಲ್ಲಿ ಮಾಧ್ಯಮಗಳನ್ನೂ ಕೈಗೆಟುಕಿಸಿಕೊಳ್ಳುತ್ತಿರುವವರು ಒಂದಲ್ಲಾ ಒಂದು ರೀತಿಯಿಂದ ಈ ನಾಲ್ಕು ಜನರ /ಸಂಸ್ಥೆಗಳ ಹಿತಾಸಕ್ತಿಯನ್ನು ಮಾತ್ರವೇ ಕೈಗೆಟುಕಿಸಿಕೊಳ್ಳುವಂತಾಗಿದೆ. ಒಟ್ಟಿನಲ್ಲಿ ಮಾಧ್ಯಮ ಎಂಬ ಉದ್ಯಮಕ್ಕೆ ಓದುಗರನ್ನು ಓದುಗರನ್ನಾಗಿರಲು ಬಿಟ್ಟಿಲ್ಲ, ನೋಡುಗರನ್ನು ನೋಡುಗರನ್ನಾಗಿರಲು ಬಿಟ್ಟಿಲ್ಲ, ಕೇಳುಗರನ್ನು ಕೇಳುಗರನ್ನಾಗಿರಲು ಬಿಟ್ಟಿಲ್ಲ. ಬದಲಾಗಿ ಅವರನ್ನು ಗ್ರಾಹಕರನ್ನಾಗಿ ಬದಲು ಮಾಡಿ ಹಾಕುತ್ತಿದೆ. ತಾವು ಉದ್ಯಮವೆಂದೂ, ತಾವು ನೀಡುತ್ತಿರುವುದು ಉತ್ಪನ್ನವೆಂದೂ, ಅದನ್ನು ಬಳಸುತ್ತಿರುವವರು ಗ್ರಾಹಕರೆಂದೂ ಮುಲಾಜಿಲ್ಲದೆ ಸಾರಿವೆ. ಈ ಕಾರಣದಿಂದಾಗಿಯೇ ಸಮಾಜದ ಕಾಳಜಿ ಕ್ರಮೇಣ ಹಿನ್ನೆಲೆಗೆ ಸರಿಯುತ್ತಿದೆ. ವಿಶ್ವಸಂಸ್ಥೆ ಹೇಳಿದ್ದ ಸೇತುವೆಗಳು, ಊರುಗೋಲು ಕಾಣೆಯಾಗುತ್ತಿದೆ.

**ಜಿ. ಎನ್. ಮೋಹನ್**

'ನೀವು ಕೊನೆಯ ಬಾರಿಗೆ ರೈತರ ಜೊತೆ ಮಾತನಾಡಿದ್ದು ಯಾವಾಗ?' ಎಂದು ಪ್ರಶ್ನಿಸಿದವರು ಪಿ ಸಾಯಿನಾಥ್.

ರೈತರ ಸಮಸ್ಯೆಯನ್ನು ಆಲಿಸುವುದಕ್ಕಾಗಿಯೇ ವಿಶೇಷ ಸಂಸತ್ ಅಧಿವೇಶನವನ್ನು ಕರೆಯಬೇಕು ಎಂದು ಒತ್ತಾಯಿಸಲು ರೈತರ ಬೃಹತ್ ಜಾಥಾ ಹಮ್ಮಿಕೊಳ್ಳುವ ನಿಟ್ಟಿನಲ್ಲಿ ಜನಾಭಿಪ್ರಾಯ ರೂಪಿಸಲು ಸಾಯಿನಾಥ್ ದೇಶದ ಎಲ್ಲೆಡೆ ಸುತ್ತುತ್ತಿದ್ದರು. ಇದರ ಅಂಗವಾಗಿಯೇ ಅವರು ಬೆಂಗಳೂರಿಗೆ ಬಂದಾಗ ಕೇಳಿದ ಪ್ರಶ್ನೆ ಇದು.

ಸಭಾಂಗಣದಲ್ಲಿ ಒಂದು ನಿಮಿಷ ಗಾಢ ಮೌನ. ಆ ಪ್ರಶ್ನೆ ಎಬ್ಬಿಸಿದ ಅಲೆ ಸ್ಪಷ್ಟವಾಗಿ ಗೊತ್ತಾಗುತ್ತಿತ್ತು. ಆದರೆ ಸ್ಪಷ್ಟವಾಗಿ ಗೊತ್ತಾಗದೇ ಹೋಗಿದ್ದು ನನ್ನೊಳಗಿನ ತೊಳಲಾಟ. ಅಥವಾ ಮಾಧ್ಯಮವನ್ನು ಪ್ರತಿನಿಧಿಸುತ್ತಿರುವ ನನ್ನಂಥ ಹಲವರ ತೊಳಲಾಟ. ಮಾಧ್ಯಮ ಉದ್ಯಮದ ಎಲ್ಲಾ ಪಟ್ಟುಗಳನ್ನೂ ಕರಗತಮಾಡಿಕೊಂಡದ್ದಕ್ಕೂ ನಾವು ರೈತನ ಜೊತೆ ಮಾತನಾಡದೆ ಹಿಂದೆ ಸರಿದಿರುವುದಕ್ಕೂ ಸ್ಪಷ್ಟ ಕೊಂಡಿಗಳಿವೆ. ಭಾರತದಲ್ಲಿ ಮಾಧ್ಯಮವೂ ಸಹಾ ಈಗ ಒಂದು ಉದ್ಯಮ ಮಾತ್ರ.

'ಪ್ರಜಾಪ್ರಭುತ್ವದ ನಾಲ್ಕನೆಯ ಅಂಗ' ಎಂದು ಎಲ್ಲರೂ ಭರವಸೆಯಿಂದ ನೋಡುತ್ತಿದ್ದ ಪತ್ರಿಕೋದ್ಯಮ ಪ್ರಜಾಪ್ರಭುತ್ವದ ನಂಟನ್ನು ತಾನೇ ಕೈಯಾರ ಕಳಚಿಕೊಳ್ಳತೊಡಗಿದೆ. ಕೊಂಡುಕೊಳ್ಳಲು ಶಕ್ತಿ ಇರುವವನಿಗೆ ಕೊಂಡುಕೊಳ್ಳಲಾಗದವರ ಬದುಕನ್ನು ಬಿಡಿಸಿಡುತ್ತಿದ್ದ ದಿನಗಳಿದ್ದವು. ಆದರೆ ಯಾವಾಗ ಜಾಗತೀಕರಣಕ್ಕೆ ಹೆದ್ದಾರಿ ನಿರ್ಮಿಸಲು ಸರ್ಕಾರ ಮುಂದಾಯಿತೋ ಮಾಧ್ಯಮದ ಬಣ್ಣವೂ ಬದಲಾಗತೊಡಗಿತು. ಮಾಧ್ಯಮ ರಂಗ ಕ್ರಮೇಣ ಲಾಭದ ಮೇಲೆ ಕಣ್ಣಿಟ್ಟ ಇನ್ನೊಂದು ಉದ್ಯಮವಾಗತೊಡಗಿತು. ಈ ಕಾರಣಕ್ಕಾಗಿಯೇ ಲಾಭ ತಂದುಕೊಡುವುದಕ್ಕೆ ಮಾತ್ರ ಪ್ರಾಧಾನ್ಯತೆ ದೊರೆಯಲು ಆರಂಭಿಸಿತು. ಲಾಭ ಕೊಡುವವರು ಮಾತ್ರ ಸುದ್ದಿಯಾಗತೊಡಗಿದರು. ಅಲ್ಲಿಯವರೆಗೆ ಕೊಂಡುಕೊಳ್ಳಲಾಗದವನ ದುಸ್ತರ ಬದುಕಿನ ಬಗ್ಗೆಯೂ ಕಾಳಜಿ ವಹಿಸುತ್ತಿದ್ದ ಮಾಧ್ಯಮಗಳು ಕೊಂಡುಕೊಳ್ಳುವ ಶಕ್ತಿ ಇರುವವರಿಗೆ ಕೊಂಡುಕೊಳ್ಳುವವನ ಕಥೆಗಳನ್ನೇ ಮಾರಾಟ ಮಾಡತೊಡಗಿದವು.

ಮಾಧ್ಯಮ ಎಂಬುದು ಒಂದು ಸೇತುವೆ. ಸಮಾಜ ಹಾಗೂ ಸರ್ಕಾರದ ನಡುವೆ ಇರುವ ಅತಿ ಮುಖ್ಯವಾದ ಸೇತುವೆ ಎನ್ನುವುದನ್ನು ವಿಶ್ವಸಂಸ್ಥೆಯೇ ಘೋಷಿಸಿತ್ತು. ಜಗತ್ತಿನಾದ್ಯಂತ ಸಂಚರಿಸಿದ ವಿಶ್ವಸಂಸ್ಥೆಯ ತಂಡ ಮಾಧ್ಯಮದ ಅಧ್ಯಯನ ಮಾಡಿ ಅಭಿವೃದ್ಧಿ ಹೊಂದಿರುವ ದೇಶಗಳಿಗೆ ಮಾಧ್ಯಮ ಇನ್ನೊಂದು ಸರಕು ಅಷ್ಟೇ. ಏಕೆಂದರೆ ಅಲ್ಲಿ ಅಭಿವೃದ್ಧಿಯನ್ನು ಒಂದು ಮಟ್ಟಕ್ಕೆ ಸಾಧಿಸಲಾಗಿರುತ್ತದೆ. ಆದರೆ ಭಾರತದಂತಹ ಇನ್ನೂ ಅಭಿವೃದ್ಧಿಯ ಎತ್ತರವನ್ನು ಕಾಣದ ರಾಷ್ಟ್ರಕ್ಕೆ ಮಾಧ್ಯಮ ಎನ್ನುವುದು ಒಂದು ಊರುಗೋಲು ಎಂದು ಅಭಿಪ್ರಾಯಪಟ್ಟಿತ್ತು.

ನಮ್ಮ ದೇಶದ ಮಾಧ್ಯಮ ಅರಳಿದ್ದು ಸ್ವಾತಂತ್ರ್ಯ ಚಳವಳಿಯಲ್ಲಿ. ವಸಾಹತುಶಾಹಿಯಿಂದ ಬಿಡುಗಡೆಗೊಳ್ಳಬೇಕೆಂಬ ತಹತಹಕ್ಕೆ ಮಾಧ್ಯಮಗಳು ಕೀಲಿಣ್ಣೆಯಾಗಿದ್ದವು. ಸ್ವಾತಂತ್ರ್ಯಾನಂತರದಲ್ಲಿ ದೇಶವನ್ನು ಅಭಿವೃದ್ಧಿಯ ಪಥದಲ್ಲಿ ಕೊಂಡೊಯ್ಯಲು ಪ್ರಯತ್ನಿಸುತ್ತಿದ್ದ ಮಾಧ್ಯಮ ಆ ಗುರಿಯನ್ನು ತಲುಪುವ ಮುನ್ನವೇ ಬಂದೆರಗಿದ್ದು ಜಾಗತೀಕರಣ. ಜಾಗತೀಕರಣ ದೇಶಗಳ ನಡುವಣ ಗಡಿ ಗೋಡೆಯನ್ನು ತೊಡೆದು ಹಾಕಿ ವಿಶ್ವವನ್ನು ಒಂದು ಹಳ್ಳಿಯಾಗಿ ಬದಲಾಯಿಸುತ್ತದೆ ಎನ್ನುವಾಗ ಅದರ ಬದಲಿಗೆ ಜಾಗತೀಕರಣಗೊಂಡದ್ದು ಉದ್ಯಮಿಗಳ ದಾಹ. ದೇಶಗಳ ಗಡಿ ಗೋಡೆ ಇಲ್ಲ ಎಂದಾಕ್ಷಣ ಭಾರತ ಹಲವು ಉದ್ಯಮಗಳಲ್ಲಿ ಹೆಜ್ಜೆ ಹಾಕಿ ತಲ್ಲಣಗಳನ್ನು ಉಂಟುಮಾಡಿದ ಬಹುರಾಷ್ಟ್ರೀಯ ಕಂಪನಿಗಳು ಮಾಧ್ಯಮವನ್ನೂ ಬಿಡಲಿಲ್ಲ. ಆ ವೇಳೆಗಾಗಲೇ ಭಾರತದೊಳಗಿದ್ದ ಬೃಹತ್ ಉದ್ಯಮಿಗಳಿಗೂ ಬೇಕಾಗಿದ್ದದ್ದು ಇದೇ. ಅವರು ಆ ವೇಳೆಗೆ ಮಾಧ್ಯಮದ ಶಕ್ತಿಯನ್ನು ಮನಗಂಡಿದ್ದರು. ಆಲೋಚನೆಗಳನ್ನು ತಮ್ಮ ಕನ್ನಡಕದ ಮೂಲಕ ಕಾಣಿಸಿಬಿಡುವ ಶಾರ್ಟ್ ಕಟ್ ಅವರಿಗೆ ಪ್ರಿಯವಾಗಿತ್ತು. ದೇಶದ ಆಲೋಚನೆಯನ್ನು ರೂಪಿಸುವ, ಇದ್ದ ಆಲೋಚನೆಯನ್ನೂ ತಮಗೆ ಬೇಕಾದಂತೆ ತಿದ್ದುಬಿಡಬಹುದಾದ ಸುಲಭ ದಾರಿ ಸಿಕ್ಕಿದ್ದು ಅವರಿಗೆ ಸಂತೋಷವನ್ನೇ ತಂದುಕೊಟ್ಟಿತು.

'ಉದಯವಾಣಿ' ಪ್ರಯೋಗಾರ್ಥವಾಗಿ ನಡೆಸಿದ ಕುಗ್ರಾಮ ಗುರುತಿಸಿ ಸ್ಪರ್ಧೆಯನ್ನು ನಾನು ಸನಿಹದಿಂದ ಕಂಡಿದ್ದೇನೆ. ಮಾಧ್ಯಮಕ್ಕೆ ಇರುವ ಶಕ್ತಿ ನನಗೆ ಸರಿಯಾಗಿ ಅರ್ಥವಾಗಿದ್ದು ಸಹಾ ಈ ಪ್ರಯೋಗವನ್ನು ಅಷ್ಟು ಹತ್ತಿರದಿಂದ ನೋಡಲು ಸಾಧ್ಯವಾದ ಕಾರಣಕ್ಕಾಗಿಯೇ. ಅದು ಕುಗ್ರಾಮ ಗುರುತಿಸಿ ಸ್ಪರ್ಧೆ. ಆಗಿನ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕುಗ್ರಾಮಗಳನ್ನು ಗುರುತಿಸಿ ಅದರ ಹೆಸರನ್ನು ಕಳಿಸಿಕೊಡುವಂತೆ ಪತ್ರಿಕೆ ಕೇಳಿತ್ತು. ಹಾಗೆ ಬಂದದ್ದು ನೂರಾರು ಹೆಸರುಗಳು. ಅದರಲ್ಲಿ ಕೆಲವನ್ನು ಆಯ್ಕೆಮಾಡಿಕೊಂಡ ಪತ್ರಿಕೆ ಆ ಕುಗ್ರಾಮಗಳ ಪರಿಸ್ಥಿತಿಯ ಬಗ್ಗೆ ಮೇಲಿಂದ ಮೇಲೆ ಒಂದಷ್ಟು ವರದಿಗಳನ್ನು ಪ್ರಕಟಿಸಿತು. ಅಂತಹ ಕುಗ್ರಾಮದಲ್ಲಿ ಪಶ್ಚಿಮ ಘಟ್ಟದಲ್ಲಿರುವ ದಿಡುಪೆಯೂ ಒಂದು. ಇಲ್ಲಿ ರಸ್ತೆ ಇರಲಿಲ್ಲ, ದೀಪವಿರಲಿಲ್ಲ, ಹಾಗಾಗಿ ಮಕ್ಕಳು ಶಾಲೆಗೆ ಹೋಗುವುದೇ ದುಸ್ತರವಾಗಿತ್ತು. ಮನೆಗಳಲ್ಲಿ ಬೆಳಕಿರಲಿಲ್ಲ, ಅನಾರೋಗ್ಯ ತಾಂಡವವಾಡುತ್ತಿತ್ತು. ಆದರೆ ಯಾವಾಗ ಉದಯವಾಣಿ ಮೇಲಿಂದ ಮೇಲೆ ಕೆಲವು ವಿಶೇಷ ವರದಿಗಳನ್ನು ಪ್ರಕಟಿಸಿತೋ ದಕ್ಷಿಣ ಕನ್ನಡ ಜಿಲ್ಲೆಯ ಹಲವು ಯುವಕ ಸಂಘಗಳು ಆ ಕುಗ್ರಾಮಕ್ಕೆ ತೆರಳಿ ಶ್ರಮದಾನ ಮಾಡಿದವು., ಪರಿಣಾಮ ಅಲ್ಲಿಗೆ ಒಂದು ಕಚ್ಚಾ ರಸ್ತೆ ನಿರ್ಮಾಣವಾಯಿತು. ಪ್ರಯತ್ನ ಪುಟ್ಟದು, ಆದರೆ ಪರಿಣಾಮ ದೊಡ್ಡದು. ಆ ಕಚ್ಚಾ ರಸ್ತೆ ಬಂದ ಕಾರಣದಿಂದಾಗಿ ಆ ಊರಿಗೆ ಸೀಮೆ ಎಣ್ಣೆ ಬಂತು. ಸೀಮೆ ಎಣ್ಣೆ ಕಾರಣದಿಂದಾಗಿ ಊರಿಗೆ ಬೆಳಕು ಬಂತು. ಆ ರಸ್ತೆಯ ಪರಿಣಾಮದಿಂದಾಗಿ ಆ ಊರಿಗೆ ವಾರಕ್ಕೊಮ್ಮೆ ವೈದ್ಯರು ಬಂದು ಹೋಗಲು ಆರಂಭಿಸಿದರು. ಪರಿಣಾಮ ಕುಗ್ರಾಮದ ಆರೋಗ್ಯದಲ್ಲಿ ಚೇತರಿಕೆ ಕಂಡು ಬಂದಿತು. ಯಾವ ಗ್ರಾಮ ಅನಕ್ಷರಸ್ಥ ಗ್ರಾಮವಾಗಿತ್ತೋ ಅಲ್ಲಿನ ಮಕ್ಕಳು ಈಗ ಇದೇ ರಸ್ತೆ ಕಾರಣದಿಂದಾಗಿ ಶಾಲೆಯ ಮುಖ ನೋಡಲು ಆರಂಭಿಸಿದರು.

ಒಂದು ಮಾಧ್ಯಮ ಸಮಾಜದ ಮೇಲೆ ಮಾಡುವ ಪರಿಣಾಮಕ್ಕೆ ಇದು ಒಂದು ಪುಟ್ಟ ಉದಾಹರಣೆ ಅಷ್ಟೇ. ಇದು ಸಾಧ್ಯವಾದದ್ದು ಮಾಧ್ಯಮ ಅಲ್ಲಿಯವರೆಗೂ ಸಮಾಜದ ಅಭಿವೃದ್ಧಿಯನ್ನು ತನ್ನ ಕರ್ತವ್ಯ ಎಂದು ಭಾವಿಸಿದ್ದರಿಂದ. ಆದರೆ ಜಾಗತೀಕರಣ ಕಾಲಿಟ್ಟು, ಅದರ ಬೆನ್ನು ಹತ್ತಿ ದೇಶ ವಿದೇಶದ ಬಹುರಾಷ್ಟ್ರೀಯ ಕಂಪನಿಗಳು ಬಂದಿಳಿದು, ಮಾಧ್ಯಮಗಳನ್ನು ತನ್ನ ಉದ್ದೇಶದಿಂದ ಬೇರ್ಪಡಿಸಿ ಲಾಭ ಮಾಡಲು ನಿಂತಾಗ ಹಾಗೂ ಮಾಧ್ಯಮದ ಪ್ರಭಾವವನ್ನು ಯಥೇಚ್ಛವಾಗಿ ಬಳಸಲು ಆರಂಭಿಸಿದಾಗ ಈ ಕಾರಣಕ್ಕಾಗಿಯೇ ಮಾಧ್ಯಮದೊಳಗೆ ರೈತ ಕಾಣೆಯಾದದ್ದು ಹಾಗೂ ಮಾಧ್ಯಮದೊಳಗಿದ್ದವರೂ ರೈತನ ಜೊತೆಗಿನ ನಂಟನ್ನು ಕಡಿದುಕೊಳ್ಳಬೇಕಾಗಿ ಬಂದದ್ದು.

ಈ ಪ್ರಶ್ನೆಯನ್ನು ಕೇಳಿದ ಪಿ ಸಾಯಿನಾಥ್ ಮಾತನ್ನು ಮುಂದುವರೆಸಿ

ಇನ್ನೂ ಒಂದು ವಿಷಯದತ್ತ ನಮ್ಮ ಗಮನ ಸೆಳೆದರು. ಭಾರತ ಇಂದು ಎರಡಾಗಿ ವಿಭಜನೆಯಾಗಿ ಹೋಗಿದೆ. ಒಂದು, ಐ ಪಿ ಎಲ್ ಭಾರತ ಇನ್ನೊಂದು, ಬಿಪಿಎಲ್ ಭಾರತ ಎಂದರು.

ಐ ಪಿ ಎಲ್ ಕ್ರಿಕೆಟ್ ಮ್ಯಾಚ್‌ಗಳನ್ನು ನೋಡುತ್ತಾ ಐ ಟಿ, ಬಿ ಟಿ ಉದ್ಯೋಗ ಅರಸುತ್ತಾ ವೀಸಾ ಗಿಟ್ಟಿಸಿಕೊಂಡು ವಿದೇಶಕ್ಕೆ ಹಾರಿ ನೆಮ್ಮದಿಯಾಗಿದ್ದುಬಿಡುವ ಐ ಪಿ ಎಲ್ ಭಾರತ ಒಂದೆಡೆಯಾದರೆ ಒಂದು ಹೊತ್ತಿನ ಊಟಕ್ಕೂ ತತ್ತರಗೊಳ್ಳುವ, ಹಸುವಿನ ಸಗಣಿಯಲ್ಲಿ ಕಾಳು ಹುಡುಕಿ ಅದನ್ನು ರೊಟ್ಟಿಯಾಗಿಸಿಕೊಳ್ಳಬೇಕಾದ, ಸಾಲು ಸಾಲು ಆತ್ಮಹತ್ಯೆ ಕಾಣುತ್ತಿರುವ, ಬಿಪಿಎಲ್ ಭಾರತ ಮತ್ತೊಂದು. ರೈತನ ಕೈಕುಲುಕದ ಮಾಧ್ಯಮ ಹಾಗಾದರೆ ಯಾವ ಭಾರತದ್ದು ಐಪಿಎಲ್ ನದ್ದೋ ಬಿಪಿಎಲ್ ನದ್ದೋ? ಮಾಧ್ಯಮಗಳು ಲಾಭ ಮಾಡಿಕೊಳ್ಳುವ, ಕೋಟಿಗಟ್ಟಲೆ ಹಣ ಬಾಚಿಕೊಳ್ಳುವ ಅದಕ್ಕಾಗಿಯೇ ಸೃಷ್ಟಿಯಾದ ಐ ಪಿ ಎಲ್‌ಗಳ ಜನಕರೇ ಇವರಾಗಿರುವಾಗ ಬಿಪಿಎಲ್ ಜಗತ್ತಿಗೆ ಇವರು ಕೊಡುವ ಪ್ರಾಧಾನ್ಯತೆ ಏನು ಎನ್ನುವುದು ನಿಚ್ಚಳ. ಇಲ್ಲಿನ ಅಪಾಯಗಳು ಇನ್ನೂ ಹಲವು ಸ್ತರದ್ದು. ಒಂದೆಡೆ ಮಾಧ್ಯಮಗಳು ಉದ್ಯಮವಾಗುವತ್ತ ತಿರುಗಿದ್ದರೆ ಇನ್ನೊಂದೆಡೆ ಉದ್ಯಮವೇ ರಾಜಾರೋಷವಾಗಿ ಮಾಧ್ಯಮಗಳನ್ನು ಸಾರಾಸಗಟಾಗಿ ತನ್ನ ಬಗಲಿಗೆ ಹಾಕಿಕೊಳ್ಳುತ್ತಾ ಹೋದದ್ದು.

ಜಗತ್ತನ್ನು ನಿಯಂತ್ರಿಸುತ್ತಿರುವ ಮಾಧ್ಯಮ ಸಂಸ್ಥೆಗಳು ನಾಲ್ಕಕ್ಕಿಂತಲೂ ಹೆಚ್ಚಿಲ್ಲ. ಅಂದರೆ ಮಾಧ್ಯಮಗಳ ಮಾಲೀಕತ್ವ ಕೇವಲ ನಾಲ್ಕು ಜನರ ಮಧ್ಯೆ ಇದೆ. ಜಗತ್ತಿನ ಬಹುತೇಕ ಎಲ್ಲಾ ದೇಶಗಳಲ್ಲಿ ಮಾಧ್ಯಮಗಳನ್ನೂ ಕೈಗೆಟುಕಿಸಿಕೊಳ್ಳುತ್ತಿರುವವರು ಒಂದಲ್ಲಾ ಒಂದು ರೀತಿಯಿಂದ ಈ ನಾಲ್ಕು ಜನರ / ಸಂಸ್ಥೆಗಳ ಹಿತಾಸಕ್ತಿಯನ್ನು ಮಾತ್ರವೇ ಕೈಗೆಟುಕಿಸಿಕೊಳ್ಳುವಂತಾಗಿದೆ. ಒಟ್ಟಿನಲ್ಲಿ ಮಾಧ್ಯಮ ಎಂಬ ಉದ್ಯಮಕ್ಕೆ ಓದುಗರನ್ನು ಓದುಗರನ್ನಾಗಿರಲು ಬಿಟ್ಟಿಲ್ಲ, ನೋಡುಗರನ್ನು ನೋಡುಗರನ್ನಾಗಿರಲು ಬಿಟ್ಟಿಲ್ಲ, ಕೇಳುಗರನ್ನು ಕೇಳುಗರನ್ನಾಗಿರಲು ಬಿಟ್ಟಿಲ್ಲ. ಬದಲಾಗಿ ಅವರನ್ನು ಗ್ರಾಹಕರನ್ನಾಗಿ ಬದಲು ಮಾಡಿ ಹಾಕುತ್ತಿದೆ. ತಾವು ಉದ್ಯಮವೆಂದೂ, ತಾವು ನೀಡುತ್ತಿರುವುದು ಉತ್ಪನ್ನವೆಂದೂ, ಅದನ್ನು ಬಳಸುತ್ತಿರುವವರು ಗ್ರಾಹಕರೆಂದೂ ಮುಲಾಜಿಲ್ಲದೆ ಸಾರಿವೆ. ಈ ಕಾರಣದಿಂದಾಗಿಯೇ ಸಮಾಜದ ಕಾಳಜಿ ಕ್ರಮೇಣ ಹಿನ್ನೆಲೆಗೆ ಸರಿಯುತ್ತಿದೆ. ವಿಶ್ವಸಂಸ್ಥೆ ಹೇಳಿದ್ದ ಸೇತುವೆಗಳು, ಊರುಗೋಲು ಕಾಣೆಯಾಗುತ್ತಿದೆ.

ಈಗ ಯಾವುದೇ ಪತ್ರಿಕೆ ಓದುತ್ತಿದ್ದರೆ, ಯಾವುದೇ ಟಿ ವಿ ಚಾನಲ್ ನೋಡುತ್ತಿದ್ದರೆ, ರೇಡಿಯೋ ಸ್ಟೇಷನ್‌ನ ಗುಂಡಿ ತಿರುಗಿಸಿದ್ದರೆ, ಯಾವುದೇ ವೆಬ್ ಪುಟಕ್ಕೆ ಪ್ರವೇಶಿಸಿದ್ದರೆ ಅದರ ಮಾಲೀಕರಾರು ಎಂದು ನೋಡಿ. ತಕ್ಷಣ ನಿಮಗೆ ಸಿಗುವ ಸುದ್ದಿ ಎಂತಹದ್ದು ಎಂದು ಗೊತ್ತಾಗಿಬಿಡುತ್ತದೆ. (ಭಾರತದ ಮಾಧ್ಯಮ ಸಂಸ್ಥೆಗಳ ಮಾಲೀಕತ್ವದ ಬಗ್ಗೆ ಒಂದಷ್ಟು ವಿವರ ಚಿತ್ರಣ ಈ ಲೇಖನದ ಜೊತೆಗಿದೆ) ಭಾರತದೊಳಗೂ ಮಾಧ್ಯಮದ ಏಕಚಕ್ರಾಧಿಪತ್ಯ ಹೊಂದಲು ಸಾಕಷ್ಟು ಮುಸುಕಿನ ಗುದ್ದಾಟಗಳು ನಡೆದಿವೆ. ರಾಜಾರೋಷವಾಗಿ ದೊಡ್ಡ ಮೀನು ಸಣ್ಣ ಮೀನನ್ನು ನುಂಗಿ ಹಾಕುವಂತೆ ದೊಡ್ಡ ಉದ್ದಿಮೆದಾರರು ಮುಲಾಜಿಲ್ಲದೆ ಮಾಧ್ಯಮ ರಂಗವನ್ನು ನುಂಗಿಹಾಕುತ್ತಿದ್ದಾರೆ. ಟೆಲಿವಿಷನ್ ಚಾನಲ್‌ಗಳು, ರೇಡಿಯೋ ಸ್ಟೇಷನ್‌ಗಳು, ವೆಬ್‌ಸೈಟ್‌ಗಳು, ಮಾತ್ರವೇ ಅಲ್ಲದೆ ಮೊಬೈಲ್ ಸೆಟ್, ಮೊಬೈಲ್ ಒಳಗಣ ಸಿಮ್, ಅಂತರ್ಜಾಲ, ಡಿ ಟಿ ಎಚ್, ಕೇಬಲ್ ಜಾಲ ಎಲ್ಲವನ್ನೂ ಕೈಗೆತ್ತಿಕೊಳ್ಳುತ್ತಾ ಸಾಗಿರುವ ರಿಲಯನ್ಸ್ ಸಂಸ್ಥೆ ನಾಳೆ ತನ್ನ ಏಕಚಕ್ರಾಧಿಪತ್ಯಕ್ಕೆ ಎಲ್ಲರನ್ನೂ ತೆಗೆದುಕೊಳ್ಳಲಿದೆ.

ಹೀಗೆ ಮಾತು ಮುಂದುವರೆಸುತ್ತಲೇ ಪಿ ಸಾಯಿನಾಥ್ ಇನ್ನೂ ಒಂದು ಮಾತನಾಡಿದರು. ನಾಳೆ ದೇಶದ ಎಲ್ಲಾ ಪತ್ರಕರ್ತರು ಮುಖೇಶ್ ಅಂಬಾನಿಯ ಅಡಿ ರಿಲೆಯನ್ಸ್ ಸಂಸ್ಥೆಯ ಅಡಿ ಇರಬೇಕಾದ ದಿನಗಳು ದೂರ ಇಲ್ಲ. ಅದು ಹಾಗಲ್ಲ ಎನ್ನುವಂತೆಯೇ ಇಲ್ಲ. ಅಂಬಾನಿ ಅಶ್ವಮೇಧದ ಕುದುರೆಯಂತೆ ಹೆಜ್ಜೆ ಹಾಕುತ್ತ ನಡೆದಿದ್ದಾರೆ.

**ಜಿ. ಎನ್. ಮೋಹನ್**
ನಂ. ೧೪೨, ೬ನೇ ಕ್ರಾಸ್, ೫ನೇ ಹಂತ
ರಾಜಾಜಿನಗರ, ಬೆಂಗಳೂರು – ೫೬೦ ೦೧೦



# ಮೆಣಸಿನ ರಾಣಿ – ಗೇರುಸೊಪ್ಪೆಯ ಚೆನ್ನಭೈರಾದೇವಿ (೧೫೫೨–೧೬೦೬)



**ಪ್ರಾ**ಚೀನ ಭಾರತದ ರಾಜಸಂಹಿತೆಯಲ್ಲಿ ಮಹಿಳೆಗೆ ಸಿಂಹಾಸನಾಧಿಪತ್ಯದ ನಿರಾಕರಣೆಯಿಂದ ಪ್ರಾಚೀನ ಯುಗದುದ್ದಕ್ಕೂ ರಾಣಿಯರ ರಾಜ್ಯಭಾರದ ಸುಳಿವಿಲ್ಲ. ಆದರೆ ಮಧ್ಯಯುಗದಲ್ಲಿ ದೆಹಲಿಯ ಸಿಂಹಾಸನವೇರಿದ್ದ ಭಾರತದ ಮೊದಲ ಸಾಮ್ರಾಜ್ಞೆ ರಜಿಯಾ ಸುಲ್ತಾನಳ ನಂತರ ಮಧ್ಯಯುಗದಲ್ಲೂ, ಐರೋಪ್ಯ ವಸಾಹತುಶಾಹೀ ಯುಗದಲ್ಲೂ ಅನೇಕ ರಾಣಿಯರು ತಮ್ಮ ಪಾಳಯಗಳನ್ನು ಯಶಸ್ವಿಯಾಗಿ ಆಳಿದ್ದಾರೆ. ಝಾನ್ಸಿ ಲಕ್ಷ್ಮೀಬಾಯಿ, ಮಧುರೈಯ ಮಂಗಮ್ಮಾಳ್, ಕಿತ್ತೂರ ಚೆನ್ನಮ್ಮ, ಬಿಹಾರದ ಬೇಗಂ ಹಜರತ್ ಮಹಲ್ ಮೊದಲಾದವರು ಬ್ರಿಟಿಷ್ ವಸಾಹತುಶಾಹೀ ಶಕ್ತಿಯೊಂದಿಗೆ ಸೆಣಸಾಡಿದವರು.

**ಕರಿಮೆಣಸಿನ ರಾಣಿ**

ಕರ್ನಾಟಕದ ಪಶ್ಚಿಮ ಕರಾವಳಿಯ ಅಳಿಯ ಕಟ್ಟಿನ ಮಾತೃಪ್ರಧಾನ ವ್ಯವಸ್ಥೆಯಿಂದಾಗಿ ಮಲಬಾರಿನಿಂದ ಕೊಂಕಣದವರೆಗಿನ ನೆಲದಲ್ಲಿ ಅನೇಕ ರಾಣಿಯರು ಪ್ರಾಬಲ್ಯವನ್ನು ಮೆರೆದಿದ್ದಾರೆ. ಕೆಳದಿಯ ಚೆನ್ನಮ್ಮ, ಉಳ್ಳಾಲದ ರಾಣಿ ಅಬ್ಬಕ್ಕ ದೇವಿಯಂತೆಯೇ ಗೇರುಸೊಪ್ಪ ಅಥವಾ ಹೈವೆನಾಡನ್ನು ಅರ್ಧ ಶತಮಾನದ ಸುದೀರ್ಘ ಕಾಲ ಆಳಿದ ರಾಣಿಯೆಂದರೆ ಚೆನ್ನಭೈರಾದೇವಿ. ಅಲ್ಲಿ ಬೆಳೆಯುವ ಹೇರಳ ಕಾಡುತ್ಪತ್ತಿಯಾದ ಕರಿಮೆಣಸಿನ ಒಡತಿಯಾಗಿದ್ದ ಪರಿಣಾಮ ಅವಳನ್ನು ಪೋರ್ಚುಗೀಸರು "ಕರಿಮೆಣಸಿನ ರಾಣಿ" (Raina-De-Pimenta) ಎಂದೇ ಕರೆದಿದ್ದಾರೆ. ಮೊಗಲರ ಪ್ರಸಿದ್ಧ ಚಕ್ರವರ್ತಿ ಅಕ್ಬರ್ ಮತ್ತು ಇಂಗ್ಲೆಂಡಿನ ಸುವರ್ಣಯುಗದ ಪ್ರತಿನಿಧಿ ರಾಣಿ ಮೊದಲನೇ ಎಲಿಜಬೆತ್‌ಳ ಸಮಕಾಲೀನಳಾಗಿ ಕರ್ನಾಟಕದ ಕರಾವಳಿಯಲ್ಲಿ ಅಳಿಸಲಾಗದ ಛಾಪನ್ನು ಮೂಡಿಸಿದ್ದ ರಾಣಿ ಈಕೆ.

ಇಂದಿನ ಉತ್ತರ ಕನ್ನಡ ಜಿಲ್ಲೆಯ ಶರಾವತಿ ನದಿಯ ಉತ್ತರ ದಂಡೆಯ ಮೇಲಿರುವ ಗೇರುಸೊಪ್ಪೆಯು ಶಾಸನ ಹಾಗೂ ಸಾಹಿತ್ಯದಲ್ಲಿ ಹೈವೆನಾಡು, ನಗಿರೆ, ನಗರ ಬಸ್ತಿಕೆರೆ, ಭಲ್ಲಟಕಿಪುರ ಮುಂತಾದ ಹೆಸರುಗಳಿಂದ ಕರೆಯಲ್ಪಟ್ಟಿದೆ. ಗೇರುಮರ ಯಥೇಚ್ಛವಾಗಿರುವುದರಿಂದ "ಗೇರುಮರದ ಎಲೆ" ಎಂಬರ್ಥದ ಗೇರುಸೊಪ್ಪು, ಗೇರುಸೊಪ್ಪೆ ಎಂಬ ಹೆಸರು. ಹಿಂದಿಭಾಷೆಯಲ್ಲಿ ಭಲ್ಲಟಕ ಎಂದರೆ ಗೇರು. ಅದರಿಂದಾಗಿ ಭಲ್ಲಟಕಿಪುರ ಎಂಬ ಹೆಸರಿದೆ. ರಾಣಿ ಚೆನ್ನಭೈರಾದೇವಿಯ ಕಾಲದಲ್ಲಿ ಇದು ಹೈವೆ, ಕೊಂಕಣ ಮತ್ತು ಮಲಬಾರ್‌ವರೆಗೆ ವಿಸ್ತರಿಸಿತ್ತು.

೧೫ನೇ ಶತಮಾನದ ನಂತರದ ಗೇರುಸೊಪ್ಪೆಯ ಇತಿಹಾಸ ಶಾಸನೀಯವಾಗಿ ನಿಚ್ಚಳ. ಗೇರುಸೊಪ್ಪೆ ಅಥವಾ ಹೈವೇನಾಡಿನ ದೊರೆಗಳನ್ನು "ಭೈರದೊರೆ"ಗಳೆಂದು ಕರೆದಿದ್ದು ಅವರ ವಂಶಾವಳಿಯಲ್ಲಿ ಲಭ್ಯವಾಗಿರುವ ಮೊದಲ ದೊರೆ ಒಂದನೇ ಭೈರವ. ವಿಜಯನಗರದ ಪಾಳಯವಾಗಿದ್ದ ಹೈವೆಯನ್ನು ಈ ಪಾಳೆಗಾರರು ಎರಡು ಕೇಂದ್ರಗಳಿಂದ ಆಳಿದ್ದರು–ಈಗಿನ ಹೊನ್ನಾವರ ತಾಲ್ಲೂಕಿನ ಗೇರುಸೊಪ್ಪೆಯಿಂದ ಮತ್ತು ಭಟ್ಕಳ ತಾಲ್ಲೂಕಿನ ಸಂಗೀತಪುರದಿಂದ. ೧೫೬೦ರಲ್ಲಿ ರಾಣಿ ಚೆನ್ನಭೈರಾದೇವಿಯು ಈ ಎರಡೂ ಕೇಂದ್ರಗಳನ್ನು ಒಟ್ಟುಗೂಡಿಸಿ ಗೇರುಸೊಪ್ಪೆಯಿಂದಲೇ ಆಳತೊಡಗಿದಳು. ಚೆನ್ನದೇವಿಯಮ್ಮ ೧೫೪೧–೧೫೫೧ರವರೆಗೆ ಸಂಗೀತಪುರದ ರಾಣಿಯಾಗಿದ್ದು ಈಕೆಯ ನಿಧನದ ನಂತರ ಈಕೆಯ ಸಹೋದರಿ ಚೆನ್ನಭೈರಾದೇವಿಯು ಸಂಗೀತಪುರದ ರಾಣಿಯಾದಳು. ೧೫೬೦ರಲ್ಲಿ ಗೇರುಸೊಪ್ಪೆಯನ್ನಾಳುತ್ತಿದ್ದ ಕೃಷ್ಣದೇವರಸ ಸತ್ತಾಗ ಆತನ ಸೊಸೆಯಾಗಿದ್ದ ಚೆನ್ನಭೈರಾದೇವಿಗೆ ಗೇರುಸೊಪ್ಪೆಯ ಒಡೆತನವೂ ದೊರಕಿತು. ಇದರಿಂದಾಗಿ ೧೫೬೦ರಲ್ಲಿ ಈ ಎರಡೂ ಪ್ರದೇಶಗಳನ್ನು ಐಕ್ಯಗೊಳಿಸಿದಳು.

ಗೇರುಸೊಪ್ಪೆ ಅಥವಾ ಹೈವೆನಾಡು ಅನೇಕ ಕಾರಣಗಳಿಂದಾಗಿ ಮಹತ್ವ ಪಡೆದಿತ್ತು. ಮೊದಲನೆಯದಾಗಿ ಸಹಜ ಕಾಡುತ್ಪತ್ತಿಯಾಗಿ ಹೇರಳ ಪ್ರಮಾಣದಲ್ಲಿ ಬೆಳೆಯುತ್ತಿದ್ದ, ಗಾತ್ರ ಹಿರಿದಾಗಿದ್ದರೂ ಖಾರ ಮತ್ತು ಭಾರದಲ್ಲಿ ಹಗುರವಾಗಿದ್ದ, ಕರಿಮೆಣಸು ಪೋರ್ಚುಗೀಸರಿಗೆ ಅತ್ಯಾಕರ್ಷಕವಾಗಿತ್ತು. ಈ ಮೆಣಸಿನ ವ್ಯಾಪಾರದ ಮಹತ್ವದ ಬಗ್ಗೆ ಆಫ್ರೋಸೋ ಮೆಕ್ಸಿಕಾ (Affroso Mexica) ಎಂಬ ಕೊಚ್ಚಿಯ ಪೋರ್ಚುಗೀಸ್ ಕಪ್ತಾನನು ಪೋರ್ಚುಗೀಸ್ ದೊರೆಗೆ ಬರೆದ ಪತ್ರದಲ್ಲಿ, "ಗೋವಾ ಮತ್ತು ಭಟ್ಕಳಗಳ

ಪೋರ್ಚುಗೀಸರಂತಹ ಹೊರಗಿನ ವೈರಿಗಳು ಒಂದೆಡೆಯಾದರೆ ನೆರೆಯಲ್ಲೇ ಕೆಳದಿಯ ನಾಯಕನು ರಾಣಿಗೆ ಪ್ರಬಲ ವೈರಿಯಾಗಿದ್ದ. ವಿಜಯನಗರದ ಅವನತಿಯ ನಂತರ ತಾನೇ ವಿಜಯನಗರದ ಉತ್ತರಾಧಿಕಾರಿಯೆಂಬಂತೆ ಬೀಗಿ ಬಿಂಬಿಸಿಕೊಳ್ಳುತ್ತಿದ್ದ ಕೆಳದಿಯ ದೊರೆಗಳು ಇಡೀ ಪಶ್ಚಿಮ ಕರಾವಳಿಯ ಒಡೆತನಕ್ಕಾಗಿ ಹಾತೊರೆಯುತ್ತಿದ್ದರು. ಕೆಳದಿಯ ದೊರೆಗಳು ಕರಾವಳಿಯ ಬೆಳಗಿ, ಸೋಂದ ಮುಂತಾದ ನಾಯಕರುಗಳೊಂದಿಗೆ ಸಂಯುಕ್ತವಾಗಿ ರಾಣಿಯ ವಿರುದ್ಧ ನಿರಂತರವಾಗಿ ಹೋರಾಟದಲ್ಲಿ ತೊಡಗಿದ್ದರು. ಬೆಳಗಿ ನಾಯಕರುಗಳನ್ನು ರಾಣಿಯು ಮಣಿಸಿದ್ದರೂ ಅವಳ ಸಮಕಾಲೀನ ಕೆಳದಿಯ ವೆಂಕಟಪ್ಪ ನಾಯಕನನ್ನು ಮಣಿಸಲಾಗಲಿಲ್ಲ. ಆದರೆ ಪಡುಬಿದ್ರಿಯ ಬಲ್ಲಾಳರೊಂದಿಗೆ ಸ್ನೇಹದಿಂದಿದ್ದ ರಾಣಿಯು ಬೈಂದೂರಿನಲ್ಲಿ ಮುನೀಶ್ವರ ಬಸದಿ ನಿರ್ಮಾಣಕ್ಕೆ ಸಹಕರಿಸಿದ್ದಳು.

ಪಿ. ರತ್ನಾವತಿ

ನಡುವೆ ಹೊನ್ನಾವರ, ಮರಿಜಿನ್ ಮತ್ತು ಅಂಕೋಲಾಗಳೆಂಬ ಜಾಗಗಳಿವೆ. ಇಲ್ಲಿಂದ ವಾರ್ಷಿಕ ೫೦೦೦ ಕ್ರುಸಡೋಸ್‌ನಷ್ಟು ಮೆಣಸು ಹಡಗನ್ನೇರುತ್ತದೆ. ಈ ಬಂದರುಗಳು ಗೇರುಸೊಪ್ಪೆಯ ರಾಣಿಗೆ ಸೇರಿವೆ. ಇಲ್ಲಿನ ಮೆಣಸು ಕೊಚ್ಚಿಯ ಮೆಣಸಿಗಿಂತ ದೊಡ್ಡದು ಆದರೆ ಭಾರ, ಖಾರಗಳು ಕಡಿಮೆ. ಇವುಗಳನ್ನು ನಾವು ದೊರಕಿಸಿಕೊಳ್ಳಬೇಕು..."

ಎರಡನೆಯದಾಗಿ ಹೊನ್ನಾವರ, ಭಟ್ಕಳ, ಅಂಕೋಲಾ ಬಂದರುಗಳು ಪ್ರಮುಖವಾಗಿದ್ದು ಭಟ್ಕಳವು ಅಂತರರಾಷ್ಟ್ರೀಯ ವಾಣಿಜ್ಯ ಬಂದರಾಗಿದ್ದಿತ್ತು. ಈ ಬಂದರಿನ ಮೂಲಕ ವಿಜಯನಗರದ ಆಳರಸರು ಯುದ್ಧಾಸ್ತ್ರಗಳನ್ನು, ಕುದುರೆಗಳನ್ನು ಅರೇಬಿಯಾ ಮತ್ತು ಪೋರ್ಚುಗಲ್ಲುಗಳಿಂದ ಆಮದು ಮಾಡಿಕೊಳ್ಳುತ್ತಿದ್ದರು. ಕರಿಮೆಣಸು, ಅಡಿಕೆ ಮತ್ತು ಗೋಡಂಬಿ ರಫ್ತಾಗುತ್ತಿದ್ದವು. ಗೇರುಹಣ್ಣಿನಿಂದ ತಯಾರಾಗುವ ಗೋವಾ ಫೆನ್ನಿ ಮದ್ಯವು ಗೋವಾದ ಮಾರುಕಟ್ಟೆಯಲ್ಲಿ ವಿಶೇಷ ಬೇಡಿಕೆ ಹೊಂದಿತ್ತು. ಸ್ಥಳೀಯವಾಗಿ ಈ ಮದ್ಯಕ್ಕೆ ಗಂಗಸರವೆಂದೂ ಹೆಸರಿದೆ. ಭಟ್ಕಳದ ವಾಣಿಜ್ಯ ಮಹತ್ವದಿಂದಾಗಿ ಪ್ರಾಚೀನ ಭಾರತದ ಬರೋಚ್ ಬಂದರಿನಂತೆ ಮಧ್ಯಯುಗದಲ್ಲಿ ಕರ್ನಾಟಕದ ಬಂದರಾಗಿತ್ತು.

ಮೂರನೆಯದಾಗಿ ಅಲ್ಲಿನ ಮಿರಿಜಾನ್ ಜಲದುರ್ಗವು ಶಸ್ತ್ರಾಗಾರ ಮತ್ತು ಸೇನೆಯ ದೃಷ್ಟಿಯಿಂದಲೂ ಮಹತ್ವ ಪಡೆದಿತ್ತು.

ಗೇರುಸೊಪ್ಪೆಯ ರಮಣೀಯ ಪರಿಸರ, ಹಚ್ಚಹಸುರಿನ ಮೆಣಸಿನ ಬಳ್ಳಿಗಳ ಹಾಸು, ಅಡಿಕೆ, ತೆಂಗು, ಗೇರುಮರಗಳು, ಕಾಳಿ, ಶರಾವತಿ, ಅಘನಾಶಿನಿ ನದಿಗಳು ನಿರ್ಮಿಸಿದ ಜಲಪಾತಗಳು, ಜೋಗ, ಅಪ್ಸರಕೊಂಡದಂತಹ ವಿಸ್ಮಯಕಾರೀ ಶಿಲಾರಚನೆಗಳ ಪರಿಸರ ಇವೆಲ್ಲವೂ ಪ್ರವಾಸಿಗರನ್ನು ಆಕರ್ಷಿಸುವ ತಾಣಗಳಾಗಿದ್ದು ಮಹತ್ವ ಹೊಂದಿತ್ತು.

**ರಾಣಿಯ ರಾಜನೀತಿ!!**

ಈ ಮಹತ್ವದಿಂದಾಗಿಯೇ ಚೆನ್ನಭೈರಾದೇವಿಯು ತನ್ನ ನಾಡನ್ನು ಅನೇಕ ವೈರಿಗಳಿಂದ ರಕ್ಷಿಸಿಕೊಳ್ಳಬೇಕಾಗಿತ್ತು ಮತ್ತು ಮೊದಲ ವೈರಿಗಳು ಪೋರ್ಚುಗೀಸರೇ ಆಗಿದ್ದರು! ಪೋರ್ಚುಗೀಸರ ಆಗಮನದ ಆರಂಭದಲ್ಲಿ ಗೇರುಸೊಪ್ಪೆ ಮತ್ತು ಪೋರ್ಚುಗೀಸರ ಮಧ್ಯೆ ಸೌಹಾರ್ದಯುತ ಸಂಬಂಧವಿದ್ದಿತ್ತು. ೧೫೧೦ರಲ್ಲಿ ವಿಜಯನಗರದ ದೊರೆ ಕೃಷ್ಣದೇವರಾಯನ ಪಾಳಯವಾಗಿದ್ದ ಇದು ಬಿಜಾಪುರದಿಂದ ಗೋವೆಯನ್ನು ಪೋರ್ಚುಗೀಸರಿಗೆ ಒದಗಿಸಿಕೊಡುವಲ್ಲಿ ಮುಖ್ಯ ಪಾತ್ರ ವಹಿಸಿತ್ತು. ಆದರೆ ತಾಳಿಕೋಟೆ ಯುದ್ಧದಲ್ಲಿ ವಿಜಯನಗರದ ಪತನಾನಂತರ ರಾಣಿ ಚೆನ್ನಭೈರಾದೇವಿಯು ಬಹುತೇಕ ಸ್ವತಂತ್ರಳಾಗಿಯೇ ಗೇರುಸೊಪ್ಪೆಯನ್ನು ಆಳಿ ಪಶ್ಚಿಮ ಕರಾವಳಿಯನ್ನು ದೋಚುವ ಪೋರ್ಚುಗೀಸರ ವಾಣಿಜ್ಯ ಒಪ್ಪಂದಗಳನ್ನು ವಿರೋಧಿಸತೊಡಗಿದ್ದಳು. ಚತುರ ರಾಜಕೀಯ ಮುತ್ಸದ್ದಿಯಾದ ರಾಣಿ ಚೆನ್ನಭೈರಾದೇವಿಯು ವಿಜಯನಗರದ ಸಾಂಪ್ರದಾಯಿಕ ಪೋರ್ಚುಗೀಸ್ ಪರ ರಾಜತಾಂತ್ರಿಕ ಸಂಬಂಧದಿಂದ ದೂರಸರಿದು ಪೋರ್ಚುಗೀಸರ ವಿರೋಧಿಗಳಾದ ಬಿಜಾಪುರ, ಗೋಲ್ಕೊಂಡಗಳ ಶಾಹೀ ಸುಲ್ತಾನರು, ಡಚ್ಚರು ಹಾಗೂ ಕಲ್ಲಿಕೋಟೆಯ ಸಾಮುದಿರಿ ದೊರೆಗಳ ಸಹಾಯದಿಂದ ಪೋರ್ಚುಗೀಸರನ್ನು ಹತ್ತಿಕ್ಕಲು ಪ್ರಯತ್ನಿಸಿದಳು. ಟರ್ಕಿಯ ಸೋಫಾಲಾದ ದೊರೆ ಸುಲೈಮಾನ್‌ನ ಹಡಗೊಂದು ಹೊನ್ನಾವರದ ಕರಾವಳಿಯಲ್ಲಿ ಲಂಗರು ಹಾಕಿದ್ದಾಗ ತಮ್ಮ ವಿರುದ್ಧ ರಾಣಿಯು ಟರ್ಕಿಯವರೊಂದಿಗೆ ಸಂಚು ನಡೆಸುವ ಗುಮಾನಿಯು ಪೋರ್ಚುಗೀಸರನ್ನು ಕಾಡಿತ್ತು. ಆದರೆ ರಾಣಿಯು ತನಗೂ ಈ ಹಡಗಿಗೂ ಸಂಬಂಧವಿಲ್ಲವೆಂದು ಮನವರಿಕೆ ಮಾಡಿಕೊಟ್ಟಾಗ ಪೋರ್ಚುಗೀಸರ ನೌಕಾಪಡೆಯು ಸುಲೈಮಾನನನ್ನು ಹೊಡೆದೋಡಿಸಿ ಆತನ ಮಗನನ್ನು ಸೆರೆಹಿಡಿದಿತ್ತು.



ಚತುರ್ಮುಖ ಬಸದಿ

**೧೧೩ ಹಡಗುಗಳು ಮತ್ತು ದತ್ತೂರಿ ಬೀಜಗಳು**

೧೫೬೮-೭೧ರ ಕಾಲದಲ್ಲಿ ಅನೇಕ ಸಂಘರ್ಷಗಳನ್ನು ರಾಣಿಯು ಪೋರ್ಚುಗೀಸರ ವಿರುದ್ಧ ಎದುರಿಸಬೇಕಾಯಿತು. ಹೊನ್ನಾವರದ ಆಕ್ರಮಣಕ್ಕೆ ಪೀಠಿಕೆಯಾಗಿ ಪೋರ್ಚುಗೀಸ್ ಗವರ್ನರ್ ಲೂಯಿ-ಡಿ-ಅಟೈಡೆಯು ಹಿಂದಿನ ಆರು ವರ್ಷಗಳಿಂದ ಬಾಕಿ ಇರುವ ಕಪ್ಪವನ್ನು ಪ್ರತಿ ಖಂಡಿ (೧ ಖಂಡಿ = ೨೬೦ ಕೆಜಿ) ಕರಿಮೆಣಸಿಗೆ ೨೨.೫ ಪರ್ದೋಸ್‌ಗಳಂತೆ ಪ್ರತಿ ವರ್ಷ ಒಂದು ಹಡಗು ಭರ್ತಿ ಮೆಣಸನ್ನು ನೀಡಬೇಕೆಂದು ರಾಣಿಗೆ ತಾಕೀತು ಮಾಡುತ್ತಾನೆ. ಇದನ್ನು ರಾಣಿಯು ಪ್ರತಿಭಟಿಸಿದಾಗ ಪೋರ್ಚುಗೀಸರ ೧೧೩ ಹಡಗುಗಳ ನೌಕಾದಳ ಜೊತೆಗೆ ೩೦೦ ಕಾಲ್ದಳವು ಹೊನ್ನಾವರದ ಮೇಲೆ ಆಕ್ರಮಣ ವೆಸಗುತ್ತದೆ. ರಾಣಿಗೆ ಬಿಜಾಪುರ, ಗೋಲ್ಕೊಂಡ ಮತ್ತು ಕಲ್ಲಿಕೋಟೆಯಿಂದ ಸಹಾಯ ಬಂದರೂ ಸಹ ಪೋರ್ಚುಗೀಸರಿಂದ ಹೊನ್ನಾವರವನ್ನು ಕಾಪಾಡಲು ಸಾಧ್ಯವಾಗುವುದಿಲ್ಲ. ಆಂಟೋ ಆಂಟಾರಿಯೋ ಪಿಂಟೊ ಪೆರೆಯ್ರ (Anto Antorio Pinto Pereyra) ಎಂಬ ಪೋರ್ಚುಗೀಸ್ ಬರಹಗಾರನು ದಾಖಲಿಸಿರುವಂತೆ ರಾಣಿಯು ಪೋರ್ಚುಗೀಸ್ ಸೈನಿಕರಿಗೆ ಸ್ಮರಣಶಕ್ತಿಯನ್ನು ನಾಶಪಡಿಸುವ ಗುಣವುಳ್ಳ ದತ್ತೂರಿ ಬೀಜಗಳ ಮಿಶ್ರಣದ ಆಹಾರವನ್ನು ಉಣಿಸಿ ಅವರುಗಳನ್ನು ಮಣಿಸುವ ರಣತಂತ್ರವನ್ನು ರೂಪಿಸಿದ್ದಳು. ಆದರೆ ಅದನ್ನು ಮೊದಲೇ ಪತ್ತೆಹಚ್ಚಿದ ಪೋರ್ಚುಗೀಸರು ರಾಣಿಯ ತಂತ್ರವನ್ನು ವಿಫಲಗೊಳಿಸಿದರು. ಹೊನ್ನಾವರವು ಪೋರ್ಚುಗೀಸರ ವಶವಾಗಿ ಅದಕ್ಕೆ "ಸೇಂಟ್ ಕಥೆರಿನಾ (St. Catherina)" ಎಂದು ನಾಮಕರಣ ಮಾಡಲಾಗುತ್ತದೆ.

೧೫೭೧ರಲ್ಲಿ ರಾಣಿಯು ಹೊನ್ನಾವರವನ್ನು ಮರುವಶಪಡಿಸಿಕೊಳ್ಳಲು ಪ್ರಯತ್ನಿಸಿದಳಾದರೂ ಅದು ವಿಫಲವಾಗುತ್ತದೆ.




ಪೋರ್ಚುಗೀಸರಂತಹ ಹೊರಗಿನ ವೈರಿಗಳು ಒಂದೆಡೆಯಾದರೆ ನೆರೆಯಲ್ಲೇ ಕೆಳದಿಯ ನಾಯಕನು ರಾಣಿಗೆ ಪ್ರಬಲ ವೈರಿಯಾಗಿದ್ದ. ವಿಜಯನಗರದ ಅವನತಿಯ ನಂತರ ತಾನೇ ವಿಜಯನಗರದ ಉತ್ತರಾಧಿಕಾರಿಯೆಂಬಂತೆ ಬೀಗಿ ಬಿಂಬಿಸಿಕೊಳ್ಳುತ್ತಿದ್ದ ಕೆಳದಿಯ ದೊರೆಗಳು ಇಡೀ ಪಶ್ಚಿಮ ಕರಾವಳಿಯ ಒಡೆತನಕ್ಕಾಗಿ ಹಾತೊರೆಯುತ್ತಿದ್ದರು. ಕೆಳದಿಯ ದೊರೆಗಳು ಕರಾವಳಿಯ ಬೆಳಗಿ, ಸೋಂದ ಮುಂತಾದ ನಾಯಕರುಗಳೊಂದಿಗೆ ಸಂಯುಕ್ತವಾಗಿ ರಾಣಿಯ ವಿರುದ್ಧ ನಿರಂತರವಾಗಿ ಹೋರಾಟದಲ್ಲಿ ತೊಡಗಿದ್ದರು. ಬೆಳಗಿ ನಾಯಕರುಗಳನ್ನು ರಾಣಿಯು ಮಣಿಸಿದ್ದರೂ ಅವಳ ಸಮಕಾಲೀನ ಕೆಳದಿಯ ವೆಂಕಟಪ್ಪ ನಾಯಕನನ್ನು ಮಣಿಸಲಾಗಲಿಲ್ಲ. ಆದರೆ ಪಡುಬಿದ್ರಿಯ ಬಲ್ಲಾಳರೊಂದಿಗೆ ಸ್ನೇಹದಿಂದಿದ್ದ ರಾಣಿಯು ಬೈಂದೂರಿನಲ್ಲಿ ಮುನೀಶ್ವರ ಬಸದಿ ನಿರ್ಮಾಣಕ್ಕೆ ಸಹಕರಿಸಿದ್ದಳು.

**ಸಂಚುಗಾರ ಪ್ರಿಯತಮ**

ಹೊರಗಿನ ವೈರಿಗಳತ್ತಲೇ ದೃಷ್ಟಿನೆಟ್ಟಿದ್ದ ರಾಣಿಯು ತನ್ನ ನೆರಳಿನೊಂದಿಗೆ ಬೆಳೆಯುತ್ತಿದ್ದ ವೈರಿಯನ್ನು

ಗುರುತಿಸದಾದಳು. ರಜಿಯಾ ಸುಲ್ತಾನಳು ತನ್ನ ಗುಲಾಮ ಯಾಕೂಬನನ್ನು ಪ್ರೇಮಿಸಿದಂತೆ ರಾಣಿ ಚೆನ್ನಭೈರಾದೇವಿಯೂ ಅತ್ಯಂತ ಸಾಮಾನ್ಯ ವ್ಯಕ್ತಿಯೊಬ್ಬನ ಮೋಹಪಾಶಕ್ಕೆ ಸಿಲುಕಿದ್ದಳು. ಉಳ್ಳಾಲದ ರಾಣಿ ಅಬ್ಬಕ್ಕಳ ಅವನತಿಯು ಅವಳ ಪತಿ ಬಂಗರಸನಿಂದ ಆದಂತೇ ರಾಣಿ ಭೈರಾದೇವಿಯ ಅಂತ್ಯಕ್ಕೆ ಈ ಕೃತಘ್ನ ಪ್ರೇಮಿ ಕಾರಣವಾಗುವುದು ಒಂದು ದುರಂತವೇ ಹೌದು. ಇಟಲಿಯ ಪ್ರವಾಸಿ ಪೆಟ್ರೊ ಡೆಲ್ಲ ವಿಲ್ಲಿಯು ತನ್ನ ಪ್ರವಾಸ ಕಥನದಲ್ಲಿ ದಾಖಲಿಸಿರುವಂತೆ, "ಅಳಿಯ ಕಟ್ಟಿನ ಸಂಪ್ರದಾಯದಲ್ಲಿ ರಾಣಿಯರು ತಮ್ಮ ಇಚ್ಛಾನುಸಾರ ಸಂಗಾತಿಯನ್ನು ಆರಿಸಿಕೊಳ್ಳುವ ಸಂಪ್ರದಾಯವಿದ್ದರೂ ಈ ಅಯೋಗ್ಯನನ್ನು ಪ್ರೇಮಿಸಿದ ಬಗೆಗೆ ಪ್ರಜೆಗಳಿಗೂ ಬೇಸರವಿದ್ದಿತ್ತು. ವಂಚಕ ಪ್ರೇಮಿಯ ಮೋಹಜಾಲಕ್ಕೆ ಸಿಲುಕಿದ ರಾಣಿಯು ಸರ್ವಸ್ವವನ್ನೂ ಆತನಿಗೊಪ್ಪಿಸಿದ್ದಳು. ಆದರೆ ಕೃತಘ್ನ ಪ್ರಿಯತಮನು ತನ್ನ ಪ್ರಭಾವವನ್ನು ಬಳಸಿಕೊಂಡು ರಾಣಿಯ ವಿರುದ್ಧ ಬಂಡಾಯಗಳನ್ನು ಪ್ರೇರೇಪಿಸತೊಡಗುತ್ತಾನೆ. ಆತನ ಮುಖವಾಡ ಕಳಚುತ್ತಿದ್ದಂತೇ ತನ್ನ ತಪ್ಪನ್ನರಿತ ರಾಣಿಯು ಅವನಿಂದ ವಿಮೋಚನೆಗಾಗಿ ಪೋರ್ಚುಗೀಸರ ಸಹಕಾರಕ್ಕಾಗಿ ಯಾಚಿಸುವಂತಾಗುತ್ತದೆ. ತನ್ನ ಇಡೀ ರಾಜ್ಯವನ್ನೇ ಪೋರ್ಚುಗೀಸರಿಗೆ ನೀಡುವ ಕರಾರಿಗೆ ಸಹಿ ಹಾಕುತ್ತಾಳೆ. ಆದರೆ ಪೋರ್ಚುಗೀಸರ ಸಹಾಯವು ಆಗಮಿಸುವ ಮೊದಲೇ ಅವಳ ಧೂರ್ತ ಪ್ರಿಯಕರನು ಕೆಳದಿಯ ಹಾಗೂ ಬೆಳಗಿಯ ನಾಯಕರನ್ನು ಆಕ್ರಮಣಕ್ಕೆ ಆಹ್ವಾನಿಸುತ್ತಾನೆ. ಕ್ರೂರ ವಂಚನೆಯಿಂದ ವಿಹ್ವಳಲಾದ ರಾಣಿಯು ವೈರಿ ಸೈನ್ಯದೊಂದಿಗೆ ಹೋರಾಡಲು ಅಸಮರ್ಥಳಾಗಿದ್ದಳು. ಕೆಳದಿಯ ದೊರೆ ವೆಂಕಟಪ್ಪನು ರಾಣಿಯನ್ನು ಸೆರೆಹಿಡಿದು ಕಾರಾಗೃಹಕ್ಕೆ ತಳ್ಳಿದರೂ ಬಹುಗೌರವದಿಂದ ಆಕೆಯನ್ನು ನಡೆಸಿಕೊಳ್ಳುತ್ತಾನೆ. ಆದರೆ ವಂಚಕನ ಕೃತ್ಯಕ್ಕೆ ತಕ್ಕ ಶಾಸ್ತಿ ಎಂಬಂತೆ ರಾಣಿಯ ಅಯೋಗ್ಯ ಪ್ರಿಯಕರನ ಶಿರಚ್ಛೇದವನ್ನು ಗೈದು ಗೇರುಸೊಪ್ಪೆಯನ್ನು ಸಂಪೂರ್ಣವಾಗಿ ವಶಪಡಿಸಿಕೊಳ್ಳುತ್ತಾನೆ. ಅರ್ಧ ಶತಮಾನದ ಕಾಲ ಪಡುಗಡಲ ರಾಣಿಯಾಗಿ ಮೆರೆದ ಧೀಮಂತ ಚೆನ್ನ ಭೈರರಾಣಿ ಪ್ರೇಮನಾಟಕದ ದುರಂತ ನಾಯಕಿಯಾಗುತ್ತಾಳೆ.

ತನ್ನ ಆಡಳಿತದ ಕಾಲದಲ್ಲಿ ಆರ್ಥಿಕ ಮತ್ತು ಸಾಂಸ್ಕೃತಿಕ ಕ್ಷೇತ್ರಕ್ಕೂ ರಾಣಿಯು ಆದ್ಯತೆ ನೀಡಿದ್ದಾಳೆ. ಗೋವಾದ ಪೋರ್ಚುಗೀಸ್ ವರ್ತಕರಿಂದ ದೌರ್ಜನ್ಯಕ್ಕೆ ಒಳಗಾದ ಗೌಡ ಸಾರಸ್ವತ ಹಾಗೂ ಕುಶಲಕರ್ಮಿಗಳಿಗೆ ಗೇರುಸೊಪ್ಪೆಯಲ್ಲಿ ಆಶ್ರಯ ನೀಡಿ ವಾಣಿಜ್ಯ ಚಟುವಟಿಕೆಗಳಿಗೆ ಬೆಂಬಲ ನೀಡುತ್ತಾಳೆ.

ಧರ್ಮ ಸಾಮರಸ್ಯದ ನೀತಿಯನ್ನು ಅನುಸರಿಸಿದ ರಾಣಿಯು ಜೈನ, ಶೈವ ಮತ್ತು ವೈಷ್ಣವ ಪಂಥಗಳಿಗೆ ಸಮಾನ ರಾಜಾಶ್ರಯ ನೀಡಿದ್ದಳು. ಪ್ರಸಿದ್ಧ ಜೈನ ಪಂಡಿತ ಅಕಳಂಕ ಮತ್ತು ವ್ಯಾಕರಣಕಾರ ಭಟ್ಟಾಕಳಂಕರಿಗೂ ಆಶ್ರಯ ನೀಡಿದ್ದಳು. ಈತನಿಂದಲೇ ಭಟ್ಕಳವು ತನ್ನ ಹೆಸರನ್ನು ಪಡೆದಿದೆ ಎಂಬ ಅಭಿಪ್ರಾಯವೂ ಇದೆ.

ಹೈವೆನಾಡಿನ ಉದ್ದಕ್ಕೂ ಅಸಂಖ್ಯ ಬಸದಿ ಮತ್ತು ದೇವಾಲಯಗಳ ನಿರ್ಮಾಣ ಈಕೆಯ ಹೆಗ್ಗಳಿಕೆ. ಗೋಕರ್ಣ, ಉಪ್ಪುಂದ, ಬೈಂದೂರುಗಳಲ್ಲಿ ಶಕ್ತಿ ದೇವಾಲಯ ಗಳನ್ನೂ, ಭಟ್ಕಳದಲ್ಲಿ ಖೇತಪ್ಪ ನಾರಾಯಣ ದೇವಾಲಯವೂ ಈಕೆಯದೇ. ರಾಣಿಯ ಕಾಲವು ಜೈನ ವಾಸ್ತುಶಿಲ್ಪದ ಪರ್ವ ಕಾಲ. ವಿಜಯನಗರ ಶೈಲಿಯ ಆರು ಬಸದಿಗಳು ಮತ್ತು ಅತ್ಯಂತ ಸುಂದರ ಚತುರ್ಮುಖ ಬಸದಿ ಇಂದಿಗೂ ಅನೇಕ ಪ್ರವಾಸಿಗರನ್ನು ಆಕರ್ಷಿಸುತ್ತಿದೆ. ಜಿನಾಲಯಗಳೊಂದಿಗೆ ನೂರಾರು ಶಾಸನಗಳು, ದೇವಾಲಯಗಳು, ಜಿನಮೂರ್ತಿಗಳು ಬಹುಪಾಲು ಈಕೆಯ ಕಾಲಕ್ಕೆ ಸೇರಿದ್ದವು. ಈ ಇಡೀ ಭೂಭಾಗವು ಸಾಗರೋತ್ತರ ವಾಣಿಜ್ಯದ ನೆಲೆಯೂ ಆಗಿದ್ದು ಬಹುತೇಕ ವಾಸ್ತುರಚನೆಗಳು ಕಾಲಗರ್ಭದಲ್ಲಿ ಹುದುಗಿವೆ. ಗೇರುಸೊಪ್ಪೆಯು "ಜೈನರ ಹರಪ್ಪ" ಎಂಬ ಖ್ಯಾತಿಗೂ ಪಾತ್ರವಾಗಿದೆ. ಅರ್ಧಶತಕಕ್ಕೂ ಅಧಿಕ ಸುದೀರ್ಘ ಅವಧಿಯಲ್ಲಿ ಆಳಿದ ಭಾರತದ ಏಕೈಕ ರಾಣಿಯ ಯಶೋಗಾಥೆಯ ಸಾಕ್ಷಿಯಾಗಿ ಇಂದಿಗೂ "ಜೈನರ ಹರಪ್ಪ"ವು ಪ್ರವಾಸಿಗರನ್ನು ಕೈಬೀಸಿ ಕರೆಯುತ್ತಿದೆ.

**ಪಿ. ರತ್ನಾವತಿ**
ಇತಿಹಾಸ ಸಹಪ್ರಾಧ್ಯಾಪಕಿ, ಸರ್ಕಾರಿ ಮಹಿಳಾ ಕಾಲೇಜು, ಗಂಧದ ಕೋಠಿ, ಹಾಸನ

# ಪ್ರಜಾಪ್ರಭುತ್ವದಲ್ಲಿ ಶಾಸನಪೂರ್ವ ಸಮಾಲೋಚನೆ

ವೈ. ಜಿ. ಮುರಳೀಧರನ್

**ಯಾ**ವುದೇ ರಾಷ್ಟ್ರದಲ್ಲಾಗಲಿ ಪ್ರಜಾಪ್ರಭುತ್ವ ಸಫಲವಾಗಬೇಕಾದರೆ ಅಲ್ಲಿನ ಸಾರ್ವಜನಿಕರು ಆಡಳಿತದಲ್ಲಿ ಸಕ್ರಿಯವಾಗಿ ಭಾಗವಹಿಸುವುದು ಅವಶ್ಯ. ಪ್ರಜಾಪ್ರಭುತ್ವದಲ್ಲಿ ನಾಗರಿಕರ ಪ್ರಭುತ್ವಕ್ಕೆ ಮನ್ನಣೆ ದೊರೆಯಬೇಕಾದರೆ ಅವರ ಭಾಗವಹಿಸುವಿಕೆ ಮುಖ್ಯ. ಆದರೆ ನಮ್ಮ ದೇಶದಲ್ಲಿ ಆಗಾಗ ನಡೆಯುವ ಚುನಾವಣೆಯಲ್ಲಿ ಮತ ಚಲಾಯಿಸುವುದನ್ನು ಹೊರತುಪಡಿಸಿದರೆ ಸಾರ್ವಜನಿಕರು ಆಡಳಿತದಲ್ಲಿ ಭಾಗವಹಿಸುವುದು ಹೆಚ್ಚಾಗಿ ಕಂಡುಬಂದಿಲ್ಲ. ಚುನಾವಣೆಯಲ್ಲಿ ಮತ ಚಲಾಯಿಸುವುದರಲ್ಲೂ ನಮ್ಮ ಜನರು ಅಗತ್ಯವಿದ್ದಷ್ಟು ಸ್ಪಂದಿಸುತ್ತಿಲ್ಲ. ದೇಶದಲ್ಲಿ ಜನಸಂಖ್ಯೆಯ ಸರಾಸರಿ ಶೇಕಡಾ ೪೦–೪೫ರಷ್ಟು ಜನರು ಮಾತ್ರ ಮತ ಚಲಾಯಿಸುತ್ತಾರೆ. ಚುನಾವಣೆಯನ್ನು ಹೊರತುಪಡಿಸಿ ಸಾರ್ವಜನಿಕರು ಸಾರ್ವಜನಿಕ ಆಡಳಿತದಲ್ಲಿ ಭಾಗವಹಿಸುವುದಕ್ಕೆ ಇತರೆ ಮಾದರಿಗಳಿದ್ದು ಅದನ್ನು ಸರ್ಕಾರ ಪ್ರೋತ್ಸಾಹಿಸಬೇಕಿದೆ. ಅವುಗಳಲ್ಲಿ ಮುಖ್ಯವಾದದ್ದು ಶಾಸನಪೂರ್ವ ಸಮಾಲೋಚನೆ (ಪ್ರಿಲೆಜಿಸ್‌ಲೇಟಿವ್ ಕನ್ಸಲ್ಟೇಷನ್)

ಒಂದು ಕಾನೂನು ಅಥವಾ ತಿದ್ದುಪಡಿಯನ್ನು ಲೋಕಸಭೆ ಮತ್ತು ರಾಜ್ಯಸಭೆ ಅಥವಾ ರಾಜ್ಯ ವಿಧಾನಮಂಡಲ ಒಪ್ಪಿಗೆ ಸೂಚಿಸಿ ಅದನ್ನು ಅಂಗೀಕರಿಸುವುದಕ್ಕೆ ಮುನ್ನ ಸಾರ್ವಜನಿಕರಿಂದ ಅದರ ಬಗ್ಗೆ ಅಭಿಪ್ರಾಯಗಳನ್ನು ಸಂಗ್ರಹಿಸುವ ಪ್ರಕ್ರಿಯೆಯನ್ನು ಶಾಸನಪೂರ್ವ ಸಮಾಲೋಚನೆ ಎಂದು ಕರೆಯಬಹುದು. ಭಾರತದ ಲೋಕಸಭೆ ಮತ್ತು ರಾಜ್ಯ ವಿಧಾನಮಂಡಲಗಳು ಪ್ರತಿವರ್ಷ ಸುಮಾರು ೫೦–೭೦ ಶಾಸನಗಳು, ತಿದ್ದುಪಡಿ ಇತ್ಯಾದಿಯನ್ನು ಚರ್ಚೆಗೆ ಒಳಪಡಿಸುತ್ತದೆ ಅಥವಾ ಅಂಗೀಕರಿಸುತ್ತದೆ. ಇವುಗಳೆಲ್ಲವನ್ನೂ ಪ್ರಜಾ ಪ್ರತಿನಿಧಿಗಳು ಒಪ್ಪಿ ತಮ್ಮ ಅಂಗೀಕಾರದ ಮುದ್ರೆಯನ್ನು ಒತ್ತುತ್ತಾರೆ. ಆದರೆ ಅವುಗಳಲ್ಲಿ ಕೆಲವೇ ಶಾಸನಗಳು ಸಾರ್ವಜನಿಕರ ಗಮನಕ್ಕೆ ಬರುತ್ತವೆ. ಅದೂ ಸಹ ಶಾಸನ ಜಾರಿಗೊಳ್ಳುವ ಹಂತದಲ್ಲಿ ನಾಗರಿಕರಿಗೆ ಅದರ ಸಾಧಕ ಬಾಧಕಗಳು ಗೋಚರಿಸುತ್ತವೆ. ಎಷ್ಟೋ ಸಂದರ್ಭದಲ್ಲಿ ಈ ರೀತಿಯ ಒಂದು ಕಾನೂನು ನಮ್ಮಲ್ಲಿದೆಯೇ ಎಂದು ನಾಗರಿಕರು ಆಶ್ಚರ್ಯಪಡುವುದೂ ಇದೆ. ಹೊಸ ಕಾನೂನು ಅಥವಾ ತಿದ್ದುಪಡಿಯನ್ನು ನಾಗರಿಕರು ವಿರೋಧಿಸುವುದೂ ಸಹ ಅದು ಅಂಗೀಕೃತಗೊಂಡ ಮೇಲೆಯೇ. ಕಾರಣ ಕಾನೂನು ಸಿದ್ಧಪಡಿಸುವ ಹಂತದಲ್ಲಿ ಅದರ ಬಗ್ಗೆ ಹೆಚ್ಚು ಮಾಹಿತಿ ಜನರಲ್ಲಿ ಇರುವುದಿಲ್ಲ.

ಈ ನಿಟ್ಟಿನಲ್ಲಿ ಶಾಸನಪೂರ್ವ ಸಮಾಲೋಚನೆಗೆ ಒಂದು ನಿರ್ದಿಷ್ಟ ಕಾರ್ಯನೀತಿಯನ್ನು ರೂಪಿಸುವ ಅಗತ್ಯವಿದೆ.




ಕೇಂದ್ರ ಸರ್ಕಾರ ಈ ವಿಷಯದಲ್ಲಿ ಕೆಲವು ಕ್ರಮಗಳನ್ನು ಕೈಗೊಂಡಿದ್ದರೂ ರಾಜ್ಯಮಟ್ಟದಲ್ಲಿ ಅದರ ಬಗ್ಗೆ ಹೆಚ್ಚು ಪ್ರಯತ್ನಗಳು ನಡೆದಿಲ್ಲ. ಕೇಂದ್ರದ ಕೆಲವು ಸಚಿವಾಲಯಗಳು ಶಾಸನ ಲೋಕಸಭೆ ಮತ್ತು ರಾಜ್ಯಸಭೆಯಲ್ಲಿ ಮಂಡನೆ ಮಾಡಿದ ನಂತರ ತನ್ನ ವೆಬ್‌ಸೈಟ್‌ನಲ್ಲಿ ಅಳವಡಿಸಿ ನಾಗರಿಕರಿಂದ ಅವರ ಅಭಿಪ್ರಾಯ, ಸಲಹೆ ಮತ್ತು ಸೂಚನೆಗಳನ್ನು ಆಹ್ವಾನಿಸುತ್ತದೆ. ಕೆಲವು ಪ್ರತಿಷ್ಠಿತ ನಾಗರಿಕ ಸಂಸ್ಥೆಗಳಿಗೆ ಕರಡು ಮಸೂದೆಯ ಪ್ರತಿಯನ್ನು ಕಳುಹಿಸಿ ಅವರ ಅಭಿಪ್ರಾಯವನ್ನೂ ಸಂಗ್ರಹಿಸುತ್ತದೆ. ಆದರೆ ಈ ಕ್ರಮ ಅನುಸರಿಸಬೇಕೆಂಬ ನಿಯಮ ಎಲ್ಲೂ ಇಲ್ಲ. ಕೆಲವು ರಾಷ್ಟ್ರಗಳಲ್ಲಿ ಶಾಸನಪೂರ್ವ ಸಮಾಲೋಚನೆಯನ್ನು ಕಡ್ಡಾಯಗೊಳಿಸಲಾಗಿದ್ದು ಅದಕ್ಕಾಗಿಯೇ ಪ್ರತ್ಯೇಕ ಕಾನೂನು ರಚಿಸಲಾಗಿದೆ. ಸಮಾಲೋಚನೆ ನಡೆಸಬೇಕಾದ ಮಾದರಿಯನ್ನೂ ವಿವರಿಸಲಾಗಿದೆ. ಉದಾಹರಣೆಗೆ ಬ್ರಿಟನ್, ನ್ಯೂಜಿಲ್ಯಾಂಡ್ ಮತ್ತು ಆಸ್ಟ್ರೇಲಿಯದಲ್ಲಿ ಶಾಸನಪೂರ್ವ ಸಮಾಲೋಚನೆ ಸಾಕಷ್ಟು ಜನಪ್ರಿಯವಾಗಿದೆ. ಅಲ್ಲಿನ ಕಾನೂನು ರಚನಾ ಪ್ರಕ್ರಿಯೆಯಲ್ಲಿ ಶಾಸನಪೂರ್ವ ಸಮಾಲೋಚನೆ ಒಂದು ಭಾಗವಾಗಿದೆ. ಆದರೆ ನಮ್ಮ ದೇಶದಲ್ಲಿ ಈ ರೀತಿಯ ಪದ್ಧತಿಗಳು ಜಾರಿಯಾಗಿಲ್ಲ. ಭಾರತದಲ್ಲಿ ಶಾಸನ ರಚನೆಗೆ ಅನುಸರಿಸಬೇಕಾದ ಕ್ರಮವನ್ನು ಮ್ಯಾನುಯಲ್ ಆಫ್ ಪಾರ್ಲಿಮೆಂಟರಿ ಪ್ರೊಸೀಜರ್ಸ್‌ನಲ್ಲಿ ವಿವರಿಸಲಾಗಿದೆ. ಇದರಲ್ಲಿ ವಿವರಿಸಿರುವಂತೆ ಸಂಬಂಧಪಟ್ಟ ಇಲಾಖೆ ಶಾಸನದ ಕರಡನ್ನು ಸಿದ್ಧಪಡಿಸುವಾಗ 'ಸಂಬಂಧಪಟ್ಟ'ವರಿಂದ ಸಲಹೆ ಪಡೆಯಬೇಕೆಂದು ಹೇಳುತ್ತದೆ. ಸಾಮಾನ್ಯವಾಗಿ ಕರಡು ಶಾಸನವನ್ನು ಎಲ್ಲಾ ಮಂತ್ರಿಗಳಿಗೆ ಕಳುಹಿಸಿ ಅವರ ಅಭಿಪ್ರಾಯ ಪಡೆಯಲಾಗುತ್ತದೆ. ಸಾರ್ವಜನಿಕರಿಂದ ಅಭಿಪ್ರಾಯ ಸಂಗ್ರಹಿಸುವ ಪದ್ಧತಿ ಇಲ್ಲ. ಕರಡು ಶಾಸನದ ಬಗ್ಗೆ ಸದನದಲ್ಲಿ ಭಿನ್ನಾಭಿಪ್ರಾಯವಿದ್ದಲ್ಲಿ ಅದನ್ನು ಲೋಕಸಭಾ

ಸ್ಥಾಯೀ ಸಮಿತಿಗೆ ಒಪ್ಪಿಸಲಾಗುವುದು. ಈ ಸಮಿತಿ ನಿರ್ದಿಷ್ಟ ಸ್ಥಳಗಳಲ್ಲಿ ಸಭೆಗಳನ್ನು ನಡೆಸಿ ಅಲ್ಲಿ ಸಾರ್ವಜನಿಕರಿಂದ ಅಭಿಪ್ರಾಯ ಸಂಗ್ರಹಿಸಬಹುದು.

ಲೋಕಸಭಾ ಸ್ಥಾಯೀ ಸಮಿತಿಗಳು ಕರಡು ಶಾಸನದ ಬಗ್ಗೆ ಅಭಿಪ್ರಾಯ ಸೂಚಿಸಲು ಒಂದು ಅವಕಾಶವನ್ನು ಒದಗಿಸುತ್ತದೆ ಎಂಬುದು ದಿಟವಾದರೂ, ಈ ಪ್ರಕ್ರಿಯೆ ಕೆಲವು ದೋಷಗಳಿಂದ ತುಂಬಿದೆ. ಉದಾಹರಣೆಗೆ, ಕರಡು ಮಸೂದೆಯನ್ನು ಲೋಕ ಸಭೆಯಲ್ಲಿ ಮಂಡನೆ ಮಾಡಿದ ನಂತರವಷ್ಟೇ ಸ್ಥಾಯೀ ಸಮಿತಿಗೆ ವಹಿಸಲಾಗುವುದು. ಎರಡನೆಯದಾಗಿ, ಸ್ಥಾಯೀ ಸಮಿತಿಗೆ ಸಾರ್ವಜನಿಕರು ಸಲ್ಲಿಸುವ ಅಭಿಪ್ರಾಯಗಳು ಗೌಪ್ಯವಾಗಿದ್ದು ಅದನ್ನು ಎಲ್ಲಿಯೂ ಬಹಿರಂಗಪಡಿಸುವಂತಿಲ್ಲ. ಮೂರನೆಯದಾಗಿ, ಸ್ಥಾಯೀ ಸಮಿತಿಯು ಸಾರ್ವಜನಿಕರಿಂದ ಸಲ್ಲಿಕೆಯಾಗುವ ಅಭಿಪ್ರಾಯಗಳನ್ನು ಒಪ್ಪಲೇಬೇಕೆಂಬ ನಿಯಮವಿಲ್ಲ. ಸಾರ್ವಜನಿಕ ಆಡಳಿತದ ಗುಣಮಟ್ಟ ವೃದ್ಧಿಪಡಿಸಲು ಮೂರು ಗುಣಗಳನ್ನು ಹೊಂದಿರಬೇಕಾಗುತ್ತದೆ. ಅವುಗಳೆಂದರೆ, ಪಾರದರ್ಶಕತೆ ಉತ್ತರದಾಯಿತ್ವ ಮತ್ತು ಭಾಗವಹಿಸುವಿಕೆ. ಶಾಸನಪೂರ್ವ ಸಮಾಲೋಚನೆಯಲ್ಲಿ ಈ ಮೂರೂ ಗುಣಗಳನ್ನು ಕಾಣಬಹುದಾದ್ದರಿಂದ ಇದನ್ನು ಜಾರಿಗೊಳಿಸುವ ಮೂಲಕ ಪ್ರಜಾಪ್ರಭುತ್ವವನ್ನು ಶಕ್ತಿಶಾಲಿಯಾಗಿಸಬಹುದಾಗಿದೆ.




ಶಾಸನಪೂರ್ವ ಸಮಾಲೋಚನೆಗೆ ಕಾನೂನಿನ ಅಂಗೀಕಾರವಿಲ್ಲದಿದ್ದರೂ ಅದನ್ನು ಅನುಸರಿಸಬೇಕೆಂಬ ನಿಯಮವನ್ನು ಮಾಹಿತಿ ಹಕ್ಕು ಅಧಿನಿಯಮದಲ್ಲಿ ಕಾಣಬಹುದು. ಅಕ್ಟೋಬರ್ ೨೦೦೫ರಲ್ಲಿ ಜಾರಿಗೆ ಬಂದಿರುವ ಮಾಹಿತಿ ಹಕ್ಕು ಅಧಿನಿಯಮದ ಪ್ರಕಾರ ಪ್ರತಿಯೊಂದು ಸಾರ್ವಜನಿಕ ಪ್ರಾಧಿಕಾರವೂ ಕೆಲವೊಂದು ಮಾಹಿತಿಯನ್ನು ಸ್ವಯಂ ಪ್ರೇರಿತವಾಗಿ ಘೋಷಿಸಬೇಕು ಮತ್ತು ಸಾರ್ವಜನಿಕರ ಗಮನಕ್ಕೆ ಬರುವಂತೆ ಪ್ರಕಟಿಸಬೇಕು. ಸ್ವಾತಂತ್ರ್ಯ ಬಂದ ನಂತರ ಪ್ರಥಮವಾಗಿ ಸರ್ಕಾರಿ ಸಂಸ್ಥೆಗಳು ಮತ್ತು ಇಲಾಖೆಗಳು ಮಾಹಿತಿ ನೀಡುವುದನ್ನು ಕಡ್ಡಾಯಗೊಳಿಸಲಾಗಿದೆ. ಮಾಹಿತಿ ಹಕ್ಕು ಅಧಿನಿಯಮದ ಸೆಕ್ಷನ್ ೪(೧)(ಎ) ಮತ್ತು (ಬಿ) ಪ್ರಕಾರ ಸುಮಾರು ೧೮ ರೀತಿಯ ಮಾಹಿತಿಯನ್ನು ಪ್ರಕಟಿಸಬೇಕು. ಅಲ್ಲದೆ ಸೆಕ್ಷನ್ ೪(೧)(ಸಿ) ಪ್ರಕಾರ ಇಲಾಖೆಯು ತನ್ನ ಉದ್ದೇಶಿತ ಕಾನೂನು, ನಿಯಮ, ತಿದ್ದುಪಡಿ ಇತ್ಯಾದಿಯನ್ನು ಜಾರಿಗೊಳಿಸುವ ಮುನ್ನ ನಾಗರಿಕರ ಗಮನಕ್ಕೆ ತರಬೇಕು. ವಿಶೇಷವಾಗಿ ಸಾರ್ವಜನಿಕ ಪ್ರಾಧಿಕಾರಗಳು ಕೈಗೊಳ್ಳುವ ನಿರ್ಧಾರಗಳು ಸಮಾಜದ ಯಾವ ವರ್ಗದ ಮೇಲೆ ಪ್ರಭಾವ ಉಂಟುಮಾಡುತ್ತದೋ ಆ ವರ್ಗಕ್ಕೆ ಅದನ್ನು ತಿಳಿಸಬೇಕು ಹಾಗೂ ಅವರಿಂದ ಅಭಿಪ್ರಾಯ ಸಂಗ್ರಹಿಸಬೇಕು. ಮಾಹಿತಿ ಹಕ್ಕಿನಡಿಯಲ್ಲಿರುವ ಈ ನಿಯಮದ ಆಧಾರದ ಮೇಲೆ ಕೇಂದ್ರ ಮಾಹಿತಿ ಆಯೋಗ ಸಾಕಷ್ಟು ಪ್ರಕರಣಗಳಲ್ಲಿ ತೀರ್ಪು ನೀಡಿದ್ದು, ಪ್ರಾಧಿಕಾರಗಳು ಉದ್ದೇಶಿತ ಕಾನೂನುಗಳನ್ನು ಮುಂಚಿತವಾಗಿ ಪ್ರಕಟಿಸುವಂತೆ ಆಜ್ಞೆ ಮಾಡಿದೆ.

ಶಾಸನಪೂರ್ವ ಸಮಾಲೋಚನೆ ಪರಿಣಾಮಕಾರಿಯಾಗಿ ಜಾರಿಗೊಳ್ಳಬೇಕಾದರೆ ಕೇವಲ ಕಾನೂನು ಹೊರಡಿಸಿದರೆ ಸಾಲದು. ಸಾರ್ವಜನಿಕರು ಸಹ ಅದರಲ್ಲಿ ಸಕ್ರಿಯವಾಗಿ ಭಾಗವಹಿಸಬೇಕಾಗುತ್ತದೆ. ದುರದೃಷ್ಟವೆಂದರೆ ಸಾರ್ವಜನಿಕರಲ್ಲಿ ಇದರ ಬಗ್ಗೆ ಜಾಗೃತಿ ಉಂಟಾಗಿಲ್ಲ. ಕೆಲವೇ ಮಂದಿ ಇದರಲ್ಲಿ ಭಾಗಿಗಳಾಗುತ್ತಿದ್ದಾರೆ. ಇತರೆ ಕಾನೂನುಗಳ ವಿಷಯ ಹಾಗಿರಲಿ, ತಮ್ಮ ನಿತ್ಯ ಬದುಕಿನ ಮೇಲೆ ಪರಿಣಾಮ ಉಂಟುಮಾಡುವ ವಿಷಯಗಳಲ್ಲೂ ನಾಗರಿಕರು ಭಾಗವಹಿಸುವುದಿಲ್ಲ. ಉದಾಹರಣೆಗೆ, ವಿದ್ಯುಚ್ಛಕ್ತಿ, ಪರಿಸರ ಇತ್ಯಾದಿಗಳ ಬಗ್ಗೆ ಸಾರ್ವಜನಿಕ ಅಹವಾಲು ಸ್ವೀಕರಿಸುವುದನ್ನು ಸಂಬಂಧಪಟ್ಟ ಕಾನೂನುಗಳು ಕಡ್ಡಾಯಗೊಳಿಸಿವೆ. ಆದರೆ ಈ ಅಹವಾಲುಗಳಲ್ಲಿ ಎಷ್ಟು ನಾಗರಿಕರು ಭಾಗವಹಿಸುತ್ತಿದ್ದಾರೆ? ವಿದ್ಯುತ್ ದರ ಹೆಚ್ಚಿಸುವ ಪ್ರಸ್ತಾವನೆ ವಿಷಯದಲ್ಲಿ ನಾಗರಿಕರ ಆಲಸ್ಯವನ್ನು ನೋಡಬಹುದು. ಕರ್ನಾಟಕದಲ್ಲಿರುವ ಆರು ಕೋಟಿ ಜನರಲ್ಲಿ ವಿದ್ಯುತ್ ದರ ಪರಿಷ್ಕರಣೆಗೆ ತಮ್ಮ ಅಭಿಪ್ರಾಯ, ಅಸಮಾಧಾನ, ಸಲಹೆ ಸೂಚನೆಗಳನ್ನು ವ್ಯಕ್ತಪಡಿಸುವವರ ಸಂಖ್ಯೆ ೧೦೦ರ ಗಡಿ ದಾಟುವುದಿಲ್ಲ. ಬುದ್ಧಿವಂತರಿಂದ ತುಂಬಿರುವ ಬೆಂಗಳೂರಿನಂಥ ನಗರದಲ್ಲಿ ಕೇವಲ ೧೦–೧೫ ಜನರು ಮಾತ್ರ ಈ ಅಹವಾಲುಗಳಲ್ಲಿ ಭಾಗವಹಿಸುತ್ತಾರೆ.

ಶಾಸನಪೂರ್ವ ಸಮಾಲೋಚನೆ ವಿಷಯದಲ್ಲಿ ಮತ್ತೊಂದು ಅಂಶ ಮುಖ್ಯವಾಗುತ್ತದೆ. ಯಾವುದೇ ಶಾಸನ ಅಥವಾ ತಿದ್ದುಪಡಿ ಬಗ್ಗೆ ಅಭಿಪ್ರಾಯ ಸೂಚಿಸಲು ನಾಗರಿಕರಲ್ಲಿ ಆಸಕ್ತಿಯ ಜೊತೆಗೆ ಮಾಹಿತಿಯೂ ಇರಬೇಕಾಗುತ್ತದೆ. ಸಂಬಂಧಪಟ್ಟ ಕಾನೂನುಗಳನ್ನು ಅಭ್ಯಾಸ ಮಾಡಿರಬೇಕು. ವಿವಿಧ ಮೂಲಗಳಿಂದ ಮಾಹಿತಿ, ಅಂಕಿ ಅಂಶ ಸಂಗ್ರಹಿಸಬೇಕು. ತಮ್ಮಲ್ಲಿರುವ ಈ ಮಾಹಿತಿಯನ್ನು ವ್ಯಕ್ತಪಡಿಸಲು ಸೂಕ್ತ ಮಾದರಿಯನ್ನು ಆಯ್ಕೆಮಾಡಿಕೊಳ್ಳಬೇಕು ಇತ್ಯಾದಿ. ಇದಕ್ಕೆ ಆಳವಾದ, ವಿಸ್ತಾರವಾದ ಅಧ್ಯಯನ ಮುಖ್ಯ. ವೈಯಕ್ತಿಕವಾಗಿ ಮಾಡಲಾಗದಿದ್ದಲ್ಲಿ ಸಮಾನ ಮನಸ್ಕರು ಒಂದೆಡೆ ಸೇರಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಬೇಕಾಗುತ್ತದೆ. ಇದಕ್ಕೆ ಸಂಘಟಿತ ಪ್ರಯತ್ನ ಅವಶ್ಯ.

**ವೈ. ಜಿ. ಮುರಳೀಧರನ್**
ಸಂಧ್ಯಾ ರಾಗ, ೯೦೦, ೧೫ನೇ ರಸ್ತೆ, ಮೊದಲನೆ ಹಂತ
ಚಂದ್ರಾ ಬಡಾವಣೆ, ಬೆಂಗಳೂರು – ೫೬೦ ೦೭೨

# ಓದುಗರ ವೇದಿಕೆ

# ೨೦೧೯ರ ಲೋಕಸಭಾ ಚುನಾವಣೆ ಅಪೇಕ್ಷೆ – ನಿರೀಕ್ಷೆ



'ಹೊಸತು' ೨೦೧೯ರ ವಿಶೇಷ ಸಂಚಿಕೆ ಓದುಗರ ವೇದಿಕೆಗೆ **೨೦೧೯ರ ಲೋಕಸಭಾ ಚುನಾವಣೆ: ಅಪೇಕ್ಷೆ–ನಿರೀಕ್ಷೆ** ಕುರಿತ ಅಭಿಪ್ರಾಯ ಹಂಚಿಕೊಂಡ ಎಲ್ಲರಿಗೂ ಧನ್ಯವಾದಗಳು. ೨೦೧೯ರ ಲೋಕಸಭಾ ಚುನಾವಣೆಯನ್ನು ಕುರಿತಂತೆ ಇಡೀ ದೇಶ ಹಲವಾರು ಅಪೇಕ್ಷೆಗಳನ್ನು ಇಟ್ಟುಕೊಂಡಿದೆ. ಹಾಗೆಯೇ ಮುಂದೆ ಬರಲಿರುವ ಸರ್ಕಾರಗಳಿಂದ ಹಲವಾರು ನಿರೀಕ್ಷೆಗಳನ್ನು ನಮ್ಮ ದೇಶದ ಜನ ಹೊಂದಿದ್ದಾರೆ. ಅವುಗಳಲ್ಲಿ ಕೆಲವು ಅಭಿಪ್ರಾಯಗಳನ್ನು 'ಓದುಗರ ವೇದಿಕೆ'ಯ ಮೂಲಕ ಓದುಗರ ಮುಂದಿಡಲಾಗಿದೆ. ಓದುಗರ ಪ್ರತಿಕ್ರಿಯೆಗೆ ಸ್ವಾಗತ.

## ಪ್ರಗತಿಪರ ನಾಳೆಗಳೆಲ್ಲವೂ ಸತ್ಪಾತ್ರಕ್ಕೆ ಸಲ್ಲುವಂತಿರಬೇಕು...

ನಿನ್ನೆ ಮಾಡಿದ ತಪ್ಪುಗಳಿಗೆ ಚಿಂತಿಸಿ ಫಲವಿಲ್ಲದಿರಬಹುದು, ಆದರೆ ಪ್ರಗತಿಪರ ನಾಳೆಗಳನ್ನು ಕಾಣಲು ಹಾಗೆ ಕಂಡಂತೆ ಕಟ್ಟಿಕೊಳ್ಳುವ ಅವಕಾಶ ಇರುವುದನ್ನು ಸದುಪಯೋಗಪಡಿಸಿಕೊಳ್ಳದಿದ್ದರೆ ನಮ್ಮಂಥ ಮೂರ್ಖರೇ ಯಾರಿಲ್ಲವೆನಿಸುತ್ತದೆ. ಈಗಿನ ಸರ್ಕಾರದಂತೆ, ಹುಚ್ಚಾಟದ ನಿರ್ಧಾರಗಳನ್ನು ತೆಗೆದುಕೊಳ್ಳುವುದು, ಸಮರ್ಥಿಸಿಕೊಳ್ಳುವುದು, ತಮ್ಮ ಲೋಪಗಳು ಅನಾವರಣವಾಗದಂತೆ ಪ್ರಜೆಗಳ ಮನಸ್ಸನ್ನು ವಿವಿಧ ದಿಕ್ಕಿಗೆ ತಿರುಗಿಸುವುದನ್ನು ಮಾಡುತ್ತಲೇ ಮೋದಿಯವರ ಸರ್ವಾಧಿಕಾರಿ ಸರ್ಕಾರ ಏನೆಲ್ಲ ಅಸಂಬದ್ಧಗಳನ್ನು ಸೃಜಿಸಿ, ಸರಿಪಡಿಸಲು ಸಾಧ್ಯವಾಗದಷ್ಟು ಹದಗೆಡಿಸಿರುವುದನ್ನು ಹೊಸತು ಓದುಗರಿಗೆ ವಿವರಿಸುವ ಅವಶ್ಯಕತೆ ಇಲ್ಲವೆನಿಸುತ್ತದೆ.

ಸರಿ, ಈ ನಾಡಿನ ಮತಬಾಂಧವರು ಭಾಜಪವನ್ನು ಆಯ್ಕೆ ಮಾಡಬಾರದಿತ್ತು ಮಾಡಿದ್ದಾರೆ, ಅದಕ್ಕಾಗಿ ಅನುಭವಿಸಿದ್ದು ಸಾಕು. ಇತ್ತೀಚೆಗೆ ಸಮಾನ ಪ್ರಗತಿಪರರೆಲ್ಲರ ಮನದೊಳಗೆ ತೃತೀಯರಂಗದ ಕಲ್ಪನೆ ಗರಿಗೆದರಿದೆ. ಪ್ರಗತಿಪರತೆಯಿಂದಾವಿರ್ಭವಿಸುವ ನವಮನ್ವಂತರದ ನಾಳೆಗಳನ್ನು ಕಾಣಬಯಸುವವರಿಗೊಂದು ನನ್ನಂಥವರಿಗೊಂದು ಆಶಾಕಿರಣವಿದು. ಕಾಂಗ್ರೆಸ್, ಭಾಜಪ ನೇತೃತ್ವದ ಹುಚ್ಚಾಟಗಳನ್ನು ಅನುಭವಿಸಿದ್ದಾಯ್ತು. ಸಾಕಿನ್ನು ಇಂಥ ಸ್ವಾರ್ಥಿಗಳ ತೆಕ್ಕೆಯಿಂದ ಬಿಡಿಸಿಕೊಂಡು ತೃತೀಯರಂಗದವರಿಗೊಪ್ಪಿಸಿ, ಒಂದವಧಿ ನೋಡೋದು ಸೂಕ್ತ. ಇದೇ ನನ್ನ ಅಪೇಕ್ಷೆ. ಅಗತ್ಯವೆನಿಸಿದರೆ ಇವರಿಗೂ ಪಾಠ ಕಲಿಸುವ ಅನಿವಾರ್ಯದ ಅಸ್ತ್ರ ಕೈಯಲ್ಲಿರಬೇಕು.

ಆಯ್ತು. ೨೦೧೯ರ ಲೋಕಸಭಾ ಚುನಾವಣೆಯಲ್ಲಿ ಪ್ರತಿಯೊಬ್ಬ ಪ್ರಜ್ಞಾವಂತ ಮತದಾರ ಇಂಥ ಪ್ರಗತಿಪರ ನಾಳೆಗಳ ಸಲುವಾಗಿ ತೃತೀಯರಂಗಕ್ಕೆ ಭಾರತವನ್ನು ಒಪ್ಪಿಸಿದೆವೆಂದಿಟ್ಟುಕೊಳ್ಳಿ, ಆಗಿನ ನಿರೀಕ್ಷೆಗಳಲ್ಲಿ ಮೊದಲನೆಯದಾಗಿ ಹಸಿವು ಮುಕ್ತ ದೇಶ, ಜಾತ್ಯತೀತ ವ್ಯವಸ್ಥೆ, ಆಂತರಿಕ ಕಿತ್ತಾಟಗಳಿಲ್ಲದೇ ಪ್ರಧಾನಿ ಮತ್ತು ಮಂತ್ರಿಗಳಲ್ಲಿ ಸಹಕಾರ/ಸಮನ್ವಯ, ಪೂರ್ಣಾವಧಿ ಸರ್ಕಾರ, ವಿಶ್ವ ಮಟ್ಟದಲ್ಲಿ ವಿಶೇಷ ಯೋಜನೆಗಳ ಮೂಲಕ ಭಾರತ ಪ್ರಕಾಶಿಸುವಂತೆ ನೋಡಿಕೊಳ್ಳುವುದು... ಹೀಗಾದಾಗಲೇ ಪ್ರಗತಿಪರ ನಾಳೆಗಳನ್ನು ಸೃಜಿಸಿಕೊಳ್ಳುವುದರೊಂದಿಗೆ ಆ ನಾಳೆಗಳೆಲ್ಲವೂ ಸತ್ಪಾತ್ರಕ್ಕೆ ಸಲ್ಲಿಕೆಯಾಗುವಂತಾಗುವಲ್ಲಿ ಭರವಸೆಯಿರಿಸಿಕೊಳ್ಳಬಹುದು.

– *ವೆಂಕಟೇಶ ಕೆ. ಜನಾದ್ರಿ, ಕನಕಗಿರಿ*

* * *

## ಎಂಗಾರ್ ಟಿಕೆಟ್ ಕೊಡಿ!!!

ಕಾಂಗ್ರೆಸ್‌ನಲ್ಲಿ ವಂಶಪಾರಂಪರ್ಯದ ಆಡಳಿತವಿದೆಯೆಂದು ಟೀಕಿಸುತ್ತಿದ್ದ ಎಲ್ಲ ವಿರೋಧಿ ಪಕ್ಷಗಳ ನಾಯಕರು ಅವರೊಂದಿಗೆ ಪೈಪೋಟಿಗೆ ಇಳಿದಂತೆ ತಮ್ಮ ಪಕ್ಷದಲ್ಲಿ ತಮ್ಮ ಮಡದಿ, ಮಗ, ಸಹೋದರರಿಗೆ ಮಣೆ ಹಾಕುತ್ತಿರುವುದನ್ನು ಗಮನಿಸಿದಾಗ ನಾಲ್ಕು ದಶಕಗಳ ಹಿಂದೆ ಹಾಸ್ಯ ಸಾಹಿತಿ ಮಾನ್ಯ ಶ್ರೀ ಹೆಚ್. ಎಲ್. ಕೇಶವಮೂರ್ತಿಯವರು ಬರೆದ "ಎಂಗಾರ್ ಟಿಕೆಟ್ ಕೊಡಿ" ಎಂಬ ಲೇಖನ ನೆನಪಿಗೆ ಬಂತು. ಅದರಲ್ಲಿ ಬಹು ದಿನಗಳಿಂದ ಅಧಿಕಾರದಲ್ಲಿರುವ ನಾಯಕರೊಬ್ಬರನ್ನು ದೂರವಿಡಲು ಅವರ ಮತಕ್ಷೇತ್ರವನ್ನು "ಮಹಿಳೆಗೆ" ಮೀಸಲಾಗಿಡಲಾಗಿದೆ ಎಂದು ಪ್ರಕಟಿಸಿದಾಗ, ನಾಯಕರು ಅದನ್ನು ತಮ್ಮ ಮಡದಿಗೆ ಕೊಡಲು ಬೇಡಿಕೆಯಿಟ್ಟರು. ಆಗ ಪಕ್ಷ ಅದನ್ನು "ಯುವಕರಿಗಾಗಿ" ಎಂದಾಗ "ನನ್ನ ಮಗನಿಗೆ" ಕೊಡುವಂತೆ ಕೋರಿದರು. ಆಗ ಪಕ್ಷದ ವರಿಷ್ಠ ಮಂಡಳಿ "ಪರಿಶಿಷ್ಟ ಜಾತಿಗೆ ಮೀಸಲಾಗಿಡಲಾಗಿದೆ" ಎಂದು ತಿಳಿಸಿದಾಗ ನಾಯಕರು "ನನ್ನ ಮನೆಯ ಆಳು ಮಗ ಪರಿಶಿಷ್ಟ ಜಾತಿಗೆ ಸೇರಿದ್ದು, ಅವನಿಗೆ ಕೊಡಲು ಬೇಡಿಕೆಯಿಡುವ ಮೂಲಕ ಎಂಗಾರ್ ಟಿಕೆಟ್ ಕೊಡಿ, ನಮಗ ಟಿಕೆಟ್ ಕೊಡಿ" ಎಂದು ಕೇಳಿದ್ದನ್ನು ಮಾರ್ಮಿಕವಾಗಿ ತಿಳಿಸಿದ ಅಂಶ ಇಂದು ನೆನಪಿಗೆ ಬಂತು.

– *ಬಸವರಾಜ ಹುಡೇದಗಡ್ಡಿ, ಬೆಂಗಳೂರು*

* * *




## ೨೦೧೯ ಲೋಕಸಭಾ ಚುನಾವಣೆ

ಪ್ರಜಾಪ್ರಭುತ್ವ ಮತ್ತು ಸಂವಿಧಾನ ವ್ಯವಸ್ಥೆಯಲ್ಲಿ ನಂಬಿಕೆಯನ್ನಿಟ್ಟ ನನಗೆ ಮುಂಬರುವ ಲೋಕಸಭಾ ಚುನಾವಣೆಯು ಅಪೇಕ್ಷೆಗಳಿಂದಲೇ ಕೂಡಿದ್ದಾಗಿದೆ. ಜೊತೆಗೆ, ನಿರೀಕ್ಷಿತ ಮಟ್ಟದ್ದಾಗಿದೆ. ಈಗ ಅಧಿಕಾರದಲ್ಲಿರುವ ಪಕ್ಷವು 'ಒಂದು ದೇಶ ಒಂದು ಪಕ್ಷ'ವೆಂಬ ಮಾಯೆಗೆ ಮರುಳಾಗದೆ ಬಹುತ್ವದಲ್ಲಿ ನಂಬಿಕೆಯಿರುವ ಮತ್ತದನ್ನು ಜಾರಿಗೆ ತರಲೇಬೇಕಿರುವ ಒಂದು ಪಕ್ಷ ಅಥವಾ ಬಹುಪಕ್ಷಗಳ ಸಂಘಟನೆಗೆ ಸಹಮತವಿರಬೇಕೆಂಬ ಮನಃಸ್ಥಿತಿಯು ಈಗಿನ ತುರ್ತಾಗಿದೆ. ಜನರನ್ನು ಜಾತಿ, ಧರ್ಮ, ಭಾಷೆ, ಆಹಾರ ಪದ್ಧತಿಯೆಂಬ ಕ್ಷುಲ್ಲಕ ಮಾನದಂಡಗಳ ಬದಲು ಮನುಷ್ಯತ್ವಕ್ಕೆ ಗೌರವ ನೀಡುವ ಪಕ್ಷವನ್ನು ಚುನಾಯಿಸುವ ಅಪೇಕ್ಷೆ ನನ್ನದು. ವ್ಯಕ್ತಿಗತ ಅಭಿಪ್ರಾಯ ಸ್ವಾತಂತ್ರ್ಯದ ಮನೋಧರ್ಮವನ್ನು ಗೌರವಿಸುವ ಪಕ್ಷವು ಅಧಿಕಾರಕ್ಕೆ ಬರುವುದನ್ನು ಸ್ವಾಗತಿಸಬೇಕಿದೆ.

ನಮ್ಮ ದೇಶದ ಬಹುತೇಕ ಜನಸಂಖ್ಯೆ ಮಧ್ಯಮ ಆದಾಯದ ಕುಟುಂಬಗಳಾಗಿವೆ. ದೈನಂದಿನ ಸರಕು ಸೇವೆಗಳ ಬೆಲೆಗಳನ್ನು ಅಧಿಕಾರದ ಚುಕ್ಕಾಣಿ ಹಿಡಿಯುವ ಪಕ್ಷವು ಸೂಕ್ತ ನೀತಿಗಳಿಂದ ನಿಯಂತ್ರಿಸುವುದರ ಮೂಲಕ ಜೀವನ ಸುಧಾರಣೆ, ಖಾಸಗಿ ಕಂಪನಿಗಳ ಲಾಭದ ಮೇಲೆ ಗರಿಷ್ಠ ತೆರಿಗೆ ವಸೂಲಿ, ಅವುಗಳಿಗೆ ನೀಡುವ ಸಹಾಯಧನದ ಸ್ಥಗಿತ, ಸಾರ್ವಜನಿಕ ಉದ್ಯಮಗಳಿಗೆ ಉತ್ತೇಜನ, ಯುವಕರಿಗೆ ಉದ್ಯೋಗ ಸೃಷ್ಟಿ, ಹೊರಗುತ್ತಿಗೆಯನ್ನು ನಿಲ್ಲಿಸಿ ನಾವೇ 'ಮೇಡ್–ಇನ್–ಇಂಡಿಯಾ'ದಡಿ ಉತ್ಪಾದನೆ, ಕೃಷಿಗೆ ಉತ್ತೇಜನ, ಪಂಚವಾರ್ಷಿಕ ಯೋಜನೆಗಳ ಮುಂದುವರಿಕೆ, ಅಮೆರಿಕಾ ಮತ್ತು ಐರೋಪ್ಯ ದೇಶಗಳಿಂದ ಅನಗತ್ಯ ಯುದ್ಧಸಾಮಗ್ರಿಗಳ ಆಮದಿಗೆ ಕಡಿವಾಣ, ಭಾರತೀಯ ರಿಸರ್ವ್ ಬ್ಯಾಂಕ್‌ಗೆ ಹೆಚ್ಚಿನ ಸ್ವಾಯತ್ತತೆ, ಸಾಂಸ್ಕೃತಿಕ ಸಂಸ್ಥೆಗಳಿಗೆ ಗೊಡ್ಡೆತ್ತುಗಳ ಬದಲು ಬೌದ್ಧಿಕ ಸ್ಥಿಮಿತತೆ ಮತ್ತು ಕೌಶಲ್ಯವಿರುವ ಪರಿಣತರ ನೇಮಕ, ಸಂಧಾನವೇ ಅಂತಿಮವೆನ್ನುವ ಪಕ್ಷವನ್ನು ನಾವು ಮುಂಬರುವ ಚುನಾವಣೆಯಲ್ಲಿ ಆಯ್ಕೆ ಮಾಡಬೇಕಾದ ನಿರೀಕ್ಷೆಯನ್ನಂತೂ ಹುಸಿಗೊಳಿಸುವ ಹಾಗೆಯೇ ಇಲ್ಲ. ಪಕ್ಷಭೇದ ಮರೆತು ರಾಜ್ಯಗಳಿಗೆ ಹೆಚ್ಚಿನ ಸ್ವಾತಂತ್ರ್ಯ, ಹಣಕಾಸಿನ ಅನುದಾನ, ವೈವಿಧ್ಯತೆಗಳನ್ನು ಬಿಂಬಿಸುವ ಶಿಕ್ಷಣವನ್ನು ರೂಪಿಸಿಕೊಳ್ಳುವ ಪಕ್ಷಕ್ಕೆ ನಮ್ಮ ಬೆಂಬಲವಿರಲಿ. ಕೊನೆಗೆ ಯಾವುದೇ ಆಮಿಷಗಳಿಗೆ ಬಲಿಯಾಗದೆ ನಮ್ಮ ಜವಾಬ್ದಾರಿಯನ್ನರಿತು ಮತದಾನದಲ್ಲಿ ಸಕ್ರಿಯವಾಗಿ ಭಾಗವಹಿಸಿ ಮತದಾನ ಮಾಡುವುದು ಅತ್ಯಗತ್ಯ.

*– ಬಿ. ಎನ್. ವೇಣುಗೋಪಾಲ್, ಬೆಂಗಳೂರು*

* * *

## ಪ್ರಜಾಪ್ರಭುತ್ವದ ಪರಿವರ್ತನೆಯ ಚುನಾವಣೆಯಾಗಲಿ

ಚುನಾವಣೆಗಳು ಪ್ರಜಾಪ್ರಭುತ್ವದ ಪರಿವರ್ತನೆಗೆ ಸ್ಪಷ್ಟ ಮಾರ್ಗವಾಗಿವೆ. ಚುನಾವಣೆಗಳು ದೇಶದ ನಾಗರಿಕರ ನಿರೀಕ್ಷೆಗಳನ್ನು ಮತ್ತು ಅಪೇಕ್ಷೆಗಳನ್ನು ಕೆರಳಿಸುವ ಮತ್ತು ಪೂರೈಸುವ ಸಾರ್ವಜನಿಕವಾಗಿ ಒಪ್ಪಿಕೊಳ್ಳುವ ಪ್ರಕ್ರಿಯೆಯಾಗಿವೆ. ಚುನಾವಣೆಗಳಿಂದ ನಮಗೆ ನಮ್ಮನ್ನಾಳುವ ನಾಯಕರು ಸಿಗುತ್ತಾರೆ. ಆದರೆ ನಾಯಕರು ಚುನಾವಣಾ ಪೂರ್ವದಲ್ಲಿ ನೀಡಿದ್ದ ಭರವಸೆ ಆಶ್ವಾಸನೆಗಳನ್ನು ಮನದಲ್ಲಿಟ್ಟುಕೊಂಡು ಜನರ ನಿರೀಕ್ಷೆಗಳನ್ನು ಪೂರೈಸುವಂತಾಗಬೇಕು. ೨೦೧೯ರ ಚುನಾವಣೆಯಲ್ಲಿ ಯಾವುದೇ ಪಕ್ಷ ಅಥವಾ ಯಾವುದೇ ನಾಯಕರು ಅಧಿಕಾರದ ಚುಕ್ಕಾಣಿ ಹಿಡಿದರೂ ಅವರು ದೇಶಾದ್ಯಂತ ಬೆಳೆದು ನಿಂತಿರುವ ಶಕ್ತಿಯುತವಾದ ತರುಣರಿಗೆ ಉದ್ಯೋಗ ಕಲ್ಪಿಸುವಲ್ಲಿ ಕಾರ್ಯಪ್ರವೃತ್ತರಾಗಬೇಕು. ದೇಶದಲ್ಲಿ ಭ್ರಷ್ಟಾಚಾರ, ಲಂಚಗುಳಿತನ ಮತ್ತು ಜಾತಿ ಆಧಾರಿತ, ಧರ್ಮಾಧಾರಿತ ರಾಜಕೀಯ ವ್ಯವಸ್ಥೆಯನ್ನು ನಿಯಂತ್ರಿಸುವಲ್ಲಿ ಕ್ರಮ ಕೈಗೊಳ್ಳಬೇಕು. ರೈತರ ಸಮಸ್ಯೆಗಳಿಗೆ ಸ್ಪಂದನೆ, ರೈತ ಸ್ನೇಹಿ ಸರ್ಕಾರ, ಕಾರ್ಮಿಕರ ರಕ್ಷಣೆ, ಸರ್ಕಾರಿ ವಲಯಗಳ ಅಭಿವೃದ್ಧಿ, ಅದರಲ್ಲೂ ಬಹುಮುಖ್ಯವಾಗಿ ಭಾರತೀಯ ಶಿಕ್ಷಣ ವ್ಯವಸ್ಥೆಯನ್ನು ಸುಧಾರಣೆಗೆ ತರುವತ್ತ ಹೆಚ್ಚಿನ ಗಮನ ಹರಿಸಬೇಕು. ಚುನಾವಣೆಗಳು ಹಣ, ಹೆಂಡ, ಜಾತಿ, ಧರ್ಮ ಇವುಗಳ ಆಧಾರದ ಮೇಲೆ ನಡೆಯದೆ ಮೌಲ್ಯಗಳ ಆಧಾರದ ಮೇಲೆ ಚುನಾವಣೆ ನಡೆಯುವಂತಾಗ ಬೇಕು. ಇಲ್ಲವಾದರೆ ನಿರೀಕ್ಷೆ–ಅಪೇಕ್ಷೆ ಗಳೆಲ್ಲವೂ ತಲೆಕೆಳಗಾಗುವುದರಲ್ಲಿ ಯಾವ ಸಂದೇಹವೂ ಇಲ್ಲ. ಬಲಿಷ್ಠ ಭಾರತವನ್ನು ನೋಡುವ ಕನಸು ಕನಸಾಗಿಯೇ ಉಳಿಯುತ್ತದೆ. ಮುಂದಿನ ಲೋಕಸಭೆ ಚುನಾವಣೆಯ ನಂತರ ದೇಶದಲ್ಲಿರುವ ನಾಯಕರು ತಮ್ಮ ಅಧಿಕಾರದಾಹದಿಂದ, ವೈಯಕ್ತಿಕ ಕಾರಣಗಳಿಂದ, ಈ ದೇಶದಲ್ಲಿ ಮತ್ತೆ ಮತ್ತೆ ಉಪ ಚುನಾವಣೆಗಳಿಗೆ ದಾರಿ ಮಾಡಿಕೊಡಬಾರದೆಂದು ಬಯಸುತ್ತೇವೆ.

*– ವೆಂಕಟೇಶ ಬಾಬು ಎಸ್., ದಾವಣಗೆರೆ*

* * *

## ಕಾಂಕ್ರೀಟ್ ಮುಕ್ತ ರಾಷ್ಟ್ರವಾಗಬೇಕು...

೨೦೧೯ರಲ್ಲಿ ನವವಧುವಿನಂತೆ ಮೈತುಂಬಿ ಬರುವ ಲೋಕಸಭಾ ಚುನಾವಣೆಯೇ ನಿನ್ನ ನಾಮವಿಶೇಷದಿಂದ ಕಂಗೊಳಿಸದೆ, ಪ್ರಾಮಾಣಿಕತೆ ತುಂಬಿ ಬರಲಿ. ೧೯೫೨ರಿಂದ ಚುನಾವಣೆ ನಡೆದು ಬರುತ್ತಿರುವುದು ಹೊಸದೇನಲ್ಲ. ಅಂದು ಇದ್ದ ಜನಸಂಖ್ಯೆಗಿಂತಲೂ ಇಂದು ಬೆಳೆದಿರುವ ಬೃಹತ್ ಸಂಖ್ಯೆ ಅಪಾರ ಎನಿಸಿದೆ. ಜನಸಂಖ್ಯೆಗೆ ಕಡಿವಾಣ ಇಲ್ಲದೆಯೇ ಪ್ಲಾಸ್ಟಿಕ್ ಕಸದಂತೆ, ನಗರ ಪ್ರದೇಶದಲ್ಲಿ ತುಂಬಿರುವ ಕೊಳಚೆಯಂತೆ, ಗಬ್ಬುನಾರುತ್ತಿದೆ. ಕುಟುಂಬ ಯೋಜನೆ ತನ್ನ ನಾಮಫಲಕದಲ್ಲಿ ಮಾತ್ರ ನಿಯಮ ಪಾಲಿಸುತ್ತಿದೆ.

ಯಾರಿಗೂ ಇದರ ಅರಿವಿಲ್ಲ. ಇಲಾಖೆಯ ಮುಖ್ಯಸ್ಥರಿಂದ ಮಂತ್ರಿಯವರೆಗೂ ಬೇಜವಾಬ್ದಾರಿ. ರಾಷ್ಟ್ರದಲ್ಲಿ ಜಾತಿಗಣಗಳ ಲೆಕ್ಕ ಹೆಚ್ಚಿಸಲು ಹಂದಿ, ನಾಯಿಗಳ ಹಾಗೆ ಮರಿಹಾಕುತ್ತಲೇ ಸಾಗಿದೆ. ಹಡೆವವರಿಗೂ ನಾಚಿಕೆ ಇಲ್ಲ. ಪಡೆದವರಿಗೂ ಬೇಸರವಿಲ್ಲ. ಸಾಂಕ್ರಾಮಿಕ ರೋಗದ ಹಾಗೆ ಜನಸಂಖ್ಯೆ ಬೆಳೆಯುತ್ತಲೇ ನಡೆದಿದೆ. ಸರಕಾರದ ಸುಪರ್ದಿಯಲ್ಲಿರುವ ಶಿಕ್ಷಣವನ್ನು ಮೊಟಕುಗೊಳಿಸಲಾಗುತ್ತಿದೆ. ಖಾಸಗೀಕರಣವನ್ನು ಪೂರ್ಣ ಜಾರಿಗೆ ತಂದು ವ್ಯವಸ್ಥೆಯನ್ನೇ ಹದಗೆಡಿಸಿದೆ. ಉದ್ಯೋಗವಿರದೆಯೂ ಚಿಂತೆಯಿಲ್ಲ. ನಿರುದ್ಯೋಗದ ಹೆಗಲು ಹೆಚ್ಚಿಸತೊಡಗಿದೆ. ಓದಿಯೂ ಉದ್ಯೋಗವಿರದ ಕಲಿಯದೆಯೂ ಬದುಕು ಪವನಿಗಿಂತ ಕೀಳಾಗಿ ಜೀವಿಸಬೇಕಾದ ದುಃಸ್ಥಿತಿಯನ್ನು ಸರಕಾರ ಹುಟ್ಟುಹಾಕಿದೆ.

ಬೆಳೆದ ಬೆಳೆಗೆ ಬೆಂಬಲ ಬೆಲೆಯಿಲ್ಲ. ಮತ್ತೆ ಬೆಳೆಯುತ್ತೇನೆಂದರೆ ಮಳೆಯಿಲ್ಲ, ಜಲವಿಲ್ಲ. ಭೀಕರ ಕ್ಷಾಮಕ್ಕೆ ಒಳಗಾಗುವ ರೈತರ ಗೋಳು ಸರಕಾರ ಕೇಳುತ್ತಿಲ್ಲ. ಜನ ಪ್ರತಿನಿಧಿಗಳು ಕಿವುಡರಾಗಿದ್ದಾರೆ. ಅಧಿಕಾರಿ ಕುರುಡನಾಗಿದ್ದಾನೆ. ಪ್ರಜೆ ಪೋಲಿಯೋ ಪೀಡಿತನಾಗಿದ್ದಾನೆ. ಧ್ವನಿ ಇಲ್ಲ. ಜಾಗ್ರತೆ ಇಲ್ಲ. ಒಗ್ಗಟ್ಟು ಇಲ್ಲ. ಯುಕ್ತಿಯಿಲ್ಲ. ಶಕ್ತಿಯೂ ಇಲ್ಲ. ಬರೀ ಚಟಮಾಡಿಕೊಂಡು ಕೊರಗುತ್ತಿದ್ದಾನೆ. ಸೊರಗುತ್ತಿದ್ದಾನೆ. ದೈಹಿಕವಾಗಿ ಸೋಲುತ್ತಿದ್ದಾನೆ. ಮಾನಸಿಕವಾಗಿ ಬಳಲುತ್ತಿದ್ದಾನೆ. ದೇಶದ ತುಂಬೆಲ್ಲ ನಾಗರಿಕತೆಯಿದೆ. ಸ್ವಾತಂತ್ರ್ಯವಿದೆ. ಸಂವಿಧಾನವಿದೆ. ನ್ಯಾಯಾಂಗ, ಕಾರ್ಯಾಂಗ, ಶಾಸಕಾಂಗವಿದೆ. ಸರಿಯಾಗಿ ನಿಭಾಯಿಸುವವರಿಲ್ಲ. ಊರು ತುಂಬ ಕಚೇರಿ. ಕಚೇರಿ ತುಂಬ ಜನ. ಯಾರು ಯಾರನ್ನೂ ನಿಯಂತ್ರಿಸಲಾಗುತ್ತಿಲ್ಲ. ಬರೀ ಜಾಣಕುರುಡು. ಜನಪ್ರತಿನಿಧಿಗಳು ಬರೀ ನಿಧಿಗಳ್ಳರು. ಸುಳ್ಳರು. ಪ್ರತಿ ಚುನಾವಣೆಗೂ ಭರವಸೆಯ ರಾಶಿ. ಸರಕಾರದ ಟೇಬಲ್ ಮೇಲಿನ ಕಡತದಂತೆ. ನಿಸ್ಪೃಹವಾಗಿ ಬದುಕುವ ಸಾರ್ವಜನಿಕರು ಹಸಿವಿಗಾಗಿ, ಅನ್ನಕ್ಕಾಗಿ, ಮಾನಕ್ಕಾಗಿ ದುಡಿದೇ ದುಡಿಯುತ್ತಾರೆ. ಸಹನೆಮೀರಿ ಎಷ್ಟಂತ ತಾಳ್ಮೆವಹಿಸಲು ಸಾಧ್ಯ. ಅವರ ಮಕ್ಕಳ ಭವಿಷ್ಯವೇನು. ನೂರಾರು ಶಿಕ್ಷಣದ ಅರಿವನ್ನು ಪಡೆದುಕೊಂಡು ಹತಾಶೆಯಿಂದ ಉದ್ಯೋಗ ಅರಸುವ ಅವರ ಸಂಕಟ ಅರ್ಥವಾಗಬೇಕು. ಅವರೆಲ್ಲರ ದುಸ್ಥಿತಿ ತಿಳಿಯಬೇಕು. ಬರೀ ಪೇಪರ ಹುಲಿಯಾಗಬಾರದು. ಕೋಟಿಗಟ್ಟಲೇ ಕಾಮಗಾರಿ ಅನುದಾನ ಪಡೆದು ಸುಂದರವಾದ ರಸ್ತೆ ನಿರ್ಮಾಣ ಮಾಡದೇ ಯಾರದೊ ಮುಲಾಜಿನಲ್ಲಿ ಕೆಲಸ ಕೈಗೊಂಡಿದ್ದು ಇದು ರಾಷ್ಟ್ರಕ್ಕೆ ಮಾರಕವಾದುದು. ಸಾವಿರಾರು ಚದರ ಅಡಿ ಭೂಮಿಯನ್ನು ಆಮಿಷವೊಡ್ಡಿ ಬಲಿತೆಗೆದುಕೊಂಡು ಜನರನ್ನು ನಿರಾಶ್ರಿತರನ್ನಾಗಿಸುತ್ತದೆ. ಓದಿಯೂ ಸಾರ್ಥಕವಾಗದ, ಬೆಲೆಸಿಗದ, ನಿರುದ್ಯೋಗ ಪಟ್ಟ ನೀಡಿ ಕಾಲಹರಣ ಮಾಡುತ್ತಿರುವುದು ಯಾರಿಗೂ ಪ್ರಯೋಜನವಿಲ್ಲ. ಅಬ್ಬಗಟ್ಟಲೇ ಭೂಮಿ ಆಕ್ರಮಿಸಿಕೊಂಡು ಅನ್ನಸಿಗುವುದನ್ನು ತಪ್ಪಿಸುವುದು ಯಾವ ಪುರುಷಾರ್ಥಕ್ಕಾಗಿ? ಭೂಮಿಗೆ ಸಿಮೆಂಟು, ಕಲ್ಲು, ಕಬ್ಬಿಣ, ಉಸಗು ಹೊಚ್ಚಿ ದಾರಿಯುದ್ದಕ್ಕೂ ಮಲಗಿಸುತ್ತಾರೆ. ನಿರ್ಗತಿಕ ಜನರ ಕಷ್ಟನೋಡದೆ, ಉದ್ಯೋಗ ನೀಡದೆ, ಪೀಡೆಗೊಳಗಾಗಿಸಿರುವುದು ಶೋಚನೀಯ.

ಚೈತನ್ಯವಾಗಿ ಬದುಕುವ ಆರೋಗ್ಯಕರ ವಾತಾವರಣ ಮಾಡಬೇಕು. ಉದ್ಯೋಗ ಸೃಷ್ಟಿಯಾಗಬೇಕು. ಮೂಲಭೂಮಿಯನ್ನು ಯಥಾಸ್ಥಿತಿಗೆ ಬಿಡಬೇಕು. ತಾವಿರುವ ತಮ್ಮಿಷ್ಟದ ಭೂಮಿ ಮಾರಲಿ. ತುತ್ತು ಅನ್ನಕ್ಕಾಗಿ ಅಪೇಕ್ಷಿಸುವವರ ಆಶಾಕಿರಣವಾಗಬೇಕು. ಹಳ್ಳಿ, ಹೋಬಳಿ, ಪಟ್ಟಣ, ತಾಲ್ಲೂಕು, ಜಿಲ್ಲೆ, ನಗರ, ಗಲ್ಲಿಗಲ್ಲಿಯಲ್ಲಿ ಸಿಮೆಂಟ್ ಹೊಚ್ಚುವುದನ್ನು ನಿಲ್ಲಿಸಬೇಕು. ಭೂಮಿ ತಂಪಾದರೆ ಮನ, ತನು ತಂಪಾಗುವುದು. ಗಿಡಮರ ನೆಲ ಹಸಿರಾಗಿ ಕಂಗೊಳಿಸಲಿ. ತಲೆಮಾರು ಜನ ನೆಮ್ಮದಿಯಾಗಿ ಜೀವನ ಮಾಡಲಿ.

*– **ಅಕ್ಬರ್ ಸಿ. ಕಾಲಿಮಿರ್ಚಿ,** ಕೊಪ್ಪಳ*

* * *

## ೨೦೧೯ ಲೋಕಸಭಾ ಚುನಾವಣೆ

**ಲೋ**ಕಸಭೆಗೆ ಚುನಾವಣೆಗಳು ಇನ್ನು ಕೆಲವೇ ತಿಂಗಳುಗಳಲ್ಲಿ ೨೦೧೯ರಲ್ಲಿ ನಡೆಯಲಿವೆ. ನಮ್ಮ ದೇಶವು ಇಂದು ಒಂದು ರೀತಿಯ ಸ್ಥಿತ್ಯಂತರ ಘಟ್ಟದಲ್ಲಿದೆ. ಜನಸಾಮಾನ್ಯರಿಗೆ ಮುಂದೇನು ಮಾಡಬೇಕೆಂದು ತಿಳಿಯದೆ ಸಂದಿಗ್ಧ ಪರಿಸ್ಥಿತಿಯಿದೆ. ಹೀಗಾಗಿ ಬರಲಿರುವ ಲೋಕಸಭಾ ಚುನಾವಣೆಗಳು ಬಹಳ ಕುತೂಹಲಕಾರಿ ಎನಿಸಿವೆ.




ಇಂದು ಚುನಾವಣೆ ಬರಿಯ ಚುನಾವಣೆಯಾಗಿ ಉಳಿದಿಲ್ಲ. ಯಾವುದೋ ದೇಶದಲ್ಲಿ ಕುಳಿತು ಇಲ್ಲಿಯ ಜನರ ಮನಸ್ಸನ್ನು, ಚುನಾವಣೆಗಳನ್ನು ನಿಯಂತ್ರಿಸಬಹುದೆಂಬ ಆಘಾತಕಾರಿ ಸುದ್ದಿ ಗೊತ್ತಾಗಿರುವುದೂ ಈಗಲೇ. ಹೊರದೇಶದ ಶಕ್ತಿಗಳು ನಮ್ಮ ದೇಶದ ಚುನಾವಣೆಗಳಲ್ಲಿ ಮೂಗು ತೂರಿಸಿ ತಮಗೆ ಬೇಕಾದ ಸರ್ಕಾರವನ್ನು ಇಲ್ಲಿ ತರುವಷ್ಟು ಪ್ರಭಾವಶಾಲಿಯಾಗಿರುವುದು ನಿಜಕ್ಕೂ ಆತಂಕಕಾರಿಯಾಗಿದೆ.

ಈ ಮಧ್ಯೆ ನಮ್ಮ ದೇಶದ ರಾಜಕೀಯ ಪಕ್ಷಗಳು ಜಾತ್ಯತೀತತೆಯ ಹೆಸರಲ್ಲಿ ಜಾತಿಪ್ರಜ್ಞೆಯನ್ನು ಹೆಚ್ಚು ಮಾಡಿ ಚುನಾವಣೆಗೆ ಬಳಸಿಕೊಳ್ಳುತ್ತಿವೆ. ರಾಜಕೀಯ ಪಕ್ಷಗಳಿಗೆ ಹೇಗಾದರೂ ಮಾಡಿ ಚುನಾವಣೆಯಲ್ಲಿ ಗೆದ್ದು ಅಧಿಕಾರ ಹಿಡಿಯುವ ಹಪಾಹಪಿ ಇದೆಯೇ ಹೊರತು ದೇಶದ ಅಭಿವೃದ್ಧಿಯ ಬಗ್ಗೆ, ಬಡ ಪ್ರಜೆಗಳ ಬಗ್ಗೆ ಕಾಳಜಿ ಖಂಡಿತವಾಗಿಯೂ ಇಲ್ಲವೇ ಇಲ್ಲ.

ವಸ್ತುಸ್ಥಿತಿ ಹೀಗಿರುವಾಗ ಬರುವ ಚುನಾವಣೆಗಳಿಂದ ನಾವು ಹೆಚ್ಚಿನದೇನನ್ನೂ ನಿರೀಕ್ಷಿಸುವ ಹಾಗಿಲ್ಲ. ಆದರೂ ಚುನಾವಣೆಗಳು ಶಾಂತಿಯುತವಾಗಿ ಮತ್ತು ಪ್ರಾಮಾಣಿಕವಾಗಿ ನಡೆಯಲಿ. ದಕ್ಷರು ಗೆದ್ದು ಬಂದು ದೇಶಕ್ಕೆ ಒಂದು ಸ್ಥಿರವಾದ ಸರ್ಕಾರ ಬಂದು ಆಡಳಿತ ನಡೆಸಲಿ ಎಂಬುದು ನನ್ನ ಅಪೇಕ್ಷೆ.

*– **ಶಿವಮೊಗ್ಗ ಗೀತಾಶಾಸ್ತ್ರಿ,** ಬೆಂಗಳೂರು*

* * *

## ೨೦೧೯ ಲೋಕಸಭಾ ಚುನಾವಣೆ

**ಕೇಂ**ದ್ರದಲ್ಲಿ ಅಧಿಕಾರದಲ್ಲಿರುವ ನರೇಂದ್ರ ಮೋದಿ ಸರಕಾರ ಐದನೆಯ ವರ್ಷದತ್ತ ಸಾಗಿದೆ. ಮೋದಿ ಸರಕಾರದ ಯೋಜನೆಗಳಾದ ಜನಧನ, ಮುದ್ರಾ, ಉಜ್ವಲಾ, ಕೌಶಲ್, ವಿಕಾಸ್, ಆವಾಸ್ ಇತ್ಯಾದಿಗಳ ಬಗ್ಗೆ ಕಿರುಹೊತ್ತಿಗೆಗಳಲ್ಲಿ ನೀಡಿರುವ ಅಂಕಿ ಸಂಖ್ಯೆಗಳನ್ನು ಸುಳ್ಳಿನ ಕಂತೆಗಳಿಂದ ಹೆಣೆಯಲಾಗಿದೆ.

ನರೇಂದ್ರ ಮೋದಿಯವರು ೨೦೧೪ರಲ್ಲಿ ಪಾರ್ಲಿಮೆಂಟಿನ ಚುನಾವಣೆ ಸಮಯದಲ್ಲಿ ವಿದೇಶದಲ್ಲಿರುವ ಭಾರತೀಯರ ಕಪ್ಪು ಹಣವನ್ನು ತಂದು ಪ್ರತಿಯೊಬ್ಬರ ಖಾತೆಗೆ ೧೫ ಲಕ್ಷ ರೂಪಾಯಿ ಹಾಕುವುದಾಗಿ ಭರವಸೆ ನೀಡಿದ್ದರು. ಅದು ಭರವಸೆಯಾಗಿಯೇ ಉಳಿದಿದೆ.

ಬಡಜನರ ಮನೆ ನಿರ್ಮಾಣ ಯೋಜನೆ ಬಡಜನರಿಗೆ ನಿರಾಶೆ ತಂದಿದೆ. ಪ್ರಧಾನ ಮಂತ್ರಿ ಕೌಶಲ್ ವಿಕಾಸ ಯೋಜನೆಯ ಉದ್ದೇಶ ದೇಶದ ನಿರುದ್ಯೋಗಿ ಯುವಜನರಿಗೆ ಉದ್ದಿಮೆಗಳಿಗೆ ಬೇಕಾಗುವ ತರಬೇತಿಯನ್ನು ನೀಡಲಾಗಿದೆ. ಇದುವರೆಗೂ ೪೧ ಲಕ್ಷ ಜನರು ಕೌಶಲ್ ತರಬೇತಿಯನ್ನು ಪಡೆದಿದ್ದಾರೆ. ಅವರಿಗೆ ಉದ್ಯೋಗ ಸಿಕ್ಕಿತೆ? ಖಂಡಿತಾ ಇಲ್ಲ. ಪ್ರಧಾನಮಂತ್ರಿ 'ಉಜ್ವಲ್' ಯೋಜನೆಯಿಂದ ಬಡಜನರು ಬೇಸತ್ತು ಹೋಗಿದ್ದಾರೆ. ಮೋದಿ ಸರಕಾರ ದಿನಕ್ಕೊಂದು ಹಸಿ ಸುಳ್ಳುಗಳನ್ನು ಹರಿಬಿಟ್ಟು ಅದಕ್ಕೆ ವ್ಯಾಪಕ ಪ್ರಚಾರ ಕೊಟ್ಟು ಜನತೆಯನ್ನು ನಂಬಿಸುವ ನಯವಂಚಕ ಕೆಲಸವನ್ನು ಮಾಡುತ್ತಿದೆ.

ಭಾಜಪ ಸರಕಾರ ದೇಶದ ಸಂವಿಧಾನವನ್ನು ದುರ್ಬಲಗೊಳಿಸುತ್ತಿದೆ. ಆದಿವಾಸಿ ದಲಿತರು, ಅಲ್ಪಸಂಖ್ಯಾತರು, ಬಡವರಿಗೆ ಸಂವಿಧಾನ ನೀಡಿದ್ದ ಒಂದೊಂದೇ ಹಕ್ಕುಗಳನ್ನು ಮೊಟಕುಗೊಳಿಸುತ್ತಿದೆ.

ಪೆಟ್ರೋಲ್, ಡೀಸೆಲ್ ಹಾಗೂ ಅಗತ್ಯ ವಸ್ತುಗಳ ಬೆಲೆ ಏರಿಕೆಯನ್ನು ತಡೆಗಟ್ಟುವಲ್ಲಿ ವಿಫಲವಾಗಿರುವ ಕೇಂದ್ರ ಸರಕಾರದ




ಜನವಿರೋಧಿ ನೀತಿಯನ್ನು ಖಂಡಿಸಿ ಪ್ರತಿಭಟನೆಯು ದೇಶದ ಎಲ್ಲಾ ಕಡೆ ಯಶಸ್ವಿಯಾಗಿದೆ.

ಈ ಎಲ್ಲ ಕಾರಣಕ್ಕೆ ಮುಂದಿನ ಆರು ತಿಂಗಳಲ್ಲಿ ನಡೆಯುವ ಸಾರ್ವತ್ರಿಕ ಚುನಾವಣೆಯಲ್ಲಿ ಈ ಸರಕಾರವನ್ನು ಅಧಿಕಾರದಿಂದ ತೊಲಗಿಸಲೇಬೇಕು.

– *ಸಂಗಣ್ಣ ಚಂದ್ರಾಮಪ್ಪ ಹೊಸಮನಿ,*
*ಕಲಬುರಗಿ*

* * *

## ಮತದಾರನ ಪ್ರಬುದ್ಧತೆಯ ಬಳಕೆಯೇ ಚುನಾವಣೆ!

"ನಿರೀಕ್ಷೆಗಳು ಹೆಚ್ಚಿದಂತೆ, ನಿರಾಶೆಗಳು ಹೆಚ್ಚು" ಎಂಬುದು ಇಂದಿನ ಚುನಾವಣೆಗಳ 'ಟ್ಯಾಗ್ ಲೈನ್' ಎಂದು ವ್ಯಾಖ್ಯಾನ ಮಾಡಬಹುದು. ನಮ್ಮ ದೇಶದಲ್ಲಿ ಚುನಾವಣಾ ಪದ್ಧತಿಯ ಬಗ್ಗೆ ಜನಸಾಮಾನ್ಯರಲ್ಲಿ ಅರಿವು ಮೂಡಿಸಿದ್ದು ಚುನಾವಣಾ ಆಯೋಗದ ಮಾಜಿ ಮುಖ್ಯಸ್ಥರಾದ ಶ್ರೀ ಟಿ. ಎನ್. ಶೇಷನ್ ಎಂದರೆ ತಪ್ಪಾಗದು. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಇತ್ತೀಚಿನ ದಿನಗಳಲ್ಲಿ ಚುನಾವಣೆ ಎಂಬ ಪ್ರಕ್ರಿಯೆ ಮತ ಚಲಾವಣೆಗಿಂತ ಕೇವಲ 'ವ್ಯಾಪಾರ'ವಾಗಿದ್ದು ವಿಪರ್ಯಾಸವೇ. ಇಂತಹ ಸಂದರ್ಭದಲ್ಲಿ ಅತ್ಯಂತ ಪ್ರಮುಖ ನಿರೀಕ್ಷೆ ಎಂದರೆ ದೇಶದ ಸುಭದ್ರತೆಯ ಬಗ್ಗೆ ಕಾಳಜಿ ಹೊಂದಿರುವ, ದೇಶದ ಆರ್ಥಿಕ ಬೆಳವಣಿಗೆಗೆ ಒತ್ತು ನೀಡುವ, ದೇಶದ ಪ್ರಜೆಗಳನ್ನು ಸ್ವಾವಲಂಬಿಗಳನ್ನಾಗಿ ಮಾಡುವತ್ತ ಪಣತೊಡುವ, ಸಾಕಾರಗೊಳಿಸುವ, ಜಾಗತಿಕ ಮಟ್ಟದಲ್ಲಿ ಭಾರತ ದೇಶವನ್ನು ಅದರ ಸಾಮರ್ಥ್ಯದ ಅನ್ವಯ ಗುರುತಿಸುವಂತೆ ಮಾಡುವ ಮುಖಂಡರನ್ನು ಆಯ್ಕೆ ಮಾಡಬೇಕಿದೆಯೇ ಹೊರತು ಹುಸಿ ಭರವಸೆಗಳನ್ನು ಒಡ್ಡಿ ಮತ ಗಿಟ್ಟಿಸುವಲ್ಲಿ ಪ್ರಯತ್ನಿಸುವ ರಾಜಕೀಯ ಪಕ್ಷಗಳನ್ನಲ್ಲ. ಆಡಳಿತ ಪಕ್ಷದಲ್ಲಿ ಮುಂದಾಳತ್ವ ವಹಿಸಿದ ರಾಜಕೀಯ ಮುಖಂಡರಷ್ಟೇ ಜವಾಬ್ದಾರಿ ವಿರೋಧ ಪಕ್ಷದ ನಾಯಕರುಗಳಿಗೆ ಇರಬೇಕಿದ್ದು ದೇಶದ ಆಡಳಿತ ವ್ಯವಸ್ಥೆಯಲ್ಲಿ ಅವರ ಪಾತ್ರವನ್ನೂ ಸಹ ವಿಶ್ಲೇಷಣೆ ಮಾಡಿ ಚುನಾಯಿಸುವ ಜವಾಬ್ದಾರಿ ಮತದಾರನ ಮೇಲಿರುವ ಕಾರಣಕ್ಕೆ ರಾಜಕೀಯ ಪಕ್ಷಗಳಿಗಿಂತ ಪ್ರತಿಯೊಬ್ಬ ರಾಜಕೀಯ ನಾಯಕರುಗಳ ವಿಶ್ವಾಸಾರ್ಹತೆ ಮುಖ್ಯವಾಗುತ್ತೆ. ಈ ಕಾರಣಕ್ಕೆ ಹಿಂದಿನ ಚುನಾವಣೆಯ ಸಮಯದಲ್ಲಿ ನೀಡಿದ ಆಶ್ವಾಸನೆಗಳನ್ನು ಹಾಗೂ ಅವುಗಳ ಈಡೇರಿಕೆಯ ಮಾದರಿಯನ್ನು ಗಮನಿಸಿ ಮುಂಬರುವ ಚುನಾವಣೆಗಳಲ್ಲಿ ಅಭ್ಯರ್ಥಿಗಳ ಆಯ್ಕೆಯ ಬಗ್ಗೆ ಅತೀ ಹೆಚ್ಚಿನ ಚಿಂತನೆ ಮಾಡುವುದು ಅಪೇಕ್ಷಣೀಯ ಸಂಗತಿಯಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಚುನಾವಣೆ ಎಂಬುದು ಕೇವಲ ಮತ್ತೊಂದು ವಾಡಿಕೆಯ ಸಮಯೋಚಿತ ಪ್ರಕ್ರಿಯೆಯಾಗದೇ ದೇಶದ ಪ್ರಜೆಗಳ ಪ್ರಬುದ್ಧ, ತರ್ಕಬದ್ಧ ನಿರ್ಧಾರವಾದರೆ ಪ್ರಜಾಪ್ರಭುತ್ವ ವ್ಯವಸ್ಥೆಗೆ ಶೋಭೆ ಬಂದೀತು, ಮೆರಗು ಬಂದೀತು ಎಂಬುದು ವಾಸ್ತವದ ಅಪೇಕ್ಷೆ!

– **ಸುಶೀಲಾ ಬಿ. ಆರ್. ರಾಮಣ್ಣ,** *ಬೆಂಗಳೂರು*

* * *

## ನನ್ನಪೇಕ್ಷೆ ಸಾಕಾರವಾದರೆ ಸುಭಿಕ್ಷೆ....

ಮುಂಬರುವ ಲೋಕಸಭಾ ಚುನಾವಣೆಯಲ್ಲಿ ಆಯ್ಕೆಯಾಗುವ ಭಾವಿನಾಯಕರು ನಮ್ಮ ಭಾರತವನ್ನು ಅಭಿವೃದ್ಧಿಪಡಿಸದಿದ್ದರೂ ಚಿಂತೆಯಿಲ್ಲ, ಆದರೆ ಅಭಿವೃದ್ಧಿಯ ಹೆಸರಿನಲ್ಲಿ ಜಾರಿಗೊಳಿಸುವ ಯೋಜನೆಗಳು ಜಾಗತಿಕ

ಮಟ್ಟದಲ್ಲಿ ಅಪಹಾಸ್ಯಕ್ಕೆ ಗುರಿಯಾಗದಿರಲಿ. ಮಾತಿನ ಮೋಡಿಯಿಂದಲೇ ಮತದಾರರಿಗೆ ಮೋಸ ಮಾಡಿ ಗೆದ್ದರೂ ಬೇಜಾರಿಲ್ಲ, ಆದರೆ ಗೆದ್ದಾದ ಮೇಲೆ ಈ ನೆಲದಲ್ಲಿ ನಡೆದಾಡಿದ ಬುದ್ಧ, ಬಸವಣ್ಣ, ಗಾಂಧೀಜಿಯವರ ಶಾಂತಿ, ಸೌಹಾರ್ದತೆ, ಸಮಾನತೆ, ಸಾಮರಸ್ಯ ಮತ್ತು ಜಾತ್ಯತೀತ ಪ್ರಜ್ಞೆಯ ಬೀಜಗಳನ್ನು ಉಡಿಯೊಳಗೆ ತುಂಬಿಕೊಂಡು ದೇಶದೆಲ್ಲೆಡೆ ಬಿತ್ತಿ ಬದುಕು ಸಾರ್ಥಕಗೊಳಿಸಿಕೊಳ್ಳಲಿ.

ಕಾರ್ಪೋರೇಟ್ ಕಂಪನಿಗಳ ಋಣ ತೀರಿಸುವ ಮುನ್ನ, ನಿತ್ಯ ಅನ್ನ ನೀಡಿದ, ನೀಡುತ್ತಿರುವ ರೈತ ಸಮುದಾಯದ ಹಿತಕಾಯುವ ಕನಿಷ್ಠ ಬದ್ಧತೆ, ಅಂತಃಕರಣ, ಪ್ರೀತಿಯನ್ನು ಎದೆಯೊಳಗೆ ತುಂಬಿಕೊಳ್ಳಲಿ. ಕೇವಲ ಒಂದು ಪ್ರಾಣಿಯ ಪರ, ಕೇವಲ ಒಂದು ಮಂದಿರ / ಒಂದು ವರ್ಗದ ಪರ ನಿಲ್ಲುವ, ಒಂದು ಧರ್ಮವನ್ನು ಪ್ರಬಲವಾಗಿ ವಿರೋಧಿಸುವ, ಸಂವಿಧಾನ ಬದಲಾಯಿಸುವ, ವೈಚಾರಿಕ ಹೊಳಹುಗಳುಳ್ಳ ಲಿಂಗಾಯತ ಧರ್ಮವನ್ನು ಹತ್ತಿಕ್ಕುವ, ಚಿಂತಕರ ಹತ್ಯೆಗೈಯುವ ಇಂತಹ ಹತ್ತು ಹಲವು ಅಜೆಂಡಾಗಳನ್ನಿಟ್ಟು ಕೊಂಡಿರುವ ಚೌಕಟ್ಟನ್ನೊಮ್ಮೆ ಮುರಿದು ಹೊರಬಂದು ನೋಡಿದಾಗ ಈ ದೇಶದ ಶ್ರೇಷ್ಠತೆ, ಈ ದೇಶದ ಸೌಂದರ್ಯ, ಈ ದೇಶದ ಅಸ್ಮಿತೆ ಒಳಗಣ್ಣಿಗೆ ನಿಚ್ಚಳವಾಗಿ ಕಾಣುವುದು. ನಮ್ಮ ಸಂಸದರು ಒಮ್ಮೆಯಾದರೂ ಪರದೆ ಸರಿಸಿ ಹೊರಬರಲಿ.

ಎಲ್ಲರೂ ಒಂದು ದಿನ ಬಿದ್ದು ಹೋಗುವ ಮರ. ಬೀಳುವ ಮುನ್ನ ಹಣ್ಣು, ಕಾಯಿ, ಹೂವು ಕೊಡದಿದ್ದರೂ ಚಿಂತೆಯಿಲ್ಲ ಕನಿಷ್ಠ ಈ ನೆಲಕ್ಕೆ ನೆರಳನ್ನಾದರೂ ನೀಡುವ ಸೌಜನ್ಯವನ್ನು ನಮ್ಮ ಸಂಸದರು ಬೆಳೆಸಿಕೊಳ್ಳಲಿ. ಬರೀ ಅಧಿಕಾರದ ಅಮಲಿನಲ್ಲಿ ಓಲಾಡುವ ಬದಲು, ಆಗಾಗ ಬಿಡುವು ಮಾಡಿಕೊಂಡು ನಮ್ಮ ದೇಶದ ಸಂಸ್ಕೃತಿ, ಕಲೆ, ಸಾಹಿತ್ಯ, ಸಂಗೀತದ ರಸದೌತಣವನ್ನು ಸವಿದು ಆನಂದಿಸಬೇಕು. ನಿಧಾನಕ್ಕೆ ಎಲ್ಲವನ್ನು ಕಳಚಿಕೊಂಡು ಅಕ್ಕ ಅಥವಾ ಬುದ್ಧನ ಹಾದಿ ಹಿಡಿದಾಗ ಮಾತ್ರ ದೇಶದಲ್ಲಿ ಸುಭಿಕ್ಷೆಯ ಪರ್ವ ಆರಂಭವಾಗುವುದೆಂಬ ಅಪೇಕ್ಷೆ ನನ್ನದು.

– ***ಕೆ. ಬಿ. ವೀರಲಿಂಗನಗೌಡ್ರ,*** *ಸಿದ್ದಾಪುರ*

* * *

## ಅಭ್ಯರ್ಥಿಗಳ ಬದ್ಧತೆಗೆ ಮನ್ನಣೆ ಅಗತ್ಯ...

ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಮತದಾರನಿಗೆ ಪ್ರಾಮುಖ್ಯತೆ ಸಿಗುವುದು ಐದು ವರ್ಷಕ್ಕೊಮ್ಮೆ, ಚುನಾವಣೆಗಳು ಜರುಗಿದಾಗ ಮಾತ್ರ! ಪ್ರತಿ ಬಾರಿ ಅಭ್ಯರ್ಥಿಗಳು, ರಾಜಕೀಯ ಪಕ್ಷಗಳು ಜಯ ಸಾಧಿಸಲು ನೂತನ ತಂತ್ರಗಳನ್ನು ಅಳವಡಿಸಿಕೊಂಡು ಪ್ರಚಾರಕ್ಕಿಳಿಯುವುದು ವಾಸ್ತವ. ಕೆಲವೊಮ್ಮೆ ಕುತಂತ್ರಗಳನ್ನೂ ಅನುಸರಿಸುವುದು ವಾಡಿಕೆ. ಆದರೆ, ಇತ್ತೀಚೆಗಿನ ವರ್ಷಗಳಲ್ಲಿ ಮತದಾರರಿಗೂ ತಿಳಿದಿದೆ ರಾಜಕೀಯ ಪಕ್ಷಗಳ, ಅಭ್ಯರ್ಥಿಗಳ ಆಶ್ವಾಸನೆಗಳು ಬಹುತೇಕ ಹುಸಿ ಎಂದು. ಈ ಕಾರಣಕ್ಕೆ ಜನಸಾಮಾನ್ಯರು ರಾಜಕೀಯ ಮುಖಂಡರ ಮಾತುಗಳಿಗೆ ಹೆಚ್ಚು ಮಾನ್ಯತೆ ನೀಡುತ್ತಿಲ್ಲ. ನ್ಯಾಯಾಂಗ ವ್ಯವಸ್ಥೆಯಲ್ಲಿನ ಒಂದು ಕಿವಿ ಮಾತಿನ ಪ್ರಕಾರ, ಅಲಿಖಿತ ನಿಯಮದ ಅನ್ವಯ "ನ್ಯಾಯ ದೇಗುಲದಲ್ಲಿ ಜಯ ಸಾಧಿಸಬೇಕಿರುವುದು ವಿರೋಧಿಗಳ ಅಶಕ್ತತೆಯ ಹಿನ್ನೆಲೆಯಲ್ಲಲ್ಲ ಬದಲಾಗಿ ಸ್ವಂತ ಬಲದ ಇಲ್ಲವೇ ಸಾಮರ್ಥ್ಯದ ಅನುಗುಣವಾಗಿ" ಎಂಬುದಾಗಿ. ಈ ನೈತಿಕತೆಯನ್ನು ಪಾಲಿಸುವುದು ಸಕಲ ರಾಜಕೀಯ ಪಕ್ಷಗಳ ಜವಾಬ್ದಾರಿಯಾದರೆ ಪ್ರಜಾಪ್ರಭುತ್ವ ವ್ಯವಸ್ಥೆಗೆ ಶೋಭೆ ಬರಬಹುದು, ಮೆರಗು ಹೆಚ್ಚಬಹುದು! ಮುಂಬರುವ ಲೋಕ ಸಭಾ ಚುನಾವಣೆಯಲ್ಲಿ ಮತದಾರರು ಗಮನಿಸಲೇಬೇಕಾದ ಮತ್ತೊಂದು ಪ್ರಮುಖ ಅಂಶವೆಂದರೆ ರಾಜಕೀಯ ಪಕ್ಷಗಳ ಹಿಂದಿನ ಚುನಾವಣೆಯ ಪ್ರಣಾಳಿಕೆಯನ್ನು ಸದರಿ ಪ್ರಣಾಳಿಕೆಯೊಟ್ಟಿಗೆ ತುಲನೆ ಮಾಡಿ ಮತದಾನದ ಬಗ್ಗೆ, ಅಭ್ಯರ್ಥಿಯ ಆಯ್ಕೆಯ ಬಗ್ಗೆ ಪ್ರಬುದ್ಧ ನಿರ್ಧಾರ ತೆಗೆದುಕೊಳ್ಳುವುದು! ಪ್ರಣಾಳಿಕೆಯಲ್ಲಿನ ಕೆಲವು ಅಂಶಗಳು ಜಾರಿಯಾಗದ ಹಿನ್ನೆಲೆಯಲ್ಲಿ ಅದರ ಹಿನ್ನೆಲೆಗೆ ಕಾರಣ ಕಂಡುಕೊಳ್ಳುವ ಗಂಭೀರ ಪ್ರಯತ್ನ ಮತದಾರರ ಜವಾಬ್ದಾರಿಯಾಗಿದ್ದು ಯಾವುದೇ ಆಮಿಷಗಳಿಗೆ ಬಲಿಯಾಗದೇ ದೇಶದ ಹಿತದೃಷ್ಟಿಯಿಂದ ಮತ ಚಲಾವಣೆಗೆ ಮುಂದಾಗುವುದು ಒಳಿತು. ಅತ್ಯಂತ ಪ್ರಮುಖ ವಿಚಾರವೆಂದರೆ ಮತದಾನ ವ್ಯಾಪಾರವಾಗದಿರಲಿ!

– ***ನಳಿನಿ ಆರ್. ಮಾಗಲ್,*** *ಸಕಲೇಶಪುರ*

* * *

## ೨೦೧೯ ಲೋಕಸಭಾ ಚುನಾವಣೆ

೨೦೧೯ರ ಲೋಕಸಭೆ ಚುನಾವಣೆಯು ನಮ್ಮೆಲ್ಲರ ಶಾಂತಿಯುತ ಜೀವನಕ್ಕೆ ಪೂರಕವಾಗಿರಲಿ. ಭಾರತದ ಆರ್ಥಿಕ ವ್ಯವಸ್ಥೆ ಪ್ರಬಲವಾಗಿ, ಉದ್ಯೋಗಾವಕಾಶಗಳ ಸೃಷ್ಟಿಯಾಗಲಿ. ಸಂಪನ್ಮೂಲಗಳ ಸದ್ಬಳಕೆ ಆಗಲಿ, ಪ್ರಜೆಗಳಿಗೆ ಭಿಕ್ಷೆ ಬೇಡ, ದುಡಿವ ಕೈಗಳಿಗೆ ಭರವಸೆಯ ಉದ್ಯೋಗ ನೀಡಿದರೆ ಸಾಕು.

ಭ್ರಷ್ಟಾಚಾರಿಗಳನ್ನು, ಅತ್ಯಾಚಾರಿಗಳನ್ನು ಕಪ್ಪುಕುಳಗಳನ್ನು, ಭಯೋತ್ಪಾದಕರನ್ನು ಬೇರು ಸಹಿತ ನಿರ್ಮೂಲನೆ ಮಾಡಲಿ ಎಂಬ ಆಶಯ. ಭಾಷಾ ಸಮಸ್ಯೆ, ಗಡಿವಿವಾದ, ಜಲವಿವಾದ, ಜಾತಿ ಸಮಸ್ಯೆಗಳು, ರಾಜಕೀಯ ಪಕ್ಷಗಳ ಅಸ್ಥಿರತೆ, ಪ್ರತಿನಿಧಿಗಳ ಸ್ವಾರ್ಥತೆ, ದಲಿತರ ಮೇಲಿನ ಅಮಾನವೀಯ ದೌರ್ಜನ್ಯಗಳು ನಿಲ್ಲಲಿ ಎಂಬುದೇ ಮಹದಾಸೆ. ಚುನಾವಣೆಗೂ ಮುನ್ನ ನೀಡುವ ಭರವಸೆಗಳನ್ನು ಈಡೇರಿಸುವಂತಿದ್ದರೆ ನೀಡಿ, ಸುಮ್ಮನೆ ಹುಸಿ – ಭರವಸೆಗಳು ಬೇಡ ಎಂಬ ಕೋರಿಕೆ. ಪ್ರಕೃತಿ ವಿಕೋಪಗಳು ಸಂಭವಿಸಿದಾಗ ಸರ್ಕಾರಗಳಿಗಿಂತ ಮುಂಚೆ ನೆರವಿಗೆ ಧಾವಿಸುವುದು ಜನತೆಯೇ. ಸರ್ಕಾರ ಇಲ್ಲಿ ಸಹ ರಾಜಕೀಯ ಮಾಡದೇ ಮಾನವೀಯತೆಯಿಂದ ಶೀಘ್ರವಾಗಿ ಸಂಕಷ್ಟದಲ್ಲಿರುವವರಿಗೆ ಸ್ಪಂದಿಸುವಂತಾಗಲಿ ಎಂಬುದೇ ಮನವಿ.

ಕೃಷಿ ಪ್ರಧಾನವಾದ ದೇಶದಲ್ಲಿ ರೈತರ ಸರಣಿ ಆತ್ಮಹತ್ಯೆಗಳು ನಡೆಯುತ್ತಲೇ ಇವೆ. ಎಲ್ಲ ಯೋಜನೆಗಳಿಗೂ ಹಣ ಹರಿದು ಬರುತ್ತದೆ. ಆದರೂ ಪ್ರಯೋಜನ ಸಿಗುತ್ತಿಲ್ಲ. ಬರೀ ಅಭಿವೃದ್ಧಿಯ ಮಂತ್ರ ಜಪಿಸಿ, ಭಾಷಣಗಳನ್ನು ಮಾಡಿದರೆ ಸಾಲದು, ಮಾತಿನ ಭರಾಟೆಯಿಂದ, ಹುಸಿ ಭರವಸೆಗಳಿಂದ ಏನೇನೂ ಸಾಧನೆ ಆಗದು. ಇವರುಗಳ ಮಾತಿನ ರೋಷಾವೇಶಕ್ಕೆ ಸಂಕಟಪಡುತ್ತಿರುವವರು ಮಾತ್ರ ಸಾಮಾನ್ಯ ಜನರು. ಆದ್ದರಿಂದ ದಯವಿಟ್ಟು ಕಾರ್ಯರೂಪದಲ್ಲಿ ತಂದು ರಾಜ್ಯ, ದೇಶದ ಜನತೆಯನ್ನು ವಿಶೇಷವಾಗಿ ರೈತರನ್ನು ಉದ್ಧಾರ ಮಾಡಿರೆಂಬುದೇ ಅಪೇಕ್ಷೆ ಹಾಗೂ ನಿರೀಕ್ಷೆ ಕೂಡ ಆಗಿದೆ.

– ***ಮಂಜುಳಾ ರಾಮಡಗಿ,*** *ಧಾರವಾಡ*

* * *

## ೨೦೧೯ ಲೋಕಸಭಾ ಚುನಾವಣೆ

ಲೋಕಸಭೆ ಚುನಾವಣೆ ಆರು ತಿಂಗಳಿಗೆ ಸಮೀಪಿಸುತ್ತಲಿದೆ. ಹೀಗಾಗಿ 'ಕುರುಡು ಕಾಂಚಾಣ'ದ ಕುಣಿತ ಆರಂಭವಾಗಿದೆ. ಒಂದೆಡೆ ಪಕ್ಷಗಳು ಚುನಾವಣಾ ವೆಚ್ಚಕ್ಕಾಗಿ ದೇಶದ ವಿವಿಧ ಕ್ಷೇತ್ರಗಳ 'ದೊಡ್ಡಕುಳ'ಗಳಿಂದ ವಂತಿಗೆ ರೂಪದಲ್ಲಿ ಹಣ ಶೇಖರಿಸುತ್ತಿದ್ದರೆ, ಚುನಾವಣಾ ಆಯೋಗ ಅಕ್ರಮ ಹಣವನ್ನು ಪತ್ತೆ ಹಚ್ಚುವಲ್ಲಿ ಪ್ರಯತ್ನ ಮಾಡಿ, ನವೆಂಬರ್ ೧೧ರಿಂದ ಈಚೆಗೆ ೭೦ ಕೋಟಿ ರೂ ಅಧಿಕ ಅಕ್ರಮ ಹಣವನ್ನು ಜಪ್ತಿ ಮಾಡಿದೆ. ಚುನಾವಣೆಯಲ್ಲಿ ಕೋಟಿ ಕೋಟಿ ಹಣ ಪೋಲಾಗುತ್ತಿರುವುದರಿಂದ ಏಕಕಾಲಕ್ಕೆ ಲೋಕಸಭಾ – ವಿಧಾನಸಭಾ ಚುನಾವಣೆಗಳನ್ನು ನಡೆಸುವದು ಸೂಕ್ತ. ಚುನಾವಣೆ ಸುಧಾರಣೆಗೆ ಕೆಲ ಸಲಹೆಗಳನ್ನು ಕೊಡುವುದು ಅವಶ್ಯವಾಗಿದೆ.

೧) ಅನಿವಾರ್ಯ ಕಾರಣದ ಹೊರತು ಯಾವ ಶಾಸಕ, ಸಂಸದ ರಾಜೀನಾಮೆ ಕೊಡಬಾರದು ಎಂಬ ಕಾನೂನು ಜಾರಿ ಆಗಬೇಕು.

೨) ಅಭ್ಯರ್ಥಿಗಳು ಒಂದೇ ಕ್ಷೇತ್ರದಲ್ಲಿ ಮಾತ್ರ ಸ್ಪರ್ಧಿಸುವ ನಿಯಮ ಜಾರಿಗೆ ಬರಬೇಕು.

೩) ಎಲ್ಲ ರಾಜಕಾರಣಿಗಳಿಗೂ ಕನಿಷ್ಠ ವಿದ್ಯಾರ್ಹತೆಯನ್ನು ಸಂವಿಧಾನ ಬದ್ಧವಾಗಿ ನಿಗದಿಪಡಿಸಬೇಕು.

೪) ರಾಜಕಾರಣಿಗಳಿಗೆ ೬೫ ವರ್ಷ ನಿವೃತ್ತಿ ವಯಸ್ಸನ್ನು ನಿಗದಿ ಮಾಡಬೇಕು.

೫) ಯಾವುದೇ ಪಕ್ಷದಿಂದ ಆಯ್ಕೆ ಆದ ಅಭ್ಯರ್ಥಿ ೫ ವರ್ಷದವರೆಗೆ ಪಕ್ಷಾಂತರ ಮಾಡುವುದನ್ನು ತಡೆಯುವ ಕಠಿಣ ಕಾನೂನು ಆಗಬೇಕು.

೬) ಅಪರಾಧಿಗಳು ಚುನಾವಣೆಗೆ ಸ್ಪರ್ಧಿಸಲು ಅನರ್ಹರೆಂದು ಕಾನೂನು ಆಗಬೇಕು.

೭) ಅವಕಾಶವಾದಿ ರಾಜಕಾರಣಿಗಳು ಆಗುವುದು ಬೇಡ. ಇದರಿಂದ ನೈತಿಕತೆ, ಸಿದ್ಧಾಂತ, ಧ್ಯೇಯ, ನಿಷ್ಠೆ ಇವುಗಳಿಗೆ ತಿಲಾಂಜಲಿ ನೀಡಿದಂತಾಗುತ್ತದೆ.

ಮತದಾರ ದೇಶಹಿತವನ್ನು ಗಮನದಲ್ಲಿಟ್ಟುಕೊಂಡು, ನ್ಯಾಯಾಧೀಶನಂತೆ ಸ್ವತಂತ್ರ – ನಿಷ್ಪಕ್ಷಪಾತ – ವಿವೇಕಯುತವಾಗಿ ಯೋಚಿಸಿ ಮತಹಕ್ಕನ್ನು ಚಲಾಯಿಸಬೇಕು.

***– ಯು. ಎನ್. ಸಂಗನಾಳಮಠ,* ಹೊನ್ನಾಳಿ**

✳ ✳ ✳

## ಸಾಕ್ಷರತೆಯೇ ಪ್ರಣಾಳಿಕೆಯ ಮೂಲವಾಗಬೇಕು!

**'ಚು**ನಾವಣೆ' ಎಂದ ಕೂಡಲೇ ಮನದಲ್ಲಿ ಮೂಡುವ ಪ್ರಮುಖ ಸಂಗತಿ ಎಂದರೆ ರಾಜಕೀಯ ಪಕ್ಷಗಳು ಧಾರಾಳವಾಗಿ ನೀಡುವ ಆಮಿಷಗಳು. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ದೇಶದ ಪ್ರಜೆಗಳಿಗಿರುವ ಮೂಲಭೂತ ಸವಲತ್ತು ಮತ ಚಲಾವಣೆಯಾದರೂ ಸಹ ಇಂದಿನ ಪರಿಸ್ಥಿತಿಯಲ್ಲಿ ಬಹುತೇಕ ಮಂದಿ ತಮ್ಮ ಮತಗಳನ್ನು 'ಚಲಾಯಿಸುವ' ಬದಲಿಗೆ ವ್ಯವಹಾರವನ್ನಾಗಿಸಿದ್ದಾರೆ ಹಾಗೂ ಮಾರಾಟ ಮಾಡುತ್ತಿದ್ದಾರೆ ಎಂದರೆ ಅತಿಶಯೋಕ್ತಿಯಲ್ಲ. ಗ್ರಾಮೀಣ ಭಾಗದಲ್ಲಿ ಮಾತ್ರವಲ್ಲ ನಗರ ಪ್ರದೇಶಗಳಲ್ಲೂ ಸಹ ಆಮಿಷಗಳ ಸುರಿಮಳೆಯ ಬಗ್ಗೆ ವಿಶ್ಲೇಷಣೆಯ ಅಗತ್ಯವೇ ಇರದು. ಗೃಹ ವಸ್ತುಗಳಿಂದ ಹಿಡಿದು ಹಣಕಾಸಿನ ವಿತರಣೆಯಿಂದ ಮತಗಳ ವಿನಿಮಯ ಕಾಣಬಹುದು. ಅಂದರೆ ಸ್ಪರ್ಧಿಗಳ ಯೋಗ್ಯತೆಗನುಗುಣವಾಗಿ ಮತ ಚಲಾವಣೆಯಾಗದಿರುವುದು ಆತಂಕಕಾರಿ ಸಂಗತಿಯಾಗಿದೆ. ದೇಶಕ್ಕೆ ಮಾರಕವಾಗಿದೆ. ಬಹುಶಃ ಮತದಾರರ ಅಜ್ಞಾನ, ಸಾಕ್ಷರತೆಯ ಕೊರತೆ, ವಿಚಾರಶೀಲ ಚಿಂತನೆ ಇಲ್ಲದಿರುವುದು ಇಂತಹ ದುಃಸ್ಥಿತಿಗೆ ಕಾರಣವಿರಬಹುದು. ಬಹುಶಃ ದೇಶದ ಶಿಕ್ಷಣ ವ್ಯವಸ್ಥೆಯಲ್ಲಿ ಆಮೂಲಾಗ್ರ ಬದಲಾವಣೆಗಳನ್ನು ಜಾರಿಗೆ ತಂದು ಸಕಲರಿಗೂ ಮೂಲಭೂತ ಶಿಕ್ಷಣ ದೊರೆಯುವಂತೆ ಮಾಡಿದರೆ ಮತದಾನ ಎಂಬ ಪವಿತ್ರ ಕಾಯಕ ಗೌರವಯುತ ಹಕ್ಕು ಚಲಾವಣೆಯಾಗಬಹುದು. ಆಮಿಷಗಳನ್ನು ಪಡೆದು ಮತ ಚಲಾಯಿಸಿದ ಏಕೈಕ ಕಾರಣಕ್ಕೆ ಮತದಾರರು ಚುನಾಯಿತ ಪ್ರತಿನಿಧಿಗಳ ವೈಫಲ್ಯಗಳ ಬಗ್ಗೆ ಪ್ರಶ್ನಿಸುವ ಹಕ್ಕನ್ನೇ ಕಳೆದುಕೊಳ್ಳುವುದು ಎಷ್ಟರಮಟ್ಟಿಗೆ ಸೂಕ್ತ ಎನ್ನುವ ವಿಚಾರವನ್ನು ಅರಿಯಬೇಕಾದವರು ಮತದಾರರೇ ಹೊರತು ರಾಜಕೀಯ ಪಕ್ಷಗಳಲ್ಲ, ರಾಜಕಾರಣಿಗಳಲ್ಲ. ಈ ಹಿನ್ನೆಲೆಯಲ್ಲಿ ದೇಶದ ಶಿಕ್ಷಣ ವ್ಯವಸ್ಥೆಯನ್ನು ಆದ್ಯತೆಯ ಮೇರೆಗೆ ಸುಧಾರಿಸುವಂತಹ, ಬದಲಾಯಿಸುವಂತಹ ಪ್ರಣಾಳಿಕೆಗಳನ್ನು ಹೊಂದಿರುವ ರಾಜಕೀಯ ಪಕ್ಷಗಳಿಗೆ, ಸ್ಪರ್ಧಿಗಳಿಗೆ ಬೆಂಬಲ ನೀಡುವ ಸಂಕಲ್ಪವನ್ನು ಮತದಾರರು ಮಾಡಿದರೆ ಮಾತ್ರ ನಮ್ಮ ದೇಶ ಸಮಗ್ರ ಬೆಳವಣಿಗೆ ಕಾಣಬಹುದಾಗಿದೆ. ಆಮಿಷಗಳು ಕೇವಲ ತಾತ್ಕಾಲಿಕ, ಕಲಿತ ವಿದ್ಯೆ ಶಾಶ್ವತವಲ್ಲವೇ?

**– ರಾಜೀವ್ ಎನ್. ಮಾಗಲ್,** ಸಕಲೇಶಪುರ







# ಸಮನ್ವಯತೆ ಸಿದ್ಧಿಸಿದ ಶಿಲ್ಪ ಕಲಾವಿದ ಕೃಷ್ಣ ನಾಯಕ



ಸಾಂಪ್ರದಾಯಿಕ ಮತ್ತು ಸಮಕಾಲೀನ ಈ ಎರಡೂ ಪರಸ್ಪರ ಆಚ್ಛಾದಿತ ವಲಯಗಳಲ್ಲಿ ಸಮತೋಲನ ಸಾಧಿಸಿಕೊಂಡು ಕ್ರಿಯಾಶೀಲರಾಗಿರುವವರು ಅಪರೂಪ. ಅಂತಹ ಅಪರೂಪದವರಲ್ಲಿ ಅಪರೂಪದ ಶಿಲ್ಪಿ 'ಕೃಷ್ಣ ನಾಯಕ' ಅವರು. ರಾಚನಿಕ ಮತ್ತು ತಾತ್ವಿಕ ನೆಲೆಗಳೆರಡರಲ್ಲೂ ಸಂಪ್ರದಾಯ ಶಿಲ್ಪಕಲೆಯನ್ನೂ ತಲಸ್ಪರ್ಶಿಯಾಗಿ ಅಧ್ಯಯನ ಮಾಡಿಯೂ ಸಮಕಾಲೀನತೆಗೆ ಹಾತೊರೆದು ಅಮೂಲ್ಯ ಕಲಾಕೃತಿಗಳನ್ನು ಸೃಜಿಸಿದವರು ಇವರು. ಮೂಲತಃ ಹೊನ್ನಾವರದ ಇಡಗುಂಜಿಯವರಾದ ಕೃಷ್ಣ ನಾಯಕ್ ಅವರು ಬಿ.ಎಫ್.ಎ. ಪದವೀಧರರು. ಪ್ರಸ್ತುತ ಬೆಂಗಳೂರಿನಲ್ಲಿ ಕೃಷ್ ಆರ್ಟ್ ವರ್ಲ್ಡ್ ಹೆಸರಿನ ಗ್ಯಾಲರಿ ನಡೆಸುತ್ತಿರುವ ಇವರು ವಿಭಿನ್ನ ಮಾಧ್ಯಮಗಳ ಮೂಲಕ ವಿಭಿನ್ನ ಶೈಲಿಯ ಶಿಲ್ಪಕಲಾಕೃತಿಗಳನ್ನು ತಯಾರಿಸುವಲ್ಲಿ ಪರಿಣತಿಯನ್ನು ಪಡೆದು ಪ್ರಖ್ಯಾತರಾಗಿದ್ದಾರೆ.

– ಶಿವಾನಂದ ಎಚ್. ಬಂಟನೂರ, ಹಂಪಿ





Printed & published by Dr. Siddanagouda Patil on behalf of Navakarnataka Publications (P) Ltd., Embassy Centre, Crescent Road, Bengaluru-1 and printed at Sri Vinayaka Printers, No. 738/10, 60th Cross, 5th Block, Rajajinagar, Bengaluru-560 010. Published at Bengaluru. Editor : Dr. Siddanagouda Patil. 

